# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ವನಪರ್ವ
ವಿರಾಟಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೭

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 7**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ಸದ್ಗುರುವಿನ ಅನುಗ್ರಹದಿಂದಲೂ ಮಹಾಭಾರತದ ಏಳನೆಯ ಸಂಪುಟವನ್ನು ಸಹೃದಯರ ಅಂಜಲಿಪುಟಗಳಲ್ಲಿ ಡುತ್ತಿದ್ದೇವೆ. ಏಳನೆಯ ಸಂಪುಟವನ್ನು ಹೊರತರಲು ಸ್ವಲ್ಪ ಸಾವಕಾಶವೇ ಆಯಿತು. ನಿಷ್ಠಾವಂತಗ್ರಾಹಕರೂ ಸ್ವಲ್ಪ ಬೇಸತ್ತಿದ್ದಾರೆ. ಅನಿವಾರ್ಯ ಕಾರಣಗಳಿಂದಾಗಿ ಸಾವಕಾಶವಾದುದಕ್ಕೆ ವಾಚಕರ ಕ್ಷಮೆ ಬೇಡುತ್ತೇವೆ.

ಏಳನೆಯ ಸಂಪುಟದ ಪ್ರಕಾಶನವು ಸಾವಕಾಶವಾಗಲು ಮುಖ್ಯಕಾರಣ– ಮಹಾಭಾರತದ ಪ್ರಥಮಸಂಪುಟದ ಪುನರ್ಮುದ್ರಣ. ಪ್ರಥಮಸಂಪುಟವು ಮುಗಿದು 8-10 ತಿಂಗಳುಗಳೇ ಆಗಿದ್ದಿತು. ಪ್ರಥಮಸಂಪುಟವಿಲ್ಲದೆಯೇ ಅನೇಕರು ಉಳಿದ ಸಂಪುಟಗಳನ್ನು ತೆಗೆದುಕೊಂಡಿದ್ದರು. ಅವರೆಲ್ಲರೂ ಪ್ರಥಮಸಂಪುಟವಿಲ್ಲದಿದ್ದರೆ ಓದನ್ನು ಪ್ರಾರಂಭಿಸಲು ಸಾಧ್ಯವಾಗದೆಂದು ತಗಾದೆಮಾಡಲು ಮೊದಲಿಟ್ಟರು. ನಾವೂ ಸಹ ಉಳಿದ ಸಂಪುಟಗಳನ್ನು ಕೊಡುವಾಗ ಪ್ರಥಮಸಂಪುಟವನ್ನು ಸಾಧ್ಯವಾದಷ್ಟು ಬೇಗ ಕೊಡುವುದಾಗಿ ಆಶ್ವಾಸನೆಯನ್ನಿತ್ತಿದ್ದೆವು. ಇಂತಹ ಸಂದರ್ಭದಲ್ಲಿ ಪ್ರಥಮ ಸಂಪುಟದ ಪುನರ್ಮುದ್ರಣವು ಅನಿವಾರ್ಯವಾಯಿತು. ಇದರಿಂದ ನಮಗೆ ಹೆಚ್ಚು ಲಾಭವಾಗದಿದ್ದರೂ, ಹಾಕಿದ ಬಂಡವಾಳವು ಒಂದೆರಡು ವರ್ಷಗಳವರೆಗೆ ಸ್ಥಗಿತವಾಗುವುದಾದರೂ ಸಹ, ಮುಗಿದುಹೋಗುವ ಸಂಪುಟಗಳನ್ನು ಪುನರ್ಮುದ್ರಣಮಾಡುವುದು ಅನಿವಾರ್ಯವಾಗಿದೆ. ಇರುವ ಸಂಪುಟಗಳನ್ನೇ ತೆಗೆದುಕೊಳ್ಳಲು ಗ್ರಾಹಕರಿಗೆ ಅಷ್ಟು ಉತ್ಸಾಹ ಬರುವುದಿಲ್ಲ. ಮಹಾಭಾರತದ ಕಥೆಯನ್ನು ಆಮೂಲಾಗ್ರವಾಗಿ ಓದದೇ ಸಿಕ್ಕಿದಷ್ಟನ್ನು ಓದಿಕೊಳ್ಳಿರೆಂದು ಹೇಳುವುದು ಅಷ್ಟು ಸೂಕ್ತವಾಗಿಯೂ ಕಾಣುವುದಿಲ್ಲ. ಈ ಕಾರಣದಿಂದಾಗಿ ಮುಗಿದು ಹೋಗುವ ಸಂಪುಟಗಳ ಪುನರ್ಮುದ್ರಣವನ್ನು ಮಾಡಲೇಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಹೊಸಸಂಪುಟಗಳು ಹೊರಬರಲು ಒಂದೆರಡು ತಿಂಗಳುಗಳಾದರೂ ಸಾವಕಾಶವಾಗಬಹುದು.

ಸಾವಕಾಶವಾಗದ ರೀತಿಯಲ್ಲಿ ಮಾಡಲು ಕೂಡ ಸಾಧ್ಯವಿದೆ. ಅದಕ್ಕೆ ಮತ್ತಷ್ಟು ಹೆಚ್ಚಿನ ಬಂಡವಾಳ ಮತ್ತು ಹೆಚ್ಚು ಸಿಬ್ಬಂದಿಯೂ ಬೇಕು. ಪರಮಾತ್ಮನು ಆ ಚೈತನ್ಯಕೊಟ್ಟರೆ ಹಾಗೆ ಮಾಡಲು ಇಚ್ಛಿಸಿದ್ದೇವೆ. ಯದ್ಯಪಿ ಈಗ ಎರಡನೆಯ ಸಂಪುಟವು ಪೂರ್ಣವಾಗಿ ಮುಗಿದುಹೋಗಿದ್ದರೂ ಅದರ ಪುನರ್ಮುದ್ರಣ ವನ್ನು ಎಂಟನೆಯ ಸಂಪುಟವಾದನಂತರ ಮಾಡಬೇಕೆಂದಿರುತ್ತೇವೆ. ಎಂಟನೆಯ ಸಂಪುಟವನ್ನು ಸಾಧ್ಯವಾದಮಟ್ಟಿಗೂ ಬೇಗ ಹೊರತರುವ ಆಶಯವಿದೆ. ಇದಕ್ಕೆ ಜನತೆಯ ಬೆಂಬಲ, ಜನಾರ್ದನನ ಅನುಗ್ರಹ, ಗುರುಜನರ ಆಶೀರ್ವಾದ–ಇವಿಷ್ಟೂ ಬೇಕು.

ಏಳನೆಯ ಸಂಪುಟದಲ್ಲಿ ವನಪರ್ವವನ್ನು ಮುಗಿಸಬೇಕೆಂದಿದ್ದೆವು. ಆದರೆ ಇನ್ನೂ ಸುಮಾರು 200 ಪುಟಗಳನ್ನು ಅಳವಡಿಸಬೇಕಾಗಿ ಬಂದುದರಿಂದ ಪತಿವ್ರತಾಮಾಹಾತ್ಮ್ಯಕ್ಕೆ ನಿಲ್ಲಿಸಲಾಗಿದೆ. ಮಹಿಳೆಯರ ವರ್ಷವೆಂದು ಕೊಂಡಾಡುತ್ತಿರುವ ಈ 1975ನೇ ವರ್ಷದಲ್ಲಿ ಕಾಕತಾಳನ್ಯಾಯದಂತೆ ಮಹಾ ಭಾರತದಲ್ಲಿ ಮಹಿಳೆಯರಿಗೇ ಬಹುವಾಗಿ ಸಂಬಂಧಿಸಿದ ಪತಿವ್ರತಾ ಮಾಹಾತ್ಮ್ಯವೆಂಬ ಉಪಪರ್ವವು ಬಂದಿರುತ್ತದೆ. ಮಹಿಳಾವರ್ಷಕ್ಕೆ ಇದೇ ನಮ್ಮ ಕೊಡುಗೆಯಾಗಿದೆ. ನಮ್ಮ ಅಕ್ಕ-ತಂಗಿಯರು ಸೀತಾ-ಸಾವಿತ್ರಿಯರಂತೆ ಆಗಬೇಕೆಂದು ನಾವೂ ಆಶಿಸುತ್ತೇವೆ.

ಮಹಾಭಾರತದ ಮುಂದಿನ ಎಲ್ಲ ಸಂಪುಟಗಳನ್ನೂ ಒಂದು ಸಾವಿರ ಪ್ರತಿಗಳಂತೆ ಪಡೆಯಲು ಘನಸರ್ಕಾರದವರು ಆಜ್ಞೆನೀಡಿದ್ದಾರೆ. ನಮ್ಮ ಕರ್ನಾಟಕದಲ್ಲಿರುವ ಸುಮಾರು 2,500 ಪ್ರೌಢಶಾಲೆಗಳಿಗೂ ಇದನ್ನು ತೆಗೆದು ಕೊಳ್ಳಬೇಕೆಂದು ನಮ್ಮ ಪ್ರಾರ್ಥನೆಯಾಗಿದ್ದಿತು. ಮುಂದಾದರೂ ಈ ನಮ್ಮ ಪ್ರಾರ್ಥನೆಯನ್ನು ನಡೆಸಿಕೊಡಬೇಕೆಂದು ಪ್ರಾರ್ಥಿಸಿ, ಈಗ ನೀಡಿರುವ ಆಜ್ಞೆಗೆ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

ಕೆನರಾ ಬ್ಯಾಂಕಿನವರು ಎಲ್ಲ ವಿಧಗಳಲ್ಲಿಯೂ ನೆರವು ನೀಡುತ್ತಿದ್ದಾರೆ. ಇವರ ನೆರವಿನಿಂದಾಗಿ ಸಂಪುಟಗಳನ್ನು ಸುವ್ಯವಸ್ಥಿತವಾಗಿಡಲು ಕಟ್ಟಡವನ್ನು ಕಟ್ಟಿಸಲಾಗಿದೆ. ಈ ಕಟ್ಟಡದಲ್ಲಿಯೇ ಈಗ ಪ್ರವಚನಮಂದಿರ ಮತ್ತು ಕಾರ್ಯಾಲಯಗಳಿವೆ. ಕೆನರಾ ಬ್ಯಾಂಕಿನವರು ಮಹಾಭಾರತದ ಪೂರ್ಣ ಮಾಲೆಯನ್ನು ಪಡೆದುಕೊಳ್ಳುವವರಿಗೆ ಸಾಲಕೊಡುವ ಯೋಜನೆಯನ್ನೂ

ಸಿದ್ಧಪಡಿಸಿದ್ದಾರೆ. ಪೂರ್ಣಮಾಲೆಯ ಚಂದಾಹಣ ಸಾಧಾರಣ ಪ್ರತಿ 240/- ರೂ.ಗಳು. ಕ್ಯಾಲಿಕೋ ಪ್ರತಿ 300/- ರೂ.ಗಳು. ಈ ಮೊಬಲಗನ್ನು ಗ್ರಾಹ ಕರು 12-24 ಅಥವಾ 30 ಕಂತುಗಳಲ್ಲಿ ಮರುಪಾವತಿ ಮಾಡುವ ವ್ಯವಸ್ಥೆ ಮಾಡಿದ್ದಾರೆ. ಈ ಸಾಲದ ಯೋಜನೆಯ ಸಹಾಯದಿಂದ ಕಡೆಯಪಕ್ಷ ಐದು ಸಾವಿರ ಗ್ರಾಹಕರನ್ನಾದರೂ ಒದಗಿಸಿಕೊಳ್ಳಬೇಕೆಂಬ ಆಶಯವಿದೆ. ಈ ನಮ್ಮ ಸದಾಶಯವು ಪೂರ್ಣವಾಗಬೇಕಾದರೆ ನಮ್ಮ ಈಗಿನ ಗ್ರಾಹಕರು ಸಂಪೂರ್ಣ ವಾಗಿ ಸಹಕರಿಸಬೇಕು. ಪ್ರತಿಯೊಬ್ಬ ಗ್ರಾಹಕರೂ ಕಡೆಯಪಕ್ಷ ಇಬ್ಬರು ನೂತನ ಗ್ರಾಹಕರನ್ನು ಮಾಡಿಕೊಟ್ಟರೆ ನಮ್ಮ ಆಶೆಯು ಈಡೇರಿದಂತೆಯೇ ಆಗುವುದು. ಕೆನರಾ ಬ್ಯಾಂಕಿನವರು ಮಹಾಭಾರತವು ಜನರಿಗೆ ಅವಶ್ಯವಾಗಿ ತಿಳಿಯಲೇಬೇಕಾದ ಮಹಾವಿದ್ಯೆ–ಎಂಬ ಸದಭಿಪ್ರಾಯದಿಂದಲೂ, ಸತ್ಯನಿಷ್ಠ ವಾದ ಅಭಿಪ್ರಾಯದಿಂದಲೂ ನಾನಾವಿಧಗಳಲ್ಲಿ ನೆರವು ನೀಡುತ್ತಿರುವುದಕ್ಕಾಗಿ ಅವರಿಗೆ ಕೃತಜ್ಞರಾಗಿರುತ್ತೇವೆ. ಅಲ್ಲಿಯ ಒಬ್ಬ ಉನ್ನತ ಅಧಿಕಾರಿಗಳನ್ನು ಸಂದರ್ಶಿಸಿದಾಗ–'ಎಜ್ಯುಕೇಷನ್ ಸ್ಕೀಮಿನಲ್ಲಿ ನಾವಿದನ್ನು ಸೇರಿಸುತ್ತೇವೆ. ಮಹಾಭಾರತಕ್ಕಿಂತಲೂ ಮಿಗಿಲಾದ ವಿದ್ಯೆ ಬೇರಾವುದಿದೆ?'–ಎಂದು ಹೇಳಿದ್ದು ಇಂದೂ ಕಿವಿಯಲ್ಲಿ ಪ್ರತಿಧ್ವನಿತವಾಗುತ್ತಿದೆ. ಹೇಳಿದ್ದನ್ನೇ ಕಾರ್ಯ ರೂಪಕ್ಕೆ ತಂದಿದ್ದು ವಿಶೇಷವಾದ ಸಂಗತಿ. ಸಾಲದ ಯೋಜನೆಯನ್ನು ಚಾಲ್ತಿಗೆ ಕೊಟ್ಟು ಇದರ ಸರ್ವತ್ರ ಪ್ರಚಾರದಲ್ಲಿಯೂ ಅವರು ಸಹಕರಿಸಿದುದಕ್ಕಾಗಿ ಕೃತಜ್ಞರಾಗಿರುತ್ತೇವೆ.

ಈ ಮಹಾಕಾರ್ಯಕ್ಕೆ ಭದ್ರಾವತಿಯ ಮೈಸೂರು ಕಾಗದದ ಕಾರ್ಖಾನೆ ಯವರ ಸಹಕಾರ ಚಿರಸ್ಮರಣೀಯ. ಸಕಾಲಕ್ಕೆ ಮುದ್ರಣದ ಕಾಗದವನ್ನು ಒದಗಿಸುತ್ತಿದ್ದಾರೆ. ಅವರ ಈ ನಿರಂತರ ಸಹಕಾರಕ್ಕಾಗಿ ಧನ್ಯವಾದ ಗಳನ್ನರ್ಪಿಸುತ್ತೇವೆ.

ಈ ಬಾರಿ ಮಹಾಭಾರತಕ್ಕೆ ಇಬ್ಬರು ಪೋಷಕರು ಲಭ್ಯವಾದರೆಂದು ತಿಳಿ ಸಲು ಹರ್ಷಿಸುತ್ತೇವೆ. ಹೈದರಾಬಾದಿನ ತಾಜ್‌ಮಹಲ್ ಪಂಗಡದ ಹೋಟೆಲ್‌ಗಳ ಮಾಲೀಕರಾದ ಶ್ರೀ ಸುಂದರರಾಯರು ತಮ್ಮ ಅಣ್ಣನವರಾದ ದಿವಂಗತ ಬಾಬೂರಾಯರ ಹೆಸರಿನಲ್ಲಿ–ಒಂದು ಸಾವಿರ ರೂ. ಸಹಾಯಧನ ಕಳುಹಿಸಿರುತ್ತಾರೆ.

ಬೆಂಗಳೂರಿನ ಸುಪ್ರಸಿದ್ಧ ಪತ್ರಿಕೋದ್ಯಮಿ ಶ್ರೀ ಬಿ. ಎನ್. ಗುಪ್ತ ಅವರು ಜನ್ಮಭೂಮಿ ಟ್ರಸ್ಟ್‌ನಿಂದ 501 ರೂ.ಗಳ ಧನಸಹಾಯ ಮಾಡಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಸಂಪಾದಕಮಂಡಲಿಯವರು ಯಥಾಪೂರ್ವಕವಾಗಿ ಪರಮಶ್ರದ್ಧೆ ಯಿಂದಲೂ, ಆಸಕ್ತಿಯಿಂದಲೂ, ನಿಃಸ್ಪೃಹತೆಯಿಂದಲೂ ಕಾರ್ಯಮಾಡು ತ್ತಿದ್ದಾರೆ. ಸಾಧ್ಯವಾದಷ್ಟು ಬೇಗ ಮುಗಿಸಬೇಕೆನ್ನುವ ಆಕಾಂಕ್ಷೆಯಿಂದಿರುತ್ತಾರೆ. ಪರಮಾತ್ಮನ ಅನುಗ್ರಹದಿಂದ ಇವರ ಆಕಾಂಕ್ಷೆಯು ಪೂರ್ಣವಾಗಬೇಕಾಗಿದೆ. ಇವರ ಈ ವಿಶ್ವಾಸ ಮತ್ತು ಅಭಿಮಾನಗಳು ಚಿರಂತನವಾಗಿರಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ.

ಪ್ರಕಾಶನದ ಅಧ್ಯಕ್ಷರಾದ ವೇ|| ಬ್ರಂ|| ಶ್ರೀ ವರದದೇಶಿಕಾಚಾರ್ಯ ರಂಗಪ್ರಿಯರು ತಮ್ಮ ಅನೇಕ ಒತ್ತಡದ ಕಾರ್ಯಕಲಾಪಗಳಿದ್ದರೂ ಸಹ ಈ ಮಹಾಕಾರ್ಯವನ್ನು ತಮ್ಮ ಸ್ವಂತದ್ದೆಂದೇ ಭಾವಿಸಿ ಎಲ್ಲ ವಿಷಯಗಳಲ್ಲಿಯೂ ಸೂಕ್ತಸಲಹೆಗಳನ್ನು ನೀಡುತ್ತಾ ಪ್ರೋತ್ಸಾಹಿಸುತ್ತಿದ್ದಾರೆ.

ಕೋಶಾಧ್ಯಕ್ಷರಾದ ಶ್ರೀ ವಿ. ಸೂರ್ಯನಾರಾಯಣ್‌ರವರು ನಮ್ಮ ಹಣಕಾಸಿನ ವ್ಯವಸ್ಥೆಗೆ ಸಂಪೂರ್ಣ ಸಹಾಯಕರಾಗಿರುತ್ತಾರೆ. ಇವರ ಸೌಜನ್ಯ, ಉದಾರತೆ, ಧಾರ್ಮಿಕಪ್ರೇಮ–ಇವುಗಳಿಂದಾಗಿ ಅನೇಕವಿಧವಾದ ಸೌಲಭ್ಯ ಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ. ಮೂವತ್ತನೆಯ ಸಂಪುಟವನ್ನು ಕಾಣಬೇಕೆಂಬುದು ಇವರ ಹಂಬಲವಾಗಿದೆ.

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಈ ಸಂಪುಟಕ್ಕೆ ಸುಪ್ರಸಿದ್ಧ ವಿದ್ವಾಂಸರಾದ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು ಮುನ್ನುಡಿಯನ್ನು ಬರೆದು ಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳು.

ನಿಃಸ್ಪೃಹತೆಯಿಂದ ಮಹಾಭಾರತದ ಪ್ರಚಾರಮಾಡುವವರ ಸಂಖ್ಯೆಯೂ ದಿನೇ ದಿನೇ ಬೆಳೆಯುತ್ತಿದೆ. ಕರ್ನಾಟಕದಾದ್ಯಂತ ಮಹಾಭಾರತದ ಸಂಪುಟಗಳ ಪ್ರಚಾರಕಾರ್ಯವನ್ನು ಕೈಗೊಳ್ಳಲು ನಮ್ಮ ಪ್ರತಿನಿಧಿಗಳನ್ನು ಕಳುಹಿಸುವ ಯೋಜನೆಯೂ ಇದೆ.

ಇಂತಹ ಅನೇಕ ಸತ್ಪುರುಷರ ಸಹಾಯಸಂಪತ್ತಿಯು ಸಿಗದಿದ್ದರೆ ಈ ಮಹಾಕಾರ್ಯವು ಹೇಗೆ ತಾನೇ ನಡೆಯುತ್ತಿತ್ತು? ಭಗವಂತನು ನೆಪಮಾತ್ರಕ್ಕೆ ಒಬ್ಬನನ್ನಿಟ್ಟು ತಾನೇ ಎಲ್ಲ ಕಾರ್ಯಗಳನ್ನೂ ಹಿಂದೆ ನಿಂತು ಮಾಡಿಸುತ್ತಿದ್ದಾನೆಂಬುದು ಈ ಪ್ರಕಾಶಕರ ದೈನಂದಿನ ಅನುಭವವಾಗಿದೆ. ಆ ಕರುಣಾಮಯನ ದಯೆಯು ಅಪಾರವಾದುದು. ಮಾರ್ಗವೇ ಇಲ್ಲದಾಗ ಕಂಡು ಕೇಳರಿಯದ ಮಾರ್ಗವನ್ನು ತೋರಿಸಿಕೊಡುತ್ತಾನೆ. ಇಂತಹ ಪರಮ ಕಾರುಣಿಕನ ದಯೆಯಿಂದಾಗಿ ಎಲ್ಲವೂ ನಡೆಯುತ್ತಿವೆ. ಗ್ರಂಥವು ಹೊರಬರಲು ಸಾವಕಾಶವಾದುದಕ್ಕೂ 'ದೈವೇಚ್ಛೆ'–ಎಂದೇ ಹೇಳಬೇಕಾಗಿದೆ. **'ತೇನ ವಿನಾ ತೃಣಮಪಿ ನ ಚಲತಿ'** ಎಂಬುದು ಶತಾಂಶ ಸತ್ಯ. 'ನಾನು ಮಾಡುತ್ತಿದ್ದೇನೆ' ಎಂದು ಹೇಳಿಕೊಳ್ಳುವುದು ಕೇವಲ ಭ್ರಾಂತಿ.

ಅವನ ದಯೆಯಿಂದ ನಡೆಯುತ್ತದೆ ; ಅವನ ದಯೆಯಿರುವವರೆಗೆ ನಡೆಯುತ್ತದೆ ; ಅವನ ದಯೆಯು ನಿರಂತರವಾಗಿರಲೆಂದು ಬದ್ಧಾಂಜಲಿಯ ಪ್ರಾರ್ಥನೆಯೊಡನೆ ಆ ದಯಾಮಯನಾದ ಚಿನ್ಮಯರೂಪನ ದಿವ್ಯಪಾದಪದ್ಮಗಳನ್ನು ನೆನೆದು ವಿರಮಿಸುವೆವು.

**ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು**
**ಸಮಸ್ತ ಸನ್ಮಙ್ಗಲಾನಿ ಭವನ್ತು**

–ಪ್ರಕಾಶಕರು.

# ಮುನ್ನುಡಿ

ಮಹಾಭಾರತದಂತಹ ಶ್ರೇಷ್ಠಗ್ರಂಥ–ಪ್ರಪಂಚದ ಯಾವ ಭಾಷೆಯಲ್ಲಿಯೇ ಆಗಲೀ, ದೊರಕುವುದು ಅತ್ಯಂತಪ್ರಯಾಸ ಮತ್ತು ಅಸಾಧ್ಯ.

ಶ್ರೀಕೃಷ್ಣದ್ವೈಪಾಯನರಿಂದ ರಚಿತವಾದ ಈ ಗ್ರಂಥವನ್ನು ಐದನೆಯ ವೇದವೆಂದು ನಮ್ಮವರು ಪರಿಗಣಿಸಿದ್ದಾರೆ. ಭಾರತೀಯಸಂಸ್ಕೃತಿಯನ್ನು, ನಮ್ಮ ಜನರ ಆಶೆ-ಪ್ರತ್ಯಾಶೆಗಳನ್ನು, ವೀರ್ಯ-ಪರಾಕ್ರಮಗಳನ್ನು, ಧರ್ಮಬುದ್ಧಿಯನ್ನು, ಮಾನವೀಯಮೌಲ್ಯಗಳನ್ನು ಹೀಗೆ ಪ್ರತಿಬಿಂಬಿಸುವ ಗ್ರಂಥ ಬೇರೊಂದಿಲ್ಲ.

ಕುರುಕುಲದ ಜನರ ಚರಿತ್ರೆಯನ್ನೂ, ಹದಿನೆಂಟು ದಿನಗಳ ಕುರುಕ್ಷೇತ್ರದ ಯುದ್ಧವನ್ನೂ ಬಣ್ಣಿಸುವ ಈ ಗ್ರಂಥದಲ್ಲಿ–ಎಷ್ಟು ಕಥೆಗಳು, ಎಷ್ಟು ಉಪಾಖ್ಯಾನಗಳು, ಏನು ವರ್ಣನೆಗಳು, ಎಂತಹ ಜೀವನಮೀಮಾಂಸೆ! ಆದುದರಿಂದಲೇ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಯಾವ ಪುರುಷಾರ್ಥಕ್ಕೇ ಆಗಲಿ ಸಂಬಂಧಿಸಿದ ವಸ್ತು ಇಲ್ಲಿಲ್ಲದಿದ್ದರೆ ಬೇರೊಂದೆಡೆಯಲ್ಲಿಲ್ಲ–ಎಂಬ ಮಾತು ಜಗತ್ಪ್ರಸಿದ್ಧವಾಗಿರುವುದು.

ಈ ಮಹಾಗ್ರಂಥ, ಕುರುಕುಲಚರಿತ್ರೆಯನ್ನು ವರ್ಣಿಸುವ ನೆಪದಲ್ಲಿ– ಭಾರತದ ಜನರ ಉನ್ನತಶಕ್ತಿ-ಸಾಮರ್ಥ್ಯಗಳನ್ನೂ, ಅವರ ಪ್ರತಿಭೆಯ ಪರಾಕಾಷ್ಠೆಯನ್ನೂ ಅವರ ಔದಾರ್ಯ-ಸೌಹಾರ್ದಗಳನ್ನೂ, ಎಲ್ಲಕ್ಕಿಂತ ಮಿಗಿಲಾಗಿ ಅವರ ಧರ್ಮಬುದ್ಧಿಯನ್ನೂ ಅನ್ಯಾದೃಶವಾದ ರೀತಿಯಲ್ಲಿ ಪ್ರತಿಪಾದಿಸಿದೆ.

ಕಥೆಯೇ ಅತ್ಯಂತ ಆಕರ್ಷಕ ; ಅದರ ನಿರೂಪಣೆಯೂ ಹೃದಯಗ್ರಾಹಿ; ಅದರ ಹಿಂದಿನ ಧರ್ಮಸೂಕ್ಷ್ಮತೆಯ ಮಿಡಿಯುವಿಕೆಯಂತೂ ಅನ್ಯಾದೃಶ. ಮಾನವನು ತನ್ನ ಜೀವನವನ್ನು ಕೃತಾರ್ಥಗೊಳಿಸಿಕೊಳ್ಳಬೇಕಾದರೆ, ಮಹಾಭಾರತದ ಅಧ್ಯಯನಕ್ಕಿಂತ ಬೇರೊಂದು ಮಾರ್ಗ ಬೇಕಿಲ್ಲ.

ಸುಸಂಸ್ಕೃತನಾದ ಮಾನವ, ಎಷ್ಟೇ ಕಷ್ಟದಲ್ಲಿದ್ದರೂ, ನೋವನ್ನು ಅನುಭವಿಸುತ್ತಿದ್ದರೂ-ಅಡಿಗಡಿಗೂ ಧರ್ಮದ ಹಾದಿಯನ್ನು ಹುಡುಕುವ ಪ್ರಯತ್ನಮಾಡುತ್ತಾನೆಂಬುದಕ್ಕೆ ಇಲ್ಲಿಯ ನೂರಾರು ಪ್ರಕರಣಗಳು ಸಾಕ್ಷೀ

ಭೂತವಾಗಿ ನಿಂತಿವೆ. ಈ ಧರ್ಮಮಾರ್ಗಾವಲಂಬನವೇ ನಮಗೆ ಇಂದು ಎಲ್ಲಕ್ಕಿಂತ ಹೆಚ್ಚಾಗಿ ಬೇಕಾಗಿರುವುದು.

ಮದ, ಮಾತ್ಸರ್ಯ, ಅಸೂಯೆ, ಲೋಭಬುದ್ಧಿಗಳಿಂದ ಕೂಡಿರುವ ಸಮಾಜವೇ ನಮ್ಮೆದುರು ನಿಂತರೂ, ಕೊಟ್ಟ ಕೊನೆಗೆ ನಮಗೆ ದೊರೆಯುವ ಮಹೋಪದೇಶ–'ಯತೋ ಧರ್ಮಃ ತತೋ ಜಯಃ'–'ಎಲ್ಲಿ ಧರ್ಮವೋ ಅಲ್ಲಿಯೇ ಜಯ'–ಎಂಬುದು.

ಇಂತಹ ಅದ್ವಿತೀಯವಾದ ಮಹಾಗ್ರಂಥವನ್ನು ಕನ್ನಡಕ್ಕೆ ತಂದು, ಭಾರತ ದರ್ಶನ ಪ್ರಕಾಶನದವರು ಕನ್ನಡ ಜನತೆಗೆ ಮಹೋಪಕಾರ ಮಾಡಿದ್ದಾರೆ.

ಮಹಾಭಾರತಕ್ಕೆ ಮಾರುಹೋಗದವರಾರು? ಭಾರತ ದರ್ಶನ ಪ್ರಕಾಶಕರ ಶ್ರೀಮನ್ಮಹಾಭಾರತದ ಸಂಪುಟಗಳನ್ನು ನಮ್ಮ ಜನ ಓದಿ ಆತ್ಮ ಕಲ್ಯಾಣ ಕಾರ್ಯದಲ್ಲಿ ನಿರತರಾಗುವರೆಂಬ ನಂಬಿಕೆ ನನಗಿದೆ. ಹಾಗೆಯೇ ಈ ವನಪರ್ವದ ಸಂಪುಟಕ್ಕೆ ಸಲ್ಲಬೇಕಾದ ಆದರ-ಸಹಾಯಗಳನ್ನು ಅವರು ಸಲ್ಲಿಸುವರೆಂದು ಆಶಿಸುತ್ತೇನೆ.

"ಶುಭಂ ಭೂಯಾತ್"

–ಎಂ. ಪಿ. ಎಲ್. ಶಾಸ್ತ್ರೀ

## ದ್ವಿತೀಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದಾಗಿ ಏಳನೆಯ ಸಂಪುಟದ ಪುನರ್ಮುದ್ರಣವು ನಿರ್ವಿಘ್ನವಾಗಿ ಕೊನೆಗೊಂಡಿದೆ. ಮೊದಲನೆಯ ಮುದ್ರಣದಲ್ಲಿ ಆರು ಸಾವಿರ ಪ್ರತಿಗಳನ್ನು ಛಾಪಿಸಲಾಗಿತ್ತು. ಪುನರ್ಮುದ್ರಣಕ್ಕೆ ಬಂದುದರಿಂದ ಆರು ಸಾವಿರ ಗ್ರಾಹಕರು ಇರಬೇಕಾದುದು ಸಹಜ. ಐದು ಸಾವಿರದ ಐದು ನೂರು ಗ್ರಾಹಕರಂತೂ ಇದ್ದಾರೆ. ಉಳಿದ ಐದು ನೂರು ಪ್ರತಿಗಳು ಲೆಕ್ಕಕ್ಕೆ ಸಿಗುವುದಿಲ್ಲ. ಸದ್ಯಕ್ಕೆ ಪುನರ್ಮುದ್ರಣವಾಗಬೇಕಾದ ಸಂಪುಟಗಳು ಯಾವುವೂ ಇರುವುದಿಲ್ಲ. ಎಂಟನೆಯ ಸಂಪುಟದಿಂದ ಎಂಟು ಸಾವಿರ ಪ್ರತಿಗಳನ್ನು ಛಾಪಿಸುತ್ತಿರುವುದರಿಂದಲೂ ಒಂದ

ರಿಂದ ಏಳರವರೆಗಿನ ಎಲ್ಲ ಸಂಪುಟಗಳನ್ನೂ ಪುನರ್ಮುದ್ರಣಮಾಡಿರುವುದ ರಿಂದಲೂ ಇನ್ನು ಒಂದು ವರ್ಷದವರೆಗೆ ಪುನರ್ಮುದ್ರಣದ ಕಷ್ಟವಿರುವು ದಿಲ್ಲವೆಂದು ಭಾವಿಸಲಾಗಿದೆ. ಹದಿನೈದನೆಯ ಸಂಪುಟದ ಸಮಾರಂಭದಲ್ಲಿ ಮುಖ್ಯಮಂತ್ರಿಗಳು ಕೊಟ್ಟಿರುವ ಆಶ್ವಾಸನೆಯು ಕಾರ್ಯರೂಪಕ್ಕೆ ಬರುವು ದಾದರೆ ಎಲ್ಲ ಸಂಪುಟಗಳನ್ನೂ ಪುನರ್ಮುದ್ರಣಮಾಡಬೇಕಾಗುತ್ತದೆ. ಏನೇ ಆದರೂ ಎಲ್ಲವನ್ನೂ ಜಗದಾನಂದಕಂದನಾದ, ದಯಾಸಮುದ್ರನಾದ ಅವನೇ ನೋಡಿಕೊಳ್ಳುತ್ತಾನೆ. ಅವನು ತೋರಿಸಿಕೊಟ್ಟ ಮಾರ್ಗದಲ್ಲಿ ಮುನ್ನಡೆಯುವುದೊಂದೇ ನಮ್ಮ ಈಗಿನ ಕರ್ತವ್ಯವಾಗಿದೆ.

ಹಿಂದಿನಂತೆಯೇ ಈ ಸಂಪುಟವನ್ನೂ ಸಂಪಾದಕಮಂಡಲಿಯವರು ಶ್ರದ್ಧೆಯಿಂದ, ವಿಚಕ್ಷಣೆಯಿಂದ ಹೆಚ್ಚಿನ ಆದರದಿಂದ ಪರಿಶೋಧಿಸಿಕೊಟ್ಟಿರು ತ್ತಾರೆ. ಅವರೆಲ್ಲರಿಗೂ, ನಮ್ಮ ಗ್ರಾಹಕರಿಗೂ, ಹಿತೈಷಿಗಳಿಗೂ, ಸಮಸ್ತರಿಗೂ ಭಗವಂತನು ಶಾಂತಿಯನ್ನೂ-ಪುಷ್ಟಿಯನ್ನೂ, ತುಷ್ಟಿಯನ್ನೂ, ಸಮಸ್ತ ಸನ್ಮಂಗಲಗಳನ್ನೂ ದಯಪಾಲಿಸಲಿ—ಎಂದು ದಯಾಮಯನಾದ ಗುರುಭಗ ವಂತನ ದಿವ್ಯಪಾದಾರವಿಂದಗಳನ್ನು ನೆನೆದು ಪ್ರಾರ್ಥಿಸುತ್ತಾ ವಿರಮಿಸುವೆವು.

—ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದ ಏಳನೆಯ ಸಂಪುಟದ ಮೂರನೆಯ ಮುದ್ರಣಕಾರ್ಯವು ಮೆ॥ ವಿಜಯಲಕ್ಷ್ಮಿ ಪ್ರಿಂಟರ್ಸ್, ಮೈಸೂರು, ಇವರ ಸಹಯೋಗದಿಂದ ಮುಗಿದಿದೆ. ನಮ್ಮ ಕಾರ್ಯಕ್ರಮದಂತೆ ಈ ಸಂಪುಟವನ್ನು ಒಂದು ತಿಂಗಳ ಹಿಂದೆಯೇ ಹೊರತರಬೇಕಾಗಿದ್ದಿತು. ಆದರೆ ಮಹಾಭಾರತದ ಪ್ರಕಟಣೆಯ ವೈಶಿಷ್ಟ್ಯವೇನೆಂದರೆ ಇದರ ಮುದ್ರಣದಲ್ಲಿ ಪ್ರಕಾಶನದಲ್ಲಿ ನಮ್ಮ ಕೈವಾಡವೇನೂ ನಡೆಯುವುದಿಲ್ಲ. ಎಲ್ಲವೂ ಮಹಾಮಹಿಮನಾದ ಪರಮಾತ್ಮನ ಸತ್ಸಸಂಕಲ್ಪಕ್ಕೆ ಅನುಸಾರವಾಗಿ ನಡೆಯುತ್ತಿದೆ.

ಪುನರ್ಮುದ್ರಣವಾಗಬೇಕಾದ ಸಂಪುಟಗಳು ಬಹಳಷ್ಟಿವೆ. ೧೪ನೇ ಸಂಪುಟದಿಂದ ೨೦ನೇ ಸಂಪುಟದವರೆಗೂ ಪುನರ್ಮುದ್ರಣವಾಗಬೇಕಾಗಿದೆ. ಮುಂದಿನ ೨-೩ ತಿಂಗಳಿನಲ್ಲಿ ಇನ್ನು ೨-೩ ಸಂಪುಟಗಳು ಮುಗಿಯಲಿವೆ.

ಪುನರ್ಮುದ್ರಣವು ಅನವರತವಾಗಿ ನಡೆಯಬೇಕಾಗಿದೆ. ಇದಕ್ಕೆ ಪರಮಾತ್ಮನು ಚೈತನ್ಯವನ್ನು ಕೊಡಬೇಕು. ಅವನ ಅಭಯಹಸ್ತವಿರುವುದರಿಂದಲೇ ಹೊಸ ಗ್ರಾಹಕರಿಗೆಲ್ಲರಿಗೂ ಹಿಂದಿನ ಸಂಪುಟಗಳನ್ನು ಒದಗಿಸುತ್ತೇವೆಂಬ ಆಶ್ವಾಸನೆಯನ್ನು ಕೊಡುತ್ತಿದ್ದೇವೆ. ನಮ್ಮ ಮಾತು ಸತ್ಯವಚನವಾಗಲು ಅವನ ಕೃಪೆಯು ಬೇಕು. ಇದುವರೆಗೂ ನಡೆಸಿಕೊಟ್ಟಿದ್ದಾನೆ. ಮುಂದೆಯೂ ನಡೆಸಿಕೊಡುತ್ತಾನೆಂಬ ಭರವಸೆಯಿದೆ.

ಈ ಸಂಪುಟಕ್ಕೆ ಕಾಗದವನ್ನು ಮಾರುಕಟ್ಟೆಯಲ್ಲೇ ತರಬೇಕಾಯಿತು. ರಿಯಾಯಿತಿ ದರದ ಕಾಗದವು ಇದಕ್ಕೆ ಸಿಕ್ಕಲಿಲ್ಲ. ಮುದ್ರಣವನ್ನು ಬೇರೆಯ ಕಡೆಯಲ್ಲಿ ಮಾಡಿಸುತ್ತಿರುವುದರಿಂದ ಉತ್ಪನ್ನ ಬೆಲೆಯೇ ಅಧಿಕವಾಗುತ್ತಿದೆ. ಆದರೂ ಸದ್ಯಕ್ಕೆ ಹಿಂದಿನ ಬೆಲೆಯನ್ನೇ ಇಟ್ಟಿದ್ದೇವೆ. ಮುಂದಿನವರ್ಷದಿಂದ ಸ್ವಲ್ಪ ಹೆಚ್ಚು ಮಾಡಬೇಕಾಗಬಹುದು. ಗ್ರಾಹಕರು ಸಹಕರಿಸುವರೆಂಬ ಭರವಸೆಯಿದೆ.

ಹಿಂದಿನಂತೆಯೇ ಈ ಸಂಪುಟವನ್ನೂ ಸಂಪಾದಕ ಮಂಡಲಿಯವರು ಶ್ರದ್ಧೆಯಿಂದ, ವಿಚಕ್ಷಣೆಯಿಂದ, ಹೆಚ್ಚಿನ ಆದರದಿಂದ ಪರಿಶೋಧಿಸಿಕೊಟ್ಟಿರುತ್ತಾರೆ. ಅವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಮೆ॥ ವಿಜಯಲಕ್ಷ್ಮಿ ಪ್ರಿಂಟರ್ಸ್‌ನವರು ಮಹಾಭಾರತದ ಸಂಪುಟಗಳನ್ನು ಮುದ್ರಣಮಾಡಿಕೊಡಲು ಬಹಳ ಉತ್ಸಾಹವುಳ್ಳವರಾಗಿದ್ದಾರೆ. ಅವರು ನುಡಿದಿರುವಂತೆ ನಡೆದುಕೊಂಡರೆ ೧೯ನೆಯ ಸಂಪುಟವನ್ನು 1985ನೇ ಜನವರಿ ಕಡೆಯೊಳಗಾಗಿ ಗ್ರಾಹಕರಿಗೆ ಕೊಡಬಹುದು. 1985ನೇ ಜನವರಿಯಲ್ಲಿ ೨೦ನೆಯ ಸಂಪುಟವು ಪ್ರಕಾಶವಾಗುವ ನಿರೀಕ್ಷೆಯಿದೆ.

ದಯಾಮಯನಾದ ಪರಮಾತ್ಮನು ಮಹಾಭಾರತದ ಬಂಧುಗಳೆಲ್ಲರಿಗೂ ಆಯುರಾರೋಗ್ಯ-ಐಶ್ವರ್ಯಗಳನ್ನಿತ್ತು ಕಾಪಾಡಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

—ಪ್ರಕಾಶಕರು.

## ನಾಲ್ಕನೆಯ ಮುದ್ರಣದ ಪ್ರಸ್ತಾವನೆ

ಭಗವಂತನ ದಯೆಯಿಂದ ಏಳನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸಿರುತ್ತೇವೆ. ಅನುಕ್ರಮವಾಗಿ ಹಿಂದಿನ ಸಂಪುಟಗಳನ್ನು ಪುನರ್ಮುದ್ರಣಮಾಡುವುದಾಗಿದ್ದರೆ 11-12-13-14-25-26 ಇವಿಷ್ಟು ಸಂಪುಟಗಳ ಪುನರ್ಮುದ್ರಣವಾದನಂತರ ಇದನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಬೇಕಾಗಿದ್ದಿತು. ಆದರೆ ಮಧ್ಯದಲ್ಲಿ ಇದೊಂದು ಸಂಪುಟವು ಓದುಗರಿಗೆ ಇರುವುದಿಲ್ಲವಾದಕಾರಣ ಈ ಸಂಪುಟವನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಲಾಯಿತು. ನಾವು ಎಷ್ಟೇ ಅವಸರದಿಂದ ಪುನರ್ಮುದ್ರಣ ಮಾಡುತ್ತಿದ್ದರೂ 14-15 ಸಂಪುಟಗಳಿಗಿಂತ ಹೆಚ್ಚು ಸಂಪುಟಗಳನ್ನು ನೂತನ ಗ್ರಾಹಕರಿಗೆ ಕೊಡಲು ಸಾಧ್ಯವಾಗುತ್ತಿಲ್ಲ. ಇತ್ತೀಚೆಗೆ ಮಹಾಭಾರತದ ಒಂದು ಮತ್ತು ಎರಡನೆಯ ಸಂಪುಟಗಳೂ ಮುಗಿದು ಹೋಗಿವೆ. ಹೊಸ ಗ್ರಾಹಕ ರಿಗೆ ಮೊದಲ ಸಂಪುಟಗಳೇ ಇಲ್ಲದಿರುವುದು ಓದಬೇಕೆಂಬ ಉತ್ಸಾಹಕ್ಕೆ ಭಂಗವಾದಂತಾಗುತ್ತದೆ. ಆದರೂ ಪ್ರಸಕ್ತ ನಾವು ಏನು ಮಾಡುವಂತೆಯೂ ಇಲ್ಲ. 11-12-13-14 ಮತ್ತು 25-26ನೇ ಸಂಪುಟಗಳ ಪುನರ್ಮುದ್ರಣವನ್ನು ಮುಗಿಸಿದನಂತರವೇ ಮೊದಲಿನ ಸಂಪುಟಗಳನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಮಾನ್ಯ ಗ್ರಾಹಕರು ದಯಮಾಡಿ ಸಹಕರಿಸ ಬೇಕಾಗಿ ಪ್ರಾರ್ಥಿಸುತ್ತೇವೆ.

ಕಾಗದ-ಪತ್ರಗಳ ವ್ಯವಹಾರವನ್ನು ಕಡಿಮೆಮಾಡಲು ಮಹಾಭಾರತ-ರಾಮಾಯಣದ ಗ್ರಾಹಕರೆಲ್ಲರೂ ಭಾರತ ದರ್ಶನವೆಂಬ ಮಾಸಪತ್ರಿಕೆಗೆ ಗ್ರಾಹಕರಾಗಬೇಕಾಗಿ ವಿನಂತಿಸುತ್ತೇವೆ. ಅಂಚೆವೆಚ್ಚ ಸೇರಿ ಚಂದಾಹಣ ಕೇವಲ ಹತ್ತು ರೂಪಾಯಿಗಳು. ಹರಿವಂಶದ ಧಾರಾವಾಹಿಯಿದೆ. ಸತ್ಯಕಥೆ ಮುಂತಾದ ಮನೋರಂಜಕ ಭಾಗಗಳಿವೆ. ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ಕಾರ್ಯಾಲಯದ ವಾರ್ತೆ ಇರುತ್ತದೆ. ಪುನರ್ಮುದ್ರಣ ಹಾಗೂ ಹೊಸ ಮುದ್ರಣ ಇವುಗಳ ಪ್ರಾರಂಭ, ಸಂಪುಟಗಳ ಸಿದ್ಧತೆ, ಎಲ್ಲದರ ಬಗ್ಗೆಯೂ ಗ್ರಾಹಕರಿಗೆ ಮಾಹಿತಿಯನ್ನು ಒದಗಿಸಲಾಗುವುದು. ಅವರೂ ಪತ್ರ ಬರೆಯುವ ಆವಶ್ಯಕತೆ ಇರುವುದಿಲ್ಲ. ನಮಗೂ ಉತ್ತರಬರೆಯುವ ಶ್ರಮವೂ ಇರುವುದಿಲ್ಲ. ಆದುದರಿಂದ ಎಲ್ಲ ಗ್ರಾಹಕರೂ ತಪ್ಪದೇ ಭಾರತ ದರ್ಶನಕ್ಕೆ ಗ್ರಾಹಕರಾಗಬೇಕಾಗಿ ಪ್ರಾರ್ಥಿಸುತ್ತೇವೆ. ಹೊಸಗ್ರಾಹಕರಿಗೆ 1989ನೇ ಜನವರಿ ಯಿಂದ ಸಂಚಿಕೆಗಳನ್ನು ಕಳುಹಿಸಲಾಗುವುದು.

ಸಂಪಾದಕಮಂಡಲಿಯ ವಿದ್ವಾಂಸರು ಈ ಪುನರ್ಮುದ್ರಣದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಉಪಕರಿಸಿರುತ್ತಾರೆ. ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ತೆರೆಯ ಮರೆಯಲ್ಲಿ ಅವಿರತರಾಗಿ ಪ್ರಚಾರದ ಕೆಲಸಮಾಡುತ್ತಿರುವ ಸಕಲಸಜ್ಜನರಿಗೂ ದಯಾಮಯನಾದ ಪರಮಾತ್ಮನು ಆಯುರಾರೋಗ್ಯ ಐಶ್ವರ್ಯಾದಿಗಳನ್ನಿತ್ತು ಕಾಪಾಡಲಿ–ಎಂಬ ಅಂತಃಕರಣದ ಪ್ರಾರ್ಥನೆಯೊಡನೆ ವಿರಮಿಸುವೆವು.

–ಪ್ರಕಾಶಕರು.

## ಐದನೆಯ ಮುದ್ರಣದ ಪ್ರಸ್ತಾವನೆ

ಭಗವಂತನ ಕರುಣೆಯಿಂದಾಗಿ ಮಹಾಭಾರತ 7ನೆಯ ಸಂಪುಟದ ಐದನೆಯ ಪುನರ್ಮುದ್ರಣವನ್ನು ಮುಗಿಸಲಾಗಿದೆ. 6ನೆಯ ಸಂಪುಟದ ಪುನರ್ಮುದ್ರಣವೂ ಆಗುತ್ತಿದೆ. ಪರಮಾತ್ಮನ ದಯೆಯಿಂದ ಈ ತಿಂಗಳ ಕಡೆಯವೇಳೆಗೆ ಅದೂ ಹೊರಬರಬಹುದು. ಮಹಾಭಾರತವನ್ನು ಸಂಗ್ರಹಿಸಿಡಲು ಅಪೇಕ್ಷಿಸುವವರಿಗೆ ಇದು ಸಕಾಲವಾಗಿದೆ. ಪ್ರಕೃತ 1 ರಿಂದ 10 ರವರೆಗೆ ಪ್ರಾರಂಭದ ಎಲ್ಲಾ ಸಂಪುಟಗಳು ಸಿಕ್ಕುತ್ತವೆ. ಇದನ್ನು ಆಧರಿಸಿ ನಮ್ಮ ಗೌರವ ಪ್ರತಿನಿಧಿಗಳು ಮತ್ತು ನಮ್ಮ ಪ್ರಿಯಗ್ರಾಹಕರು ನೂತನ ಗ್ರಾಹಕರನ್ನು ಸಂಗ್ರಹಿಸಿಕೊಡಲು ಪ್ರಯತ್ನಿಸಬೇಕು. ರತ್ನತ್ರಯಗಳ ಪ್ರಚಾರಕ್ಕಿಂತ ಮಿಗಿಲಾದ ಪುಣ್ಯಕಾರ್ಯ ಬೇರೊಂದಿಲ್ಲ. ಇಂತಹ ಸದವಕಾಶವು ಶತಮಾನದಲ್ಲಿ ಪುನಃ ಸಿಕ್ಕಲಾರದು. ರತ್ನತ್ರಯಗಳ ಪ್ರಚಾರಕ್ಕಾಗಿಯೇ ಕಟಿಬದ್ಧವಾಗಿರುವ ಭಾರತ ದರ್ಶನ ಪ್ರಕಾಶನ ವಿಶ್ವಸ್ತ ಸಂಸ್ಥೆಗೆ ಬೆಂಬಲ ನೀಡುವುದು ಧಾರ್ಮಿಕ ಬಾಂಧವರ ಮುಖ್ಯಕರ್ತವ್ಯವಾಗಿರುತ್ತದೆ. ನಾವು ಕಷ್ಟಪಟ್ಟಾದರೂ ಧರ್ಮವನ್ನು ಉಳಿಸದಿದ್ದರೆ ಧರ್ಮವು ನಮ್ಮನ್ನು ಉಳಿಸಲಾರದು. ನಮ್ಮ ಅಜೇಯ ಸನಾತನ ಸಂಸ್ಕೃತಿಯು ವಿಶ್ವವ್ಯಾಪಿಯಾಗಬೇಕು. ಎಲ್ಲರೂ ಜೊತೆಗೂಡಿ ಪ್ರಯತ್ನಿಸೋಣ. ಪ್ರಯತ್ನಿಸಿದವರಿಗೆ ಭಗವಂತನ ಅಭಯಹಸ್ತ ಇದ್ದೇ ಇರುತ್ತದೆ.

ಸರ್ವೇ ಜನಾಃ ಸುಖಿನೋ ಭವಂತು

–ಪ್ರಕಾಶಕರು.

# ಮಹಾಭಾರತ-ವನಪರ್ವ-ಏಳನೆಯ ಸಂಪುಟದ
# ವಿಷಯಾನುಕ್ರಮಣಿಕೆ


| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| | ಮಾರ್ಕಣ್ಡೇಯಸಮಾಸ್ಯಾಪರ್ವ | |
| ೨೦೯ | ಧರ್ಮಸೂಕ್ಷ್ಮಗಳು : ಶುಭಾಶುಭಕರ್ಮಗಳು ಮತ್ತು ಅವುಗಳ ಫಲ : ಬ್ರಹ್ಮಪ್ರಾಪ್ತಿಗೆ ಉಪಾಯಗಳು ಮತ್ತು ಅವುಗಳ ಕಥನ .... | 3423 |
| ೨೧೦ | ಧರ್ಮವ್ಯಾಧನಿಂದ ಅಧ್ಯಾತ್ಮಬೋಧೆ .... | 3439 |
| ೨೧೧ | ಪಂಚಭೂತಗಳ ಗುಣವರ್ಣನೆ ಮತ್ತು ಇಂದ್ರಿಯ ನಿಗ್ರಹದ ಫಲ .... | 3446 |
| ೨೧೨ | ಮೂರು ಗುಣಗಳ ಸ್ವರೂಪ ಮತ್ತು ಅವುಗಳ ಫಲದ ವಿವರಣೆ | 3453 |
| ೨೧೩ | ಪ್ರಾಣವಾಯುವಿನ ಸ್ಥಿತಿಯ ವರ್ಣನೆ : ಪರಮಾತ್ಮನ ಸಾಕ್ಷಾತ್ಕಾರಕ್ಕೆ ಉಪಾಯ .... | 3461 |
| ೨೧೪ | ಮಾತಾ-ಪಿತೃಸೇವೆಯ ಫಲನಿರೂಪಣೆ .... | 3472 |
| ೨೧೫ | ಧರ್ಮವ್ಯಾಧನು ಕೌಶಿಕನಿಗೆ ಮಾತಾ-ಪಿತೃಸೇವೆಯ ಮಹತ್ತ್ವವನ್ನು ತಿಳಿಸಿ ತಾನು ವ್ಯಾಧನಾಗಿ ಹುಟ್ಟಿದುದಕ್ಕೆ ಪೂರ್ವಜನ್ಮದ ಕಾರಣವಾದ ವೃತ್ತಾಂತವನ್ನು ತಿಳಿಸಿದುದು .... | 3479 |
| ೨೧೬ | ಕೌಶಿಕ ಮತ್ತು ಧರ್ಮವ್ಯಾಧರ ಸಂಭಾಷಣೆಯ ಉಪಸಂಹಾರ : ಕೌಶಿಕನು ತನ್ನ ಮನೆಗೆ ಹಿಂದಿರುಗಿದುದು .... | 3484 |
| ೨೧೭ | ಅಗ್ನಿಯು ಅಂಗಿರಸನನ್ನು ತನ್ನ ಮೊದಲನೆಯ ಮಗನನ್ನಾಗಿ ಮಾಡಿಕೊಂಡುದು : ಅಂಗಿರಸನಿಂದ ಬೃಹಸ್ಪತಿಯ ಜನನ .... | 3494 |
| ೨೧೮ | ಅಂಗಿರಸನ ಸಂತಾನವರ್ಣನೆ .... | 3497 |
| ೨೧೯ | ಬೃಹಸ್ಪತಿಯ ಸಂತಾನವರ್ಣನೆ .... | 3498 |
| ೨೨೦ | ಪಾಂಚಜನ್ಯಾಗ್ನಿಯ ಉತ್ಪತ್ತಿ ಮತ್ತು ಅವನ ಸಂತಾನವರ್ಣನೆ .... | 3501 |
| ೨೨೧ | ಅಗ್ನಿಯ ಸ್ವರೂಪ : ತಪನ ಸಂತತಿಯ ಮತ್ತು ಭಾನು (ಮನು) ಸಂತತಿಯ ವರ್ಣನೆ .... | 3504 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೨೨ | ಸಹ ಎಂಬ ಅಗ್ನಿಯು ನೀರಿನಲ್ಲಿ ಪ್ರವೇಶಿಸಿದುದು : ಅಥರ್ವಾಂಗಿರಸನ ಮೂಲಕ ಅವನು ಪುನಃ ಪ್ರಕಟವಾದುದು | .... | 3508 |
| ೨೨೩ | ಇಂದ್ರನು ಕೇಶಿಯ ಆಕ್ರಮಣದಿಂದ ದೇವಸೇನೆಯನ್ನು ಉದ್ಧರಿಸಿದುದು | .... | 3512 |
| ೨೨೪ | ದೇವಸೇನೆಯೊಡನೆ ಇಂದ್ರನು ಬ್ರಹ್ಮನಲ್ಲಿಗೆ ಹೋದುದು : ಬ್ರಹ್ಮರ್ಷಿಗಳ ಆಶ್ರಮದಲ್ಲಿ ಋಷಿಪತ್ನಿಯರನ್ನು ಕಂಡು ಅಗ್ನಿಯ ವ್ಯಾಮೋಹ : ವನಗಮನ | .... | 3515 |
| ೨೨೫ | ಸ್ವಾಹಾದೇವಿಯು ಋಷಿಪತ್ನಿಯರ ರೂಪಗಳನ್ನು ಧರಿಸಿ ಅಗ್ನಿಯೊಡನೆ ಸಮಾಗಮ ಮಾಡಿದುದು : ಸ್ಕಂದನ ಉತ್ಪತ್ತಿ : ಹುಟ್ಟಿದೊಡನೆಯೇ ಸ್ಕಂದನು ಕ್ರೌಂಚಾದಿ ಪರ್ವತಗಳನ್ನು ಭೇದಿಸಿದುದು | .... | 3522 |
| ೨೨೬ | ವಿಶ್ವಾಮಿತ್ರನು ಸ್ಕಂದನಿಗೆ ಜಾತಕರ್ಮಾದಿಗಳನ್ನು ಮಾಡಿದುದು : ವಿಶ್ವಾಮಿತ್ರನು ಸತ್ಯಾಂಶವೇನೆಂಬುದನ್ನು ಹೇಳಿದರೂ ಸಹ ಋಷಿಗಳು ತಮ್ಮ ಪತ್ನಿಯರನ್ನು ಪರಿತ್ಯಜಿಸಿದುದು : ಅಗ್ನಿಯೇ ಮೊದಲಾದವರು ಸ್ಕಂದನನ್ನು ರಕ್ಷಿಸಿದುದು | .... | 3529 |
| ೨೨೭ | ಯುದ್ಧದಲ್ಲಿ ಪರಾಜಿತನಾಗಿ ಶರಣಾಗತನಾಗಿ ಬಂದ ಇಂದ್ರನಿಗೆ ಸ್ಕಂದನ ಅಭಯಪ್ರದಾನ | .... | 3534 |
| ೨೨೮ | ಸ್ಕಂದನ ಅನುಯಾಯಿಗಳ ವರ್ಣನೆ | .... | 3536 |
| ೨೨೯ | ಇಂದ್ರನೊಡನೆ ಸ್ಕಂದನ ಸಂಭಾಷಣೆ : ಸ್ಕಂದನು ದೇವಸೈನ್ಯಕ್ಕೆ ಅಧಿಪತಿಯಾದುದು ಮತ್ತು ದೇವಸೇನೆಯನ್ನು ವಿವಾಹವಾದುದು | .... | 3538 |
| ೨೩೦ | ಸ್ಕಂದನು ಕೃತ್ತಿಕಾನಕ್ಷತ್ರಗಳಿಗೆ ನಕ್ಷತ್ರಮಂಡಲದಲ್ಲಿ ಸ್ಥಾನವನ್ನು ಕಲ್ಪಿಸಿಕೊಟ್ಟುದು : ಮನುಷ್ಯರಿಗೆ ಕಷ್ಟಕೊಡುವ ವಿವಿಧಗ್ರಹಗಳ ವರ್ಣನೆ | .... | 3548 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೩೧ | ಸ್ಕಂದನು ಸ್ವಾಹಾದೇವಿಯನ್ನು ಸತ್ಕರಿಸಿದುದು : ರುದ್ರದೇವನೊಡನೆ ಸ್ಕಂದ ಮತ್ತು ದೇವತೆಗಳು ಭದ್ರವಟದ ಯಾತ್ರೆಮಾಡಿದುದು : ದೇವಾಸುರರ ಯುದ್ಧ : ಮಹಿಷಾಸುರ ವಧೆ : ಸ್ಕಂದನ ಪ್ರಶಂಸೆ | .... | 3558 |
| ೨೩೨ | ಕಾರ್ತಿಕೇಯನ ನಾಮಾವಳಿ ಮತ್ತು ಸ್ತೋತ್ರ | .... | 3573 |
| ದ್ರೌಪದೀ-ಸತ್ಯಭಾಮಾಸಂವಾದಪರ್ವ | | | |
| ೨೩೩ | ದ್ರೌಪದಿಯು ಸತ್ಯಭಾಮೆಗೆ ಸತೀತ್ವದ ವಿಷಯದಲ್ಲಿ ಉಪದೇಶಮಾಡಿದುದು | .... | 3579 |
| ೨೩೪ | ಪತಿಯನ್ನು ಅನುಕೂಲನನ್ನಾಗಿ ಮಾಡಿಕೊಳ್ಳುವ ಉಪಾಯ : ಅನನ್ಯಭಾವದಿಂದ ಪತಿಯ ಸೇವೆಮಾಡುವುದು | .... | 3594 |
| ೨೩೫ | ಸತ್ಯಭಾಮೆಯು ದ್ರೌಪದಿಯನ್ನು ಸಮಾಧಾನಪಡಿಸಿ ಕೃಷ್ಣನೊಡನೆ ದ್ವಾರಕೆಗೆ ಪ್ರಯಾಣಮಾಡಿದುದು | .... | 3599 |
| ಘೋಷಯಾತ್ರಾಪರ್ವ | | | |
| ೨೩೬ | ಬ್ರಾಹ್ಮಣನ ಮೂಲಕ ಪಾಂಡವರ ಸಮಾಚಾರವನ್ನು ಕೇಳಿದ ಧೃತರಾಷ್ಟ್ರನು ಚಿಂತಿಸಿದುದು | .... | 3603 |
| ೨೩೭ | ಶಕುನಿ ಮತ್ತು ಕರ್ಣರು ದುರ್ಯೋಧನನನ್ನು ಪ್ರಶಂಸೆಮಾಡಿದುದು ಮತ್ತು ಅವನನ್ನು ಪಾಂಡವರ ಬಳಿಗೆ ಹೋಗುವಂತೆ ಪ್ರೇರಿಸಿದುದು | .... | 3613 |
| ೨೩೮ | ಕರ್ಣ-ಶಕುನಿಗಳೊಡನೆ ದುರ್ಯೋಧನನ ಮಂತ್ರಾಲೋಚನೆ : ಘೋಷಯಾತ್ರಾನಿಮಿತ್ತದಿಂದ ದ್ವೈತವನಕ್ಕೆ ಹೋಗಲು ಕರ್ಣಾದಿಗಳು ಧೃತರಾಷ್ಟ್ರನಿಂದ ಅನುಮತಿಯನ್ನು ಪಡೆದುಕೊಳ್ಳಲು ನಿಶ್ಚಯಿಸಿದುದು | .... | 3618 |
| ೨೩೯ | ಕರ್ಣಾದಿಗಳು ಧೃತರಾಷ್ಟ್ರನ ಮುಂದೆ ಘೋಷಯಾತ್ರೆಗಾಗಿ ದ್ವೈತವನಕ್ಕೆ ಹೋಗುವ ಪ್ರಸ್ತಾಪಮಾಡಿದುದು : ರಾಜನ ಅಸಮ್ಮತಿ : ಶಕುನಿಯು ಸಮಾಧಾನಹೇಳಿದುದು : ರಾಜನು ಸಮ್ಮತಿಸಿದುದು : ದುರ್ಯೋಧನನ ಪ್ರಸ್ಥಾನ | .... | 3622 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೪೦ | ಸೇನೆಯೊಡನೆ ದುರ್ಯೋಧನನು ದ್ವೈತವನಕ್ಕೆ ಹೋಗಿ ಹಸುಗಳನ್ನು ಪರೀಕ್ಷಿಸಿದುದು : ಸೈನಿಕರಿಗೂ ಗಂಧರ್ವರಿಗೂ ವಾಗ್ವಾದ | .... | 3627 |
| ೨೪೧ | ಕೌರವ-ಗಂಧರ್ವರ ಯುದ್ಧ : ಕರ್ಣನ ಪರಾಜಯ | .... | 3631 |
| ೨೪೨ | ಗಂಧರ್ವರಿಂದ ದುರ್ಯೋಧನಾದಿಗಳ ಪರಾಜಯ : ಗಂಧರ್ವರು ದುರ್ಯೋಧನನನ್ನೂ ಮತ್ತು ಅವನ ಪರಿವಾರವನ್ನೂ ಸೆರೆಹಿಡಿದುದು | .... | 3635 |
| ೨೪೩ | ಯುಧಿಷ್ಠಿರನು ಭೀಮಸೇನನಿಗೆ ಕೌರವರನ್ನು ಗಂಧರ್ವರಿಂದ ಬಿಡಿಸಿಕೊಂಡು ಬರುವಂತೆ ಹೇಳಿದುದು : ಕೌರವರನ್ನು ಬಿಡಿಸಿಕೊಂಡು ಬರಲು ಅರ್ಜುನನ ಪ್ರತಿಜ್ಞೆ | .... | 3640 |
| ೨೪೪ | ಗಂಧರ್ವರೊಡನೆ ಪಾಂಡವರ ಯುದ್ಧ | .... | 3644 |
| ೨೪೫ | ಪಾಂಡವರಿಂದ ಗಂಧರ್ವರು ಪರಾಜಿತರಾದುದು | .... | 3647 |
| ೨೪೬ | ಚಿತ್ರಸೇನನೊಡನೆ ಅರ್ಜುನ-ಯುಧಿಷ್ಠಿರರ ಸಂವಾದ | .... | 3651 |
| ೨೪೭ | ದುರ್ಯೋಧನನು ಸೇನೆಯೊಡನೆ ಮಾರ್ಗಮಧ್ಯದಲ್ಲಿಯೇ ಬಿಡಾರಮಾಡಿದುದು : ಕರ್ಣನು ದುರ್ಯೋಧನನನ್ನು ಅಭಿನಂದಿಸಿದುದು | .... | 3656 |
| ೨೪೮ | ದುರ್ಯೋಧನನು ಯುದ್ಧದಲ್ಲಿ ತನಗಾದ ಪರಾಜಯವನ್ನು ಕರ್ಣನಿಗೆ ವರ್ಣಿಸಿ ಹೇಳಿದುದು | .... | 3660 |
| ೨೪೯ | ದುರ್ಯೋಧನನು ಆಮರಣಾಂತ ಉಪವಾಸಮಾಡಲು ನಿಶ್ಚಯಿಸಿ ದುಃಶಾಸನನಿಗೆ ಪಟ್ಟಗಟ್ಟಲು ಹೇಳಿದುದು : ದುರ್ಯೋಧನನಿಗೆ ಕರ್ಣನು ಸಮಾಧಾನ ಹೇಳಿದುದು | .... | 3662 |
| ೨೫೦ | ಕರ್ಣನು ಸಮಾಧಾನಪಡಿಸಿದರೂ ಸಹ ದುರ್ಯೋಧನನು ಆಮರಣಾಂತವಾಗಿ ಉಪವಾಸವನ್ನು ಪ್ರಾರಂಭಿಸಿದುದು | .... | 3669 |
| ೨೫೧ | ಶಕುನಿಯ ಸಾಂತ್ವವಚನಗಳನ್ನೂ ತಿರಸ್ಕರಿಸಿದ ದುರ್ಯೋಧನನನ್ನು ದೈತ್ಯರು ರಸಾತಲಕ್ಕೆ ಕರೆದುಕೊಂಡು ಹೋದುದು | .... | 3671 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೫೨ | ದಾನವರು ದುರ್ಯೋಧನನನ್ನು ಸಮಾಧಾನಪಡಿಸಿದುದು : ಕರ್ಣನ ಅನುರೋಧದಿಂದಾಗಿ ದುರ್ಯೋಧನನು ಪ್ರಾಯೋಪವೇಶವ್ರತವನ್ನು ನಿಲ್ಲಿಸಿ ಹಸ್ತಿನಾಪುರಕ್ಕೆ ಪ್ರಯಾಣಮಾಡಿದುದು | .... | 3678 |
| ೨೫೩ | ಭೀಷ್ಮನು ಕರ್ಣನನ್ನು ನಿಂದಿಸಿದುದು : ಪಾಂಡವರೊಡನೆ ಸಂಧಿಮಾಡಿಕೊಳ್ಳಲು ಭೀಷ್ಮನು ಸಲಹೆ ನೀಡಿದುದು : ಕರ್ಣನು ಗಡುಸಿನ ಮಾತನಾಡಿ ದಿಗ್ವಿಜಯಕ್ಕೆ ಹೊರಟುದು | .... | 3686 |
| ೨೫೪ | ಕರ್ಣನು ಅಖಂಡಭೂಮಂಡಲವನ್ನೂ ದುರ್ಯೋಧನನಿಗಾಗಿ ಜಯಿಸಿ ಕೊಟ್ಟುದು | .... | 3690 |
| ೨೫೫ | ಕರ್ಣನ ಮತ್ತು ಪುರೋಹಿತರ ಸಲಹೆಯಂತೆ ದುರ್ಯೋಧನನು ವೈಷ್ಣವಯಾಗವನ್ನು ಉಪಕ್ರಮಿಸಿದುದು | .... | 3695 |
| ೨೫೬ | ವೈಷ್ಣವಯಾಗದ ಆರಂಭ ಮತ್ತು ಪರಿಸಮಾಪ್ತಿ | .... | 3698 |
| ೨೫೭ | ದುರ್ಯೋಧನನು ಮಾಡಿದ ಯಜ್ಞದ ವಿಷಯದಲ್ಲಿ ಜನಾಭಿಪ್ರಾಯ : ಕರ್ಣನು ಅರ್ಜುನನನ್ನು ವಧಿಸಲು ಪ್ರತಿಜ್ಞೆಮಾಡಿದುದು : ಯುಧಿಷ್ಠಿರನ ಚಿಂತೆ : ದುರ್ಯೋಧನನ ರಾಜ್ಯಭಾರದ ವರ್ಣನೆ | .... | 3703 |
| ಮೃಗಸ್ವಪ್ನೋದ್ಭವಪರ್ವ | | | |
| ೨೫೮ | ಪಾಂಡವರು ಕಾಮ್ಯಕವನಕ್ಕೆ ಪ್ರಯಾಣಮಾಡಿದುದು | .... | 3708 |
| ವ್ರೀಹಿದ್ರೌಣಿಕಪರ್ವ | | | |
| ೨೫೯ | ಯುಧಿಷ್ಠಿರನ ಚಿಂತೆ : ವ್ಯಾಸರು ಪಾಂಡವರ ಸಮೀಪಕ್ಕೆ ಬಂದುದು : ದಾನದ ಮಹತ್ವಪ್ರತಿಪಾದನೆ | .... | 3710 |
| ೨೬೦ | ದುರ್ವಾಸಮಹರ್ಷಿಯು ಮುದ್ಗಲನ ದಾನಧರ್ಮದ ಸತ್ತ್ವವನ್ನು ಪರೀಕ್ಷಿಸಿದುದು : ಮುದ್ಗಲನು ದೇವದೂತನನ್ನು ಪ್ರಶ್ನಿಸಿದುದು | .... | 3719 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೬೧ | ದೇವದೂತನಿಂದ ಸ್ವರ್ಗಲೋಕದಲ್ಲಿನ ಗುಣ-ದೋಷಗಳನ್ನೂ ಮತ್ತು ದೋಷರಹಿತವಾದ ವಿಷ್ಣುಧಾಮದ ವಿವರಣೆಯನ್ನೂ ಕೇಳಿ ಮುದ್ಗಲನು ದೇವದೂತನನ್ನು ಹಿಂದಕ್ಕೆ ಕಳುಹಿಸಿದುದು : ವ್ಯಾಸರು ಯುಧಿಷ್ಠಿರನನ್ನು ಸಮಾಧಾನಪಡಿಸಿ ತಮ್ಮ ಆಶ್ರಮಕ್ಕೆ ಹಿಂದಿರುಗಿದುದು | .... | 3725 |
| ದ್ರೌಪದೀಹರಣಪರ್ವ | | | |
| ೨೬೨ | ತನ್ನ ಸತ್ಕಾರದಿಂದ ಸಂತುಷ್ಟರಾದ ದುರ್ವಾಸರನ್ನು ಶಿಷ್ಯರೊಡನೆ ಯುಧಿಷ್ಠಿರನ ಆಶ್ರಮಕ್ಕೆ ಹೋಗಬೇಕೆಂದು ದುರ್ಯೋಧನನು ಕೇಳಿಕೊಂಡುದು | .... | 3737 |
| ೨೬೩ | ದುರ್ವಾಸರು ಅಸಮಯದಲ್ಲಿ ಯುಧಿಷ್ಠಿರನಿದ್ದ ಆಶ್ರಮಕ್ಕೆ ಶಿಷ್ಯರೊಡನೆ ತೆರಳಿದುದು : ದ್ರೌಪದಿಯ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಕೃಷ್ಣನ ಆವಿರ್ಭಾವ : ಶ್ರೀಕೃಷ್ಣನು ದುರ್ವಾಸರ ಭಯದಿಂದ ಪಾಂಡವರನ್ನು ವಿಮುಕ್ತಿಗೊಳಿಸಿದುದು : ಪಾಂಡವರನ್ನು ಆಶ್ವಸಿಸಿ ದ್ವಾರವತಿಗೆ ಶ್ರೀಕೃಷ್ಣನು ಪ್ರಯಾಣಮಾಡಿದುದು | .... | 3742 |
| ೨೬೪ | ಜಯದ್ರಥನು ದ್ರೌಪದಿಯನ್ನು ನೋಡಿ ವಿಮೋಹಿತನಾದುದು : ಕೋಟಿಕಾಸ್ಯನನ್ನು ದ್ರೌಪದಿಯ ಬಳಿಗೆ ಕಳುಹಿಸಿದುದು | .... | 3753 |
| ೨೬೫ | ಕೋಟಿಕಾಸ್ಯನು ದ್ರೌಪದಿಗೆ ಜಯದ್ರಥನ ಪರಿಚಯವನ್ನು ಮಾಡಿಕೊಟ್ಟುದು | .... | 3755 |
| ೨೬೬ | ದ್ರೌಪದಿಯು ಕೋಟಿಕಾಸ್ಯನಿಗೆ ತನ್ನ ಮತ್ತು ಪಾಂಡವರ ಪರಿಚಯಮಾಡಿಕೊಟ್ಟುದು | .... | 3758 |
| ೨೬೭ | ಜಯದ್ರಥ-ದ್ರೌಪದಿಯರ ಸಂವಾದ | .... | 3759 |
| ೨೬೮ | ಜಯದ್ರಥನು ದ್ರೌಪದಿಯನ್ನು ಅಪಹರಿಸಿಕೊಂಡು ಹೋದುದು | .... | 3763 |

ಅಧ್ಯಾಯ ವಿಷಯಗಳು ಪುಟಸಂಖ್ಯೆ

೨೬೯ ಪಾಂಡವರು ಆಶ್ರಮಕ್ಕೆ ಹಿಂದಿರುಗಿದುದು : ದ್ರೌಪದಿಯ
ನ್ನಪಹರಿಸಿದ ಜಯದ್ರಥನನ್ನು ಬೆನ್ನಟ್ಟಿ ಹೋದುದು .... 3769

೨೭೦ ದ್ರೌಪದಿಯು ಜಯದ್ರಥನ ಮುಂದೆ ಪಾಂಡವರ
ಪರಾಕ್ರಮವನ್ನು ವರ್ಣನೆಮಾಡಿದುದು .... 3775

೨೭೧ ಪಾಂಡವರು ಜಯದ್ರಥನ ಸೈನ್ಯವನ್ನು ಧ್ವಂಸಗೊಳಿಸಿದುದು :
ಜಯದ್ರಥನ ಪಲಾಯನ : ಯುಧಿಷ್ಠಿರನು ನಕುಲ-
ಸಹದೇವ-ದ್ರೌಪದಿಯರೊಡನೆ ಆಶ್ರಮಕ್ಕೆ ಹಿಂದಿರುಗಿದುದು :
ಭೀಮಾರ್ಜುನರು ಜಯದ್ರಥನನ್ನು ಬೆನ್ನಟ್ಟಿ ಹೋದುದು... 3782

ಜಯದ್ರಥವಿಮೋಕ್ಷಣಪರ್ವ

೨೭೨ ಭೀಮನು ಜಯದ್ರಥನನ್ನು ಬಂಧಿಸಿ ಧರ್ಮಜನ ಮುಂದೆ
ಹಾಕಿದುದು : ಯುಧಿಷ್ಠಿರನ ಆಜ್ಞೆಯಂತೆ ಜಯದ್ರಥನ
ಬಂಧವಿಮೋಚನೆ : ಜಯದ್ರಥನು ಭಗವಾನ್ ಶಂಕರನಿಂದ
ವರಪಡೆದುದು : ಶಂಕರನು ಜಯದ್ರಥನಿಗೆ ಶ್ರೀಕೃಷ್ಣನ
ಮಹಿಮೆಯನ್ನು ವರ್ಣಿಸಿದುದು .... 3790

ರಾಮೋಪಾಖ್ಯಾನಪರ್ವ

೨೭೩ ಯುಧಿಷ್ಠಿರನು ತನ್ನ ದುರವಸ್ಥೆಯನ್ನು ಮಾರ್ಕಂಡೇಯರಿಗೆ
ವಿವರಿಸಿ ಹೇಳಿದುದು .... 3802

೨೭೪ ಶ್ರೀರಾಮನೇ ಮೊದಲಾದವರ ಜನ್ಮವೃತ್ತಾಂತ :
ಕುಬೇರನ ಜನ್ಮ ಮತ್ತು ಐಶ್ವರ್ಯಪ್ರಾಪ್ತಿ .... 3804

೨೭೫ ರಾವಣ-ಕುಂಭಕರ್ಣ-ವಿಭೀಷಣ-ಖರ ಮತ್ತು
ಶೂರ್ಪಣಖೆಯರ ಜನನ : ಅವರು ತಪಸ್ಸುಮಾಡಿ
ವರಪಡೆದುದು : ಕುಬೇರನು ರಾವಣನಿಗೆ ಶಾಪಕೊಟ್ಟುದು....3807

೨೭೬ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ರಾವಣನ
ಅತ್ಯಾಚಾರದಿಂದ ಪಾರುಮಾಡಲು ಪ್ರಾರ್ಥಿಸಿದುದು :
ಬ್ರಹ್ಮನ ಆಜ್ಞೆಯಂತೆ ದೇವತೆಗಳು ಕಪಿಗಳಲ್ಲಿಯೂ,

ಅಧ್ಯಾಯ ವಿಷಯಗಳು ಪುಟಸಂಖ್ಯೆ

ಕರಡಿಗಳಲ್ಲಿಯೂ ತಮ್ಮ ತಮ್ಮ ಅಂಶಗಳಿಂದ ಸಂತಾನ
ಗಳನ್ನು ಪಡೆದುದು .... 3814

೨೭೭ ಶ್ರೀರಾಮನ ಪಟ್ಟಾಭಿಷೇಕದ ಸಿದ್ಧತೆ : ಕೈಕೇಯಿಯ
ಪ್ರಾರ್ಥನೆಯಂತೆ ರಾಮನು ಅರಣ್ಯವಾಸಕ್ಕೆ ತೆರಳಿದುದು :
ಭರತನ ಚಿತ್ರಕೂಟಯಾತ್ರೆ : ರಾಮನು ಖರ-ದೂಷಣಾದಿ
ರಾಕ್ಷಸರನ್ನು ಸಂಹರಿಸಿದುದು : ರಾವಣನು ಮಾರೀಚನ
ಸಮೀಪಕ್ಕೆ ಹೋದುದು .... 3817

೨೭೮ ಮೃಗರೂಪಿಯಾದ ಮಾರೀಚನ ವಧೆ : ರಾವಣನಿಂದ
ಸೀತಾಪಹರಣ .... 3826

೨೭೯ ರಾವಣನು ಜಟಾಯುವಿನ ವಧೆಮಾಡಿದುದು :
ಶ್ರೀರಾಮನು ಜಟಾಯುವಿಗೆ ಅಂತ್ಯಸಂಸ್ಕಾರಮಾಡಿದುದು :
ಕಬಂಧವಧೆ : ಅನಂತರದಲ್ಲಿ ದಿವ್ಯಸ್ವರೂಪವನ್ನು ತಾಳಿದ
ಅವನೊಡನೆ ರಾಮನ ಸಂಭಾಷಣೆ .... 3834

೨೮೦ ರಾಮ-ಸುಗ್ರೀವರ ಮೈತ್ರಿ : ವಾಲಿ-ಸುಗ್ರೀವರ
ಯುದ್ಧ : ಶ್ರೀರಾಮನಿಂದ ವಾಲಿಯ ವಧೆ : ಲಂಕೆಯ
ಅಶೋಕವನದಲ್ಲಿ ರಾಕ್ಷಸಿಯರ ಭರ್ತ್ಸನೆಯಿಂದ ಭಯಗೊಂಡ
ಸೀತೆಯನ್ನು ತ್ರಿಜಟೆಯು ಸಮಾಧಾನಪಡಿಸಿದುದು .... 3841

೨೮೧ ರಾವಣ-ಸೀತೆಯರ ಸಂವಾದ .... 3854

೨೮೨ ಸುಗ್ರೀವನ ಮೇಲೆ ರಾಮನ ಕೋಪ : ಸೀತಾನ್ವೇಷಣ
ಕ್ಕಾಗಿ ಸುಗ್ರೀವನು ವಾನರಸೈನ್ಯವನ್ನು ಕಳುಹಿಸಿಕೊಟ್ಟುದು :
ಹನುಮಂತನು ಲಂಕೆಯಿಂದ ಹಿಂದಿರುಗಿ ಸೀತಾದೇವಿಯ
ವೃತ್ತಾಂತವನ್ನು ಹೇಳಿದುದು .... 3858

೨೮೩ ವಾನರಸೈನ್ಯಗಳ ಸಂಘಟನೆ : ಸೇತುನಿರ್ಮಾಣ :
ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿಷೇಕ :
ಲಂಕಾಪಟ್ಟಣದ ಎಲ್ಲೆಗೆ ಸೈನ್ಯಪ್ರವೇಶ :
ಅಂಗದನ ದೌತ್ಯ .... 3870

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೮೪ | ಅಂಗದನು ರಾವಣನ ಸಮೀಪಕ್ಕೆ ಹೋಗಿ ಅವನಿಗೆ ರಾಮನ ಸಂದೇಶವನ್ನು ತಿಳಿಸಿದುದು : ವಾನರ-ರಾಕ್ಷಸರ ಘೋರಸಂಗ್ರಾಮ | .... | 3878 |
| ೨೮೫ | ರಾಮ-ರಾವಣರ ಸೇನೆಗಳ ದ್ವಂದ್ವಯುದ್ಧ | .... | 3884 |
| ೨೮೬ | ಪ್ರಹಸ್ತ ಮತ್ತು ಧೂಮ್ರಾಕ್ಷರ ವಧೆಯಿಂದ ದುಃಖಿತನಾದ ರಾವಣನು ಕುಂಭಕರ್ಣನನ್ನು ಎಬ್ಬಿಸಿ ಯುದ್ಧಕ್ಕೆ ಕಳುಹಿಸಿದುದು | .... | 3886 |
| ೨೮೭ | ಕುಂಭಕರ್ಣ, ವಜ್ರವೇಗ ಮತ್ತು ಪ್ರಮಾಥಿಗಳ ವಧೆ | .... | 3889 |
| ೨೮೮ | ಇಂದ್ರಜಿತುವಿನ ಮಾಯಾಯುದ್ಧ : ಶ್ರೀರಾಮ-ಲಕ್ಷ್ಮಣರ ಮೂರ್ಛೆ | .... | 3893 |
| ೨೮೯ | ರಾಮ-ಲಕ್ಷ್ಮಣರು ಮೂರ್ಛೆಯಿಂದ ಎಚ್ಚರಗೊಂಡುದು : ಕುಬೇರನು ಕಳುಹಿಸಿದ ಶುಭಜಲವನ್ನು ವಾನರರೊಡನೆ ಕಣ್ಣುಗಳಿಗೆ ಹಚ್ಚಿಕೊಂಡುದು : ಲಕ್ಷ್ಮಣನಿಂದ ಇಂದ್ರಜಿತುವಿನ ಸಂಹಾರ : ಸೀತೆಯನ್ನು ಸಂಹರಿಸಲು ಹೊರಟಿದ್ದ ರಾವಣನನ್ನು ಅವಿಂಧ್ಯನು ಹಿತವಚನಗಳಿಂದ ತಡೆದುದು | ... | 3896 |
| ೨೯೦ | ರಾಮ-ರಾವಣರ ಯುದ್ಧ ಮತ್ತು ರಾವಣನ ವಧೆ | .... | 3902 |
| ೨೯೧ | ಶ್ರೀರಾಮನು ಸೀತೆಯ ವಿಷಯದಲ್ಲಿ ಸಂದೇಹಿಸಿದುದು : ದೇವತೆಗಳು ಸೀತೆಯ ಪಾವಿತ್ರ್ಯವನ್ನು ಸಮರ್ಥಿಸಿದುದು : ಶ್ರೀರಾಮನು ಸೈನ್ಯಸಮೇತನಾಗಿ ಕಿಷ್ಕಿಂಧೆಯ ಮೂಲಕ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದುದು | .... | 3907 |
| ೨೯೨ | ಮಾರ್ಕಂಡೇಯರು ಯುಧಿಷ್ಠಿರನನ್ನು ಸಮಾಧಾನಪಡಿಸಿದುದು | .... | 3920 |
| | ಪತಿವ್ರತಾಮಾಹಾತ್ಮ್ಯಪರ್ವ | | |
| ೨೯೩ | ಅಶ್ವಪತಿರಾಜನು ಸಾವಿತ್ರೀದೇವಿಯ ಅನುಗ್ರಹದಿಂದ | | |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| | ಸಾವಿತ್ರೀ ಎಂಬ ಕನ್ಯಾರತ್ನವನ್ನು ಪಡೆದುದು : ಅನುರೂಪನಾದ ಪತಿಯನ್ನಾರಿಸಲು ಸಾವಿತ್ರಿಯು ವಿವಿಧದೇಶಗಳಿಗೆ ಪ್ರಯಾಣಮಾಡಿದುದು | .... | 3922 |
| ೨೯೪ | ಸತ್ಯವಂತನನ್ನು ವಿವಾಹಮಾಡಿಕೊಳ್ಳಲು ಸಾವಿತ್ರಿಯು ನಿಶ್ಚಯಿಸಿದುದು | .... | 3929 |
| ೨೯೫ | ಸತ್ಯವಾನ್ ಮತ್ತು ಸಾವಿತ್ರಿಯರ ವಿವಾಹ : ಸಾವಿತ್ರಿಯು ತನ್ನ ಶುಶ್ರೂಷೆಯಿಂದ ಸಕಲರನ್ನೂ ಸಂತೋಷಗೊಳಿಸಿದುದು | .... | 3936 |
| ೨೯೬ | ಸಾವಿತ್ರಿಯ ವ್ರತಚರ್ಯೆ : ಅತ್ತೆ-ಮಾವಂದಿರ ಅನುಮತಿಯನ್ನು ಪಡೆದು ಸಾವಿತ್ರಿಯು ಪತಿಯೊಡನೆ ಕಾಡಿಗೆ ಹೊರಟುದು | .... | 3941 |
| ೨೯೭ | ಸಾವಿತ್ರೀ-ಯಮಧರ್ಮರ ಸಂವಾದ : ಸಾವಿತ್ರಿಯ ಮಾತಿನಿಂದ ತುಷ್ಟನಾದ ಯಮನು ಸಾವಿತ್ರಿಗೆ ಅನೇಕ ವರಗಳನ್ನು ಕೊಟ್ಟುದು : ಮೃತನಾದ ಸತ್ಯವಾನನನ್ನೂ ಬದುಕಿಸಿಕೊಟ್ಟುದು : ಸಂತೋಷಗೊಂಡ ಸಾವಿತ್ರಿಯು ಸತ್ಯವಾನನೊಡನೆ ಆಶ್ರಮಕ್ಕೆ ಹಿಂದಿರುಗಿದುದು | .... | 3948 |
| ೨೯೮ | ಪತ್ನೀಸಹಿತನಾದ ದ್ಯುಮತ್ಸೇನನು ಸತ್ಯವಾನನು ಬಾರದೇ ಇದ್ದುದಕ್ಕಾಗಿ ಚಿಂತಿಸಿದುದು : ಋಷಿಗಳು ದ್ಯುಮತ್ಸೇನನನ್ನು ಆಶ್ವಸಿಸಿದುದು : ಸಾವಿತ್ರೀ-ಸತ್ಯವಾನರು ಆಶ್ರಮಕ್ಕೆ ಬಂದುದು : ಸಾವಿತ್ರಿಯು ಸಾವಕಾಶವಾದುದಕ್ಕೆ ಕಾರಣಗಳನ್ನು ವಿವರಿಸಿ ಹೇಳಿದುದು | .... | 3972 |
| ೨೯೯ | ಶಾಲ್ವದೇಶದ ಪ್ರಜೆಗಳು ದ್ಯುಮತ್ಸೇನನ ಸಮೀಪಕ್ಕೆ ಬಂದು ಪುನಃ ರಾಜ್ಯಾಡಳಿತವನ್ನು ವಹಿಸಿಕೊಳ್ಳುವಂತೆ ಪ್ರಾರ್ಥಿಸಿದುದು : ಸಾವಿತ್ರಿಗೆ ನೂರು ಮಕ್ಕಳೂ-ನೂರು ಮಂದಿ ತಮ್ಮಂದಿರೂ ಹುಟ್ಟಿದುದು | .... | 3980 |



ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಶ್ರೀಮದ್ರಾಮಚಂದ್ರಾಪುರಮಠಸ್ಥ

**ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ**

**ಶ್ರೀಯುತ ಸುಬ್ರಹ್ಮಣ್ಯ ಕೌಶಿಕರು, ಭಾರತ ದರ್ಶನ ಪ್ರಕಾಶನ**
**ಬೆಂಗಳೂರು - 560 028 ಇವರಿಗೆ**

**॥ ಶ್ರೀಮನ್ನಾರಾಯಣಸ್ಮರಣಪುರಸ್ಸರಂ**
**ಸಂದಿಷ್ಟೋಽಯಂ ಸಂದೇಶಃ ॥**

ಅದಾಗಿ :– ಸರಳ, ಮಧುರ ಕನ್ನಡಭಾಷೆಯಲ್ಲಿ ಶ್ರೀಮನ್ಮಹಾಭಾರತ ಪ್ರತಿಶ್ಲೋಕಾರ್ಥ ಒಳಗೊಂಡಿರುವಂತೆ ಪರಿವರ್ತಿಸುತ್ತಿರುವುದು ಶ್ಲಾಘನೀಯ ಹಾಗೂ ಅವಶ್ಯ ಎಂಬುದು ಸರ್ವವಿದಿತ.

ಪ್ರಕೃತ, ಹಂತ-ಹಂತವಾಗಿ ಪ್ರಕಟಗೊಳಿಸುತ್ತಿರುವ ನಿಮ್ಮೀ ಸತ್ಪ್ರಯತ್ನದಿಂದ ಏಳನೇ ಸಂಪುಟವು ಸದ್ಯವೇ ಪ್ರಕಾಶನಗೊಳ್ಳಲಿರುವುದಾಗಿ ತಿಳಿದು ಬಹಳ ಸಂತಸವಾಯಿತು.

ಕರ್ತವ್ಯವನ್ನು ಕಡೆಗಣಿಸಿ ಕೇವಲ ಹಕ್ಕಿಗಾಗಿ ಹೆಣಗುವ ಲೌಕಿಕ ವಾದವೇ ಸಾಧುವೆಂದು ನಂಬಿ ಅಲೌಕಿಕವಾದವನ್ನು ಮರೆಯಲು ಮುಂದು ವರಿಯುತ್ತಿರುವ ಸಾಮಾನ್ಯಜನತೆಗೆ–ಈ ಭಾರತ ದರ್ಶನದ ದಿವ್ಯಾಂಜನವು, ಎಲ್ಲರ ಕಣ್ಣುತೆರೆಯಿಸಿ ಕರ್ತವ್ಯಪರರನ್ನಾಗಿಸಿ, ಕನ್ನಡ ಜನತೆ ಇದರ ಪ್ರಯೋ ಜನ ಪಡೆಯುವಂತಾಗಿ, ಭಗವಾನ್ ವೇದವ್ಯಾಸರ ಆಶಯವನ್ನು ಸಾರ್ಥಕ ಗೊಳಿಸುವಲ್ಲಿ ಯಶಸ್ವಿಯಾಗಲೆಂದು ಹಾರೈಸುತ್ತೇವೆ.

---

ಇತಿ ಶ್ರೀಮನ್ನಾರಾಯಣಸ್ಮೃತಯಃ

ಮಿತಿ :– ಶ್ರೀಮದ್ರಾಕ್ಷಸಸಂವತ್ಸರ ಜ್ಯೇಷ್ಠ ಬಹುಳ ಸಪ್ತಮೀ ಚಂದ್ರವಾಸರೇ
(ತಾ॥ ೩೦-೬-೧೯೭೫)

ವಸತಿಃ :– ಸಾಗರ ಟೌನ್ (ಸೊರಬ ಗೇಟ್ ಹತ್ತಿರ)
ಕೆ.ಜಿ. ವೆಂಕಟ್ರಾವ್ ಗೃಹೇ.

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀ ಸದ್ಗುರವೇ ನಮಃ

# ಮಹಾಭಾರತ-ವನಪರ್ವ-ಏಳನೆಯ ಸಂಪುಟ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

೨೦೯ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಧರ್ಮಸೂಕ್ಷ್ಮಗಳು : ಶುಭಾಶುಭಕರ್ಮಗಳು ಮತ್ತು ಅವುಗಳ ಫಲ : ಬ್ರಹ್ಮಪ್ರಾಪ್ತಿಗೆ ಉಪಾಯಗಳು ಮತ್ತು ಅವುಗಳ ಕಥನ

ಮಾರ್ಕಂಡೇಯರು ಯುಧಿಷ್ಠಿರನಿಗೆ ಹೇಳುತ್ತಾರೆ :

"ಸಮಸ್ತ ಧಾರ್ಮಿಕರಲ್ಲಿಯೂ ಶ್ರೇಷ್ಠನಾದ ಯುಧಿಷ್ಠಿರನೇ! ಧರ್ಮವ್ಯಾಧನು ಪುನಃ ವಿಪ್ರಶ್ರೇಷ್ಠನನ್ನು ಕುರಿತು ಯುಕ್ತಿಯುಕ್ತವಾದ ಧಾರ್ಮಿಕವಾದ ಈ ಮಾತುಗಳನ್ನು ಹೇಳಿದನು :

**ಶ್ರುತಿಪ್ರಮಾಣೋ ಧರ್ಮೋಽಯಮಿತಿ ವೃದ್ಧಾನುಶಾಸನಮ್ ।**
**ಸೂಕ್ಷ್ಮಾ ಗತಿರ್ಹಿ ಧರ್ಮಸ್ಯ ಬಹುಶಾಖಾ ಹ್ಯನನ್ತಿಕಾ ॥೨॥**

ಬ್ರಾಹ್ಮಣೋತ್ತಮ! ಈ ಧರ್ಮವೆಂಬುದು ವೇದಪ್ರಮಾಣವಾದುದು ಮತ್ತು ವೇದವಿಹಿತವಾದುದೆಂದು ವೃದ್ಧರಾದವರು ನಿರ್ದಿಷ್ಟಮಾಡಿರುತ್ತಾರೆ. ಆದರೆ ಈ ಧರ್ಮದ ಮಾರ್ಗವು ಬಹುಸೂಕ್ಷ್ಮವಾದುದು. ಈ ಧರ್ಮಗತಿಯು ಬಹುಸಂಖ್ಯಾಕವಾದ ಶಾಖೆಗಳಿಂದ ಕೂಡಿದ್ದಾಗಿರುವುದು. ಅನಂತವಾದುದು.

ಮೊದಲನೆಯದಾಗಿ "ಸತ್ಯಂ ವದ" ಎಂದು ಉಪನಿಷತ್ತಿನ ಶಾಸನವಿದೆ. ಮಾನವನು ಸತ್ಯನಿಷ್ಠನಾಗಿರಬೇಕು. ಆದರೆ :

**ಪ್ರಾಣಾನ್ತಿಕೇ ವಿವಾಹೇ ಚ ವಕ್ತವ್ಯಮನೃತಂ ಭವೇತ್ ।**
**ಅನೃತೇನ ಭವೇತ್ಸತ್ಯಂ ಸತ್ಯೇನೈವಾನೃತಂ ಭವೇತ್ ॥೩॥**

**ಯದ್ಭೂತಹಿತಮತ್ಯನ್ತಂ ತತ್ಸತ್ಯಮಿತಿ ಧಾರಣಾ ।**
**ವಿಪರ್ಯಯಕೃತೋಽಧರ್ಮಃ ಪಶ್ಯ ಧರ್ಮಸ್ಯ ಸೂಕ್ಷ್ಮತಾಮ್ ॥೪॥**

ಪ್ರಾಣಾಪಾಯದ ಸನ್ನಿವೇಶದಲ್ಲಿ ಮತ್ತು ವಿವಾಹವು ನಡೆಯಬೇಕಾದ ಸಮಯದಲ್ಲಿ ಸುಳ್ಳುಹೇಳಬೇಕಾಗಬಹುದು. ಅಂತಹ ಸಮಯಗಳಲ್ಲಿ ಸುಳ್ಳು ಹೇಳಿದರೂ ಸತ್ಯವನ್ನು ಹೇಳಿದಂತೆಯೇ ಸರಿ. ಅಂತಹ ಸಮಯಗಳಲ್ಲಾಡಿದ ಅನೃತವೂ ಸಹ ಸತ್ಯನಿಷ್ಠೆಯ ಪ್ರಯೋಜನವನ್ನೇ ಉಂಟುಮಾಡುತ್ತದೆ. ಆದರೆ ಪ್ರಾಣಾಪಾಯಸನ್ನಿವೇಶದಲ್ಲಿ ಮತ್ತು ವಿವಾಹಸನ್ನಿವೇಶದಲ್ಲಿ ನಿಜ ಹೇಳಲು ಹೋಗಿ ಅದರಿಂದ ಪ್ರಾಣಾಪಾಯವಾದಲ್ಲಿ ಅಥವಾ ವಿವಾಹಕ್ಕೆ ವಿಘ್ನ ವುಂಟಾದಲ್ಲಿ ಅನೃತಭಾಷಣದ ದೋಷವೇ ಉಂಟಾಗುತ್ತದೆ. ಆದುದರಿಂದ ಮಾನವನು ಯಾವಾಗಲೂ ಯಾವುದನ್ನು ಹೇಳುವುದರಿಂದ ಸರ್ವಭೂತ ಗಳಿಗೂ ವಿಶೇಷವಾದ ಹಿತವುಂಟಾಗುತ್ತದೆಯೋ ಅದನ್ನೇ ಸತ್ಯವಚನವೆಂದು ತಿಳಿಯಬೇಕು. ಬ್ರಾಹ್ಮಣೋತ್ತಮ! ಈ ರೀತಿಯಾಗಿ ಧರ್ಮವು ಬಹಳ ಸೂಕ್ಷ್ಮ ಗತಿಯುಳ್ಳದ್ದಾಗಿರುತ್ತದೆ. 'ಅನೃತಭಾಷಣ'ವೆಂಬ ಅಧರ್ಮವು ಆಪತ್ಕಾಲದಲ್ಲಿ ಧರ್ಮವಾಗಿ ಪರಿಣಮಿಸುತ್ತದೆ. ಸತ್ಯಭಾಷಣವೆಂಬ ಧರ್ಮವು ಪ್ರಾಣಿ ಮಾತ್ರಕ್ಕೆ ತೊಂದರೆಯುಂಟುಮಾಡುವುದಾದರೆ ಅದು ಅಧರ್ಮವೆನಿಸುತ್ತದೆ. ಕೆಲವು ಸಮಯಗಳಲ್ಲಿ ಧರ್ಮದಲ್ಲಿ ಇಷ್ಟು ವೈಪರೀತ್ಯವುಂಟಾಗುತ್ತದೆ.

**ಯತ್ಕರೋತ್ಯಶುಭಂ ಕರ್ಮ ಶುಭಂ ವಾ ಯದಿ ಸತ್ತಮ ।**
**ಅವಶ್ಯಂ ತತ್ಸಮಾಪ್ನೋತಿ ಪುರುಷೋ ನಾತ್ರ ಸಂಶಯಃ ॥೫॥**

**ವಿಷಮಾಂ ಚ ದಶಾಂ ಪ್ರಾಪ್ತೋ ದೇವಾನ್ಗರ್ಹತಿ ವೈ ಭೃಶಮ್ ।**
**ಆತ್ಮನಃ ಕರ್ಮದೋಷಾಣಿ ನ ವಿಜಾನಾತ್ಯಪಣ್ಡಿತಃ ॥೬॥**

ಪುರುಷನು ಶುಭಕರ್ಮವನ್ನೇ ಮಾಡಲಿ–ಅಶುಭಕರ್ಮವನ್ನೇ ಮಾಡಲಿ–ಶುಭಾಶುಭಕರ್ಮಗಳ ಅನುರೂಪವಾದ ಶುಭಾಶುಭಫಲಗಳನ್ನು ಪಡೆದೇ ಪಡೆಯುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ. ಆದರೆ ಮೂಢ ನಾದವನು ಮಾತ್ರ ಹೀಗೆ ಭಾವಿಸುವುದಿಲ್ಲ. ಸುಖವು ಪ್ರಾಪ್ತವಾದಾಗ ಸ್ವಸಾಮರ್ಥ್ಯದಿಂದ ಪ್ರಾಪ್ತವಾಯಿತೆಂದು ತನ್ನನ್ನೇ ತಾನು ಹೊಗಳಿಕೊಳ್ಳು ತ್ತಾನೆ. ಕಷ್ಟವು ಪ್ರಾಪ್ತವಾದಾಗ ಮಾತ್ರ ದೈವವನ್ನು ನಿಂದಿಸುತ್ತಾನೆ. ತನಗೆ ಪ್ರಾಪ್ತವಾದ ಸುಖ-ದುಃಖಗಳೆರಡೂ ತನ್ನ ಪೂರ್ವಾರ್ಜಿತವಾದ ಶುಭಾಶುಭ ಕರ್ಮಫಲಗಳೆಂಬ ಜ್ಞಾನವು ಅವನಿಗಿರುವುದಿಲ್ಲ.

**ಮೂಢೋ ನೈಕೃತಿಕಶ್ಚಾಪಿ ಚಪಲಶ್ಚ ದ್ವಿಜೋತ್ತಮ ।**

**ಸುಖದುಃಖವಿಪರ್ಯಾಸಾನ್ಸದಾ ಸಮುಪಪದ್ಯತೇ ।**
**ನೈನಂ ಪ್ರಜ್ಞಾ ಸುನೀತಂ ವಾ ತ್ರಾಯತೇ ನೈವ ಪೌರುಷಮ್ ॥೭॥**

ಮೂಢನಾದವನೂ, ಪುನರ್ಜನ್ಮದಲ್ಲಿ ನಂಬಿಕೆಯಿಲ್ಲದವನೂ, ಕ್ರೂರಿಯೂ ಮತ್ತು ಚಪಲಚಿತ್ತನೂ ಸುಖ-ದುಃಖಗಳ ವಿಪರ್ಯಾಸವನ್ನು ಹೊಂದುತ್ತಲೇ ಇರುತ್ತಾನೆ. ಸುಖವುಂಟಾದಾಗ ಹಿಗ್ಗಿಹೋಗುತ್ತಾನೆ. ದುಃಖವು ಪ್ರಾಪ್ತವಾದಾಗ ಅದನ್ನು ಸಹಿಸಿಕೊಳ್ಳುವ ಮನೋಬಲವಿಲ್ಲದೇ ಕುಗ್ಗಿಹೋಗುತ್ತಾನೆ. ಸುಖ-ದುಃಖಗಳು ಕರ್ಮಾಯತ್ತವೆಂಬ ನಂಬಿಕೆ ಯಿಲ್ಲದೇ ಇರುವುದೇ ಇದಕ್ಕೆ ಕಾರಣವಾಗುತ್ತದೆ. ಮನುಷ್ಯನು ತನ್ನ ಶುಭಾಶುಭಕರ್ಮಾಯತ್ತವಾದ ಫಲಗಳನ್ನು ಅನುಭವಿಸಿಯೇ ತೀರಬೇಕು. ಪ್ರಜ್ಞಾವಂತನಾಗಿರುವಿಕೆಯಿಂದಾಗಲೀ, ಒಳ್ಳೆಯ ನೀತಿಯಿಂದಾಗಲೀ, ಪೌರುಷದಿಂದಾಗಲೀ–ತಾನು ಹಿಂದೆ ಮಾಡಿದ ಅಶುಭಕರ್ಮಫಲಗಳನ್ನು ಕಳೆದುಕೊಳ್ಳುವ ಸಾಧ್ಯತೆಯಿಲ್ಲ.

**ಯೋಽಯಮಿಚ್ಛೇದ್ಯಥಾ ಕಾಮಂ ತಂ ತಂ ಕಾಮಂ ಸ ಆಪ್ನುಯಾತ್।**
**ಯದಿ ಸ್ಯಾದಪರಾಧೀನಂ ಪೌರುಷಸ್ಯ ಕ್ರಿಯಾಫಲಮ್ ॥೮॥**

ಒಂದು ವೇಳೆ ಕಾರ್ಯಸಿದ್ಧಿಯು ಪುರುಷಪ್ರಯತ್ನಾಧೀನವೇ ಹೊರತು ಶುಭಾಶುಭಕರ್ಮಗಳ ಫಲವು ಇಲ್ಲವೆಂದೇ ಹೇಳುವುದಾದರೆ ಪ್ರಪಂಚದಲ್ಲಿ ಯಾವ ಯಾವನು ಯಾವ ಯಾವ ಇಚ್ಛೆಯುಳ್ಳವನಾಗಿರುತ್ತಾನೆಯೋ, ಯಾವುದನ್ನು ಅಪೇಕ್ಷಿಸುತ್ತಾನೆಯೋ–ಆ ಅಪೇಕ್ಷೆಯು ಅವನಿಗೆ ಕೈಗೂಡಲೇ ಬೇಕಾಗಿತ್ತಲ್ಲವೇ? ಪುರುಷಪ್ರಯತ್ನದ ಫಲವು ಪರಾಧೀನವಲ್ಲದಿದ್ದರೆ ಪ್ರತಿ ಯೊಬ್ಬನೂ ತಾನು ಅಪೇಕ್ಷಿಸಿದುದನ್ನು ಹೊಂದುತ್ತಿದ್ದನು. (ಸಾವಿರಾರು ಮಂದಿ ಅತ್ಯುಚ್ಚಪರೀಕ್ಷೆಗಳಲ್ಲಿ ಉತ್ತೀರ್ಣರಾದರೂ ಒಬ್ಬೊಬ್ಬರಿಗೂ ಸಿಕ್ಕುವ ಫಲಗಳು ಪ್ರತ್ಯೇಕ-ಪ್ರತ್ಯೇಕವಾಗಿಯೇ ಇರುತ್ತವೆ. ಒಬ್ಬನಿಗೆ ದೊಡ್ಡ ಉದ್ಯೋಗ ಸಿಕ್ಕಿದರೆ ಮತ್ತೊಬ್ಬನಿಗೆ ಅನೇಕವರ್ಷಗಳವರೆಗೆ ಉದ್ಯೋಗವೇ ಸಿಕ್ಕುವುದಿಲ್ಲ. ಇದಕ್ಕೆ ಕಾರಣ ಅವರವರ ಕರ್ಮಫಲಗಳೇ ಆಗಿರುತ್ತದೆ. ಒಂದು ವೇಳೆ ಪೌರುಷದಿಂದಲೇ ಎಲ್ಲವನ್ನೂ ಪಡೆಯುವ ಸಾಧ್ಯತೆಯಿದ್ದಿದ್ದರೆ ಪ್ರಜೆಗಳೆಲ್ಲರೂ ಪೌರುಷದಿಂದಲೇ ಸರ್ವಸಮಾನವಾದ ಸುಖವನ್ನು ಪಡೆದು

ಕೊಂಡುಬಿಡುತ್ತಿದ್ದರು. ಕಾರ್ಯವು ಪೂರ್ಣವಾಗುವವರೆಗೂ ಮನುಷ್ಯನು ಪ್ರಯತ್ನಿಸಬಹುದು. ಆದರೆ ಇಂತಹುದೇ ಫಲವು ಸಿಕ್ಕಬೇಕೆಂಬುದನ್ನು ನಿರ್ಣಯಿಸಲು ಮನುಷ್ಯನು ಸ್ವತಂತ್ರನಲ್ಲ. ಇದನ್ನು ನಾವು ಸರ್ವತ್ರ ಅನುದಿನವೂ ಕಾಣುತ್ತಲೇ ಇದ್ದೇವೆ.)

**ಸಂಯತಾಶ್ಚಾಪಿ ದಕ್ಷಾಶ್ಚ ಮತಿಮನ್ತಶ್ಚ ಮಾನವಾಃ ।**
**ದೃಶ್ಯನ್ತೇ ನಿಷ್ಫಲಾಃ ಸನ್ತಃ ಪ್ರಹೀಣಾಃ ಸರ್ವಕರ್ಮಭಿಃ ॥೯॥**

ಸಂಯಮಶೀಲರಾಗಿರುತ್ತಾರೆ ; ದಕ್ಷರಾಗಿರುತ್ತಾರೆ ; ಸತತವಾಗಿ ಪ್ರಯತ್ನವನ್ನೂ ಮಾಡುತ್ತಿರುತ್ತಾರೆ ; ಬುದ್ಧಿವಂತರಾಗಿರುತ್ತಾರೆ ; ಸತ್ಪುರುಷರೂ ಆಗಿರುತ್ತಾರೆ. ಆದರೆ ಅವರು ಮಾಡುವ ಪ್ರಯತ್ನಗಳೆಲ್ಲವೂ ನಿಷ್ಫಲಗಳೇ ಆಗುತ್ತವೆ. ಅವರಿಂದ ಯಾವ ವಿಧವಾದ ಕಾರ್ಯವನ್ನು ಸಾಧಿಸಲೂ ಸಾಧ್ಯವಾಗುವುದಿಲ್ಲ. ಸಕಲವಿಧವಾದ ಕಷ್ಟಗಳಿಗೂ ಸಿಕ್ಕಿ ನರಳುತ್ತಿರುತ್ತಾರೆ. ಇದನ್ನೂ ನಾವು ನೋಡುತ್ತಿದ್ದೇವೆ.

**ಭೂತಾನಾಮಪರಃ ಕಶ್ಚಿದ್ಧಿಂಸಾಯಾಂ ಸತತೋತ್ಥಿತಃ ।**
**ವಞ್ಚನಾಯಾಂ ಚ ಲೋಕಸ್ಯ ಸ ಸುಖೀ ಜೀವತೇ ಸದಾ ॥೧೦॥**

ನಾವು ನೋಡುತ್ತಿರುವಂತೆಯೇ ಮತ್ತೆ ಕೆಲವರು ಯಾವಾಗಲೂ ಇತರರಿಗೆ ತೊಂದರೆಕೊಡುವುದರಲ್ಲಿಯೇ ನಿರತರಾಗಿರುತ್ತಾರೆ. ಹಿಂಸೆ, ವಂಚನೆ–ಇವುಗಳೇ ಅವರ ದೈನಂದಿನ ಕೃತ್ಯಗಳಾಗಿರುತ್ತವೆ. ಹೀಗಿರುವವರೂ ಸದಾ ಸುಖಿಗಳಾಗಿರುತ್ತಾರೆ.

**ಅಚೇಷ್ಟಮಪಿ ಚಾಸೀನಂ ಶ್ರೀಃ ಕಂಚಿದುಪತಿಷ್ಠತಿ ।**

ಯಾವುದೊಂದು ಕೆಲಸ ಮಾಡದಿದ್ದರೂ ಯಾವನೋ ಒಬ್ಬನಿಗೆ ಐಶ್ವರ್ಯಪ್ರಾಪ್ತಿಯಾಗುತ್ತದೆ.

**ಕಶ್ಚಿತ್ಕರ್ಮಾಣಿ ಕುರ್ವನ್ನಪಿ ನ ಪ್ರಾಪ್ಯಮಧಿಗಚ್ಛತಿ ॥೧೧॥**

ಮತ್ತೆ ಕೆಲವರು ಹಗಲಿರುಳೂ ದುಡಿದರೂ ಸಹ ದಾರಿದ್ರ್ಯವನ್ನೇ ಅನುಭವಿಸುತ್ತಿರುತ್ತಾರೆ. ಅವರ ಪ್ರಯತ್ನಕ್ಕೆ ಅನುರೂಪವಾದ ಪ್ರತಿಫಲವನ್ನು ಅವರು ಹೊಂದುವುದಿಲ್ಲ.

**ದೇವಾನಿಷ್ಟ್ವಾ ತಪಸ್ತಪ್ತ್ವಾ ಕೃಪಣೈಃ ಪುತ್ರಗೃದ್ಧಿಭಿಃ ।**
**ದಶಮಾಸಧೃತಾ ಗರ್ಭೇ ಜಾಯನ್ತೇ ಕುಲಪಾಂಸನಾಃ ॥೧೨॥**

ಮಕ್ಕಳಿಲ್ಲದ ಕೆಲವರು ಮಕ್ಕಳನ್ನು ಪಡೆಯುವ ಸಲುವಾಗಿ ದೇವತಾ ಪೂಜೆಗಳನ್ನು ಮಾಡುತ್ತಾರೆ. ಬಹಳ ಕಠಿನವಾದ ವ್ರತೋಪವಾಸಗಳನ್ನು ಮಾಡುತ್ತಾರೆ. ಅವರ ತಪಃಫಲದಿಂದ ಹತ್ತು ತಿಂಗಳುಗಳಕಾಲ ಗರ್ಭದಲ್ಲಿದ್ದು ಅನಂತರ ಹುಟ್ಟುವ ಮಕ್ಕಳು ಕೆಲವು ಸಮಯಗಳಲ್ಲಿ ಕುಲಕ್ಕೇ ಕಳಂಕ ಪ್ರಾಯರಾಗಿರುತ್ತಾರೆ.

**ಅಪರೇ ಧನಧಾನ್ಯೈಶ್ಚ ಭೋಗೈಶ್ಚ ಪಿತೃಸಂಚಿತೈಃ ।**
**ವಿಪುಲೈರಭಿಜಾಯನ್ತೇ ಲುಬ್ಧಾಸ್ತೈರೇವ ಮಙ್ಗಲೈಃ ॥೧೩॥**

ನಾನಾವಿಧವಾದ ತಪಸ್ಸಿನಿಂದಲೂ, ದೇವಪೂಜಾದಿಗಳಿಂದಲೂ ಜನಿಸಿದ ಮತ್ತೆ ಕೆಲವು ಪುತ್ರರು ವಂಶಕ್ಕೆ ಕೀರ್ತಿಯನ್ನು ತರುವವರಾಗಿಯೂ, ಧನ-ಧಾನ್ಯಸಂಪನ್ನರಾಗಿಯೂ, ಸಕಲವಿಧವಾದ ಸುಖೋಪಭೋಗಗಳನ್ನು ಅನುಭವಿಸುವವರಾಗಿಯೂ ಇರುತ್ತಾರೆ.

**ಕರ್ಮಜಾ ಹಿ ಮನುಷ್ಯಾಣಾಂ ರೋಗಾ ನಾಸ್ತ್ಯತ್ರ ಸಂಶಯಃ ।**
**ಆಧಿಭಿಶ್ಚೈವ ಬಾಧ್ಯನ್ತೇ ವ್ಯಾಧೈಃ ಕ್ಷುದ್ರಮೃಗಾ ಇವ ॥೧೪॥**

**ತೇ ಚಾಪಿ ಕುಶಲೈರ್ವೈದ್ಯೈರ್ನಿಪುಣೈಃ ಸಮ್ಭೃತೌಷಧೈಃ ।**
**ವ್ಯಾಧಯೋ ವಿನಿವಾರ್ಯನ್ತೇ ಮೃಗಾ ವ್ಯಾಧೈರಿವ ದ್ವಿಜ ॥೧೫॥**

ಬ್ರಾಹ್ಮಣೋತ್ತಮ! ಮನುಷ್ಯರಿಗೆ ಬರುವ ಆಧಿ-ವ್ಯಾಧಿರೂಪಗಳಾದ ರೋಗಗಳೆಲ್ಲವೂ ಪೂರ್ವಜನ್ಮದ ಕರ್ಮದಿಂದಲೇ ಉತ್ಪನ್ನವಾದುವುಗಳು. ಈ ವಿಷಯದಲ್ಲಿ ಸ್ವಲ್ಪವಾದರೂ ಸಂಶಯಪಡುವ ಕಾರಣವಿಲ್ಲ. ಜನರು ರೋಗಗಳಿಂದಲೂ, ಮನೋವ್ಯಥೆಗಳಿಂದಲೂ–ಬೇಡರಿಂದ ಕ್ಷುದ್ರಮೃಗಗಳು ಪೀಡಿಸಲ್ಪಡುವಂತೆ–ಪೀಡಿಸಲ್ಪಡುತ್ತಾರೆ. ಬೇಡರು ಕ್ರೂರಪ್ರಾಣಿಗಳನ್ನು ಓಡಿಸುವಂತೆ–ಕುಶಲರಾದ ವೈದ್ಯರು ಅತ್ಯಮೋಘವಾದ ಔಷಧಗಳಿಂದ ಪೂರ್ವಕರ್ಮಜನ್ಯವಾದ ರೋಗಗಳನ್ನೂ ನಿವಾರಿಸಬಲ್ಲರು.

**ಯೇಷಾಮಸ್ತಿ ಚ ಭೋಕ್ತವ್ಯಂ ಗ್ರಹಣೀದೋಷಪೀಡಿತಾಃ ।**
**ನ ಶಕ್ನುವನ್ತಿ ತೇ ಭೋಕ್ತುಂ ಪಶ್ಯ ಧರ್ಮಭೃತಾಂ ವರ ॥೧೬॥**

ಧರ್ಮಾತ್ಮರಲ್ಲಿ ಶ್ರೇಷ್ಠನೇ! ಪ್ರಪಂಚದಲ್ಲಿ ನಡೆಯುವ ಮತ್ತೊಂದು ವಿಚಿತ್ರವನ್ನು ಹೇಳುತ್ತೇನೆ ಕೇಳು. ಉಪಭುಂಜಿಸಲು ಬೇಕಾದ ಆಹಾರ ಸಾಮಗ್ರಿಗಳನ್ನು ಯಥೇಚ್ಛವಾಗಿ ಹೊಂದಿರುವವರು ಅಜೀರ್ಣರೋಗಪೀಡಿತ

ರಾಗಿ ತಮ್ಮ ಮುಂದಿರುವ ಆಹಾರವಸ್ತುಗಳನ್ನು ತಿನ್ನಲು ಸಾಧ್ಯವಾಗದೇ ಸಂಕಟಪಡುತ್ತಾರೆ.

**ಅಪರೇ ಬಾಹುಬಲಿನಃ ಕ್ಲಿಶ್ಯನ್ತೇ ಬಹವೋ ಜನಾಃ ।**
**ದುಃಖೇನ ಚಾಧಿಗಚ್ಛನ್ತಿ ಭೋಜನಂ ದ್ವಿಜಸತ್ತಮ ॥೧೭॥**

ಯಾರು ಬಲಾಢ್ಯರಾಗಿಯೂ, ಜೀರ್ಣಶಕ್ತಿಯುಳ್ಳವರಾಗಿಯೂ, ದೃಢ ಕಾಯರಾಗಿಯೂ ಇರುತ್ತಾರೆಯೋ ಅವರಿಗೆ ತಿನ್ನಲು ಅನ್ನವೇ ಸಿಕ್ಕದಂತಾಗುತ್ತದೆ. ಅವರು ಎರಡು ಹೊತ್ತು ಊಟವನ್ನು ದೊರಕಿಸಿಕೊಳ್ಳಲೂ ಬಹಳ ಕಷ್ಟಪಡುತ್ತಿರುತ್ತಾರೆ.

**ಇತಿ ಲೋಕಮನಾಕ್ರನ್ದಂ ಮೋಹಶೋಕಪರಿಪ್ಲುತಮ್ ।**
**ಸ್ರೋತಸಾಸಕೃದಾಕ್ಷಿಪ್ತಂ ಹ್ರಿಯಮಾಣಂ ಬಲೀಯಸಾ ॥೧೮॥**

ಆದುದರಿಂದ ನಿಸ್ಸಹಾಯಕರಾದ ಲೋಕದ ಪ್ರಜೆಗಳು ಬಲಿಷ್ಠವಾದ ಕರ್ಮವೆಂಬ ಪ್ರವಾಹದಲ್ಲಿ ಮುಳುಗಿ-ತೇಲುತ್ತಾ, ಕೆಲವೊಮ್ಮೆ ಶೋಕ ಪರವಶರಾಗಿಯೂ, ಕೆಲವೊಮ್ಮೆ ಮೋಹಪರವಶರಾಗಿಯೂ ಇದ್ದು ತಮ್ಮ ಜೀವನವನ್ನು ಸಾಗಿಸುತ್ತಿರುತ್ತಾರೆ.

ಬ್ರಾಹ್ಮಣೋತ್ತಮ! ಒಂದು ವೇಳೆ, ಮಾನವರು ಸರ್ವತಂತ್ರ ಸ್ವತಂತ್ರರೇ ಆಗಿದ್ದರೆ :

**ನ ಮ್ರಿಯೇಯುರ್ನ ಜೀರ್ಯೇಯುಃ ಸರ್ವೇ ಸ್ಯುಃ ಸರ್ವಕಾಮಿಕಾಃ ।**
**ನಾಪ್ರಿಯಂ ಪ್ರತಿಪಶ್ಯೇಯುರ್ವಶಿತ್ವಂ ಯದಿ ವೈ ಭವೇತ್ ॥೧೯॥**

ಅವರು ಸಾಯುತ್ತಲೇ ಇರಲಿಲ್ಲ ; ವೃದ್ಧರೂ ಆಗುತ್ತಿರಲಿಲ್ಲ ; ಎಲ್ಲರೂ ತಮ್ಮ-ತಮ್ಮ ಕಾಮನೆಗಳನ್ನು ಪೂರ್ಣವಾಗಿ ಅನುಭವಿಸಿಬಿಡುತ್ತಿದ್ದರು. ತಮಗೆ ಅಪ್ರಿಯವೆಂಬುದನ್ನೇ ಅವರು ಕಾಣುತ್ತಿರಲಿಲ್ಲ.

**ಉಪರ್ಯುಪರಿ ಲೋಕಸ್ಯ ಸರ್ವೋ ಗನ್ತುಂ ಸಮೀಹತೇ ।**
**ಯತತೇ ಚ ಯಥಾಶಕ್ತಿ ನ ಚ ತದ್ವರ್ತತೇ ತಥಾ ॥೨೦॥**

ಪ್ರತಿಯೊಬ್ಬರೂ ಈ ಲೋಕವನ್ನೇ ಬಿಟ್ಟು ಮೇಲಿನ ಲೋಕಗಳಿಗೂ ಹೋಗಿಬಿಡಲು ಇಚ್ಛಿಸುತ್ತಾರೆ. ಅದಕ್ಕಾಗಿ ಸತತವಾಗಿ ಪ್ರಯತ್ನಿಸುತ್ತಲೂ ಇರುತ್ತಾರೆ. ಹೀಗೆಂದಿಗೂ ಆಗಲು ಸಾಧ್ಯವಿಲ್ಲವಲ್ಲವೇ? ಆದುದರಿಂದಲೇ

ಮಾನವರೆಂದಿಗೂ ಸ್ವತಂತ್ರರಾಗಿರದೇ ತಮ್ಮ ಪೂರ್ವಾರ್ಜಿತವಾದ ಪುಣ್ಯಾಪುಣ್ಯಕರ್ಮಫಲಗಳ ವ್ಯಾಪ್ತಿಗೆ ಒಳಪಟ್ಟು ಸುಖ-ದುಃಖಗಳನ್ನು ಅನುಭವಿಸುತ್ತಿರುತ್ತಾರೆ.

ತನ್ನ ನೆರೆಹೊರೆಯವರಿಗಿಂತಲೂ ತಾನು ಹೆಚ್ಚು ಉಚ್ಚಾಯಸ್ಥಿತಿಗೆ ಬರಬೇಕೆಂದು ಪ್ರತಿಯೊಬ್ಬ ಮನುಷ್ಯನೂ ಪೂರ್ಣವಾಗಿ ಪ್ರಯತ್ನಿಸುತ್ತಾನೆ. ಆದರೆ ಎಷ್ಟೇ ಪ್ರಯತ್ನಿಸಿದರೂ ಅವನ ಪ್ರಯತ್ನಗಳೆಲ್ಲವೂ ನಿಷ್ಫಲವಾಗಿ ಅವನು ಪೂರ್ವಸ್ಥಿತಿಯಲ್ಲಿಯೇ ಇರಬೇಕಾಗುತ್ತದೆ.

ಲೋಕದ ಮತ್ತೊಂದು ವೈಚಿತ್ರ್ಯವನ್ನೂ ಹೇಳುವೆನು ಕೇಳು, ಬ್ರಾಹ್ಮಣೋತ್ತಮ!

**ಬಹವಃ ಸಮ್ಪ್ರದೃಶ್ಯನ್ತೇ ತುಲ್ಯನಕ್ಷತ್ರಮಙ್ಗಲಾಃ ।**
**ಮಹಚ್ಚ ಫಲವೈಷಮ್ಯಂ ದೃಶ್ಯತೇ ಕರ್ಮಸಂಧಿಷು ॥೨೧॥**

ಅನೇಕರು ಒಂದೇ ಲಗ್ನದಲ್ಲಿ-ಒಂದೇ ನಕ್ಷತ್ರದಲ್ಲಿ-ಒಂದೇ ರಾಶಿಯಲ್ಲಿ-ಒಂದೇ ದಿವಸ ಹುಟ್ಟಿರುತ್ತಾರೆ. ಆದರೆ ಅವರು ಅನುಭವಿಸುವ ಫಲಾಫಲಗಳಲ್ಲಿ ಅಜಗಜಾಂತರವಾದ ವ್ಯತ್ಯಾಸವಿರುತ್ತದೆ. ಅವರು ಆಚರಿಸುವ ಕರ್ಮಗಳೂ ಸಹ ಒಂದಕ್ಕೊಂದು ಸಂಬಂಧವಿಲ್ಲದಂತೆಯೇ ಇರುತ್ತವೆ.

ಆದುದರಿಂದ ಯಾವ ಮಾನವನೇ ಆದರೂ ತನ್ನ ಹಿಂದಿನ ಕರ್ಮಫಲವನ್ನು ಬದಲಾಯಿಸಲು ಸಮರ್ಥನಾಗುವುದಿಲ್ಲ. ಏಕೆಂದರೆ :

**ನ ಕೇಚಿದೀಶತೇ ಬ್ರಹ್ಮನ್ಸ್ವಯಂಗ್ರಾಹ್ಯಸ್ಯ ಸತ್ತಮ ।**
**ಕರ್ಮಣಾಂ ಪ್ರಾಕ್ಕೃತಾನಾಂ ವೈ ಇಹ ಸಿದ್ಧಿಃ ಪ್ರದೃಶ್ಯತೇ ॥೨೨॥**

ಮಾನವನು ಪೂರ್ವಜನ್ಮದಲ್ಲಿ ಮಾಡಿದ ಶುಭಾಶುಭಕರ್ಮಗಳು ಈ ಜನ್ಮದಲ್ಲಿ ಅವನಿಗೆ ಫಲವನ್ನು ಕೊಡುತ್ತಿರುತ್ತವೆ. ಹಿಂದಿನ ಜನ್ಮದ ಕರ್ಮಾನುಸಾರವಾಗಿಯೇ ಅವನ ಬುದ್ಧಿಯೂ ಸಹ ಈ ಜನ್ಮದಲ್ಲಿ ಸತ್ಕರ್ಮ ಅಥವಾ ದುಷ್ಕರ್ಮಗಳಲ್ಲಿ ಪ್ರವಹಿಸುತ್ತಿರುತ್ತದೆ.

ಈ ವಿಷಯದಲ್ಲಿರುವ ಶ್ರುತಿಪ್ರಮಾಣವೂ ಸಹ ಇದಕ್ಕೆ ಅನುರೂಪವಾಗಿಯೇ ಇದೆ.

**ಯಥಾಶ್ರುತಿರಿಯಂ ಬ್ರಹ್ಮನ್ ಜೀವಃ ಕಿಲ ಸನಾತನಃ ।**
**ಶರೀರಮಧ್ರುವಂ ಲೋಕೇ ಸರ್ವೇಷಾಂ ಪ್ರಾಣಿನಾಮಿಹ ॥೨೩॥**

ಜೀವನು ಸನಾತನನು. (ಹುಟ್ಟು-ಸಾವುಗಳಿಲ್ಲದ ಅನಾದಿಯು.) ಸಕಲಪ್ರಾಣಿಗಳ ಶರೀರಗಳೂ ಸಹ ಅಸ್ಥಿರವಾದುವುಗಳು.

**ವಧ್ಯಮಾನೇ ಶರೀರೇ ತು ದೇಹನಾಶೋ ಭವತ್ಯುತ ।**
**ಜೀವಃ ಸಙ್ಕ್ರಮತೇಽನ್ಯತ್ರ ಕರ್ಮಬನ್ಧನಿಬನ್ಧನಃ ॥೨೪॥**

“ವಿಪ್ರೋತ್ತಮ! ಈ ಕಾರಣದಿಂದಲೇ ಪ್ರಾಣಿಯು ಮರಣಹೊಂದಿತೆಂದರೆ ಅದರ ದೇಹದ ವಿನಾಶವು ಮಾತ್ರವೇ ಆಗುತ್ತದೆ. ಆದರೆ ಆ ಪ್ರಾಣಿಯ ಜೀವವು ಆ ಜನ್ಮದಲ್ಲಿ ಮಾಡಿದ ಕರ್ಮಫಲವೆಂಬ ಪಾಶದಿಂದ ಬಂಧಿತವಾಗಿ (ಬೇರೊಂದು ಯೋನಿಯಲ್ಲಿ ಹುಟ್ಟುವವರೆಗೂ) ಮತ್ತೆಲ್ಲೋ ಸುತ್ತಾಡುತ್ತಿರುತ್ತದೆ.”

ಧರ್ಮಜ! ಧರ್ಮವ್ಯಾಧನ ಮಾತುಗಳನ್ನು ಕೇಳಿ ಬ್ರಾಹ್ಮಣನ ಮನಸ್ಸಿನಲ್ಲಿ ಒಂದು ಸಮಸ್ಯೆಯು ಉದ್ಭವಿಸಿತು. ಆ ಸಮಸ್ಯೆಯನ್ನೇ ಅವನು ಧರ್ಮವ್ಯಾಧನ ಮುಂದಿಟ್ಟನು :

“ಕರ್ಮದ ರಹಸ್ಯಗಳನ್ನು ತಿಳಿದಿರುವವರಲ್ಲಿ ಶ್ರೇಷ್ಠನಾದವನೇ! ಪ್ರವಚನಗಳನ್ನು ಕೊಡುವುದರಲ್ಲಿ ಪ್ರಾವೀಣ್ಯವುಳ್ಳವನೇ! ಜೀವನು ಶಾಶ್ವತನೂ, ಅನಾದಿಯೂ, ಸನಾತನನೂ ಹೇಗೆ ಆಗುತ್ತಾನೆ? ಈ ವಿಷಯವನ್ನು ನಾನು ತತ್ತ್ವತಃ ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯದಿಂದಿರುತ್ತೇನೆ.”

ಬ್ರಾಹ್ಮಣನ ಪ್ರಶ್ನೆಗೆ ಉತ್ತರವಾಗಿ ವ್ಯಾಧನು ಹೇಳುತ್ತಾನೆ :

**ನ ಜೀವನಾಶೋಽಸ್ತಿ ಹಿ ದೇಹಭೇದೇ**
**ಮಿಥ್ಯೈತದಾಹುರ್ಮ್ರಿಯತೇತಿಮೂಢಾಃ ।**
**ಜೀವಸ್ತು ದೇಹಾನ್ತರಿತಃ ಪ್ರಯಾತಿ**
**ದಶಾರ್ಧತೈವಾಸ್ಯ ಶರೀರಭೇದಃ ॥೨೬॥**

“ದೇಹಗಳ ಭೇದ ಅಥವಾ ಅನ್ಯದೇಹಗಳ ಪ್ರಾಪ್ತಿಯಾಗುವುದೇ ಹೊರತು ಜೀವನು ನಾಶವಾಗಲಾರನು. ಜೀವನು ಅಥವಾ ಪ್ರಾಣಿಯು ಸತ್ತುಹೋದನೆಂದು (ವಿನಾಶಹೊಂದಿದನೆಂದು) ಮೂಢರಾದವರು ಮಾತ್ರವೇ ಹೇಳುತ್ತಾರೆ. ಈ ದೇಹದಲ್ಲಿರುವ ಜೀವನು ಹೊರಟುಹೋಗುತ್ತಾನೆಯೋ

ಹೊರತು ವಿನಾಶಹೊಂದುವುದಿಲ್ಲ. ಪಂಚತ್ವವನ್ನು ಹೊಂದಿದನೆಂದರೆ ಶರೀರ ಭೇದವನ್ನು ಅಥವಾ ಅನ್ಯಶರೀರವನ್ನು ಮಾತ್ರವೇ ಪಡೆಯುವನೆಂದು ತಿಳಿಯ ಬೇಕು. ಮರಣ, ಸಾವು, ವಿನಾಶ–ಎಂಬುದು ಆಯಾ ದೇಹಕ್ಕೇ ಹೊರತು ಜೀವನಿಗಲ್ಲ. ಸತ್ತುಹೋದನು–ಎಂದರೆ ಶರೀರದಿಂದ ಚೈತನ್ಯವು ಹೊರಟು ಹೋಯಿತು ಎಂದರ್ಥ.

**ಅನ್ಯೋ ಹಿ ನಾಶ್ನಾತಿ ಕೃತಂ ಹಿ ಕರ್ಮ**
**ಮನುಷ್ಯಲೋಕೇ ಮನುಜಸ್ಯ ಕಶ್ಚಿತ್ ।**
**ಯತ್ತೇನ ಕಿಂಚಿದ್ಧಿ ಕೃತಂ ಹಿ ಕರ್ಮ**
**ತದಶ್ನುತೇ ನಾಸ್ತಿ ಕೃತಸ್ಯ ನಾಶಃ ॥೨೭॥**

ಈ ಮನುಷ್ಯಲೋಕದಲ್ಲಿ ಒಬ್ಬನು ಮಾಡಿದ ಕರ್ಮಫಲವನ್ನು ಮತ್ತೊಬ್ಬನು ಅನುಭವಿಸುವ ಸಾಧ್ಯತೆಯಿಲ್ಲ. ಅಣ್ಣ-ತಮ್ಮಂದಿರಾಗಿಯೇ ಹುಟ್ಟಿದರೂ, ತಂದೆ-ಮಕ್ಕಳಾಗಿಯೇ ಹುಟ್ಟಿದರೂ, ಗಂಡ-ಹೆಂಡತಿಯ ರಾಗಿಯೇ ಹುಟ್ಟಿದರೂ, ಪರಸ್ಪರ ಮಿತ್ರರಾಗಿ ಹುಟ್ಟಿದರೂ ಅವನವನು ಪ್ರತ್ಯೇಕ-ಪ್ರತ್ಯೇಕವಾಗಿ ತನ್ನ-ತನ್ನ ಕರ್ಮಫಲವನ್ನು ಅನುಭವಿಸುವನೇ ಹೊರತು ಅವನ ಕರ್ಮಫಲದಲ್ಲಿ ಯಾರೊಬ್ಬರೂ ಪಾಲುಗೊಳ್ಳರು. ಅನ್ನ ವಿದ್ದೂ ಊಟಮಾಡಲು ಸಾಧ್ಯವಾಗದಿರುವುದಕ್ಕೂ, ಊಟಮಾಡಿ ಅರಗಿಸಿ ಕೊಳ್ಳುವ ಸಾಮರ್ಥ್ಯವಿದ್ದರೂ ಅನ್ನವೇ ಸಿಗದಿರುವುದಕ್ಕೂ, ಕಷ್ಟಪಟ್ಟರೂ ಫಲವು ಸಿಕ್ಕದೇ ಇರುವುದಕ್ಕೂ, ಕಷ್ಟಪಡದೆಯೇ ಫಲವು ತಾನೇ ತಾನಾಗಿ ಒದಗಿಬರುವುದಕ್ಕೂ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಫಲವು ಕಾರಣವೇ ಹೊರತು ಬೇರಾವ ಕಾರಣವೂ ಇಲ್ಲ. ಅವನು ಹಿಂದಿನ ಜನ್ಮಗಳಲ್ಲಿ ಯಾವ ಕರ್ಮವನ್ನು ಮಾಡಿದ್ದನೋ–ಅದರ ಫಲವನ್ನೀಗ ಅನುಭವಿಸುತ್ತಾನೆ. ಕರ್ಮದ ಅಥವಾ ಕರ್ಮಫಲದ ನಾಶವೆಂದಿಗೂ ಆಗುವುದಿಲ್ಲ.

**ಸುಪುಣ್ಯಶೀಲಾ ಹಿ ಭವನ್ತಿ ಪುಣ್ಯಾ**
**ನರಾಧಮಾಃ ಪಾಪಕೃತೋ ಭವನ್ತಿ ।**
**ನರೋಽನುಯಾತಸ್ತ್ವಿಹ ಕರ್ಮಭಿಃ ಸ್ವೈ-**
**ಸ್ತತಃ ಸಮುತ್ಪದ್ಯತಿ ಬಾಧಿತಸ್ತೈಃ ॥೨೮॥**

ಪುಣ್ಯಶೀಲರಾದವರು ಸತ್ಫಲಗಳನ್ನೇ ಅನುಭವಿಸುತ್ತಾರೆ. ದುಷ್ಕರ್ಮಿಗಳು ನರಾಧಮರಾಗಿ ದುಷ್ಟವಾದ ಫಲಗಳನ್ನೇ ಅನುಭವಿಸುತ್ತಾರೆ. ಹಿಂದಿನ ಜನ್ಮದಲ್ಲಿ ಮಾಡಿದ ಶುಭಾಶುಭಕರ್ಮಫಲಗಳನ್ನು ಮನುಷ್ಯನು ಈ ಜನ್ಮದಲ್ಲಿ ಅನುಭವಿಸುತ್ತಾನೆ. ಈ ಜನ್ಮದಲ್ಲಿ ಮಾಡಿದ ಸತ್ಕರ್ಮ-ದುಷ್ಕರ್ಮಗಳಿಗೆ ಅನುಸಾರವಾಗಿ ಅದೇ ಜೀವನು ಮುಂದಿನ ಜನ್ಮವನ್ನು ಪಡೆಯುತ್ತಾನೆ. ಈ ಜೀವನಚಕ್ರವು ಸತತವಾಗಿ ಸುತ್ತುತ್ತಲೇ ಇರುತ್ತದೆ."

ಬ್ರಾಹ್ಮಣನು ಪುನಃ ವ್ಯಾಧನನ್ನು ಪ್ರಶ್ನಿಸುತ್ತಾನೆ :

"ಸತ್ಪುರುಷರಲ್ಲಿ ಶ್ರೇಷ್ಠನಾದವನೇ! ಈ ಪಾರ್ಥಿವಶರೀರವನ್ನು ತೊರೆದನಂತರ ಜೀವನು ಬೇರೊಂದು ಯೋನಿಯಲ್ಲಿ ಹೇಗೆ ಹುಟ್ಟುತ್ತಾನೆ? ಶರೀರರಹಿತನಾದ ಜೀವನಿಗೆ ಪಾಪ-ಪುಣ್ಯಗಳ ಲೇಪವು ಹೇಗೆ ಇರಲು ಸಾಧ್ಯ? ಅವನು ಪುಣ್ಯ-ಪಾಪಗಳ ಫಲವನ್ನು ಅನುಸರಿಸಿ ಉಚ್ಚ-ನೀಚಜಾತಿಗಳಲ್ಲಿ ಜನ್ಮತಾಳುವ ರೀತಿಯಾದರೂ ಹೇಗೆ? ಇವುಗಳೆಲ್ಲವನ್ನೂ ವಿಶದವಾಗಿ ತಿಳಿಯಹೇಳು."

"ಬ್ರಾಹ್ಮಣೋತ್ತಮ! ಷೋಡಶಕರ್ಮಗಳಲ್ಲಿ ಮೊದಲನೆಯದಾದ ಗರ್ಭಾಧಾನವೆಂಬ ಕರ್ಮದಿಂದಲೇ ಈ ಕರ್ಮಜಾಲವು ಮೊದಲಾಗುತ್ತದೆ. ಇದನ್ನು ನಾನು ಸಂಗ್ರಹಿಸಿ ನಿನಗೆ ಹೇಳುತ್ತೇನೆ. ಕರ್ಮಬೀಜಗಳು ಹೇಗೆ ಜೀವನ ಜೊತೆಯಲ್ಲಿ ಪುನಃ ಹುಟ್ಟುತ್ತವೆ ಮತ್ತು ಶುಭಕರ್ಮಮಾಡಿದವನು ಸದ್ವಂಶದಲ್ಲಿಯೂ, ದುಷ್ಕರ್ಮಿಯು ಅಸದ್ವಂಶದಲ್ಲಿಯೂ ಹೇಗೆ ಹುಟ್ಟುತ್ತಾನೆ? ಎಂಬುದನ್ನೂ ಹೇಳುತ್ತೇನೆ.

**ಶುಭೈಃ ಪ್ರಯೋಗೈರ್ದೇವತ್ವಂ ವ್ಯಾಮಿಶ್ರೈರ್ಮಾನುಷೋ ಭವೇತ್ ।**
**ಮೋಹನೀಯೈರ್ವಿಯೋನೀಷು ತ್ವಧೋಗಾಮೀ ಚ ಕಿಲ್ಬಿಷೀ ॥**

ಪ್ರಾಣಿಯು ಶುಭಕರ್ಮಗಳನ್ನು ಮಾಡಿ ದೇವತ್ವವನ್ನೇ ಪಡೆಯಬಹುದು. ಶುಭಾಶುಭಕರ್ಮಗಳೆರಡನ್ನೂ ಸಮ-ಸಮವಾಗಿ ಮಾಡಿದರೆ ಮನುಷ್ಯನಾಗಿ ಹುಟ್ಟಬಹುದು. ರಾಗ-ದ್ವೇಷ-ಮದ-ಮಾತ್ಸರ್ಯಗಳಿಂದ ಕೂಡಿದವನಾಗಿದ್ದರೆ ಮೃಗ-ಪಕ್ಷಿಗಳ ಜನ್ಮವನ್ನು ಪಡೆಯಬಹುದು. ಪಾಪ ಮಾಡಿದವನು ನರಕವನ್ನು ಹೊಂದುತ್ತಾನೆ.

**ಜಾತಿಮೃತ್ಯುಜರಾದುಃಖೈಃ ಸತತಂ ಸಮಭಿದ್ರುತಃ ।**
**ಸಂಸಾರೇ ಪಚ್ಯಮಾನಶ್ಚ ದೋಷೈರಾತ್ಮಕೃತೈರ್ನರಃ ॥೩೩॥**

ಜನ್ಮ-ಮೃತ್ಯು-ಜರಾ-ದುಃಖಗಳಿಗೆ ತುತ್ತಾಗುವ ಈ ಮಾನವನು ತಾನು ಮಾಡಿದ ದೋಷಗಳಿಂದಲೇ ಪುನಃ-ಪುನಃ ಜನ್ಮಗಳನ್ನು ಪಡೆಯುತ್ತಲೇ ಇರುತ್ತಾನೆ. ಸಂಸಾರದ ಬೇಗೆಯಲ್ಲಿ ಬೇಯುತ್ತಾನೆ.

**ತಿರ್ಯಗ್ಯೋನಿಸಹಸ್ರಾಣಿ ಗತ್ವಾ ನರಕಮೇವ ಚ ।**
**ಜೀವಾಃ ಸಮ್ಪರಿವರ್ತನ್ತೇ ಕರ್ಮಬನ್ಧನಿಬನ್ಧನಾಃ ॥೩೪॥**

ಪಶು-ಪಕ್ಷಿಗಳಾಗಿ ಸಾವಿರಾರು ಜನ್ಮಗಳನ್ನೆತ್ತಿ ಅನೇಕಸಹಸ್ರವರ್ಷಗಳ ವರೆಗೆ ನರಕವನ್ನು ಅನುಭವಿಸಿ ಕರ್ಮದ ಬಂಧನದಿಂದ ಕೂಡಿದ ಜೀವಗಳು ಪರಿಭ್ರಮಿಸುತ್ತಿರುತ್ತವೆ. (ಮಾನವರಾಗಿ ಹುಟ್ಟುತ್ತವೆ.)

**ಜನ್ತುಸ್ತು ಕರ್ಮಭಿಸ್ತೈಸ್ತೈಃ ಸ್ವಕೃತೈಃ ಪ್ರೇತ್ಯ ದುಃಖಿತಃ ।**
**ತದ್ದುಃಖಪ್ರತಿಘಾತಾರ್ಥಮಪುಣ್ಯಾಂ ಯೋನಿಮಾಪ್ನುತೇ ॥೩೫॥**

ಪ್ರಾಣಿಯು ಮರಣಹೊಂದಿದ ಮೇಲೆ ತಾನು ಮಾಡಿದ ಕುತ್ಸಿತ ಕರ್ಮದ ದುಃಖವನ್ನನುಭವಿಸುತ್ತಾ ಹಲವಾರು ವರ್ಷಗಳವರೆಗೆ ನರಕ ಯಾತನೆಯನ್ನು ಅನುಭವಿಸಿ, ಆಗಲೂ ಸಹ ತನ್ನ ದುಷ್ಕರ್ಮಫಲವನ್ನು ಕಳೆದುಕೊಳ್ಳಲು ಸಾಧ್ಯವಾಗದೇ ನೀಚಯೋನಿಯಲ್ಲಿ ಪುನಃ ಜನಿಸಿ ಹಿಂದಿನ ಜನ್ಮದ ದುಷ್ಕರ್ಮಫಲವನ್ನು ಕಳೆದುಕೊಳ್ಳಬೇಕಾಗುತ್ತದೆ.

**ತತಃ ಕರ್ಮ ಸಮಾದತ್ತೇ ಪುನರನ್ಯಂ ನವಂ ಬಹು ।**
**ಪಚ್ಯತೇ ತು ಪುನಸ್ತೇನ ಭುಕ್ತ್ವಾಪಥ್ಯಮಿವಾತುರಃ ॥೩೬॥**

ಪುನಃ ಅಲ್ಲಿಯೂ ಸಹ ಮತ್ತಷ್ಟು ದುಷ್ಕರ್ಮಗಳನ್ನೇ ಮಾಡುತ್ತಿದ್ದರೆ ಪುನಃ ಆ ಕರ್ಮಫಲವೂ ಹಿಂದಿನದಕ್ಕೆ ಸೇರಿಕೊಂಡು ಮತ್ತೂ ತುಚ್ಛತರವಾದ ಯೋನಿಗಳಲ್ಲಿ ಜನ್ಮತಾಳಬೇಕಾಗುತ್ತದೆ. ಮೊದಲೇ ರೋಗಿಯಾಗಿರುವವನು ಪುನಃ ಅಪಥ್ಯಮಾಡಿಕೊಂಡರೆ ಹೇಗೆ ಅವನಿಗೆ ರೋಗದಿಂದ ವಿಮುಕ್ತಿಯೇ ಇಲ್ಲವೋ–ಅದೇ ರೀತಿಯಲ್ಲಿ ಪ್ರಾಣಿಯು ಕರ್ಮಚಕ್ರದ ಆಘಾತಕ್ಕೆ ಸಿಕ್ಕಿ ಹಲವು ಬಗೆಯಾದ ದುಃಖ-ಕೋಟಲೆಗಳಲ್ಲಿ ಬಿದ್ದು ಒದ್ದಾಡುತ್ತಿರುತ್ತಾನೆ. ಆದರೆ ಪ್ರಪಂಚದಲ್ಲಿರುವ ಒಂದು ವೈಚಿತ್ರವೇನೆಂದರೆ :

**ಅಜಸ್ರಮೇವ ದುಃಖಾರ್ತೋಽದುಃಖಿತಃ ಸುಖಸಂಜ್ಞಿತಃ ।**
**ತತೋಽನಿವೃತ್ತಬನ್ಧತ್ವಾತ್ಕರ್ಮಣಾಮುದಯಾದಪಿ ॥೩೭॥**

**ಪರಿಕ್ರಾಮತಿ ಸಂಸಾರೇ ಚಕ್ರವದ್ಬಹುವೇದನಃ ।**

ಜೀವನು ತನ್ನ ಪಾಪಕರ್ಮಫಲದಿಂದಾಗಿ ತಿರ್ಯಗ್ಯೋನಿಗಳಲ್ಲಿ ಹುಟ್ಟಿದರೂ, ಕೆಳಜಾತಿಯಲ್ಲಿ ಹುಟ್ಟಿದರೂ, ಯಾವುದೇ ಜಾತಿಯಲ್ಲಿ ಹುಟ್ಟಿ ಎಷ್ಟೇ ದುಃಖವನ್ನನುಭವಿಸುತ್ತಿದ್ದರೂ–'ಈ ದುಃಖವೆಲ್ಲವೂ ನನ್ನ ಪೂರ್ವಾರ್ಜಿತಕರ್ಮಫಲ. ಆದುದರಿಂದ ಇನ್ನು ಮುಂದಾದರೂ ಸತ್ಕರ್ಮ ನಿರತನಾಗಬೇಕು'–ಎಂದು ಯೋಚಿಸಹೋಗದೇ ಕಷ್ಟಗಳೆಲ್ಲಕ್ಕೂ ವಿಧಿಯನ್ನೇ ದೂರುತ್ತಾ, ಮರೀಚಿಕೆಯಂತಹ ಸುಖವೊಮ್ಮೆ ಪ್ರಾಪ್ತಿಯಾದಲ್ಲಿ ಅದು ತನ್ನ ಸ್ವಸಾಮರ್ಥ್ಯದಿಂದಾಯಿತೆಂದು ಅಹಂಕಾರಪಡುತ್ತಾ ಕಾಲಕಳೆಯುತ್ತಾನೆ. ನಿಶ್ಚಯವಾಗಿಯೂ ಆ ಸಮಯದಲ್ಲಿ ಅವನು ಪಡುವ ಸುಖವು ಕೇವಲ ಸುಖಸದೃಶವಾದುದೇ ಹೊರತು ನಿಜವಾದ ಸುಖವಲ್ಲ. ಅಲ್ಪವಾದ ಮತ್ತು ತಾತ್ಕಾಲಿಕವಾದ ಆ ಸುಖಾಭಾಸವೇ ಅವನನ್ನು ಅಜ್ಞಾನಾಂಧಕಾರದಲ್ಲಿ ಪುನಃ ತಳ್ಳುತ್ತದೆ. ಹೊಸ ಹೊಸ ದುಷ್ಕರ್ಮಫಲಗಳು ಪ್ರಾಪ್ತವಾಗುವುದರಿಂದಲೂ, ಹಿಂದಿನ ಕರ್ಮಫಲವೂ ಸಹ ಸವೆಯದೇ ಇರುವುದರಿಂದಲೂ ಅವನು ಬಹುವೇದನೆಯಿಂದ ಕೂಡಿದ ಸಂಸಾರದಲ್ಲಿ ಚಕ್ರದಂತೆ ಪರಿಭ್ರಮಿಸಿರುತ್ತಾನೆ.

**ಸ ಚೇನ್ನಿವೃತ್ತಬನ್ಧಸ್ತು ವಿಶುದ್ಧಶ್ಚಾಪಿ ಕರ್ಮಭಿಃ ॥೩೮॥**

**ತಪೋಯೋಗಸಮಾರಮ್ಭಂ ಕುರುತೇ ದ್ವಿಜಸತ್ತಮ ।**
**ಕರ್ಮಭಿರ್ಬಹುಭಿಶ್ಚಾಪಿ ಲೋಕಾನಶ್ನಾತಿ ಮಾನವಃ ॥೩೯॥**

**ಸ ಚೇನ್ನಿವೃತ್ತಬನ್ಧಸ್ತು ವಿಶುದ್ಧಶ್ಚಾಪಿ ಕರ್ಮಭಿಃ ।**
**ಪ್ರಾಪ್ನೋತಿ ಸುಕೃತಾಂಲ್ಲೋಕಾನ್ಯತ್ರ ಗತ್ವಾ ನ ಶೋಚತಿ ॥೪೦॥**

ಈ ಕರ್ಮಬಂಧನದಿಂದ ಮುಕ್ತಿಯನ್ನು ಪಡೆಯಲು ಆಸಕ್ತಿಯಿರುವವನು (ಕರ್ಮಬಂಧನವು ಸವೆದಾಗ) ಸತ್ಕರ್ಮಗಳನ್ನೇ ಮಾಡುತ್ತಾ ಎಷ್ಟೇ ಕರ್ಮಬಂಧನವಿದ್ದರೂ ತಪಸ್ಸು ಮತ್ತು ಧ್ಯಾನಾದಿಗಳಿಂದ ಅವುಗಳೆಲ್ಲವನ್ನೂ ಕಳೆದುಕೊಂಡು ಒಳ್ಳೆಯ ಲೋಕಗಳನ್ನು ಪಡೆಯುತ್ತಾನೆ. ಸತ್ಕರ್ಮ

ಗಳಿಂದಲೂ–ತಪಸ್ಸು, ಧ್ಯಾನ, ವ್ರತ, ಪಾರಾಯಣಾದಿಗಳಿಂದಲೂ ಕರ್ಮದ ಬಂಧನವನ್ನು ಕಳೆದುಕೊಂಡ ಮಾನವನಿಗೆ ನಿಶ್ಚಯವಾಗಿ ಶಾಶ್ವತವಾದ ಸುಖವನ್ನೀಯುವ ಉತ್ತಮಲೋಕಗಳು ಲಭ್ಯವಾಗುತ್ತವೆ.

**ಪಾಪಂ ಕುರ್ವನ್ಪಾಪವೃತ್ತಃ ಪಾಪಸ್ಯಾನ್ತಂ ನ ಗಚ್ಛತಿ ।**
**ತಸ್ಮಾತ್ಪುಣ್ಯಂ ಯತೇತ್ಕರ್ತುಂ ವರ್ಜಯೀತ ಚ ಪಾಪಕಮ್ ॥೪೧॥**

ಪಾಪಕರ್ಮವೇ ವೃತ್ತಿಯಾಗಿ ಉಳ್ಳವನು ಎಲ್ಲ ಜನ್ಮಗಳಲ್ಲಿಯೂ ಪಾಪಕಾರ್ಯಗಳನ್ನೇ ಮಾಡುತ್ತಾ, ತತ್ಸಂಬಂಧವಾದ ಪಾಪಕರ್ಮಫಲವನ್ನೂ ಸಹ ಎಲ್ಲ ಜನ್ಮಗಳಲ್ಲಿಯೂ ಅನುಭವಿಸುತ್ತಾ ಹೋಗುತ್ತಾನೆ. ಅಂತಹವನು ಪಾಪದ ಅಂತ್ಯವನ್ನು ಖಂಡಿತವಾಗಿಯೂ ಹೊಂದಲಾರನು. ಪಾಪಕರ್ಮಚಕ್ರದ ಸುಳಿಯಿಂದ ಬಿಡಿಸಿಕೊಳ್ಳಲಾರನು. ಈ ಕಾರಣದಿಂದಲೇ ಬುದ್ಧಿಪ್ರಧಾನರಾದ ಮಾನವರು ಪುಣ್ಯಕಾರ್ಯಗಳನ್ನು ಮಾಡಲು ಬುದ್ಧಿಪೂರ್ವಕವಾಗಿ ಪ್ರಯತ್ನಿಸಬೇಕು. ಪಾಪಕಾರ್ಯಮಾಡುವುದನ್ನು ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು.

ಯಾವ ಕರ್ಮಕ್ಕೆ ಯಾವ ಫಲವೆಂಬುದನ್ನು ಸ್ಪಷ್ಟವಾಗಿ ಹೇಳುವೆನು ; ಕೇಳು, ಬ್ರಾಹ್ಮಣ!

**ಅನಸೂಯುಃ ಕೃತಜ್ಞಶ್ಚ ಕಲ್ಯಾಣಾನಿ ಚ ಸೇವತೇ ।**
**ಸುಖಾನಿ ಧರ್ಮಮರ್ಥಂ ಚ ಸ್ವರ್ಗಂ ಚ ಲಭತೇ ನರಃ ॥೪೨॥**

ಇತರರ ಸ್ವತ್ತನ್ನು ಅಥವಾ ಉಚ್ಛ್ರಾಯಸ್ಥಿತಿಯನ್ನು ನೋಡಿ ಕರುಬದವನು, ಉಪಕಾರಮಾಡಿದವರನ್ನು ಸ್ಮರಿಸಿಕೊಳ್ಳುವವನು, ಪರೋಪಕಾರ-ಪ್ರಾಣಿದಯೆ ಮುಂತಾದ ಸತ್ಕಾರ್ಯಗಳಲ್ಲಿಯೇ ಸರ್ವದಾ ನಿರತನಾದವನು ಇಹದಲ್ಲಿ ಸುಖವನ್ನು ಪಡೆಯುತ್ತಾನೆ. ಧರ್ಮಾರ್ಥಗಳೆರಡೂ ಅವನಿಗೆ ಲಭಿಸುತ್ತವೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕವನ್ನೂ ಸೇರುತ್ತಾನೆ.

**ಸಂಸ್ಕೃತಸ್ಯ ಚ ದಾನ್ತಸ್ಯ ನಿಯತಸ್ಯ ಯತಾತ್ಮನಃ ।**
**ಪ್ರಾಜ್ಞಸ್ಯಾನನ್ತರಾ ವೃತ್ತಿರಿಹ ಲೋಕೇ ಪರತ್ರ ಚ ॥೪೩॥**

ಹದಿನಾರು ವಿಧವಾದ ಸಂಸ್ಕಾರಗಳಿಂದ ಸಂಸ್ಕೃತನಾದವನಿಗೆ, ಜಿತೇಂದ್ರಿಯನಾದವನಿಗೆ, ಜಿತಮನಸ್ಕನಿಗೆ, ನಿಯಮವಾದ ಆಹಾರ-ವಿಹಾರ

ವುಳ್ಳವನಿಗೆ, ಸದಸದ್ವಿವೇಕವುಳ್ಳ ಪ್ರಾಜ್ಞನಿಗೆ ಇಹ-ಪರಗಳೆರಡರಲ್ಲಿಯೂ ಸೌಖ್ಯವಿರುತ್ತದೆ.

**ಸತಾಂ ಧರ್ಮೇಣ ವರ್ತೇತ ಕ್ರಿಯಾಂ ಶಿಷ್ಟವದಾಚರೇತ್ ।**
**ಅಸಂಕ್ಲೇಶೇನ ಲೋಕಸ್ಯ ವೃತ್ತಿಂ ಲಿಪ್ಸೇತ ವೈ ದ್ವಿಜ ॥೪೪॥**

ಸತ್ಪುರುಷರು ಆಚರಿಸುವ ಧರ್ಮವನ್ನೇ ಅನುಸರಿಸಬೇಕು. ಶಿಷ್ಟರಾದವರು ಹಾಕಿಕೊಟ್ಟಿರುವ ಮೇಲ್ಪಂಕ್ತಿಯಲ್ಲಿ ನಡೆಯಬೇಕು. ಯಾವ ವಿಧವಾದ ಮಾನಸಿಕಕ್ಲೇಶವನ್ನೂ ಇಟ್ಟುಕೊಳ್ಳದೇ ಪೃಥ್ವಿಯಲ್ಲಿ ಹುಟ್ಟಿದ ಮಾನವನು ತನ್ನ ವೃತ್ತಿಯಲ್ಲಿ ತಾನಿರಬೇಕು. ತನ್ನ ವರ್ಣಕ್ಕೆ ಸಂಬಂಧಿಸಿದ ವೃತ್ತಿಯು ಕುತ್ಸಿತವಾದುದೇ, ಶ್ರೇಷ್ಠವಾದುದೇ–ಎಂದು ಯೋಚಿಸುತ್ತಾ ಕುತ್ಸಿತವಾದುದೆಂಬ ಕಾರಣದಿಂದ ಮನಸ್ಸಿಗೆ ಕ್ಲೇಶವನ್ನು ತಂದುಕೊಳ್ಳ ಕೂಡದು. ಮಾನವನು ಸ್ವಧರ್ಮೋಕ್ತವಾದ ಕಾರ್ಯವನ್ನೇ ಮಾಡಬೇಕು. ಲೋಕಕ್ಕೆ ಕ್ಲೇಶವುಂಟುಮಾಡದ ವೃತ್ತಿಯನ್ನು ಬಯಸಬೇಕು.

**ಸನ್ತಿ ಹ್ಯಾಗಮವಿಜ್ಞಾನಾಃ ಶಿಷ್ಟಾಃ ಶಾಸ್ತ್ರೇ ವಿಚಕ್ಷಣಾಃ ।**
**ಸ್ವಧರ್ಮೇಣ ಕ್ರಿಯಾ ಲೋಕೇ ಕರ್ಮಣಃ ಸೋಽಪ್ಯಸಂಕರಃ ॥೪೫॥**

ಅನೇಕ ಶಾಸ್ತ್ರಗಳಲ್ಲಿ ಪಾಂಡಿತ್ಯ ಪಡೆದಿರುವ, ವೇದ-ವೇದಾಂಗಗಳನ್ನು ಪೂರ್ಣವಾಗಿ ಅಧ್ಯಯನಮಾಡಿರುವ ಅನೇಕ ಶಿಷ್ಟರಿದ್ದಾರೆ. ಅವರ ಉಪದೇಶದಂತೆ ಅಥವಾ ಅನುಶಾಸನದಂತೆ ಸ್ವಧರ್ಮೋಚಿತವಾದ ಕರ್ಮಗಳನ್ನು ಮಾಡಬೇಕು ಮತ್ತು ಕರ್ಮಸಂಕರಕ್ಕೆ ಎಡೆಗೊಡಬಾರದು.

**ಪ್ರಾಜ್ಞೋ ಧರ್ಮೇಣ ರಮತೇ ಧರ್ಮಂ ಚೈವೋಪಜೀವತಿ ।**
**ತಸ್ಮಾದ್ಧರ್ಮಾದವಾಪ್ತೇನ ಧನೇನ ದ್ವಿಜಸತ್ತಮ ।**
**ತಸ್ಯೈವ ಸಿಂಚತೇ ಮೂಲಂ ಗುಣಾನ್ಪಶ್ಯತಿ ತತ್ರ ವೈ ॥೪೬॥**

ಪ್ರಾಜ್ಞನಾದ ಶಿಷ್ಟನು ಧರ್ಮಮಾರ್ಗದಲ್ಲಿರುವುದರಿಂದಲೇ ಆನಂದ ಪಡುತ್ತಾನೆ. (ಧರ್ಮಮಾರ್ಗಾನುಸರಣೆಯಿಂದ ಅನೇಕಕಷ್ಟಗಳು ಪ್ರಾಪ್ತವಾದರೂ ಅವನು ದುಃಖಿಸುವುದಿಲ್ಲ. ಕಷ್ಟದಲ್ಲಿಯೂ ಸಹ ಅವನಿಗೆ ಮಾನಸಿಕ ಸಮಾಧಾನವಿರುತ್ತದೆ.) ಅವನು ಧರ್ಮದಿಂದಲೇ ತನ್ನ ಜೀವನವನ್ನು ನಡೆಸುತ್ತಿರುತ್ತಾನೆ. ಧಾರ್ಮಿಕವಾದ ತನ್ನ ವೃತ್ತಿಯಿಂದಲೇ ಅವನು ತನ್ನ ಜೀವನವನ್ನೂ ನಡೆಸುತ್ತಾನೆ. ಧಾರ್ಮಿಕವಾದ ವ್ಯವಹಾರದಿಂದ

ಧನಾರ್ಜನೆಮಾಡಿ ಅದೇ ಧರ್ಮದಿಂದಲೇ ಧರ್ಮಕಾರ್ಯಗಳನ್ನೂ ಮಾಡು ತ್ತಾನೆ. ಆದುದರಿಂದ ಅವನು ಮಾಡುವ ಪ್ರತಿಯೊಂದು ಕರ್ಮದಲ್ಲಿಯೂ ಧರ್ಮವೇ ಪ್ರಧಾನಭೂತವಾಗಿರುತ್ತದೆ.

**ಧರ್ಮಾತ್ಮಾ ಭವತಿ ಹ್ಯೇವಂ ಚಿತ್ತಂ ಚಾಸ್ಯ ಪ್ರಸೀದತಿ ।**
**ಸ ಮಿತ್ರಜನಸಂತುಷ್ಟ ಇಹ ಪ್ರೇತ್ಯ ಚ ನನ್ದತಿ ॥೪೭॥**

ಬ್ರಾಹ್ಮಣೋತ್ತಮ! ನಾನು ಹಿಂದೆ ಹೇಳಿದಂತೆ ಧರ್ಮಾತ್ಮನಾದವನಿಗೆ ಸುಖ-ದುಃಖಗಳೆರಡರಲ್ಲಿಯೂ ಮನಸ್ಸು ಪ್ರಸನ್ನವಾಗಿಯೇ ಇರುತ್ತದೆ. ಧರ್ಮಾತ್ಮನಾದವನು ತನಗೆ ಸೇರಿದ ಮತ್ತು ತನ್ನ ಆಶ್ರಿತರಾದ ಬಂಧು-ಮಿತ್ರ ರೊಡನೆ ಇಹದಲ್ಲಿಯೂ ಸಂತೋಷದಿಂದಿರುತ್ತಾ, ದೇಹತ್ಯಾಗಾನಂತರದಲ್ಲಿ ಉತ್ತಮಲೋಕವನ್ನೂ ಪಡೆದು ಅಲ್ಲಿಯೂ ಸುಖಿಯಾಗಿರುತ್ತಾನೆ.

**ಶಬ್ದಂ ಸ್ಪರ್ಶಂ ತಥಾ ರೂಪಂ ಗನ್ಧಾನಿಷ್ಟಾಂಶ್ಚ ಸತ್ತಮ ।**
**ಪ್ರಭುತ್ವಂ ಲಭತೇ ಚಾಪಿ ಧರ್ಮಸ್ಯೈತತ್ಫಲಂ ವಿದುಃ ॥೪೮॥**

ಶಬ್ದ-ಸ್ಪರ್ಶ-ರೂಪ-ರಸ-ಗಂಧಾದಿಗಳನ್ನೂ, ಇಷ್ಟವಸ್ತುಗಳನ್ನೂ ಪಡೆಯುತ್ತಾನೆ ಮತ್ತು ಅವುಗಳ ಮೇಲೆ ಪ್ರಭುತ್ವವನ್ನೂ ಪಡೆಯುತ್ತಾನೆ. (ಅರ್ಥಾತ್ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಎಂತಹ ಮನುಷ್ಯನ ಮನ ಸ್ಸನ್ನೂ ಸಹ ಆಯಾ ಕರಣಗಳ ಎಂದರೆ ಕಿವಿ-ಚರ್ಮ-ಕಣ್ಣು-ನಾಲಿಗೆ-ಮೂಗು ಇವುಗಳ ಮೂಲಕವಾಗಿ ಆಕರ್ಷಿಸಿಬಿಡುತ್ತವೆ. ಅವುಗಳ ಮೇಲೆ ಪ್ರಭುತ್ವ ವೆಂದರೆ ಅವುಗಳನ್ನು ನಿರೋಧಿಸುವುದು ; ಅವುಗಳಿಗೆ ಆಕರ್ಷಿತನಾಗದೇ ಇರುವುದು.) ಇಂತಹ ಪ್ರಭುತ್ವವು ಲಭಿಸಬೇಕಾದರೆ ಇದು ಧರ್ಮದ ಫಲ ವೆಂದು ಹಿರಿಯರು ಹೇಳುತ್ತಾರೆ.

**ಧರ್ಮಸ್ಯ ಚ ಫಲಂ ಲಬ್ಧ್ವಾ ನ ತೃಪ್ಯತಿ ಮಹಾದ್ವಿಜ ।**
**ಅತೃಪ್ಯಮಾಣೋ ನಿರ್ವೇದಮಾಪೇದೇ ಜ್ಞಾನಚಕ್ಷುಷಾ ॥೪೯॥**

ಧರ್ಮಾಚರಣೆಯಿಂದ ಪ್ರಾಪ್ತವಾಗುವ ಕೇವಲ ಪ್ರಾಪಂಚಿಕವಾದ ಸುಖದಿಂದ ಅವನೆಂದಿಗೂ ತೃಪ್ತನಾಗುವುದಿಲ್ಲ. ಜ್ಞಾನದ ಮೂಲಕವಾಗಿ ಅವನು ಇದಕ್ಕಿಂತಲೂ ಹೆಚ್ಚಿನ ಮತ್ತು ಶಾಶ್ವತವಾದ ಸುಖವೊಂದಿದೆಯೆಂಬು ದನ್ನು ಕಂಡುಕೊಂಡು ಪ್ರಾಪಂಚಿಕಸುಖದಲ್ಲಿಯೇ ಆಸಕ್ತನಾಗದೇ ವೈರಾಗ್ಯ ವನ್ನು ಹೊಂದುತ್ತಾನೆ.

**ಪ್ರಜ್ಞಾಚಕ್ಷುರ್ನರ ಇಹ ದೋಷಂ ನೈವಾನುರುಧ್ಯತೇ ।**
**ವಿರಜ್ಯತಿ ಯಥಾಕಾಮಂ ನ ಚ ಧರ್ಮಂ ವಿಮುಞ್ಚತಿ ॥೫೦॥**

**ಸರ್ವತ್ಯಾಗೇ ಚ ಯತತೇ ದೃಷ್ಟ್ವಾ ಲೋಕಂ ಕ್ಷಯಾತ್ಮಕಮ್ ।**
**ತತೋ ಮೋಕ್ಷೇ ಪ್ರಯತತೇ ನಾನುಪಾಯಾದುಪಾಯತಃ ॥೫೧॥**

ಯಾವುದಕ್ಕೂ ಅಂಟಿಕೊಳ್ಳದೇ ಸ್ವೇಚ್ಛೆಯಿಂದಿರಬೇಕೆಂದು ಅವನ ಮನಸ್ಸು ತವಕಿಸುತ್ತಿರುತ್ತದೆ. ಆದರೂ ಪ್ರಪಂಚಕ್ಕೆ ಆದರ್ಶವನ್ನು ತೋರಲು ಜ್ಞಾನಿಯಾದವನು ಧರ್ಮಮಾರ್ಗದಿಂದ ವಿರಕ್ತನಾಗುವುದಿಲ್ಲ. ಲೋಕ ಮತ್ತು ಲೌಕಿಕ ಸುಖ ; ಪರಲೋಕ ಮತ್ತು ಪರಲೋಕಸುಖ–ಇವುಗಳೆರಡೂ ಕ್ಷಯಿಸತಕ್ಕುವುಗಳೆಂಬುದನ್ನು ಮನಗಂಡು ಆ ಎರಡು ಸುಖಗಳನ್ನೂ ತ್ಯಾಗ ಮಾಡಲು ಯತ್ನಿಸುತ್ತಾನೆ. (ಅರ್ಥಾತ್ ಮೋಕ್ಷಮಾರ್ಗದ ಸಾಧಕನಾಗಿರುತ್ತಾನೆ.) ಮೋಕ್ಷ ಅಥವಾ ಆತ್ಮಸಾಕ್ಷಾತ್ಕಾರವು ಅದೃಷ್ಟಾಯತ್ತವಾಗಿ ಪ್ರಾಪ್ತವಾಗುವುದೆಂದು ಅವನು ಪ್ರಯತ್ನಮಾಡದೇ ಇರುವುದಿಲ್ಲ. (ಅನೇಕ ಜನ್ಮಗಳ ತಪಃಫಲದಿಂದ ಒಂದು ಜನ್ಮದಲ್ಲಿ ಆತ್ಮಸಾಕ್ಷಾತ್ಕಾರವು ಸದ್ಗುರುವಿನ ಅನುಗ್ರಹದಿಂದ ಅದೃಷ್ಟಾಯತ್ತವಾಗಿ ಸಿಕ್ಕುವುದಾದರೂ ಆತ್ಮದರ್ಶನಕ್ಕಾಗಿ ಶ್ರಮಿಸುತ್ತಲೇ ಇರಬೇಕಾಗುವುದು.) ಆತ್ಮಸಾಕ್ಷಾತ್ಕಾರಕ್ಕಾಗಿಯೇ ಸತತವಾಗಿ ಪ್ರಯತ್ನಿಸುವ ಅವನು ಪ್ರಾಪಂಚಿಕವ್ಯವಹಾರಗಳನ್ನು ಸಂಪೂರ್ಣವಾಗಿ ತಾತ್ಸಾರಮಾಡುತ್ತಾನೆ. ಆತ್ಮಜ್ಞಾನದ ಸಾಧಕನಿಗೆ ಮನಸ್ಸಿನಲ್ಲಿಯೂ ಸಹ ಪಾಪಕಾರ್ಯವನ್ನು ಮಾಡುವ ಆಶಯವು ಮೂಡುವುದಿಲ್ಲ. ಆದುದರಿಂದ ಬ್ರಾಹ್ಮಣೋತ್ತಮ! ಧಾರ್ಮಿಕನಾಗಿರುವವನು ಧಾರ್ಮಿಕಕರ್ಮಮೂಲಕವಾದ ಸಂಸ್ಕಾರದಿಂದ ಮೋಕ್ಷಮಾರ್ಗವನ್ನು ಸಾಧಿಸಬಲ್ಲನು.

**ತಪೋ ನಿಃಶ್ರೇಯಸಂ ಜನ್ತೋಸ್ತಸ್ಯ ಮೂಲಂ ಶಮೋ ದಮಃ ।**
**ತೇನ ಸರ್ವಾನವಾಪ್ನೋತಿ ಕಾಮಾನ್ಯಾನ್ಮನಸೇಚ್ಛತಿ ॥೫೨॥**

ಮಾನವನ ಶ್ರೇಯಸ್ಸಿಗೆ ತಪಸ್ಸು ಮುಖ್ಯಸಾಧನವಾಗುತ್ತದೆ. ತಪಸ್ಸಿಗೆ ಶಾಂತತೆಯಿಂದಿರುವುದು ಮತ್ತು ಜಿತೇಂದ್ರಿಯತೆ–ಈ ಎರಡು ಗುಣಗಳು ಮುಖ್ಯವಾಗಿರಬೇಕು. ಕಾಮ್ಯಕರ್ಮಗಳಿಂದ ಪ್ರಪಂಚದ ಅಪೇಕ್ಷಿತವಾದ

ಯಾವ ವಿಧವಾದ ಸುಖೋಪಭೋಗಗಳನ್ನು ಬೇಕಾದರೂ ಪಡೆಯಬಹುದು. (ಆದರೆ ಇಹ-ಪರ ಸುಖಗಳೆರಡೂ ಕ್ಷಯಿಸತಕ್ಕುವುಗಳು. ಕಾಮ್ಯತಪಸ್ಸಿನಿಂದ ಶಾಶ್ವತಸುಖವನ್ನೂ, ಶಾಶ್ವತವಾದ ಬ್ರಹ್ಮಾನಂದವನ್ನೂ ಅನುಭವಿಸುವ ಸಾಧ್ಯತೆಯಿಲ್ಲ.) ಎಲ್ಲ ಸುಖಗಳಿಗಿಂತಲೂ ಪರಮಶ್ರೇಷ್ಠವಾದ ಬ್ರಹ್ಮಾನಂದ ವನ್ನು ಪಡೆಯಬೇಕಾದರೆ, ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಬೇಕಾದರೆ :

**ಇನ್ದ್ರಿಯಾಣಾಂ ನಿರೋಧೇನ ಸತ್ಯೇನ ಚ ದಮೇನ ಚ ।**
**ಬ್ರಹ್ಮಣಃ ಪದಮಾಪ್ನೋತಿ ಯತ್ಪರಂ ದ್ವಿಜಸತ್ತಮ ॥೫೪॥**

ಇಂದ್ರಿಯಗಳನ್ನು (ಇಂದ್ರಿಯಚಾಪಲ್ಯವನ್ನು) ತಡೆಯುವು ದರಿಂದಲೂ, ಸತ್ಯನಿಷ್ಠೆಯಿಂದಲೂ, ಜಿತೇಂದ್ರಿಯತೆಯಿಂದಲೂ ಬ್ರಹ್ಮಸಾಕ್ಷಾ ತ್ಕಾರವನ್ನು ಪಡೆಯಬಹುದು.

ಯುಧಿಷ್ಠಿರ! ಧರ್ಮವ್ಯಾಧನ ಮಾತುಗಳನ್ನು ಕೇಳಿ ಕೌಶಿಕನು ಪುನಃ ಧರ್ಮವ್ಯಾಧನನ್ನು ಪ್ರಶ್ನಿಸಿದನು :

**ಇನ್ದ್ರಿಯಾಣಿ ತು ಯಾನ್ಯಾಹುಃ ಕಾನಿ ತಾನಿ ಯತವ್ರತ ।**
**ನಿಗ್ರಹಶ್ಚ ಕಥಂ ಕಾರ್ಯೋ ನಿಗ್ರಹಸ್ಯ ಚ ಕಿಂ ಫಲಮ್ ॥೫೫॥**

"ಸತ್ಯವ್ರತನೇ! ಇಂದ್ರಿಯಗಳು ಮತ್ತು ಅವುಗಳ ನಿರೋಧ–ಎಂದು ಹೇಳಿದೆಯಲ್ಲವೇ? ಇಂದ್ರಿಯಗಳೆಂದರೆ ಯಾವುವು? ಅವುಗಳ ನಿರೋಧ ಅಥವಾ ನಿಗ್ರಹವೆಂಬುದು ಹೇಗೆ? ಹೀಗೆ ನಿಗ್ರಹಮಾಡುವುದರಿಂದ ಪ್ರಾಪ್ತ ವಾಗುವ ಫಲವಾದರೂ ಏನು? ಇಂದ್ರಿಯನಿಗ್ರಹವನ್ನು ಮಾಡಿದವನು ಈ ಫಲಗಳನ್ನು ಹೇಗೆ ಪಡೆಯುತ್ತಾನೆ?–ಈ ವಿಷಯಗಳೆಲ್ಲವನ್ನೂ ತತ್ತ್ವತಃ ತಿಳಿದುಕೊಳ್ಳಬೇಕೆಂಬ ಆಶೆಯಿದೆ. ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ದಯಮಾಡಿ ನನಗೆ ಈ ಧರ್ಮರಹಸ್ಯವನ್ನು ಉಪದೇಶಿಸು."

ಎ೦೯ನೆಯ ಅಧ್ಯಾಯವು ಮುಗಿಯಿತು.

೨೧೦ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಧರ್ಮವ್ಯಾಧನಿಂದ ಅಧ್ಯಾತ್ಮಬೋಧೆ

ಮಾರ್ಕಂಡೇಯರು ಯುಧಿಷ್ಠಿರನನ್ನು ಕುರಿತು ಹೇಳುತ್ತಾರೆ :

ಯುಧಿಷ್ಠಿರ! ಕೌಶಿಕನು ಧರ್ಮವ್ಯಾಧನನ್ನು ಹೀಗೆಂದು ಪ್ರಶ್ನಿಸಲಾಗಿ ಧರ್ಮವ್ಯಾಧನು ನಸುನಗುತ್ತಾ ಉತ್ತರಿಸಿದನು :

**ವಿಜ್ಞಾನಾರ್ಥಂ ಮನುಷ್ಯಾಣಾಂ ಮನಃ ಪೂರ್ವಂ ಪ್ರವರ್ತತೇ ।**
**ತತ್ಪ್ರಾಪ್ಯ ಕಾಮಂ ಭಜತೇ ಕ್ರೋಧಂ ಚ ದ್ವಿಜಸತ್ತಮ ॥೨॥**

"ಬ್ರಾಹ್ಮಣೋತ್ತಮ! ವ್ಯಾವಹಾರಿಕಜ್ಞಾನವನ್ನು ಪಡೆಯಲು ಮಾನವನ ಮನಸ್ಸು ಮೊದಲು ತೊಡಗುತ್ತದೆ. ವ್ಯಾವಹಾರಿಕಜ್ಞಾನವು ಉಂಟಾದನಂತರ ಪ್ರಪಂಚದಲ್ಲಿರುವ ವಸ್ತುಗಳ ಅಪೇಕ್ಷೆಯು ಮನಸ್ಸಿಗೆ ಸ್ವಾಭಾವಿಕವಾಗಿಯೇ ಉಂಟಾಗುತ್ತದೆ. ಕಾಮ ಮತ್ತು ಕ್ರೋಧಗಳೆರಡೂ ಯಾವಾಗಲೂ ಜೊತೆಯಲ್ಲಿಯೇ ಸೇರಿರುತ್ತವೆ. ಮಾನವನ ಮನಸ್ಸಿನಲ್ಲಿ ಕಾಮಕ್ಕೆ ಅವಕಾಶವು ಸಿಕ್ಕಿದೊಡನೆಯೇ ಕ್ರೋಧವೂ ಸಹ ಅವನ ಮನಸ್ಸಿನೊಳಗೆ ನುಸುಳಿಕೊಳ್ಳುತ್ತದೆ.

**ತತಸ್ತದರ್ಥಂ ಯತತೇ ಕರ್ಮ ಚಾರಭತೇ ಮಹತ್ ।**
**ಇಷ್ಟಾನಾಂ ರೂಪಗನ್ಧಾನಾಮಭ್ಯಾಸಂ ಚ ನಿಷೇವತೇ ॥೩॥**
**ತತೋ ರಾಗಃ ಪ್ರಭವತಿ ದ್ವೇಷಶ್ಚ ತದನನ್ತರಮ್ ।**
**ತತೋ ಲೋಭಃ ಪ್ರಭವತಿ ಮೋಹಶ್ಚ ತದನನ್ತರಮ್ ॥೪॥**

ಇಚ್ಛೆಯೆಂಬುದು ಮಾನವನ ಮನಸ್ಸನ್ನು ಪ್ರವೇಶಿಸಿದೊಡನೆಯೇ ಇಚ್ಛಾವಿಷಯವಾದ ವಸ್ತುವನ್ನು ಪಡೆಯಲು ಮಾನವನು ಸತತವಾಗಿ ಪ್ರಯತ್ನಿಸುತ್ತಾನೆ. ಮನಸ್ಸಿನ ಹಿನ್ನೆಲೆಯಲ್ಲಿ ಕಣ್ಣು, ಕಿವಿ, ನಾಲಿಗೆ, ಮೂಗು ಮತ್ತು ಚರ್ಮಗಳೆಂಬ ಪಂಚೇಂದ್ರಿಯಗಳು ಐದು ವಿಧವಾದ ಕಾಮನೆಗಳನ್ನು ಅಪೇಕ್ಷಿಸುತ್ತಿರುತ್ತವೆ. ಸತತಪ್ರಯತ್ನದಿಂದಾಗಿ ಆ ಇಂದ್ರಿಯಗಳಿಂದ ರೂಪ, ರಸ, ಗಂಧ, ಆಘ್ರಾಣ, ಸ್ಪರ್ಶಗಳೆಂಬ ಐದು ವಿಧವಾದ ಸುಖಗಳನ್ನೂ ಮನುಷ್ಯನು ಪಡೆಯುತ್ತಾನೆ. ಅನಂತರ ರಾಗವು (ವಿಷಯಗಳಲ್ಲಿ ಅತ್ಯಾಸಕ್ತಿ) ಉಂಟಾಗುತ್ತದೆ. ಅನಂತರ ದ್ವೇಷವೂ ಲೋಭ-ಮೋಹಗಳೂ ಉಂಟಾಗುತ್ತವೆ.

ಇದು ಉಂಟಾದೊಡನೆಯೇ ನಾನು ಹಿಂದೆ ಹೇಳಿದಂತೆ ಕ್ರೋಧವು ತಾನೇ ತಾನಾಗಿ ಹುಟ್ಟುತ್ತದೆ. (ಇಚ್ಛಿಸಿದ ವಸ್ತುಗಳು ಸಿಕ್ಕದಿರುವುದೇ ಕೋಪಕ್ಕೆ ಹೇತುವಾಗುತ್ತದೆ.) ಈ ಲೋಭದಿಂದ ಮೋಹವು ಉತ್ಪನ್ನವಾಗುತ್ತದೆ. (ಮೋಹವೆಂಬುದಕ್ಕೆ ವಿವರಣೆಯನ್ನು ಹೀಗೆ ಕೊಡಬಹು

ದಾಗಿದೆ : ಯಾವುದೊಂದು ಕಾಮ್ಯವಸ್ತುವೂ ಸಹ ಒಬ್ಬನದಾಗಿರುವುದಿಲ್ಲ. ಅದು ಶಾಶ್ವತವಾಗಿ ಒಬ್ಬನ ಬಳಿ ಉಳಿದಿರುವುದೂ ಇಲ್ಲ. ಸ್ವಲ್ಪಕಾಲ ಒಬ್ಬನ ಬಳಿಯಿದ್ದು ಕಳೆದುಹೋಗುವ ವಸ್ತುವಾಗಿರುತ್ತದೆ. ಈ ಸತ್ಯಾಂಶವನ್ನು ಮನಸ್ಸಿಗೆ ತಂದುಕೊಳ್ಳದೇ ಮಾನವನು ಕಾಮವಶನಾಗಿ, ಸಂಪಾದಿಸಿ ಲೋಭದಿಂದ ಕೂಡಿಟ್ಟ ಆಸ್ತಿಯನ್ನು ನೋಡಿ ತನ್ನದೆಂದು ಹಿರಿಹಿಗ್ಗುತ್ತಿರುತ್ತಾನೆ. ಆ ಐಶ್ವರ್ಯವು ಹುಟ್ಟುವಾಗ ಇವನದಾಗಿರಲಿಲ್ಲ. ಸಾಯುವಾಗ ಇವನ ಹಿಂದೆ ಬರುವುದಿಲ್ಲ. ಇವನ ಕಣ್ಣೆದುರಿನಲ್ಲಿಯೇ ಎಷ್ಟೋ ಆಸ್ತಿಗಳು ಕಳೆದುಹೋಗಲೂಬಹುದು. ಹೀಗಿದ್ದರೂ ಸಹ ಇವನಿಗೆ 'ನನ್ನದು, ನನ್ನ ಆಸ್ತಿ' ಎಂಬ ಭಾವನೆಯು ಅಥವಾ ಭ್ರಾಂತಿಯು ಮಾತ್ರ ಹೋಗುವುದಿಲ್ಲ. ಇದಕ್ಕೆ ಮೋಹವೆಂದು ಹೆಸರು.)

ವಿಷಯಗಳ ವಾಸನೆಯಿಂದಾಗಿ ರಾಗದ ಉತ್ಪತ್ತಿಯಾಗುತ್ತದೆ.

**ತತೋ ಲೋಭಾಭಿಭೂತಸ್ಯ ರಾಗದ್ವೇಷಹತಸ್ಯ ಚ ।**
**ನ ಧರ್ಮೇ ಜಾಯತೇ ಬುದ್ಧಿರ್ವ್ಯಾಜಾದ್ಧರ್ಮಂ ಕರೋತಿ ಚ ॥೫॥**

ಲೋಭಿಯಾದ, ರಾಗ-ದ್ವೇಷಾದಿಗಳಿಂದ ಕೂಡಿದ ಮನುಷ್ಯನಿಗೆ ಧರ್ಮಕಾರ್ಯಮಾಡಲು ಖಂಡಿತವಾಗಿಯೂ ಮನಸ್ಸು ಬರುವುದಿಲ್ಲ. ಒಂದು ವೇಳೆ ಧರ್ಮಕಾರ್ಯಮಾಡಬೇಕಾಗಿ ಬಂದರೂ ಸಹ ನೆಪಮಾತ್ರಕ್ಕೆ ಮಾಡುತ್ತಾನೆ.

**ವ್ಯಾಜೇನ ಚರತೇ ಧರ್ಮಮರ್ಥಂ ವ್ಯಾಜೇನ ರೋಚತೇ ।**
**ವ್ಯಾಜೇನ ಸಿಧ್ಯಮಾನೇಷು ಧನೇಷು ದ್ವಿಜಸತ್ತಮ ।**
**ತತ್ರೈವ ರಮತೇ ಬುದ್ಧಿಸ್ತತಃ ಪಾಪಂ ಚಿಕೀರ್ಷತಿ ॥೬॥**

ಧರ್ಮಕಾರ್ಯಗಳನ್ನೂ ಸಹ ಇತರರನ್ನು ಮೋಸಗೊಳಿಸುವ ಸಲುವಾಗಿಯೇ ಮಾಡುತ್ತಿರುತ್ತಾನೆ. ತೋರಿಕೆಯ ಧಾರ್ಮಿಕಕಾರ್ಯಗಳಿಂದಲೇ ಅರ್ಥಸಂಚಯವನ್ನು ಮಾಡುತ್ತಿರುತ್ತಾನೆ. ಕೌಟಿಲ್ಯದಿಂದ–ಮೋಸದಿಂದ ಧನಾರ್ಜನೆಮಾಡಲು ಹೊರಟವನಿಗೆ ಯಾವಾಗಲೂ ಮನಸ್ಸು ಅದರಲ್ಲಿಯೇ ಲೀನವಾಗಿರುತ್ತದೆ. ಕಷ್ಟಪಡದೇ ಮೋಸದಿಂದ ಹೆಚ್ಚು ಧನವನ್ನು ಸಂಗ್ರಹಿಸುವ ಸಾಧ್ಯತೆಯಿರುವುದರಿಂದ ಅವನ ಮನಸ್ಸು ಮತ್ತಷ್ಟು ಪಾಪಕರ್ಮಗಳ ಕಡೆಗೇ ವಾಲುತ್ತಿರುತ್ತದೆ.

**ಸುಹೃದ್ಭಿರ್ವಾರ್ಯಮಾಣಶ್ಚ ಪಣ್ಡಿತೈಶ್ಚ ದ್ವಿಜೋತ್ತಮ ।**
**ಉತ್ತರಂ ಶ್ರುತಿಸಮ್ಬದ್ಧಂ ಬ್ರವೀತ್ಯಶ್ರುತಿಯೋಜಿತಮ್ ॥೭॥**

ಇಂತಹವರ ಅಧರ್ಮವರ್ತನೆಯನ್ನು ನೋಡಿ ಇವರ ಸ್ನೇಹಿತರಾಗಲೀ, ಇವರ ಸಂಬಂಧಿಗಳಾಗಲೀ, ಪಂಡಿತರಾಗಲೀ ಹೀಗೆ ಮಾಡುವುದು ಅಧರ್ಮವೆಂದು ತಿಳಿವಳಿಕೆ ಕೊಡಲು ಹೋದರೆ ಚತುರೋಕ್ತಿಗಳಿಂದ ಅವರ ಬಾಯಿಗಳನ್ನು ಮುಚ್ಚಿಸಿಬಿಡುತ್ತಾರೆ. ಇವರ ಉತ್ತರವು ತರ್ಕಶುದ್ಧವಾಗಿಯೇ ಇರುತ್ತದೆ. ವೇದಪ್ರಾಮಾಣ್ಯದಿಂದಲೇ ಮಾತನಾಡುತ್ತಿರುವರೋ ಎಂಬ ಭ್ರಾಂತಿಯೂ ಉಂಟಾಗುತ್ತದೆ. ಆದರೆ ಇವರ ಉತ್ತರಕ್ಕೂ–ಇವರ ನಡವಳಿಕೆಗೂ ಸಂಬಂಧವೇ ಇರುವುದಿಲ್ಲ. ಪ್ರತಿನಿಮಿಷದಲ್ಲಿಯೂ ಸತ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಿರುತ್ತಾರೆ. ಮೋಸದಿಂದ ಮಾಡಿದ ಸಂಪಾದನೆಯನ್ನು ಅದೃಷ್ಟಾಯತ್ತವೆನ್ನುತ್ತಾರೆ. ತಾವು ಒಬ್ಬರಿಗೆ ತೊಂದರೆಕೊಟ್ಟರೂ 'ಅದು ಅವನ ಪ್ರಾರಬ್ಧಕರ್ಮ'ವೆನ್ನುತ್ತಾರೆ. ಮತ್ತೆ ಕೆಲವರು 'ಧರ್ಮ' ಮಾರ್ಗವನ್ನೇ ಅನುಸರಿಸುತ್ತಾ ಹೋದರೆ ಈ ಪ್ರಪಂಚದಲ್ಲಿ ಜೀವಿಸಿರಲೇ ಸಾಧ್ಯವಿಲ್ಲ' ಎನ್ನುತ್ತಾರೆ. ಆದುದರಿಂದ ಅಧರ್ಮಮಾರ್ಗದಲ್ಲಿ ಪ್ರವೃತ್ತರಾಗಿರುವವರನ್ನು ಧರ್ಮಮಾರ್ಗಕ್ಕೆ ತಿರುಗಿಸುವುದು ಬಹಳ ಕಷ್ಟವೇ ಸರಿ.

**ಅಧರ್ಮಸ್ತ್ರಿವಿಧಸ್ತಸ್ಯ ವರ್ತತೇ ರಾಗದೋಷಜಃ ।**
**ಪಾಪಂ ಚಿನ್ತಯತೇ ಚೈವ ಬ್ರವೀತಿ ಚ ಕರೋತಿ ಚ ॥೮॥**

**ತಸ್ಯಾಧರ್ಮಪ್ರವೃತ್ತಸ್ಯ ಗುಣಾ ನಶ್ಯನ್ತಿ ಸಾಧವಃ ॥೯॥**

ರಾಗದೋಷದಿಂದ ಉಂಟಾಗುವ ಈ ಅಧರ್ಮವು ಮಾನಸಿಕ, ವಾಚಿಕ ಮತ್ತು ಕಾಯಿಕಗಳೆಂದು ಮೂರು ವಿಧಗಳಾಗಿರುತ್ತವೆ. ಪಾಪಕರ್ಮಮಾಡಲು ಮೊದಲು ಯೋಚಿಸುವುದು ; ಅನಂತರ ತನ್ನ ಉದ್ದೇಶವನ್ನು ಅಧರ್ಮಕಾರ್ಯಕ್ಕೆ ಅನುಮೋದಿಸುವವರೊಡನೆ ಹೇಳುವುದು ; ಮೂರನೆಯದಾಗಿ ಪಾಪಕರ್ಮವನ್ನು ಕಾರ್ಯರೂಪಕ್ಕೆ ತರುವುದು–ಇವುಗಳೇ ಮೂರು ವಿಧಾನಗಳು. ಅಧರ್ಮಪ್ರವೃತ್ತನಾದ, ಕಾಮ-ಕ್ರೋಧಾದಿಗಳಿಂದ ಪರಿಪೂರ್ಣನಾದ ಮನುಷ್ಯನಲ್ಲಿ ಶಮ-ದಮಾದಿ ಸುಗುಣಗಳಿರುವ ಸಾಧ್ಯತೆಯೇ ಇಲ್ಲ.

**ಏಕಶೀಲೈಶ್ಚ ಮಿತ್ರತ್ವಂ ಭಜನ್ತೇ ಪಾಪಕರ್ಮಿಣಃ ।**
**ಸ ತೇನ ದುಃಖಮಾಪ್ನೋತಿ ಪರತ್ರ ಚ ವಿಪದ್ಯತೇ ॥೧೦॥**

ಪಾಪಾತ್ಮರು ಯಾವಾಗಲೂ ಪಾಪಕರ್ಮಿಗಳೊಡನೆಯೇ ಮಿತ್ರತ್ವವನ್ನು ಬೆಳೆಸುತ್ತಾರೆ. ಪಾಪಕರ್ಮಿಯು 'ತಾನು ಮಾಡಿದ ಕಾರ್ಯಗಳೇ ಸರಿ' ಎಂದು ತನ್ನ ಬಂಧುಗಳೊಡನೆ ಹೇಳಿಕೊಂಡರೂ, ತಾತ್ಕಾಲಿಕವಾಗಿ ಅವನು ಪಾಪಕರ್ಮ ಗಳ ಮೂಲಕವಾಗಿ ಹೇರಳವಾದ ಧನಸಂಪಾದನೆಯನ್ನು ಮಾಡಿದರೂ ಕಟ್ಟ ಕಡೆಗೆ ಅವನು ಮಹಾದುಃಖವನ್ನೇ ಅನುಭವಿಸುತ್ತಾನೆ. ಅವನಿಗೆ ಪರಲೋಕ ವೆಂಬುದಂತೂ ಇಲ್ಲವೇ ಇಲ್ಲ. ಈ ಜನ್ಮದಲ್ಲಿ ಮಾಡಿದ ಕುತ್ಸಿತಕರ್ಮದ ಫಲವಾಗಿ ಮುಂದೆ ಅವನಿಗೆ ಮನುಷ್ಯಜನ್ಮವೂ ಸಹ ದುರ್ಲಭವೇ ಸರಿ.

ಬ್ರಾಹ್ಮಣೋತ್ತಮ! ಈ ರೀತಿಯಲ್ಲಿ ಮಾನವನು ಪಾಪಾತ್ಮನಾಗುತ್ತಾನೆ. 'ಮಾನವನು ಧಾರ್ಮಿಕನು ಹೇಗಾಗಬಲ್ಲನು? ಮತ್ತು ಧಾರ್ಮಿಕನ ಸ್ವಭಾವಗಳೇನು?' ಎಂಬುದನ್ನು ಹೇಳುವೆನು, ಕೇಳು :

**ಯಸ್ತ್ವೇತಾನ್ಪ್ರಜ್ಞಯಾ ದೋಷಾನ್ಪೂರ್ವಮೇವಾನುಪಶ್ಯತಿ ॥೧೧॥**
**ಕುಶಲಃ ಸುಖದುಃಖೇಷು ಸಾಧೂಂಶ್ಚಾಪ್ಯುಪಸೇವತೇ ।**
**ತಸ್ಯ ಸಾಧುಸಮಾರಮ್ಭಾದ್ಬುದ್ಧಿರ್ಧರ್ಮೇಷು ರಾಜತೇ ॥೧೨॥**

ಯಾವನು ಮೊದಲೇ ಮೇಲೆ ಹೇಳಿದ ಈ ರಾಗಾದಿ ದೋಷಗಳನ್ನು ಸಂಪೂರ್ಣವಾಗಿ ವಿವೇಚನೆಮಾಡಿರುತ್ತಾನೆಯೋ, ನಿಜವಾದ ಸುಖವು ಯಾವುದು ಮತ್ತು ದುಃಖವು ಯಾವುದು ಎಂಬುದನ್ನು ಸ್ಪಷ್ಟವಾಗಿ ತಿಳಿದಿರು ತ್ತಾನೆಯೋ, ಸಾಧು-ಸತ್ಪುರುಷರ ಸೇವೆಯನ್ನು ಮಾಡುತ್ತಾ ಅವರ ಬೋಧನೆ ಗಳನ್ನು ಕಾರ್ಯರೂಪಕ್ಕೆ ತರಲು ಸತತವಾಗಿ ಪ್ರಯತ್ನಿಸುತ್ತಿರುತ್ತಾನೆಯೋ– ಅಂತಹವನ ಮನಸ್ಸು ಕಾಮ-ಕ್ರೋಧಾದಿಗಳಿಗೆ ವಶವಾಗದೇ ಧರ್ಮ ಕಾರ್ಯಗಳಲ್ಲಿಯೇ ವಿರಾಜಿಸುತ್ತಿರುತ್ತದೆ."

ಧರ್ಮವ್ಯಾಧನ ದಿವ್ಯಪ್ರವಚನವನ್ನು ಕೇಳಿ ಬ್ರಾಹ್ಮಣನು ಹೇಳಿದನು : "ಮಹಾನುಭಾವ! ನೀನು ಧರ್ಮದ ನಿಜಸ್ವರೂಪವನ್ನು ಬಹುಸ್ಪಷ್ಟವಾಗಿ ಹೇಳಿರುತ್ತೀಯೆ. ಸಾಮಾನ್ಯವಾಗಿ ಯಾರೂ ಹೀಗೆ ಹೇಳಲಾರರು. ನಿಶ್ಚಯ ವಾಗಿಯೂ ನಿನ್ನ ಧಾರ್ಮಿಕಬುದ್ಧಿಯು ಅನುಪಮವಾದುದು. ನಿನ್ನ ಪ್ರವಚನ ಪ್ರಭಾವವೂ ಸಹ ದಿವ್ಯವಾದುದು. ಆದುದರಿಂದ ನಾನು ನಿನ್ನನ್ನು ಸಾಕ್ಷಾತ್ ಮಹರ್ಷಿಯೆಂದೇ ಭಾವಿಸುತ್ತೇನೆ."

ವ್ಯಾಧನು ಮುಂದುವರಿದು ಹೇಳುತ್ತಾನೆ :

**ಬ್ರಾಹ್ಮಣಾ ವೈ ಮಹಾಭಾಗಾಃ ಪಿತರೋಽಗ್ರಭುಜಃ ಸದಾ ।**
**ತೇಷಾಂ ಸರ್ವಾತ್ಮನಾ ಕಾರ್ಯಂ ಪ್ರಿಯಂ ಲೋಕೇ ಮನೀಷಿಣಾ ॥೧೪॥**

“ಬ್ರಾಹ್ಮಣೋತ್ತಮ! ಬ್ರಾಹ್ಮಣರು ಮಹಾಭಾಗ್ಯವಂತರು. ಪಿತೃ ಸಮಾನರು ಮತ್ತು ಮೊದಲು ಸತ್ಕಾರಕ್ಕೆ ಅರ್ಹರು. ಬುದ್ಧಿವಂತನಾದವನು ಪ್ರಯತ್ನಪೂರ್ವಕವಾಗಿ ಬ್ರಾಹ್ಮಣರಿಗೆ ಯಾವಾಗಲೂ ಪ್ರಿಯವನ್ನೇ ಮಾಡುತ್ತಿರಬೇಕು.

**ಯತ್ತೇಷಾಂ ಚ ಪ್ರಿಯಂ ತತ್ತೇ ವಕ್ಷ್ಯಾಮಿ ದ್ವಿಜಸತ್ತಮ ।**
**ನಮಸ್ಕೃತ್ವಾ ಬ್ರಾಹ್ಮಣೇಭ್ಯೋ ಬ್ರಾಹ್ಮೀಂ ವಿದ್ಯಾಂ ನಿಬೋಧ ಮೇ ॥೧೫॥**

ಬ್ರಾಹ್ಮಣರಿಗೆ ಯಾವುದು ಪ್ರಿಯವಾಗಿರುವುದೋ ಆ ವಿಷಯವನ್ನೇ ನಾನು ನಿನಗೂ ಹೇಳುತ್ತೇನೆ. ಇದು ನನ್ನ ಕರ್ತವ್ಯ. ಬ್ರಹ್ಮವಿದ್ಯಾಪ್ರಧಾನರಾದ, ಬ್ರಹ್ಮಸ್ವರೂಪರಾದ ಬ್ರಾಹ್ಮಣರಿಗೆ ನಮಸ್ಕರಿಸಿ, ಅವರಿಗೆ ಅತಿಪ್ರಿಯವಾದ ಬ್ರಾಹ್ಮೀವಿದ್ಯೆಯನ್ನು ಹೇಳುತ್ತೇನೆ, ಕೇಳುವವನಾಗು :

**ಇದಂ ವಿಶ್ವಂ ಜಗತ್ಸರ್ವಮಜಯ್ಯಂ ಚಾಪಿ ಸರ್ವಶಃ ।**
**ಮಹಾಭೂತಾತ್ಮಕಂ ಬ್ರಹ್ಮ ನಾತಃ ಪರತರಂ ಭವೇತ್ ॥೧೬॥**

ಮಹಾಭೂತಾತ್ಮಕವೂ, ಜಯಿಸಲು (ತಿಳಿಯಲು) ಅಸದಳವೂ, ಸರ್ವ ವ್ಯಾಪಕವೂ ಆಗಿರುವ ಈ ಜಗತ್ತೂ ಸಹ ಸ್ವರೂಪತಃ ಬ್ರಹ್ಮವೇ ಆಗಿದೆ. ಜಗತ್ತು ಬ್ರಹ್ಮನಿಂದ ಬೇರೆಯದಲ್ಲ.

**ಮಹಾಭೂತಾನಿ ಖಂ ವಾಯುರಗ್ನಿರಾಪಸ್ತಥಾ ಚ ಭೂಃ ।**
**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗನ್ಧಶ್ಚ ತದ್ಗುಣಾ ॥೧೭॥**

ವಿಶ್ವದಲ್ಲಿ ಸರ್ವತ್ರ ವ್ಯಾಪ್ತವಾಗಿರುವ ಆಕಾಶ, ವಾಯು, ಅಗ್ನಿ, ನೀರು ಮತ್ತು ಭೂಮಿ–ಇವುಗಳಿಗೆ ಪಂಚಮಹಾಭೂತಗಳೆಂದು ಹೆಸರು. ಬ್ರಹ್ಮವು ಈ ಪಂಚಮಹಾಭೂತಗಳನ್ನೂ ಒಳಗೊಂಡಿರುವ ಮಹಾಭೂತವಾಗಿದೆ. ಶಬ್ದ-ಸ್ಪರ್ಶ-ರೂಪ-ರಸ-ಗಂಧ ಈ ಐದು ಪಂಚಭೂತಗಳ ಅನುಕ್ರಮವಾದ ಗುಣಗಳು.

**ತೇಷಾಮಪಿ ಗುಣಾಃ ಸರ್ವೇ ಗುಣವೃತ್ತಿಃ ಪರಸ್ಪರಮ್ ।**
**ಪೂರ್ವಪೂರ್ವಗುಣಾಃ ಸರ್ವೇ ಕ್ರಮಶೋ ಗುಣಿಷು ತ್ರಿಷು ॥೧೮॥**

ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳಿಗೂ ಸಹ ತಾರ-ಮಂದ್ರಾದಿ ಬೇರೆ ಬೇರೆಯ ಗುಣಗಳಿರುತ್ತವೆ. ಇವುಗಳಲ್ಲಿ ಒಂದರ ಗುಣದಲ್ಲಿ ಮತ್ತೊಂದರ ಗುಣವು ಪರಸ್ಪರ ಭಾಸಮಾನವಾಗುತ್ತದೆ. ಇವುಗಳಲ್ಲಿರುವ ಮೂರು ಗುಣಗಳು ಅನುಕ್ರಮವಾಗಿ ತಮ್ಮ ಹಿಂದಿನ ಮೂರು ಗುಣಗಳನ್ನು ಹೊಂದಿರುತ್ತವೆ.

**ಷಷ್ಠಸ್ತು ಚೇತನಾ ನಾಮ ಮನ ಇತ್ಯಭಿಧೀಯತೇ ।**
**ಸಪ್ತಮೀ ತು ಭವೇದ್ಬುದ್ಧಿರಹಂಕಾರಸ್ತತಃ ಪರಮ್ ॥೧೯॥**

**ಇನ್ದ್ರಿಯಾಣಿ ಚ ಪಞ್ಚಾತ್ಮಾ ರಜಃ ಸತ್ತ್ವಂ ತಮಸ್ತಥಾ ।**
**ಇತ್ಯೇಷ ಸಪ್ತದಶಕೋ ರಾಶಿರವ್ಯಕ್ತಸಂಜ್ಞಕಃ ॥೨೦॥**

ಬ್ರಾಹ್ಮಣೋತ್ತಮ! ಶಬ್ದ-ಸ್ಪರ್ಶಾದಿಗಳಲ್ಲದೇ ಬೇರೆಯ ವಿಶೇಷಗಳೂ ಇವೆ. ಪಂಚಭೂತಗಳನಂತರ ಆರನೆಯದಕ್ಕೆ 'ಚೇತನಾ' ಎಂದು ಹೆಸರು. ಇದನ್ನು 'ಮನಸ್ಸು' ಎಂದೂ ಕರೆಯುತ್ತಾರೆ. ಏಳನೆಯದು ಬುದ್ಧಿ. ಬುದ್ಧಿಯ ನಂತರದಲ್ಲಿ ಅಹಂಕಾರ. ಇವುಗಳ ಜೊತೆಗೆ ಪಂಚೇಂದ್ರಿಯಗಳು, ಆತ್ಮ ಸತ್ತ್ವ-ರಜಸ್ಸು-ತಮಸ್ಸುಗಳೆಂಬ ಮೂರು ಗುಣಗಳು–ಒಟ್ಟು ಈ ಹದಿನೇಳರ ಗುಂಪು ಅವ್ಯಕ್ತವೆಂದು ಹೇಳಲ್ಪಟ್ಟಿದೆ.

**ಸರ್ವೈರಿಹೇನ್ದ್ರಿಯಾರ್ಥೈಸ್ತು ವ್ಯಕ್ತಾವ್ಯಕ್ತೈಃ ಸುಸಂವೃತೈಃ ।**
**ಚತುರ್ವಿಂಶಕ ಇತ್ಯೇಷ ವ್ಯಕ್ತಾವ್ಯಕ್ತಮಯೋ ಗುಣಃ ॥೨೧॥**

ಐದು ಜ್ಞಾನೇಂದ್ರಿಯಗಳಿಗೂ, ಮನಸ್ಸಿಗೂ ಮತ್ತು ಬುದ್ಧಿಗೂ ಸಹ ಯಾವುವು ವ್ಯಕ್ತವಾದ ಮತ್ತು ಅವ್ಯಕ್ತವಾದ ಗುಣಗಳಾಗಿವೆಯೋ ಮತ್ತು ಯಾವುವು ಬುದ್ಧಿಯೆಂಬ ಗುಹೆಯಲ್ಲಿ ಮುಚ್ಚಿಕೊಂಡಿವೆಯೋ–ಅವುಗಳ ಸಂಖ್ಯೆ ಇಪ್ಪತ್ತುನಾಲ್ಕೆಂದು ಹೇಳಲ್ಪಟ್ಟಿದೆ.

ಈ ಅವ್ಯಕ್ತವಿಷಯಗಳನ್ನು ತಿಳಿದುಕೊಳ್ಳುವುದೇ ಬ್ರಹ್ಮತತ್ತ್ವ ಅಥವಾ ಬ್ರಾಹ್ಮೀವಿದ್ಯೆ. ಇಷ್ಟು ವಿಷಯಗಳನ್ನು ನಿನಗೆ ಹೇಳಿದ್ದೇನೆ. ಬೇರಾವ ವಿಷಯವನ್ನು ಹೇಳಲಿ?"

೨೧೦ನೆಯ ಅಧ್ಯಾಯವು ಮುಗಿಯಿತು.

# ಪಂಚಭೂತಗಳ ಗುಣವರ್ಣನೆ ಮತ್ತು ಇಂದ್ರಿಯನಿಗ್ರಹದ ಫಲ

ಮಾರ್ಕಂಡೇಯರು ಹೇಳುತ್ತಾರೆ :

"ಧರ್ಮಜ! ಹೀಗೆಂದು ಪ್ರಶ್ನಿಸಿದ ಧರ್ಮವ್ಯಾಧನನ್ನು ಕುರಿತು ಬ್ರಾಹ್ಮಣನು ಮನಸ್ಸಿಗೆ ಬಹಳ ಹಿತಕರವಾದ ಈ ಮಾತುಗಳನ್ನು ಹೇಳಿದನು :

"ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ಪಂಚಭೂತಗಳಿಗಿರುವ ಸಹಜ ಗುಣಗಳ ಜೊತೆಗೆ ಪ್ರತಿಯೊಂದು ಭೂತಕ್ಕೂ ಪ್ರತ್ಯೇಕ-ಪ್ರತ್ಯೇಕವಾದ ಗುಣ ಗಳಿವೆಯೆಂದು ಹೇಳಿದೆಯಲ್ಲವೇ? ಅವುಗಳಲ್ಲಿ ಒಂದೊಂದಕ್ಕೂ ಇರುವ ಗುಣಗಳನ್ನು ಹೇಳುವವನಾಗು. ನೀನೀಗ ಸೂತ್ರಪ್ರಾಯವಾಗಿ ಹೇಳಿದ ವಿಷಯ ಗಳೆಲ್ಲವನ್ನೂ ವಿವರವಾಗಿ ಕೇಳಿ ತಿಳಿದುಕೊಳ್ಳಬೇಕೆನ್ನುವ ಆಶಯವಿದೆ."

"ಬ್ರಾಹ್ಮಣೋತ್ತಮ!

**ಭೂಮಿರಾಪಸ್ತಥಾ ಜ್ಯೋತಿರ್ವಾಯುರಾಕಾಶಮೇವ ಚ ।**
**ಗುಣೋತ್ತರಾಣಿ ಸರ್ವಾಣಿ ತೇಷಾಂ ವಕ್ಷ್ಯಾಮಿ ತೇ ಗುಣಾನ್ ॥೩॥**

**ಭೂಮಿಃ ಪಞ್ಚಗುಣಾ ಬ್ರಹ್ಮನ್ನುದಕಂ ಚ ಚತುರ್ಗುಣಮ್ ।**
**ಗುಣಾಸ್ತ್ರಯಸ್ತೇಜಸಿ ಚ ತ್ರಯಶ್ಚಾಕಾಶವಾತಯೋಃ ॥೪॥**

ಭೂಮಿ, ನೀರು, ಅಗ್ನಿ, ವಾಯು, ಆಕಾಶ–ಇವುಗಳು ತಮ್ಮ ನೈಜಗುಣ ಗಳೊಂದಿಗೆ ತಮ್ಮ ಮುಂದಿನ ಭೂತಗಳ ಗುಣಗಳನ್ನೂ ಹೊಂದಿರುತ್ತವೆ. ಅರ್ಥಾತ್ ಭೂಮಿಯು ಪಂಚಗುಣಾತ್ಮಕವಾಗಿಯೂ, ನೀರು ಚತುರ್ಗುಣಾ ತ್ಮಕವಾಗಿಯೂ, ತೇಜಸ್ಸು ತ್ರಿಗುಣಾತ್ಮಕವಾಗಿಯೂ, ವಾಯುವು ದ್ವಿಗುಣಾ ತ್ಮಕವಾಗಿಯೂ, ಆಕಾಶವು ಏಕಗುಣಾತ್ಮಕವಾಗಿಯೂ ಇರುತ್ತದೆ.

**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗನ್ಧಶ್ಚ ಪಞ್ಚಮಃ ।**
**ಏತೇ ಗುಣಾಃ ಪಞ್ಚ ಭೂಮೇಃ ಸರ್ವೇಭ್ಯೋ ಗುಣವತ್ತರಾ ॥೫॥**

ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ಈ ಐದು ಗುಣಗಳೂ ಭೂಮಿ ಯಲ್ಲಿವೆ. ಭೂಮಿಯು ಎಲ್ಲ ಭೂತಗಳಿಗಿಂತಲೂ ಹೆಚ್ಚು ಗುಣಾತ್ಮಕವಾದುದು.

**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸಶ್ಚಾಪಿ ದ್ವಿಜೋತ್ತಮ ।**
**ಅಪಾಮೇತೇ ಗುಣಾ ಬ್ರಹ್ಮನ್ಕೀರ್ತಿತಾಸ್ತವ ಸುವ್ರತ ॥೬॥**

ಸುವ್ರತನೇ! ಶಬ್ದ-ಸ್ಪರ್ಶ-ರೂಪ-ರಸ ಈ ನಾಲ್ಕು ಗುಣಗಳು ನೀರಿಗಿರುತ್ತವೆ. ಗಂಧವು ಅಥವಾ ವಾಸನೆಯು ನೀರಿಗಿರುವುದಿಲ್ಲ.

**ಶಬ್ದಃ ಸ್ಪರ್ಶಶ್ಚ ರೂಪಂ ಚ ತೇಜಸೋಽಥ ಗುಣಾಸ್ತ್ರಯಃ ।**
**ಶಬ್ದಃ ಸ್ಪರ್ಶಶ್ಚ ವಾಯೌ ತು ಶಬ್ದಶ್ಚಾಕಾಶ ಏವ ತು ॥೭॥**

ಶಬ್ದ-ಸ್ಪರ್ಶ-ರೂಪ ಈ ಮೂರು ಗುಣಗಳು ತೇಜಸ್ಸಿಗಿರುತ್ತವೆ. ರಸವಾಗಲೀ-ಗಂಧವಾಗಲೀ ಅಗ್ನಿಗಿರುವುದಿಲ್ಲ. ಶಬ್ದ ಮತ್ತು ಸ್ಪರ್ಶಗುಣಗಳು ವಾಯುವಿಗಿರುತ್ತವೆ. ರೂಪ-ರಸ-ಗಂಧಗಳು ಗಾಳಿಗಿರುವುದಿಲ್ಲ. ಆಕಾಶದಲ್ಲಿ ಶಬ್ದವು ಮಾತ್ರವೇ ಇರುತ್ತದೆ. ಉಳಿದ ಸ್ಪರ್ಶ-ರೂಪ-ರಸ-ಗಂಧ ಈ ನಾಲ್ಕು ಗುಣಗಳೂ ಆಕಾಶಕ್ಕಿರುವುದಿಲ್ಲ.

**ಏತೇ ಪಞ್ಚದಶ ಬ್ರಹ್ಮನ್ಗುಣಾ ಭೂತೇಷು ಪಞ್ಚಸು ।**
**ವರ್ತನ್ತೇ ಸರ್ವಭೂತೇಷು ಯೇಷು ಲೋಕಾಃ ಪ್ರತಿಷ್ಠಿತಾಃ ॥೮॥**

ಭೂಮಿಗೆ ಐದು ಗುಣಗಳು, ನೀರಿಗೆ ನಾಲ್ಕು ಗುಣಗಳು, ಅಗ್ನಿಗೆ ಮೂರು ಗುಣಗಳು, ವಾಯುವಿಗೆ ಎರಡು ಗುಣಗಳು ಮತ್ತು ಆಕಾಶಕ್ಕೆ ಒಂದು ಗುಣ–ಒಟ್ಟು ಈ ಹದಿನೈದು ಗುಣಗಳು ಎಲ್ಲ ಲೋಕಗಳಿಗೂ ಆಶ್ರಯವಾಗಿರುವ ಪಂಚಭೂತಗಳಲ್ಲಿವೆ.

**ಅನ್ಯೋನ್ಯಂ ನಾತಿವರ್ತನ್ತೇ ಸಮ್ಯಕ್ಚ ಭವತಿ ದ್ವಿಜ ।**
**ಯದಾ ತು ವಿಷಮಂ ಭಾವಮಾಚರನ್ತಿ ಚರಾಚರಾಃ ॥೯॥**

**ತದಾ ದೇಹೀ ದೇಹಮನ್ಯಂ ವ್ಯತಿರೋಹತಿ ಕಾಲತಃ ।**
**ಆನುಪೂರ್ವ್ಯಾ ವಿನಶ್ಯನ್ತಿ ಜಾಯನ್ತೇ ಚಾನುಪೂರ್ವಶಃ ॥೧೦॥**

ಈ ಪಂಚಭೂತಗಳು ಒಂದಕ್ಕೊಂದು ವೈಪರೀತ್ಯದಿಂದ ಇರುವುದಿಲ್ಲ. ಒಂದು ಶರೀರದಲ್ಲಿ ಈ ಪಂಚಭೂತಗಳೂ ವ್ಯವಸ್ಥಿತವಾಗಿ ವ್ಯವಸ್ಥಿತಪ್ರಮಾಣದಲ್ಲಿರುತ್ತವೆ. ಯಾವಾಗ ಈ ಪಂಚಭೂತಗಳು ಚರಾಚರಗಳಲ್ಲಿ ಅವ್ಯವಸ್ಥಿತವಾಗುವುವೋ, ವ್ಯವಸ್ಥಿತವಾದ ಪ್ರಮಾಣದಲ್ಲಿರುವುದಿಲ್ಲವೋ–ಆ ಸಮಯ

ದಲ್ಲಿ ದೇಹಿಯು (ಜೀವನು) ಕಾಲಪ್ರೇರಣೆಯಿಂದ ಒಂದು ದೇಹವನ್ನು ಬಿಟ್ಟು ಮತ್ತೊಂದು ದೇಹದೊಳಕ್ಕೆ ಪ್ರವೇಶಿಸುತ್ತಾನೆ. (ದೇಹವು ಪಂಚಭೂತಾತ್ಮಕವಾದುದೆಂಬುದು ಬಹುಸ್ಪಷ್ಟವಾಗಿಯೇ ಇದೆ. ಇವುಗಳಲ್ಲಿ ಯಾವುದೊಂದಕ್ಕೆ ಘಾತವಾದರೂ, ಯಾವುದೊಂದು ಅವ್ಯವಸ್ಥಿತವಾದರೂ, ಯಾವುದೊಂದರ ಪರಿಮಾಣದಲ್ಲಿ ವ್ಯತ್ಯಾಸವಾದರೂ ಜೀವನು ಬೇರೆಯ ಶರೀರಕ್ಕೆ ಹೋಗಬೇಕಾಗುತ್ತದೆ.) ಪ್ರಾಣಿಗಳು ಪೃಥ್ವೀತತ್ತ್ವದಿಂದಲೇ ಆರಂಭಿಸಿ ಜನ್ಮವನ್ನೂ ತಾಳುತ್ತವೆ. ಇದೇ ಆನುಪೂರ್ವಿಯಿಂದಲೇ ವಿನಾಶವನ್ನೂ ಹೊಂದುತ್ತವೆ.

**ತತ್ರ ತತ್ರ ಹಿ ದೃಶ್ಯನ್ತೇ ಧಾತವಃ ಪಾಞ್ಚಭೌತಿಕಾಃ ।**
**ಯೈರಾವೃತಮಿದಂ ಸರ್ವಂ ಜಗತ್ ಸ್ಥಾವರಜಙ್ಗಮಮ್ ॥೧೧॥**

ಪ್ರಾಣಿಗಳ ಉತ್ಪತ್ತಿಗೆ ಕಾರಣವಾದ ತೇಜಸ್ಸೇ ಮೊದಲಾದುವುಗಳು ಪಂಚಭೂತಾತ್ಮಕವಾಗಿರುತ್ತವೆ. ಆದುದರಿಂದಲೇ ಸ್ಥಾವರ-ಜಂಗಮಗಳಿಂದ ಆವೃತವಾಗಿರುವ ಈ ಜಗತ್ತು ಪಂಚಭೂತಾತ್ಮಕವಾಗಿದೆ.

**ಇನ್ದ್ರಿಯೈಃ ಸೃಜ್ಯತೇ ಯದ್ಯತ್ತತ್ತದ್ವ್ಯಕ್ತಮಿತಿ ಸ್ಮೃತಮ್ ।**
**ತದವ್ಯಕ್ತಮಿತಿ ಜ್ಞೇಯಂ ಲಿಙ್ಗಗ್ರಾಹ್ಯಮತೀನ್ದ್ರಿಯಮ್ ॥೧೨॥**

ಬ್ರಾಹ್ಮಣೋತ್ತಮ! ಇಂದ್ರಿಯಗಳಿಂದ ಯಾವುದು ತಿಳಿಯಲ್ಪಡುವುದೋ ಅದಕ್ಕೆ ವ್ಯಕ್ತವೆಂದೂ, ಇಂದ್ರಿಯಗಳಿಂದ ತಿಳಿಯಲ್ಪಡದೇ ಕೇವಲ ಊಹಾಮಾತ್ರದಿಂದ ತಿಳಿಯಲ್ಪಡುವ ಅತೀಂದ್ರಿಯವಸ್ತುವಿಗೆ ಅವ್ಯಕ್ತವೆಂದೂ ಹೆಸರು.

**ಯಥಾಸ್ವಂ ಗ್ರಾಹಕಾಣ್ಯೇಷಾಂ ಶಬ್ದಾದೀನಾಮಿಮಾನಿ ತು ।**
**ಇನ್ದ್ರಿಯಾಣಿ ಯದಾ ದೇಹೀ ಧಾರಯನ್ನಿವ ತಪ್ಯತೇ ॥೧೩॥**

**ಲೋಕೇ ವಿತತಮಾತ್ಮಾನಂ ಲೋಕಂ ಚಾತ್ಮನಿ ಪಶ್ಯತಿ ।**
**ಪರಾವರಜ್ಞೋ ಯಃ ಶಕ್ತಃ ಸ ತು ಭೂತಾನಿ ಪಶ್ಯತಿ ॥೧೪॥**

ಯಾವಾಗ ಮಾನವನು ಕಣ್ಣು-ಮೂಗು-ನಾಲಿಗೆ-ಚರ್ಮ ಮತ್ತು ಕಿವಿಗಳಿಗೆ ಸಂಬಂಧಿಸಿದ ಹೊರಗಿನ ದೃಶ್ಯ, ವಾಸನೆ, ರುಚಿ, ಸ್ಪರ್ಶ ಮತ್ತು ಶಬ್ದ–ಇವುಗಳಿಂದ ಮನಸ್ಸನ್ನು ವಿಮುಖಗೊಳಿಸಿ, ಅವ್ಯಕ್ತನಾದ ಅತೀಂದ್ರಿಯ

ಗೋಚರನಾದ ಪರಬ್ರಹ್ಮನಲ್ಲಿ ಮನಸ್ಸನ್ನು ಲೀನಗೊಳಿಸುವನೋ–ಆಗವನು ಲೋಕದಲ್ಲೆಲ್ಲಾ ಪರಬ್ರಹ್ಮನನ್ನು ಕಾಣುತ್ತಾನೆ ಮತ್ತು ತನ್ನ ಆತ್ಮನಲ್ಲಿ ಚತುರ್ದಶ ಭುವನಗಳನ್ನೂ ಕಾಣುತ್ತಾನೆ. ಪರಾ ಮತ್ತು ಅಪರಾವಿದ್ಯೆಗಳ ಸ್ವರೂಪವನ್ನರಿತ ಈ ಮಹಾತ್ಮನು ಎಲ್ಲ ಭೂತಗಳನ್ನೂ ನಿಸ್ಸಂಗನಾಗಿಯೇ ನೋಡುತ್ತಾನೆ.

**ಪಶ್ಯತಃ ಸರ್ವಭೂತಾನಿ ಸರ್ವಾವಸ್ಥಾಸು ಸರ್ವದಾ ।**
**ಬ್ರಹ್ಮಭೂತಸ್ಯ ಸಂಯೋಗೋ ನಾಶುಭೇನೋಪಪದ್ಯತೇ ॥೧೫॥**

ಎಲ್ಲ ಅವಸ್ಥೆಗಳಲ್ಲಿಯೂ, ಎಲ್ಲ ಕಾಲಗಳಲ್ಲಿಯೂ ಎಲ್ಲ ಭೂತಗಳನ್ನೂ ನೋಡುತ್ತಿದ್ದರೂ ಇವನು ಬ್ರಹ್ಮಸ್ವರೂಪನಾಗಿರುವುದರಿಂದ ಯಾವ ವಿಧವಾದ ಪಾಪವೂ ಇವನಿಗೆ ಅಂಟುವುದಿಲ್ಲ.

**ಅಜ್ಞಾನಮೂಲಂ ತಂ ಕ್ಲೇಶಮತಿವೃತ್ತಸ್ಯ ಪೌರುಷಮ್ ।**
**ಲೋಕವೃತ್ತಿಪ್ರಕಾಶೇನ ಜ್ಞಾನಮಾರ್ಗೇಣ ಗಮ್ಯತೇ ॥೧೬॥**

ಕ್ಲೇಶರೂಪವಾದ ಅವಿದ್ಯೆಗೆ ಅಜ್ಞಾನವೇ ಮೂಲವಾಗಿದೆ. ಮೂಲಭೂತವಾದ ಜ್ಞಾನವನ್ನರಿತು ಈ ಅವಿದ್ಯೆಯನ್ನು ದಾಟಿದ ಜ್ಞಾನಿಯ ಲೋಕವ್ಯಾಪಾರವೂ ಕೂಡ ಜ್ಞಾನದಿಂದಲೇ ತೋರಿಸಲ್ಪಡುತ್ತದೆ. ಇಂತಹ ಜ್ಞಾನಮಾರ್ಗದಿಂದ ಆತನು ಪರಮಪುರುಷಾರ್ಥವಾದ ಮೋಕ್ಷವನ್ನು ಹೊಂದುತ್ತಾನೆ.

ಮಹಾಭೂತಾತ್ಮಕವೂ, ಜಯಿಸಲು (ತಿಳಿಯಲು) ಅಸದಳವೂ, ಸರ್ವವ್ಯಾಪಕವೂ ಆಗಿರುವ ಈ ಜಗತ್ತೂ ಸಹ ಸ್ವರೂಪತಃ ಬ್ರಹ್ಮವೇ ಆಗಿದೆ. ಜಗತ್ತು ಬ್ರಹ್ಮನಿಂದ ಬೇರೆಯದಲ್ಲ.

**ಅನಾದಿನಿಧನಂ ಜನ್ತುಮಾತ್ಮಯೋನಿಂ ಸದಾವ್ಯಯಮ್ ।**
**ಅನೌಪಮ್ಯಮಮೂರ್ತಂ ಚ ಭಗವಾನಾಹ ಬುದ್ಧಿಮಾನ್ ॥೧೭॥**

ಆದಿ-ಅಂತ್ಯಗಳಿಲ್ಲದ, ಸಕಲಜಂತುಗಳಲ್ಲಿಯೂ ಪ್ರಕಾಶಮಾನವಾಗಿರುವ (ಜಂತುಸ್ವರೂಪವಾಗಿರುವ), ಸ್ವಯಂಜಾತವಾದ, ಸರ್ವಕಾಲದಲ್ಲಿಯೂ ಅವಿನಾಶಿಯಾದ, ತರ್ಕಕ್ಕೆ ಸಿಕ್ಕದ, ಉಪಮಾರಹಿತವಾದ, ಆಕಾರರಹಿತವಾದ ಆ ಬ್ರಹ್ಮವಸ್ತುವನ್ನೇ ಭಗವಂತನೆಂದು ಬುದ್ಧಿವಂತರು ಹೇಳುತ್ತಾರೆ.

**ತಪೋಮೂಲಮಿದಂ ಸರ್ವಂ ಯನ್ಮಾಂ ವಿಪ್ರಾನುಪೃಚ್ಛಸಿ ।**
**ಇನ್ದ್ರಿಯಾಣ್ಯೇವ ಸಂಯಮ್ಯ ತಪೋ ಭವತಿ ನಾನ್ಯಥಾ ॥೧೮॥**

ಬ್ರಾಹ್ಮಣ! ಆತ್ಮದರ್ಶನಕ್ಕೆ ಧ್ಯಾನತಪಸ್ಸೇ ಮೂಲವಾಗಿರುತ್ತದೆ. ಇಂದ್ರಿಯಗಳ ಸಂಯಮನದಿಂದ ಮಾತ್ರವೇ ಈ ಧ್ಯಾನಕಾರ್ಯವು ಸಾಧ್ಯ ವಾಗುತ್ತದೆ. ಇಂದ್ರಿಯಗಳ ಸಂಯಮನದಿಂದ ಆಗುವ ಪ್ರಯೋಜನ ವೇನೆಂಬುದಕ್ಕೆ ನಾನೀಗ ಉತ್ತರಿಸಿದ್ದೇನೆ. (ಪೂಜಾ-ಪುರಸ್ಕಾರ-ವ್ರತ-ನಿಯಮ-ಹೋಮ-ಹವನಾದಿಗಳಿಗಿಂತಲೂ ಧ್ಯಾನಕಾರ್ಯವು ಬಹುಕಠಿನ ವಾದುದು. ಅದರಲ್ಲಿಯೂ ಮೇಲೆ ಹೇಳಿದಂತೆ ಆಕಾರರಹಿತವಾದ, ಜ್ಯೋತಿ ರ್ಮಯವಾದ, ಅವ್ಯಕ್ತವಾದ, ಹೃದಯಾಂತರಾಳದಲ್ಲಿರುವ ಬ್ರಹ್ಮವಸ್ತುವಿನ ಧ್ಯಾನವು ಬಹಳ ಕಷ್ಟತರವಾದುದು. ಕಣ್ಣುಮುಚ್ಚಿ ಕುಳಿತರೂ ಮನಸ್ಸು ಸ್ವೇಚ್ಛೆಯಿಂದ ವಿಹರಿಸುತ್ತಿರುತ್ತದೆ. ಇಂದ್ರಿಯಗಳ ಸಂಯಮವೆಂದರೆ ಮುಖ್ಯವಾಗಿ ಮನಸ್ಸಿನ ಸಂಯಮ. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳು ವವನೇ ಧೀರನು. ಇದಕ್ಕೆ ಅನೇಕ ವರ್ಷಗಳ ಅಭ್ಯಾಸವು ಬೇಕು. ಜೀವನ ಪರ್ಯಂತವಾಗಿ ಧ್ಯಾನಮಾಡಿದರೂ ಸಹ ಮನಸ್ಸನ್ನು ಸಂಯಮಗೊಳಿಸಿ ನಿರ್ವಿಕಾರವಾದ ಚಿದಾನಂದಪರಂಜ್ಯೋತಿಯ ಕಡೆಗೆ ಕೆಲವು ನಿಮಿಷ ಗಳಾದರೂ ನಿಲ್ಲಿಸುವುದು ಕಷ್ಟವೇ ಆಗಬಹುದು. ಬೇಸರಿಸದೇ, ಸಂಶಯ ಪಡದೇ ಧ್ಯಾನಕಾರ್ಯವನ್ನು ಮಾಡುತ್ತಿದ್ದರೆ ಆತ್ಮಸಾಕ್ಷಾತ್ಕಾರ ಅಥವಾ ಆತ್ಮದರ್ಶನವಾಗುತ್ತದೆ. ತನ್ನನ್ನು ತಾನು ತಿಳಿದುಕೊಳ್ಳುವುದೇ ಮಾನವ ಜನ್ಮದ ಮುಖ್ಯಕರ್ತವ್ಯ. ಇದೇ ಜ್ಞಾನ ; ಇದೇ ಬ್ರಹ್ಮವಿದ್ಯೆ.)

**ಇನ್ದ್ರಿಯಾಣ್ಯೇವ ತತ್ಸರ್ವಂ ಯತ್ಸ್ವರ್ಗನರಕಾವುಭೌ ।**
**ನಿಗೃಹೀತವಿಸೃಷ್ಟಾನಿ ಸ್ವರ್ಗಾಯ ನರಕಾಯ ಚ ॥೧೯॥**

ಬ್ರಾಹ್ಮಣೋತ್ತಮ! ಇಂದ್ರಿಯಗಳ ಸಂಯಮದಿಂದ ಅಥವಾ ಮನೋ ನಿಗ್ರಹದಿಂದ ಈ ಧ್ಯಾನತಪಸ್ಸು ಸಾಧ್ಯವಾಗುತ್ತದೆ. ಮನೋನಿಗ್ರಹವಿಲ್ಲ ದಿದ್ದರೆ ಈ ತಪಸ್ಸು ಸಾಧ್ಯವಾಗುವುದಿಲ್ಲ. ಸ್ವರ್ಗ-ನರಕಗಳೆಂಬುದಕ್ಕೆ ಇಂದ್ರಿಯಗಳೇ ಮೂಲಕಾರಣ. ಇಂದ್ರಿಯಗಳನ್ನು ಸ್ವೇಚ್ಛಾಪ್ರವರ್ತನೆಗೆ ಹರಿಯಬಿಟ್ಟರೆ ನರಕಪ್ರಾಪ್ತಿಯಾಗುತ್ತದೆ. ಅವುಗಳನ್ನು ಹಿಡಿತದಲ್ಲಿಟ್ಟು ಕೊಂಡರೆ ಸ್ವರ್ಗಪ್ರಾಪ್ತಿಯಾಗುತ್ತದೆ.

**ಏಷ ಯೋಗವಿಧಿಃ ಕೃತ್ಸ್ನೋ ಯಾವದಿನ್ದ್ರಿಯಧಾರಣಮ್ ।**
**ಏತನ್ಮೂಲಂ ಹಿ ತಪಸಃ ಕೃತ್ಸ್ನಸ್ಯ ನರಕಸ್ಯ ಚ ॥೨೦॥**

ಇಂದ್ರಿಯಗಳನ್ನು ಜಯಿಸುವುದೇ ಯೋಗವಿಧಿ. ಇದೇ ಆತ್ಮಜ್ಞಾನಕ್ಕೆ ಮುಖ್ಯವಾದ ಸಾಧನ. ನಮ್ಮ ಇಂದ್ರಿಯಗಳೇ ನಮ್ಮ ಆತ್ಮೋನ್ನತಿಗೂ ಮತ್ತು ಆತ್ಮಾವನತಿಗೂ ಮೂಲಕಾರಣಗಳಾಗಿರುತ್ತವೆ.

**ಇನ್ದ್ರಿಯಾಣಾಂ ಪ್ರಸಙ್ಗೇನ ದೋಷಮಾರ್ಚ್ಛನ್ತ್ಯಸಂಶಯಮ್ ।**
**ಸಂನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ಸಮಾಪ್ನುಯಾತ್ ॥೨೧॥**

ಇಂದ್ರಿಯಗಳ ಸ್ವೇಚ್ಛಾವರ್ತನೆಯಿಂದ ಮಾನವನು ದೋಷಭಾಗಿಯಾಗುತ್ತಾನೆ. ಅವುಗಳನ್ನೇ ನಿಗ್ರಹಮಾಡಿದರೆ ಮಾನವನು ಆತ್ಮೋನ್ನತಿಯನ್ನು ಪಡೆಯುತ್ತಾನೆ.

**ಷಣ್ಣಾಮಾತ್ಮನಿ ನಿತ್ಯಾನಾಮೈಶ್ವರ್ಯಂ ಯೋಽಧಿಗಚ್ಛತಿ ।**
**ನ ಸ ಪಾಪೈಃ ಕುತೋಽನರ್ಥೈರ್ಯುಜ್ಯತೇ ವಿಜಿತೇನ್ದ್ರಿಯಃ ॥೨೨॥**

ಯಾವನು ತನ್ನಲ್ಲಿಯೇ ಇರುವ, ಮನಸ್ಸಿನಿಂದ ಕೂಡಿದ ಪಂಚೇಂದ್ರಿಯಗಳನ್ನೂ ಜಯಿಸಿದವನಾಗಿ ಅವುಗಳ ಮೇಲೆ ಪ್ರಭುತ್ವವನ್ನು ಪಡೆದಿರುತ್ತಾನೆಯೋ–ಅಂತಹವನಿಗೆ ಪಾಪದ ಲೇಪವಿರುವುದಿಲ್ಲ. ಪಾಪಲೇಪವೇ ಇಲ್ಲವೆಂದಮೇಲೆ ಪಾಪಜನಿತವಾದ ಯಾವ ಅನರ್ಥಗಳೂ ಅವನಿಗಿಲ್ಲವೆಂದು ಹೇಳಬೇಕಾಗಿಯೇ ಇಲ್ಲ.

**ರಥಃ ಶರೀರಂ ಪುರುಷಸ್ಯ ದೃಷ್ಟ-**
**ಮಾತ್ಮಾ ನಿಯನ್ತೇನ್ದ್ರಿಯಾಣ್ಯಾಹುರಶ್ವಾನ್ ।**
**ತೈರಪ್ರಮತ್ತಃ ಕುಶಲೀ ಸದಶ್ವೈ-**
**ರ್ದಾನ್ತೈಃ ಸುಖಂ ಯಾತಿ ರಥೀವ ಧೀರಃ ॥೨೩॥**

ಬ್ರಾಹ್ಮಣೋತ್ತಮ! ಪುರುಷನ ಶರೀರವು ಒಂದು ರಥವಿದ್ದಂತೆ. ಈ ಶರೀರದಲ್ಲಿರುವ ಜೀವನೇ ಶರೀರರಥಕ್ಕೆ ಸಾರಥಿಯಾಗಿರುತ್ತಾನೆ. ಮನಸ್ಸಿನಿಂದ ಕೂಡಿದ ಪಂಚೇಂದ್ರಿಯಗಳೇ ಈ ಶರೀರರಥದ ಆರು ಕುದುರೆಗಳು. ಅಶ್ವಶಾಸ್ತ್ರದಲ್ಲಿ ಕುಶಲನಾದ, ಅಪ್ರಮತ್ತನಾದ, ಧೀರನಾದ ಸಾರಥಿಯು ಯಾವ ರೀತಿಯಲ್ಲಿ ಕುದುರೆಗಳನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುತ್ತಾ

ನೆಯೋ–ಅದೇ ರೀತಿಯಲ್ಲಿ ಅಶ್ವರೂಪವಾದ ಆರು ಇಂದ್ರಿಯಗಳನ್ನು ಪಳಗಿಸಿ (ಅವುಗಳಿಗೆ ವಶನಾಗದೇ ಅವುಗಳನ್ನು ತನ್ನ ವಶಪಡಿಸಿಕೊಂಡು) ಶರೀರರಥವನ್ನು ನಡೆಸುವ ಧೀರನಾದ ಜೀವನು (ಪುರುಷನು) ಸುಸಾರಥಿಯಂತೆ ಸುಖವಾಗಿ ಜೀವನಯಾತ್ರೆಯನ್ನು ನಡೆಸುತ್ತಿರುತ್ತಾನೆ.

**ಷಣ್ಣಾಮಾತ್ಮನಿ ಯುಕ್ತಾನಾಮಿನ್ದ್ರಿಯಾಣಾಂ ಪ್ರಮಾಥಿನಾಮ್ ।**
**ಯೋ ಧೀರೋ ಧಾರಯೇದ್ರಶ್ಮೀನ್ಸಸ್ಯಾತ್ಪರಮಸಾರಥಿಃ ॥೨೪॥**

ದುಷ್ಟವಾದ ಆರು ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು, ಕಡಿವಾಣಗಳಿಂದ ಆ ಆರು ಕುದುರೆಗಳನ್ನೂ ಹತೋಟಿಗೆ ತೆಗೆದುಕೊಂಡು ರಥವನ್ನು ನಡೆಸುವ ಸಾರಥಿಗಿಂತಲೂ–ಬಹುದುಷ್ಟವಾದ ಗುಣಗಳಿಂದ ಕೂಡಿದ, ಸ್ವೇಚ್ಛಾಪ್ರವರ್ತನೆಯುಳ್ಳ, ತಡೆದು ಹಿಡಿಯಲು ಅಸಾಧ್ಯವಾದ, ಬಹು ಚಂಚಲವಾದ, ಕೈಗಳಿಗೆ ಸಿಕ್ಕದ, ಶರೀರದೊಳಗೇ ಅಗೋಚರವಾಗಿದ್ದು ಕಾರ್ಯಮಾಡುವ ಷಡೀಂದ್ರಿಯಗಳೆಂಬ ಆರು ಕುದುರೆಗಳ ಕಡಿವಾಣಗಳನ್ನೂ ಏಕಕಾಲದಲ್ಲಿ ಯಾವ ಧೀರನು ಹಿಡಿದು ನಿಲ್ಲಿಸುತ್ತಾನೆಯೋ–ಅವನೇ ಪರಮಸಾರಥಿಯು (ಶ್ರೇಷ್ಠನಾದ ಸಾರಥಿಯು.) ಅವನೇ ಧೀರನು.

**ಇನ್ದ್ರಿಯಾಣಾಂ ಪ್ರಸೃಷ್ಟಾನಾಂ ಹಯಾನಾಮಿವ ವರ್ತ್ಮಸು ।**
**ಧೃತಿಂ ಕುರ್ವೀತ ಸಾರಥ್ಯೇ ಧೃತ್ಯಾ ತಾನಿ ಜಯೇದ್ಧ್ರುವಮ್ ॥೨೫॥**

ಮಾರ್ಗದಲ್ಲಿ ಹೋಗುವಾಗ ಕುದುರೆಗಳು ಯಾವ ರೀತಿಯಲ್ಲಿ ನಿರೋಧಿಸಲು ಅಶಕ್ಯವಾಗಿ ಆಗುತ್ತವೆಯೋ–ಅದೇ ರೀತಿಯಲ್ಲಿ ಸ್ವೇಚ್ಛೆಯಿಂದ ವರ್ತಿಸುವ ಆರು ಇಂದ್ರಿಯಗಳ ಸ್ವೇಚ್ಛಾಪ್ರವರ್ತನೆಯನ್ನು ನಿರೋಧಿಸಲು ಸ್ಥಿರತೆಯನ್ನು ಸಾರಥ್ಯಕ್ಕೆ ನಿಯೋಜಿಸಬೇಕು. ಸ್ಥಿರತೆಯಿಂದಲೂ, ನಿಶ್ಚಲತೆಯಿಂದಲೂ ಆರು ಇಂದ್ರಿಯಗಳನ್ನೂ ಶಾಶ್ವತವಾಗಿ ಜಯಿಸಬಹುದಾಗಿದೆ.

**ಇನ್ದ್ರಿಯಾಣಾಂ ವಿಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತೇ ಬುದ್ಧಿಂ ನಾವಂ ವಾಯುರಿವಾಮ್ಭಸಿ ॥೨೬॥**

ಮನಸ್ಸು ಐದು ಇಂದ್ರಿಯಗಳಿಗಿಂತಲೂ ಮೇಲಿನದು. ಚಂಚಲತೆಯೇ ಇಂದ್ರಿಯಗಳ ಸ್ವಭಾವ. ಆಯಾ ಇಂದ್ರಿಯಗಳು ತಮ-ತಮಗೆ ಬೇಕಾದ ವಸ್ತುಗಳನ್ನು ಪ್ರತಿಕ್ಷಣದಲ್ಲಿಯೂ ಆಶಿಸುತ್ತಲೇ ಇರುತ್ತವೆ. ಅಪೇಕ್ಷಿಸಿದ

ವಸ್ತುಗಳನ್ನು ಪಡೆಯಲು ಪ್ರತಿಕ್ಷಣದಲ್ಲಿಯೂ ಇಂದ್ರಿಯಗಳು ಮನಸ್ಸನ್ನು ಪ್ರೇರಿಸುತ್ತಿರುತ್ತವೆ. ಅಂತಹ ಸಂದರ್ಭದಲ್ಲಿ ಮನಸ್ಸು ಇಂದ್ರಿಯಗಳ ಪ್ರೇರಣೆಗೆ ಒಲಿದು ಇಂದ್ರಿಯಗಳಿಗೆ ಅಧೀನವಾಗಿ ಕಾರ್ಯಕ್ಕೆ ಪ್ರವರ್ತಿತವಾಗುತ್ತದೆ. ಬುದ್ಧಿಯೂ ಸಹ ಮನಸ್ಸಿನೊಡನೆಯೇ ಸೇರಿಹೋಗುತ್ತದೆ. ಅರ್ಥಾತ್ ಮನಸ್ಸು ಬುದ್ಧಿಯ ಕಾರ್ಯವಾದ ವಿವೇಚನೆಯನ್ನು ಮಾಡದಂತೆ ತಡೆಯುತ್ತದೆ. ಬಿರುಗಾಳಿಯು ಸಮುದ್ರದಲ್ಲಿರುವ ನಾವೆಯನ್ನು ಅಸ್ಥಿರಗೊಳಿಸುವಂತೆ–ಮನಸ್ಸು ಬುದ್ಧಿಯನ್ನು ಅಸ್ಥಿರಗೊಳಿಸುತ್ತದೆ. (ಅದೇ ಮನಸ್ಸು ಇಂದ್ರಿಯಗಳ ವಶವಾಗದಿದ್ದರೆ ಬುದ್ಧಿಯೊಡನೆ ಸೇರಿ ಜೀವನನ್ನು ಪರಮ ಪದಕ್ಕೊಯ್ಯಲು ಸಮರ್ಥವಾಗುತ್ತದೆ.)

**ಯೇಷು ವಿಪ್ರತಿಪದ್ಯನ್ತೇ ಷಟ್ಸು ಮೋಹಾತ್ಫಲಾಗಮಮ್ ।**
**ತೇಷ್ವಧ್ಯವಸಿತಾಧ್ಯಾಯೀ ವಿನ್ದತೇ ಧ್ಯಾನಜಂ ಫಲಮ್ ॥೨೭॥**

ಬ್ರಾಹ್ಮಣೋತ್ತಮ! ಮಾನವರು ಈ ಆರು ಇಂದ್ರಿಯಗಳಿಗೆ ತೃಪ್ತಿಯನ್ನುಂಟುಮಾಡುವುದೇ ಪರಮಸುಖವೆಂದು ಮೋಹಪರವಶರಾಗುತ್ತಾರೆ. ಆದರೆ ಈ ಆರು ಇಂದ್ರಿಯಗಳ ಸುಖಗಳನ್ನು ಚೆನ್ನಾಗಿ ಪರಾಮರ್ಶೆಮಾಡಿದವರು ಈ ಸುಖವು ಕೇವಲ ಕ್ಷಣಿಕವೆಂಬುದನ್ನು ನಿರ್ಧರಿಸಿ, ದುಷ್ಟವಾದ ಇಂದ್ರಿಯಗಳನ್ನು ನಿಗ್ರಹಿಸಿ, ಧ್ಯಾನಾಸಕ್ತರಾಗಿ (ಧ್ಯಾನಮೂಲವಾದ ತಪಸ್ಸಿನಿಂದ) ಶಾಶ್ವತಬ್ರಹ್ಮಾನಂದವನ್ನು ಪಡೆಯುತ್ತಾರೆ."

ಎ೧೧ನೆಯ ಅಧ್ಯಾಯವು ಮುಗಿಯಿತು.

೨೧೨ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಮೂರು ಗುಣಗಳ ಸ್ವರೂಪ ಮತ್ತು ಅವುಗಳ ಫಲಗಳ ವಿವರಣೆ

ಮಾರ್ಕಂಡೇಯರು ಧರ್ಮರಾಜನನ್ನು ಕುರಿತು ಹೇಳುತ್ತಾರೆ :

"ಧರ್ಮಜ! ಬಹುಸೂಕ್ಷ್ಮವಾದ ಅಧ್ಯಾತ್ಮವಿದ್ಯಾರಹಸ್ಯವನ್ನು ಈ ರೀತಿಯಾಗಿ ಧರ್ಮವ್ಯಾಧನು ಬ್ರಾಹ್ಮಣನಿಗೆ ಹೇಳಿದನಂತರ ಏಕಾಗ್ರಚಿತ್ತನಾಗಿ ಧರ್ಮೋಪದೇಶವನ್ನು ಕೇಳುತ್ತಿದ್ದ ಬ್ರಾಹ್ಮಣನು ಮತ್ತೂ ಸೂಕ್ಷ್ಮವಿಷಯಗಳನ್ನು ಪ್ರಶ್ನಿಸಿದನು :

**ಸತ್ತ್ವಸ್ಯ ರಜಸಶ್ಚೈವ ತಮಸಶ್ಚ ಯಥಾತಥಮ್ ।**
**ಗುಣಾಂಸ್ತತ್ತ್ವೇನ ಮೇ ಬ್ರೂಹಿ ಯಥಾವದಿಹ ಪೃಚ್ಛತಃ ॥೨॥**

"ಮಹಾನುಭಾವ! (ನೀನು ಹೇಳಿದುದೆಲ್ಲವನ್ನೂ ಗ್ರಹಿಸಿದೆನು.) ಇನ್ನು ಮುಂದೆ ಸತ್ತ್ವ-ರಜಸ್ತಮಸ್ಸುಗಳ ಯಥಾವತ್ತಾದ ಸಹಜಗುಣಗಳನ್ನು ವಿವರಿಸಿ ಹೇಳು."

ಬ್ರಾಹ್ಮಣನ ಮಾತುಗಳನ್ನು ಕೇಳಿ ವ್ಯಾಧನಿಗೂ ಸಂತೋಷವಾಯಿತು. ಏಕೆಂದರೆ : ಪ್ರವಚನವನ್ನು ಹೇಳುವವನಿಗಿರುವ ಆಸಕ್ತಿಗಿಂತಲೂ ಹೆಚ್ಚಾದ ಆಸಕ್ತಿಯು ಪ್ರವಚನವನ್ನು ಕೇಳುವವನಿಗಿರಬೇಕು. ಹಾಗಲ್ಲದೇ ಪ್ರವಚನ ವನ್ನು ಕೇಳುತ್ತಾ ತೂಕಡಿಸುತ್ತಿದ್ದರೆ ಪ್ರವಚನಹೇಳುವವನಿಗೂ ಬಹಳ ಬೇಸರ ವಾಗುತ್ತದೆ. ಅದಕ್ಕೆ ಬದಲಾಗಿ ಹೇಳಿದುದನ್ನು ಗ್ರಹಿಸಿ ಪುನಃ ಪುನಃ ಹೊಸ ಹೊಸ ಪ್ರಶ್ನೆಗಳನ್ನು ಶ್ರೋತೃವು ಕೇಳುತ್ತಿದ್ದರೆ ಹೇಳುವವನಿಗೂ ಅಮಿತವಾದ ಉತ್ಸಾಹವುಂಟಾಗುತ್ತದೆ. ಇಲ್ಲಿ ವ್ಯಾಧನೂ ಸಹ 'ಹನ್ತ'! ಎಂದು ಹೇಳಿ ತನ್ನ ಸಂತೋಷವನ್ನು ವ್ಯಕ್ತಪಡಿಸಿ ಬ್ರಾಹ್ಮಣನನ್ನು ಕುರಿತು ಹೇಳಿದನು :

"ಬ್ರಾಹ್ಮಣೋತ್ತಮ! ನೀನು ಈ ಪ್ರಶ್ನೆಗಳನ್ನು ಕೇಳುತ್ತಿರುವುದರಿಂದ ನಿಶ್ಚಯವಾಗಿಯೂ ನನಗೆ ಹೆಚ್ಚಿನ ಸಂತೋಷವಾಗಿದೆ. ಸತ್ಪಾತ್ರನಲ್ಲಿ ಬಹು ರಹಸ್ಯವಾದ ಈ ಬ್ರಹ್ಮವಿದ್ಯೆಯನ್ನು ಇಡುತ್ತಿದ್ದೇನೆಂಬ ಭರವಸೆಯುಂಟಾಗಿದೆ. ಸತ್ತ್ವ-ರಜಸ್ತಮೋಗುಣಗಳಿಗೆ ಪ್ರತ್ಯೇಕ-ಪ್ರತ್ಯೇಕವಾದ ವಿವರಣೆಯನ್ನೇ ಕೊಡುತ್ತೇನೆ. ಸಾವಧಾನಚಿತ್ತನಾಗಿ ಕೇಳು.

**ಮೋಹಾತ್ಮಕಂ ತಮಸ್ತೇಷಾಂ ರಜ ಏಷಾಂ ಪ್ರವರ್ತಕಮ್ ।**
**ಪ್ರಕಾಶಬಹುಲತ್ವಾಚ್ಚ ಸತ್ತ್ವಂ ಜ್ಯಾಯ ಇಹೋಚ್ಯತೇ ॥೪॥**

ಈ ಮೂರು ಗುಣಗಳಲ್ಲಿ ತಮಸ್ಸೆಂಬುದು ಮೋಹಾತ್ಮಕವಾದುದು. ರಜೋಗುಣವು ಮೋಹಾತ್ಮಕವಾದ ಕಾರ್ಯಗಳಲ್ಲಿ ಪ್ರವರ್ತಕವಾದುದು. ಸತ್ತ್ವಗುಣವು ಮಾತ್ರ ಬಹಳ ಪ್ರಕಾಶಮಾನವಾಗಿರುವುದರಿಂದ ಉಳಿದೆರಡು ಗುಣಗಳಿಗಿಂತಲೂ ಶ್ರೇಷ್ಠವೆಂದು ಪರಿಗಣಿತವಾಗಿದೆ.

**ಅವಿದ್ಯಾಬಹುಲೋ ಮೂಢಃ ಸ್ವಪ್ನಶೀಲೋ ವಿಚೇತನಃ ।**
**ದುರ್ಹೃಷೀಕಸ್ತಮೋಧ್ವಸ್ತಃ ಸಕ್ರೋಧಸ್ತಾಮಸೋಽಲಸಃ ॥೫॥**

ಬಹುವಾದ ಅವಿದ್ಯೆಯುಳ್ಳವನು ಎಂದರೆ ಹೆಚ್ಚಾಗಿ ಮಾಯೆಯ ವ್ಯಾಪ್ತಿಗೆ ಒಳಗಾಗಿರುವವನು, ಸದಾಕಾಲದಲ್ಲಿಯೂ ತೂಕಡಿಸುತ್ತಿರುವವನು, ಬುದ್ಧಿಗೆಟ್ಟವನು, ಇಂದ್ರಿಯಗಳನ್ನು ಸ್ವಲ್ಪವಾದರೂ ಹತೋಟಿಯಲ್ಲಿಟ್ಟು ಕೊಳ್ಳದೆ ಇಂದ್ರಿಯಗಳ ಚಾಪಲ್ಯವನ್ನು ತೀರಿಸಲು ಮಾಡಬಾರದ ಅಕಾರ್ಯ ಗಳನ್ನೂ ಮಾಡುವವನು. ಸೋಮಾರಿಯಾದವನು, ಸರ್ವದಾ ಕೋಪಿಷ್ಠ ನಾಗಿರುವವನು, ಸದಾ ಕೆಟ್ಟಯೋಚನೆಯಲ್ಲಿಯೇ ಇರುವವನು–ತಮೋ ಗುಣದಿಂದ ಕೂಡಿದವನೆಂದು ತಿಳಿಯಬೇಕು.

**ಪ್ರವೃತ್ತವಾಕ್ಯೋ ಮನ್ತ್ರೀ ಚ ಯೋ ನರಾಗ್ರ್ಯೋಽನಸೂಯಕಃ ।**
**ವಿಧಿತ್ಸಮಾನೋ ವಿಪ್ರರ್ಷೇ ಸ್ತಬ್ಧೋ ಮಾನೀ ಸ ರಾಜಸಃ ॥೬॥**

ಎಲ್ಲರೊಡನೆಯೂ ಮಾತನಾಡುವ ಸ್ವಭಾವವಿರುವವನು, ಯಾವಾಗಲೂ ಸಮಾಲೋಚಿಸಿ ಕಾರ್ಯಮಾಡುವವನು, ಎಲ್ಲರಿಗಿಂತಲೂ ಮೇಲಾಗಿರಬೇಕೆಂಬ ಆಸೆಯಿರುವವನು, ಅಸೂಯಾರಹಿತನಾಗಿರುವವನು, ಎಂತಹ ಕಷ್ಟಕಾರ್ಯವನ್ನಾದರೂ ಸಾಧಿಸುವೆನೆಂಬ ಸ್ವಭಾವವುಳ್ಳವನು, ಯಾರಿಗೂ ಮಣಿಯದವನು, ಅಭಿಮಾನವೇ ಹೆಚ್ಚಿನದೆಂದು ಭಾವಿಸಿರುವ ವನು–ರಜೋಗುಣದಿಂದ ಕೂಡಿರುವವನೆಂದು ತಿಳಿಯಬೇಕು.

**ಪ್ರಕಾಶಬಹುಲೋ ಧೀರೋ ನಿರ್ವಿಧಿತ್ಸೋಽನಸೂಯಕಃ ।**
**ಅಕ್ರೋಧನೋ ನರೋ ಧೀಮಾನ್ದಾನ್ತಶ್ಚೈವ ಸ ಸಾತ್ತ್ವಿಕಃ ॥೭॥**

ತೇಜಸ್ವಿಯು (ಜ್ಞಾನೀ), ಮನೋನಿಗ್ರಹದಿಂದ ಧೀರನಾಗಿರುವವನು, ಇಂದ್ರಿಯಾಪೇಕ್ಷಿತವಾದ ವಸ್ತುಗಳ ಪ್ರಾಪ್ತಿಗಾಗಿ ಕಾರ್ಯಮಾಡಲು ಉತ್ಸಾಹ ವಿಲ್ಲದವನು, ಅಸೂಯಾರಹಿತನು, ಎಂತಹ ಸಂದರ್ಭದಲ್ಲಿಯೂ ಕೋಪ ಮಾಡಿಕೊಳ್ಳದೇ ಇರುವವನು, ಬುದ್ಧಿವಂತನಾದವನು, ಕ್ಷಮಾಶೀಲನು ಮತ್ತು ಜಿತೇಂದ್ರಿಯನಾದ ಮನುಷ್ಯನು–ಸತ್ತ್ವಗುಣದಿಂದ ಕೂಡಿರುವವನೆಂದು ತಿಳಿಯಬೇಕು.

**ಸಾತ್ತ್ವಿಕಸ್ತ್ವಥ ಸಮ್ಬುದ್ಧೋ ಲೋಕವೃತ್ತೇನ ಕ್ಲಿಶ್ಯತೇ ।**
**ಯದಾ ಬುಧ್ಯತಿ ಬೋದ್ಧವ್ಯಂ ಲೋಕವೃತ್ತಂ ಜುಗುಪ್ಸತೇ ॥೮॥**

ಸತ್ತ್ವಗುಣಪ್ರಧಾನವಾಗಿರುವವನು ಪ್ರಾಪಂಚಿಕವ್ಯವಹಾರಕ್ಕೆ ತೊಡಗಿದಾಗ ಬಹಳ ಸಂಕಟಪಡುತ್ತಾನೆ. ಪ್ರಾಪಂಚಿಕವ್ಯವಹಾರಗಳೆಲ್ಲವೂ ಕೇವಲ ಇಂದ್ರಿಯಗಳಿಗೇ ಸಂಬಂಧಿಸಿವೆಯೆಂದು ತಿಳಿದಾಗ ಇಂದ್ರಿಯಗಳನ್ನು ನಿಗ್ರಹಿಸಿ ಪ್ರಾಪಂಚಿಕವ್ಯವಹಾರದಿಂದ ಪರಾಙ್ಮುಖನಾಗುತ್ತಾನೆ.

**ವೈರಾಗ್ಯಸ್ಯ ಚ ರೂಪಂ ತು ಪೂರ್ವಮೇವ ಪ್ರವರ್ತತೇ ।**
**ಮೃದುರ್ಭವತ್ಯಹಙ್ಕಾರಃ ಪ್ರಸೀದತ್ಯಾರ್ಜವಂ ಚ ಯತ್ ॥೯॥**

ರಜೋಗುಣಪ್ರಧಾನವಾದ ರಾಗವು ಅವನಲ್ಲಿ ಲುಪ್ತವಾಗಿ ಅವನು ವಿರಾಗಿಯಾಗುತ್ತಾನೆ. ಅನುಕ್ರಮವಾಗಿ ಅವನು ಮಾನಾಪಮಾನಗಳೆರಡರಲ್ಲಿಯೂ ವ್ಯತ್ಯಾಸವನ್ನು ಕಾಣುವುದಿಲ್ಲ. (ಅಭಿಮಾನವನ್ನು ಸಂಪೂರ್ಣವಾಗಿ ತೊರೆಯುತ್ತಾನೆ.) ಸರಳತೆಯು ಅವನಲ್ಲಿ ಮೂರ್ತಿಮತ್ತಾಗಿ ನಿಲ್ಲುತ್ತದೆ.

**ತತೋಽಸ್ಯ ಸರ್ವದ್ವನ್ದ್ವಾನಿ ಪ್ರಶಾಮ್ಯನ್ತಿ ಪರಸ್ಪರಮ್ ।**
**ನ ಚಾಸ್ಯ ಸಂಶಯೋ ನಾಮ ಕ್ವಚಿದ್ಭವತಿ ಕಶ್ಚನ ॥೧೦॥**

ಅನಂತರದಲ್ಲಿ ಅವನಿಗೆ ಯಾವ ವಿಷಯದಲ್ಲಿಯೂ ಯಾವಾಗಲೂ ಸಂಶಯವೆಂಬುದೇ ಇರುವುದಿಲ್ಲ. ಶೀತೋಷ್ಣ, ಸುಖ-ದುಃಖ, ಮಾನಾಪಮಾನ–ಈ ದ್ವಂದ್ವಗಳೆಲ್ಲವೂ ಅವನಲ್ಲಿ ಉಪಶಮನಹೊಂದುತ್ತವೆ.

ಬ್ರಾಹ್ಮಣೋತ್ತಮ!

**ಶೂದ್ರಯೋನೌ ಹಿ ಜಾತಸ್ಯ ಸದ್ಗುಣಾನುಪತಿಷ್ಠತಃ ।**
**ವೈಶ್ಯತ್ವಂ ಲಭತೇ ಬ್ರಹ್ಮನ್ ಕ್ಷತ್ರಿಯತ್ವಂ ತಥೈವ ಚ ।**
**ಆರ್ಜವೇ ವರ್ತಮಾನಸ್ಯ ಬ್ರಾಹ್ಮಣ್ಯಮಭಿಜಾಯತೇ ॥೧೧॥**

ಒಬ್ಬನು ಶೂದ್ರಯೋನಿಯಲ್ಲಿಯೇ ಜನಿಸಿರಬಹುದು. ಶೂದ್ರನ ಸ್ವಭಾವಗುಣವು ತಾಮಸವೇ ಆಗಿರಬಹುದು. ಆದರೆ ಸದ್ಗುಣಗಳನ್ನು ಅನುಷ್ಠಾನಕ್ಕೆ ತಂದರೆ ಆ ಶೂದ್ರನೇ ವೈಶ್ಯನೂ, ಕ್ಷತ್ರಿಯನೂ (ಜನ್ಮಾಂತರದಲ್ಲಿ) ಆಗಬಲ್ಲನು. ನಿಷ್ಕಾಪಟ್ಯದಿಂದಿದ್ದು ಸತ್ತ್ವಗುಣವನ್ನೇ ಅನುಷ್ಠಾನಕ್ಕೆ

ತಂದುಕೊಂಡರೆ ಅದೇ ಶೂದ್ರನು (ಜನ್ಮಾಂತರದಲ್ಲಿ) ಬ್ರಾಹ್ಮಣನಾಗಿಯೂ ಹುಟ್ಟಬಹುದು.

ನಿನ್ನ ಪ್ರಶ್ನೆಗೆ ಉತ್ತರವಾಗಿ ಸತ್ತ್ವ-ರಜಸ್ತಮಸ್ಸುಗಳ ಗುಣವಿಶೇಷಗಳನ್ನು ವಿಸ್ತಾರವಾಗಿ ಹೇಳಿದ್ದೇನೆ. ಮುಂದೇನು ಹೇಳಲಿ?"

(ಯಾವನೊಬ್ಬ ಮನುಷ್ಯನೇ ಆಗಲೀ, ತನ್ನ ವರ್ಣೋಕ್ತವಾದ ಕರ್ಮಗಳನ್ನು ಆಚರಿಸುತ್ತಾ, ಕಾಮ-ಕ್ರೋಧಾದಿಗಳನ್ನು ವರ್ಜಿಸಿ, ಶಿಷ್ಟರಿಂದ ಅನುಸರಿಸಲ್ಪಟ್ಟ ಸದ್ಗುಣಗಳನ್ನೇ ಹೊಂದಿದ್ದರೆ ಅವನಿಗೆ ಅವನ ಕರ್ಮಫಲಾನುಸಾರವಾಗಿ ಮುಂದೆ ಸದ್ವಂಶದಲ್ಲಿ ಜನ್ಮವು ಪ್ರಾಪ್ತವಾಗುವುದು. ಈ ಶ್ಲೋಕಕ್ಕೆ ಇದೇ ಅಭಿಪ್ರಾಯವೇ ಹೊರತು ಶೂದ್ರನಾದವನೊಬ್ಬನು ತನ್ನ ಹಿಂದಿನ ಜನ್ಮದ ಯಾವುದೋ ಸುಕೃತದಿಂದ ಜ್ಞಾನಿಯಾಗಿಯೇ ಹುಟ್ಟಿದರೂ ಅವನು ಬ್ರಾಹ್ಮಣನಾಗಲಾರನು. ಬ್ರಾಹ್ಮಣನಿಗೆ ಉಕ್ತವಾದ ಕರ್ಮಮಾಡಲು ಅವನು ಅರ್ಹನಾಗುವುದಿಲ್ಲ. ಅದಕ್ಕೆ ಧರ್ಮವ್ಯಾಧನೇ ಸಾಕ್ಷಿಯಾಗಿದ್ದಾನೆ. "ನಿನ್ನಂತಹ ಧಾರ್ಮಿಕನಾದವನಿಗೆ ಈ ಪ್ರವೃತ್ತಿಯು ಯುಕ್ತವಲ್ಲ"–ಎಂಬ ಕೌಶಿಕನ ಮಾತಿಗೆ ಉತ್ತರವಾಗಿ ಧರ್ಮವ್ಯಾಧನು ಈ ವಿಷಯವನ್ನೇ ಸ್ಪಷ್ಟವಾಗಿ ಹೇಳುತ್ತಾನೆ. "ವರ್ಣವೆಂಬುದು ಕರ್ಮಫಲಾನುಸಾರವಾಗಿ ಪ್ರಾಪ್ತವಾಗುತ್ತದೆ. ಅವನವನ ವರ್ಣಕ್ಕೆ ಉಕ್ತವಾಗಿರುವ ಕರ್ಮಗಳನ್ನೇ ಮಾಡಬೇಕಾದುದು ಅವನ ಕರ್ತವ್ಯ. ಈ ಕರ್ಮಬಂಧನದಿಂದ ಬಿಡಿಸಿಕೊಳ್ಳುವ ಸಾಧ್ಯತೆಯಿಲ್ಲ. ತನ್ನ ಜಾತಿಗೆ ಉಕ್ತವಾಗಿರುವ ಕರ್ಮಗಳ ವಿಷಯದಲ್ಲಿ 'ಇದು ಹೀನಕರ್ಮ ; ಇದು ಶ್ರೇಷ್ಠಕರ್ಮ'–ಎಂಬುದನ್ನು ವಿವೇಚಿಸುವ ಕಾರಣವಿಲ್ಲ. ಕರ್ಮಫಲಾನುಸಾರವಾಗಿ ದೈವಾಯತ್ತವಾಗಿರುವ ಜನ್ಮವೇ ಶ್ರೇಷ್ಠವಾದುದು ; ಅದು ಕುತ್ಸಿತವೆಂದು ಖಂಡಿತವಾಗಿಯೂ ಭಾವಿಸಬಾರದು. ಪೂರ್ವಾರ್ಜಿತವಾದ ದುಷ್ಕರ್ಮಫಲದಿಂದ ಹೀನಜಾತಿಯಲ್ಲಿ ಜನ್ಮವು ಪ್ರಾಪ್ತವಾಗಿರುವುದನ್ನು ಮನಗಂಡು ಧರ್ಮಮಾರ್ಗದಲ್ಲಿರಲು ಸತತವಾಗಿ ಪ್ರಯತ್ನಿಸಬೇಕು"–ಇವೇ ಮುಂತಾಗಿ ಧರ್ಮವ್ಯಾಧನು ಕರ್ಮರಹಸ್ಯವನ್ನು ಬಹುಸ್ಪಷ್ಟವಾಗಿ ಹೇಳುತ್ತಾನೆ. ಆದುದರಿಂದ ಅವನು ಈ ಶ್ಲೋಕದಲ್ಲಿ ಸಚ್ಚರಿತ್ರನಾದ ಶೂದ್ರನಿಗೆ ಜನ್ಮಾಂತರಗಳಲ್ಲಿ ಸದ್ವಂಶಗಳಲ್ಲಿ,

ಉತ್ತಮವರ್ಣಗಳಲ್ಲಿ ಜನ್ಮವು ಪ್ರಾಪ್ತಿಯಾಗುವುದೆಂಬ ಅಭಿಪ್ರಾಯದಿಂದಲೇ ಹೇಳಿದ್ದಾನೆ. ಅವನ ಅಭಿಪ್ರಾಯವು ಹಾಗಿರದಿದ್ದರೆ ಧರ್ಮವ್ಯಾಧನು ವ್ಯಾಧನಾಗಿ ಉಳಿಯುತ್ತಿರಲಿಲ್ಲ. ಬ್ರಾಹ್ಮಣಶ್ರೇಷ್ಠನಾಗಿ ಬ್ರಹ್ಮಕರ್ಮವನ್ನೇ ಮಾಡಲು ಉಪಕ್ರಮಿಸುತ್ತಿದ್ದನು. ಬ್ರಾಹ್ಮಣನಿಗೆ ಬ್ರಾಹ್ಮೀವಿದ್ಯೆಯನ್ನು ಉಪದೇಶಿಸಿದವನಿವನು. ಆದರೆ ಧರ್ಮವ್ಯಾಧನು ತಾನು ಬ್ರಾಹ್ಮಣನೆಂದು ಎಲ್ಲೂ ಹೇಳಿಕೊಂಡಿಲ್ಲ. ಬ್ರಾಹ್ಮಣನಿಗೆ ಉಚಿತವಾದ ಕರ್ಮಗಳನ್ನು ಮಾಡಲು ಹೊರಟಿಲ್ಲ. ವರ್ಣಾಶ್ರಮಧರ್ಮಗಳನ್ನು ಮೀರಿ ನಡೆಯುವ ಇಚ್ಛೆಯು ಅವನಿಗೆ ಸ್ವಲ್ಪವಾದರೂ ಇರಲಿಲ್ಲ. ಮೇಲಾಗಿ ಒಬ್ಬನ ಗುಣಗಳಿಂದ ವರ್ಣವನ್ನು ನಿರ್ಧರಿಸುವ ಸಾಧ್ಯತೆಯೂ ಇಲ್ಲ. ಪರಾತ್ಪರನಾದ, ಪರಂಜ್ಯೋತಿಯಾದ, ಜ್ಞಾನ-ವಿಜ್ಞಾನಗಳಿಗೆ ಆಶ್ರಯೀಭೂತನಾದ ಶ್ರೀಕೃಷ್ಣನೂ ಸಹ ಗೊಲ್ಲನಾಗಿಯೇ ಬೆಳೆದು, ಸಾರಥಿಯಾಗಿ ಅರ್ಜುನನಿಗೆ ಗೀತೆಯನ್ನು ಬೋಧಿಸುವಾಗ–'ನಾನೇ ಅವನು, ನಾನೇ ಬ್ರಹ್ಮ' ಎಂಬ ಅಭಿಪ್ರಾಯದ ಹತ್ತಾರು ಮಾತುಗಳನ್ನು ಹೇಳಿದರೂ ಸಹ ತಾನು ಬ್ರಾಹ್ಮಣನೆಂದು ಹೇಳಿಕೊಳ್ಳಲಿಲ್ಲ. ಬ್ರಾಹ್ಮಣರಿಗೆ ಉಚಿತವಾದ ಕರ್ಮಾನುಷ್ಠಾನಗಳನ್ನು ಮಾಡಲಿಲ್ಲ. ಜ್ಞಾನಿಯಾದ ಕೃಷ್ಣನು ವರ್ಣಾಶ್ರಮಧರ್ಮಗಳಿಂದ ಅತೀತನಾದರೂ ಲೋಕಕ್ಕೆ ಆದರ್ಶವನ್ನು ತೋರಲು ಬ್ರಾಹ್ಮಣರೇ ತನ್ನ ದೇವರೆಂದೂ ಹಲವು ಕಡೆ ಹೇಳಿಕೊಂಡಿದ್ದಾನೆ.

ಅವಸಾನಹೊಂದುವಾಗಲೂ ಸಹ–ಹಿಂದಿನ ಜನ್ಮದ ಕರ್ಮಫಲವನ್ನು ಭಗವಂತನೇ ಆದರೂ ಅನುಭವಿಸಿಯೇ ತೀರಬೇಕೆಂಬುದನ್ನು ತೋರಿಸುವ ಸಲುವಾಗಿಯೋ ಎಂಬಂತೆ ವ್ಯಾಧನೊಬ್ಬನ ಬಾಣಕ್ಕೆ ಗುರಿಯಾಗುತ್ತಾನೆ. ಆದುದರಿಂದ ಉಚ್ಚ-ನೀಚವರ್ಣಗಳಲ್ಲಿ ಜನ್ಮವು ಕರ್ಮಫಲಾಯತ್ತವಾದುದು ಅಥವಾ ದೈವಾಯತ್ತವಾದುದು ಎಂಬುದು ಎಲ್ಲ ಯುಗಗಳಲ್ಲಿಯೂ, ಎಲ್ಲ ಕಾಲಗಳಲ್ಲಿಯೂ ಸತ್ಯವಾದುದು. ಅದನ್ನು ಮೀರಿ ನಡೆಯುವ ಸಾಧ್ಯತೆಯು ಯಾರಿಗೂ ಇಲ್ಲ. ಈ ವರ್ಣಾಶ್ರಮಧರ್ಮವು ಒಂದೊಂದು ದೇಶದಲ್ಲಿ ಒಂದೊಂದು ಬಗೆಯಾಗಿರಬಹುದು. ಆದರೆ ಉಚ್ಚ-ನೀಚಭಾವನೆಗಳು ಎಲ್ಲ ದೇಶಗಳಲ್ಲಿಯೂ ಯಾವುದಾದರೊಂದು ಸ್ವರೂಪದಲ್ಲಿ ಇದ್ದೇ ಇರುತ್ತವೆ. ಬೇರಾವ ವಿಧದಲ್ಲಿ ಅಲ್ಲದಿದ್ದರೂ ಬುದ್ಧಿವಂತರು, ಸಾಮಾನ್ಯಬುದ್ಧಿವಂತರು,

ದಡ್ಡರು–ಈ ಮೂರು ವಿಧವಾದ ತಾರತಮ್ಯವನ್ನು ತಪ್ಪಿಸುವ ಸಾಧ್ಯತೆಯಂತೂ ಯಾವ ವಿಜ್ಞಾನಿಗೂ ಇಲ್ಲ. ಇದನ್ನು ಅನುಸರಿಸಿಯೇ ಮಾನವನಲ್ಲಿ ಸುಖ-ದುಃಖಗಳೂ ಇರುತ್ತವೆ. ನಮ್ಮ ದೇಶವನ್ನು ತೆಗೆದುಕೊಂಡರೆ ಸಾಮಾನ್ಯಧರ್ಮ, ವರ್ಣಾಶ್ರಮಧರ್ಮ–ಎಂದು ಎರಡು ಧರ್ಮಗಳಿವೆ. ಈ ಎರಡು ಧರ್ಮಗಳೂ ಈಗ ಲುಪ್ತವಾಗಿ ಹೋಗುತ್ತಿವೆ. ವರ್ಣಾಶ್ರಮಗಳ ವ್ಯವಸ್ಥೆಯಿಂದ ಉಚ್ಚ-ನೀಚಭಾವನೆಗಳುಂಟಾಗುವುವೆಂಬುದು ಈಗಿನ ವಾದವಾಗಿದೆ. ಈ ನಾಲ್ಕು ವರ್ಣಗಳೂ ಪುರುಷನ ಅಂಗಗಳಂತೆ ಒಂದನ್ನೊಂದು ಅನುಸರಿಸಿ ನಡೆಯುವ ವ್ಯವಸ್ಥೆಯಿದ್ದಿತು. ಯಾವುದೊಂದು ಅವಯವವು ಊನವಾದರೂ ಮನುಷ್ಯನು ಸರಿಯಾಗಿ ಕೆಲಸಮಾಡಲು ಹೇಗೆ ಸಾಧ್ಯವಾಗುವುದಿಲ್ಲವೋ-ಅದೇ ರೀತಿಯಲ್ಲಿ ಯಾವುದೊಂದು ವರ್ಣಕ್ಕೆ ತೊಂದರೆಯಾದರೂ ರಾಜ್ಯಾಂಗವು ಸರಿಯಾಗಿ ಸುವ್ಯವಸ್ಥೆಯಿಂದ ನಡೆಯುತ್ತಿರಲಿಲ್ಲ.

ಹಿಂದೆ ರಾಜನಾದವನು ವರ್ಣಾಶ್ರಮಗಳನ್ನು ಸುವ್ಯವಸ್ಥಿತವಾಗಿರುವಂತೆ ನೋಡಿಕೊಳ್ಳುತ್ತಿದ್ದನು. ಆಶ್ರಮಧರ್ಮವನ್ನು ಮೀರಿ ನಡೆಯುವವರನ್ನು ಎಚ್ಚರಿಸುತ್ತಿದ್ದನು. ಅದರಿಂದಾಗಿ ಪ್ರಜೆಗಳು ತಮ್ಮ-ತಮ್ಮ ವರ್ಣಾಶ್ರಮಗಳಲ್ಲಿದ್ದು ವರ್ಣಾಶ್ರಮೋಕ್ತವಾದ ಧರ್ಮಾಚರಣೆಗಳನ್ನು ಮಾಡುತ್ತಾ ಮುಂದೆ ಉತ್ತಮಜನ್ಮಗಳನ್ನು ಪಡೆಯಲು ಅಂದಿನ ರಾಜ್ಯಭಾರವು ಸಹಕಾರಿಯಾಗಿತ್ತು. ಆದರೆ ಇಂದು ಆ ವರ್ಣಾಶ್ರಮಗಳ ಕಟ್ಟುಪಾಡೇ ಸಂಪೂರ್ಣವಾಗಿ ಸಡಿಲಗೊಂಡಿದೆ. ಮಾನವರು ಮುಂದಿನ ಜನ್ಮವೇ ಇಲ್ಲವೆಂಬ ನಾಸ್ತಿಕವಾದಾವಲಂಬಿಗಳಾಗಿ ಸ್ವೇಚ್ಛೆಯಿಂದ ವರ್ತಿಸುತ್ತಿದ್ದಾರೆ. ಆದರೆ ಈ ಒಂದು ವಿಷಯವನ್ನಂತೂ ನಾವು ಖಂಡಿತವಾಗಿಯೂ ಮರೆಯಬಾರದು. ಅದನ್ನೇ ಧರ್ಮವ್ಯಾಧನು ಈ ಪ್ರಕರಣದಲ್ಲಿ ಒತ್ತಿಯೊತ್ತಿ ಹೇಳಿದ್ದಾನೆ : "ಕರ್ಮಫಲವು ನೆಳಲಿನಂತೆ ಜನ್ಮ-ಜನ್ಮಾಂತರಗಳಿಗೂ ಬೆನ್ನಟ್ಟಿ ಬರುವುದು ನಿಶ್ಚಯ. ಸ್ವವರ್ಣೋಕ್ತವಾದ ಕರ್ಮಮಾಡದೇ ಇರುವುದರಿಂದ ಆ ದೋಷವೂ ಸಹ ಅವನ ಬೆನ್ನಹಿಂದೆಯೇ ಬರುತ್ತದೆ. ಇದು ಯಾರನ್ನೂ ಯಾವ ಕಾಲದಲ್ಲಿಯೂ ಬಿಡುವುದಿಲ್ಲ." ಹರಿ-ಹರ-ಬ್ರಹ್ಮಾದಿಗಳಿಗೇ ಈ ಕರ್ಮಫಲವನ್ನು ವ್ಯತ್ಯಸ್ತಗೊಳಿಸಲು ಶಕ್ಯವಿಲ್ಲವೆಂದಮೇಲೆ ವರ್ಣಾಶ್ರಮ ಧರ್ಮಗಳನ್ನು ನಿರ್ಮೂಲಗೊಳಿಸಬೇಕೆಂದು ಬೋಧಿಸುವವರು ಈ ಕರ್ಮ

ಫಲಗಳನ್ನು ಎಂದಿಗೂ ವಿನಾಶಗೊಳಿಸಲಾರರು. "ಉದ್ಧರೇದಾತ್ಮ-ನಾತ್ಮಾನಂ" ಎಂಬಂತೆ ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳಬೇಕು. 'ಮಾಡಿದ್ದುಣ್ಣೋ ಮಹರಾಯ' ಎಂಬಂತೆ ನಾವು ಮಾಡಿದ ಕರ್ಮಫಲವನ್ನು ನಾವೇ ಅನುಭವಿಸಬೇಕು. ನಮ್ಮ ಶುಭಾಶುಭಕರ್ಮಫಲಗಳಲ್ಲಿ ಪತ್ನೀ-ಪುತ್ರರೂ ಸಹ ಪಾಲುಗೊಳ್ಳಲಾರರು. ಜನ್ಮಾಂತರವು ಶತಶಸ್ಸಿದ್ಧ ವಾದುದು.

ಈಗಾಗಲೇ ಇದಕ್ಕೆ ಅನೇಕಾನೇಕ ಲೌಕಿಕಸಾದೃಶ್ಯಗಳೂ ಸಿಕ್ಕಿವೆ. ಇಂದಿನ ವಿಜ್ಞಾನಿಗಳು ಜನ್ಮಾಂತರವುಂಟೆಂಬ ನಿರ್ಣಯಕ್ಕೆ ಬರುತ್ತಿದ್ದಾರೆ. ಆದುದ ರಿಂದ ಮಾನವನು–ಅದರಲ್ಲಿಯೂ ಭಾರತೀಯನು, ತನ್ನ ವರ್ಣೋಕ್ತವಾದ ಧರ್ಮಗಳನ್ನೂ ಸಾಮಾನ್ಯಧರ್ಮಗಳನ್ನೂ, ಸಾಧ್ಯವಾದಮಟ್ಟಿಗೂ ಬಿಡದೇ, ಅಸೂಯಾರಹಿತನಾಗಿದ್ದು ಮುಂದೆ ಉತ್ತಮಜನ್ಮಗಳನ್ನೂ ಕಟ್ಟಕಡೆಗೆ ಭಗವಂತನ ಸಾಮೀಪ್ಯ-ಸಾರೂಪ್ಯ-ಸಾಯುಜ್ಯಗಳನ್ನೂ ಪಡೆಯಲು ಈಗಿ ನಿಂದಲೇ ಯತ್ನಿಸುವುದು ಸರ್ವಥಾ ಯುಕ್ತವಾಗಿದೆ. ನಾಳೆ ಉಂಟೆಂಬುದು ಎಷ್ಟು ನಿಶ್ಚಯವೋ ಮುಂದಿನ ಜನ್ಮವು ಉಂಟೆಂಬುದೂ ಅಷ್ಟೇ ನಿಶ್ಚಯ ವಾದುದು. "ನಾಳೆ ಏನಾಗುವುದೋ ನೋಡಿಕೊಳ್ಳೋಣ" ಎಂಬ ಧೋರಣೆ ಯಿಂದ ಕೆಟ್ಟಕೆಲಸ ಮಾಡಿದುದಕ್ಕೆ ಅನುಭವಿಸಬೇಕಾದ ಶಿಕ್ಷೆಯನ್ನು ಅಥವಾ ಯಾತನೆಯನ್ನು ಮಾನವನು ಹೇಗೆ ಅನುಭವಿಸುತ್ತಾನೆಯೋ ಮತ್ತು ತಾನು ಹಿಂದೆ ಮಾಡಿದುದಕ್ಕೆ ಹೇಗೆ ಮರುಗುತ್ತಾನೆಯೋ–ಅದೇ ರೀತಿಯಲ್ಲಿಯೇ ಜನ್ಮಾಂತರದಲ್ಲಿ ತಾನು ಮಾಡಿದುದಕ್ಕೂ ಅನುರೂಪವಾದ ಫಲವನ್ನು ಅನು ಭವಿಸುವುದೂ ನಿಶ್ಚಯ. ಆದರೆ ಮಾಯೆಯಿಂದ ನಾವು ಆವೃತರಾಗಿರುವುದ ರಿಂದ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳ ನೆನಪು ನಮಗಿರುವುದಿಲ್ಲ. ಈ ಜನ್ಮದಲ್ಲಿಯೇ ಮಾಡಿದ ಅನೇಕಕಾರ್ಯಗಳನ್ನು ನಾವು ಮರೆಯುತ್ತೇವೆ. ನಾವು ಮರೆತುಹೋದಮಾತ್ರಕ್ಕೆ ನಾವು ಮಾಡಿದ ಕರ್ಮವು ಅಥವಾ ಕರ್ಮಫಲವು ನಾಶವಾಗುವುದಿಲ್ಲ. ನಾವು ಇಪ್ಪತ್ತು ವರ್ಷಗಳ ಹಿಂದೆ ಒಬ್ಬನಿಂದ ಸಾಲತೆಗೆದು ಅದನ್ನು ನಾವು ಮರೆತುಬಿಟ್ಟರೂ ಸಾಲಕೊಟ್ಟವನು ಹೇಗೆ ಮರೆ ಯುವುದಿಲ್ಲವೋ–ಅದೇ ರೀತಿಯಲ್ಲಿ ನಮ್ಮ ಕರ್ಮ ಮತ್ತು ಕರ್ಮಫಲಗಳನ್ನು ನಾವು ಸ್ಮರಿಸದಿದ್ದರೂ ಸಹ ಅವು ನಮ್ಮ ಜನ್ಮ-ಜನ್ಮಾಂತರಗಳಲ್ಲಿಯೂ ನಮ್ಮ

ಬೆನ್ನಿನ ಹಿಂದೆಯೇ ಇರುತ್ತವೆ. ಆಯಾ ಕರ್ಮಗಳಿಗೆ ಸಂಬಂಧಿಸಿದಂತೆ ಫಲ ಗಳನ್ನು ಕೊಡುತ್ತಲೇ ಇರುತ್ತವೆ. ಈ ರಹಸ್ಯವಿಷಯವು ಮಾನವನ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ನಿಂತರೆ ಮಾನವನು ದುಷ್ಕಾರ್ಯಗಳನ್ನು ಖಂಡಿತವಾಗಿಯೂ ಮಾಡಲಾರನು.)

೨೧೨ನೆಯ ಅಧ್ಯಾಯವು ಮುಗಿಯಿತು.

೨೧೩ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಪ್ರಾಣವಾಯುವಿನ ಸ್ಥಿತಿಯ ವರ್ಣನೆ: ಪರಮಾತ್ಮನ ಸಾಕ್ಷಾತ್ಕಾರಕ್ಕೆ ಉಪಾಯ

ಪುನಃ ಬ್ರಾಹ್ಮಣನು ಧರ್ಮವ್ಯಾಧನನ್ನು ಪ್ರಶ್ನಿಸುತ್ತಾನೆ :

**ಪಾರ್ಥಿವಂ ಧಾತುಮಾಸಾದ್ಯ ಶಾರೀರೋಽಗ್ನಿಃ ಕಥಂ ಭವೇತ್ ।**
**ಅವಕಾಶವಿಶೇಷೇಣ ಕಥಂ ವರ್ತಯತೇಽನಿಲಃ ॥೧॥**

"ಮಹಾನುಭಾವ! ಶರೀರದಲ್ಲಿರುವ ಅಗ್ನಿಯು, ತ್ವಕ್ ಮುಂತಾದ ಏಳು ಧಾತುಗಳಿಂದಾಗಿರುವ ಈ ದೇಹವನ್ನು ಹೊಂದಿ, ಶರೀರವನ್ನು ಪೋಷಿಸುವ ಶರೀರಾಭಿಮಾನಿಯು ಹೇಗೆ ಆಗುತ್ತಾನೆ? ಮತ್ತು ನಾಡಿಯ ವಿಶಿಷ್ಟವಾದ ಮಾರ್ಗದಿಂದ ಶರೀರವನ್ನು ಪ್ರಾಣವಾಯುವು ಹೇಗೆ ಚಾಲನೆಗೊಳಿಸುತ್ತದೆ?"

ಯುಧಿಷ್ಠಿರ! ಬ್ರಾಹ್ಮಣನಿಂದ ಕೇಳಲ್ಪಟ್ಟ ಈ ಪ್ರಶ್ನೆಗೆ ಧರ್ಮವ್ಯಾಧನು ಯಥಾನುರೂಪವಾಗಿ ಉತ್ತರಿಸಿದನು :

(ಬ್ರಾಹ್ಮಣನು ವ್ಯಾಧನನ್ನು ಕೇಳಿದುದು ಶಾರೀರಕಶಾಸ್ತ್ರದ ವಿಷಯ. ನಮ್ಮ ಭಾರತದೇಶದ ಹಿರಿಮೆಯು ಶಾರೀರಕಶಾಸ್ತ್ರದ ಪ್ರೌಢಿಮೆಯಲ್ಲಿಯೇ ಇರುವುದು. ಬೇರಾವ ದೇಶವೂ ಶಾರೀರಕಶಾಸ್ತ್ರದ ವಿಷಯವಾಗಿ ಇಷ್ಟು ಪರಿಚಯವನ್ನು ಪಡೆದಿರುವುದಿಲ್ಲ. ಅನೇಕರಿಗಿದು ಊಹಿಸಲು ಸಹ ಕಷ್ಟ ವಾದ ವಿಷಯವಾಗಿದೆ. ಶಾರೀರಕಶಾಸ್ತ್ರವೆಂದರೆ ವೈದ್ಯಶಾಸ್ತ್ರವೆಂದು ಭಾವಿಸ ಬಾರದು. ವೈದ್ಯಶಾಸ್ತ್ರದ ರೀತಿಯಲ್ಲಿ ಶರೀರವನ್ನು ಪರೀಕ್ಷಿಸಹೋದರೆ ಶರೀರದಲ್ಲಿರುವ ಅಪಾರಶಕ್ತಿಗಳ ಅರಿವಾಗುವುದಿಲ್ಲ. ಸಾವಿರಾರು ನಾಡಿಗಳ ಇರುವಿಕೆಯೂ ಸಹ ಆಧುನಿಕವೈದ್ಯರಿಗೆ ತಿಳಿಯುವುದಿಲ್ಲ. ಕೇವಲ ಕೆಲವು ನರಗಳ, ಮಾಂಸಖಂಡಗಳ ಪರಿಚಯವು ಮಾತ್ರವೇ ಅವರಿಗಿರಲು ಸಾಧ್ಯ.

ನಮ್ಮ ಶರೀರದಲ್ಲಿರುವ ಅಗ್ನಿ ಮತ್ತು ವಾಯುಗಳ ಪರಿಚಯವು ಜ್ಞಾನಿಯಾದವನಿಗೆ ಮಾತ್ರವೇ ಇರುವುದು. ನಮ್ಮ ಶರೀರದಲ್ಲಿ ಪಂಚವಾಯುಗಳಿವೆಯೆಂದರೆ ಆಧುನಿಕವೈದ್ಯರು ನಂಬುವರೇ? ಆದರೆ ಪ್ರಾಣಾಪಾನಾದಿ ಪಂಚವಾಯುಗಳಂತೂ ನಮ್ಮ ದೇಹದಲ್ಲಿರುವುದು ನಿಶ್ಚಯ. ಸಾಧಾರಣವಾಗಿ ಜನಸಾಮಾನ್ಯರೆಲ್ಲರೂ ಉಚ್ಛ್ವಾಸ-ನಿಃಶ್ವಾಸಗಳನ್ನೇ ಪ್ರಾಣವೆಂದು ತಿಳಿಯುವರು. ಉಚ್ಛ್ವಾಸ-ನಿಃಶ್ವಾಸಗಳಿಗೂ ಪ್ರಾಣವಾಯುವಿಗೂ ನಿಕಟಸಂಬಂಧವಿದ್ದರೂ–ಅದು ಪ್ರಾಣದ ಕಾರ್ಯವಾದರೂ ಸಹ ಉಚ್ಛ್ವಾಸ-ನಿಃಶ್ವಾಸಗಳೇ ಪ್ರಾಣವಲ್ಲ. ಉಸಿರಾಡುವುದು ನಿಂತರೆ ಪ್ರಾಣಹೋಯಿತೆಂದು ಸಾಮಾನ್ಯವಾಗಿ ಭಾವಿಸಿದರೂ ಯೋಗಿಗಳ ವಿಷಯದಲ್ಲಿ ಇದು ಅಪವಾದವಾಗುತ್ತದೆ. ಯೋಗಿಗಳಾದವರು ಉಸಿರಾಡದೆಯೇ ಅನೇಕದಿನಗಳವರೆಗೆ ಬದುಕಿರಬಲ್ಲರು. ಇದರಿಂದಾಗಿ ಉಚ್ಛ್ವಾಸ-ನಿಃಶ್ವಾಸಗಳಿಗಿಂತಲೂ ಬೇರೆಯಾದ ಪ್ರಾಣವೊಂದಿದೆಯೆಂಬುದನ್ನು ನಿರ್ಧರಿಸಬಹುದಾಗಿದೆ. ಇದರಂತೆಯೇ ಅಪಾನ, ವ್ಯಾನ, ಉದಾನ, ಸಮಾನಗಳು ನಮ್ಮ ಶರೀರದಲ್ಲಿ ಶಕ್ತಿರೂಪವಾಗಿ ಇರುವುವು. ಇವುಗಳನ್ನೂ, ಷಟ್ಚಕ್ರಗಳನ್ನೂ ಮತ್ತು ಅಗ್ನಿಯನ್ನೂ ತಿಳಿಯುವುದೇ ಶಾರೀರಕಶಾಸ್ತ್ರ. ಈ ಶಾಸ್ತ್ರವು ಭಾರತೀಯರಿಗೆ ಮೀಸಲಾದುದು. ಭೌತಿಕ ವಿಜ್ಞಾನಿಗಳೊಡನೆ ನಾವು ಹೇಗೆ ಸಮಾನತೆಯನ್ನು ಪಡೆಯಲು ಬಹಳ ಕಷ್ಟವಾಗುವುದೋ–ಅಂತೆಯೇ ಪ್ರಪಂಚದ ಯಾವ ಜನಾಂಗದವರೂ ಶಾರೀರಕಶಾಸ್ತ್ರದಲ್ಲಿ ನಮ್ಮ ಸಮಾನತೆಯನ್ನು ಪಡೆಯಲು ಕಷ್ಟವಾಗುವುದು. ಆದುದರಿಂದ ಈ ಮಹಾವಿದ್ಯೆಯನ್ನು ನಾವು ಯಥಾವತ್ತಾಗಿ ಉಳಿಸಿಕೊಂಡು ಬರಬೇಕಾದ ಆವಶ್ಯಕತೆಯು ಬಹಳವಾಗಿದೆ. ಇತ್ತೀಚೆಗೆ ಈ ಮಹಾವಿದ್ಯೆಯು ಕೇವಲ ಪ್ರವಚನಗಳಲ್ಲಿ ಮಾತ್ರವೇ ಉಳಿದಿದೆ. ಇದು ಅನುಭವೈಕವೇದ್ಯವಾದ ಮಹಾವಿದ್ಯೆ. ಆದರೆ ಇದಕ್ಕೆ ಮಹಾಸಾಧನೆಯನ್ನು ಮಾಡಬೇಕು. ಗುರುವಿನ ಅನುಗ್ರಹವಿರಬೇಕು. ಇಂತಹ ಬಹುಜಟಿಲವಾದ ಶಾರೀರಕ ವಿದ್ಯೆಯ ವಿಷಯವನ್ನು ಬ್ರಾಹ್ಮಣನು ಪ್ರಶ್ನಿಸುತ್ತಾನೆ.)

ವ್ಯಾಧನು ಹೇಳುತ್ತಾನೆ :

**ಮೂರ್ಧಾನಮಾಶ್ರಿತೋ ವಹ್ನಿಃ ಶರೀರಂ ಪರಿಪಾಲಯನ್ ।**
**ಪ್ರಾಣೋ ಮೂರ್ಧನಿ ಚಾಗ್ನೌ ಚ ವರ್ತಮಾನೋ ವಿಚೇಷ್ಟತೇ ॥೩॥**

"ವಿಜ್ಞಾನರೂಪವಾದ ಅಗ್ನಿಯು ತಲೆಯಲ್ಲಿದ್ದು (ಸಹಸ್ರಾರ) ಶರೀರವನ್ನು ರಕ್ಷಿಸುತ್ತದೆ. ಪ್ರಾಣವಾದರೋ ಸಹಸ್ರಾರ ಮತ್ತು ಅಗ್ನಿ–ಈ ಎರಡರಲ್ಲಿಯೂ ಇರುತ್ತಾ ಎರಡರ ಕಾರ್ಯವಾಗಿ ದೇಹವನ್ನು ಆಡಿಸುತ್ತದೆ.

**ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ಪ್ರಾಣೇ ಪ್ರತಿಷ್ಠಿತಮ್ ।**
**ಶ್ರೇಷ್ಠಂ ತದೇವ ಭೂತಾನಾಂ ಬ್ರಹ್ಮಯೋನಿಮುಪಾಸ್ಮಹೇ ॥೪॥**

ಹೀಗೆ ಭೂತ-ವರ್ತಮಾನ-ಭವಿಷ್ಯತ್ ಎಲ್ಲವೂ ಕೂಡ ಪ್ರಾಣದಲ್ಲಿ ನೆಲೆಗೊಂಡಿವೆ. ಈ ಪ್ರಾಣವೇ ಭೂತಗಳಲ್ಲಿ ಶ್ರೇಷ್ಠವಾದುದು. ಬ್ರಹ್ಮಮೂಲವಾಗಿರುವ ಈ ಪ್ರಾಣವನ್ನು ನಾವು ಉಪಾಸನೆಮಾಡುತ್ತೇವೆ.

**ಸ ಜನ್ತುಃ ಸರ್ವಭೂತಾತ್ಮಾ ಪುರುಷಃ ಸ ಸನಾತನಃ ।**
**ಮಹಾನ್ಬುದ್ಧಿರಹಙ್ಕಾರೋ ಭೂತಾನಾಂ ವಿಷಯಶ್ಚ ಸಃ ॥೫॥**

ಈ ಅಗ್ನಿ-ಪ್ರಾಣಗಳ (ಚಿದಗ್ನಿ ಮತ್ತು ಪ್ರಾಣಗಳ) ಒಡಗೂಡಿದ ಜೀವನೇ ಎಲ್ಲ ಭೂತಗಳಿಗೂ ಆತ್ಮನು. ನಿತ್ಯವಾದ ಪರಬ್ರಹ್ಮವೂ ಅದೇ ಆಗಿರುತ್ತದೆ. ಅದೇ ಬ್ರಹ್ಮವೇ ಮಹತ್ತು, ಬುದ್ಧಿ, ಅಹಂಕಾರಗಳಾಗಿ ಪ್ರಾಣಿಗಳ ಶಬ್ದ-ಸ್ಪರ್ಶ ಮುಂತಾದ ವಿಷಯಗಳೂ ಆಗುತ್ತವೆ.

**ಏವಂ ತ್ವಿಹ ಸ ಸರ್ವತ್ರ ಪ್ರಾಣೇನ ಪರಿಪಾಲ್ಯತೇ ।**
**ಪೃಷ್ಠತಸ್ತು ಸಮಾನೇನ ಸ್ವಾಂ ಸ್ವಾಂ ಗತಿಮುಪಾಶ್ರಿತಃ ॥೬॥**

**ಬಸ್ತಿಮೂಲಂ ಗುದಂ ಚೈವ ಪಾವಕಂ ಸಮುಪಾಶ್ರಿತಃ ।**
**ವಹನ್ಮೂತ್ರಂ ಪುರೀಷಂ ವಾಪ್ಯಪಾನಃ ಪರಿವರ್ತತೇ ॥೭॥**

ಹೀಗೆ ಈ ದೇಹೇಂದ್ರಿಯಾದಿಗಳೆಲ್ಲವೂ ಎಲ್ಲೆಡೆಗಳಲ್ಲಿಯೂ (ಒಳಗೆ ಮತ್ತು ಹೊರಗೆ) ಪ್ರಾಣದಿಂದ ರಕ್ಷಿಸಲ್ಪಡುತ್ತಿವೆ. ಪ್ರಾಣವು ಮಧ್ಯದಲ್ಲಿರುತ್ತದೆ. ಅನಂತರ ಅದು ಸಮಾನವಾಗಿ ಪೃಷ್ಠದಲ್ಲಿ ತನ್ನ ಉದ್ದಿಷ್ಟವಾದ ಗತಿಯನ್ನು ಹೊಂದುತ್ತಾ ಬಸ್ತಿಯ ಮೂಲಕ (ಮೂತ್ರಾಶಯ) ಗುದವನ್ನೂ ಮತ್ತು ಜಾಠರಾಗ್ನಿಯನ್ನೂ ಆಶ್ರಯಿಸಿ ಆಹಾರವನ್ನು ಜೀರ್ಣಮಾಡಿ, ಮೂತ್ರ-ಪುರೀಷಗಳನ್ನು ಅದರದರ ಜಾಗಕ್ಕೆ ಒಯ್ಯುತ್ತಾ ಅಪಾನವಾಗಿ ಕೆಲಸಮಾಡುತ್ತದೆ.

**ಪ್ರಯತ್ನೇ ಕರ್ಮಣಿ ಬಲೇ ಸ ಏಷ ತ್ರಿಷು ವರ್ತತೇ ।**
**ಉದಾನಮಿತಿ ತಂ ಪ್ರಾಹುರಧ್ಯಾತ್ಮವಿದುಷೋ ಜನಾಃ ॥೮॥**

ಹೀಗೆ ಅದೇ ಪ್ರಾಣವು ಪ್ರಯತ್ನದಲ್ಲೂ, ಅದಕ್ಕನುಕೂಲವಾದ ಕೆಲಸದಲ್ಲೂ ಮತ್ತು ಸಾಮರ್ಥ್ಯದಲ್ಲೂ–ಈ ಮೂರರಲ್ಲೂ ಇರುವಾಗ ಆಧ್ಯಾತ್ಮವನ್ನು ಬಲ್ಲ ಜನರು ಅದನ್ನು ಉದಾನವೆಂದು ಕರೆಯುತ್ತಾರೆ.

**ಸಂಧೌ ಸಂಧೌ ಸಂನಿವಿಷ್ಟಃ ಸರ್ವೇಷ್ವಪಿ ತಥಾನಿಲಃ ।**
**ಶರೀರೇಷು ಮನುಷ್ಯಾಣಾಂ ವ್ಯಾನ ಇತ್ಯುಪದಿಶ್ಯತೇ ॥೯॥**

ಈ ವಾಯುವು ಮನುಷ್ಯನ ಇಡೀ ದೇಹದಲ್ಲಿ ಪ್ರತಿಯೊಂದು ಸಂಧಿಯಲ್ಲೂ ಸೇರಿಕೊಂಡಾಗ ವ್ಯಾನವೆಂದು ಕರೆಯಲ್ಪಡುತ್ತದೆ.

**ಧಾತುಷ್ವಗ್ನಿಸ್ತು ವಿತತಃ ಸ ತು ವಾಯುಸಮೀರಿತಃ ।**
**ರಸಾನ್ಧಾತೂಂಶ್ಚ ದೋಷಾಂಶ್ಚ ವರ್ತಯನ್ಪರಿಧಾವತಿ ॥೧೦॥**

**ಪ್ರಾಣಾನಾಂ ಸಂನಿಪಾತಾತ್ತು ಸಂನಿಪಾತಃ ಪ್ರಜಾಯತೇ ।**
**ಊಷ್ಮಾ ಚಾಗ್ನಿ ರಿತಿ ಜ್ಞೇಯೋ ಯೋಽನ್ನಂ ಪಚತಿ ದೇಹಿನಾಮ್ ॥೧೧॥**

ಜಾಠರಾಗ್ನಿಯು ತ್ವಕ್ ಮುಂತಾದ ಧಾತುಗಳಲ್ಲಿ ವ್ಯಾಪಿಸಿ ಪ್ರಾಣಾದಿ ವಾಯುಗಳಿಂದ ಪ್ರೇರಿತವಾಗಿ, ಅನ್ನವೇ ಮುಂತಾದ ರಸಗಳನ್ನೂ–ಧಾತುಗಳನ್ನೂ ಮತ್ತು ಪಿತ್ತವೇ ಮೊದಲಾದ ದೋಷಗಳನ್ನೂ ಪರಿಣಾಮಗೊಳಿಸುತ್ತಾ ಓಡಾಡುತ್ತದೆ. ಪ್ರಾಣಗಳ ಸಂಘರ್ಷದಿಂದ ಜಠರದಲ್ಲಿ ಶಾಖವುಂಟಾಗುತ್ತದೆ. ಅದೇ ವೈಶ್ವಾನರಾಗ್ನಿ. ಅದೇ ದೇಹಿಗಳ ಅನ್ನವನ್ನು ಪಚನ ಮಾಡುವುದು.

**ಸಮಾನೋದಾನಯೋರ್ಮಧ್ಯೇ ಪ್ರಾಣಾಪಾನೌ ಸಮಾಹಿತೌ ।**
**ಸಮರ್ಥಿತಸ್ತ್ವಧಿಷ್ಠಾನಂ ಸಮ್ಯಕ್ಪಚತಿ ಪಾವಕಃ ॥೧೨॥**

ಶರೀರವ್ಯಾಪಾರವು ನಡೆಯುವಾಗ ಪ್ರಾಣ ಮತ್ತು ಅಪಾನಗಳು ಸಮಾನ ಮತ್ತು ಉದಾನಗಳ ಮಧ್ಯದಲ್ಲಿ ಸೇರಿಕೊಳ್ಳುತ್ತವೆ. (ಹೃದಯದಲ್ಲಿರುವ ಪ್ರಾಣವು ನಾಭಿಯಲ್ಲಿರುವ ಸಮಾನವನ್ನೂ, ಗುದದಲ್ಲಿರುವ

ಅಪಾನವು ಕಂಠದಲ್ಲಿರುವ ಉದಾನವನ್ನೂ ಸೇರಿಕೊಳ್ಳುತ್ತದೆ.) ಅಲ್ಲಿಯೂ ಹೀಗೆಯೇ ಪ್ರಾಣಾಪಾನ-ಸಮಾನಗಳು ನಾಭಿಯಲ್ಲಿ ಸಂಘರ್ಷಣವಾಗುವುದರಿಂದ ಅಗ್ನಿಯು ಉಂಟಾಗಿ ತನ್ನ ಅಧಿಷ್ಠಾನವಾದ ಸಪ್ತಧಾತುಮಯವಾದ ಶರೀರವನ್ನು ಪರಿಣಾಮಹೊಂದಿಸುತ್ತದೆ. (ಪುಷ್ಟಿಗೊಳಿಸುತ್ತದೆ.)

**ಅಸ್ಯಾಪಿ ಪಾಯುಪರ್ಯನ್ತಸ್ತಥಾ ಸ್ಯಾದ್ಗುದಸಂಜ್ಞಿತಃ ।**
**ಸ್ರೋತಾಂಸಿ ತಸ್ಮಾಜ್ಜಾಯನ್ತೇ ಸರ್ವಪ್ರಾಣೇಷು ದೇಹಿನಾಮ್ ॥೧೩॥**

ಈ ಅಗ್ನಿಯು ಪಾಯುಸ್ಥಾನದವರೆಗೆ ಗುದವನ್ನು ಪ್ರವೇಶಿಸಿದಾಗ ಗುದ ಅಥವಾ ಅಪಾನವಾಗುತ್ತದೆ. ಅಪಾನಾಗ್ನಿಯಿಂದಲೇ ಐದು ಪ್ರಾಣಗಳಲ್ಲಿಯೂ ಸ್ರೋತಸ್ಸುಗಳು ಅಥವಾ ನಾಡೀಮಾರ್ಗಗಳು ಉಂಟಾಗುತ್ತವೆ.

**ಅಗ್ನಿವೇಗವಹಃ ಪ್ರಾಣೋ ಗುದಾನ್ತೇ ಪ್ರತಿಹನ್ಯತೇ ।**
**ಸ ಊರ್ಧ್ವಮಾಗಮ್ಯ ಪುನಃ ಸಮುತ್ಕ್ಷಿಪತಿ ಪಾವಕಮ್ ॥೧೪॥**

ನಾಡಿಯ ಮಾರ್ಗಗಳ ಮೂಲಕ ಮೇಲಕ್ಕೆ ಪುಟಹೊಡೆದಾಗ ಪ್ರಾಣಾದಿವಾಯುಗಳಾಗುತ್ತವೆ. ಅಗ್ನಿಯ ವೇಗವನ್ನು ಹೊತ್ತುಬಂದ ಪ್ರಾಣವು ಗುದದ ತುದಿಯಲ್ಲಿ ಡಿಕ್ಕಿಹೊಡೆದು ಮತ್ತೆ ಮೇಲಕ್ಕೆ ಜಿಗಿದು ಪುನಃ ಅಗ್ನಿಯನ್ನು ಎಸೆಯುತ್ತದೆ. (ಘರ್ಷಣೆಯ ವೇಗದಿಂದ ಅಗ್ನಿಯು ವೃದ್ಧಿಯಾಗುವುದು.)

**ಪಕ್ವಾಶಯಸ್ತ್ವಧೋ ನಾಭ್ಯಾಮೂರ್ಧ್ವಮಾಮಾಶಯಃ ಸ್ಥಿತಃ ।**
**ನಾಭಿಮಧ್ಯೇ ಶರೀರಸ್ಯ ಪ್ರಾಣಾಃ ಸರ್ವೇ ಪ್ರತಿಷ್ಠಿತಾಃ ॥೧೫॥**

ಪಕ್ವಾನ್ನದ ಜಾಗವು ನಾಭಿಯ ಕೆಳಗಡೆ ಮತ್ತು ಆಮಾಶಯವು ಅದರ ಮೇಲೆ ಇರುತ್ತದೆ. ಶರೀರದಲ್ಲಿ ನಾಭಿಮಧ್ಯದಲ್ಲಿ ಎಲ್ಲ ಪ್ರಾಣಗಳೂ ನೆಲೆಗೊಂಡಿವೆ. (ಪ್ರಾಣಗಳಿಗೆ ನಾಭಿಯೇ ಕೇಂದ್ರ.)

**ಪ್ರವೃತ್ತಾ ಹೃದಯಾತ್ಸರ್ವೇ ತಿರ್ಯಗೂರ್ಧ್ವಮಧಸ್ತಥಾ ।**
**ವಹನ್ತ್ಯನ್ನರಸಾನ್ನಾಡ್ಯೋ ದಶಪ್ರಾಣಪ್ರಚೋದಿತಾಃ ॥೧೬॥**

ನಾಡಿಗಳೆಲ್ಲವೂ ಹೃದಯದಿಂದ ಅಡ್ಡಲಾಗಿ ಮೇಲಕ್ಕೆ ಮತ್ತು ಕೆಳಕ್ಕೆ ಹೊರಟು * ಹತ್ತುಪ್ರಾಣಗಳಿಂದ ಪ್ರೇರಿಸಲ್ಪಟ್ಟು ಅನ್ನರಸಗಳನ್ನು ಸಾಗಿಸುತ್ತವೆ.

**ಯೋಗಿನಾಮೇಷ ಮಾರ್ಗಸ್ತು ಯೇನ ಗಚ್ಛನ್ತಿ ತತ್ಪರಮ್ ।**
**ಜಿತಕ್ಲಮಾಃ ಸಮಾ ಧೀರಾ ಮೂರ್ಧನ್ಯಾತ್ಮಾನಮಾದಧುಃ ।**
**ಏವಂ ಸರ್ವೇಷು ವಿತತೌ ಪ್ರಾಣಾಪಾನೌ ಹಿ ದೇಹಿಷು ॥೧೭॥**

ತಲೆಯಿಂದ ಹಿಡಿದು ಪಾಯುಸ್ಥಾನದವರೆಗಿನ ಈ ಮಾರ್ಗವು ಯೋಗಿಗಳಿಗೆ ಪರಬ್ರಹ್ಮನನ್ನು ಹೊಂದುವ ಹಾದಿಯಾಗಿದೆ. ಕ್ಲೇಶಗಳನ್ನು ಜಯಿಸಿದವರಾಗಿ ಪ್ರಾಣಾಪಾನಸಾಮ್ಯವನ್ನೂ ಮತ್ತು ತ್ರಿಗುಣಸಾಮ್ಯವನ್ನೂ ಹೊಂದಿದ ಧೀರರಾದ ಯೋಗಿಗಳು ತಲೆಯಲ್ಲಿ ಸಹಸ್ರಾರಸ್ಥಾನದಲ್ಲಿ ತಮ್ಮನ್ನು ಪ್ರತಿಷ್ಠಿಸಿಕೊಳ್ಳುತ್ತಾರೆ. ಹೀಗೆ ಎಲ್ಲ ಪ್ರಾಣಿಗಳಲ್ಲಿಯೂ ಪ್ರಾಣಾಪಾನಗಳು ವಿಸ್ತಾರವಾಗಿವೆ.

**ಏಕಾದಶವಿಕಾರಾತ್ಮಾ ಕಲಾಸಮ್ಭಾರಸಮ್ಭೃತಃ ।**
**ಮೂರ್ತಿಮನ್ತಂ ಹಿ ತಂ ವಿದ್ಧಿ ನಿತ್ಯಂ ಯೋಗಜಿತಾತ್ಮಕಮ್ ॥೧೮॥**

---

* (ದಶಪ್ರಾಣಗಳು ಅಥವಾ ವಾಯುಗಳು ಮತ್ತು ದೇಹದಲ್ಲಿ ಅವುಗಳಿರುವ ಸ್ಥಾನಗಳು.)

**ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ಚ ವಾಯವಃ ।**
**ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಸಂಸ್ಥಿತಃ ॥**

**ಉದಾನಃ ಕಂಠದೇಶಸ್ಥೋ ವ್ಯಾನಃ ಸರ್ವಶರೀರಗಃ ।**
**ನಾಗಶ್ಚ ಕೂರ್ಮಕೃಕರೋ ದೇವದತ್ತೋ ಧನಂಜಯ ॥**

**ವಾಗ್ದ್ವಾರೇ ನಾಗ ಆಖ್ಯಾತಃ ಕೂರ್ಮ ಉನ್ಮೀಲನೇ ಸ್ಮೃತಃ ।**
**ಕೃಕರಾಚ್ಚಕ್ಷುತಂ ಜ್ಞೇಯಂ ದೇವದತ್ತಾದ್ವಿಜೃಂಭಣಮ್ ।**
**ನ ಜಹಾತಿ ಮೃತಂ ವಾಪಿ ಸರ್ವವ್ಯಾಪೀ ಧನಂಜಯಃ ॥**

ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಐದು ವಾಯುಗಳು ನಮ್ಮ ದೇಹದಲ್ಲಿವೆ. ಪ್ರಾಣವು ಹೃದಯದಲ್ಲಿಯೂ, ಅಪಾನವು ಗುದಸ್ಥಾನದಲ್ಲಿಯೂ, ಸಮಾನವು ನಾಭಿಯಲ್ಲಿಯೂ, ಉದಾನವು ಕುತ್ತಿಗೆ

ಜೀವನು ಪ್ರಾಣ, ಇಂದ್ರಿಯ ಮುಂತಾದ ಹನ್ನೊಂದು ಬಗೆಯ ಇಂದ್ರಿಯಗಳ ವಿಕಾರಗಳಲ್ಲಿ (ಲಿಂಗಶರೀರಗಳಲ್ಲಿ ) ತಾದಾತ್ಮ್ಯವನ್ನು ಹೊಂದಿ ಷೋಡಶಕಲೆ* ಗಳಿಂದ ಕೂಡಿ ಮೂರ್ತವಾದ ಸೂಕ್ಷ್ಮ-ಸ್ಥೂಲದೇಹಗಳನ್ನು ಹೊಂದುತ್ತಾನೆ.

ನಿತ್ಯನೂ, ಯೋಗದಿಂದ ಬುದ್ಧಿಯನ್ನು ವಶಪಡಿಸಿಕೊಂಡಿರುವವನೂ ಆದ ಶುದ್ಧಾತ್ಮನೇ ವಿಕಾಸದಲ್ಲಿ ಹೀಗೆ ಮೂರ್ತರೂಪವನ್ನು ತಾಳುತ್ತಾನೆ. ಇದನ್ನೇ ಯೋಗಬಲದಿಂದ ಜಯಿಸಲ್ಪಡುವ ಆತ್ಮನೆಂದು ನೀನು ತಿಳಿಯುವವನಾಗು. ಜೀವವು ಪ್ರಾಣಾದಿಗಳಿಂದ ಬೇರೆಯಾದುದು.

**ತಸ್ಮಿನ್ಯಃ ಸಂಸ್ಥಿತೋ ಹ್ಯಗ್ನಿರ್ನಿತ್ಯಂ ಸ್ಥಾಲ್ಯಾಮಿವಾಹಿತಃ ।**
**ಆತ್ಮಾನಂ ತಂ ವಿಜಾನೀಹಿ ನಿತ್ಯಂ ಯೋಗಜಿತಾತ್ಮಕಮ್ ॥೧೯॥**

ಪಾತ್ರೆಯಲ್ಲಿ ಇಡಲ್ಪಟ್ಟ ಅಗ್ನಿಯು ಉರಿಯುವಂತೆ–ಈ ಷೋಡಶಕಲಾ ಸಮುದಾಯವೆಂಬ ಶರೀರದ ಮಧ್ಯದಲ್ಲಿ ಜೀವವೆಂಬ ಅಗ್ನಿಯು ಉರಿಯುತ್ತದೆ. ಯೋಗಮಾರ್ಗಗಳಿಂದ ಜಯಿಸಲ್ಪಡುವ ಅದನ್ನೇ ಆತ್ಮನೆಂದು ತಿಳಿಯುವವನಾಗು.

---

ಯಲ್ಲಿಯೂ ಮತ್ತು ವ್ಯಾನವು ಸರ್ವವ್ಯಾಪಿಯಾಗಿಯೂ ಎಂದರೆ ಶರೀರದ ಎಲ್ಲ ಕೀಲುಪ್ರದೇಶಗಳಲ್ಲಿಯೂ ಇರುವುದು. ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯಗಳೆಂಬ ಐದು ಉಪವಾಯುಗಳಿವೆ. ನಾಗವಾಯುವು ನಾವು ಆಡುವ ಮಾತಿನ ದ್ವಾರದಲ್ಲಿಯೂ, ಕೂರ್ಮವು ರೆಪ್ಪೆಗಳು ಮುಚ್ಚಿ ತೆಗೆಯುವಿಕೆಯಲ್ಲಿಯೂ ಇರುತ್ತದೆ. ಶೀನುವುದು ಕೃಕರವಾಯುವಿನ ಕಾರ್ಯ. ಆಕಳಿಸುವುದು ದೇವದತ್ತವಾಯುವಿನ ಕಾರ್ಯ. ಧನಂಜಯವಾಯುವು ದೇಹದಲ್ಲಿ ಸರ್ವತ್ರ ವ್ಯಾಪಿಸಿರುತ್ತದೆ. ಪ್ರಾಣವಾಯುವು ಹೋದಮೇಲೆಯೂ ಸಹ ಧನಂಜಯವಾಯುವು ದೇಹವನ್ನು ಬಿಡುವುದಿಲ್ಲ.)

* ಕಲೆಗಳು ೧೬ :- ಪ್ರಾಣ, ಶ್ರದ್ಧೆ, ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ, ಇಂದ್ರಿಯ, ಮನಸ್ಸು, ಅನ್ನ, ವೀರ್ಯ, ತಪಸ್ಸು, ಮಂತ್ರ, ಕರ್ಮ, ಲೋಕ, ನಾಮ.

**ದೇವೋ ಯಃ ಸಂಸ್ಥಿತಸ್ತಸ್ಮಿನ್ನಬ್ಬಿನ್ದುರಿವ ಪುಷ್ಕರೇ ।**
**ಕ್ಷೇತ್ರಜ್ಞಂ ತಂ ವಿಜಾನೀಹಿ ನಿತ್ಯಂ ಯೋಗಜಿತಾತ್ಮಕಮ್ ॥೨೦॥**

ಯೋಗದಿಂದ ಬುದ್ಧಿಯನ್ನು ವಶಪಡಿಸಿಕೊಂಡು ತಾವರೇ ಎಲೆಯಲ್ಲಿನ ನೀರಿನ ಕಣದಂತೆ ಕ್ಷೇತ್ರಜ್ಞನೂ, ನಿತ್ಯನೂ ಆದ ಜೀವಾತ್ಮನು ಯಾವುದಕ್ಕೂ ಅಂಟಿಕೊಳ್ಳದೇ ಹದಿನಾರು ಕಲೆಗಳ ಮಧ್ಯದಲ್ಲಿ ಅಡಗಿದ್ದಾನೆ. ಯೋಗದಿಂದ ಆತ್ಮೋದಯ ಹೊಂದಿದ ಅವನನ್ನೇ ಕ್ಷೇತ್ರಜ್ಞನನ್ನಾಗಿ ನೀನು ತಿಳಿ.

**ಜೀವಾತ್ಮಕಾನಿ ಜಾನೀಹಿ ರಜಃ ಸತ್ತ್ವಂ ತಮಸ್ತಥಾ ।**
**ಜೀವಮಾತ್ಮಗುಣಂ ವಿದ್ಧಿ ತಥಾತ್ಮಾನಂ ಪರಾತ್ಮಕಮ್ ॥೨೧॥**

ರಜಸ್ಸು, ಸತ್ತ್ವ ಮತ್ತು ತಮಸ್ಸು–ಇವುಗಳಿಗೂ ಇವನು ಆತ್ಮನಾಗಿದ್ದಾನೆ. ಈ ಜೀವನನ್ನು ಪರಮಾತ್ಮನ ಗುಣವೆಂದೂ ಮತ್ತು ಆತ್ಮನನ್ನು ಪರಸ್ವರೂಪನೆಂದೂ ತಿಳಿ.

**ಅಚೇತನಂ ಜೀವಗುಣಂ ವದನ್ತಿ**
**ಸ ಚೇಷ್ಟತೇ ಚೇಷ್ಟಯತೇ ಚ ಸರ್ವಮ್ ।**
**ತತಃ ಪರಂ ಕ್ಷೇತ್ರವಿದೋ ವದನ್ತಿ**
**ಪ್ರಾಕಲ್ಪಯದ್ಯೋ ಭುವನಾನಿ ಸಪ್ತ ॥೨೨॥**

ಜಡಶರೀರವು ಜೀವಕ್ಕೆ ಭೋಗ್ಯವಾಗಿದೆ. ಕರ್ಮಮಾಡುವವನೂ ಮತ್ತು ಮಾಡಿಸುವವನೂ ಆತ್ಮನೇ. ಸಪ್ತಪ್ರಪಂಚಗಳೆಲ್ಲವನ್ನೂ ಸೃಷ್ಟಿಸಿದ ಪರಬ್ರಹ್ಮವು ಇದಕ್ಕಿಂತಲೂ ಉತ್ಕೃಷ್ಟವಾದುದೆಂದು ಶರೀರತತ್ತ್ವವನ್ನು ತಿಳಿದಿರುವ ಮಹಾತ್ಮರು ಹೇಳುತ್ತಾರೆ.

**ಏವಂ ಸರ್ವೇಷು ಭೂತೇಷು ಭೂತಾತ್ಮಾ ಸಮ್ಪ್ರಕಾಶತೇ ।**
**ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಜ್ಞಾನವೇದಿಭಿಃ ॥೨೩॥**

ಹೀಗೆ ಎಲ್ಲ ಭೂತಗಳಲ್ಲಿಯೂ ಆತ್ಮವಾಗಿ ಆತ್ಮನು ಪ್ರಕಾಶಿಸುತ್ತಾನೆ.

ಜ್ಞಾನಿಗಳು ಶ್ರೇಷ್ಠವೂ, ಸೂಕ್ಷ್ಮವೂ ಆದ ಬುದ್ಧಿಯಿಂದ ಇವನನ್ನು ಸಾಕ್ಷಾತ್ಕರಿಸುತ್ತಾರೆ.

**ಚಿತ್ತಸ್ಯ ಹಿ ಪ್ರಸಾದೇನ ಹನ್ತಿ ಕರ್ಮ ಶುಭಾಶುಭಮ್ ।**
**ಪ್ರಸನ್ನಾತ್ಮಾತ್ಮನಿ ಸ್ಥಿತ್ವಾ ಸುಖಮಾನನ್ತ್ಯಮಶ್ನುತೇ ॥೨೪॥**

ಮನಸ್ಸಿನ ಪ್ರಸನ್ನತೆಯಿಂದ ಜ್ಞಾನಿಯು ಪುಣ್ಯ-ಪಾಪಕರ್ಮಗಳನ್ನು ನಾಶಪಡಿಸಿಕೊಳ್ಳುತ್ತಾನೆ. ಪ್ರಸನ್ನವಾದ ಮನಸ್ಸುಳ್ಳವನಾಗಿ ಅನಂತವಾದ ಸುಖವನ್ನು ಅನುಭವಿಸುತ್ತಾನೆ.

**ಲಕ್ಷಣಂ ತು ಪ್ರಸಾದಸ್ಯ ಯಥಾ ತೃಪ್ತಃ ಸುಖಂ ಸ್ವಪೇತ್ ।**
**ನಿವಾತೇ ವಾ ಯಥಾ ದೀಪೋ ದೀಪ್ಯೇತ್ಕುಶಲದೀಪಿತಃ ॥೨೫॥**

ಪ್ರಸನ್ನತೆಗೆ ಈ ಸಾದೃಶ್ಯವನ್ನು ಕೊಡಬಹುದಾಗಿದೆ. ಮನುಷ್ಯನು ಭೋಜನಾದಿಗಳಿಂದ ತೃಪ್ತಿಗೊಂಡು ಕ್ಲೇಶವಿಲ್ಲದೇ ನಿದ್ರೆಮಾಡುವಾಗ ಹೇಗೆ ಇರುತ್ತಾನೆಯೋ ಆ ಸ್ಥಿತಿಗೆ ಹೋಲಿಸಬಹುದು. ಅಥವಾ ಜಾಣನಿಂದ ಹತ್ತಿ ಸಲ್ಪಟ್ಟ ದೀಪವು ಗಾಳಿಯಿಲ್ಲದ ಜಾಗದಲ್ಲಿ ನಿಸ್ಪಂದವಾಗಿ ಹೇಗೆ ಉರಿಯುತ್ತಿರುತ್ತದೆಯೋ ಅದಕ್ಕೂ ಹೋಲಿಸಬಹುದಾಗಿದೆ.

**ಪೂರ್ವರಾತ್ರೇ ಪರೇ ಚೈವ ಯುಞ್ಜಾನಃ ಸತತಂ ಮನಃ ।**
**ಲಘ್ವಾಹಾರೋ ವಿಶುದ್ಧಾತ್ಮಾ ಪಶ್ಯನ್ನಾತ್ಮಾನಮಾತ್ಮನಿ ॥೨೬॥**

**ಪ್ರದೀಪ್ತೇನೇವ ದೀಪೇನ ಮನೋದೀಪೇನ ಪಶ್ಯತಿ ।**
**ದೃಷ್ಟ್ವಾತ್ಮಾನಂ ನಿರಾತ್ಮಾನಂ ಸ ತದಾ ವಿಪ್ರಮುಚ್ಯತೇ ॥೨೭॥**

ಪೂರ್ವ ಮತ್ತು ಅಪರರಾತ್ರಿಗಳಲ್ಲಿ ಮನಸ್ಸನ್ನು ಪರಮಾತ್ಮಚಿಂತನೆಯಲ್ಲಿ ಲೀನಗೊಳಿಸಿ, ಲಘುವಾದ ಆಹಾರವನ್ನು ಸೇವಿಸುತ್ತಾ ಶುದ್ಧಬುದ್ಧಿಯುಳ್ಳವನು ತನ್ನೊಳಗೇ ಆತ್ಮನನ್ನು ಕಂಡುಕೊಳ್ಳುತ್ತಾನೆ. ಉರಿಯುತ್ತಿರುವ ದೀಪದಿಂದೆಂಬಂತೆ ಮನಸ್ಸೆಂಬ ದೀಪದಿಂದ ಹೃದಯಗುಹೆಯಲ್ಲಿರುವ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ (ಕಂಡುಕೊಳ್ಳುತ್ತಾನೆ.) ನಿರ್ಗುಣನಾದ ಆತ್ಮನನ್ನು ಯಾವಾಗ ಕಂಡುಕೊಳ್ಳುತ್ತಾನೆಯೋ–ಆಗ ಮುಕ್ತಿಯುಂಟಾಗುತ್ತದೆ.

**ಸರ್ವೋಪಾಯೈಸ್ತು ಲೋಭಸ್ಯ ಕ್ರೋಧಸ್ಯ ಚ ವಿನಿಗ್ರಹಃ ।**
**ಏತತ್ಪವಿತ್ರಂ ಲೋಕಾನಾಂ ತಪೋ ವೈ ಸಂಕ್ರಮೋ ಮತಃ ॥೨೮॥**

ಎಲ್ಲ ಉಪಾಯಗಳಿಂದಲೂ ಲೋಭ ಮತ್ತು ಕೋಪಗಳನ್ನು ನಿಗ್ರಹಿಸಬೇಕು. ಈ ನಿಗ್ರಹವೇ ಜನರನ್ನು ಭವಸಾಗರದಿಂದ ದಾಟಿಸುವ ಪವಿತ್ರವಾದ ಸೇತುರೂಪವಾದ ತಪಸ್ಸು.

**ನಿತ್ಯಂ ಕ್ರೋಧಾತ್ತಪೋ ರಕ್ಷೇದ್ಧರ್ಮಂ ರಕ್ಷೇಚ್ಚ ಮತ್ಸರಾತ್ ।**
**ವಿದ್ಯಾಂ ಮಾನಾಪಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥೨೯॥**

ಕೋಪಕ್ಕೆ ಸಿಕ್ಕದಂತೆ ಯಾವಾಗಲೂ ತಪಸ್ಸನ್ನು ಕಾಪಾಡಿಕೊಳ್ಳಬೇಕು. ಮಾತ್ಸರ್ಯಕ್ಕೆ ಸಿಲುಕದಂತೆ ಧರ್ಮವನ್ನು ರಕ್ಷಿಸಿಕೊಳ್ಳಬೇಕು. ಮಾನಾಪಮಾನಗಳಿಗೆ ಅಂಟಿಕೊಳ್ಳದಂತೆ ವಿದ್ಯೆಯನ್ನು ಸಂರಕ್ಷಿಸಿಕೊಳ್ಳಬೇಕು ಮತ್ತು ಆತ್ಮನನ್ನು ಪ್ರಮಾದಕ್ಕೆ ಅವಕಾಶಕೊಡದಂತೆ ರಕ್ಷಿಸಿಕೊಳ್ಳಬೇಕು.

**ಆನೃಶಂಸ್ಯಂ ಪರೋ ಧರ್ಮಃ ಕ್ಷಮಾ ಚ ಪರಮಂ ಬಲಮ್ ।**
**ಆತ್ಮಜ್ಞಾನಂ ಪರಂ ಜ್ಞಾನಂ ಸತ್ಯಂ ಚ ಪರಮಂ ವ್ರತಮ್ ॥೩೦॥**

**ಸತ್ಯಸ್ಯ ವಚನಂ ಶ್ರೇಯಃ ಸತ್ಯಂ ಜ್ಞಾನಂ ಹಿತಂ ಭವೇತ್ ।**
**ಯದ್ಭೂತಹಿತಮತ್ಯನ್ತಂ ತದ್ವೈ ಸತ್ಯಂ ಪರಂ ಮತಮ್ ॥೩೧॥**

ಕರುಣೆಯೇ (ಅಹಿಂಸೆ) ಶ್ರೇಷ್ಠವಾದ ಧರ್ಮ. ಕ್ಷಮೆಯೇ ಶ್ರೇಷ್ಠವಾದ ಬಲ. ಆತ್ಮಜ್ಞಾನವೇ ಶ್ರೇಷ್ಠವಾದ ಜ್ಞಾನ ಮತ್ತು ಸತ್ಯವೇ ವ್ರತಗಳಲ್ಲಿ ಶ್ರೇಷ್ಠವಾದುದು. ಸತ್ಯವನ್ನು ಆಡುವುದು ಶ್ರೇಯಸ್ಕರ. ಸತ್ಯವಾದ ಜ್ಞಾನವೇ ಹಿತಕರ. ಯಾವುದು ಭೂತಗಳಿಗೆ ಅತ್ಯಂತಹಿತಕರವೋ ಅದೇ ಶ್ರೇಷ್ಠವಾದ ಸತ್ಯ.

**ಯಸ್ಯ ಸರ್ವೇ ಸಮಾರಮ್ಭಾ ನಿರಾಶೀರ್ಬನ್ಧನಾಃ ಸದಾ ।**
**ತ್ಯಾಗೇ ಯಸ್ಯ ಹುತಂ ಸರ್ವಂ ಸ ತ್ಯಾಗೀ ಸ ಚ ಬುದ್ಧಿಮಾನ್ ॥೩೨॥**

ಯಾವನ ಎಲ್ಲ ವ್ಯವಹಾರಗಳೂ ಆಶೆಯ ಬಂಧನಗಳಿಂದ ವರ್ಜಿತವಾಗಿರುತ್ತವೆಯೋ ಮತ್ತು ಯಾವನು ಫಲತ್ಯಾಗವೆಂಬ ಅಗ್ನಿಯಲ್ಲಿ ಎಲ್ಲ ಕರ್ಮಗಳನ್ನೂ ಹೋಮಮಾಡುತ್ತಾನೆಯೋ–ಅವನೇ ತ್ಯಾಗೀ, ಅವನೇ ಬುದ್ಧಿವಂತ.

**ಯತೋ ನ ಗುರುರಪ್ಯೇನಂ ಶ್ರಾವಯೇದುಪಪಾದಯೇತ್ ।**
**ತಂ ವಿದ್ಯಾದ್ಬ್ರಹ್ಮಣೋ ಯೋಗಂ ವಿಯೋಗಂ**
**ಯೋಗಸಂಜ್ಞಿತಮ್ ॥೩೩॥**

ಈ ಪರಬ್ರಹ್ಮಯೋಗಸ್ವರೂಪವನ್ನು ಗುರುವೂ ಕೂಡ ಹೇಗಿದೆಯೋ ಹಾಗೆಯೇ ಹೇಳುವುದಕ್ಕಾಗುವುದಿಲ್ಲ. ಅದನ್ನು ಸಾದೃಶ್ಯ ಮುಂತಾದುವುಗಳ ಮೂಲಕ ಉಪಪಾದನೆ ಮಾಡಬಹುದು. ಸಂಸಾರದಿಂದ ವಿಯೋಗ ವನ್ನುಂಟುಮಾಡುವ ಯೋಗಸಂಜ್ಞಿತವಾದ ಈ ಬ್ರಹ್ಮಯೋಗವನ್ನು ತಾನೇ ತಿಳಿಯಬೇಕು ಮತ್ತು ಅನುಭವಿಸಬೇಕು.

**ನ ಹಿಂಸ್ಯಾತ್ಸರ್ವಭೂತಾನಿ ಮೈತ್ರಾಯಣಗತಶ್ಚರೇತ್ ।**
**ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್ ॥೩೪॥**

ಯಾವ ಪ್ರಾಣಿಯನ್ನೂ ಹಿಂಸೆಮಾಡಬಾರದು. ಎಲ್ಲರಲ್ಲಿಯೂ ಮಿತ್ರ ಭಾವದಿಂದ ನಡೆದುಕೊಳ್ಳಬೇಕು. ಈ ಬಗೆಯ ಜೀವನವನ್ನು ಕೈಗೊಂಡ ಬಳಿಕ ಯಾರೊಡನೆಯೂ ಶತ್ರುತ್ವವನ್ನಿಟ್ಟುಕೊಳ್ಳಬಾರದು.

**ಆಕಿಞ್ಚನ್ಯಂ ಸುಸಂತೋಷೋ ನಿರಾಶಿತ್ವಮಚಾಪಲಮ್ ।**
**ಏತದೇವ ಪರಂ ಜ್ಞಾನಂ ಸದಾತ್ಮಜ್ಞಾನಮುತ್ತಮಮ್ ॥೩೫॥**

ಅಕಿಂಚನತ್ವ (ಸಂಪತ್ತಿನಲ್ಲಿ ತನ್ನದೆಂಬ ಭಾವನೆಯಿಲ್ಲದಿರುವಿಕೆ), ಶ್ರೇಷ್ಠವಾದ ಸಂತೋಷ, ಆಸೆಯಿಲ್ಲದಿರುವಿಕೆ, ಚಾಪಲ್ಯವಿಲ್ಲದಿರುವಿಕೆ–ಇವೇ ಶ್ರೇಷ್ಠವಾದ ಜ್ಞಾನ ; ಉತ್ತಮವಾದ ಆತ್ಮಜ್ಞಾನ (ಆತ್ಮಜ್ಞಾನಿಯ ಲಕ್ಷಣ.)

**ಪರಿಗ್ರಹಂ ಪರಿತ್ಯಜ್ಯ ಭವೇದ್ಬುದ್ಧ್ಯಾ ಯತವ್ರತಃ ।**
**ಅಶೋಕಂ ಸ್ಥಾನಮಾಶ್ರಿತ್ಯ ನಿಶ್ಚಲಂ ಪ್ರೇತ್ಯ ಚೇಹ ಚ ॥೩೬॥**

ಎಲ್ಲ ಪರಿಗ್ರಹಗಳನ್ನೂ ಬಿಟ್ಟು ಬುದ್ಧಿಯಿಂದ ನಿಯತವಾದ ವ್ರತ ವುಳ್ಳವನಾಗಿರಬೇಕು. ಇಹ-ಪರಗಳೆರಡರಲ್ಲಿಯೂ ಶೋಕರಹಿತವೂ, ನಿಶ್ಚಲವೂ ಆದ ಸ್ಥಾನವನ್ನು ಆಶ್ರಯಿಸಬೇಕು. (ಐಹಿಕ-ಪಾರಲೌಕಿಕಫಲಗಳಲ್ಲಿ ವಿರಾಗಿಯಾಗಿರಬೇಕು.)

**ತಪೋನಿತ್ಯೇನ ದಾನ್ತೇನ ಮುನಿನಾ ಸಂಯತಾತ್ಮನಾ ।**
**ಅಜಿತಂ ಜೇತುಕಾಮೇನ ಭಾವ್ಯಂ ಸಙ್ಗೇಷ್ವಸಙ್ಗಿನಾ ॥೩೭॥**

ಮನಸ್ಸನ್ನು ನಿತ್ಯವೂ ತಪಸ್ಸಿನಲ್ಲಿ ನೆಲೆಗೊಳಿಸಿರಬೇಕು. ಶಮ-ದಮ ಸಂಪನ್ನನಾದ ಮುನಿಯಾಗಬೇಕು. ಪ್ರಾಕೃತರು ಯಾವುದನ್ನು ಜಯಿಸಲು ಸಾಧ್ಯವಿಲ್ಲವೋ ಅದನ್ನು ಜಯಿಸುವ ಇಚ್ಛೆಯುಳ್ಳವನಾಗಿ ಸಂಗದಲ್ಲಿದ್ದೂ ಅಸಂಗಿಯಾಗಿರಬೇಕು.

**ಗುಣಾಗುಣಮನಾಸಜ್ಗಮೇಕಕಾರ್ಯಮನನ್ತರಮ್ ।**
**ಏತದ್ಬ್ರಾಹ್ಮಣ ತೇ ವೃತ್ತಮಾಹುರೇಕಪದಂ ಸುಖಮ್ ॥೩೮॥**

ಬ್ರಹ್ಮನಿಷ್ಠನಾದ ವ್ಯಕ್ತಿಯ ವೃತ್ತವು (ನಡತೆಯು) ಇಂತಹುದು. ಅದು ಗುಣಾತೀತವಾದುದು (ಗುಣಗಳು ಅಗುಣಗಳಾಗುವ ಸ್ಥಿತಿಯುಳ್ಳದ್ದು) ; ಆಸಕ್ತಿರಹಿತವಾದುದು ; ಯಾವಾಗಲೂ ಮೋಕ್ಷಸಾಧನೆಯ ಹೊರತು ಬೇರೆ ಕಾರ್ಯವಿಲ್ಲದುದು ; ಇಂತಹ ನಡತೆಯನ್ನು ಸುಖವೆಂದೇ ಹೇಳುತ್ತಾರೆ.

ಅಥವಾ

ಗುಣಾತೀತನಾದ, ಸಂಗರಹಿತನಾದ, ಅವಿದ್ಯೆಯ ಆವರಣದಿಂದ ಗೋಚರನಾಗದಿರುವ ಪರಬ್ರಹ್ಮನ ಪ್ರಾಪ್ತಿಯೇ (ಬ್ರಹ್ಮಜ್ಞಾನವೇ) ಪರಮ ಸುಖವೆಂದು ಹೇಳುತ್ತಾರೆ.

**ಪರಿತ್ಯಜತಿ ಯೋ ದುಃಖಂ ಸುಖಂ ಚಾಪ್ಯುಭಯಂ ನರಃ ।**
**ಬ್ರಹ್ಮ ಪ್ರಾಪ್ನೋತಿ ಸೋಽತ್ಯನ್ತಮಸಜ್ಗೇನ ಚ ಗಚ್ಛತಿ ॥೩೯॥**

ಯಾವ ಮನುಷ್ಯನು ಸುಖ ಮತ್ತು ದುಃಖಗಳೆರಡನ್ನೂ ತೊರೆಯುತ್ತಾನೆಯೋ ಅವನು ಸಂಗರಹಿತನಾಗಿ ಪರಬ್ರಹ್ಮದ ಆತ್ಯಂತಿಕಪ್ರಾಪ್ತಿಯನ್ನು ಹೊಂದುತ್ತಾನೆ. ಎಲೈ ಬ್ರಾಹ್ಮಣಶ್ರೇಷ್ಠನೇ! ನೀನು ಕೇಳಿದುದೆಲ್ಲವನ್ನೂ ಸಂಕ್ಷೇಪವಾಗಿ ಹೇಳಿಯಾಯಿತು. ಇದಲ್ಲದೇ ಬೇರೆ ಏನನ್ನು ಕೇಳಲು ಇಚ್ಛಿಸುವೆ?"

೨೧೩ನೆಯ ಅಧ್ಯಾಯವು ಮುಗಿಯಿತು.

೨೧೪ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಮಾತಾ-ಪಿತೃಸೇವೆಯ ಫಲನಿರೂಪಣೆ

ಮಾರ್ಕಂಡೇಯಮಹರ್ಷಿಗಳು ಯುಧಿಷ್ಠಿರನನ್ನು ಕುರಿತು ಹೇಳುತ್ತಾರೆ :

"ಮಹಾರಾಜ! ಧರ್ಮವ್ಯಾಧನು ಮೋಕ್ಷಧರ್ಮವನ್ನು ಇಷ್ಟು

ಸುಸ್ಪಷ್ಟವಾಗಿ ಹೇಳಿದುದನ್ನು ಕೇಳಿ ಬಹುಸಂತುಷ್ಟನಾದ ಬ್ರಾಹ್ಮಣನು ಧರ್ಮವ್ಯಾಧನನ್ನು ಕುರಿತು ಹೇಳಿದನು :

"ಧರ್ಮಸ್ವರೂಪನೇ! ನೀನು ಹೇಳಿದ ವಿಷಯಗಳೆಲ್ಲವೂ ನ್ಯಾಯ ಯುಕ್ತವಾಗಿವೆ. ಪರಮಾದ್ಭುತವಾದ ಸಿದ್ಧಾಂತವಾಗಿವೆ. ಧರ್ಮ-ಪರಮಾರ್ಥ ಗಳ ವಿಷಯಗಳಲ್ಲಿ ನಿನಗೆ ತಿಳಿದಿರುವ ಭಾಗವೇ ಇಲ್ಲವೆಂದು ನಾನು ಭಾವಿ ಸಿದ್ದೇನೆ."

"ನಿಜ, ಬ್ರಾಹ್ಮಣೋತ್ತಮ! ನನಗೀ ಧರ್ಮಗಳೆಲ್ಲವೂ ತಾವಾಗಿ ತಿಳಿದುಬಂದಿವೆ. ಆದರೆ ನಾನು ಯಾವ ಉತ್ತಮಧರ್ಮವನ್ನು ಅನುಸರಿಸು ತ್ತಿರುವುದರಿಂದ ನನಗೆ ಜ್ಞಾನೋದಯವುಂಟಾಗಿದೆಯೆಂಬುದನ್ನು ಪ್ರತ್ಯಕ್ಷ ವಾಗಿಯೇ ನೋಡುವೆಯಂತೆ. ಮೇಲೇಳು, ಬ್ರಾಹ್ಮಣೋತ್ತಮ! ನಮ್ಮ ಮನೆಯೊಳಗೆ ಆಗಮಿಸು. ಒಳಗಿರುವ ವೃದ್ಧರಾದ ನನ್ನ ತಂದೆ-ತಾಯಿಗಳನ್ನು ಸಂದರ್ಶಿಸಲು ನೀನು ಯೋಗ್ಯನಾಗಿರುವೆ."

ಧರ್ಮಜ! ಒಡನೆಯೇ ಬ್ರಾಹ್ಮಣನೆದ್ದು ಧರ್ಮವ್ಯಾಧನ ಮನೆಯನ್ನು ಪ್ರವೇಶಿಸಿದನು. ಧರ್ಮವ್ಯಾಧನ ಮನೆಯು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಪ್ರಾಂಗಣಗಳನ್ನೊಳಗೊಂಡ ಮಹಾಸೌಧವಾಗಿದ್ದಿತು. ನೋಡಲು ಅತ್ಯಂತಮನೋಹರವಾಗಿದ್ದಿತು. ಸಾಕ್ಷಾತ್ ದೇವಗೃಹದಂತೆಯೇ ಪರಿ ಶೋಭಿಸುತ್ತಿದ್ದು ದೇವತೆಗಳಿಂದಲೂ ಅದು ಪುರಸ್ಕೃತವಾಗಿದ್ದಿತು. (ಆ ಮನೆ ಯಲ್ಲಿ ದೇವತಾಸಾನ್ನಿಧ್ಯವಿರುವಂತೆ ಕಾಣುತ್ತಿದ್ದಿತು.) ಮನೆಯ ಕೊಠಡಿಗಳು ವಿನೂತನವಾದ ಆಸನಗಳಿಂದಲೂ, ಹಾಸಿಗೆಗಳಿಂದಲೂ ಅಲಂಕೃತವಾಗಿ ದ್ದುವು. ಮನೆಯೊಳಗೆಲ್ಲಾ ಸುಗಂಧದ್ರವ್ಯಮಿಶ್ರಿತವಾದ ನೀರನ್ನು ಚುಮುಕಿಸಿ ದ್ದುದರಿಂದ ವಾತಾವರಣವು ಸುಗಂಧಮಯವಾಗಿದ್ದಿತು. ಧರ್ಮವ್ಯಾಧನ ತಂದೆ-ತಾಯಿಯರು ಶುಭ್ರವಸ್ತ್ರಗಳನ್ನು ಧರಿಸಿದವರಾಗಿ ತಮ್ಮ ಊಟವನ್ನು ಮುಗಿಸಿಕೊಂಡು ಸುಖಾಸೀನರಾಗಿದ್ದರು. ವ್ಯಾಧನು ತನ್ನ ತಂದೆ-ತಾಯಿಗಳನ್ನು ಕಾಣುತ್ತಲೇ ಅವರ ಕಾಲುಗಳಿಗೆ ತನ್ನ ತಲೆಯನ್ನು ಮುಟ್ಟಿಸಿ ನಮಸ್ಕರಿಸಿದನು.

ವೃದ್ಧರಾದ ದಂಪತಿಗಳು ತಮಗೆ ತಲೆಬಾಗಿ ನಮಸ್ಕರಿಸಿದ ತಮ್ಮ ಪುತ್ರನನ್ನು ಕುರಿತು ಹೇಳಿದರು :

**ಉತ್ತಿಷ್ಠೋತ್ತಿಷ್ಠ ಧರ್ಮಜ್ಞ ಧರ್ಮಸ್ತ್ವಾಮಭಿರಕ್ಷತು ।**
**ಪ್ರೀತೌ ಸ್ವಸ್ತವ ಶೌಚೇನ ದೀರ್ಘಮಾಯುರವಾಪ್ನುಹಿ ॥೮॥**

**ಗತಿಮಿಷ್ಟಾಂ ತಪೋ ಜ್ಞಾನಂ ಮೇಧಾಂ ಚ ಪರಮಾಂ ಗತಃ ।**
**ಸತ್ಪುತ್ರೇಣ ತ್ವಯಾ ಪುತ್ರ ನಿತ್ಯಂ ಕಾಲೇ ಸುಪೂಜಿತೇ ॥೯॥**



"ಧರ್ಮಜ್ಞನೇ! ಮೇಲೇಳು. ನಿನ್ನನ್ನು ನಿನ್ನ ಧರ್ಮವೇ ಸಂರಕ್ಷಿಸಲಿ. ನಾವು ನಿನ್ನ ನಿರ್ಮಲವಾದ ಬುದ್ಧಿಯನ್ನೂ, ಜೀವನವನ್ನೂ ನೋಡಿ ಸುಪ್ರೀತರಾಗಿದ್ದೇವೆ. ನಿನಗೆ ದೀರ್ಘಾಯುಷ್ಯವುಂಟಾಗಲಿ. ತಪಸ್ಸನ್ನು ಮಾಡಿ, ಜ್ಞಾನವನ್ನು ಪಡೆದು, ಮಹತ್ತರವಾದ ಮೇಧಾಶಕ್ತಿಯನ್ನೂ ಹೊಂದಿದವನಾಗಿ ಅಪೇಕ್ಷಿತವಾದ ಸದ್ಗತಿಯನ್ನು ಹೊಂದುವವನಾಗು. ಸತ್ಪುತ್ರನಾದ ನಿನ್ನಿಂದ

ನಾವು ಅನುದಿನವೂ ಕಾಲಕಾಲಕ್ಕೆ ಸತ್ಕೃತರಾಗುತ್ತಿದ್ದೇವೆ. ಹೊತ್ತು-ಹೊತ್ತಿಗೆ ನಮಗೆ ಬೇಕಾಗುವ ಆಹಾರಾದಿಗಳನ್ನು ಕೊಟ್ಟು ನಮ್ಮ ಮನಸ್ಸಿಗಾಗಲೀ-ದೇಹಕ್ಕಾಗಲೀ ಸ್ವಲ್ಪವೂ ತೊಂದರೆಯಾಗದಂತೆ ನೋಡಿಕೊಳ್ಳುತ್ತಿರುವೆ. ಇರುವ ಮೂವತ್ತುಮೂರುಕೋಟಿ ದೇವತೆಗಳಲ್ಲಿ ನೀನು ಯಾವೊಬ್ಬ ದೇವತೆಯನ್ನೂ ನಿನ್ನ ಆರಾಧ್ಯದೇವತೆಯೆಂದು ಪರಿಗಣಿಸಿರುವುದಿಲ್ಲ. (ತಂದೆ-ತಾಯಿಗಳನ್ನೇ ನೀನು ಪ್ರತ್ಯಕ್ಷದೇವತೆಗಳೆಂದು ಭಾವಿಸಿ ನಮ್ಮನ್ನು ಸತ್ಕರಿಸುತ್ತಿರುವೆ.) ಸತತವಾದ ಬ್ರಾಹ್ಮಣರ ಪರಿಚರ್ಯೆಯಿಂದಾಗಿ ಬ್ರಾಹ್ಮಣರ ಧರ್ಮವಾದ ದಮವನ್ನು (ಜಿತೇಂದ್ರಿಯತೆಯನ್ನು ) ಸಾಧಿಸಿರುವೆ. ನಿನ್ನ ಪಿತಾಮಹ-ಪ್ರಪಿತಾಮಹರೂ ಸಹ ನಿನ್ನಲ್ಲಿರುವ ಜಿತೇಂದ್ರಿಯತೆಯಿಂದಲೂ, ನೀನು ಮಾಡುತ್ತಿರುವ ನಮ್ಮ ಶುಶ್ರೂಷೆಯಿಂದಲೂ ಸುಪ್ರೀತರಾಗಿದ್ದಾರೆ. ನೀನು ನಮ್ಮನ್ನು ಕೇವಲ ತೋರಿಕೆಗಾಗಿ ಶುಶ್ರೂಷೆಮಾಡುತ್ತಿಲ್ಲ. ಮನಸಾ, ಕರ್ಮಣಾ, ವಾಚಾ–ಈ ಮೂರರ ಏಕತೆಯಿಂದ ನಮ್ಮ ಶುಶ್ರೂಷೆಮಾಡುತ್ತಿರುವೆ. ನಿನ್ನ ಮನಸ್ಸಿನಲ್ಲಿ ಈಗಲೂ ಸಹ ತಂದೆ-ತಾಯಿಗಳನ್ನು ಎಷ್ಟು ಬಗೆಯಿಂದ ಶುಶ್ರೂಷೆಮಾಡಿ ತಣಿಸಲಿ–ಎಂಬುದೇ ಇರುವುದು. ನಮ್ಮ ಶುಶ್ರೂಷಾವಿಷಯವು ಹೊರತಾಗಿ ಬೇರೆ ವಿಷಯಗಳೇ ನಿನ್ನ ಮನಸ್ಸಿನಲ್ಲಿ ಸುಳಿಯುವುದಿಲ್ಲ. ಜಮದಗ್ನಿಯ ಮಗನಾದ ಪರಶುರಾಮನು ಯಾವ ರೀತಿಯಲ್ಲಿ ವೃದ್ಧರಾದ ತನ್ನ ತಂದೆ-ತಾಯಿಗಳನ್ನು ಪರಮಾದರದಿಂದಲೂ, ಪರಮಶ್ರದ್ಧೆಯಿಂದಲೂ ಶುಶ್ರೂಷೆಮಾಡುತ್ತಿದ್ದನೋ–ಅದೇ ರೀತಿಯಲ್ಲಿ ಅಥವಾ ಅವನು ಮಾಡುತ್ತಿದ್ದುದಕ್ಕಿಂತಲೂ ಮಿಗಿಲಾಗಿ ನೀನು ನಮ್ಮನ್ನು ಶುಶ್ರೂಷೆಮಾಡುತ್ತಿರುವೆ."

ಧರ್ಮವ್ಯಾಧನ ತಂದೆ-ತಾಯಿಗಳು ತಮ್ಮ ಮಗನನ್ನು ಕುರಿತು ಹೀಗೆಂದು ಹೇಳಿದನಂತರ ವೃದ್ಧರಾದ ತಂದೆ-ತಾಯಿಗಳಿಗೆ ಧರ್ಮವ್ಯಾಧನು ಕೌಶಿಕನ ಪರಿಚಯವನ್ನು ಮಾಡಿಕೊಟ್ಟನು. ವೃದ್ಧದಂಪತಿಗಳು ಒಡನೆಯೇ ಮೇಲೆದ್ದು ಬ್ರಾಹ್ಮಣನನ್ನು ಆದರದಿಂದ ಸ್ವಾಗತಿಸಿ, ಆಸನದಲ್ಲಿ ಕುಳ್ಳಿರಿಸಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿದರು.

ಬ್ರಾಹ್ಮಣನೂ ಸಹ ವೃದ್ಧದಂಪತಿಗಳಿಗೆ ಯಥಾಯೋಗ್ಯವಾದ ಪುರಸ್ಕಾರವಿತ್ತು ಕುಳಿತುಕೊಳ್ಳುವಂತೆ ಹೇಳಿ ಅವರನ್ನು ಪ್ರಶ್ನಿಸಿದನು :

"ಸುಪುತ್ರರಿಂದಲೂ ಮತ್ತು ಸುಭೃತ್ಯರಿಂದಲೂ ಕೂಡಿರುವ ನಿಮ್ಮ ಮನೆಯಲ್ಲಿ ಎಲ್ಲರೂ ಕುಶಲಿಗಳಾಗಿರುವರೇ? ನಿಮ್ಮ ಶರೀರಗಳು ರೋಗ ರಹಿತವಾಗಿ ಆರೋಗ್ಯದಿಂದಿರುವುವೇ?"

"ವಿಪ್ರೋತ್ತಮ! ಮನೆಯಲ್ಲಿ ಭೃತ್ಯರಾದಿಯಾಗಿ ನಾವೆಲ್ಲರೂ ಕುಶಲಿಗಳಾಗಿರುತ್ತೇವೆ. ನೀನು ನಿನ್ನ ಊರಿನಿಂದ ಹೊರಟು ಇಲ್ಲಿಗೆ ಬರುವಾಗ ಹಾದಿಯಲ್ಲಿ ಯಾವ ವಿಧವಾದ ತೊಂದರೆಗೂ ಸಿಕ್ಕಿಕೊಳ್ಳದೇ ಆಗಮಿಸಿದೆಯಲ್ಲವೇ?"

ಯುಧಿಷ್ಠಿರ! ಹೀಗೆಂದು ಪ್ರಶ್ನಿಸಿದ ಆ ವೃದ್ಧದಂಪತಿಗಳನ್ನು ಕುರಿತು ಬ್ರಾಹ್ಮಣನು–'ಯಾವ ವಿಧವಾದ ವಿಘ್ನವೂ ಇಲ್ಲದೇ ನಿಮ್ಮಲ್ಲಿಗೆ ಆಗಮಿಸಿದೆನು'–ಎಂದು ಹೇಳಿ ವಿರಮಿಸಿದನು. ಅನಂತರ ಧರ್ಮವ್ಯಾಧನು ಅವರ ಸಂಭಾಷಣೆಯು ಮುಗಿದುದನ್ನು ನೋಡಿ ಬ್ರಾಹ್ಮಣನನ್ನು ಕುರಿತು ಹೇಳಿದನು :

**ಪಿತಾ ಮಾತಾ ಚ ಭಗವನ್ನೇತೌ ಮದ್ದೈವತಂ ಪರಮ್ ।**
**ಯದ್ದೈವತೇಭ್ಯಃ ಕರ್ತವ್ಯಂ ತದೇತಾಭ್ಯಾಂ ಕರೋಮ್ಯಹಮ್ ॥೧೮॥**

"ಬ್ರಾಹ್ಮಣೋತ್ತಮ! ಇವರೇ ನನ್ನ ತಾಯಿ-ತಂದೆಗಳು. ಇವರೇ ನನ್ನ ಭಾಗದ ದೇವತೆಗಳು. ಇವರಿಗಿಂತಲೂ ಬೇರೆಯ ದೇವತೆಗಳಿದ್ದಾರೆಂದು ನಾನು ಇದುವರೆಗೂ ಭಾವಿಸಿಯೇ ಇಲ್ಲ. ದೇವತೆಗಳಿಗೆ ಮಾಡಬೇಕಾದ ಪೂಜಾ-ಪುರಸ್ಕಾರಗಳನ್ನು ಅದೇ ವಿಧವಾದ ಶ್ರದ್ಧಾ-ಭಕ್ತಿಗಳಿಂದ ನಾನು ಈ ಪ್ರತ್ಯಕ್ಷದೇವತೆಗಳಿಗೆ ಮಾಡುತ್ತಿದ್ದೇನೆ.

**ತ್ರಯಸ್ತ್ರಿಂಶದ್ಯಥಾ ದೇವಾಃ ಸರ್ವೇ ಶಕ್ರಪುರೋಗಮಾಃ ।**
**ಸಮ್ಪೂಜ್ಯಾಃ ಸರ್ವಲೋಕಸ್ಯ ತಥಾ ವೃದ್ಧಾವಿಮೌ ಮಮ ॥೧೯॥**

ಇಂದ್ರಪ್ರಮುಖರಾದ ಮೂವತ್ತುಮೂರು ದೇವತೆಗಳು ಹೇಗೆ ಸಮಸ್ತ ಪ್ರಪಂಚಕ್ಕೂ ಸಂಪೂಜ್ಯರೋ–ಹಾಗೆಯೇ ಈ ವೃದ್ಧರಾದ ತಂದೆ-ತಾಯಿಗಳು ನನಗೆ ಪರಮಪೂಜ್ಯರು. (ಮೂವತ್ಮೂರು ದೇವತೆಗಳು : ಅಷ್ಟವಸುಗಳು, ಏಕಾದಶ ರುದ್ರರು, ದ್ವಾದಶಾದಿತ್ಯರು, ಇಂದ್ರ ಮತ್ತು ಪ್ರಜಾಪತಿ.)

**ಉಪಾಹಾರಾನಾಹರನ್ತೋ ದೇವತಾನಾಂ ಯಥಾ ದ್ವಿಜಾಃ ।**
**ಕುರ್ವನ್ತಿ ತದ್ವದೇತಾಭ್ಯಾಂ ಕರೋಮ್ಯಹಮತನ್ದ್ರಿತಃ ॥೨೦॥**

ಯಾವ ರೀತಿಯಲ್ಲಿ ಬ್ರಾಹ್ಮಣರು ದೇವನಿವೇದನಕ್ಕಾಗಿ, ಉತ್ತಮವಾದ ಪಕ್ವವಾದ ಫಲಗಳನ್ನು ಪ್ರಯತ್ನಪೂರ್ವಕವಾಗಿ ತಂದು ಶ್ರದ್ಧಾ-ಭಕ್ತಿಗಳಿಂದ ದೇವನನ್ನು ಪೂಜಿಸಿ ನಿವೇದನಮಾಡುವರೋ–ಅದೇ ರೀತಿಯಲ್ಲಿ ನಾನು ನನ್ನೀ ದೇವತೆಗಳಿಗೆ ಬೇಕಾದ ಶುಚಿ-ರುಚಿಯಾದ ಆಹಾರಪದಾರ್ಥಗಳನ್ನು ಸ್ವಲ್ಪವೂ ಅಲಸಿಕೆಯಿಲ್ಲದೇ ಕಾಲಕಾಲಕ್ಕೆ ಸಮರ್ಪಿಸುತ್ತೇನೆ.

**ಏತೌ ಮೇ ಪರಮಂ ಬ್ರಹ್ಮನ್ಪಿತಾ ಮಾತಾ ಚ ದೈವತಮ್ ।**
**ಏತೌ ಪುಷ್ಪೈಃ ಫಲೈ ರತ್ನೈಸ್ತೋಷಯಾಮಿ ಸದಾ ದ್ವಿಜ ॥೨೧॥**

ವಿಪ್ರೋತ್ತಮ! ಈ ತಂದೆ-ತಾಯಿಗಳೇ ನನಗೆ ಪರದೈವ. ಇವರನ್ನು ಫಲಗಳಿಂದಲೂ, ಪುಷ್ಪಗಳಿಂದಲೂ, ರತ್ನಹಾರಗಳಿಂದಲೂ ನಾನು ಸರ್ವದಾ ಸಂತುಷ್ಟರನ್ನಾಗಿ ಮಾಡುತ್ತೇನೆ.

**ಏತಾವೇವಾಗ್ನಯೋ ಮಹ್ಯಂ ಯಾನ್ವದನ್ತಿ ಮನೀಷಿಣಃ ।**
**ಯಜ್ಞಾ ವೇದಾಶ್ಚ ಚತ್ವಾರಃ ಸರ್ವಮೇತೌ ಮಮ ದ್ವಿಜ ॥೨೨॥**

ಇವರನ್ನೇ ನಾನು ಅಗ್ನಿತ್ರಯಗಳೆಂದು ಭಾವಿಸಿದ್ದೇನೆ. (ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯ ಈ ಮೂರು ಅಗ್ನಿಗಳಲ್ಲಿ ಹೋಮಮಾಡುವುದರಿಂದ ಯಾವ ಪುಣ್ಯವು ಲಭಿಸುವುದೋ ಇವರ ಶುಶ್ರೂಷೆಯಿಂದಲೇ ನನಗೆ ಅಷ್ಟೇ ಪುಣ್ಯವು ಲಭಿಸುವುದೆಂದು ದೃಢವಾಗಿ ನಂಬಿದ್ದೇನೆ.) ಸರ್ವಯಜ್ಞಗಳನ್ನು ಮಾಡಿದ ಫಲವನ್ನೂ, ನಾಲ್ಕು ವೇದಗಳನ್ನು ಅಧ್ಯಯನಮಾಡಿದ ಫಲವನ್ನೂ ನಾನು ಇವರ ಶುಶ್ರೂಷೆಯಿಂದಲೇ ಪಡೆಯುತ್ತೇನೆ. ನನಗೆ ಯಜ್ಞಕ್ರಿಯೆಯೆಂಬುದೂ ಇವರ ಶುಶ್ರೂಷೆಯೇ ಆಗಿದೆ. ನಾಲ್ಕು ವೇದಗಳ ಅಧ್ಯಯನವೆಂಬುದೂ ಇವರ ಶುಶ್ರೂಷೆಯೇ ಆಗಿದೆ.

**ಏತದರ್ಥಂ ಮಮ ಪ್ರಾಣಾ ಭಾರ್ಯಾ ಪುತ್ರಃ ಸುಹೃಜ್ಜನಃ ।**
**ಸಪುತ್ರದಾರಃ ಶುಶ್ರೂಷಾಂ ನಿತ್ಯಮೇವ ಕರೋಮ್ಯಹಮ್ ॥೨೩॥**

ಹೆಂಡತಿ, ಮಕ್ಕಳು, ಬಾಂಧವರು, ನನ್ನ ಪ್ರಾಣಗಳೂ ಸಹ ಇವರಿಗಾಗಿಯೇ ಇರುವುವು. ನನ್ನ ಹೆಂಡತಿಯಿಂದಲೂ ಮಕ್ಕಳಿಂದಲೂ ಕೂಡಿದವನಾಗಿ ನಾನಿವರ ಶುಶ್ರೂಷೆಯನ್ನು ಮಾಡುತ್ತಿರುತ್ತೇನೆ.

**ಸ್ವಯಂ ಚ ಸ್ನಾಪಯಾಮ್ಯೇತೌ ತಥಾ ಪಾದೌ ಪ್ರಧಾವಯೇ ।**
**ಆಹಾರಂ ಚ ಪ್ರಯಚ್ಛಾಮಿ ಸ್ವಯಂ ಚ ದ್ವಿಜಸತ್ತಮ ॥೨೪॥**

ನಾನೇ ಸ್ವತಃ ಇವರಿಬ್ಬರಿಗೂ ಮೈಯುಜ್ಜಿ ಸ್ನಾನಮಾಡಿಸುತ್ತೇನೆ. ಶುಭ್ರವಾದ ವಸ್ತ್ರಗಳನ್ನು ತೊಡಿಸುತ್ತೇನೆ. ಇವರ ಕಾಲುಗಳನ್ನು ಒತ್ತುತ್ತೇನೆ. ಇವರಿಗೆ ಕಾಲಕ್ಕೆ ಸರಿಯಾಗಿ ಆಹಾರವನ್ನು ನಾನೇ ಕೊಡುತ್ತೇನೆ.

**ಅನುಕೂಲಂ ತಥಾ ವಚ್ಮಿ ವಿಪ್ರಿಯಂ ಪರಿವರ್ಜಯೇ ।**
**ಅಧರ್ಮೇಣಾಪಿ ಸಂಯುಕ್ತಂ ಪ್ರಿಯಮಾಭ್ಯಾಂ**
**ಕರೋಮ್ಯಹಮ್ ॥೨೫॥**

**ಧರ್ಮಮೇವ ಗುರುಂ ಜ್ಞಾತ್ವಾ ಕರೋಮಿ ದ್ವಿಜಸತ್ತಮ ।**
**ಅತನ್ದ್ರಿತಃ ಸದಾ ವಿಪ್ರ ಶುಶ್ರೂಷಾಂ ವೈ ಕರೋಮ್ಯಹಮ್ ॥೨೬॥**

ಇವರಿಗೆ ಹಿತಕರವಾದ ಮಾತುಗಳನ್ನೇ ಆಡುತ್ತೇನೆ. ಯದ್ಯಪಿ ಮಾತುಗಳು ಮಧುರವಾಗಿದ್ದರೂ ಇವರಿಗೆ ಆ ಮಾತುಗಳು ಬೇಡವಾಗಿದ್ದಲ್ಲಿ ಅಂತಹ ಮಾತುಗಳನ್ನು ಇವರ ಸಮ್ಮುಖದಲ್ಲಿ ಆಡುವುದಿಲ್ಲ. ಒಂದು ವೇಳೆ ಇವರಿಗೆ ಪ್ರೀತಿಯಾಗುವ ಕಾರ್ಯವನ್ನು ಮಾಡಲು ಹೋದಾಗ ಅದು ಅಧರ್ಮಕಾರ್ಯವೆನಿಸಿದರೂ ಅದನ್ನು ಗಣನೆಗೆ ತಂದುಕೊಳ್ಳುವುದಿಲ್ಲ. ಹೇಗಾದರೂ ಇವರನ್ನು ಸರ್ವದಾ ಸಂತುಷ್ಟರಾಗಿರುವಂತೆ ನೋಡಿಕೊಳ್ಳುವುದೇ ನನ್ನ ಮುಖ್ಯಕರ್ತವ್ಯವೆಂದು ಭಾವಿಸಿದ್ದೇನೆ. ಇದೇ ನನಗೆ ಪರಮ ಶ್ರೇಷ್ಠವಾದ ಧರ್ಮವೆಂದು ತಿಳಿದು ಸ್ವಲ್ಪವಾದರೂ ಬೇಸರಿಸದೇ ಇವರನ್ನು ಶುಶ್ರೂಷೆ ಮಾಡುತ್ತೇನೆ.

**ಪಞ್ಚೈವ ಗುರವೋ ಬ್ರಹ್ಮನ್ಪುರುಷಸ್ಯ ಬುಭೂಷತಃ ।**
**ಪಿತಾ ಮಾತಾಗ್ನಿರಾತ್ಮಾ ಚ ಗುರುಶ್ಚ ದ್ವಿಜಸತ್ತಮ ॥೨೭॥**

ಮೋಕ್ಷಸಾಧಕನಾದ ಮನುಷ್ಯನಿಗೆ ಐವರು ಗುರುಗಳಿದ್ದಾರೆ. ತಂದೆ, ತಾಯಿ, ಅಗ್ನಿ, ಆತ್ಮಾ ಮತ್ತು ಜ್ಞಾನೋಪದೇಶಕನಾದ ಗುರು–ಇವರೇ ಆ ಐವರು.

**ಏತೇಷು ಯಸ್ತು ವರ್ತೇತ ಸಮ್ಯಗೇವ ದ್ವಿಜೋತ್ತಮ ।**
**ಭವೇಯುರಗ್ನಯಸ್ತಸ್ಯ ಪರಿಚೀರ್ಣಾಸ್ತು ನಿತ್ಯಶಃ ।**
**ಗಾರ್ಹಸ್ಥ್ಯೇ ವರ್ತಮಾನಸ್ಯ ಏಷ ಧರ್ಮಃ ಸನಾತನಃ ॥೨೮॥**

ಈ ಐವರನ್ನೂ ಯಥಾಯೋಗ್ಯವಾಗಿ ತತ್ತತ್ಕಾಲಗಳಲ್ಲಿ ಉಪಚರಿಸುತ್ತಿರುವವನು ನಿತ್ಯಾಗ್ನಿಹೋತ್ರಿಯಂತೆ ಪರಮಪುಣ್ಯಕ್ಕೆ ಭಾಗಿಯಾಗುತ್ತಾನೆ. ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಾಗ್ನಿಗಳನ್ನು ಯಜ್ಞದ ಮೂಲಕವಾಗಿ ಆರಾಧಿಸಿದ ಮಹಾಪುಣ್ಯವು ಇವನಿಗೂ ಲಭಿಸುತ್ತದೆ. ಗೃಹಸ್ಥನಿಗೆ ಮಾತಾ-ಪಿತೃಶುಶ್ರೂಷಾಧರ್ಮವು ಅತಿಮುಖ್ಯವಾದುದು ಮತ್ತು ಇದೇ ಸನಾತನಧರ್ಮ."

೨೧೪ನೆಯ ಅಧ್ಯಾಯವು ಮುಗಿಯಿತು.

೨೧೫ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಧರ್ಮವ್ಯಾಧನು ಕೌಶಿಕನಿಗೆ ಮಾತಾ-ಪಿತೃಸೇವೆಯ ಮಹತ್ತ್ವವನ್ನು ತಿಳಿಸಿ ತಾನು ವ್ಯಾಧನಾಗಿ ಹುಟ್ಟಿದುದಕ್ಕೆ ಕಾರಣವಾದ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಿದುದು

ಯುಧಿಷ್ಠಿರ! ಧರ್ಮಾತ್ಮನಾದ ವ್ಯಾಧನು ತನ್ನ ತಂದೆ-ತಾಯಿಗಳನ್ನು ಕೌಶಿಕನಿಗೆ ಪರಿಚಯಮಾಡಿಸಿಕೊಟ್ಟು–ಅವರೇ ನನ್ನ ಶ್ರೇಷ್ಠ ಗುರುಗಳು– ಎಂದು ಹೇಳಿದನಂತರ ಪುನಃ ಬ್ರಾಹ್ಮಣನನ್ನು ಕುರಿತು ಹೇಳಲು ಉಪಕ್ರಮಿಸಿದನು :

"ಬ್ರಾಹ್ಮಣೋತ್ತಮ! ಮಾತಾ-ಪಿತೃಶುಶ್ರೂಷೆಯೆಂಬ ಮಹಾತಪಸ್ಸಿನ ಫಲವನ್ನಾದರೂ ನೋಡು. ಇದರಿಂದ ನನಗೆ ದಿವ್ಯದೃಷ್ಟಿಯು ಪ್ರಾಪ್ತವಾಗಿರುವುದು. ಮಾತಾ-ಪಿತೃಶುಶ್ರೂಷೆಯಿಂದ ಎಂತಹ ಮಹತ್ತರವಾದ ಫಲವನ್ನು ಪಡೆಯಬಹುದೆಂಬುದನ್ನು ನಿರೂಪಿಸುವ ಸಲುವಾಗಿಯೇ ಪತಿಶುಶ್ರೂಷಾಪರಾಯಣೆಯಾದ, ಜಿತೇಂದ್ರಿಯಳಾದ, ಸಾಧ್ವಿಯಾದ, ಸತ್ಯಶೀಲೆಯಾದ ಬ್ರಾಹ್ಮಣಿಯು ನಿನಗೆ 'ಮಿಥಿಲಾಪಟ್ಟಣದಲ್ಲಿರುವ ಧರ್ಮವ್ಯಾಧನ ಬಳಿಗೆ ಹೋಗೆಂದೂ, ಅವನು ನಿನಗೆ ಧರ್ಮೋಪದೇಶವನ್ನು ಮಾಡುವನೆಂದೂ' ಹೇಳಿದಳು."

"ನಿಯತವಾದ ಕರ್ಮಾನುಷ್ಠಾನವುಳ್ಳ ವ್ಯಾಧನೇ! ಪತಿವ್ರತೆಯಾದ, ಸತ್ಯನಿಷ್ಠಳಾದ, ಸುಶೀಲೆಯಾದ ಆ ಬ್ರಾಹ್ಮಣಿಯ ಮಾತನ್ನು ಬಾರಿ-ಬಾರಿಗೂ ಸ್ಮರಿಸಿ ಅವಳು ಹೇಳಿದುದು ಯಥಾರ್ಥವಾದ ವಿಷಯವೆಂದೂ, ನೀನು ಸಕಲಗುಣಸಂಪನ್ನನೆಂದೂ ನಿಶ್ಚಯಿಸಿದೆನು."

"ದ್ವಿಜೋತ್ತಮ! ಮಾತಾ-ಪಿತೃಶುಶ್ರೂಷೆಯೂ ಒಂದು ಮಹಾ ತಪಸ್ಸು. ಅಂತೆಯೇ ಪತಿಶುಶ್ರೂಷೆಯೂ ಸಹ ಒಂದು ಮಹಾತಪಸ್ಸು. ಪತಿಶುಶ್ರೂಷೆಯೆಂಬ ಮಹಾತಪಸ್ಸಿನ ಪಾರವನ್ನು ಕಂಡಿರುವ ಸಾಧ್ವಿಯಾದ ಬ್ರಾಹ್ಮಣಿಯು ಪತಿಶುಶ್ರೂಷಾತಪಸ್ಸಿನ ಫಲವಾಗಿ ತಾನು ಪಡೆದಿರುವ ದಿವ್ಯ ದೃಷ್ಟಿಯಿಂದಲೇ ಇಲ್ಲಿ ನಡೆಯುತ್ತಿರುವುದೆಲ್ಲವನ್ನೂ ಕಂಡುಕೊಂಡು ನಿನಗೆ ಹೇಳಿರುತ್ತಾಳೆ. ಈ ವಿಷಯದಲ್ಲಿ ಸಂಶಯಿಸುವ ಕಾರಣವಿಲ್ಲ. ಅವಳು ನನ್ನ ಬಳಿಗೆ ನಿನ್ನನ್ನು ಕಳುಹಿಸಿದ್ದರಿಂದಲೂ, ನಿನಗೆ ಒಳ್ಳೆಯದನ್ನು ಮಾಡಬೇಕೆಂಬ ಇಚ್ಛೆಯು ನನಗುಂಟಾದುದರಿಂದಲೂ ನಾನೀ ವಿಷಯಗಳೆಲ್ಲವನ್ನೂ ನಿನಗೆ ಹೇಳಿ, ನನ್ನ ಮಾತಾ-ಪಿತೃಗಳನ್ನು ನಿನಗೆ ತೋರಿಸಿ, ಶುಶ್ರೂಷಾವಿಧಿಯನ್ನು ಪ್ರತ್ಯಕ್ಷವಾಗಿ ಮಾಡಿ ತೋರಿಸಿದ್ದೇನೆ. ನಿನಗೆ ಹಿತಕರವಾದ ಇನ್ನೂ ಕೆಲವು ಮಾತುಗಳನ್ನು ಹೇಳುವೆನು, ಕೇಳು. ನೀನು ನಿನ್ನ ತಂದೆ-ತಾಯಿಗಳಿಗೆ ಅಹಿತವನ್ನುಂಟುಮಾಡಿರುವೆ. ಅವರ ಅಪ್ಪಣೆಯನ್ನು ತೆಗೆದುಕೊಳ್ಳದೇ ವೃದ್ಧರಾದ ಅವರನ್ನು ಬಿಟ್ಟು ನೀನು ಹೊರಟುಬಂದಿರುವೆ.

ವೇದಾಧ್ಯಯನವನ್ನು ಮಾಡಬೇಕೆನ್ನುವ ಆಶಯವೇ ಅವರನ್ನು ಬಿಟ್ಟು ಬರಲು ಕಾರಣವಾಗಿರಬಹುದು. ಯದ್ಯಪಿ ವೇದಾಧ್ಯಯನವು ಬ್ರಾಹ್ಮಣನಿಗೆ ಉಕ್ತವಾದ ಕರ್ತವ್ಯವಾಗಿದ್ದರೂ ಸಹ ವೃದ್ಧರಾದ ತಂದೆ-ತಾಯಿಗಳ ಶುಶ್ರೂಷೆಯನ್ನು ಬಿಟ್ಟು ಹೊರಟು ಬಂದಿರುವುದು ಅವರಿಗೆ ಅಪರಾಧವೆಸಗಿದಂತಾಗಿದೆ. ತಪಸ್ವಿಗಳಾದ ಆ ವೃದ್ಧದಂಪತಿಗಳು ಪುತ್ರಶೋಕದಿಂದಲೇ ಕುರುಡರಾಗಿ ಹೋಗಿದ್ದಾರೆ. ಅವರನ್ನು ಸಂತೈಸಲು ನೀನು ಈ ಕೂಡಲೇ ಅವರ ಬಳಿಗೆ ಹೋಗು. ಮಾತಾ-ಪಿತೃಶುಶ್ರೂಷಾಧರ್ಮವು ಇನ್ನು ಮುಂದಾದರೂ ನಿನಗೆ ಮರೆಯದಿರಲಿ.

ಬ್ರಾಹ್ಮಣೋತ್ತಮ! ನೀನೂ ಸಹ ಸಾಮಾನ್ಯನಲ್ಲ. ಮಹಾತಪಸ್ವಿಯಾಗಿರುವೆ. ಮಹಾತ್ಮನಾಗಿರುವೆ. ಧರ್ಮದಲ್ಲಿಯೇ ನಿರತವಾದ ಬುದ್ಧಿಯುಳ್ಳವನಾಗಿರುವೆ. ಆದರೆ ವೃದ್ಧರಾದ ಮಾತಾ-ಪಿತೃಗಳನ್ನು ನೀನು ನಿರ್ಲಕ್ಷಿಸಿರುವೆಯಾದ್ದರಿಂದ ತಪಸ್ಸು-ಅಧ್ಯಯನ-ವ್ರತಾದಿಗಳು ನಿನಗೆ ಫಲಿತವಾಗಿಲ್ಲ. ಆದುದರಿಂದ ಈ ಕೂಡಲೇ ನೀನು ನಿನ್ನ ತಂದೆ-ತಾಯಿಗಳ ಬಳಿಗೆ ಹೋಗಿ ಅವರನ್ನು ಸಂತೈಸು. ನನ್ನ ಮಾತುಗಳಲ್ಲಿ ಶ್ರದ್ಧೆಯನ್ನಿಡು. ನಾನು

ಹೇಳಿದುದಕ್ಕೆ ಪ್ರತಿಯಾಗಿ ಮಾಡಲು ಹೋಗಬೇಡ. ನಿನಗೆ ಶ್ರೇಯಸ್ಕರವಾದ ಮಾತುಗಳನ್ನೇ ನಾನಾಡಿರುವೆನು. ಈ ದಿವಸವೇ ನೀನು ನಿಮ್ಮೂರಿಗೆ ಪ್ರಯಾಣಮಾಡಿ, ದೇವಸಮಾನರಾದ ತಾಯಿ-ತಂದೆಗಳನ್ನು ಸಂದರ್ಶಿಸು."

ಧರ್ಮವ್ಯಾಧನ ಮಾತುಗಳನ್ನು ಕೇಳಿ ಖಿನ್ನಮನಸ್ಕನಾದ ಬ್ರಾಹ್ಮಣನು ತನ್ನ ತಪ್ಪನ್ನು ಒಪ್ಪಿಕೊಂಡು ವ್ಯಾಧನನ್ನು ಕುರಿತು ಹೇಳಿದನು : "ಮಹಾಭಾಗ! ನನ್ನ ವಿಷಯವಾಗಿ ನೀನೇನು ಹೇಳಿದೆಯೋ ಅವುಗಳೆಲ್ಲವೂ ಶತಾಂಶ ಸತ್ಯವಾದುದು. ಧಾರ್ಮಿಕನಾಗಿಯೂ, ಆಚಾರಸಂಪನ್ನನಾಗಿಯೂ, ಸಕಲ ಗುಣಪರಿಪೂರ್ಣನಾಗಿಯೂ ಇರುವ ವ್ಯಾಧನೇ! ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ."

"ಬ್ರಾಹ್ಮಣೋತ್ತಮ! ನಿನ್ನ ವಿಷಯದಲ್ಲಿಯೂ ನನಗೆ ಅದೇ ವಿಧವಾದ ಪ್ರೀತಿಯುಂಟಾಗಿರುವುದು. ಏಕೆಂದರೆ : ನೀನೂ ಸಹ ಸನಾತನವಾದ, ಶಾಶ್ವತವಾದ, ದಿವ್ಯವಾದ, ಜಿತೇಂದ್ರಿಯರಲ್ಲದವರಿಂದ ಪಡೆಯಲು ಸಾಧ್ಯ ವಾಗದ ಧರ್ಮವನ್ನು ತಿಳಿದವನಾಗಿರುವೆ. ಆದುದರಿಂದಲೇ ನೀನು ದೇವತೆ ಗಳಿಗೆ ಸಮಾನನಾಗಿರುವೆ. ನಿನ್ನ ತಪಶ್ಚರಣೆಯ ಪೂರ್ಣಫಲವನ್ನು ಪಡೆಯ ಬೇಕಾದರೆ ನೀನೀಗಲೇ ನಿನ್ನ ತಾಯಿ-ತಂದೆಗಳ ಬಳಿಗೆ ಹೋಗಲೇಬೇಕು. ಸ್ವಲ್ಪವಾದರೂ ಅಲಸಿಕೆಯಿಲ್ಲದೇ, ಅವರ ಶುಶ್ರೂಷೆಯನ್ನು ಮಾಡುವವ ನಾಗು. ಮಾತಾ-ಪಿತೃಶುಶ್ರೂಷೆಗಿಂತಲೂ ಮಿಗಿಲಾದ ಧರ್ಮವನ್ನು ನಾನು ಕಂಡೇ ಇಲ್ಲ."

ಬ್ರಾಹ್ಮಣನು ಆನಂದಭರಿತನಾಗಿ ಹೇಳಿದನು :

**ಇಹಾಹಮಾಗತೋ ದಿಷ್ಟ್ಯಾ ದಿಷ್ಟ್ಯಾ ಮೇ ಸಙ್ಗತಂ ತ್ವಯಾ ।**
**ಈದೃಶಾ ದುರ್ಲಭಾ ಲೋಕೇ ನರಾ ಧರ್ಮಪ್ರದರ್ಶಕಾಃ ॥೧೪॥**

"ಮಹಾನುಭಾವ! ಯಾವುದೋ ಅದೃಷ್ಟವಿಶೇಷದಿಂದ ನಾನಿಲ್ಲಿಗೆ ಬಂದೆನು. ಅದೇ ಅದೃಷ್ಟದಿಂದಲೇ ನಿನ್ನ ಸಹವಾಸವೂ ನನಗೆ ಲಭಿಸಿತು. (ದುರದೃಷ್ಟಶಾಲಿಗಳು ನಿನ್ನಲ್ಲಿಗೆ ಅನೇಕಬಾರಿ ಬಂದರೂ ಸಹ ನಿನ್ನ ನಿಜ ಸ್ವರೂಪವನ್ನು ತಿಳಿಯಲಾರರು.) ಲೋಕದಲ್ಲಿ ಅನೇಕರು ಉಪದೇಶಮಾಡು ವವರಿದ್ದಾರೆ. ಆದರೆ ಧರ್ಮವನ್ನು ಯಥಾವತ್ತಾಗಿ ಆಚರಿಸುತ್ತಾ, ನುಡಿದಂತೆ

ನಡೆಯುತ್ತಾ, ತಮ್ಮ ಆಚರಣೆಗಳನ್ನೂ ಪ್ರತ್ಯಕ್ಷವಾಗಿ ಪ್ರಮಾಣಿಸುವವರು ಬಹುದುರ್ಲಭರು.

ಮಹಾನುಭಾವ! ಸಾವಿರಕ್ಕೊಬ್ಬನಾದರೂ ನಿನ್ನಂತೆ ಧರ್ಮರಹಸ್ಯವನ್ನು ತಿಳಿದಿರುವವನು, ಧರ್ಮವನ್ನು ಯಥಾವತ್ತಾಗಿ ಆಚರಿಸುವವನು ಇರುವನೋ ಇಲ್ಲವೋ ಎಂದು ಸಂಶಯಿಸಬೇಕಾಗಿದೆ. ನಿನ್ನ ಸತ್ಯಪ್ರವಚನದಿಂದಲೂ ನಿನ್ನ ಗೆಳೆತನವು ಸಿಕ್ಕಿದುದರಿಂದಲೂ ನಾನು ಆನಂದಭರಿತನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿಶ್ಚಯವಾಗಿಯೂ ನಾನು ದೇವರೂಪಿಗಳಾದ ನನ್ನ ತಂದೆ-ತಾಯಿಗಳನ್ನು ದೂರೀಕರಿಸಿದುದಕ್ಕಾಗಿ ಮಹಾನರಕದಲ್ಲಿ ಬೀಳುತ್ತಿದ್ದೆನು. ಆ ಮಹಾನರಕದಿಂದ ನೀನಿಂದು ನನ್ನನ್ನು ಉದ್ಧರಿಸಿರುವೆ. ದೈವೇಚ್ಛೆಯೂ ಹೀಗೆಯೇ ಇತ್ತೆಂದು ಕಾಣುತ್ತದೆ. ಆಕಸ್ಮಿಕವಾಗಿ ನಾನು ನಿನ್ನ ಸಂದರ್ಶನವನ್ನು ಮಾಡಿದೆನಲ್ಲವೆ? ನಾನು ಮಾಡಿದ ತಪಸ್ಸಿನ ಫಲವೋ ಅಥವಾ ನನ್ನ ಪೂರ್ವಜನ್ಮದ ಪುಣ್ಯಫಲವೋ–ನನ್ನನ್ನಿಂದು ನಿನ್ನ ಸಮೀಪಕ್ಕೆ ತಂದಿತು. ಪುಣ್ಯಫಲವು ಮುಗಿದನಂತರ ಸ್ವರ್ಗದಿಂದ ಕೆಳಗೆ ಬೀಳುತ್ತಿದ್ದ ಯಯಾತಿಗೆ ಪುನಃ ಪುಣ್ಯಫಲವನ್ನಿತ್ತು ಉದ್ಧರಿಸಿದ ಅವನ ದೌಹಿತ್ರರಂತೆ (ಮಗಳ ಮಕ್ಕಳಂತೆ)–ನೀನು ನನ್ನನ್ನು ಉದ್ಧರಿಸಿದ್ದೀಯೆ. ನಿನ್ನ ಮಾತಿನಂತೆ ನಾನು ಇನ್ನು ಮುಂದೆ ಶ್ರದ್ಧೆಯಿಂದ ಮಾತಾ-ಪಿತೃಗಳನ್ನು ಶುಶ್ರೂಷೆಮಾಡಿಕೊಂಡಿರುತ್ತೇನೆ.

ಧರ್ಮಾತ್ಮನೇ! ನನ್ನ ಮನಸ್ಸಿನಲ್ಲಿ ಮತ್ತೊಂದು ಸಂಶಯವು ಉಂಟಾಗಿದೆ. ಆತ್ಮಶುದ್ಧಿಯಿಲ್ಲದವನು ಧರ್ಮಾಧರ್ಮಗಳ ರಹಸ್ಯವನ್ನು ತಿಳಿಯಲಾರನು. ಆತ್ಮಶುದ್ಧಿಯಿರಬೇಕಾದರೆ ಅವನು ಬಹಳ ಸಂಸ್ಕಾರಿಯಾಗಿರಬೇಕು. ಅತಿಕಷ್ಟದಿಂದಲೂ ತಿಳಿಯಲಸಾಧ್ಯವಾದ, ಶಾಶ್ವತವಾದ ಧರ್ಮರಹಸ್ಯವನ್ನಿಂದು ನಾನು ಶೂದ್ರ (ವ್ಯಾಧ)ನೊಬ್ಬನಿಂದ ಕೇಳುತ್ತಿದ್ದೇನೆ. ನಾನು ಮಾತ್ರ ನಿನ್ನನ್ನು ಶೂದ್ರನೆಂದು ಭಾವಿಸಲಾರೆನು. ನೀನು ಶೂದ್ರಯೋನಿಯಲ್ಲಿ ಜನಿಸಲು ಯಾವುದೇ ಮಹತ್ತರವಾದ ಕಾರಣವಿರಬೇಕು. ಪೂರ್ವಜನ್ಮದ ಕರ್ಮದ ಫಲವಾಗಿ ನೀನಿಂದು ಶೂದ್ರಯೋನಿಯಲ್ಲಿ ಜನ್ಮತಾಳಿರುವೆ. ಈ ವಿಷಯವನ್ನು ನಾನು ತತ್ತ್ವತಃ ತಿಳಿಯಬೇಕೆಂಬ ಆಶಯವುಳ್ಳವನಾಗಿದ್ದೇನೆ. (ನಿನಗೆ ಭೂತ-ಭವಿಷ್ಯದ್ವರ್ತಮಾನ

ಗಳನ್ನು ತಿಳಿಯುವ ದಿವ್ಯದೃಷ್ಟಿಯಿರುವುದರಿಂದ ನಿನ್ನ ಜನ್ಮರಹಸ್ಯವೂ ತಿಳಿದಿರಲೇಬೇಕು.) ದಯಮಾಡಿ ಹೇಳು. ನನ್ನ ಮೇಲೆ ನೀನಿಟ್ಟಿರುವ ಪ್ರೇಮದ ಕಾರಣದಿಂದಾಗಿ ನಿನ್ನ ಜನ್ಮದ ರಹಸ್ಯವನ್ನೂ ನನಗೆ ಯಥಾವತ್ತಾಗಿ ಪ್ರಸನ್ನತೆಯಿಂದ ಹೇಳುವವನಾಗು."

"ಬ್ರಾಹ್ಮಣೋತ್ತಮ! ಬ್ರಾಹ್ಮಣರನ್ನು ನಾನೆಂದೂ ಅತಿಕ್ರಮಿಸೆನು. ಅವರ ಮಾತಿಗೆ ವಿರುದ್ಧವಾಗಿ ನಡೆಯಲಾರೆನು. ಆದುದರಿಂದ ನೀನು ಕೇಳಿದ ಪ್ರಶ್ನೆಗೆ ಯಥಾವತ್ತಾಗಿ ಉತ್ತರವನ್ನು ನೀಡುವೆನು. ನಿನ್ನ ಅಪೇಕ್ಷೆಯಂತೆ ನನ್ನ ಪೂರ್ವಜನ್ಮದ ವೃತ್ತಾಂತವನ್ನು ಹೇಳುವೆನು. ಕೇಳು :

ನಾನು ಹಿಂದಿನ ಜನ್ಮದಲ್ಲಿ ಬ್ರಾಹ್ಮಣಶ್ರೇಷ್ಠನೊಬ್ಬನ ಮಗನಾಗಿ ಹುಟ್ಟಿದ್ದೆನು. ನಾನು ವೇದಾಧ್ಯಾಯಿಯಾಗಿದ್ದುದಲ್ಲದೇ ಶಿಕ್ಷಾ-ವ್ಯಾಕರಣಾದಿ ವೇದಾಂಗಗಳಲ್ಲಿಯೂ ಸಹ ಪಾರಂಗತನಾಗಿದ್ದೆನು. ಆ ಜನ್ಮದಲ್ಲಿ ಮಾಡಿದ ಅಪರಾಧದ ಕಾರಣದಿಂದಲೇ ನಾನೀ ಜನ್ಮದಲ್ಲಿ ವ್ಯಾಧನಾಗಿ ಜನ್ಮತಾಳಿದ್ದೇನೆ. ಹಿಂದಿನ ಜನ್ಮದಲ್ಲಿ ಧನುರ್ವೇದದಲ್ಲಿ ಪಾರಂಗತನಾಗಿದ್ದ ಒಬ್ಬ ರಾಜನ ಸಖ್ಯವು ನನಗೆ ಲಭಿಸಿತ್ತು. ಅವನ ನಿರಂತರಸಹವಾಸದಿಂದಾಗಿ ನಾನೂ ಸಹ ಧನುರ್ವಿದ್ಯೆಯಲ್ಲಿ ಪ್ರಾವೀಣ್ಯವನ್ನು ಪಡೆದಿದ್ದೆನು.

ಒಂದು ದಿನ ಆ ರಾಜನು ಮಂತ್ರಿಗಳೊಡನೆಯೂ, ಮುಖ್ಯರಾದ ಸೇನಾನಾಯಕರೊಡನೆಯೂ ಕೂಡಿದವನಾಗಿ ಬೇಟೆಯಾಡಲು ಅರಣ್ಯಕ್ಕೆ ಹೊರಟನು. ನಾನೂ ಸಹ ಧನುರ್ಬಾಣಸಮೇತನಾಗಿ ಅವನನ್ನೇ ಅನುಸರಿಸಿ ಹೋದೆನು. ನನ್ನ ಗೆಳೆಯನು ಒಂದು ಆಶ್ರಮದ ಸಮೀಪದಲ್ಲಿದ್ದ ಅನೇಕ ಜಿಂಕೆಗಳನ್ನು ಬೇಟೆಯಾಡಿದನು. ನಾನೂ ಸಹ ಅವನ ಜೊತೆಯಲ್ಲಿಯೇ ಬೇಟೆಯಾಡುತ್ತಿದ್ದಾಗ ನಾನು ಬಿಟ್ಟ ತೀಕ್ಷ್ಣವಾದ ಒಂದು ಬಾಣವು ಆಶ್ರಮದ ಮರೆಯಲ್ಲಿದ್ದ ಒಬ್ಬ ಋಷಿಗೆ ತಗುಲಿತು. ಒಡನೆಯೇ ಆ ಋಷಿಯು ಗಟ್ಟಿಯಾಗಿ ಕಿರುಚುತ್ತಾ ಕೆಳಗೆ ಬಿದ್ದು ಹೀಗೆಂದು ಹೇಳಿದನು : "ಅಯ್ಯೋ! ನಾನು ಯಾರೊಬ್ಬರಿಗೂ ಯಾವ ವಿಧವಾದ ತೊಂದರೆಯನ್ನೂ ಮಾಡಲಿಲ್ಲವಲ್ಲಾ! ಯಾವ ಪಾಪಿಷ್ಠನು ಯಾವ ಕಾರಣದಿಂದ ನನ್ನನ್ನು ಹೀಗೆ ಘಾಸಿಪಡಿಸಿದನು?"

ದಾರುಣವಾದ ಆ ಶಬ್ದವನ್ನು ಕೇಳುತ್ತಲೇ ನಾನು ಜಿಂಕೆಯೆಂಬ ಭ್ರಾಂತಿಯಿಂದಲೇ ಆ ಋಷಿಯ ಸಮೀಪಕ್ಕೆ ಓಡಿಹೋದೆನು. ಅಸ್ತವ್ಯಸ್ತನಾಗಿ ಕೆಳಗೆ ಬಿದ್ದು ನರಳಾಡುತ್ತಿದ್ದ ಋಷಿಯನ್ನೂ, ನನ್ನ ಬಾಣವು ಅವನ ಶರೀರದಲ್ಲಿ ಚುಚ್ಚಿಕೊಂಡಿರುವುದನ್ನೂ ಕಂಡೆನು. ಅಕಾರ್ಯವನ್ನು ಮಾಡಿದುದರಿಂದ ನನ್ನ ಮನಸ್ಸಿಗೆ ಬಹಳ ವ್ಯಥೆಯೂ ಉಂಟಾಯಿತು. ಉಗ್ರತಪಸ್ಕನಾದ ಬಾಣಾಘಾತದಿಂದ ನರಳುತ್ತಿದ್ದ ಆ ವಿಪ್ರನನ್ನು ಕುರಿತು ನಾನು ಹೇಳಿದೆನು : "ಮಹರ್ಷೇ! ನಾನು ತಿಳಿಯದೆಯೇ ಜಿಂಕೆಯೆಂಬ ಭ್ರಾಂತಿಯಿಂದ ಇಂತಹ ಮಹಾಪರಾಧವನ್ನು ಮಾಡಿಬಿಟ್ಟೆನು. ತಿಳಿಯದೇ ಮಾಡಿದ ಈ ಅಪರಾಧವನ್ನು ದಯಾಮಯನಾದ ನೀನು ಕ್ಷಮಿಸುವುದು ಸಾಧುವಾಗಿದೆ."

ನನ್ನ ಪ್ರಾರ್ಥನೆಗೆ ಕಿವಿಗೊಡದೇ ಕೋಪಾವಿಷ್ಟನಾಗಿದ್ದ ಆ ಋಷಿಯು **'ವ್ಯಾಧಸ್ತ್ವಂ ಭವಿತಾ ಕ್ರೂರ ಶೂದ್ರಯೋನಾವಿತಿ ದ್ವಿಜ!'** 'ನಿರ್ದಯನಾದ ವಿಪ್ರನೇ! ಶೂದ್ರಯೋನಿಯಲ್ಲಿ ಹುಟ್ಟಿ ವ್ಯಾಧನಾಗುವೆ' ಎಂದು ಶಾಪಕೊಟ್ಟನು, ಬ್ರಾಹ್ಮಣೋತ್ತಮ!"

೨೧೫ನೆಯ ಅಧ್ಯಾಯವು ಮುಗಿಯಿತು.

೨೧೬ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಕೌಶಿಕ ಮತ್ತು ಧರ್ಮವ್ಯಾಧರ ಸಂಭಾಷಣೆಯ ಉಪಸಂಹಾರ : ಕೌಶಿಕನು ತನ್ನ ಮನೆಗೆ ಹಿಂದಿರುಗಿದುದು

"ಬ್ರಾಹ್ಮಣೋತ್ತಮ! ಋಷಿಯಿಂದ ಈ ರೀತಿಯಲ್ಲಿ ಶಪ್ತನಾದ ನಾನು ಬಹಳ ಖಿನ್ನನಾಗಿ ಋಷಿಯನ್ನು 'ತ್ರಾಹಿ-ತ್ರಾಹಿ' ಎಂದು ಬಾರಿ-ಬಾರಿಗೂ ಬೇಡಿಕೊಂಡೆನು. "ನಾನು ತಿಳಿಯದೇ ಈ ಅಕಾರ್ಯವನ್ನು ಮಾಡಿಬಿಟ್ಟೆನು. ಮಹರ್ಷೇ! ಪ್ರಸನ್ನನಾಗು. ದಯಾಮಯನಾದ ನೀನು, ತಿಳಿಯದೇ ಮಾಡಿದ ಈ ನನ್ನ ಅಪರಾಧವನ್ನು ಕ್ಷಮಿಸಲು ಅರ್ಹನಾಗಿರುವೆ!" ಎಂದು ಅಂಗಲಾಚಿ ಬೇಡಿದೆನು. ನನ್ನ ಸತತವಾದ ಪ್ರಾರ್ಥನೆಯಿಂದ ಋಷಿಗೆ ನನ್ನ ಮೇಲೆ ಕನಿಕರವುಂಟಾಗಿ ಹೇಳಿದನು : "ನಾನು ಕೊಟ್ಟ ಶಾಪವು ಎಂದಿಗೂ

ಸುಳ್ಳಾಗದು. ನೀನು ವ್ಯಾಧನಾಗಿ ಹುಟ್ಟಲೇಬೇಕು. ಆದರೆ ನಿನ್ನ ಮೇಲಿನ ದಯೆಯಿಂದಾಗಿ ನಿನಗೆ ಕಿಂಚಿದನುಗ್ರಹಮಾಡಲು ನಿಶ್ಚಯಿಸಿದ್ದೇನೆ. ಶೂದ್ರ ಯೋನಿಯಲ್ಲಿ ಹುಟ್ಟಿದರೂ ಸಹ ನೀನು ಧರ್ಮಜ್ಞನಾಗುವೆ. ನಿರಂತರವಾಗಿ ತಂದೆ-ತಾಯಿಗಳ ಶುಶ್ರೂಷೆಯನ್ನು ಮಾಡಿಕೊಂಡಿರುವೆ. ಮಾತಾ-ಪಿತೃ ಶುಶ್ರೂಷೆಯಿಂದಲೇ ನಿನಗೆ ಮಹತ್ತಾದ ಸಿದ್ಧಿಯೂ ಉಂಟಾಗುತ್ತದೆ. ನಿನಗೆ ಈ ಜನ್ಮದ ಸ್ಮರಣೆಯೂ ಉಂಟಾಗಿ, ಅವಸಾನಾನಂತರದಲ್ಲಿ ಸ್ವರ್ಗವನ್ನೂ ಪಡೆಯುವೆ. ಶಾಪವಿಮೋಚನೆಯಾದನಂತರ (ಶೂದ್ರಜನ್ಮವು ಕಳೆದನಂತರ) ಪುನಃ ನೀನು ಬ್ರಾಹ್ಮಣನಾಗಿಯೇ ಜನ್ಮತಾಳುವೆ.”

ಈ ಪ್ರಕಾರವಾಗಿ ಉಗ್ರತಪಸ್ಕನಾದ ಆ ಋಷಿಯು ನನಗೆ ಪ್ರತಿಶಾಪ ವನ್ನೂ ಕೊಟ್ಟು ಅನುಗ್ರಹಿಸಿದನು. ಅನಂತರ ನಾನು ಬಿಟ್ಟಿದ್ದ ಬಾಣವನ್ನು ಉಪಾಯವಾಗಿ ಹೆಚ್ಚು ತೊಂದರೆಯಾಗದಂತೆ ಋಷಿಯ ಶರೀರದಿಂದ ತೆಗೆದು, ಅವನನ್ನು ಎತ್ತಿಕೊಂಡು ಹೋಗಿ ಆಶ್ರಮದೊಳಗೆ ಮಲಗಿಸಿ ಶೈತ್ಯೋಪಚಾರಮಾಡಿದೆನು. ಋಷಿಯ ಪ್ರಾಣವುಳಿಯಿತು.

ಬ್ರಾಹ್ಮಣ! ಹಿಂದಿನ ಜನ್ಮದಲ್ಲಿ ನಡೆದ ವೃತ್ತಾಂತ ಮತ್ತು ಮುಂದೆ ನನಗೆ ಪ್ರಾಪ್ತವಾಗಲಿರುವ ಸ್ವರ್ಗಪ್ರಾಪ್ತಿ–ಈ ವಿಷಯವೆಲ್ಲವನ್ನೂ ನಿನಗೆ ವಿವರಿಸಿ ಹೇಳಿದ್ದಾಯಿತು.”

ಯುಧಿಷ್ಠಿರ! ಧರ್ಮವ್ಯಾಧನ ಪೂರ್ವಜನ್ಮದ ವೃತ್ತಾಂತವನ್ನು ಕೇಳಿದ ಬ್ರಾಹ್ಮಣನು ವ್ಯಾಧನನ್ನು ಕುರಿತು ಹೇಳಿದನು :

**ಏವಮೇತಾನಿ ಪುರುಷಾ ದುಃಖಾನಿ ಚ ಸುಖಾನಿ ಚ ।**
**ಆಪ್ನುವನ್ತಿ ಮಹಾಬುದ್ಧೇ ನೋತ್ಕಣ್ಠಾಂ ಕರ್ತುಮರ್ಹಸಿ ॥೧೦॥**

“ಭೂಮಿಯಲ್ಲಿ ಹುಟ್ಟಿದ ಮಾನವರು ಇದೇ ವಿಧವಾದ ಸುಖ-ದುಃಖ ಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಮಹಾಬುದ್ಧಿಶಾಲಿಯಾದ ವ್ಯಾಧನೇ! ನೀನು ಇದಕ್ಕಾಗಿ ವ್ಯಥೆಪಡಬೇಕಾಗಿಲ್ಲ. ನಿನ್ನ ಜಾತಿಗೆ ಯುಕ್ತವಾದ ಕರ್ಮವು ಯಾವುದೆಂದು ತಿಳಿದು ನೀನು ಈ ಕುತ್ಸಿತಕಾರ್ಯದಲ್ಲಿ (ಮಾಂಸವಿಕ್ರಯದಲ್ಲಿ) ನಿಯುಕ್ತನಾಗಿರುವೆ. ಆದರೆ ನೀನು ಭೂತ-ಭವಿಷ್ಯದ್ವರ್ತಮಾನಗಳನ್ನೂ

ತಿಳಿದವನಾಗಿರುವೆ. ಧರ್ಮಾತ್ಮನಾಗಿರುವೆ. ನಿನ್ನ ಜಾತಿಗೆ ಉಕ್ತವಾದ ಕರ್ಮಾನುಷ್ಠಾನವನ್ನೇ ನೀನು ಮಾಡುತ್ತಿರುವೆಯಾದ್ದರಿಂದ ನಿನಗಿದರಲ್ಲಿ ಯಾವ ವಿಧವಾದ ದೋಷವೂ ಉಂಟಾಗುವುದಿಲ್ಲ. ಹೀಗೆಯೇ ಈ ಜನ್ಮ ವನ್ನು ಕಳೆದುಕೊಂಡನಂತರ ಋಷಿಯ ಅನುಗ್ರಹದಿಂದಾಗಿ ಪುನಃ ನಿನಗೆ ಬ್ರಾಹ್ಮಣ ಜನ್ಮವು ಲಭ್ಯವಾಗುತ್ತದೆ.

ಯದ್ಯಪಿ ನೀನು ಈ ಜನ್ಮದಲ್ಲಿ ವ್ಯಾಧನಾಗಿ ಹುಟ್ಟಿದ್ದರೂ ನಾನು ನಿನ್ನನ್ನು ಬ್ರಾಹ್ಮಣನೆಂದೇ ಭಾವಿಸುತ್ತೇನೆ. ನೀನು ಬ್ರಾಹ್ಮಣನೆಂಬುದರಲ್ಲಿ ನನಗೆ ಸ್ವಲ್ಪವಾದರೂ ಸಂಶಯವಿಲ್ಲ. ಈ ವಿಷಯದಲ್ಲಿ ನನ್ನ ಅಭಿಮತವು ಹೀಗಿರುತ್ತದೆ :

**ಬ್ರಾಹ್ಮಣಃ ಪತನೀಯೇಷು ವರ್ತಮಾನೋ ವಿಕರ್ಮಸು ।**
**ದಾಮ್ಭಿಕೋ ದುಷ್ಕೃತಃ ಪ್ರಾಯಃ ಶೂದ್ರೇಣ ಸದೃಶೋ ಭವೇತ್ ॥೧೩॥**

**ಯಸ್ತು ಶೂದ್ರೋ ದಮೇ ಸತ್ಯೇ ಧರ್ಮೇ ಚ ಸತತೋತ್ಥಿತಃ ।**
**ತಂ ಬ್ರಾಹ್ಮಣಮಹಂ ಮನ್ಯೇ ವೃತ್ತೇನ ಹಿ ಭವೇದ್ದ್ವಿಜಃ ॥೧೪॥**

ಒಬ್ಬಾನೊಬ್ಬ ಬ್ರಾಹ್ಮಣನು ಅತ್ಯಂತ ಕೀಳಾದ ಪಾಪಭೂಯಿಷ್ಠವಾದ ಕಾರ್ಯಗಳಲ್ಲಿ ನಿರತನಾಗಿರುತ್ತಾ, ದಾಂಭಿಕನಾಗಿಯೂ, ದುರಭಿಮಾನಿ ಯಾಗಿಯೂ, ಹೀನಕಾರ್ಯಮಾಡುವವನಾಗಿಯೂ ಇದ್ದರೆ ಪ್ರಾಯಶಃ ಅವನು ಶೂದ್ರನಿಗೆ ಸಮಾನನಾಗುತ್ತಾನೆ.

ಯಾವನೊಬ್ಬ ಶೂದ್ರನು ಜಿತೇಂದ್ರಿಯನಾಗಿಯೂ, ಸತ್ಯನಿಷ್ಠ ನಾಗಿಯೂ, ಧರ್ಮನಿಷ್ಠನಾಗಿಯೂ ಇರುವನೋ ಅಂತಹವನನ್ನು ನಾನು ಬ್ರಾಹ್ಮಣನೆಂದೇ ಭಾವಿಸುತ್ತೇನೆ. ದ್ವಿಜತ್ವವು ಸದ್ವೃತ್ತಿಯಿಂದ ಪ್ರಾಪ್ತವಾಗ ತಕ್ಕದ್ದಲ್ಲವೇ!

ಕರ್ಮದೋಷದಿಂದಾಗಿ ಮಾನವನು ದಾರುಣವಾದ ದುರ್ಗತಿಯನ್ನು ಪಡೆಯುತ್ತಾನೆ. ನೀನಿಂದು ಎಲ್ಲ ವಿಧವಾದ ದೋಷಗಳಿಂದಲೂ ಮುಕ್ತ ನಾಗಿರುವೆಯೆಂದು ನಾನು ಭಾವಿಸುತ್ತೇನೆ. ಇಂದು ಪ್ರಾಪ್ತವಾಗಿರುವ ಈ ವ್ಯಾಧಜನ್ಮಕ್ಕಾಗಿ ನೀನೆಂದಿಗೂ ದುಃಖಿಸಲಾಗದು. ನಿನ್ನಂತಹ ಧರ್ಮಾತ್ಮರೂ

ಧರ್ಮರಹಸ್ಯವನ್ನೂ–ಆತ್ಮತತ್ತ್ವವನ್ನೂ ಪೂರ್ಣವಾಗಿ ತಿಳಿದಿರುವವರು ಸಹ ಎಂದಿಗೂ ದುಃಖಕ್ಕೆ ಭಾಗಿಗಳಾಗಲಾರರು."

ಯುಧಿಷ್ಠಿರ! ಬ್ರಾಹ್ಮಣನು ಹೇಳಿದ ಮಾತನ್ನೇ ಪುಷ್ಟೀಕರಿಸುತ್ತಾ ವ್ಯಾಧನು ಬ್ರಾಹ್ಮಣನನ್ನು ಕುರಿತು ಹೇಳಿದನು :

**ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರಮೌಷಧೈಃ ।**
**ಏತದ್ವಿಜ್ಞಾನಸಾಮರ್ಥ್ಯಂ ನ ಬಾಲೈಃ ಸಮತಾಮಿಯಾತ್ ॥೧೭॥**

**ಅನಿಷ್ಟಸಮ್ಪ್ರಯೋಗಾಚ್ಚ ವಿಪ್ರಯೋಗಾತ್ಪ್ರಿಯಸ್ಯ ಚ ।**
**ಮನುಷ್ಯಾ ಮಾನಸೈರ್ದುಃಖೈರ್ಯುಜ್ಯನ್ತೇ ಚಾಲ್ಪಬುದ್ಧಯಃ ॥೧೮॥**

**ಗುಣೈರ್ಭೂತಾನಿ ಯುಜ್ಯನ್ತೇ ವಿಯುಜ್ಯನ್ತೇ ತಥೈವ ಚ ।**
**ಸರ್ವಾಣಿ ನೈತದೇಕಸ್ಯ ಶೋಕಸ್ಥಾನಂ ಹಿ ವಿದ್ಯತೇ ॥೧೯॥**

"ಪ್ರಜ್ಞೆಯೆಂಬ ಔಷಧದಿಂದ ಮಾನಸಿಕರೋಗವನ್ನು ಹೋಗಲಾಡಿಸಿಕೊಳ್ಳಬೇಕು. ಶರೀರಸಂಬಂಧವಾದ ರೋಗವನ್ನು ಚೂರ್ಣ-ಕಷಾಯಾದಿ ಔಷಧಗಳಿಂದ ಹೋಗಲಾಡಿಸಿಕೊಳ್ಳಬೇಕು. ಜ್ಞಾನಕ್ಕಿರುವ ಸಾಮರ್ಥ್ಯವೇ ಇದಾಗಿರುತ್ತದೆ. ಆದುದರಿಂದ ಜ್ಞಾನಿಯಾದವನು ಬಾಲಕರಂತೆ ಶೋಕ-ವಿಲಾಪಗಳನ್ನು ಮಾಡಬಾರದು. ಇಂತಹ ಮನೋರೋಗವನ್ನು ಹೋಗಲಾಡಿಸುವ ಸಾಮರ್ಥ್ಯವು ಜ್ಞಾನಕ್ಕೆ ಮಾತ್ರವಿದೆ. ಪ್ರಜ್ಞೆಯುಳ್ಳವನು ಆತ್ಮಾನಾತ್ಮವಿವೇಕದಿಂದ ಸುಖ-ದುಃಖಗಳನ್ನು ವಿಂಗಡಿಸಬಲ್ಲನು. ಮನೋರೋಗವನ್ನು ನೀಗಿಕೊಳ್ಳಬಲ್ಲನು. ಅನಿಷ್ಟಪ್ರಾಪ್ತಿಯೂ ಪ್ರಿಯವಿಯೋಗವೂ ಸಂಭವಿಸಿದಾಗ ಅಲ್ಪಬುದ್ಧಿಯುಳ್ಳ ಮಾನವರು ಮನಸ್ಸಿನಲ್ಲಿ ಕೊರಗುತ್ತಾರೆ. ಅಗೋಚರನಾದ ವಿಧಿಯು ಪ್ರಾಣಿಗಳನ್ನು ಒಳ್ಳೆಯ ವಸ್ತುಗಳೊಡನೆ ಸೇರಿಸುತ್ತಾನೆ. ಅನೇಕಸಮಯಗಳಲ್ಲಿ ಪ್ರಾಣಿಗಳಿಗೆ ಅನುಕೂಲವನ್ನೇ ಮಾಡುತ್ತಾನೆ. ಮತ್ತೆ ಕೆಲವುಸಮಯಗಳಲ್ಲಿ ಪ್ರಾಣಿಗಳಿಗಿರುವ ಅನುಕೂಲವನ್ನೂ ತೆಗೆದುಹಾಕುತ್ತಾನೆ.

ಒಬ್ಬನಿಗೆ ಯಾವಾಗಲೂ ಕಷ್ಟವಾಗಲೀ ಅಥವಾ ಸುಖವಾಗಲೀ ಉಂಟಾಗುವುದಿಲ್ಲ. ಮನುಷ್ಯನಿಗೆ ಪರ್ಯಾಯವಾಗಿ ಸುಖ-ದುಃಖಗಳು

ಬರುತ್ತಲೇ ಇರುತ್ತವೆ. ಮನುಷ್ಯನ ಜೀವನದಲ್ಲಿ ಶೋಕಕ್ಕೂ ಸಹ ಒಂದು ಸ್ಥಾನವಿದ್ದೇ ಇರುತ್ತದೆ. ಇದು ಅನಿವಾರ್ಯ.

**ಅನಿಷ್ಟಂ ಚಾನ್ವಿತಂ ಪಶ್ಯಂಸ್ತಥಾ ಕ್ಷಿಪ್ರಂ ವಿರಜ್ಯತೇ ।**
**ತತಶ್ಚ ಪ್ರತಿಕುರ್ವನ್ತಿ ಯದಿ ಪಶ್ಯನ್ತ್ಯುಪಕ್ರಮಾತ್ ॥೨೦॥**

ಪ್ರಪಂಚದಲ್ಲಿ ಹುಟ್ಟಿದ ಎಲ್ಲ ಪ್ರಾಣಿಗಳಿಗೂ ಈ ವಿಧವಾದ ಸುಖ-ದುಃಖಗಳಿದ್ದೇ ಇರುತ್ತವೆ. ಒಬ್ಬ ಮನುಷ್ಯನಿಗಾಗಲೀ, ಒಂದು ವರ್ಗಕ್ಕಾಗಲೀ ಈ ಸುಖ-ದುಃಖಗಳು ಸೀಮಿತವಲ್ಲ. ಬುದ್ಧಿವಂತರಾದವರು ಅನಿಷ್ಟವು ಬಂದೊಡನೆಯೇ ಅದು ಬಂದುದರ ಕಾರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಅದರ ಮೂಲವನ್ನು ತಿಳಿದು ನಿವಾರಣೆಮಾಡಿಕೊಳ್ಳುತ್ತಾರೆ. ಇನ್ನೂ ಹೆಚ್ಚು ಬುದ್ಧಿವಂತರಾದವರು ಅನಿಷ್ಟವು ಬರುವ ಮೊದಲೇ ಜಾಗ್ರತ ರಾಗಿ ಅದು ಬಾರದಂತೆಯೇ ನೋಡಿಕೊಳ್ಳುತ್ತಾರೆ.

**ಶೋಚತೋ ನ ಭವೇತ್ಕಿಂಚಿತ್ಕೇವಲಂ ಪರಿತಪ್ಯತೇ ॥೨೧॥**

ಅನಿಷ್ಟವು ಪ್ರಾಪ್ತವಾಯಿತೆಂದು ಯೋಚಿಸುತ್ತಾ ಕುಳಿತುಕೊಳ್ಳುವವನು ಮನೋರೋಗಗ್ರಸ್ತನಾಗಿ ಪರಿತಾಪಪಡುವನೇ ಹೊರತು ಅವನು ಪಡುವ ಪರಿತಾಪದಿಂದ ಶೋಕದ ನಿವಾರಣೆಯಾಗುವುದಿಲ್ಲ.

**ಪರಿತ್ಯಜನ್ತಿ ಯೇ ದುಃಖಂ ಸುಖಂ ವಾಪ್ಯುಭಯಂ ನರಾಃ ।**
**ತ ಏವ ಸುಖಮೇಧನ್ತೇ ಜ್ಞಾನತೃಪ್ತಾ ಮನೀಷಿಣಃ ॥೨೨॥**

ಯಾರು ಪ್ರಜ್ಞಾನದಿಂದ ದುಃಖವನ್ನು ಹೋಗಲಾಡಿಸಿಕೊಳ್ಳುತ್ತಾರೆಯೋ ಅವರೇ ಸುಖಿಗಳಾಗುತ್ತಾರೆ. ಸುಖ-ದುಃಖಗಳೆರಡನ್ನೂ ಪರಿತ್ಯಜಿಸಿರುವ, ಜ್ಞಾನತೃಪ್ತರಾದ, ಮನನಶೀಲರಾದ ಮಾನವರು ಅತ್ಯಂತಸುಖವನ್ನು ಪಡೆಯುತ್ತಾರೆ." (ಸುಖ-ದುಃಖಗಳೆರಡನ್ನೂ ತ್ಯಜಿಸಿದನಂತರ ಸುಖಪಡುವುದೇನಿದೆ? ಇಷ್ಟಪ್ರಾಪ್ತಿಯೇ ಸುಖ ; ಅನಿಷ್ಟಪ್ರಾಪ್ತಿಯೇ ದುಃಖ ಎಂಬ ಸಂಶಯ ಬರಬಹುದು. ಆದರೆ : ಇಷ್ಟಪ್ರಾಪ್ತಿಯಿಂದ ಪ್ರಾಪ್ತವಾಗುವ ಸುಖವು ಶಾಶ್ವತವಲ್ಲ. ಅದೃಷ್ಟದ್ರವ್ಯವನ್ನು ಅಪೇಕ್ಷಿಸಿ ಅದು ದೊರೆತರೆ ತಾತ್ಕಾಲಿಕವಾಗಿ ಸುಖವಾದಂತೆ ಕಾಣುತ್ತದೆ. ಅನುಕ್ರಮವಾಗಿ ಅದು ವ್ಯಯಿಸುತ್ತಿದ್ದಂತೆಲ್ಲಾ ಸುಖವೂ ವ್ಯಯವಾಗುತ್ತಿರುತ್ತದೆ. ಇಂದು ಸುಖ

ವಾದರೆ ಸುಖದ ಅಂತ್ಯದಲ್ಲಿ ದುಃಖವಿದ್ದೇ ಇರುವುದೆಂದು ತಿಳಿಯಬೇಕು. ದುಃಖದ ಅಂತ್ಯದಲ್ಲಿ ಸುಖವಿರುವುದೆಂದೂ ಭಾವಿಸಬೇಕು. ಹೀಗೆಯೇ ಅನುಸಂಧಾನ ಮಾಡುತ್ತಾ ಹೋದರೆ ಸುಖ-ದುಃಖಗಳೆರಡಕ್ಕೂ ವ್ಯತ್ಯಾಸವೇ ಕಾಣುವುದಿಲ್ಲ. ಸಾಮಾನ್ಯಮಾನವನು ಇದನ್ನು ತಿಳಿಯದೇ ಸುಖವು ಬಂದಾಗ ಹಿರಿಹಿಗ್ಗುತ್ತಾನೆ. ದುಃಖವು ಬಂದಾಗ ಕುಸಿದು ಹೋಗುತ್ತಾನೆ. ವಿವೇಕವುಳ್ಳವನು ಎರಡನ್ನೂ ಸಮಾನವಾಗಿ ಕಾಣುತ್ತಾನೆ.

ಸುಖ-ದುಃಖಗಳೆರಡನ್ನೂ ವರ್ಜಿಸುವುದೆಂದರೆ ಸುಖಬಂದಾಗ ಹಿಗ್ಗ ದಿರುವುದು ; ಕಷ್ಟಬಂದಾಗ ಕುಗ್ಗದಿರುವುದು. ಸುಖ-ದುಃಖಗಳೆರಡೂ ಅಶಾಶ್ವತವೆಂದು ಭಾವಿಸುವುದು. ಆತ್ಮಜ್ಞಾನತೃಪ್ತರಾದವರು–ಮನನಶೀಲ ರಾದವರು ಪರಮಸುಖವನ್ನು ಪಡೆಯುತ್ತಾರೆಂದು ವ್ಯಾಧನು ಹೇಳಿದ್ದಾನೆ. ಮನಸ್ಸನ್ನು ನಿಗ್ರಹಿಸುವುದರಿಂದ ಲಭ್ಯವಾಗುವುದು ಆತ್ಮಜ್ಞಾನತೃಪ್ತಿ ಅಥವಾ ಆತ್ಮಸಾಕ್ಷಾತ್ಕಾರ. ಆತ್ಮದರ್ಶನವು ಪರಮಸುಖಕರವಾದುದು. ಶಾಶ್ವತಸುಖ ದಾಯಕವಾದುದು. ಆ ಸುಖಕ್ಕೆ ಅಂತ್ಯವೆಂಬುದಿಲ್ಲ. ದುಃಖಲೇಶವೂ ಇರು ವುದಿಲ್ಲ. ಮನಸ್ಸನ್ನು ಬಿಗಿಹಿಡಿದು ಪರಮಾತ್ಮನಲ್ಲಿ ಲೀನಗೊಳಿಸುವವರೆಗೆ ಕಷ್ಟವಾಗಬಹುದು. ಅನಂತರ ಸರ್ವವೂ ಸುಖಮಯವಾಗಿರುತ್ತದೆ ; ಆನಂದ ಮಯವಾಗಿರುತ್ತದೆ. ಇಂತಹ ಶಾಶ್ವತವಾದ ಆನಂದಮಯವಾದ ಸುಖ ವನ್ನು ವ್ಯಾಧನಿಲ್ಲಿ ಹೇಳಿದ್ದಾನೆ. **ಜ್ಞಾನತೃಪ್ತಾ ಮನೀಷಿಣಃ**–ಎಂದು ಹೇಳಿ ರುವುದರಿಂದ ಇಷ್ಟು ಅರ್ಥವನ್ನು ಹೇಳಬಹುದಾಗಿದೆ. ಸಂಸ್ಕೃತರಾದ ಕೆಲವು ಮಾನವರು ಸರ್ವದಾ ಸಂತುಷ್ಟರಾಗಿಯೇ ಇರುತ್ತಾರೆ. ಕಳೆದುಹೋದುದಕ್ಕೆ ಯೋಚಿಸುವುದಿಲ್ಲ. ಪ್ರಾಪ್ತವಾದುದಕ್ಕೆ ಸಂತೋಷಿಸುವುದಿಲ್ಲ. ಆತ್ಮ ನೇವಾತ್ಮನಾ ತುಷ್ಟಃ ಎಂದು ಗೀತೆಯಲ್ಲಿ ಹೇಳಿರುವಂತೆ ನಿತ್ಯತೃಪ್ತ ರಾಗಿರುತ್ತಾರೆ.)

ಧರ್ಮವ್ಯಾಧನು ಮುಂದುವರಿದು ಹೇಳುತ್ತಾನೆ :

**ಅಸಂತೋಷಪರಾ ಮೂಢಾಃ ಸಂತೋಷಂ ಯಾನ್ತಿ ಪಣ್ಡಿತಾಃ ।**
**ಅಸಂತೋಷಸ್ಯ ನಾಸ್ತ್ಯನ್ತಸ್ತುಷ್ಟಿಸ್ತು ಪರಮಂ ಸುಖಮ್ ॥೨೩॥**

"ಅಸಂತೋಷವೆಂದರೆ ಅತೃಪ್ತಿ. ಮೂಢರಾದವರು ಯಾವಾಗಲೂ ಅತೃಪ್ತರಾಗಿಯೇ ಇರುತ್ತಾರೆ. ಅವರಿಗೆ ತೃಪ್ತಿಯೆಂಬುದೇ ಇರುವುದಿಲ್ಲ.

ಎಷ್ಟು ಐಶ್ವರ್ಯ ಬಂದರೂ ಇನ್ನೂ ಸಂಪಾದಿಸಬೇಕೆಂಬ ಆಶಯವುಳ್ಳವರಾಗಿರುತ್ತಾರೆ. ವಸ್ತುಗತವಾದ ಸುಖದಲ್ಲಿಯೇ ತಮ್ಮ ಮನಸ್ಸನ್ನು ಲೀನಗೊಳಿಸಿರುತ್ತಾರೆ. ಆದರಿಂದಲೇ ಅವರಿಗೆ ಸಂತೋಷವಿರುವುದಿಲ್ಲ. ಪಂಡಿತರಾದವರು ಯಾವಾಗಲೂ ತುಷ್ಟರಾಗಿರುತ್ತಾರೆ. ವಸ್ತುಗತವಾದ ಸುಖವು ಅಶಾಶ್ವತವೆಂದು ಅವರು ಬಹುಬೇಗ ಅರಿತುಕೊಳ್ಳುತ್ತಾರೆ. ಆದುದರಿಂದವರು ಐಶ್ವರ್ಯವನ್ನು ಅರಸುತ್ತಾ ಹೋಗುವುದಿಲ್ಲ. ದೈವಾಯತ್ತವಾಗಿ ಬಂದುದರಲ್ಲಿಯೇ ತೃಪ್ತಿಹೊಂದಿ ಸುಖಿಗಳಾಗುತ್ತಾರೆ. ಅಸಂತುಷ್ಟಿಗೆ ಮಿತಿಯಿಲ್ಲ. ಪ್ರಪಂಚವೇ ತನ್ನದಾದರೂ ಮೇಲಿನ ಲೋಕಗಳೂ ತನ್ನವಾಗಬೇಕೆಂಬ ಆಶೆಯು ಒಡನೆಯೇ ಮೂಡುತ್ತದೆ. ತನ್ನದೆಂಬುದು ಎಲ್ಲಿಯವರೆಗಿರುತ್ತದೆಂಬುದನ್ನು ಅವನು ವಿವೇಚಿಸಹೋಗುವುದಿಲ್ಲ. ನಿರ್ವಾಣವಾಗಿ ಇಳೆಗೆ ಬಂದಂತೆ–ನಿರ್ವಾಣವಾಗಿಯೇ ಇಳೆಯಿಂದ ನಿರ್ಗಮನವೆಂಬುದನ್ನು ಮಾನವನು ಒಂದು ಕ್ಷಣವಾದರೂ ಯೋಚಿಸುವುದಿಲ್ಲ. ತೃಪ್ತಿಯಲ್ಲಿ ಸುಖವಿದೆ ಮತ್ತು ಶಾಂತಿಯಿದೆ.

**ನ ಶೋಚನ್ತಿ ಗತಾಧ್ವಾನಃ ಪಶ್ಯನ್ತಃ ಪರಮಾಂ ಗತಿಮ್ ।**
**ನ ವಿಷಾದೇ ಮನಃ ಕಾರ್ಯಂ ವಿಷಾದೋ ವಿಷಮುತ್ತಮಮ್ ॥೨೪॥**

ನಿರ್ದೇಶಿತವಾದ ಸ್ಥಳಕ್ಕೆ ಹೋಗಬೇಕೆನ್ನುವ ಆಶೆಯಿಂದ ಹೊರಟಿರುವವರು ನಿರ್ದಿಷ್ಟವಾದ ಸ್ಥಳವು ಸಮೀಪಿಸುತ್ತಿದ್ದಂತೆಲ್ಲಾ ಸಂತೋಷಿಸುತ್ತಾರೆಯೇ ಹೊರತು ತಾವು ಅಷ್ಟುದೂರ ನಡೆದುಬಂದುದಕ್ಕಾಗಿ ದುಃಖಿಸುವುದಿಲ್ಲ. ಶ್ರೇಷ್ಠವಾದ ಪರಮಪದವನ್ನು ಹೊಂದುವ ಗುರಿಯು ನಮ್ಮದಾಗಿರಬೇಕು. ಅದಕ್ಕಾಗಿ ನಾವು ಸತತವಾಗಿ ಪ್ರಯತ್ನವನ್ನು ಮಾಡುತ್ತಿರಬೇಕು. ಆ ಪರಮಪದವು ಬಹುದೂರದಲ್ಲಿದ್ದಾಗ ನಮಗೆ ಬಹಳ ಆಯಾಸವೂ ಆಗಬಹುದು ; ಕಾಯಕ್ಲೇಶವೂ ಆಗಬಹುದು. ಅದೇ ಮಾರ್ಗದಲ್ಲಿ ಮುಂದುವರಿಯುತ್ತಿದ್ದರೆ ಆ ಪರಮಪದವು ನಮಗೆ ಸಮೀಪವಾಗುತ್ತಲೇ ಇರುವುದು. ಎಂದಾದರೊಂದು ದಿನ ನಾವದನ್ನು ಕಂಡೇ ಕಾಣುತ್ತೇವೆ. ಅಂತಹ ಪರಮಪದವನ್ನು ನಾವು ಕಂಡುಕೊಂಡ ನಂತರ ನಾವು ಅದರ ಸಾಧನೆಗಾಗಿ ಪಟ್ಟ ಆಯಾಸವು ನಮ್ಮ ಸ್ಮರಣೆಯಲ್ಲಿಯೇ ಉಳಿಯುವುದಿಲ್ಲ. ತಾವು ಅದುವರೆಗೂ ಪಟ್ಟ ಶ್ರಮಕ್ಕೆ ಯಾರೂ ಯೋಚಿಸುತ್ತಾ ಕುಳಿತುಕೊಳ್ಳುವುದಿಲ್ಲ. ಈ ವಿಷಯವು

ಪ್ರಾಪಂಚಿಕ ಮತ್ತು ಆಧ್ಯಾತ್ಮಿಕ ವ್ಯವಹಾರ–ಈ ಎರಡಕ್ಕೂ ಅನ್ವಯಿಸುತ್ತದೆ. ಯಾವುದರಲ್ಲಿಯೇ ಆಗಲೀ ಮಾನವನು ಕಾರ್ಯೋನ್ಮುಖನಾಗಿರಬೇಕೇ ಹೊರತು ವಿಷಾದಿಸುತ್ತಾ ಕುಳಿತುಕೊಳ್ಳಬಾರದು. ವಿಷಾದವು ಅರ್ಥಾತ್ ಮನೋವೈಕಲ್ಯವು ಕಾಲಕ್ರಮದಲ್ಲಿ ದೇಹಕ್ಕೆ ಅಪಾಯವನ್ನುಂಟುಮಾಡುವ ಘೋರ ವಿಷವಾಗಿ ಪರಿಣಮಿಸುತ್ತದೆ.

**ಮಾರಯತ್ಯಕೃತಪ್ರಜ್ಞಂ ಬಾಲಂ ಕ್ರುದ್ಧ ಇವೋರಗಃ ।**
**ಯಂ ವಿಷಾದೋಽಭಿಭವತಿ ವಿಕ್ರಮೇ ಸಮುಪಸ್ಥಿತೇ ।**
**ತೇಜಸಾ ತಸ್ಯ ಹೀನಸ್ಯ ಪುರುಷಾರ್ಥೋ ನ ವಿದ್ಯತೇ ॥೨೫॥**

**ಅವಶ್ಯಂ ಕ್ರಿಯಮಾಣಸ್ಯ ಕರ್ಮಣೋ ದೃಶ್ಯತೇ ಫಲಮ್ ।**
**ನ ಹಿ ನಿರ್ವೇದಮಾಗಮ್ಯ ಕಿಂಚಿತ್ಪ್ರಾಪ್ನೋತಿ ಶೋಭನಮ್ ॥೨೬॥**

ಕೋಪಗೊಂಡ ವಿಷಸರ್ಪವು ಬಾಲಕನನ್ನು ಕಡಿದು ಸಾಯಿಸಿಬಿಡುವಂತೆ–ಮೂಢನಾದವನನ್ನು ಚಿಂತೆಯೆಂಬ ಸರ್ಪವು ಸಾಯಿಸಿಬಿಡುತ್ತದೆ. ಯಾವುದಾದರೂ ಒಂದು ವೀರ್ಯವತ್ತಾದ ಕಾರ್ಯವನ್ನು ಮಾಡಬೇಕಾಗಿರುವಾಗ ಹಿಂದಿನ ಯಾವುದೋ ಒಂದು ವಿಷಯವನ್ನು ಚಿಂತಿಸುತ್ತಾ ಕುಳಿತು, ಸಮಯದಲ್ಲಿ ಮಾಡಬೇಕಾದ ಕಾರ್ಯವನ್ನೂ ಮಾಡದಿರುವ, ತೇಜೋಹೀನನಾದ ಮನುಷ್ಯನಿಗೆ ಯಾವ ವಿಧವಾದ ಪುರುಷಾರ್ಥಗಳ ಸಾಧನೆಯೂ ಆಗುವುದಿಲ್ಲ. ಅವಶ್ಯವಾಗಿ ಮಾಡಬೇಕಾಗಿರುವ ಕರ್ತವ್ಯಗಳನ್ನು ತಪ್ಪದೇ ಮಾಡುತ್ತಿದ್ದರೆ ತತ್ಸಂಬಂಧವಾದ ಫಲಪ್ರಾಪ್ತಿಯು ಆಗಿಯೇ ಆಗುತ್ತದೆ.

'ನಾನು ದರಿದ್ರನಾಗಿ ಹುಟ್ಟಿದ್ದೇನೆ ; ನೀಚಜಾತಿಯಲ್ಲಿ ಹುಟ್ಟಿದ್ದೇನೆ ; ಅವಿದ್ಯಾವಂತನಾಗಿದ್ದೇನೆ ; ನಾನು ಮಾಡಿದ ಕಾರ್ಯಗಳೆಲ್ಲಾ ಕೆಟ್ಟುಹೋದುವು'–ಇವೇ ಮುಂತಾಗಿ ಹಿಂದೆ ನಡೆದುಹೋದುದನ್ನು ಮತ್ತು ಸರಿಪಡಿಸಲಾಗದುದನ್ನು ಚಿಂತಿಸುತ್ತಾ ಕುಳಿತುಕೊಳ್ಳುವವನಿಗೆ ಯಾವ ವಿಧವಾದ ಮಂಗಳವೂ (ಶ್ರೇಯಸ್ಸೂ ) ಉಂಟಾಗುವುದಿಲ್ಲ.

**ಅಥಾಪ್ಯುಪಾಯಂ ಪಶ್ಯೇತ ದುಃಖಸ್ಯ ಪರಿಮೋಕ್ಷಣೇ ।**
**ಅಶೋಚನ್ನಾರಭೇತೈವಂ ಮುಕ್ತಶ್ಚಾವ್ಯಸನೀ ಭವೇತ್ ॥೨೭॥**

ಇಂದಿನ ತನ್ನ ದುರ್ಗತಿಗೆ ಕಾರಣವೇನಿರಬಹುದು? ಸದ್ಗತಿಯನ್ನು ಹೊಂದಬೇಕಾದರೆ ಮಾಡಬೇಕಾಗಿರುವ ಕಾರ್ಯಗಳೇನು?–ಇವೆಲ್ಲವನ್ನೂ ಚೆನ್ನಾಗಿ ಪರ್ಯಾಲೋಚಿಸಿ ದುಃಖವಿಮೋಚನಮಾರ್ಗವನ್ನು ಕಂಡುಕೊಂಡು ಅದೇ ಮಾರ್ಗದಲ್ಲಿ ತನ್ನ ಜೀವನವನ್ನು ಮುಂದುವರಿಸಬೇಕು. ನಡೆದು ಹೋದುದಕ್ಕೆ ಯಾವಾಗಲೂ ದುಃಖಿಸುತ್ತಾ ಕುಳಿತುಕೊಳ್ಳಬಾರದು. ಯಾವ ವಿಧವಾದ ಚಿಂತೆಗೂ ಹೃದಯದಲ್ಲಿ ಅವಕಾಶನೀಡದೇ ಧೀರನಾಗಿ ಮುಂದುವರಿಯಬೇಕು. ಹೀಗೆಯೇ ತನ್ನ ಸಾಧನೆಯನ್ನು ಮುಂದುವರಿಸುತ್ತಾ ಹೋದರೆ ಜೀವನ್ಮುಕ್ತನಾಗುತ್ತಾನೆ. ಅವನಿಗೆ ಕಾಲಾನುಕ್ರಮವಾಗಿ ಪ್ರಾಪಂಚಿಕವ್ಯಸನಗಳೆಲ್ಲವೂ ದೂರವಾಗುತ್ತವೆ. (ಈ ಲೋಕದಲ್ಲಿಯೂ ವ್ಯಸನಮುಕ್ತನಾಗುತ್ತಾನೆ.)

**ಭೂತೇಷ್ವಭಾವಂ ಸಂಚಿನ್ತ್ಯ ಯೇ ತು ಬುದ್ಧೇಃ ಪರಂ ಗತಾಃ ।**
**ನ ಶೋಚನ್ತಿ ಕೃತಪ್ರಜ್ಞಾಃ ಪಶ್ಯನ್ತಃ ಪರಮಾಂ ಗತಿಮ್ ॥೨೮॥**

ಪ್ರಾಪಂಚಿಕವಾದ ಸುಖ-ದುಃಖಗಳು ಅಶಾಶ್ವತವೆಂಬುದನ್ನು ಕೂಲಂಕಷವಾಗಿ ಯೋಚಿಸಿ ನಿಶ್ಚಯಮಾಡಿ, ತತ್ತ್ವಜ್ಞಾನದಿಂದ ಶಾಶ್ವತವಾದ ಪರಬ್ರಹ್ಮವಸ್ತುವಿನ ಅಸ್ತಿತ್ವವನ್ನು ತಿಳಿದುಕೊಂಡವರಾಗಿ, ಶ್ರೇಷ್ಠವಾದ ಆತ್ಮಜ್ಞಾನವನ್ನೇ ತಮ್ಮ ಏಕೈಕಸಾಧನವನ್ನಾಗಿಟ್ಟುಕೊಂಡಿರುವ ಆತ್ಮಜ್ಞಾನಿಗಳು ಪ್ರಾಪಂಚಿಕ ಕಷ್ಟ-ಸುಖಗಳ ವಿಷಯವಾಗಿ ಶೋಕಿಸುವುದಿಲ್ಲ. ಪ್ರಪಂಚದಲ್ಲಿನ ಆಗು-ಹೋಗುಗಳ ವಿಷಯವಾಗಿ ಚಿಂತಿಸುವುದೂ ಇಲ್ಲ.

ಇದೇ ಕಾರಣದಿಂದಲೇ ನಾನೂ ಸಹ ವ್ಯಾಧಜನ್ಮವು ಪ್ರಾಪ್ತವಾಗಿರುವುದಕ್ಕಾಗಿ ಯೋಚನೆಮಾಡುವುದಿಲ್ಲ. ನನ್ನ ಜನ್ಮಾಯತ್ತವಾದ ಕಾರ್ಯವನ್ನು ತುಚ್ಛೀಕರಿಸುವುದೂ ಇಲ್ಲ. ನನ್ನ ಕರ್ತವ್ಯವನ್ನು ನಾನು ಮಾಡುತ್ತಾ ಕಾಲವನ್ನು ನಿರೀಕ್ಷೆಮಾಡುತ್ತಿದ್ದೇನೆ. ನಾನು ಅನುಸರಿಸುತ್ತಿರುವ ಮಾರ್ಗದಲ್ಲಿ ನನಗೆ ಸಂಶಯವಿರುವುದಿಲ್ಲ. ನಾನು ಕೊಟ್ಟ ನಿದರ್ಶನಾನುಸಾರವಾಗಿ ನನ್ನ ಹೃದಯದಲ್ಲಿ ನಾನು ಯಾವ ವಿಧವಾದ ಚಿಂತೆಗೂ ಅವಕಾಶಮಾಡಿಕೊಟ್ಟಿಲ್ಲ.

ಧರ್ಮಜ! ಧರ್ಮವ್ಯಾಧನ ಅಮೃತಸ್ವರೂಪವಾದ ಮಾತುಗಳನ್ನು ಕೇಳಿ ಬ್ರಾಹ್ಮಣನು ಸಂತೋಷಭರಿತನಾಗಿ ವ್ಯಾಧನನ್ನು ಕುರಿತು ಹೇಳಿದನು :

"ಮಹಾನುಭಾವ! ನೀನು ಪ್ರಾಜ್ಞನೂ, ಮೇಧಾವಿಯೂ ಆಗಿರುವೆ. ನಿನ್ನ ಬುದ್ಧಿಯೂ ಅಪಾರವಾದುದು. ಐಹಿಕವಾದ ಮತ್ತು ಪಾರಲೌಕಿಕವಾದ ಎಲ್ಲ ವಿಷಯಗಳನ್ನೂ ನಿನ್ನ ಬುದ್ಧಿಯಲ್ಲಿ ಅಡಗಿಸಿಟ್ಟುಕೊಂಡಿರುವೆ. ನಾನು ಖಂಡಿತವಾಗಿಯೂ ಇನ್ನು ಮುಂದೆ ನಿನಗಾಗಿ (ನೀನು ವ್ಯಾಧಜನ್ಮವನ್ನು ಪಡೆದುದಕ್ಕಾಗಿ) ಪರಿತಪಿಸುವುದಿಲ್ಲ. ಏಕೆಂದರೆ : ವ್ಯಾಧಜನ್ಮವು ಪ್ರಾಪ್ತ ವಾಗಿರುವುದಕ್ಕೆ ನಿನಗೇ ದುಃಖವುಂಟಾಗಿಲ್ಲ. ಎರಡನೆಯದಾಗಿ : ನೀನು ಧರ್ಮವಿದನೂ ಜ್ಞಾನದಿಂದ ತೃಪ್ತಿಹೊಂದಿರುವವನೂ ಆಗಿರುತ್ತೀಯೆ. ನಿನಗೆ ಮಂಗಳವಾಗಲಿ ; ಧರ್ಮವು ನಿನ್ನನ್ನು ಸಂರಕ್ಷಿಸಲಿ. ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ಧರ್ಮದಲ್ಲಿ ಅಪ್ರಮತ್ತನಾಗಿರುವುದು ಮುಖ್ಯವಾದ ಕರ್ತವ್ಯ. ಜಾಗರೂಕತೆಯಿಂದ ಧರ್ಮಾಚರಣೆ ಮಾಡುತ್ತಿರಬೇಕು. ನಾನಿನ್ನು ಹೋಗಿಬರುವೆನು."

ಧರ್ಮಜ! ಬ್ರಾಹ್ಮಣನು ಹೇಳಿದ ಮಾತುಗಳಿಗೆ ವ್ಯಾಧನು ವಿನೀತನಾಗಿ 'ಬಾಢಂ'–'ಹಾಗೆಯೇ ಆಗಲಿ' ಎಂದು ಕೈಜೋಡಿಸಿ ನಮಿಸಿ ಉತ್ತರಿಸಿದನು. ಬ್ರಾಹ್ಮಣನೂ ಸಹ ಬ್ರಹ್ಮನಿಷ್ಠನಾದ ವ್ಯಾಧನನ್ನು ಪ್ರದಕ್ಷಿಣಾಕಾರವಾಗಿ ಸುತ್ತಿ ಗೌರವಿಸಿ ತನ್ನೂರಿಗೆ ಹೊರಟನು. ತನ್ನೂರಿಗೆ ಬಂದನಂತರ ಕೌಶಿಕನು ವೃದ್ಧರಾದ ತಂದೆ-ತಾಯಿಗಳನ್ನು ನ್ಯಾಯಾನುಗುಣವಾಗಿ ಶುಶ್ರೂಷೆಮಾಡುವುದರಲ್ಲಿ ನಿರತನಾದನು.

ಯುಧಿಷ್ಠಿರ! ನೀನು ಕೇಳಿದುದೆಲ್ಲವನ್ನೂ ಆಮೂಲಾಗ್ರವಾಗಿ ಹೇಳಿದ್ದೇನೆ. ಪತಿವ್ರತೆಯ ಮಾಹಾತ್ಮ್ಯವೆಷ್ಟೆಂಬುದನ್ನು ವಿವರಿಸಿದ್ದೇನೆ. ಮಾತಾ-ಪಿತೃಶುಶ್ರೂಷೆಯ ಫಲದ ವಿಷಯವಾಗಿ ಧರ್ಮವ್ಯಾಧನು ಹೇಳಿದುದೆಲ್ಲವನ್ನೂ ಯಥಾವತ್ತಾಗಿ ಹೇಳಿದ್ದೇನೆ. ಮತ್ತೇನು ಹೇಳಲಿ?"

"ಬ್ರಾಹ್ಮಣೋತ್ತಮರೇ! ನೀವು ಈಗ ಹೇಳಿದ ಧರ್ಮಾಖ್ಯಾನವು ಅತ್ಯದ್ಭುತವಾದುದು ಮತ್ತು ಅತ್ಯಂತಶ್ರೇಷ್ಠವಾದುದು. ಸರ್ವಧರ್ಮವಿದರಲ್ಲಿಯೂ ಶ್ರೇಷ್ಠರೇ! ನಿಮ್ಮ ಪ್ರವಚನವು ಸುಖಶ್ರಾವ್ಯವಾಗಿದ್ದು ಅಮೃತಧಾರರೂಪವಾಗಿದ್ದುದರಿಂದ ಕ್ಷಣಮಾತ್ರದಲ್ಲಿ ಮುಗಿದುಹೋಯಿತೆಂದು

ಭಾಸವಾಗುತ್ತಿದೆ. ಇಂತಹ ಧರ್ಮಾಖ್ಯಾನಗಳನ್ನು ಕೇಳುತ್ತಿದ್ದಂತೆಲ್ಲಾ ಮತ್ತೂ ಕೇಳಬೇಕೆಂಬ ಆಶಯವು ಹುಟ್ಟುವುದೇ ಹೊರತು ಸಾಕೆನ್ನಿಸುವುದಿಲ್ಲ."

೨೧೬ನೆಯ ಅಧ್ಯಾಯವು ಮುಗಿಯಿತು.

೨೧೭ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಅಗ್ನಿಯು ಅಂಗಿರಸನನ್ನು ತನ್ನ ಮೊದಲನೆಯ ಮಗನನ್ನಾಗಿ ಮಾಡಿಕೊಂಡುದು : ಅಂಗಿರಸನಿಂದ ಬೃಹಸ್ಪತಿಯ ಜನನ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ಧರ್ಮರಾಜನು ಧರ್ಮಯುಕ್ತವಾದ ಧರ್ಮವ್ಯಾಧನ ಕಥಾಪ್ರವಚನವನ್ನು ಮಾರ್ಕಂಡೇಯಮಹರ್ಷಿಗಳಿಂದ ಕೇಳಿದ ನಂತರ ಪುನಃ ಮಹರ್ಷಿಗಳನ್ನು ಪ್ರಶ್ನಿಸಿದನು : "ಮಹರ್ಷಿಗಳೇ! ನಾನೀಗ ಅಗ್ನಿಯ ವಿಷಯವನ್ನು ಕೇಳಿ ತಿಳಿಯಬೇಕೆಂದಿರುವೆನು. ಅಗ್ನಿಯು ನೀರಿನೊಳಗೆ ಪ್ರವೇಶಿಸಿದನೆಂದು ಕೇಳಿದ್ದೇನೆ. ಹೇಗೆ ಪ್ರವೇಶಿಸಿದನು? ಏಕೆ ಪ್ರವೇಶಿಸಿದನು? ಅಗ್ನಿಯಿಲ್ಲದಿದ್ದಾಗ ಮಹಾತೇಜಸ್ವಿಯಾದ ಅಂಗಿರಸ ಮಹರ್ಷಿಯೇ ಯಜ್ಞೇಶ್ವರನಾಗಿ ದೇವತೆಗಳಿಗೆ ಹವಿಸ್ಸನ್ನು ಒಯ್ಯಲು ಹೇಗೆ ಸಮರ್ಥನಾದನು? ಅಗ್ನಿಯು ಒಬ್ಬನೇ ಆಗಿದ್ದರೂ ವಿವಿಧಕರ್ಮಗಳಲ್ಲಿ ಅವನು ವಿವಿಧರೂಪಗಳನ್ನು ಹೇಗೆ ಧರಿಸುತ್ತಾನೆ? ಈ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳಿರಿ. ಕುಮಾರನು ಹೇಗೆ ಜನಿಸಿದನು? ಅವನು ಅಗ್ನಿಯ ಪುತ್ರನಾದುದು ಹೇಗೆ? ಕುಮಾರನನ್ನು ಈಶ್ವರನ ಮಗನೆಂದೂ ಹೇಳುತ್ತಾರೆ. ಅವನು ಈಶ್ವರನಿಂದ ಗಂಗಾದೇವಿಯಲ್ಲಿ ಹೇಗೆ ಜನ್ಮತಾಳಿದನು? ಇದೇ ಕುಮಾರಸ್ವಾಮಿಗೆ 'ಕೃತ್ತಿಕಾಸುತ' ಅಥವಾ ಕೃತ್ತಿಕಾನಕ್ಷತ್ರಗಳ ಮಗನೆಂದೂ ಹೇಳುವರು. ಅದು ಹೇಗೆ? ಒಬ್ಬನೇ ಒಬ್ಬನು ಅಗ್ನಿ, ರುದ್ರ, ಗಂಗೆ, ಕೃತ್ತಿಕೆಯರು–ಇವರೆಲ್ಲರಿಗೂ ಮಗನು ಹೇಗಾದನು? ಪರಮಾದ್ಭುತವಾದ ಕುಮಾರಸ್ವಾಮಿಯ ಇತಿಹಾಸವನ್ನೂ ನಿಮ್ಮಿಂದ ಕೇಳಿ ತಿಳಿಯಬೇಕೆಂದು ಇಚ್ಛಿಸಿರುವೆನು. ನನಗೆ ಅವನ ಜನ್ಮಚರಿತ್ರೆಯನ್ನು ಕೇಳಬೇಕೆಂಬ ಕುತೂಹಲ ಉಂಟಾಗಿರುವುದು. ದಯಮಾಡಿ ಹೇಳಿರಿ."

“ಯುಧಿಷ್ಠಿರ! ಕೋಪಗೊಂಡ ಅಗ್ನಿಯು ತಪಸ್ಸುಮಾಡಲು ನೀರಿನೊಳಕ್ಕೆ ಹೊರಟುಹೋದುದು, ಅಂಗಿರಸಮಹರ್ಷಿಯು ತಾನೇ ಅಗ್ನಿಯಾಗಿ ತನ್ನ ಪ್ರಭೆಯಿಂದ ಪ್ರಪಂಚವನ್ನು ಸಂತಾಪ (ಪ್ರಕಾಶ) ಗೊಳಿಸಿದುದು ಮತ್ತು ಕತ್ತಲೆಯನ್ನು ಸಂಪೂರ್ಣವಾಗಿ ಹೋಗಲಾಡಿಸಿದುದು–ಇವುಗಳ ವಿಷಯವಾಗಿ ಹಿಂದಿನ ಇತಿಹಾಸವಿದೆ. ಅದನ್ನೇ ಈಗ ಹೇಳುತ್ತೇನೆ. ಹಿಂದೆ ಅಂಗಿರಸಮಹರ್ಷಿಯು ಆಶ್ರಮಸ್ಥನಾಗಿ ಉತ್ತಮೋತ್ತಮವಾದ ತಪಶ್ಚರಣೆಯನ್ನು ಮಾಡಿದನು. ಮಹಾಭಾಗನಾದ ಆ ಮಹರ್ಷಿಯು ಯಜ್ಞೇಶ್ವರನನ್ನೂ ಮೀರಿಸುವ ತೇಜಸ್ಸನ್ನು ತನ್ನ ತಪಃಪ್ರಭಾವದಿಂದ ಪಡೆದಿದ್ದನು. ಯಜ್ಞೇಶ್ವರನಿಗಿಂತಲೂ ಮಿಗಿಲಾಗಿ ಅವನ ಅಪ್ರತಿಮವಾದ ತೇಜಸ್ಸು ಸರ್ವತ್ರ ವ್ಯಾಪ್ತವಾಗಿದ್ದಿತು. ಅದೇ ಸಮಯದಲ್ಲಿ ನೀರಿನಲ್ಲಿ ಕುಳಿತು ತಪಸ್ಸುಮಾಡುತ್ತಿದ್ದ ಯಜ್ಞೇಶ್ವರನು ಸರ್ವವ್ಯಾಪಿಯಾಗಿದ್ದ ಅಂಗಿರಸ ಮಹರ್ಷಿಯ ಅಪ್ರತಿಮವಾದ ತೇಜಸ್ಸನ್ನು ಕಂಡು ಉದ್ವಿಗ್ನನಾದನು. ಖಿನ್ನನಾದ ಯಜ್ಞೇಶ್ವರನಿಗೆ ಮುಂದೇನು ಮಾಡಬೇಕೆಂಬುದು ತಿಳಿಯಲಿಲ್ಲ. ತನ್ನಲ್ಲಿಯೇ ತಾನು ಯೋಚಿಸತೊಡಗಿದನು:

“ನಾನಿಲ್ಲಿ ತಪಸ್ಸಿಗಾಗಿ ಕುಳಿತಿರಲಾಗಿ ಬ್ರಹ್ಮನು ಬೇರೆಯ ಅಗ್ನಿಯನ್ನೇ ಸೃಷ್ಟಿಸಿಬಿಟ್ಟಿದ್ದಾನೆ. ನನಗೆ ಇಂದು ಅಗ್ನಿತ್ವವೇ ಹೊರಟುಹೋಗಿರುವುದು. ನಾನು ಪುನಃ ಅಗ್ನಿತ್ವವನ್ನು ಪಡೆಯುವುದು ಹೇಗೆ?”

ಈ ಪ್ರಕಾರವಾಗಿ ತನ್ನಲ್ಲಿಯೇ ತಾನು ಚಿಂತಿಸುತ್ತಾ ಅಂಗಿರಸ ಮಹರ್ಷಿಯ ಆಶ್ರಮದ ಬಳಿಗೆ ಬಂದು ಸಾಕ್ಷಾತ್ ಯಜ್ಞೇಶ್ವರನಂತೆಯೇ ಸಕಲಭುವನಗಳನ್ನೂ ತನ್ನ ಕಾಂತಿಯಿಂದ ಬೆಳಗಿಸುತ್ತಿದ್ದ ಮಹರ್ಷಿಯನ್ನು ಕಂಡು ಮೆಲ್ಲ-ಮೆಲ್ಲನೆ ಹೆಜ್ಜೆಯಿಡುತ್ತಾ ಮಹರ್ಷಿಯ ಬಳಿಗೆ ಹೋದನು.

ಅಂಗಿರಸನು ಅಗ್ನಿಯನ್ನು ಕಂಡು ಅವನನ್ನು ಕುರಿತು ಹೇಳಿದನು :

“ನಿನ್ನ ಮನಸ್ಸಿನ ಚಿಂತೆಯೇನೆಂಬುದು ನನಗೆ ತಿಳಿದಿದೆ. ಅಗ್ನಿಯಾಗಿ ಸರ್ವಕಾಲದಲ್ಲಿಯೂ ಇರುವ ಇಚ್ಛೆಯು ನನಗಿಲ್ಲ. ನೀನು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗಿರುವೆ. ಮೇಲಾಗಿ ಪ್ರಪಂಚದಲ್ಲಿ ರಾತ್ರಿಯ ವೇಳೆಯಲ್ಲಿ ಕತ್ತಲೆಯನ್ನು ನೀಗಲು ಬ್ರಹ್ಮನು ಮೊದಲು ನಿನ್ನನ್ನು ಸೃಷ್ಟಿಸಿದನು. ಆದುದರಿಂದ ನೀನು ಕೂಡಲೇ ನಿನ್ನ ಸ್ವಸ್ಥಾನಕ್ಕೆ ಬಂದು ಪ್ರಪಂಚದ ಕತ್ತಲೆಯನ್ನು ನಿವಾರಣೆಮಾಡು.”

ಅಂಗಿರಸನ ಮಾತುಗಳನ್ನು ಕೇಳಿ ಖಿನ್ನವದನನಾದ ಅಗ್ನಿಯು ಹೇಳಿದನು:

"ಮಹರ್ಷೇ! ನಾನು ಕಳೆದುಹೋದ ಕೀರ್ತಿಯುಳ್ಳವನಾಗಿದ್ದೇನೆ. ನೀನೇ ಇಂದು ಮಹಾತೇಜಸ್ಸಿನಿಂದ ಕೂಡಿರುವ ಹುತಾಶನನಾಗಿಬಿಟ್ಟಿರುವೆ. ನಿನ್ನನ್ನೇ ಇಂದು ಜನರು ಪರಮಪವಿತ್ರನಾದ ಪಾವಕನೆಂದು ತಿಳಿದುಕೊಂಡಿರುತ್ತಾರೆ. ನನ್ನನ್ನೀಗ ಅವರು ನಿರ್ಲಕ್ಷಿಸಿದ್ದಾರೆ. (ನಿಜವಾದ ಅಗ್ನಿಯೊಬ್ಬನಿರುವನೆಂಬ ಅರಿವೂ ಅವರಿಗಿಲ್ಲವಾಗಿದೆ.) ನಾನೂ ಸಹ ನಿನ್ನಲ್ಲಿಯೇ ನನ್ನ ಅಗ್ನಿತ್ವವನ್ನು ಸ್ಥಾಪಿಸಿಬಿಡುತ್ತೇನೆ. ಪ್ರಜಾಪತಿಸುತನೇ! ನೀನೇ ಮೊದಲನೆಯ ಅಗ್ನಿಯಾಗು. ನಾನು ಎರಡನೆಯ ಅಗ್ನಿಯಾಗಿ ಪ್ರಾಜಾಪತ್ಯಕ–ಎಂಬ ಹೆಸರಿನ ವಿರಾಟ್ಪುರುಷನಾಗುತ್ತೇನೆ."

ಅಗ್ನಿಯ ಮಾತುಗಳನ್ನು ಕೇಳಿ ಮಹರ್ಷಿಯು ಹೇಳಿದನು :

"ಅಗ್ನಿದೇವ! ನೀನು ನಿನ್ನ ಅಗ್ನಿತ್ವವನ್ನು ನನ್ನಲ್ಲಿ ಪ್ರತಿಷ್ಠಾಪಿಸ ಬೇಕಾಗಿಲ್ಲ. ನೀನೇ ಅಗ್ನಿಯಾಗಿದ್ದುಕೊಂಡು ಪ್ರಪಂಚದ ಕತ್ತಲನ್ನು ಹೋಗಲಾಡಿಸಿ ಪ್ರಜೆಗಳನ್ನು ಸ್ವರ್ಗಗಾಮಿಗಳನ್ನಾಗಿ ಮಾಡು. ನನ್ನನ್ನು ನಿನ್ನ ಮೊದಲನೆಯ ಮಗನನ್ನಾಗಿ ಮಾಡಿಕೋ. (ನಿನ್ನ ಅನುಗ್ರಹದಿಂದ ನನಗೊಬ್ಬ ಮಗನಾಗಲಿ. ನನ್ನ ಪುತ್ರನೂ ನಾನೇ ಆದುದರಿಂದ ನಾನೂ ನಿನ್ನ ಪುತ್ರ ನಾದಂತಾಗುತ್ತದೆ.)"

ಅಂಗಿರಸಮಹರ್ಷಿಯ ಮಾತುಗಳನ್ನು ಕೇಳಿದ ಯಜ್ಞೇಶ್ವರನು ಮಹರ್ಷಿಗೊಬ್ಬ ಪುತ್ರನಾಗುವಂತೆ ಅನುಗ್ರಹಿಸಿದನು. ಅಂಗಿರಸನಿಗೆ ಬೃಹಸ್ಪತಿಯೆಂಬ ಪುತ್ರನು ಅಗ್ನಿಯ ಅನುಗ್ರಹದಿಂದ ಹುಟ್ಟಿದನು. ಅಗ್ನಿಯ ಅನುಗ್ರಹದಿಂದ ಅಂಗಿರಸನಿಗೆ ಒಬ್ಬ ಮಗನು ಹುಟ್ಟಿದ್ದಾನೆಂದು ತಿಳಿದು ದೇವತೆಗಳು ಮಹರ್ಷಿಯ ಬಳಿಗೆ ಬಂದು ಅದಕ್ಕೆ ಕಾರಣವನ್ನು ಕೇಳಿದರು. ಅಂಗಿರಸನು ತಾನು ಅಗ್ನಿಗೆ ಪುತ್ರನಾದ ಅಥವಾ ಅಗ್ನಿಯಿಂದ ಪುತ್ರನನ್ನು ಪಡೆದ ಕಾರಣವನ್ನು ವಿವರಿಸಿ ಹೇಳಿದನು. ಅಂಗಿರಸನು ಕೊಟ್ಟ ನಿರೂಪಣೆಯನ್ನು ಒಪ್ಪಿಕೊಂಡು, ಬೃಹಸ್ಪತಿಯನ್ನೇ ತಮ್ಮ ಗುರುವೆಂಬುದನ್ನೂ ಅಂಗೀಕರಿಸಿ ದೇವತೆಗಳು ಹೊರಟುಹೋದರು.

ಧರ್ಮಜ! ಮಹಾಪ್ರಭೆಯುಳ್ಳ ನಾನಾವಿಧವಾದ ಅಗ್ನಿಗಳನ್ನೂ ಮತ್ತು ಆ ಅಗ್ನಿಗಳು ಯಾವ ಯಾವ ಕರ್ಮಗಳಲ್ಲಿ ನಿಯುಕ್ತರಾಗಿದ್ದಾರೆಂಬುದನ್ನೂ ಬ್ರಾಹ್ಮಣದಲ್ಲಿ ಯಾಜ್ಞಿಕಪ್ರಯೋಗಭಾಗದಲ್ಲಿ ಹೇಳಿರುವಂತೆ ಹೇಳುವೆನು, ಕೇಳು!"

೨೧೭ನೆಯ ಅಧ್ಯಾಯವು ಮುಗಿಯಿತು.

೨೧೮ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಅಂಗಿರಸನ ಸಂತಾನವರ್ಣನೆ

"ಕುರುಕುಲಾವತಂಸ! ಅಂಗಿರಸನು ಬ್ರಹ್ಮನ ಮೂರನೆಯ ಮಗ. ಅವನಿಗೆ 'ಸುಭಾ' ಎಂಬ ಹೆಸರಿನ ಹೆಂಡತಿಯಿದ್ದಳು. ಅಂಗಿರಸನಿಗೆ ಸುಭಾ ದೇವಿಯಲ್ಲಿ ಹುಟ್ಟಿದ ಮಕ್ಕಳಾರೆಂಬುದನ್ನು ಹೇಳುವೆನು ಕೇಳು. ಮಹಾಕೀರ್ತಿ ಶಾಲಿಯಾದ, ತೇಜಸ್ವಿಯಾದ, ವೇದಾಧ್ಯಯನಸಂಪನ್ನನಾದ, ಮಂತ್ರಾ ಲೋಚನೆಯಲ್ಲಿ ಕೋವಿದನಾದ ಬೃಹಸ್ಪತಿಯು ಅವನ ಜ್ಯೇಷ್ಠಪುತ್ರನು. ಭಾನು ಮತೀ ಎಂಬುವಳು ಅಂಗಿರಸನ ಹಿರಿಯ ಮಗಳು. ಅವಳು ಅಂಗಿರಸನ ಎಲ್ಲ ಮಕ್ಕಳಿಗಿಂತಲೂ ಬಹಳ ಚೆಲುವೆಯಾಗಿದ್ದಳು. ಮಹರ್ಷಿಯ ಎರಡನೆಯ ಮಗಳ ಹೆಸರು ರಾಗಾ. ಅವಳು ಹುಟ್ಟಿದೊಡನೆಯೇ ಸಕಲಪ್ರಾಣಿಗಳಲ್ಲಿಯೂ ಅನುರಾಗವೆಂಬುದು ಅಂಕುರಿಸಿತು. ಅರ್ಥಾತ್ ಪ್ರೇಮದ ದೇವತೆಯಿವಳು. * ಸಿನೀವಾಲೀ ಎಂಬುವಳು ಮೂರನೆಯ ಮಗಳು. ಚತುರ್ದಶೀಯುಕ್ತವಾದ ಅಮಾವಾಸ್ಯೆಯ ದಿನ ಇರುವ ಚಂದ್ರಕಲೆಯಂತೆ ಸಿನೀವಾಲಿಯು ಕಂಡೂ ಕಾಣದಂತೆ ಬಹಳ ಕೃಶಳಾಗಿರುತ್ತಾಳೆ. ಇವಳನ್ನೇ ರುದ್ರನು ತನ್ನ ಜಡೆಯಲ್ಲಿ ಧರಿಸಿರುವನಾದುದರಿಂದ ಇವಳನ್ನು 'ಕಪರ್ದಿಸುತಾ' ಎಂದೂ ಕರೆಯುತ್ತಾರೆ.

ಅರ್ಚಿಷ್ಮತೀ ಎಂಬುವಳು ಅಂಗಿರಸನ ಚತುರ್ಥಪುತ್ರೀ. ಅವಳು ಪ್ರಕಾಶ ಮಾನವಾದ ಪ್ರಭೆಯಿಂದ ಕೂಡಿದವಳಾಗಿದ್ದುದರಿಂದ ಅವಳಿಗೆ ಈ ಹೆಸರು ಬಂದಿತು. ಹವಿಷ್ಮತೀ ಎಂಬುವಳು ಐದನೆಯವಳು. ಅವಳು ಸರ್ವಕಾಲ ದಲ್ಲಿಯೂ ಯಜ್ಞೇಶ್ವರನಲ್ಲಿ ಅರ್ಪಿಸಿದ ಹವಿಸ್ಸನ್ನು ಸ್ವೀಕರಿಸುತ್ತಿದ್ದುದರಿಂದ

---

* ಚತುರ್ದಶೀಸಹಿತವಾದ ಅಮಾವಾಸ್ಯೆಗೆ 'ಸಿನೀವಾಲೀ' ಎಂದು ಹೆಸರು. "ಯಾ ಪೂರ್ವಾಮಾವಾಸ್ಯಾ ಸಾ ಸಿನೀವಾಲೀ." (ಶ್ರುತಿ) ಸಾ ದೃಷ್ಟೇನ್ದುಃ ಸಿನೀ ವಾಲೀ (ಅಮರಃ) ಆ ದಿವಸ ಚಂದ್ರನ ಕಲೆಯು ಕಂಡೂ ಕಾಣದಂತಿರುತ್ತದೆ.

ಅವಳಿಗೆ ಈ ಹೆಸರು ಬಂದಿತು. ಮಹಾಪುಣ್ಯವತಿಯಾದ ಮಹಿಷ್ಮತಿಯು ಅಂಗಿರಸನ ಆರನೆಯ ಮಗಳು. ಅಂಗಿರಸನು ಮಾಡುತ್ತಿದ್ದ ಮಹಾಯಾಗದಲ್ಲಿ ಜ್ಯೋತಿಸ್ವರೂಪಳಾಗಿ ಪ್ರಕಾಶಿಸುತ್ತಾ ಇರುತ್ತಿದ್ದ ಮಹಾಮತಿಯು ಮರ್ಹರ್ಷಿಯ ಏಳನೆಯ ಮಗಳು. ಯಾವಳನ್ನು ನೋಡಿ ಜನರು ಬಹಳ ಚಕಿತರಾಗುವರೋ ಅವಳು ಅಂಗಿರಸನ ಎಂಟನೆಯ ಪುತ್ರಿಯಾದ *ಕುಹೂ ಎಂಬುವಳು."

೨೧೮ನೆಯ ಅಧ್ಯಾಯವು ಮುಗಿಯಿತು.

೨೧೯ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಬೃಹಸ್ಪತಿಯ ಸಂತಾನವರ್ಣನೆ

ಮಾರ್ಕಂಡೇಯರು ಮುಂದುವರಿದು ಹೇಳಿದರು :

"ಬೃಹಸ್ಪತಿಗೆ ಚಂದ್ರನ ಕಾಂತಿಯಂತಹ ಕಾಂತಿಯಿಂದ ಕೂಡಿದ್ದ ತಾರಾ ಎಂಬ ಪತ್ನಿಯಿದ್ದಳು. ಅವಳಲ್ಲಿ ಬೃಹಸ್ಪತಿಯು ಅಗ್ನಿರೂಪರಾದ ಆರು ಪುತ್ರರನ್ನೂ, ಒಬ್ಬಳು ಪುತ್ರಿಯನ್ನೂ ಪಡೆದನು. ದರ್ಶ-ಪೂರ್ಣಮಾಸಗಳೇ ಮೊದಲಾದ ಕ್ರತುಗಳಲ್ಲಿ ಯಾವನಿಗೆ ಮೊದಲನೆಯ ಹವಿಸ್ಸನ್ನು ಅರ್ಪಿಸುವರೋ ಆ ಶಂಯುವೇ ಬೃಹಸ್ಪತಿಯ ಜ್ಯೇಷ್ಠಪುತ್ರ. ವೈಶ್ವದೇವ-ವರುಣಪ್ರಘಾಸ-ಸಾಕಮೇಧ-ಶುನಾಸೀರಿಯಗಳೆಂಬ ಚಾತುರ್ಮಾಸ್ಯಯಜ್ಞಗಳಲ್ಲಿಯೂ, ಅಶ್ವಮೇಧದಲ್ಲಿಯೂ ಸಹ ಮೊಟ್ಟಮೊದಲನೆಯ ಪಶುವು (ಹವಿಸ್ಸು ) ಶಂಯುವಿಗೆ ಕೊಡಲ್ಪಡುತ್ತದೆ. ಶಂಯುವೆಂಬ ಅಗ್ನಿಯು ಪ್ರದೀಪ್ತವಾದ ಅನೇಕ ಜ್ವಾಲೆಗಳಿಂದ ಕೂಡಿದವನಾಗಿರುತ್ತಾನೆ. ಅವನು ಮಹಾವೀರ್ಯವಂತನು. ಅಪ್ರತಿಮಳಾದ, ಬಹಳ ಚೆಲುವೆಯಾದ, ಧರ್ಮನ ಮಗಳಾದ ಸತ್ಯಾ ಎಂಬುವಳು ಶಂಯುವಿನ ಭಾರ್ಯೆ. ಶಂಯುವಿಗೆ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಪುತ್ರರಿದ್ದರು. ಮೂವರು ಪುತ್ರಿಯರಿದ್ದರು. ದರ್ಶಾದಿಕ್ರತುಗಳಲ್ಲಿ ಮೊಟ್ಟ ಮೊದಲು ಆಜ್ಯಭಾಗದೇವತೆಯಾಗಿ ಯಾವ ಅಗ್ನಿಯಿದ್ದಾನೆಯೋ ಅವನೇ ಶಂಯುವಿನ ಮೊದಲನೆಯ ಮಗನಾದ ಭರದ್ವಾಜನು.

---

* ಚಂದ್ರನು ಕಾಣದಿರುವ ಅಮಾವಾಸ್ಯೆಗೆ ಕುಹೂ ಎಂದು ಹೆಸರು. ಸಾ ನಷ್ಟೇನ್ದುಕಲಾ ಕುಹೂಃ (ಅಮರಃ)

ಸಕಲವಿಧವಾದ ದರ್ಶ-ಪೂರ್ಣಮಾಸಗಳಲ್ಲಿಯೂ ಯಾವನಿಗೆ ಸ್ರುಕ್ಕಿನಿಂದ ಆಜ್ಯಹೋಮಮಾಡುವರೋ ಅವನೇ ಶಂಯುವಿನ ಎರಡನೆಯ ಮಗನಾದ ಭರತ. ಭರತನಿಗೆ ಮೂವರು ಪತ್ನಿಯರಿದ್ದರು. ಅವನಿಗೆ ಭರತನೆಂಬ ಹೆಸರಿನ ಮಗನೂ ಭರತೀ ಎಂಬ ಹೆಸರಿನ ಪುತ್ರಿಯೂ ಇದ್ದರು. ಯಜ್ಞದಲ್ಲಿ ಈ ಭರತಾಗ್ನಿಯನ್ನು ಹೊತ್ತಿರುವುದೇ ಪ್ರಾಜಾಪತ್ಯಾಗ್ನಿ. ಈ ಅಗ್ನಿಯು ಮಹಾಫಲವನ್ನು ಕೊಡುವವನಾದ್ದರಿಂದ ಇವನನ್ನು 'ಮಹಾನ್' ಎಂದೂ ಕರೆಯುವರು. ಶಂಯುವಿನ ಮೊದಲನೆಯ ಮಗನಾದ ಭರದ್ವಾಜನ ಪತ್ನಿಯ ಹೆಸರು ವೀರಾ. ವೀರಾ-ಭರದ್ವಾಜರಿಗೆ ವೀರನೆಂಬ ಪುತ್ರನಿದ್ದನು. ಬ್ರಾಹ್ಮಣರು ಸೋಮನನ್ನು ಆಜ್ಯಾದಿಗಳಿಂದ ತೃಪ್ತಿಪಡಿಸುವಂತೆ ವೀರನನ್ನೂ ಸಹ ಆಜ್ಯಾದಿಗಳಿಂದ ತೃಪ್ತಿಪಡಿಸುತ್ತಾರೆ. ಉಪಾಂಶುವಿನಿಂದ ಸೋಮನೊಡನೆ ಇವನಿಗೂ ಸೇರಿಸಿ ಬ್ರಾಹ್ಮಣರು ಆಜ್ಯಹೋಮಮಾಡುತ್ತಾರೆ. ವೀರಾಗ್ನಿಯನ್ನು ರಥಪ್ರಭು, ರಥಧ್ವಾನ, ಕುಂಭರೇತ–ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ವೀರನು ಸರಯೂ ಎಂಬ ಭಾರ್ಯೆಯಲ್ಲಿ ಸಿದ್ಧಿ ಎಂಬ ಪುತ್ರನನ್ನು ಪಡೆದನು. ಈ ಸಿದ್ಧಿಯು ತನ್ನ ಪ್ರಭೆಯಿಂದ ಸೂರ್ಯನನ್ನೇ ಮಸುಕುಗೊಳಿಸಿದನು. ಯಶಸ್ಸಿನಿಂದಾಗಲೀ, ವರ್ಚಸ್ಸಿನಿಂದಾಗಲೀ ಈ ಅಗ್ನಿಯು ಚ್ಯುತನಾಗುವವನಲ್ಲ. ಆವಹ ಎಂಬ ಮಂತ್ರದಿಂದ ಅಥವಾ ಯಜ್ಞದಲ್ಲಿ ಈ ಅಗ್ನಿಯನ್ನು ಬ್ರಾಹ್ಮಣರು ಕೀರ್ತನಮಾಡುತ್ತಾರೆ. ಯಶಸ್ಸಿನಿಂದಾಗಲೀ, ವರ್ಚಸ್ಸಿನಿಂದಾಗಲೀ ಚ್ಯುತನಾಗದ, ಪಾಪರಹಿತನಾದ, ಕಲುಷರಹಿತನಾದ, ಶುದ್ಧಾತ್ಮನಾದ ಬೃಹಸ್ಪತಿಯ ಎರಡನೆಯ ಮಗನಾದ ನಿಶ್ಚ್ಯವನನು ತನ್ನ ಜ್ವಾಲೆಗಳಿಂದ ಧಗ-ಧಗನೆ ಉರಿಯುತ್ತಾ ಪೃಥ್ವಿಯನ್ನು ಮಾತ್ರವೇ ಸ್ತೋತ್ರಮಾಡುತ್ತಿರುತ್ತಾನೆ. (ಭೂದೇವತೆಗೆ ಅರ್ಪಿಸಬೇಕಾದ ಆಹುತಿಯನ್ನು ನಿಶ್ಚ್ಯವನಾಗ್ನಿಯ ಮೂಲಕ ಅರ್ಪಿಸುತ್ತಾರೆ.)

ಪಾಪರಹಿತನಾದ ನಿಶ್ಚ್ಯವನಾಗ್ನಿಯ ಮಗನು ಕಾಲಧರ್ಮವನ್ನರಿತ ಸತ್ಯನೆಂಬುವನು. ಅವನಿಗೆ 'ನಿಷ್ಕೃತಿ' ಎಂಬ ಮತ್ತೊಂದು ಹೆಸರೂ ಇರುವುದು. ಸರ್ವಭೂತಗಳಿಗೂ ಈ ಅಗ್ನಿಯು ಪಾಪಹಾರಕನಾದ್ದರಿಂದ ಈ ಹೆಸರು ಬಂದಿರುವುದು. ಈ ಅಗ್ನಿಯು ತನ್ನನ್ನು ಸೇವಿಸಿದವರಿಗೆ ಒಳ್ಳೆಯ ಫಲಗಳನ್ನು ಕೊಡುತ್ತಾನೆ. ಈ ಸತ್ಯಾಗ್ನಿಯ ಮಗನ ಹೆಸರು ಸ್ವನ. ಎಲ್ಲ

ರೋಗ-ರುಜಿನಗಳೂ ಈ ಅಗ್ನಿಯಿಂದಲೇ ಉದ್ಭವಿಸುವುವು. ಈ ಅಗ್ನಿಯು ಜನರಿಗೆ ಅತಿಯಾದ ಯಾತನೆಯನ್ನು ಕೊಟ್ಟು ಕೂಗಿಕೊಳ್ಳುವಂತೆ ಮಾಡುತ್ತಾನೆ. ವಿಶ್ವದಲ್ಲಿರುವ ಸಕಲಪ್ರಾಣಿಗಳ ಬುದ್ಧಿಯನ್ನೂ ಆಕ್ರಮಿಸಿರುವ ಅಗ್ನಿಯನ್ನು ವಿಶ್ವಜಿದಗ್ನಿಯೆಂದು ಅಧ್ಯಾತ್ಮವನ್ನು ತಿಳಿದವರು ಹೇಳುತ್ತಾರೆ. ಇವನೇ ಬೃಹಸ್ಪತಿಯ ಮೂರನೆಯ ಮಗ. ಅಂತರಾಗ್ನಿಯೆಂದು ಹೇಳಲ್ಪಡುವ, ಪ್ರಾಣಿಗಳ ಹೊಟ್ಟೆಯಲ್ಲಿ ಸೇರಿಕೊಂಡು ತಿಂದ ಅನ್ನವನ್ನು ಜೀರ್ಣ ಮಾಡುವ ಅಗ್ನಿಗೆ 'ವಿಶ್ವಭುಕ್' ಎಂದು ಹೆಸರು. ಈ ಅಗ್ನಿಯು ಬೃಹಸ್ಪತಿಯ ನಾಲ್ಕನೆಯ ಪುತ್ರ. ಇವನು ಜಾಠರಾಗ್ನಿಯೆಂದು ಪ್ರಪಂಚದಲ್ಲೆಲ್ಲಾ ಪ್ರಸಿದ್ಧನಾಗಿರುತ್ತಾನೆ. ಈ ಅಗ್ನಿಯು ಬ್ರಹ್ಮಚಾರೀ (ವೇದಾಧ್ಯಯನಪರನು.) ಜಿತೇಂದ್ರಿಯನು. ಅನೇಕ ವ್ರತಾನುಷ್ಠಾನಗಳನ್ನು ಮಾಡಿರುವವನು. ಪಾಕಯಜ್ಞದಲ್ಲಿ ಬ್ರಾಹ್ಮಣರು ಈ ಅಗ್ನಿಯನ್ನು ಆರಾಧಿಸುತ್ತಾರೆ. ಪರಮಪವಿತ್ರಳಾದ ಗೋಮತೀನದಿಯೇ ವಿಶ್ವಭುಗಗ್ನಿಯ ಭಾರ್ಯೆ. ಈ ಅಗ್ನಿಯಲ್ಲಿ (ಅಗ್ನಿಯ ಸಮ್ಮುಖದಲ್ಲಿ) ಧರ್ಮಕರ್ತೃಗಳಿಂದ ಸಕಲಕ್ರಿಯೆಗಳೂ ಮಾಡಲ್ಪಡುತ್ತವೆ. ಪರಮದಾರುಣವಾದ, ಸರ್ವದಾ ನೀರನ್ನು ಕುಡಿಯುತ್ತಿರುವ ಅಗ್ನಿಗೆ ವಡವಾಗ್ನಿಯೆಂದು ಹೆಸರು. ಇವನು ಬೃಹಸ್ಪತಿಯ ಐದನೆಯ ಮಗ. ಈ ವಡವಾಗ್ನಿಯು ಊರ್ಧ್ವಗತಿಯವನಾಗಿರುವುದರಿಂದ ಇವನನ್ನು ಊರ್ಧ್ವಭಾಕ್ ಎಂದೂ ಬ್ರಹ್ಮಾಗ್ನಿಯೆಂದೂ ಕರೆಯುತ್ತಾರೆ. ಈ ಅಗ್ನಿಯು ಪ್ರಾಣಿಗಳ ಪ್ರಾಣವನ್ನು ಆಶ್ರಯಿಸಿರುವನು. ಸ್ವಿಷ್ಟಕೃತ್ ಎಂಬುವನು ಬೃಹಸ್ಪತಿಯ ಆರನೆಯ ಮಗ. ಇವನಿಗೆ ಅರ್ಪಿಸುವ ಹವಿಸ್ಸು ಯಾವಾಗಲೂ ಉತ್ತರಾಭಿಮುಖವಾಗಿರುತ್ತದೆ. ಈ ಅಗ್ನಿಯು ಗೃಹಸ್ಥರ ಮನೆಯಲ್ಲಿ ಯಾವಾಗಲೂ ಪ್ರಜ್ವಲಿಸುತ್ತಿರುತ್ತಾನೆ. ಆಜ್ಯಾದಿಗಳಿಂದ ಮಾಡುವ ಹೋಮವು ಈ ಅಗ್ನಿಗೆ ಬಹಳ ಪ್ರಿಯವಾಗಿರುತ್ತದೆ. ಆದುದರಿಂದಲೇ ಇದಕ್ಕೆ ಸ್ವಿಷ್ಟಕೃತ್ ಎಂಬ ಹೆಸರು ಬಂದಿರುವುದು. ಸರ್ವಪ್ರಾಣಿಗಳೂ ಪ್ರಶಾಂತವಾಗಿರಲಾಗಿ ಪಾವಕನು ಮನ್ಯುರೂಪನಾಗಿರುತ್ತಾನೆ. ಮನ್ಯುರೂಪನಾದ ಅಗ್ನಿಯಿಂದ ಕ್ರೋಧರಸವು ಉತ್ಪನ್ನವಾಗುತ್ತದೆ. ಈ ಕ್ರೋಧರಸವೇ ಬೃಹಸ್ಪತಿಯ ಪುತ್ರಿಯೆಂದು ನಾನು ತಿಳಿಯುತ್ತೇನೆ. ಇವಳ

ಹೆಸರು 'ಸ್ವಾಹಾ'. ಇವಳು ಬಹಳ ದಾರುಣಳು. ಕ್ರೂರಳು. ಸರ್ವಭೂತಗಳಲ್ಲಿಯೂ ಸತ್ತ್ವರಜಸ್ತಮೋಗುಣಾನ್ವಿತೆಯೂ ಆಗಿರುತ್ತಾಳೆ.

ಸ್ವಾಹಾಗ್ನಿಯಿಂದ ಹುಟ್ಟಿದ ಕಾಮನೂ ಒಬ್ಬ ಅಗ್ನಿಪುರುಷನು. ಮೂರು ಜಗತ್ತಿನಲ್ಲಿಯೂ ಇವನಿಗೆ ಅನುರೂಪರಾದ ರೂಪವಂತರಿಲ್ಲ. ಇವನಿಗೆ ಸಮಾನರಿಲ್ಲದಿರುವುದರಿಂದಲೇ ಈ ಅಗ್ನಿಗೆ ಕಾಮಾಗ್ನಿ ಎಂದು ದೇವತೆಗಳು ಹೆಸರಿಟ್ಟರು. ಇವನನ್ನು ಸ್ವಾಹಾದೇವಿಯ ರಾಜಸಿಕವಾದ ಅಗ್ನಿ ಎಂದೂ ಕರೆಯುವರು. ಸ್ವಾಹಾದೇವಿಯ ತಾಮಸಿಕರೂಪನೇ ಅಮೋಘಾಗ್ನಿ. ಈ ಅಗ್ನಿಯು ಪರಮಹರ್ಷದಿಂದ ಕ್ರೋಧವನ್ನು ಹೃದಯದಲ್ಲಡಗಿಸಿಕೊಂಡು ಕೈಯ್ಯಲ್ಲಿ ಧನುಸ್ಸನ್ನೂ ಕತ್ತಿನಲ್ಲಿ ಮಾಲೆಯನ್ನೂ ಧರಿಸಿ ರಥದಲ್ಲಿ ಕುಳಿತು ಯುದ್ಧದಲ್ಲಿ ಸಕಲಶತ್ರುಗಳನ್ನೂ ಸಂಹರಿಸಿಬಿಡುತ್ತಾನೆ. ಸ್ವಾಹಾದೇವಿಯ ಸಾತ್ತ್ವಿಕತೆಯಿಂದ ಉಕ್ಥನೆಂಬ ಅಗ್ನಿಯು ಹುಟ್ಟುತ್ತಾನೆ. ಈ ಅಗ್ನಿಯು ಮೋಕ್ಷಪದಕ್ಕೆ ಒಯ್ಯುವುದರಿಂದ ಇವನಿಗೆ ಉಕ್ಥನೆಂದು ಹೆಸರು. ಉಕ್ಥನನ್ನು ಮೂರು ವಿಧವಾದ ಉಕ್ಥ್ಯಗಳಿಂದ (ಸಾಮಗಳಿಂದ) ಸ್ತೋತ್ರಮಾಡುತ್ತಾರೆ. ಮಹಾವಾಣಿಯನ್ನು ಈ ಉಕ್ಥಾಗ್ನಿಯೇ ಆವಿರ್ಭಾವಮಾಡಿದ್ದಾನೆ. ಹಿಂದಿನ ಅಗ್ನ್ಯುಪಾಸಕರಿಗೆ ಇವನು ಸಮಾಶ್ವಾಸವನ್ನು ಉಂಟುಮಾಡತಕ್ಕವನಾಗಿದ್ದನೆಂದು ವೇದವಿದರು ಹೇಳುತ್ತಾರೆ.

೨೧೯ನೆಯ ಅಧ್ಯಾಯವು ಮುಗಿಯಿತು.

೨೨೦ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಪಾಂಚಜನ್ಯಾಗ್ನಿಯ ಉತ್ಪತ್ತಿ ಮತ್ತು ಅವನ ಸಂತಾನವರ್ಣನೆ

ಕಾಶ್ಯಪ (ಉಕ್ಥ ), ವಸಿಷ್ಠಪುತ್ರ, ಪ್ರಾಣಪುತ್ರ (ಪ್ರಾಣಕ), ಅಂಗಿರಸನ ಮಗ ಚ್ಯವನ ಮತ್ತು ತ್ರಿವರ್ಚಸ–ಈ ಐವರೂ ಸಹ ಅಗ್ನಿಗಳೇ ಆಗಿರುತ್ತಾರೆ. ಅವರು ಅನೇಕಸಹಸ್ರವರ್ಷಗಳವರೆಗೆ ಅತಿಘೋರವಾದ ತಪಸ್ಸುಮಾಡಿದರು. ಬ್ರಹ್ಮನಿಗೆ ಸಮಾನರಾದ, ಧಾರ್ಮಿಕರಾದ ಪುತ್ರರನ್ನು ಪಡೆಯುವುದೇ ಅವರ ತಪಸ್ಸಿನ ಮುಖ್ಯಧ್ಯೇಯವಾಗಿತ್ತು. '**ಭೂರನ್ನ–ಮಗ್ನಯೇ ಪೃಥಿವ್ಯೈ ಸ್ವಾಹಾ**' ಇದೇ ಮುಂತಾದ ಪಂಚಮಹಾವ್ಯಾಹೃತಿಗಳಿಂದ ಇವರು ಅಗ್ನಿಯನ್ನು ಸ್ತೋತ್ರಮಾಡಲಾಗಿ, ತೇಜಃಪುಂಜ

ವಾದ ಪಂಚವರ್ಣಯುಕ್ತವಾದ ಮಹಾಭೂತದ ಆವಿರ್ಭಾವವಾಯಿತು. ಅದರ ಶಿರಸ್ಸು ಮಹಾಜ್ವಾಲೆಗಳಿಂದ ಕೂಡಿದುದಾಗಿದ್ದಿತು. ಅದರ ತೋಳು ಗಳು ಸೂರ್ಯನಿಗೆ ಸಮವಾದ ಕಾಂತಿಯಿಂದ ಕಂಗೊಳಿಸುತ್ತಿದ್ದುವು. ಅದರ ಚರ್ಮ ಮತ್ತು ಕಣ್ಣುಗಳು ಸುವರ್ಣದ ಕಾಂತಿಯನ್ನು ಹೊಂದಿದ್ದುವು. ಮೊಣಕಾಲುಗಳು ಕಪ್ಪಾಗಿದ್ದುವು.

ಪಂಚಮಹಾವ್ಯಾಹೃತಿಗಳಿಂದ ಉತ್ಪನ್ನವಾದ ಈ ದೇವತೆಯು ಐದು ಬಣ್ಣಗಳಿಂದ ಕೂಡಿ ಪಾಂಚಜನ್ಯವೆಂಬ ಹೆಸರನ್ನು ಪಡೆಯಿತು.

ಆ ದೇವತೆಯನ್ನು ಐದು ಮಹಾವಂಶಗಳ ಮೂಲಪುರುಷನೆಂದೂ ಹೇಳುತ್ತಾರೆ. ಐವರ ತಪಸ್ಸಿನಿಂದ ಪ್ರಾದುರ್ಭಾವಹೊಂದಿದ ಆ ಮಹಾ ಪುರುಷನು ಹತ್ತುಸಾವಿರ ವರ್ಷಗಳ ಪರ್ಯಂತವಾಗಿ ಮಹಾತಪಸ್ಸನ್ನು ಮಾಡಿ ಪಿತೃದೇವತೆಗಳ ಅಗ್ನಿಯಾದ ದಕ್ಷಿಣಾಗ್ನಿಯನ್ನು ಸೃಷ್ಟಿಮಾಡಿ, ಪ್ರಜೆ ಗಳ ಸೃಷ್ಟಿಗೆ ಕಾರಣನಾದನು. ತನ್ನ ತಲೆಯಿಂದ ಬೃಹದ್ರಥಂತರಗಳನ್ನೂ, ಮುಖದಿಂದ (ಬಾಯಿಂದ) ವಾತರಸಾಹರರನ್ನೂ ಸೃಷ್ಟಿಸಿದನು. ಈ ಬೃಹದ್ರಥಂತರಗಳು ಆಯುಷ್ಯವನ್ನು ಹರಣಮಾಡುತ್ತವೆ. ಆ ಮಹಾ ಪುರುಷನು ನಾಭಿಯಿಂದ ಅಹಂಕಾರಾಭಿಮಾನಿದೇವತೆಯಾದ ಶಿವನನ್ನೂ, ಬಲದಿಂದ ಇಂದ್ರನನ್ನೂ, ಪ್ರಾಣದಿಂದ ವಾಯು ಮತ್ತು ಅಗ್ನಿಗಳನ್ನೂ ಸೃಷ್ಟಿಸಿದನು. ಆ ಮಹಾಪುರುಷನ ಎರಡು ತೋಳುಗಳಿಂದ ಪ್ರಾಕೃತ-ವೈಕೃತರೂಪಗಳಾದ ಉದಾತ್ತ-ಅನುದಾತ್ತಗಳೂ ಹುಟ್ಟಿದುವು. ಮನಸ್ಸಿನಿಂದ ಕೂಡಿದ ಪಂಚೇಂದ್ರಿಯಗಳನ್ನೂ, ಪಂಚಭೂತಗಳನ್ನೂ ಆ ಮಹಾಪುರುಷನು ಸೃಷ್ಟಿಸಿದನು. ಇವೆಲ್ಲವನ್ನೂ ಸೃಷ್ಟಿಸಿ ಅನಂತರದಲ್ಲಿ ಪಿತೃದೇವತೆಗಳಿಗಾಗಿ ಐದು ಮಕ್ಕಳನ್ನು ಸೃಷ್ಟಿಸಿದನು. ಬೃಹದ್ರಥನ ಅಂಶದಿಂದ ಪ್ರಣಿಧಿಯನ್ನೂ, ಕಾಶ್ಯಪನ ಅಂಶದಿಂದ ಮಹತ್ತರನನ್ನೂ, ಚ್ಯವನನ ಅಂಶದಿಂದ ಭಾನುವನ್ನೂ, ಸುವರ್ಚಸನ ಅಂಶದಿಂದ ಸೌಭರನನ್ನೂ, ಪ್ರಾಣನ ಅಂಶದಿಂದ ಅನುದಾತ್ತನನ್ನೂ ಸೃಷ್ಟಿಸಿದನು. ಈ ರೀತಿಯಾಗಿ ಇವನು ಇಪ್ಪತ್ತೈದು ಅಂಶಗಳನ್ನು ಸೃಷ್ಟಿಮಾಡಿದನೆಂದು ಹೇಳುತ್ತಾರೆ.

ಈ ಮಹಾಪುರುಷನು ದೇವತೆಗಳನ್ನು ಸೃಷ್ಟಿಸಿದುದಲ್ಲದೇ ಯಜ್ಞಹರಣ

ಮಾಡುವ ಹದಿನೈದುಮಂದಿ ದೇವತೆಗಳನ್ನು ಸೃಷ್ಟಿಸಿದನು. ಸುಭೀಮ, ಭೀಮ, ಅತಿಭೀಮ, ಭೀಮಬಲ, ಅಬಲ–ಎಂಬ ಐದು ಮಂದಿ ದೇವತೆಗಳನ್ನೂ ಸುಮಿತ್ರ, ಮಿತ್ರವಂತ, ಮಿತ್ರಜ್ಞ, ಮಿತ್ರವರ್ಧನ, ಮಿತ್ರಧರ್ಮ–ಎಂಬ ಐದು ದೇವತೆಗಳನ್ನೂ, ತಪಸ್ಸೆಂಬ ಸಂಜ್ಞೆಯನ್ನು ಹೊಂದಿದ್ದ ಪಾಂಚಜನ್ಯನು ಸೃಷ್ಟಿಸಿದನು. ಸುರಪ್ರವೀರ, ವೀರ, ಸುರೇಶ, ಸುವರ್ಚಸ, ಸುರಹಂತಾ–ಈ ಐದು ಮಂದಿಯನ್ನೂ ಸಹ ತಪಃಸಂಜ್ಞನಾದ ಪಾಂಚಜನ್ಯನು ಸೃಷ್ಟಿಸಿದನು. ಈ ಹದಿನೈದು ಮಂದಿಯನ್ನೂ ಮೂರು ವಿಭಾಗಮಾಡಿ ಐದೈದು ಮಂದಿಯ ಒಂದೊಂದು ಗುಂಪುಮಾಡಲಾಗಿದೆ. ಭೂಮಿ, ಅಂತರಿಕ್ಷ ಮತ್ತು ಸ್ವರ್ಗದಲ್ಲಿರುವ ಇವರು ದೇವತೆಗಳನ್ನುದ್ದೇಶಿಸಿ ಮಾಡುವ ಯಾಗಗಳನ್ನು ವಿನಾಶಮಾಡುತ್ತಾರೆ. ಯಜ್ಞಮಾಡುವವರ ಉದ್ದೇಶವನ್ನು ವಿಫಲಗೊಳಿಸುತ್ತಾರೆ ಮತ್ತು ಯಜ್ಞಾರ್ಥವಾಗಿ ಸಿದ್ಧಪಡಿಸಿದ ಹವಿಸ್ಸನ್ನು ಹಾಳುಮಾಡುತ್ತಾರೆ. ಹವಿಸ್ಸುಗಳನ್ನು ದೇವತೆಗಳಿಗೊಯ್ಯುವ ಅಗ್ನಿಗಳನ್ನು ಧಿಕ್ಕರಿಸುವ ಸಲುವಾಗಿಯೇ ಇವರು ಹವಿಸ್ಸನ್ನು ಹಾಳುಮಾಡುತ್ತಾರೆ ಅಥವಾ ಕದ್ದುಕೊಂಡು ಹೋಗುತ್ತಾರೆ. ಆ ಸಮಯದಲ್ಲಿ ಯಜ್ಞಮಾಡಿಸುವ ಪುರೋಹಿತರು ಯಜ್ಞಮುಷರಿಗೆ (ಯಜ್ಞಾಪಹಾರಿಗಳಿಗೆ) ಕೊಡಬೇಕಾದ ಬಲಿಯನ್ನು ಮಂತ್ರಪೂರ್ವಕವಾಗಿ ವೇದಿಯ ಹೊರಭಾಗದಲ್ಲಿಡಬೇಕು. ಹಾಗೆ ಮಾಡಿದಲ್ಲಿ ಯಜ್ಞೇಶ್ವರನಿರುವ ಸ್ಥಳಕ್ಕೆ ಈ ಯಜ್ಞವಿಧ್ವಂಸಕರು ಹೋಗಲಾರರು. ಯಾಗವು ಪ್ರಾರಂಭವಾದೊಡನೆಯೇ ಇಷ್ಟಿಕಾಚಯನಮಾಡಿದರೆ, ವೇದಿಯಲ್ಲಿ ಪ್ರತಿಷ್ಠಿಸಿದ ಅಗ್ನಿಯು ಪಕ್ಷಿಯಂತೆ ತನ್ನ ಪಕ್ಷಗಳಿಂದ ಈ ಯಜ್ಞಮುಷರನ್ನು ಬಾಧಿಸುತ್ತಾನೆ. ಯೇ ದೇವಾ ಯಜ್ಞಹನಃ ಮುಂತಾದ ಮಂತ್ರಗಳನ್ನು ಪುನಶ್ಚರಣೆ ಮಾಡಿದ್ದೇ ಆದರೆ ಯಜ್ಞಮುಷರ ಬಾಧೆಯಿರುವುದಿಲ್ಲ. ಅವರು ಹವಿಸ್ಸನ್ನು ಕದಿಯಲು ಸಾಧ್ಯವಾಗುವುದಿಲ್ಲ. ಪಾಂಚಜನ್ಯನ ಮತ್ತೊಬ್ಬ ಮಗನ ಹೆಸರು ಬೃಹದುಕ್ಥ. ಇವನು ಭೂಮಿಯನ್ನು ಆಶ್ರಯಿಸಿರುತ್ತಾನೆ. ಅಗ್ನಿಹೋತ್ರವನ್ನು ಮಾಡುವ ಸಮಯದಲ್ಲಿ ಸತ್ಪುರುಷರು ಈ ಬೃಹದುಕ್ಥನನ್ನು ಆರಾಧಿಸುತ್ತಾರೆ. ಪಾಂಚಜನ್ಯನ ಮತ್ತೊಬ್ಬ ಮಗನಾದ ರಥಂತರಾಗ್ನಿಗೆ, ಯಜ್ಞದಲ್ಲಿ ಅಧ್ವರ್ಯುಗಳು ಮಹಾವಿರಾಟ್ ಎನಿಸಿದ ಮಿತ್ರವಿಂದ

ನಿಗೆ ಕೊಡುವ ಹವಿಸ್ಸನ್ನೇ ಕೊಡುತ್ತಾರೆ. ಮಿತ್ರವಿಂದನಂತೆಯೇ ರಥಂತರನನ್ನೂ ಕಾಣುತ್ತಾರೆ. ಈ ರೀತಿಯಲ್ಲಿ ತಪಃಸಂಜ್ಞನಾದ ಯಶಸ್ವಿಯಾದ ಪಾಂಚಜನ್ಯನು ತನ್ನ ಅನೇಕ ಮಕ್ಕಳೊಡನೆ ಸಂತೋಷಭರಿತನಾಗಿರುತ್ತಾನೆ."

(ಈ ಅಧ್ಯಾಯಗಳ ಅರ್ಥವಿವರಣೆಯು ಬಹುಕ್ಲಿಷ್ಟವಾಗಿದ್ದು ಪೂರ್ವಮೀಮಾಂಸಾ-ಉತ್ತರಮೀಮಾಂಸೆಗಳೆರಡನ್ನೂ ಈ ಅಧ್ಯಾಯಗಳಲ್ಲಿ ಹೇಳುತ್ತಾ ಹೋಗುತ್ತಾರೆ. ವೇದಗಳಲ್ಲಿರುವ ಅನೇಕವಾದ ಯಾಜ್ಞಿಕ ಪ್ರಯೋಗಗಳನ್ನಿಲ್ಲಿ ಶ್ಲೋಕರೂಪದಲ್ಲಿ ಕೊಡಲಾಗಿದೆ. ಇಲ್ಲಿ ಹೇಳಿರುವ ಅಗ್ನಿಗಳು ಶರೀರದಲ್ಲಿಯೂ ಇರುತ್ತವೆ. ಯಜ್ಞ-ಯಾಗಾದಿಗಳಲ್ಲಿಯೂ ಸಹ ಈ ಹೆಸರುಗಳಿಂದಲೇ ಆರಾಧಿಸುತ್ತಾರೆ. ಅಂತರ್ವ್ಯಾಪಾರವನ್ನು ಬಹಿರ್ವ್ಯಾಪಾರದ ಮೂಲಕವಾಗಿ ಸ್ಮರಣೆಗೆ ತರುವ ಮಹಾವಿದ್ಯೆಯು ಇದಾಗಿರುತ್ತದೆ. ಪ್ರತಿಯೊಂದು ಶ್ಲೋಕಕ್ಕೂ ವೇದ ಮತ್ತು ಶ್ರೌತ-ಸ್ಮಾರ್ತ-ಗೃಹ್ಯಸೂತ್ರಗಳನ್ನು ನಿರೂಪಣೆಕೊಟ್ಟು ವ್ಯಾಖ್ಯೆಮಾಡಲು ಬಹುವಿಸ್ತರವಾಗಿರುವುದರಿಂದ ಈ ಶ್ಲೋಕಗಳಿಗೆ ಯಥಾವತ್ತಾದ ಅರ್ಥವನ್ನು ಮಾತ್ರವೇ ಕೊಡಲಾಗಿದೆ.)

೨೨೦ನೆಯ ಅಧ್ಯಾಯವು ಮುಗಿಯಿತು.

೨೨೧ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಅಗ್ನಿಸ್ವರೂಪನಾದ ಪಾಂಚಜನ್ಯನ ಮತ್ತು ಭಾನು (ಮನು) ಸಂತತಿಯ ವರ್ಣನೆ

"ಧರ್ಮಜ! ಮಹತ್ತರವಾದ ನಿಯಮಾನುಷ್ಠಾನಗಳಿಂದ ಹುಟ್ಟಿದವನು ಭರತನೆಂಬ ಅಗ್ನಿ. ಅವನಿಗೆ 'ಪುಷ್ಟಿಮತಿ' ಎಂದೂ ಹೆಸರು. ಹವಿಸ್ಸಿನಿಂದ ತೃಪ್ತನಾದರೆ ಅವನು ಯಜಮಾನನಿಗೆ ಪುಷ್ಟಿಯನ್ನೂ ಕೊಡುತ್ತಾನೆ. ಅವನು ಪ್ರಜೆಗಳನ್ನು ಭರಿಸುತ್ತಾನಾದ್ದರಿಂದ ಇವನಿಗೆ ಭರತನೆಂಬ ಅನ್ವರ್ಥ ನಾಮವು ಬಂದಿರುವುದು. ಶಿವನೆಂಬ ಮತ್ತೊಬ್ಬ ಅಗ್ನಿಯು ಸರ್ವದಾ ಶಕ್ತಿಪೂಜೆಯಲ್ಲಿಯೇ ನಿರತನಾಗಿರುತ್ತಾನೆ. ದುಃಖದಿಂದ ಸಂಕಟಪಡುತ್ತಿರುವವರೆಲ್ಲರಿಗೂ ಅವನು ಮಂಗಳವನ್ನುಂಟುಮಾಡುವವನಾದ್ದರಿಂದ ಅವನಿಗೆ ಶಿವನೆಂಬ ಹೆಸರು ಬಂದಿರುವುದು. ಪಾಂಚಜನ್ಯನೆಂಬ ಅಗ್ನಿಯ ಅಪಾರವಾದ ತಪಃಫಲವನ್ನು ಕಂಡು ಆ ಮಹಾತಪಸ್ಸಿನ ಫಲದಲ್ಲಿ ತಾನೂ ಪಾಲುಗೊಳ್ಳಲು

ಮಹಾಬುದ್ಧಿಶಾಲಿಯಾದ ಇಂದ್ರನು ಪುರಂದರನೆಂಬ ಹೆಸರಿನಿಂದ ಈ ಪಾಂಚ ಜನ್ಯನೆಂಬ ಅಗ್ನಿಗೆ ಮಗನಾಗಿ ಹುಟ್ಟಿದನು.

ಪಾಂಚಜನ್ಯನಿಂದ ಊಷ್ಮಾ ಎಂಬ ಅಗ್ನಿಯು ಪ್ರಾದುರ್ಭೂತನಾದನು. ಅವನು ಎಲ್ಲ ಪ್ರಾಣಿಗಳಲ್ಲಿಯೂ ಶಾಖದ ರೂಪದಲ್ಲಿರುತ್ತಾನೆ. ಅನಂತರದಲ್ಲಿ ಮನು ಎಂಬ ಅಗ್ನಿಯು ಹುಟ್ಟಿದನು. ಅವನನ್ನು ಪ್ರಾಜಾಪತ್ಯನೆಂದು ಕರೆದರು. ಅನಂತರ ಪಾಂಚಜನ್ಯನಿಗೆ ಹುಟ್ಟಿದ, ಮಹಾಪ್ರಭೆಯಿಂದ ಕೂಡಿದ ಪ್ರಜ್ವಲಿಸುವ ಎರಡು ಅಗ್ನಿಗಳನ್ನು ವೇದಪಾರಂಗತರಾದ ಬ್ರಾಹ್ಮಣರು ಶಂಭು ಎಂದೂ ಆವಸಥ್ಯ ಎಂದೂ ಕರೆದರು. ಈ ರೀತಿಯಾಗಿ ಸುವರ್ಣ ಸದೃಶರಾದ, ಸೋಮಪಾಯಿಗಳಾದ, ಮಹಾಶಕ್ತಿಮಂತರಾದ ಪಂಚಾಗ್ನಿ ಗಳನ್ನು ತಪನೆಂಬ (ಪಾಂಚಜನ್ಯ ) ಅಗ್ನಿಯು ಪಡೆದನು. ದಿನವೆಲ್ಲಾ ಸುತ್ತಿ ಬಳಲಿದ ಸೂರ್ಯನು ಅಸ್ತಂಗತನಾದನಂತರ ತಾನೇ ಮಹಾಭಾಗನಾದ ಅಗ್ನಿಸ್ವರೂಪನಾಗಿ, ಘೋರರೂಪಿಗಳಾದ ಅಸುರರನ್ನೂ, ನಾನಾವಿಧವಾದ ರೂಪಗಳುಳ್ಳ ಮನುಷ್ಯರನ್ನೂ ಸೃಷ್ಟಿಸಿದನು.

ಹಿಂದೆ ಹೇಳಿದ ತಪನ ಪುತ್ರರಾದ ಮನುವನ್ನೂ ಮತ್ತು ಭಾನುವನ್ನೂ ಅಂಗಿರಸನು ಪುನಃ ಬೇರೆಯ ರೂಪದಲ್ಲಿ ಸೃಷ್ಟಿಸಿದನು. ವೇದಪಾರಂಗತರಾದ ಬ್ರಾಹ್ಮಣರು ಅಂಗಿರಸನು ಸೃಷ್ಟಿಸಿದ ಭಾನುವನ್ನು ಬೃಹದ್ಭಾನು ಎಂದು ಕರೆಯುತ್ತಾರೆ. ಭಾನುವಿಗೆ ಸುಪ್ರಜೆಯೆಂಬುವಳೂ ಸೂರ್ಯನ ಮಗಳಾದ ಬೃಹದ್ಭಾಸಾ ಎಂಬುವಳೂ ಪತ್ನಿಯರಾದರು. ಈ ಇಬ್ಬರೂ ಆರು ಪುತ್ರರಿಗೆ ಜನ್ಮಕೊಟ್ಟರು. ಅವರ ವಿಷಯವನ್ನು ಹೇಳುವೆನು, ಕೇಳು : ಧರ್ಮಜ! ಭಾನುವಿನ ಮೊದಲನೆಯ ಮಗನ ಹೆಸರು ಬಲದ. ಪ್ರಪಂಚದಲ್ಲಿ ದುರ್ಬಲ ವಾಗಿರುವ ಪ್ರಾಣಿಗಳಿಗೆ ಯಾವ ಅಗ್ನಿಯು ಚೈತನ್ಯವನ್ನು ಕೊಟ್ಟು ಕಾಪಾಡು ವನೋ ಆ ಅಗ್ನಿಯನ್ನು ಬಲದನೆಂಬ ಅನ್ವರ್ಥನಾಮದಿಂದ ಕರೆಯುವರು. ಪ್ರಶಾಂತವಾಗಿರುವ ಪ್ರಾಣಿಗಳಲ್ಲಿ ದಾರುಣವಾದ ಕೋಪವುಂಟಾಗುವಂತೆ ಮಾಡುವುದೇ ಮನ್ಯುಮಂತ ಎಂಬ ಅಗ್ನಿಯ ಕಾರ್ಯ. ಇವನು ಭಾನುವಿನ ಎರಡನೆಯ ಮಗನು. ದರ್ಶ ಮತ್ತು ಪೌರ್ಣಮಾಸಗಳಲ್ಲಿ ಯಾವನಿಗೆ ಹವಿಸ್ಸನ್ನು ಕೊಡುತ್ತಾರೆಯೋ ಮತ್ತು ಯಾವನಿಗೆ ವಿಷ್ಣು ಎಂಬ ಹೆಸರಿರುವುದೋ ಆ ಅಗ್ನಿಗೆ ಧೃತಿಮಂತ ಮತ್ತು ಅಂಗಿರಸ ಎಂಬ ಎರಡು

ಹೆಸರುಗಳೂ ಇವೆ. ಇವನು ಭಾನುವಿನ ಮೂರನೆಯ ಮಗ. ಹೊಸ ಧಾನ್ಯವು ಬಂದಾಗ ಆ ಧಾನ್ಯದಿಂದ ಇಂದ್ರನಿಂದೊಡಗೂಡಿದ ಯಾವ ಅಗ್ನಿಯನ್ನು ಉದ್ದೇಶಿಸಿ ಯಾಗಮಾಡುತ್ತಾರೆಯೋ–ಆ ಅಗ್ನಿಗೆ ಆಗ್ರಯಣನೆಂದೂ (ವೈಶ್ವಾನರನೆಂದೂ), ಆ ಇಷ್ಟಿಗೆ ಆಗ್ರಯಣೇಷ್ಟಿಯೆಂದೂ ಹೆಸರು. ಆ ವಹ್ನಿಯು ಭಾನುವಿನ ನಾಲ್ಕನೆಯ ಪುತ್ರನೆಂದು ಹೇಳುವರು. ಚಾತುರ್ಮಾಸ್ಯದಲ್ಲಿ ಮಾಡುವ ನಿತ್ಯವಾದ ಹೋಮಕ್ಕೆ ಮುಖ್ಯವಾದುದು ಅಗ್ರಹವೆಂಬ ಅಗ್ನಿ. ಇವನು ಭಾನುವಿನ ಐದನೆಯ ಮಗ. ಆಗ್ನೇಯಾದಿ ಅಷ್ಟಾಕಪಾಲಗಳ ಉದ್ಭವಸ್ಥಾನಕ್ಕೆ ಅಥವಾ ಆ ಮಂತ್ರಗಳಿಂದ ಹೋಮಮಾಡುವ ಸ್ಥಾನಕ್ಕೆ (ಅಗ್ನಿಗೆ) ಸ್ತುಭವೆಂದು ಹೆಸರು. ಈ ಸ್ತುಭಾಗ್ನಿಯು ಭಾನುವಿನ ಆರನೆಯ ಮಗನು. ಇವನಿಗೆ ನಾಲ್ವರು ಮಕ್ಕಳು. ನಿಶಾ ಎಂಬುವಳು ಭಾನು (ಮನು)ವಿನ ಮತ್ತೊಬ್ಬ ಭಾರ್ಯೆ. ಅವಳಲ್ಲಿ ಒಬ್ಬ ಪುತ್ರಿಯೂ, ಅಗ್ನೀಷೋಮರೂ ಮತ್ತು ಐವರು ಅಗ್ನಿಗಳೂ ಹುಟ್ಟಿದರು. ಆ ಐವರಲ್ಲಿ ಮೊದಲನೆಯವನ ಹೆಸರು ವೈಶ್ವಾನರ. ಪರ್ಜನ್ಯಸಹಿತನಾದ ಇವನಿಗೆ ಚಾತುರ್ಮಾಸ್ಯಯಾಗದಲ್ಲಿ ಪ್ರಧಾನಾಹುತಿಯನ್ನು ಕೊಡುತ್ತಾರೆ. ಈ ಎಲ್ಲ ಲೋಕಗಳಿಗೂ ಪ್ರಭುವಾಗಿಯೂ ಮತ್ತು ಅನ್ನವನ್ನು ಪಚನಮಾಡುವವನಾಗಿಯೂ ಯಾರು ಇರುವನೋ–ಅವನೇ ಮನುವಿನ (ಭಾನು) ಎರಡನೆಯ ಮಗನಾದ ವಿಶ್ವಪತಿ. ತನಗೆ ಇಷ್ಟವಾದುದನ್ನು ಪಡೆಯುವುದೇ ಸ್ವಿಷ್ಟಕೃತ್ ಹೋಮದ ಉದ್ದೇಶ. ಮೊದಲು ಮಾಡುವ ಯಾಗ-ಹೋಮಾದಿಗಳು ಈ ಸ್ವಿಷ್ಟಕೃದ್ಧೋಮದಿಂದ ಸ್ವಿಷ್ಟವಾಗುತ್ತವೆ. (ಒಳ್ಳೆಯ ರೀತಿಯಲ್ಲಿ ಮಾಡಿದ ಯಾಗ-ಹೋಮಗಳಾಗುತ್ತವೆ.) ಆದುದರಿಂದ ಈ ಅಗ್ನಿಯು ಸ್ವಿಷ್ಟಕೃತ್. ಮನುವಿನ ಮಗಳು ರೋಹಿಣೀ. ಇವಳು ತನ್ನ ಅಶುಭಕರ್ಮಗಳಿಂದ ಹಿರಣ್ಯಕಶಿಪುವಿಗೆ ಪತ್ನಿಯಾದಳು. ಮನುವು ಶ್ರೇಷ್ಠನಾದ ಅಗ್ನಿಯೂ ಆಗಿದ್ದನು ; ಸೃಷ್ಟಿಕರ್ತನಾದ ಪ್ರಜಾಪತಿಯೂ ಆಗಿದ್ದನು. ದೇಹಿಗಳಲ್ಲಿರುವ ಪ್ರಾಣಗಳನ್ನು ಆಶ್ರಯಿಸಿ ಯಾವನು ಆ ದೇಹದ ಪ್ರವರ್ತನೆಯಾಗುವಂತೆ ಮಾಡುತ್ತಾನೆಯೋ ಅವನೇ ಸನ್ನಿಹಿತನೆಂಬ ಹೆಸರಿನ ಮನುವಿನ ಮೂರನೆಯ ಮಗ. ಅವನು ಶಬ್ದ ಮತ್ತು ರೂಪಗಳ ಸಾಧನಭೂತನಾಗಿರುತ್ತಾನೆ. ಯಾವನು ಅರ್ಚಿರಾದಿ-ಧೂಮಾದಿ (ಧೂಮ್ರಾದಿ) ಗತಿಯುಳ್ಳವನಾಗಿರುವನೋ,

ದೇವಸಮಾನನಾಗಿರುವನೋ, ಸರ್ವದಾ ಅಗ್ನಿಯನ್ನು ಹೊಂದಿರುವನೋ, ಕಲ್ಮಷರಹಿತನೋ, ಕಾಮ್ಯಕರ್ಮಗಳ ಕರ್ತೃವೋ, ಕೋಪಕ್ಕೆ ಆಶ್ರಯವಿತ್ತಿರುವನೋ–ಅಂತಹ ಕಪಿಲನನ್ನು ಮಹರ್ಷಿಯೆಂದು ಯತಾತ್ಮರಾದವರು ಹೇಳುತ್ತಾರೆ. ಸಾಂಖ್ಯಶಾಸ್ತ್ರಪ್ರವರ್ತಕನಾದ ಇವನು ಕಪಿಲನೆಂಬ ಅಗ್ನಿ ; ಮನುವಿನ ನಾಲ್ಕನೆಯ ಮಗ. ವೈಶ್ವದೇವದ ಮೊದಲಿನಲ್ಲಿ ಮನುಷ್ಯರು ಯಜ್ಞಾರ್ಥವಾಗಿ ಯಾವ ಆಹುತಿಯನ್ನು ಕೊಡುತ್ತಾರೆಯೋ ಅದಕ್ಕೆ ಅಗ್ರವೆಂದು ಹೆಸರು. (ವೈಶ್ವದೇವದಲ್ಲಿ '**ಅಗ್ರಂ ಚ ದೇಯಂ ಭಿಕ್ಷವೇ**' 'ಭಿಕ್ಷುವಿಗೆ ಅಗ್ರವನ್ನು ಕೊಡಬೇಕು' ಎಂದಿದೆ. '**ಅಗ್ರಂ ಗ್ರಾಸ ಚತುಷ್ಟಯಂ**' ಎಂದರೆ ಅಗ್ರಶಬ್ದಕ್ಕೆ 'ನಾಲ್ಕು ತುತ್ತು' ಎಂದೂ ಅರ್ಥವಾಗುತ್ತದೆ.) ಈ ಆಹುತಿಯನ್ನೂ ಮತ್ತು ಚಿತ್ರ-ವಿಚಿತ್ರವಾದ ಇತರ ಆಹುತಿಗಳನ್ನೂ ಸ್ವೀಕರಿಸುವ ಅಗ್ನಿಗೆ ಅಗ್ರಣೀ ಎಂದು ಹೆಸರು. ಇವನು ಮನುವಿನ ಐದನೆಯ ಮಗ. ಇನ್ನೂ ಅನೇಕ ಸುಪ್ರಸಿದ್ಧರಾದ ಅಗ್ನಿಗಳನ್ನು ಮನುವು ಸೃಷ್ಟಿಸಿದ್ದಾನೆ. ಅಗ್ನಿಹೋತ್ರವು (ಅಗ್ನಿಯು) ದೋಷಯುಕ್ತವಾದಾಗ ಪ್ರಾಯಶ್ಚಿತ್ತಾರ್ಥವಾಗಿ ಈ ವಿಧವಾದ ಅಗ್ನಿಗಳನ್ನು ಸೃಷ್ಟಿಸಲಾಗಿದೆ. ಇವರೆಲ್ಲರೂ ಮನುವಿನ ಪೀಳಿಗೆಯವರೇ ಆಗಿರುತ್ತಾರೆ. ಪ್ರತ್ಯೇಕವಾದ ಕುಂಡಗಳಲ್ಲಿರುವ ಅಗ್ನಿಗಳು ಗಾಳಿಯ ಹೊಡೆತದಿಂದ ಒಂದಕ್ಕೊಂದು ಸಂಬಂಧಿಸಿದರೆ ಅಷ್ಟಾಕಪಾಲದ್ರವ್ಯದಿಂದ ಶುಚಿ ಎಂಬ ಅಗ್ನಿಯನ್ನು ಕುರಿತು ಹೋಮಮಾಡಬೇಕು. ದಕ್ಷಿಣಾಗ್ನಿಯು ಗಾರ್ಹಪತ್ಯ-ಆಹವನೀಯಾಗ್ನಿಗಳೊಡನೆ ಸೇರಿದರೆ ಅಷ್ಟಾಕಪಾಲದ್ರವ್ಯದಿಂದ ವೀತಿ ಎಂಬ ಅಗ್ನಿಯನ್ನು ಉದ್ದೇಶಿಸಿ ಪ್ರಾಯಶ್ಚಿತ್ತಹೋಮಮಾಡಬೇಕು. ನಿವೇಶ (ಅಗ್ನಿಕುಂಡ)ದಲ್ಲಿರುವ ಅಗ್ನಿಗಳು ದಾವಾಗ್ನಿಯೊಡನೆ ಸಂಸ್ಪರ್ಶಹೊಂದಿದರೆ ಅಷ್ಟಾಕಪಾಲಪುರೋಡಾಶದ್ರವ್ಯದಿಂದ ಶುಚಿ ಎಂಬ ಅಗ್ನಿಯನ್ನು ಉದ್ದೇಶಿಸಿ ಪ್ರಾಯಶ್ಚಿತ್ತಹೋಮಮಾಡಬೇಕು. ಅಗ್ನಿಹೋತ್ರಾಗ್ನಿಯನ್ನು ರಜಸ್ವಲೆಯಾದ ಸ್ತ್ರೀಯು ಸ್ಪರ್ಶಿಸಿದರೆ ಅಷ್ಟಾಕಪಾಲದ್ರವ್ಯದಿಂದ ವಸುಮಂತ ಎಂಬ ಅಗ್ನಿಯನ್ನು ಕುರಿತು ಪ್ರಾಯಶ್ಚಿತ್ತಹೋಮಮಾಡಬೇಕು. ಅಗ್ನಿಹೋತ್ರ ಮಾಡುತ್ತಿರುವಾಗ ಪ್ರಾಣಿಯೊಂದು ಸತ್ತುಹೋದ ವಾರ್ತೆಯನ್ನು ಕೇಳಿದರೂ, ಅಗ್ನಿಗೆ ಶ್ವಾನ-ಸೂಕರಾದಿಗಳ ಸ್ಪರ್ಶವಾದರೂ ಸಹ ಅಷ್ಟಾಕಪಾಲಪುರೋ

ಡಾಶದ್ರವ್ಯದಿಂದ ಸುರಭಿಮಂತ ಎಂಬ ಅಗ್ನಿಯನ್ನು ಉದ್ದೇಶಿಸಿ ಪ್ರಾಯಶ್ಚಿತ್ತಹೋಮಮಾಡಬೇಕು. ಆಲಸಿಕೆಯಿಂದಾಗಲೀ, ರೋಗ-ರುಜಿನಾದಿಗಳಿಂದಾಗಲೀ ಮೂರು ದಿನಗಳು ಅಗ್ನಿಹೋತ್ರವನ್ನು ಮಾಡಲಾಗದಿದ್ದರೆ ಅಷ್ಟಾಕಪಾಲಪುರೋಡಾಶದ್ರವ್ಯದಿಂದ ಉತ್ತರ ಎಂಬ ಅಗ್ನಿಯನ್ನು ಉದ್ದೇಶಿಸಿ ಅದರಲ್ಲಿ ಪ್ರಾಯಶ್ಚಿತ್ತಹೋಮಮಾಡಬೇಕು. ಯಾವುದಾದರೂ ಕಾರಣದಿಂದ ದರ್ಶ-ಪೌರ್ಣಮಾಸಯಜ್ಞಗಳು ನಿಂತುಹೋಗಿದ್ದರೆ ಆ ಸಮಯದಲ್ಲಿ ಅಷ್ಟಾಕಪಾಲದ್ರವ್ಯದಿಂದ ಪಥಿಕೃತ್ ಎಂಬ ಅಗ್ನಿಯನ್ನು ಉದ್ದೇಶಿಸಿ ಅದರಲ್ಲಿ ಪ್ರಾಯಶ್ಚಿತ್ತಹೋಮಮಾಡಿ ಪುನಃ ಪ್ರಾರಂಭಿಸಬೇಕು. ಅಗ್ನಿಹೋತ್ರಾಗ್ನಿಯು ಸೂತಿಕಾಗ್ನಿಯೊಡನೆ ಯಾವುದಾದರೂ ಕಾರಣದಿಂದ ಸ್ಪರ್ಶಹೊಂದಿದರೆ ಅಷ್ಟಾಕಪಾಲದ್ರವ್ಯದಿಂದ ಅಗ್ನಿಮಂತ ಎಂಬ ಅಗ್ನಿಯನ್ನು ಉದ್ದೇಶಿಸಿ ಪ್ರಾಯಶ್ಚಿತ್ತಹೋಮಮಾಡಬೇಕು. (ಈ ಪ್ರಕರಣದಲ್ಲಿ ಬರುವ ಯಾಗಗಳಿಗೆ ಇಷ್ಟಿಗಳೆಂದು ಹೆಸರು. ಚರು-ಪುರೋಡಾಶಾದಿ ದ್ರವ್ಯಗಳಿಂದ ಮಾಡುವ ದರ್ಶ-ಪೂರ್ಣಮಾಸಗಳೇ ಮೊದಲಾದ ಯಾಗಗಳು ಇಷ್ಟಿಗಳು.)

೨೨೧ನೆಯ ಅಧ್ಯಾಯವು ಮುಗಿಯಿತು.

೨೨೨ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಸಹ ಎಂಬ ಅಗ್ನಿಯು ನೀರಿನಲ್ಲಿ ಪ್ರವೇಶಿಸಿದುದು : ಅಥರ್ವಾಂಗಿರಸನ ಮೂಲಕ ಅವನು ಪುನಃ ಪ್ರಕಟವಾದುದು

ಧರ್ಮಜ! ನೀರಿನಲ್ಲಿ ಹುಟ್ಟಿದ ಸಹ ಎಂಬ ಅಗ್ನಿಯು ಪರಮಪ್ರಿಯಳಾದ ಮುದಿತಾ ಎಂಬ ತನ್ನ ಭಾರ್ಯೆಯೊಡನೆ ನೀರಿನಲ್ಲಿ ವಾಸವಾಗಿರುತ್ತಿದ್ದನು. ಭೂಮ್ಯಾಕಾಶಗಳಿಗೆ ಅಧಿಪತಿಯಾಗಿದ್ದ ಸಹನು ತನ್ನ ಪತ್ನಿಯಲ್ಲಿ ಅದ್ಭುತ ಎಂಬ ಅಗ್ನಿಯನ್ನು ಪಡೆದನು. ಪರಂಪರಾಗತವಾಗಿ ಬಂದಿರುವ ಬ್ರಾಹ್ಮಣರ ಅಭಿಪ್ರಾಯದಂತೆ ಈ ಅದ್ಭುತಾಗ್ನಿಯು ಸಕಲಪ್ರಾಣಿಗಳಿಗೂ ಪ್ರಭುವು ಮತ್ತು ಸಕಲಭುವನಗಳನ್ನೂ ಧರಿಸಿರುವವನು. ಇಲ್ಲಿರುವ ಮಹಾಭೂತಗಳಿಗೂ ಒಡೆಯನಾಗಿರುವ, ಮಹಾತೇಜಸ್ಸಿನಿಂದ ಕೂಡಿರುವ, ಭಗವಂತನಾದ ಈ ಅದ್ಭುತಾಗ್ನಿಯೂ ನಿತ್ಯವೂ ಎಲ್ಲೆಡೆಗಳಲ್ಲಿಯೂ ಸಂಚರಿಸುತ್ತಿರುತ್ತಾನೆ. ಇವನು ಭೂಪತಿ, ಭುವನಪತಿ, ಭೂತಾನಾಂಪತಿಯೂ ಆಗಿದ್ದನು. ಈ ಲೋಕದಲ್ಲಿ ಕೊಡುವ ಹವ್ಯವನ್ನು ಯಾವ ಅಗ್ನಿಯು ಹೊತ್ತು ದೇವತೆಗಳಿಗೆ

ಒಯ್ಯುತ್ತಾನೆಯೋ ಅಂತಹ ಗೃಹಪತಿಯೆಂಬ ಹೆಸರಿನ ಅಗ್ನಿಯು ಯಜ್ಞಗಳಲ್ಲಿ ನಿತ್ಯವೂ ಪೂಜಿಸಲ್ಪಡುತ್ತಿರುತ್ತಾನೆ. ಸಹನ ಮಗನಾದ ಅದ್ಭುತಾಗ್ನಿಯು ನೀರಿನಲ್ಲಿ ಹುಟ್ಟಿದವನು. (ನೀರೇ ಗರ್ಭವಾಗಿ ಉಳ್ಳವನು. 'ಅಗ್ನೇರಾಪಃ' ಎಂಬಂತೆ ನೀರಿಗೆ ಉತ್ಪತ್ತಿಸ್ಥಾನನಾದವನು.) ಯಜ್ಞಸತ್ತ್ವವನ್ನು ಉಪ ಭುಂಜಿಸುವವನು ; ಭೂಪತಿಯು ; ಸಕಲಭುವನಗಳನ್ನೂ ಧರಿಸಿರುವವನು. ಇವನನ್ನು ಆಕಾಶಕ್ಕೂ ಅಧಿಪತಿಯೆಂದು ಹೇಳುತ್ತಾರೆ. ಈ ಅದ್ಭುತಾಗ್ನಿಯ ಮಗನಾದ ಭರತನು ಪ್ರಪಂಚದಲ್ಲಿ ಪ್ರಾಣಿಗಳನ್ನೆಲ್ಲಾ ಸುಡುತ್ತಿರುತ್ತಾನೆ. ಅರ್ಥಾತ್ ಚಿತಾಗ್ನಿಗೆ ಭರತಾಗ್ನಿಯೆಂದು ಹೆಸರು. ಕ್ರತುಶ್ರೇಷ್ಠವೆನಿಸಿದ ಅಗ್ನಿ ಷ್ಟೋಮದಲ್ಲಿ ಭರತಾಗ್ನಿಯೇ ನಿಯತಾಗ್ನಿಯಾಗುತ್ತಾನೆ. ಆದರೆ ಮೂಲ ಪುರುಷನಾದ ಸಹ ಎಂಬ ಅಗ್ನಿಯು ಯಾರಿಗೂ ಸಿಕ್ಕುತ್ತಿರಲಿಲ್ಲ. ದೇವತೆಗಳು ಅವನನ್ನು ಹುಡುಕುತ್ತಿದ್ದರೂ ಸಹನು ಯಾವಾಗಲೂ ತಪ್ಪಿಸಿಕೊಂಡೇ ತಿರುಗುತ್ತಿದ್ದನು. ನಿಯತನನ್ನು ಅರ್ಥಾತ್ ಚಿತಾಗ್ನಿಯನ್ನು ಕಂಡರಂತೂ ಇವನಿಗೆ ಬಹಳ ಭಯ. ಒಮ್ಮೆ ಅವನು ಬರುತ್ತಿರುವುದನ್ನು ನೋಡಿ ಸಹನು ಸಮುದ್ರದೊಳಗೆ ಹೋಗಿ ಸೇರಿಕೊಂಡುಬಿಟ್ಟನು. ದೇವತೆಗಳು ಅಲ್ಲಿಯೂ ಅವನನ್ನು ಬಿಡುತ್ತಿರಲಿಲ್ಲ. ಅಲ್ಲಿಗೂ ಹುಡುಕಿಕೊಂಡು ಹೋದರು. ಆದರೆ ಅವನಿಗೆ ಹೊರಬರಲು ಇಷ್ಟವಿರಲಿಲ್ಲ. ದೇವತೆಗಳ ಕಾರ್ಯವು ನಡೆದೇತೀರ ಬೇಕಾಗಿದ್ದಿತು. ಅಥರ್ವಾಣನೆಂಬ ಅಗ್ನಿಯನ್ನು ಕುರಿತು ಸಹನು ಹೇಳಿದನು :

"ಪ್ರಿಯಸಖನೇ! ದೇವತೆಗಳಿಗೆ ನೀನು ಹವ್ಯವನ್ನು ಒಯ್ಯುವವ ನಾಗು. ನಾನಿನ್ನು ಈ ಕಾರ್ಯಕ್ಕೆ ಅವರಿಗೆ ಸಿಕ್ಕಲಾರೆನು. ನೀನು ಪಿಂಗಾಕ್ಷತ್ವ ವನ್ನು ಹೊಂದಿದವನಾಗಿ ನನಗೆ ಪ್ರಿಯವಾದ ಈ ಕಾರ್ಯವನ್ನು ಮಾಡುವವ ನಾಗು." ಹೀಗೆಂಬುದಾಗಿ ಹೇಳಿ ದೇವತೆಗಳಿಗೆ ಹವ್ಯವನ್ನು ಒಯ್ಯಲು ಅಥರ್ವಾಣನನ್ನು ನಿಯೋಜಿಸಿ ತಾನು ಬೇರೆಯ ಸ್ಥಳಕ್ಕೆ ಹೊರಟು ಹೋದನು. ಅಲ್ಲಿಯೂ ಸಹನ ನಿಗೂಢಸ್ಥಳವನ್ನು ಮೀನುಗಳು ಹೊರಗೆಡಹಿದುವು. ಕುಪಿತನಾದ ಸಹನು ಅವುಗಳನ್ನು ಕುರಿತು ಹೇಳಿದನು :

ಭಕ್ಷ್ಯಾ ವೈ ವಿವಿಧೈರ್ಭಾವೈರ್ಭವಿಷ್ಯಥ ಶರೀರಿಣಾಮ್ ॥೧೦॥

"ನೀವು ನನ್ನ ನಿಗೂಢಸ್ಥಳವನ್ನು ಹೊರಗೆಡಹಿದಿರಾದ್ದರಿಂದ ನೀವು ಮಾನವರಿಗೆ ಅನೇಕ ರೀತಿಗಳಲ್ಲಿ ಆಹಾರವಾಗಿರಿ. ನಿಮ್ಮನ್ನು ನೀರಿನಿಂದ ಹೊರ

ತೆಗೆದು ಮಾನವರು ತಿನ್ನಲಿ.” ಹೀಗೆಂದು ಹೇಳಿ ಪುನಃ ಅಥರ್ವಾಣನನ್ನು ಕುರಿತು ದೇವತೆಗಳಿಗೆ ಹವ್ಯವನ್ನು ಒಯ್ಯುವ ಕಾರ್ಯವನ್ನು ಮುಂದುವರಿಸು ವಂತೆ ಹೇಳಿದನು. ದೇವತೆಗಳು ಎಷ್ಟೇ ಕೇಳಿಕೊಂಡರೂ, ಅಥರ್ವಾಣನು ಒಪ್ಪಿಸಲು ಯತ್ನಿಸಿದರೂ ಸಹನು ಪುನಃ ಹವ್ಯವನ್ನು ದೇವತೆಗಳಿಗೆ ಒಯ್ಯುವ ಕಾರ್ಯವನ್ನು ಒಪ್ಪಿಕೊಳ್ಳಲಿಲ್ಲ. ತನ್ನ ಶರೀರವೇ ಸಹನಿಗೆ ಸಹ್ಯವಾಗಲಿಲ್ಲ. ಬಹಳ ಜುಗುಪ್ಸೆಹೊಂದಿದ್ದ ಸಹನು ತನ್ನ ಶರೀರವನ್ನೇ ವಿಸರ್ಜಿಸಿಬಿಟ್ಟನು. ಶರೀರವನ್ನು ಪರಿತ್ಯಜಿಸಿದನಂತರ ಕೇವಲ ತೇಜೋಮಯನಾಗಿದ್ದ ಸಹಾಗ್ನಿಯು ಭೂಮಿಯ ಮಧ್ಯಭಾಗಕ್ಕೆ ಪ್ರವೇಶಿಸಿದನು. ಭೂಮಿಯೊಡನೆ ಸಂಬಂಧಹೊಂದಿದ್ದ ಈ ಅಗ್ನಿಯು ಅನೇಕವಿಧವಾದ ಧಾತುಗಳನ್ನು ಸೃಷ್ಟಿ ಸಿದನು. ಇವನು ವಿಸರ್ಜಿಸಿದ್ದ ಶರೀರದಿಂದಲೂ ನಾನಾವಿಧವಾದ ವಸ್ತುಗಳು ಹುಟ್ಟಿದುವು. ಶರೀರದಲ್ಲಿದ್ದ ಕೀವು-ರಕ್ತಗಳಿಂದ ಗಂಧಕ-ತೈಜಸಧಾತುಗಳು ಹುಟ್ಟಿದುವು. ಮೂಳೆಗಳಿಂದ ದೇವದಾರುವೃಕ್ಷವು ಹುಟ್ಟಿತು. ಶ್ಲೇಷ್ಮದಿಂದ ಸ್ಫಟಿಕವೂ, ಪಿತ್ತದಿಂದ ಮರಕತವೂ–ರತ್ನಗಳೂ ಹುಟ್ಟಿದುವು. ಯಕೃತ್ತಿನಿಂದ ಕಬ್ಬಿಣವು ಹುಟ್ಟಿತು. ಅಗ್ನಿಯ ಶರೀರದಿಂದ ಉತ್ಪನ್ನವಾದ ಲೋಹ, ಸೌದೆ ಮತ್ತು ಕಲ್ಲು–ಇವು ಪ್ರಜೆಗಳ ಜೀವಿಕೆಗೆ ಬಹುಮುಖ್ಯವಾದುವು. ಸಹನ ಕೈಕಾಲುಗಳ ಬೆರಳುಗಳಲ್ಲಿದ್ದ ಉಗುರುಗಳು ಮೋಡಗಳಾದುವು. ನರಗಳು ಹವಳದ ವೃಕ್ಷಗಳಾದುವು. ಉಳಿದ ಶರೀರಭಾಗಗಳಿಂದ ಅನೇಕವಿಧವಾದ ಖನಿಜಗಳು ಉತ್ಪನ್ನವಾದುವು. ಈ ರೀತಿಯಾಗಿ ಸಹನು ತನ್ನ ಶರೀರವನ್ನು ಬಿಟ್ಟು ಜ್ಯೋತಿರ್ಮಯನಾಗಿ ಮಹತ್ತರವಾದ ತಪಸ್ಸಿನಲ್ಲಿ ನಿರತನಾದನು. ಕೆಲವು ಕಾಲಾನಂತರದಲ್ಲಿ ಭೃಗ್ವಂಗಿರಸಾದಿ ಮಹರ್ಷಿಗಳು ಅವನನ್ನು ತಪಸ್ಸಿ ನಿಂದ ಎಚ್ಚರಗೊಳಿಸಿದರು. ಅನವರತವಾದ ತಪಶ್ಚರಣೆಯಿಂದ ಜಾಜ್ವಲ್ಯ ಮಾನವಾದ ಜ್ವಾಲೆಯನ್ನು ಹೊಂದಿದ್ದ ಸಹನು ಮಹಾತೇಜಸ್ಸಿನಿಂದ ಪ್ರಕಾ ಶಿಸಿದನು. ಆ ಸಮಯಕ್ಕೆ ಸರಿಯಾಗಿ ಅಥರ್ವಾಣನೂ ಸಹ ಹವ್ಯವಹನದ ಕರ್ತವ್ಯವನ್ನು ಸಹನಿಗೆ ವಹಿಸಿಕೊಡಲು ಅಲ್ಲಿಯೇ ಸಿದ್ಧನಾಗಿ ನಿಂತಿದ್ದನು.

ಅಥರ್ವಾಣನನ್ನು ನೋಡಿದೊಡನೆಯೇ ಹವ್ಯವನ್ನು ಒಯ್ಯುವ ಕಾರ್ಯ ವನ್ನು ವಹಿಸಿಕೊಳ್ಳಲು ಇಚ್ಛೆಯಿಲ್ಲದ ಸಹನು ಪುನಃ ಸಮುದ್ರಕ್ಕೆ ಹೋಗಿ ಬಚ್ಚಿಟ್ಟುಕೊಂಡನು. ತಾತ್ಕಾಲಿಕವಾಗಿ ಅಥರ್ವಾಣನೂ ಸಹ ಹವ್ಯವನ್ನು

ಒಯ್ಯುವ ಕಾರ್ಯವನ್ನು ನಿಲ್ಲಿಸಿದ್ದನಾದ್ದರಿಂದ, ಪ್ರಪಂಚದಲ್ಲಿ ದೇವತೆಗಳಿಗೆ ಹವಿಸ್ಸನ್ನು ಒಯ್ಯಲು ಅಗ್ನಿಯೇ ಇಲ್ಲವಾಯಿತು. ಅದರಿಂದಾಗಿ ಪ್ರಪಂಚವೇ ಭಯಗೊಂಡಿತು. ಆ ಪರಿಸ್ಥಿತಿಯನ್ನು ಕಂಡು ದೇವತೆಗಳೆಲ್ಲರೂ ಅಥರ್ವಾಂಗಿ ರಸನನ್ನೇ ಮರೆಹೊಕ್ಕರು. ಅಥರ್ವಾಣನು ದೇವತೆಗಳ ಸಮಕ್ಷದಲ್ಲಿಯೇ ಸಮುದ್ರವನ್ನು ಕಲಕಿ ಸಹನು ಹೊರಕ್ಕೆ ಬರುವಂತೆ ಮಾಡಿದನು. ಆ ಸಮಯದಲ್ಲಿ ಸಹನ ದರ್ಶನಫಲದಿಂದಾಗಿ ಅನೇಕಲೋಕಗಳನ್ನೂ ಅಥರ್ವಾಣನು ಸೃಷ್ಟಿಸಿದನು.

ಅಥರ್ವಾಣನು ಈ ರೀತಿಯಲ್ಲಿ ನಷ್ಟವಾಗಿ ಹೋಗಿದ್ದ ಸಹನೆಂಬ ಅಗ್ನಿಯು ಪುನಃ ಹೊರಕ್ಕೆ ಬರುವಂತೆ ಮಾಡಿದನು. ಅಂದಿನಿಂದ ಸಹನೆಂಬ ಅಗ್ನಿಯು ಆಹ್ವಾನಿತನಾದರೆ ಸಕಲಪ್ರಾಣಿಗಳ ಯಜ್ಞಗಳಲ್ಲಿಯೂ ನಾನಾ ರೂಪಗಳಿಂದ ಭಾಗವಹಿಸಿ ಹವಿಸ್ಸನ್ನು ಒಯ್ಯುವ ಕಾರ್ಯವನ್ನು ಮಾಡುತ್ತಲೇ ಇದ್ದಾನೆ.

ನಾನಾದೇಶಗಳಲ್ಲಿ ಸಂಚರಿಸುತ್ತಾ ವೇದಗಳಲ್ಲಿ ಹೇಳಿರುವಂತೆ ಅನೇಕ ಧಿಷ್ಣ್ಯಾಗ್ನಿಗಳನ್ನು ಈ ಅಗ್ನಿಯು ಸೃಷ್ಟಿಸಿ ದೇವತೆಗಳಿಗೆ ಹವ್ಯವನ್ನು ಒಯ್ಯುತ್ತಿರುತ್ತಾನೆ.

ಸಿಂಧುನದ, ಪಂಚನದಗಳು, ದೇವಿಕಾ, ಸರಸ್ವತೀ, ಗಂಗಾ, ಶತ ಕುಂಭಾ, ಸರಯೂ, ಗಂಡಕೀ, ಚರ್ಮಣ್ವತೀ, ಮಹೀ, ಮೇಧ್ಯಾ, ಮೇಧಾ ತಿಥಿ, ತಾಮ್ರವತೀ, ವೇತ್ರವತೀ, ಕೌಶಿಕೀ, ತಮಸಾ, ನರ್ಮದಾ, ಗೋದಾ ವರೀ, ವೇಣಾ, ಉಪವೇಣಾ, ಭೀಮಾ, ವಡವಾ, ಭಾರತೀ, ಸುಪ್ರಯೋಗಾ, ಕಾವೇರೀ, ಮುರ್ಮುರಾ, ತುಂಗವೇಣಾ, ಕೃಷ್ಣವೇಣಾ, ಕಪಿಲಾ, ಶೋಣ—ಈ ನದ-ನದಿಗಳು ನಾನು ಮೇಲೆ ಹೇಳಿದ ಧಿಷ್ಣ್ಯಾಗ್ನಿಗಳಿಗೆ ಮಾತೃಗಳಾಗಿರುತ್ತವೆ. ಅದ್ಭುತನೆಂಬ ಅಗ್ನಿಗೆ ಪ್ರಿಯಾ ಎಂಬ ಭಾರ್ಯೆಯಲ್ಲಿ ವಿಭೂರಸಿ ಎಂಬ ಮೊದಲನೆಯ ಮಗನು ಹುಟ್ಟಿದನು. ನಾನು ಮೇಲೆ ಎಷ್ಟು ಅಗ್ನಿಗಳನ್ನು ಹೇಳಿದೆನೋ ಅಷ್ಟು ವಿಧವಾದ ಸೋಮಯಾಗಗಳಿವೆ. ನಾನು ಮೇಲೆ ಹೇಳಿದ ಅಗ್ನಿಗಳೆಲ್ಲವೂ ಮೊದಲು ಬ್ರಹ್ಮನ ಮಾನಸಪುತ್ರರಾಗಿ ಹುಟ್ಟಿ ಅನಂತರದಲ್ಲಿ ಅತ್ರಿಮಹರ್ಷಿಯ ವಂಶವನ್ನು ಅಲಂಕರಿಸಿದುವು. ಅಗ್ನಿಗಳನ್ನು ಮಕ್ಕಳನ್ನಾಗಿ ಪಡೆಯಲಿಚ್ಛಿಸಿದ ಅತ್ರಿಯು ಮೊದಲು ಈ ಅಗ್ನಿಗಳನ್ನು ತನ್ನ

ಆತ್ಮನಲ್ಲಿ ಧಾರಣೆಮಾಡಿಕೊಂಡನು. ಈ ಕಾರಣದಿಂದಲೇ ಬ್ರಹ್ಮಸ್ವರೂಪನಾದ ಅತ್ರಿಯ ಶರೀರಗಳಿಂದ ಅಗ್ನಿಗಳು ಒಂದಾದ ಮೇಲೊಂದು ಹೊರಬಂದುವು.

ಧರ್ಮಜ! ನಿನಗೆ ನಾನು ಮಹಾತ್ಮರಾದ ಅಗ್ನಿಗಳ ಪ್ರಾದುರ್ಭಾವ ವಿಷಯಗಳೆಲ್ಲವನ್ನೂ ಯಥಾರೂಪವಾಗಿ ಹೇಳಿರುತ್ತೇನೆ. ಅವುಗಳ ಶಕ್ತಿಯು ಅಪರಿಮಿತವಾದುದು. ಎಲ್ಲ ಅಗ್ನಿಗಳೂ ಅಪರಿಮಿತವಾದ ಕಾಂತಿಯಿಂದ ಕೂಡಿದುವುಗಳು ಮತ್ತು ಕತ್ತಲೆಯನ್ನು ಹೋಗಲಾಡಿಸತಕ್ಕುವುಗಳು. ವೇದ ಗಳಲ್ಲಿ ಹೇಳಿರುವಂತೆ ಅದ್ಭುತನಿಗಿರುವ ಶಕ್ತಿ-ಸಾಮರ್ಥ್ಯಗಳೇ ಉಳಿದ ಎಲ್ಲ ಅಗ್ನಿಗಳಿಗೂ ಇರುತ್ತವೆ. ಏಕೆಂದರೆ : ಈ ಅಗ್ನಿಗಳೆಲ್ಲವೂ ಒಂದೇ ಆಗಿರುತ್ತವೆ. ಜ್ಯೋತಿಷ್ಟೋಮಯಾಗವು ಯಾವ ರೀತಿಯಲ್ಲಿ ಬ್ರಹ್ಮನ ಶರೀರದಿಂದ ನಾನಾ ಪ್ರಕಾರವಾಗಿ ಹೊರಬಂದಿರುವುದೋ–ಅದೇ ರೀತಿಯಲ್ಲಿ ಈ ಅಗ್ನಿಗಳೂ ಸಹ ನಾನಾರೂಪಗಳಲ್ಲಿ ಹೊರಬಂದಿವೆ. (ಒಂದೇ ಜ್ಯೋತಿಷ್ಟೋಮವು ಇತರ ಸೋಮಯಾಗಗಳಿಗೂ ಪ್ರಕೃತಿಯಾಗಿ ಬಹುವಿಧವಾಗಿರುವಂತೆ ಅಂಗಿರಸ್ಸು ಒಬ್ಬನೇ ಆಗಿದ್ದರೂ ಅವನಿಂದ ಹುಟ್ಟಿದ ಅಗ್ನಿಗಳು ಬಹುವಿಧವಾಗಿ ತೋರುತ್ತವೆ.)

ಆದರೆ ವಸ್ತುತಃ ಈ ಅಗ್ನಿಗಳೆಲ್ಲವೂ ಒಂದೇ ಆಗಿರುತ್ತವೆ. ಈಗ ನಾನು ಅಗ್ನಿಗಳ ವಂಶಾವಳಿಯನ್ನು ವಿಸ್ತರವಾಗಿ ಹೇಳಿರುತ್ತೇನೆ. ಆಯಾ ಯಜ್ಞಗಳಲ್ಲಿ ಉಕ್ತವಾಗಿರುವ ಮಂತ್ರಗಳಿಂದ ಆಯಾ ಹೆಸರಿನ ಅಗ್ನಿಯನ್ನು ಸ್ತೋತ್ರಮಾಡಿದರೆ ಆ ರೂಪನಾದ ಅಗ್ನಿಯು ಬಂದು ದೇವತೆಗಳಿಗೆ ನಾವು ನೀಡಿದ ಹವಿಸ್ಸನ್ನು ಒಯ್ದುಕೊಡುತ್ತಾನೆ."

೨೨೨ನೆಯ ಅಧ್ಯಾಯವು ಮುಗಿಯಿತು.

೨೨೩ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಇಂದ್ರನು ಕೇಶಿಯ ಆಕ್ರಮಣದಿಂದ ದೇವಸೇನೆಯನ್ನು ಉದ್ಧರಿಸಿದುದು

ಮಾರ್ಕಂಡೇಯರು ಯುಧಿಷ್ಠಿರನನ್ನು ಕುರಿತು ಹೇಳುತ್ತಾರೆ :

"ಯುಧಿಷ್ಠಿರ! ನಾನು ಇದುವರೆಗೆ ಅಗ್ನಿಗಳ ವಂಶಾವಳಿಯನ್ನು ಹೇಳಿ ದೆನು. ಇನ್ನು ಮುಂದೆ ಧೀಮಂತನಾದ ಕಾರ್ತಿಕೇಯನ ವೃತ್ತಾಂತವನ್ನು ಹೇಳುವೆನು ; ಕೇಳು. ಅದ್ಭುತಾಗ್ನಿಯ ಪರಮಾದ್ಭುತನಾದ ಪುತ್ರನಿವನು.

ಬ್ರಹ್ಮರ್ಷಿಗಳ ಭಾರ್ಯೆಯರಲ್ಲಿ ಹುಟ್ಟಿದವನು. ಮಹಾಶಕ್ತಿಮಂತನು. ಕೀರ್ತಿಮಂತನಾದ ಈ ಮಹಾನುಭಾವನ ಕಥೆಯನ್ನು ಹೇಳುವೆನು. ಸಾವಧಾನಚಿತ್ತದಿಂದ ಕೇಳುವವನಾಗು.

ಹಿಂದೊಮ್ಮೆ ದೇವಾಸುರರು ಪರಸ್ಪರ ವಿಧ್ವಂಸನಕೃತ್ಯದಲ್ಲಿ ನಿರತರಾಗಿದ್ದರು. ಮಹಾಭಯಂಕರರಾದ ಅಸುರರು ಪದೇ-ಪದೇ ದೇವತೆಗಳನ್ನು ಪರಾಭವಗೊಳಿಸುತ್ತಿದ್ದರು. ತನ್ನ ಕಡೆಯ ಸೈನಿಕರೆಲ್ಲರೂ ಅಸುರರಿಂದ ವಿಧ್ವಂಸಿತರಾಗುತ್ತಿರುವುದನ್ನು ಕಂಡು ಇಂದ್ರನು ಖಿನ್ನಮನಸ್ಕನಾಗಿ ತನ್ನಲ್ಲಿಯೇ ತಾನು ಆಲೋಚಿಸತೊಡಗಿದನು. ತನ್ನ ಅಪಾರಸೇನೆಗೆ ಸರಿಯಾದ, ಶೂರನಾದ, ಮೇಧಾವಿಯಾದ ಸೇನಾನಿಯೊಬ್ಬನು ಇರಬೇಕೆಂದು ಅವನು ಭಾವಿಸಿದನು. "ಹೇಗಾದರೂ ಮಾಡಿ ಬಾರಿ-ಬಾರಿಗೂ ಚದುರಿಹೋಗುತ್ತಿರುವ ಸೈನ್ಯವನ್ನು ಒಟ್ಟುಗೂಡಿಸಲು ಮತ್ತು ಸೈನ್ಯವನ್ನು ಸುವ್ಯವಸ್ಥೆಗೊಳಿಸಲು ನಮ್ಮ ದೇವತೆಗಳಲ್ಲಿ ಶೂರನಾದ ಒಬ್ಬ ಸೇನಾನಿಯನ್ನು ಹುಡುಕಿಯೇ ತೀರಬೇಕು." ಹೀಗೆಂದು ನಿರ್ಧಾರಮಾಡಿ ಮಾನಸವೆಂಬ ಪರ್ವತಕ್ಕೆ ತೆರಳಿ ಆಲೋಚನೆಯಲ್ಲಿಯೇ ಮಗ್ನನಾಗಿ ಕುಳಿತನು. ಅದೇ ಸಮಯದಲ್ಲಿ ಆ ಪರ್ವತದ ತಪ್ಪಲಿನಲ್ಲಿ ಸ್ತ್ರೀಯೊಬ್ಬಳು ಮಾಡುತ್ತಿದ್ದ ಆರ್ತನಾದವು ಇಂದ್ರನಿಗೆ ಸ್ಪಷ್ಟವಾಗಿ ಕೇಳತೊಡಗಿತು. "ನನ್ನ ಬಳಿಗೆ ವೀರಪುರುಷನೊಬ್ಬನು ಒಡನೆಯೇ ಬಂದು ನನ್ನನ್ನು ಸಂರಕ್ಷಿಸಲಿ! ನನ್ನ ಪತಿಯಾರೆಂಬುದನ್ನು ಸೂಚಿಸಲಿ ಅಥವಾ ನನ್ನ ಸಂರಕ್ಷಕನೇ ನನ್ನ ಪತಿಯಾಗಲಿ!"

ಅಬಲೆಯ ಆ ಮಾತುಗಳನ್ನು ಕೇಳಿದೊಡನೆಯೇ ಇಂದ್ರನು–"ಹೆದರಬೇಡ! ನಾನಿಲ್ಲಿರುವಾಗ ನೀನು ಭಯಪಡುವ ಕಾರಣವಿಲ್ಲ"–ಎಂದು ಹೇಳಿ ಸ್ತ್ರೀಯ ಆರ್ತನಾದವು ಬಂದ ದಿಕ್ಕಿಗೆ ಧಾವಿಸಿದನು. ಅನತಿದೂರದಲ್ಲಿಯೇ ಕಿರೀಟವನ್ನು ಧರಿಸಿ, ಗದೆಯನ್ನು ಹಿಡಿದು, ಧಾತುಗಳಿಂದ ಕೂಡಿದ ಪರ್ವತದೋಪಾದಿಯಲ್ಲಿ ನಿಂತು, ಆರ್ತನಾದಮಾಡುತ್ತಿದ್ದ ಕನ್ಯೆಯನ್ನು ಕೈಯಲ್ಲಿ ಹಿಡಿದಿರುವ ಕೇಶಿ ಎಂಬ ರಾಕ್ಷಸನನ್ನು ಇಂದ್ರನು ಕಂಡು ಅವನನ್ನು ಕುರಿತು ಹೇಳಿದನು : "ಅನಾರ್ಯರು–ದಸ್ಯುಗಳು ಮಾಡುವ ಕುತ್ಸಿತವಾದ ಕಾರ್ಯದಲ್ಲಿ ಪ್ರವೃತ್ತನಾಗಿರುವವನೇ! ನೀನು ಯಾವ ಕಾರಣದಿಂದಾಗಿ ಈ ಕನ್ಯೆಯನ್ನು ಸೆಳೆದಾಡುತ್ತಿರುವೆ? ನಾನಾರೆಂಬುದನ್ನು ಬಲ್ಲೆಯಾ? ವಜ್ರಪಾಣಿ

ಯೆಂದು ಕರೆಯಲ್ಪಡುವ ಇಂದ್ರನೇ ನಾನೆಂಬುದನ್ನು ತಿಳಿ. ಇವಳ ಮೇಲೆ ನೀನೆಸಗುತ್ತಿರುವ ದುರಾಕ್ರಮಣವನ್ನು ಕೂಡಲೇ ನಿಲ್ಲಿಸು."

"ಇವಳ ಹವ್ಯಾಸವು ನಿನಗೆ ಬೇಡ, ಇಂದ್ರ! ಇವಳನ್ನು ನಾನು ಪಡೆದೇ ತೀರಬೇಕೆಂದು ನಿಶ್ಚಯಿಸಿಬಿಟ್ಟಿದ್ದೇನೆ. ಪ್ರಾಣದೊಡನೆ ನೀನು



ಅಮರಾವತಿಗೆ ತೆರಳುವುದು ಯುಕ್ತವೆನಿಸುತ್ತದೆ. ವೃಥಾ ಮಧ್ಯದಲ್ಲಿ ಪ್ರವೇಶಿಸಿ ಪ್ರಾಣತೊರೆಯಲು ಯತ್ನಿಸಬೇಡ."

ಹೀಗೆಂದು ಹೇಳಿ ಕೇಶಿಯು ತನ್ನ ಕೈಯಲ್ಲಿದ್ದ ಗದೆಯನ್ನು ಗರ-ಗರನೆ ತಿರುಗಿಸಿ ಇಂದ್ರನನ್ನು ಕೊಲ್ಲುವ ಸಲುವಾಗಿಯೇ ಅವನ ಮೇಲೆ ರಭಸದಿಂದ ಪ್ರಯೋಗಿಸಿದನು. ಮರುಕ್ಷಣದಲ್ಲಿಯೇ ಇಂದ್ರನು ತನ್ನ ವಜ್ರಾಯುಧದಿಂದ

ತನ್ನೆದುರಾಗಿ ರಭಸದಿಂದ ಬರುತ್ತಿದ್ದ ಆ ಗದೆಯನ್ನು ಎರಡಾಗಿ ತುಂಡರಿಸಿದನು. ಅದನ್ನು ನೋಡಿ ಕುಪಿತನಾದ ಕೇಶಿಯು ಪರ್ವತದ ಶಿಖರವನ್ನು ಇಂದ್ರನ ಮೇಲೆ ರಭಸದಿಂದ ಪ್ರಯೋಗಿಸಿದನು. ತನ್ನ ಮೇಲೆ ರಭಸದಿಂದ ಬೀಳುತ್ತಿದ್ದ ಪರ್ವತಶಿಖರವನ್ನು ನೋಡಿದ ಇಂದ್ರನು ವಜ್ರಾಯುಧದಿಂದ ಆ ಪರ್ವತಶಿಖರವನ್ನು ಪ್ರಹರಿಸಲಾಗಿ ಆ ಪರ್ವತಶಿಖರವು ಎರಡು ಭಾಗಗಳಾಗಿ ಒಡೆದುಹೋದುದಲ್ಲದೇ–ಅದರಲ್ಲಿ ಒಂದು ಭಾಗವು ರಭಸದಿಂದ ಹಿಂದಕ್ಕೆ ಹೋಗಿ ಕೇಶಿಯ ಮೇಲೆಯೇ ಬಿದ್ದಿತು. ಅದರಿಂದಾಗಿ ಕೇಶಿಗೆ ಬಲವಾದ ಪೆಟ್ಟು ತಗುಲಿತು. ಯಾತನೆಯನ್ನು ತಡೆದುಕೊಳ್ಳಲಾರದೇ ಕೇಶಿಯು ಕನ್ಯೆಯನ್ನು ಅಲ್ಲಿಯೇ ಬಿಟ್ಟು ಓಡಿದನು. ಈ ರೀತಿಯಲ್ಲಿ ರಾಕ್ಷಸನು ಹೊರಟುಹೋದನಂತರ ಇಂದ್ರನು ಕನ್ಯೆಯನ್ನು ಪ್ರಶ್ನಿಸಿದನು : "ಶುಭಾನನೇ! ನೀನು ಯಾರು? ಯಾರ ಮಗಳು? ನೀನಿಲ್ಲಿಗೆ ಬಂದುದರ ಕಾರಣವಾದರೂ ಏನು?"

೨೨೩ನೆಯ ಅಧ್ಯಾಯವು ಮುಗಿಯಿತು.

೨೨೪ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ದೇವಸೇನೆಯೊಡನೆ ಇಂದ್ರನು ಬ್ರಹ್ಮನಲ್ಲಿಗೆ ಹೋದುದು : ಬ್ರಹ್ಮರ್ಷಿಗಳ ಆಶ್ರಮದಲ್ಲಿ ಋಷಿಪತ್ನಿಯರನ್ನು ಕಂಡು ಅಗ್ನಿಯ ವ್ಯಾಮೋಹ : ವನಗಮನ

ಕನ್ಯೆಯು ಹೇಳಿದಳು :

"ಮಹಾನುಭಾವ! ನಾನು ಪ್ರಜಾಪತಿಬ್ರಹ್ಮನ ಮಗಳು ; ನನ್ನನ್ನು ದೇವಸೇನಾ–ಎಂದು ಕರೆಯುತ್ತಾರೆ. ನನ್ನ ಸೋದರಿಯು ದೈತ್ಯಸೇನಾ ಎಂಬುವಳು. ಅವಳನ್ನು ಕೇಶಿಯು ಈ ಹಿಂದೆಯೇ ಅಪಹರಿಸಿಕೊಂಡು ಹೊರಟುಹೋದನು. ನಾವಿಬ್ಬರೂ ಅಕ್ಕ-ತಂಗಿಯರು. ನಮ್ಮ ಸಖಿಯರೊಡನೆ ಈ ಮಾನಸಪರ್ವತಕ್ಕೆ ವಿಹಾರಾರ್ಥವಾಗಿ ನಮ್ಮ ತಂದೆಯಾದ ಪ್ರಜಾಪತಿಬ್ರಹ್ಮನ ಅಪ್ಪಣೆಯನ್ನು ಪಡೆದು ಬಂದುಹೋಗುವ ಪದ್ಧತಿಯು ಬಹಳ ದಿವಸಗಳಿಂದಲೂ ಇದೆ. ಮಹಾಸುರನಾದ ಈ ಕೇಶಿಯೂ ಸಹ ಈ ಪರ್ವತಕ್ಕೆ ಪದೇ-ಪದೇ ಬಂದು ತನ್ನ ಜೊತೆಯಲ್ಲಿ ಬರುವಂತೆ ನಮ್ಮಿಬ್ಬರನ್ನೂ ಪ್ರಾರ್ಥಿಸುತ್ತಿದ್ದನು. ಇವನ ಶರೀರಕಾಂತಿಯನ್ನೂ ಮತ್ತು ಇವನ ಅತುಲ

ಪರಾಕ್ರಮವನ್ನೂ ನೋಡಿದ ನನ್ನಕ್ಕ ದೈತ್ಯಸೇನೆಯು ಇವನ ಪ್ರಾರ್ಥನೆಗೆ ಮನಸೋತಳು. ನಾನು ಮಾತ್ರ ಅವನೊಡನೆ ಹೋಗಲು ಇಚ್ಛಿಸಲಿಲ್ಲ. ಕೇಶಿಯು ಒಡನೆಯೇ ನನ್ನಕ್ಕನನ್ನು ಅಪಹರಿಸಿಕೊಂಡು ಹೋಗಿಯೇಬಿಟ್ಟನು. ಅವನೊಡನೆ ಹೋಗಲು ಇಚ್ಛಿಸದಿದ್ದ ನನ್ನನ್ನು ಬಲಾತ್ಕಾರವಾಗಿಯಾದರೂ ಕರೆದೊಯ್ಯಲು ನಿಶ್ಚಯಿಸಿ ಪ್ರಯತ್ನಿಸುತ್ತಿದ್ದನು. ಆದರೆ ದೈವಯೋಗದಿಂದಾಗಿ ಸಮಯಕ್ಕೆ ಸರಿಯಾಗಿ ನೀನು ಇಲ್ಲಿಗೆ ಆಗಮಿಸಿ ನಿನ್ನ ಅಮಿತವಾದ ಪರಾಕ್ರಮದಿಂದ ನನ್ನನ್ನಿಂದು ಸಂರಕ್ಷಿಸಿರುವೆ, ದೇವೇಂದ್ರ! ಈಗ ನೀನೇ ನನಗೆ ದುರ್ಜಯನಾದ ಪತಿಯೊಬ್ಬನನ್ನು ಆರಿಸಿಕೊಡಬೇಕು."

"ಮಹಾಭಾಗೇ! ನೀನು ನನ್ನ ತಂಗಿಯೇ ಆಗಬೇಕು. ನನ್ನ ತಾಯಿಯೂ ದಕ್ಷನ ಪುತ್ರಿಯೇ. ದಾಕ್ಷಾಯಣಿಯ ತಂಗಿಯ ಮಗಳೇ ನೀನಾಗಿರುವೆ. ನೀನೂ ಸಾಮಾನ್ಯಳಲ್ಲ. ದುರ್ಜಯನಾದ ಪತಿಯನ್ನು ಪಡೆಯಬೇಕಾದರೆ ನಿನಗಿರುವ ಶಕ್ತಿ-ಸಾಮರ್ಥ್ಯಗಳ ವಿಷಯವಾಗಿ ನಿನ್ನಿಂದಲೇ ಕೇಳಿ ತಿಳಿಯಬೇಕೆಂದಿರುವೆನು."

"ಮಹಾಬಾಹುವಾದ ಇಂದ್ರನೇ! ನಾನು ಅಬಲೆಯಾದ ಹೆಂಗಸು. ಆದರೂ ಸಹ ನಾನು ಮಹಾಪರಾಕ್ರಮಿಯಾದವನನ್ನೇ ಪತಿಯನ್ನಾಗಿ ವರಿಸ ಬೇಕೆಂದಿರುತ್ತೇನೆ. ನನ್ನ ಪತಿಯಾಗುವವನಿಗೆ ನನ್ನ ತಂದೆಯ ವರವೊಂದು ಅಯಾಚಿತವಾಗಿ ಲಭ್ಯವಾಗುತ್ತದೆ. ಆ ವರದ ಬಲದಿಂದ ನನಗೆ ಪತಿಯಾಗು ವವನು ದೇವಾಸುರರಿಂದಲೂ ನಮಸ್ಕೃತನಾಗುತ್ತಾನೆ."

"ಹಾಗಾದರೆ ದೇವಿ! ಎಂತಹ ಮಹಾಪರಾಕ್ರಮಿಯನ್ನು ನೀನು ವರಿಸಬೇಕೆಂದಿರುವೆ? ಅವನಿಗೆ ಎಂತಹ ಪರಾಕ್ರಮವಿರಬೇಕು? ಅವನ ಗುಣ-ಲಕ್ಷಣಗಳು ಹೇಗಿರಬೇಕು? ಇವುಗಳನ್ನು ನಿನ್ನಿಂದಲೇ ಕೇಳಿ ತಿಳಿಯ ಬೇಕೆಂಬ ಆಶಯವಿದೆ."

"ದೇವ-ದಾನವ-ಯಕ್ಷ-ಕಿನ್ನರ-ಉರಗ-ರಾಕ್ಷಸ-ದೈತ್ಯರೆಲ್ಲರನ್ನೂ ಜಯಿಸುವ ಸಾಮರ್ಥ್ಯವುಳ್ಳವನೂ, ಮಹಾವೀರ್ಯನೂ, ಮಹಾಬಲನೂ ಯಾವನಿರುವನೋ ಅವನೇ ನನ್ನ ಪತಿಯಾಗಲು ಯೋಗ್ಯನಾಗಿರುತ್ತಾನೆ. ನಿನ್ನನ್ನೂ ಸಹ ಜಯಿಸುವವನಾಗಬೇಕು. (ಅರ್ಥಾತ್ ನಿನಗಿಂತಲೂ ಪರಾಕ್ರಮಿಯಾಗಿರಬೇಕು.) ಮೇಲಾಗಿ ಬ್ರಹ್ಮನಿಷ್ಠನಾಗಿರಬೇಕು. ನಮ್ಮ

ಕುಲದ ಕೀರ್ತಿಯನ್ನು ಹೆಚ್ಚಿಸುವವನಾಗಬೇಕು. ಇಂತಹವನು ಮಾತ್ರವೇ ನನ್ನ ಪತಿಯಾಗಬಲ್ಲನು."

ಧರ್ಮಜ! ದೇವಸೇನೆಯ ಮಾತುಗಳನ್ನು ಕೇಳಿದೊಡನೆಯೇ ಇಂದ್ರನು ಖಿನ್ನಮನಸ್ಕನಾಗಿ ತನ್ನಲ್ಲಿಯೇ ತಾನು ಹೀಗೆಂದು ಯೋಚಿಸಿದನು : "ಇವಳು ಹೇಳುವ ರೀತಿಯಲ್ಲಿ ಇವಳಿಗೆ ಪತಿಯು ಖಂಡಿತವಾಗಿಯೂ ಸಿಕ್ಕಲಾರನು. ಅಂತಹ ಪರಾಕ್ರಮಿಯೊಬ್ಬನಿರುವುದು ನನಗಂತೂ ತಿಳಿದಿಲ್ಲ."

ಯುಧಿಷ್ಠಿರ! ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಇಂದ್ರನು ಹೀಗೆಯೇ ಯೋಚಿಸುತ್ತಾ ಕುಳಿತಿರಲಾಗಿ, ಉದಯಾಚಲ ದಿಂದ ಸೂರ್ಯನು ಉದಯಿಸುತ್ತಿರುವುದನ್ನೂ ಮತ್ತು ಚಂದ್ರನು ಸೂರ್ಯ ನಲ್ಲಿ ಪ್ರವೇಶಿಸುತ್ತಿರುವುದನ್ನೂ ಕಂಡನು. ಅಂದು ಅಮಾವಾಸ್ಯೆಯಾಗಿತ್ತು. ರೌದ್ರಮುಹೂರ್ತದಲ್ಲಿ ಆ ಉದಯಪರ್ವತದ ಮೇಲೆ ನಿಂತು ದೇವಾಸುರರು ಘೋರವಾದ ಯುದ್ಧದಲ್ಲಿ ತೊಡಗಿರುವುದನ್ನೂ ಸಹ ಇಂದ್ರನು ನೋಡಿ ದನು. ಪೂರ್ವಸಂಧ್ಯೆಯು ಕೆಂಪಾದ ಮೋಡಗಳಿಂದ ಆವೃತವಾಗಿದ್ದಿತು. ವರುಣನ ನಿವಾಸಸ್ಥಾನವೂ ಸಹ (ಸಮುದ್ರ) ಕೆಂಪಾಗಿದ್ದುದನ್ನು ಇಂದ್ರನು ನೋಡಿದನು. ಭೃಗ್ವಂಗಿರಸಾದಿ ಮಹರ್ಷಿಗಳಿಂದ ಕ್ರತುಗಳಲ್ಲಿ ಮಂತ್ರ ಪೂರ್ವಕವಾಗಿ ಹೋಮಮಾಡಲ್ಪಟ್ಟ ಹವ್ಯವನ್ನು ಹೊತ್ತು ಯಜ್ಞೇಶ್ವರನು ಸೂರ್ಯಮಂಡಲವನ್ನು ಪ್ರವೇಶಿಸುತ್ತಿದ್ದುದನ್ನೂ ಇಂದ್ರನು ಕಂಡನು.

ಇಪ್ಪತ್ತುನಾಲ್ಕು ಪರ್ವಗಳೂ ಸಹ ಆ ಸಮಯದಲ್ಲಿ ಸೂರ್ಯನನ್ನು ಸೇವಿಸುತ್ತಿದ್ದುವು. ರೌದ್ರನಾದ ಸೋಮನೂ ಸಹ ಅದೇ ಸಂದರ್ಭದಲ್ಲಿದ್ದು ದನ್ನು ಶಕ್ರನು ಕಂಡನು. ಶಶಿ-ಸೂರ್ಯರಿಬ್ಬರೂ ಒಂದೆಡೆಯಲ್ಲಿ (ಒಂದೇ ರಾಶಿಯಲ್ಲಿ) ಸೇರಿದುದು ಅದ್ಭುತದರ್ಶನವಾಗಿದ್ದಿತು. ಅಂತಹ ಬಹು ಭಯಂಕರವಾದ ಸಮಾವೇಶವನ್ನು ಕಂಡು ಇಂದ್ರನು ತನ್ನಲ್ಲಿಯೇ ತಾನು ಯೋಚಿಸತೊಡಗಿದನು : "ಸೂರ್ಯ-ಚಂದ್ರರ ಮಂಡಲಗಳಲ್ಲಿ ಪರಿವೇಷ ವುಂಟಾಗಿದೆ. ಇದರ ಫಲವಾಗಿ ಈ ರಾತ್ರಿಯ ಕೊನೆಯಲ್ಲಿಯೇ ಮಹಾ ಯುದ್ಧದ ಸಂಭವವುಂಟೆಂದು ಹೇಳುತ್ತಾರೆ. ಈ ಸಿಂಧುನದಿಯೂ ಸಹ ಹಿಮ್ಮುಖವಾಗಿ ರಕ್ತವರ್ಣವಾಗಿ ಹರಿಯುತ್ತದೆ. ಹೆಣ್ಣು ಗುಳ್ಳೇನರಿಗಳೂ ಬೆಂಕಿಯನ್ನು ಕಾರುತ್ತಾ ಸೂರ್ಯನಿಗೆ ಅಭಿಮುಖವಾಗಿ ನಿಂತು ಕಿರುಚಿಕೊಳ್ಳು

ತ್ತಿವೆ. ಸೂರ್ಯ-ಚಂದ್ರರ ಸಮಾಗಮವೂ ಸಹ ಬಹುಭಯಾನಕವಾದುದು. ಸೋಮ-ಸೂರ್ಯಾಗ್ನಿಗಳ ಸಮಾಗಮವು ನಿಶ್ಚಯವಾಗಿಯೂ ಬಹಳ ಪರಮಾದ್ಭುತವಾದುದು. ಈ ಸಮಯದಲ್ಲಿ ಚಂದ್ರನೇನಾದರೂ ಒಬ್ಬ ಮಗನನ್ನು ಪಡೆದರೆ ಅವನು ನಿಶ್ಚಯವಾಗಿಯೂ ಇವಳಿಗೆ ಪತಿಯಾಗಲು ಸಮರ್ಥನಾಗುತ್ತಾನೆ.



ಸೋಮನಂತೆಯೇ ಅಗ್ನಿಯೂ ಸೂರ್ಯನೊಡನೆ ಸೇರಿಹೋಗಿದ್ದಾನೆ. ಮೇಲಾಗಿ ಇವನೂ ಒಬ್ಬ ದೇವತೆ. ಇವನಾದರೂ ಈ ಸಮಯದಲ್ಲಿ ಒಬ್ಬ ಮಗನನ್ನು ಪಡೆದರೆ ಅವನಾದರೂ ಇವಳ ಪತಿಯಾಗಬಹುದು.” ಈ ವಿಷಯವನ್ನೇ ಮನಸ್ಸಿನಲ್ಲಿ ಆಲೋಚಿಸುತ್ತಾ ಇಂದ್ರನು ದೇವಸೇನೆಯೊಡನೆ

ಬ್ರಹ್ಮಲೋಕಕ್ಕೆ ತೆರಳಿದನು. (ಇಲ್ಲಿ ದೇವಸೇನೆಯೆಂದರೆ ದೇವತೆಗಳ ಸೈನ್ಯದ ಅಧಿದೇವತೆಯೆಂದು ಒಬ್ಬರು ವ್ಯಾಖ್ಯಾನಮಾಡಿರುತ್ತಾರೆ. ಸಂದರ್ಭಾನುಸಾರವಾಗಿ ಈ ವ್ಯಾಖ್ಯಾನವೂ ಸಾಧುವಾಗಿ ಕಾಣುತ್ತದೆ.) ದೇವಸೇನೆಯೊಡನೆ ಬ್ರಹ್ಮನ ಬಳಿಗೆ ಹೋದ ಇಂದ್ರನು ಚತುರ್ಮುಖನಿಗೆ ನಮಸ್ಕರಿಸಿ ಹೇಳಿದನು :

"ಅಸ್ಯಾಃ ದೇವ್ಯಾಃ ತ್ವಂ ಸಾಧುಶೂರಂ ಪತಿಂ ದಿಶ"

"ಈ ದೇವಿಗೆ (ದೇವಸೇನೆಗೆ) ನೀನು ಶೂರನಾದ ಸಾಧುಸ್ವಭಾವದ ಪತಿಯನ್ನು ದಯಪಾಲಿಸುವವನಾಗು." ಇಂದ್ರನ ಪ್ರಾರ್ಥನೆಗೆ ಉತ್ತರವಾಗಿ ಬ್ರಹ್ಮನು ಹೇಳಿದನು : "ದಾನವಸೂದನನೇ! ನೀನು ಪ್ರಾರ್ಥಿಸಿದ ವಿಷಯವು ನನ್ನಿಂದ ಈ ಮೊದಲೇ ಚಿಂತಿತವಾಗಿದೆ. ನಾನು ಯೋಚಿಸಿರುವ ಗರ್ಭವು (ಶಿಶುವು) ಬಲಶಾಲಿಯಾಗಿಯೂ ಅಮಿತವಾದ ವಿಕ್ರಮವುಳ್ಳದ್ದಾಗಿಯೂ ಇರುತ್ತದೆ. ಆ ಶಿಶುವೇ ಮುಂದೆ ಈ ದೇವಸೇನೆಗೆ ಪತಿಯಾಗುವನಲ್ಲದೇ ದೇವಸೈನ್ಯಕ್ಕೆ ನಿನ್ನೊಡನೆ ನಾಯಕನೂ ಆಗುವನು."

ಹೀಗೆಂದು ಹೇಳಿದ ಬ್ರಹ್ಮನಿಗೆ ದೇವೇಂದ್ರನು ದೇವಸೇನೆಯೊಡನೆ ಪುನಃ ನಮಸ್ಕರಿಸಿ, ಬ್ರಹ್ಮನ ಅಪ್ಪಣೆಯನ್ನು ಪಡೆದು ಬ್ರಾಹ್ಮಣಶ್ರೇಷ್ಠರಾದ ವಸಿಷ್ಠಾದಿ ಬ್ರಹ್ಮರ್ಷಿಗಳು ಯಾಗಮಾಡುತ್ತಿದ್ದ ಸ್ಥಳಕ್ಕೆ ಹೋದನು. ಇಂದ್ರನನ್ನು ಅನುಸರಿಸಿ ಇತರ ದೇವತೆಗಳೂ ಸಹ ಸೋಮಪಾನಮಾಡಲು ಮತ್ತು ತಮ್ಮ ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಲು ಮಹರ್ಷಿಗಳ ಯಜ್ಞಶಾಲೆಗೆ ಆಗಮಿಸಿದರು. ಯಥಾವಿಧಿಯಾಗಿ ಪೂರ್ವಾಂಗವಿಧಿಯನ್ನು ಮುಗಿಸಿದವರಾಗಿ ಪ್ರಜ್ವಲಿಸುತ್ತಿದ್ದ ಯಜ್ಞೇಶ್ವರನಲ್ಲಿ ದೇವತೆಗಳನ್ನುದ್ದೇಶಿಸಿ ಋತ್ವಿಜರು ಹೋಮಮಾಡಿದರು. ಹವ್ಯವಾಹನಾದ, ಸೂರ್ಯಮಂಡಲದಲ್ಲಿದ್ದ ಅದ್ಭುತಾಗ್ನಿಯನ್ನು ಋತ್ವಿಜರು ಮಂತ್ರಪೂರ್ವಕವಾಗಿ ಆಹ್ವಾನಿಸಿದರು.

ವಿಧಿವತ್ತಾಗಿ ಋತ್ವಿಜರಿಂದ ಆಹ್ವಾನಿತನಾದ ಅದ್ಭುತಾಗ್ನಿಯು ಯಾವ ಮಾತನ್ನೂ ಆಡದೇ ಸೂರ್ಯಮಂಡಲದಿಂದ ಹೊರಬಿದ್ದು ಯಜ್ಞಭೂಮಿಗೆ ಆಗಮಿಸಿದನು. ಋತ್ವಿಜರಿಂದ ಮೊದಲು ಪ್ರತಿಷ್ಠಿತನಾಗಿದ್ದ ಆಹವನೀಯಾಗ್ನಿ

ಯೊಡನೆ ಅದ್ಭುತನು ಸೇರಿಕೊಂಡು, ದೇವತೆಗಳನ್ನುದ್ದೇಶಿಸಿ ಹೋಮ ಮಾಡಿದ ಹವ್ಯಗಳನ್ನು ಸ್ವೀಕರಿಸಿ, ಆ ಹವ್ಯಗಳನ್ನು ಆಯಾಯಾ ದೇವತೆಗಳಿಗೆ ಯಥಾನುಕ್ರಮವಾಗಿ ತಲುಪಿಸಿದನು. ದೇವತೆಗಳಿಗೆ ಹವ್ಯಗಳನ್ನು ತಲುಪಿಸಿ ಹಿಂದಿರುಗುವಾಗ ಅದ್ಭುತನು, ಋಷಿಪತ್ನಿಯರು ತಮ್ಮ ತಮ್ಮ ಪೀಠಗಳಲ್ಲಿ ಸುಖವಾಗಿ ಕುಳಿತಿರುವುದನ್ನೂ, ಹಾಸಿಗೆಗಳಲ್ಲಿ ಮಲಗಿರುವುದನ್ನೂ ನೋಡಿದನು. ಆ ಋಷಿಪತ್ನಿಯರ ಶರೀರಕಾಂತಿಯು ಸ್ವರ್ಣಮಯವಾದ ವೇದಿಕೆಯ ಪ್ರಭೆಯಂತೆ ಪ್ರಕಾಶಮಾನವಾಗಿದ್ದಿತು. ಅವರು ಚಂದ್ರನ ಬೆಳದಿಂಗಳಿನಂತೆ ನಿರ್ಮಲವಾದ ಮುಖಭಾವದಿಂದ ಕೂಡಿದ್ದರು. ಅವರ ಮುಖದ ತೇಜಸ್ಸು ಯಜ್ಞೇಶ್ವರನ ತೇಜಸ್ಸಿಗೆ ಸಮಾನವಾಗಿದ್ದಿತು. ಅವರು ಗಗನದಲ್ಲಿರುವ ಅದ್ಭುತವಾದ ತಾರೆಗಳಂತೆ ಪರಿಶೋಭಿಸುತ್ತಿದ್ದರು.

ಕಡುಚೆಲುವೆಯರಾದ ಬ್ರಾಹ್ಮಣಶ್ರೇಷ್ಠರ ಭಾರ್ಯೆಯರನ್ನು ನೋಡಿದೊಡನೆಯೇ ಅದ್ಭುತಾಗ್ನಿಯ ಮನಸ್ಸು ಕಾಮಾಗ್ನಿಯಿಂದ ಪೀಡಿತವಾಯಿತು. ಅದ್ಭುತನು ತನ್ನ ಮನಸ್ಸನ್ನು ಬಿಗಿಹಿಡಿದು ತನ್ನಲ್ಲಿಯೇ ಯೋಚಿಸತೊಡಗಿದನು : "ಈ ಬ್ರಾಹ್ಮಣಸ್ತ್ರೀಯರನ್ನು ನೋಡಿ ನನ್ನ ಮನಸ್ಸು ಕ್ಷುಭಿತವಾಗಿರುವುದು ಖಂಡಿತವಾಗಿಯೂ ನ್ಯಾಯವಲ್ಲ. ಇವರೆಲ್ಲರೂ ಸಾಧ್ವಿಯರು ; ಬ್ರಾಹ್ಮಣರ ಪತ್ನಿಯರು ; ಕಾಮಿಸಲು ಯೋಗ್ಯರಲ್ಲದವರು. ಆದರೆ ನನ್ನ ಮನಸ್ಸು ಮಾತ್ರ ಇವರ ಸೌಂದರ್ಯವನ್ನು ನೋಡಿ ಆಕರ್ಷಿತವಾಗಿಬಿಟ್ಟಿದೆ. ಕಾರಣವಿಲ್ಲದೇ ನಾನಿವರನ್ನು ನೋಡಲಾರೆನು. ಮುಟ್ಟಲಾರೆನು. ಆದರೆ ನನ್ನ ಮನಸ್ಸು ಮಾತ್ರ ಇವರನ್ನು ನೋಡುತ್ತಲೇ ಇರಬೇಕೆಂದು ತವಕಿಸುತ್ತಿದೆ. ನ್ಯಾಯವಲ್ಲದ ಈ ಆಸೆಯಿಂದ ನನ್ನ ಮನಸ್ಸನ್ನು ಹಿಂದಿರುಗಿಸಲೂ ನಾನು ಅಸಮರ್ಥನಾಗಿಬಿಟ್ಟಿದ್ದೇನೆ. ಆದುದರಿಂದ ಇವರ ಸ್ಪರ್ಶಸುಖ ಮತ್ತು ದರ್ಶನಸೌಲಭ್ಯಗಳು ನನಗೆ ಅನುದಿನವೂ ಸಿಕ್ಕಬೇಕಾದರೆ ನಾನು ಗಾರ್ಹಪತ್ಯಾಗ್ನಿಯಲ್ಲಿ ಸೇರಿಕೊಳ್ಳಬೇಕು. ಆಗ ಮಾತ್ರ ನಾನು ನನ್ನ ಮನಸ್ಸಿನ ಆಶಯವನ್ನು ಪೂರ್ಣಮಾಡಿಕೊಳ್ಳಬಹುದಾಗಿದೆ" ಹೀಗೆಂದು ಯೋಚಿಸಿದ ಅದ್ಭುತಾಗ್ನಿಯು ಗಾರ್ಹಪತ್ಯಾಗ್ನಿಯೊಡನೆ ಸೇರಿಕೊಂಡನು. ಗಾರ್ಹಪತ್ಯಾಗ್ನಿಯಲ್ಲಿ ಅನುದಿನವೂ ಸಾಯಂಪ್ರಾತರೌಪಾಸನಗಳನ್ನೂ,

ವೈಶ್ವದೇವಾಗ್ನಿಹೋತ್ರಗಳನ್ನೂ ಬ್ರಾಹ್ಮಣರು ತಮ್ಮ ಪತ್ನಿಯರೊಂದಿಗೆ ಕುಳಿತು ಮಾಡುತ್ತಿದ್ದರು. ಅದ್ಭುತಾಗ್ನಿಯು ತನ್ನ ಯೋಜನೆಯಂತೆ ಗಾರ್ಹಪತ್ಯಾಗ್ನಿಯಾಗಿ ಬ್ರಾಹ್ಮಣಪತ್ನಿಯರನ್ನು ಅರಳಿದ ಕಣ್ಣುಗಳಿಂದ ನೋಡುತ್ತಲೂ, ಜ್ವಾಲೆಗಳ ವ್ಯಾಜದಿಂದ ಅವರನ್ನು ಸಂಸ್ಪರ್ಶಿಸುತ್ತಲೂ ತನ್ನ ಮನಸ್ಸಿನ ಆಶಯವನ್ನು ಪೂರ್ಣಮಾಡಿಕೊಳ್ಳುತ್ತಿದ್ದನು. ವಸಿಷ್ಠಾದಿ ಸಪ್ತರ್ಷಿಗಳ ಭಾರ್ಯೆಯರ ಅನುಪಮಸೌಂದರ್ಯವನ್ನು ಅನುದಿನವೂ ನೋಡುತ್ತಾ ಅವರನ್ನು ಬಾರಿ-ಬಾರಿಗೂ ಸಂಸ್ಪರ್ಶಿಸುತ್ತಾ ಬಹಳ ಕಾಲದವರೆಗೆ ಅದ್ಭುತಾಗ್ನಿಯು ಗಾರ್ಹಪತ್ಯಾಗ್ನಿಯಲ್ಲಿಯೇ ಇದ್ದುಬಿಟ್ಟನು. ತನ್ನ ಮನಸ್ಸನ್ನು ಸಂಪೂರ್ಣವಾಗಿ ಅವರಲ್ಲಿಯೇ ನೆಟ್ಟುಬಿಟ್ಟನು. ಆದರೆ ಕೇವಲ ದರ್ಶನ-ಸ್ಪರ್ಶನಗಳಿಂದ ಕಾಮೇಚ್ಛೆಯು ಪೂರ್ಣವಾಗಲಿಲ್ಲ.

ಅವನಿಗೆ ಬ್ರಾಹ್ಮಣಸ್ತ್ರೀಯರ ಸ್ಪರ್ಶ, ದರ್ಶನಸುಖಗಳು ಮಾತ್ರವೇ ಲಭ್ಯವಾಗುತ್ತಿದ್ದುವು. ಅವನು ತನ್ನ ಮನಸ್ಸೆಲ್ಲವನ್ನೂ ಅವರಲ್ಲಿಯೇ ಇಟ್ಟಿದ್ದರೂ, ತನ್ನ ಹೃದಯವನ್ನು ಅವರಿಗೆ ಸಮರ್ಪಿಸಿಬಿಟ್ಟಿದ್ದರೂ ಸಹ ಅವರು ತಮ್ಮ-ತಮ್ಮ ಕರ್ತವ್ಯಗಳಲ್ಲಿ ನಿರತರಾಗಿರುತ್ತಿದ್ದರೇ ಹೊರತು ಅದ್ಭುತಾಗ್ನಿಯನ್ನು ಕಾಮಿಸಲಿಲ್ಲ. ಆ ಸ್ಥಿತಿಯಲ್ಲಿ ಹೆಚ್ಚು ಕಾಲ ಅಲ್ಲಿರಲು ಅದ್ಭುತನಿಗೆ ಅಸಾಧ್ಯವಾಗಿ ತೋರಿತು. ಹೃದಯವೇದನೆಯನ್ನು ತಡೆದುಕೊಳ್ಳಲು ಅದ್ಭುತನು ಸಮರ್ಥನಾಗಲಿಲ್ಲ. ಈ ಸ್ಥಿತಿಯಲ್ಲಿರುವುದಕ್ಕಿಂತ ವಿನಾಶಹೊಂದುವುದೇ ಲೇಸೆಂದು ಅದ್ಭುತನಿಗನಿಸಿತು. ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಾಗಿ ನಿಶ್ಚಯಿಸಿ ಅದ್ಭುತಾಗ್ನಿಯು ಗಾರ್ಹಪತ್ಯಾಗ್ನಿಯಿಂದ ಹೊರಬಂದು ಕಾಡಿಗೆ ಹೊರಟುಹೋದನು.

ಧರ್ಮಜ! ಈ ಮೊದಲು, ದಕ್ಷನ ಮಗಳಾದ ಸ್ವಾಹಾದೇವಿಯು ಅದ್ಭುತಾಗ್ನಿಯನ್ನು ಕಂಡು ಮೋಹಿತಳಾಗಿದ್ದಳು. ಹೇಗಾದರೂ ಮಾಡಿ ಅವನನ್ನು ತನ್ನ ವಶಮಾಡಿಕೊಳ್ಳಬೇಕೆಂದು ಸತತವಾಗಿ ಪ್ರಯತ್ನಿಸುತ್ತಿದ್ದಳು. ಅದ್ಭುತನು ಮನಸೋತ ಸಂದರ್ಭಗಳಲ್ಲಿ ತಾನು ಹೋಗಿ ಅವನೊಡನೆ ಪ್ರಣಯಸುಖವನ್ನು ಅನುಭವಿಸಬೇಕೆಂಬ ಆಶಯವು ಸ್ವಾಹಾದೇವಿಗೆ ಬಹಳ ದಿನಗಳಿಂದಲೂ ಇದ್ದಿತು. ಆದರೆ ಅವನ ಮನಸ್ಸೆಲ್ಲವೂ ಋಷಿಪತ್ನಿಯರ

ಸೌಂದರ್ಯದಲ್ಲಿ ಲೀನವಾಗಿದ್ದಿತೇ ಹೊರತು ಅವನಿಗೆ ಬೇರಾವ ಕನ್ಯೆಯರ ಸಹವಾಸವೂ ಬೇಕಾಗಿರಲಿಲ್ಲ. ಸ್ವಾಹಾದೇವಿಯು ಎಷ್ಟೇ ಪ್ರಯತ್ನಿಸಿದರೂ ಅವನು ಅಪ್ರಮತ್ತನಾಗಿದ್ದುದರಿಂದ ಅವಳ ಪ್ರಯತ್ನಗಳೆಲ್ಲವೂ ವಿಫಲವಾಗಿದ್ದುವು. ಆ ಸಮಯದಲ್ಲಿ ಅದ್ಭುತನು ಕಾಮಾಗ್ನಿಯಿಂದಲೇ ಪೀಡಿತನಾಗಿ ಪ್ರಾಣತೊರೆಯಲು ಅರಣ್ಯಕ್ಕೆ ಹೋದನೆಂಬ ವಿಷಯವನ್ನು ತಿಳಿದ ಸ್ವಾಹಾದೇವಿಯು ತನ್ನೊಳಗೆ ತಾನೇ ಹೀಗೆಂದು ಯೋಚಿಸಿದಳು : "ನಾನೂ ಸಹ ಅನೇಕ ದಿನಗಳಿಂದ ಕಾಮಪೀಡಿತಳಾಗಿದ್ದೇನೆ. ಆದರೂ ಈ ಅದ್ಭುತಾಗ್ನಿಯ ಮನವೊಲಿಸಲು ಇದುವರೆಗೂ ಸಾಧ್ಯವಾಗಿಲ್ಲ. ಈಗವನು ಅರಣ್ಯಕ್ಕೆ ಹೊರಟು ಹೋಗಿರುತ್ತಾನೆ. ಅವನ ಮನವೊಲಿಸಿಕೊಳ್ಳಲು ಈಗ ನನಗೆ ಸದವಕಾಶವು ಸಿಕ್ಕಿದೆ. ನಾನೂ ಸಹ ಈಗಲೇ ಅರಣ್ಯಕ್ಕೆ ಹೋಗಿ ಋಷಿಪತ್ನಿಯರ ವೇಷ ಧರಿಸಿ ಅವನನ್ನು ಕಾಮಿಸಲು ಹೋಗುವೆನು. ಋಷಿಪತ್ನಿಯರ ಸೌಂದರ್ಯದಲ್ಲಿಯೇ ಲೀನಮನಸ್ಕನಾಗಿರುವ ಅಗ್ನಿಯು ಅವರ ವೇಷ ಧರಿಸಿದ ನನ್ನೊಡನೆ ಪ್ರಣಯಸುಖವನ್ನು ಆಶಿಸಿಯೇ ತೀರುವನು. ಇದರಿಂದ ನನ್ನ ಮನಸ್ಸಿನ ಆಶಯವೂ ನೆರವೇರುವುದು"–ಹೀಗೆಂದು ನಿಶ್ಚಯಿಸಿದವಳಾಗಿ ಅದ್ಭುತಾಗ್ನಿಯನ್ನು ಹಿಂಬಾಲಿಸಿ ಸ್ವಾಹಾದೇವಿಯೂ ಅರಣ್ಯಕ್ಕೆ ಹೋದಳು."

೨೨೪ನೆಯ ಅಧ್ಯಾಯವು ಮುಗಿಯಿತು.

೨೨೫ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಸ್ವಾಹಾದೇವಿಯು ಋಷಿಪತ್ನಿಯರ ರೂಪಗಳನ್ನು ಧರಿಸಿ ಅಗ್ನಿಯೊಡನೆ ಸಮಾಗಮಮಾಡಿದುದು : ಸ್ಕಂದನ ಉತ್ಪತ್ತಿ : ಹುಟ್ಟಿದೊಡನೆಯೇ ಸ್ಕಂದನು ಕ್ರೌಂಚಾದಿ ಪರ್ವತಗಳನ್ನು ಭೇದಿಸಿದುದು

"ಯುಧಿಷ್ಠಿರ! ಸಪ್ತರ್ಷಿಗಳಲ್ಲೊಬ್ಬರಾದ ಅಂಗಿರಸಮಹರ್ಷಿಯ ಪತ್ನಿಯ ಹೆಸರು 'ಶಿವಾ' ಎಂದು. ಅವಳು ಬಹಳ ಸುಂದರಿಯೂ ಆಗಿದ್ದಳಲ್ಲದೇ, ಸುಚರಿತ್ರಳೂ–ಪತಿವ್ರತೆಯೂ ಆಗಿದ್ದಳು. ಮೊಟ್ಟಮೊದಲು

ಸ್ವಾಹಾದೇವಿಯು ಶಿವೆಯ ರೂಪವನ್ನೇ ಧರಿಸಿದವಳಾಗಿ ಅದ್ಭುತಾಗ್ನಿಯ ಬಳಿಗೆ ಹೋಗಿ ಅವನನ್ನು ಕುರಿತು ಹೀಗೆಂದು ಹೇಳಿದಳು :

“ಅಗ್ನಿದೇವ! ನಾನು ಕಾಮತಪ್ತಳಾಗಿದ್ದೇನೆ. ನಿನ್ನನ್ನು ಪಡೆಯಬೇಕೆನ್ನುವ ಆಶಯವು ಬಹಳ ದಿನಗಳಿಂದಲೂ ಇದ್ದು ಕಾಲಾವಕಾಶವು ಸಿಕ್ಕದೇ ಬಹುವಾಗಿ ಪರಿತಪಿಸುತ್ತಿದ್ದೆನು. ನೀನು ಅರಣ್ಯಕ್ಕೆ ಬಂದಿರುವ ಸುದ್ದಿಯನ್ನು ತಿಳಿದು ನಿನ್ನೊಡನೆ ಪ್ರಣಯಸುಖವನ್ನು ಅನುಭವಿಸುವ ಆಶಯದಿಂದ ಇಲ್ಲಿಗೆ ಬಂದಿರುವೆನು. ಕಾಮಾಭಿಭೂತಳಾಗಿರುವ ನನ್ನನ್ನು ಪರಿಗ್ರಹಿಸುವುದು ನಿನಗೆ ಉಚಿತವಾಗಿದೆ. ಒಂದು ವೇಳೆ ಯಾವುದಾದರೂ ಕಾರಣದಿಂದ ನನ್ನನ್ನು ಪರಿಗ್ರಹಿಸದಿದ್ದರೆ ಖಂಡಿತವಾಗಿಯೂ ನಾನು ಪ್ರಾಣ ತೊರೆಯುವೆನು. ನಿನಗೆ ತಿಳಿದಿರುವಂತೆ ನಾನು ಅಂಗಿರಸರ ಭಾರ್ಯೆ. ಶಿವಾ ಎಂದು ನನ್ನ ಹೆಸರು. ನಾನಿಲ್ಲಿಗೆ ಇತರ ಋಷಿಪತ್ನಿಯರ ಸಲಹೆಯ ಮೇರೆಗೆ ಆಗಮಿಸಿರುವೆನು. ನಾವೆಲ್ಲರೂ ಸೇರಿ ಪರ್ಯಾಲೋಚಿಸಿದ ನಂತರವೇ ಶಿಷ್ಟರಾದ ಅವರು ಮೊದಲು ನನ್ನನ್ನು ನಿನ್ನ ಬಳಿಗೆ ಕಳುಹಿಸಿಕೊಟ್ಟಿರುತ್ತಾರೆ.”

ಶಿವೆಯ ರೂಪವನ್ನು ಧರಿಸಿದ ಸ್ವಾಹಾದೇವಿಯ ಮಾತುಗಳನ್ನು ಕೇಳಿ ಚಕಿತನಾದ ಅದ್ಭುತನು ಅವಳನ್ನು ಪ್ರಶ್ನಿಸಿದನು :

“ನೀನು ಕಾಮಾಭಿಭೂತಳಾಗಿರುವುದು ಸರಿ. ನಾನು ಕಾಮಾಭಿಭೂತನಾಗಿರುವ ವಿಷಯವು ನಿನಗೆ ಹೇಗೆ ತಿಳಿಯಿತು? ಮತ್ತು ಉಳಿದ ಋಷಿಗಳ ಪ್ರಿಯತಮೆಯರಿಗೂ ಈ ವಿಷಯವು ತಿಳಿದುದಾದರೂ ಹೇಗೆ?”

“ಅಗ್ನಿದೇವ! ನೀನು ನಮ್ಮೆಲ್ಲರಿಗೂ ಬಹಳ ಪ್ರಿಯನಾಗಿದ್ದೆ. ನಾವು ಏಳು ಮಂದಿಯೂ ನಿನ್ನನ್ನು ಏಕರೂಪವಾಗಿ ಪ್ರೀತಿಸುತ್ತಿದ್ದೆವು. ಆದರೆ ನಿನ್ನ ವಿಷಯವಾಗಿ ನಮಗೆ ಮನಸ್ಸಿನಲ್ಲಿ ಭಯವೂ ಇದ್ದಿತು. ನಿನ್ನ ಹಾವ-ಭಾವಗಳಿಂದ ನಿನ್ನ ಮನಸ್ಸಿನ ಆಶಯವನ್ನು ತಿಳಿದ ಅವರಿಂದು ನಿನ್ನ ಬಳಿಗೆ ನನ್ನನ್ನು ಕಳುಹಿಸಿಕೊಟ್ಟಿರುತ್ತಾರೆ. ನಿನ್ನೊಡನೆ ರತಿಸುಖವನ್ನು ಅನುಭವಿಸುವ ಸಲುವಾಗಿಯೇ ನಾನಿಂದು ನಿನ್ನ ಬಳಿಗೆ ಆಗಮಿಸಿರುತ್ತೇನೆ. ಸ್ವೇಚ್ಛೆಯಿಂದ ಬಂದಿರುವ ನನ್ನನ್ನು ಒಡನೆಯೇ ಪರಿಗ್ರಹಿಸುವವನಾಗು ; ಸಾವಕಾಶಮಾಡಬೇಡ.

ಇತರ ಋಷಿಪತ್ನಿಯರು ನನ್ನನ್ನು ಪ್ರತೀಕ್ಷಿಸುತ್ತಿದ್ದಾರೆ. ಅವರ ಬಳಿಗೆ ನಾನು ಒಡನೆಯೇ ಹೋಗಬೇಕಾಗಿದೆ.”

ಕಾಮಿಸಿದ ಸ್ತ್ರೀಯರು ಸ್ವೇಚ್ಛೆಯಿಂದಲೇ ಕಾಮುಕನ ಬಳಿಗೆ ಬಂದರೆ ಆ ಸಮಯದಲ್ಲಿ ಅವನಿಗುಂಟಾಗುವ ಆನಂದವನ್ನು ಯಾರಿಂದಲೂ ವರ್ಣಿಸುವ ಸಾಧ್ಯತೆಯಿಲ್ಲ. ಅಗ್ನಿಯು ಸಪ್ತರ್ಷಿಗಳ ಪತ್ನಿಯರೊಡನೆ ರತಿಸುಖವನ್ನು ಪಡೆಯಬೇಕೆಂದು ಅನೇಕವರ್ಷಗಳಿಂದ ಆಶಿಸಿ ನಿರಾಶನಾಗಿ ಪ್ರಾಣತೊರೆ ಯಲು ಅರಣ್ಯಕ್ಕೆ ಬಂದಿದ್ದನಲ್ಲವೇ? ಅಂತಹ ಸಂದರ್ಭದಲ್ಲಿ ಋಷಿಪತ್ನಿ ಯರು ಒಬ್ಬೊಬ್ಬರಾಗಿ ರತಿಸುಖವನ್ನಪೇಕ್ಷಿಸಿ ತಾವಾಗಿಯೇ ತನ್ನ ಬಳಿಗೆ ಬರಲು ಸಿದ್ಧರಾಗಿದ್ದಾರೆಂದು ತಿಳಿದರೆ ಅಗ್ನಿಯು ಆನಂದದಿಂದ ಉಬ್ಬಿಹೋಗುವುದು ಸ್ವಾಭಾವಿಕವಾಗಿಯೇ ಇದೆ. ಪ್ರೀತಿ ಮತ್ತು ಸಂತೋಷ–ಈ ಎರಡರಿಂದಲೂ ಕೂಡಿದ ಅದ್ಭುತಾಗ್ನಿಯು ಸ್ವಾಹೆಯನ್ನು ಒಡನೆಯೇ ಬಾಚಿ ತಬ್ಬಿಕೊಂಡು ಅವಳೊಡನೆ ಬಹಳ ಹೊತ್ತಿನವರೆಗೆ ರಮಿಸಿದನು. ಅಗ್ನಿಯ ದಿವ್ಯರೇತಸ್ಸನ್ನು ಸ್ವಾಹಾದೇವಿಯು ತನ್ನ ಗರ್ಭದಲ್ಲಿ ಧಾರಣೆಮಾಡಿಕೊಳ್ಳಲಿಲ್ಲ. ಆ ರೇತಸ್ಸನ್ನು ತನ್ನ ಅಂಜಲಿಯಲ್ಲಿ ಧಾರಣೆಮಾಡಿಕೊಂಡು ಮುಂದೇನು ಮಾಡಬೇಕೆಂದು ಕ್ಷಣಕಾಲ ಯೋಚಿಸಿದಳು : “ನಾನು ಇದೇ ರೂಪದಲ್ಲಿ ಈ ಅರಣ್ಯದಿಂದ ಹೊರಬಿದ್ದೆನಾದರೆ ಅರಣ್ಯದಲ್ಲಿರುವವರು ಪತಿವ್ರತೆಯರಾದ ಋಷಿಪತ್ನಿಯರ ವಿಷಯದಲ್ಲಿ ಸಂಶಯಿಸುವುದು ಸ್ವಾಭಾವಿಕವಾಗಿದೆ. ಇದನ್ನು ತಪ್ಪಿಸುವ ಸಲುವಾಗಿ ನಾನು ಪಕ್ಷಿಯ ರೂಪವನ್ನು ಧರಿಸಿ ಈ ಅರಣ್ಯದಿಂದ ಹೊರಬೀಳುವೆನು. ಪಕ್ಷಿರೂಪವನ್ನು ಧರಿಸುವುದರಿಂದ ಅದ್ಭುತನೂ ನನ್ನ ವಿಷಯದಲ್ಲಿ ಅನುಮಾನಿಸಲಾರನು”–ಹೀಗೆಂಬುದಾಗಿ ತನ್ನಲ್ಲಿಯೇ ತಾನು ಸಮಾಲೋಚಿಸಿ ಸ್ವಾಹಾದೇವಿಯು ಗರುಡಪಕ್ಷಿಯ ರೂಪವನ್ನು ಧರಿಸಿದವ ಳಾಗಿ ಅಗ್ನಿಯ ದಿವ್ಯರೇತಸ್ಸಿನೊಡನೆ ಅರಣ್ಯದಿಂದ ಹೊರಬಿದ್ದಳು.

ಹಾರುತ್ತಾ ಹಾರುತ್ತಾ ಆ ಪಕ್ಷಿಯು ಶ್ವೇತಪರ್ವತದ ಸಮೀಪಕ್ಕೆ ಬಂದಿತು. ಶ್ವೇತಪರ್ವತವು ಜೊಂಡುಹುಲ್ಲಿನಿಂದ ಆವೃತವಾಗಿದ್ದಿತು. ಕಣ್ಣಿ ನಲ್ಲಿಯೇ ತೀಕ್ಷ್ಣವಾದ ವಿಷವನ್ನು ಧರಿಸಿದ್ದ ಅದ್ಭುತವಾದ ಏಳು ಹೆಡೆಗಳಿರುವ ಸರ್ಪಗಳಿಂದ ರಕ್ಷಿಸಲ್ಪಡುತ್ತಿದ್ದಿತು. ರಾಕ್ಷಸರಿಂದಲೂ, ಪಿಶಾಚರಿಂದಲೂ,

ಭಯಂಕರವಾದ ಭೂತಗಳಿಂದಲೂ, ನಾನಾವಿಧವಾದ ಮೃಗ-ಪಕ್ಷಿಗಳಿಂದಲೂ, ರಾಕ್ಷಸಿಯರಿಂದಲೂ ಆ ಶ್ವೇತಪರ್ವತವು ಆವೃತವಾಗಿದ್ದಿತು. ಅಂತಹ ಅತ್ಯದ್ಭುತವಾದ ಪರ್ವತದ ಶಿಖರದ ಮೇಲಕ್ಕೆ ಪಕ್ಷಿರೂಪವನ್ನು ಧರಿಸಿದ್ದ ಸ್ವಾಹಾದೇವಿಯು ಹಾರಿಹೋಗಿ ಅಲ್ಲಿದ್ದ ಜೊಂಡಿನಿಂದಾವೃತವಾದ ಸುವರ್ಣಮಯವಾದ ಕುಂಡದಲ್ಲಿ ಅಗ್ನಿಯ ರೇತಸ್ಸನ್ನು ನಿಕ್ಷೇಪಿಸಿದಳು.

ಇತ್ತಲಾಗಿ ಅಗ್ನಿಯು ಸಪ್ತರ್ಷಿಗಳಲ್ಲಿ ಮತ್ತೊಬ್ಬ ಋಷಿಯ ಪತ್ನಿಯನ್ನು ನಿರೀಕ್ಷಿಸುತ್ತಾ ಅರಣ್ಯದಲ್ಲಿ ಕುಳಿತಿದ್ದನು. ಸ್ವಾಹಾದೇವಿಯು ತನ್ನ ಪೂರ್ವಕೃತಯೋಜನೆಯಂತೆ ಮತ್ತೊಬ್ಬ ಋಷಿಪತ್ನಿಯ ರೂಪವನ್ನು ಧರಿಸಿದವಳಾಗಿ ಅಗ್ನಿಯ ಸಮ್ಮುಖಕ್ಕೆ ಬಂದು ಅವನೊಡನೆ ಸ್ವೇಚ್ಛೆಯಿಂದ ವಿಹರಿಸಿದಳು. ಅನಂತರ ಸ್ಖಲಿತವಾದ ಅಗ್ನಿಯ ರೇತಸ್ಸನ್ನು ಯಥಾಪೂರ್ವವಾಗಿ ಪಕ್ಷಿಯ ರೂಪವನ್ನು ಧರಿಸಿ ಶ್ವೇತಪರ್ವತದಲ್ಲಿದ್ದ ಜೊಂಡಿನಿಂದಾವೃತವಾದ ಸುವರ್ಣಕುಂಡದಲ್ಲಿ ಸ್ವಾಹಾದೇವಿಯು ನಿಕ್ಷೇಪಿಸುತ್ತಿದ್ದಳು. ಆರು ಮಂದಿ ಋಷಿಪತ್ನಿಯರ ರೂಪಗಳನ್ನೂ ಧರಿಸಿ ಅಗ್ನಿಯೊಡನೆ ಸ್ವಾಹಾದೇವಿಯು ವಿಹರಿಸಿದಳು. ಆದರೆ ಮಹಾಪತಿವ್ರತೆಯಾದ, ಮಹಾತಪಸ್ವಿನಿಯಾದ ಅರುಂಧತಿಯ ರೂಪವನ್ನು ಧರಿಸಲು ಮಾತ್ರ ಸ್ವಾಹಾದೇವಿಗೆ ಸಾಧ್ಯವಾಗಲಿಲ್ಲ, ಯುಧಿಷ್ಠಿರ!

ಕಾಮಿನಿಯಾದ ಸ್ವಾಹಾದೇವಿಯು ಆರು ಋಷಿಪತ್ನಿಯರ ರೂಪಗಳನ್ನೂ ಧರಿಸಿ ಅಗ್ನಿಯೊಡನೆ ಸ್ವೇಚ್ಛೆಯಿಂದ ರಮಿಸಿ ಆರು ಬಾರಿ ಪಡೆದ ಅಗ್ನಿಯ ರೇತಸ್ಸನ್ನು ಪಕ್ಷಿಯ ರೂಪವನ್ನು ಧರಿಸಿ ಶುಕ್ಲಪಕ್ಷದ ಪ್ರತಿಪತ್ತಿನ ದಿವಸ ಶ್ವೇತಪರ್ವತದ ಸುವರ್ಣಕುಂಡದಲ್ಲಿ ನಿಕ್ಷೇಪಿಸಿದಳು. ಸರ್ವವನಸ್ಪತಿಗಳಿಂದಲೂ ನಿಬಿಡವಾಗಿದ್ದ ಆ ಶ್ವೇತಪರ್ವತದ ಸುವರ್ಣಕುಂಡದಲ್ಲಿ ಸ್ವಾಹಾದೇವಿಯಿಂದ ವಿಸರ್ಜಿತವಾದ ರೇತಸ್ಸು ಕಾಲಾನುಕ್ರಮದಲ್ಲಿ ಶಿಶುವಿನ ರೂಪವನ್ನು ತಾಳಿತು. ಸ್ಕನ್ನವಾದ (ಪಕ್ಷಿರೂಪಳಾದ ಸ್ವಾಹಾದೇವಿಯಿಂದ ನಿಕ್ಷೇಪಿತವಾದ) ಅಗ್ನಿಯ ರೇತಸ್ಸು ಋಷಿಮಾನ್ಯವಾಗಿದ್ದುದರಿಂದ ಅದರಿಂದ ಹುಟ್ಟಿದ ಶಿಶುವು ಸ್ಕಂದತ್ವವನ್ನೇ ಹೊಂದಿತು. (ಸ್ಕಂದನೆಂಬ ಹೆಸರು ಪಡೆಯಿತು.) "ಋಷಿಭಿಃ ಪೂಜಿತಂ ಸ್ಕನ್ನಮನಯತ್ ಸ್ಕನ್ದತಾಂ ತತಃ"

ಯುಧಿಷ್ಠಿರ! ಆ ಶಿಶುವಿನ ರೂಪವೂ ಸಹ ಬಹಳ ವಿಚಿತ್ರವಾಗಿದ್ದಿತು. ಆ ಶಿಶುವಿಗೆ ಆರು ತಲೆಗಳಿದ್ದುವು. ಹನ್ನೆರಡು ಕಿವಿಗಳೂ, ಹನ್ನೆರಡು ಕಣ್ಣು ಗಳೂ ಇದ್ದುವು. ಕತ್ತು ಮಾತ್ರ ಒಂದೇ ಇದ್ದಿತು. ಆರು ತಲೆಗಳಿಗೆ ಅನು ರೂಪವಾಗಿ ಹನ್ನೆರಡು ಬಾಹುಗಳಿದ್ದುವು. ಅಂತಹ ವಿಚಿತ್ರರೂಪದ ಕುಮಾರನು ಜೊಂಡಿನ ಮಧ್ಯದಲ್ಲಿದ್ದ ಸುವರ್ಣಕುಂಡದಲ್ಲಿ ಹುಟ್ಟಿದನು. ಶಿಶುವಿನ ಬೆಳವಣಿಗೆಯೂ ವಿಚಿತ್ರವಾಗಿಯೇ ಇದ್ದಿತು.

ಶುಕ್ಲಪ್ರಥಮೆಯ ದಿವಸ ಸ್ವಾಹಾದೇವಿಯು ಆರು ಬಾರಿ ರೇತಸ್ಸನ್ನು ಕುಂಡದಲ್ಲಿ ಹಾಕಿದಳು. ದ್ವಿತೀಯೆಯಂದು ಆ ಸುವರ್ಣಕುಂಡದಲ್ಲಿ ಆರು ಪ್ರಕಾರವಾಗಿ ವಿಸರ್ಜಿಸಿದ್ದ ರೇತಸ್ಸೂ ಒಂದಾಗಿ ಶಿಶುವಿನ ಆಕೃತಿಯನ್ನು ಹೊಂದಿತು. ತೃತೀಯೆಯ ದಿವಸ ಪುಟ್ಟಮಗು ಆಯಿತು. ಚತುರ್ಥಿಯ ದಿವಸ ಶಿಶುವಿನ ಅಂಗ-ಪ್ರತ್ಯಂಗಗಳು ಚೆನ್ನಾಗಿ ಬೆಳೆದು ಗುಹನಾದನು. (ಬಲಿಷ್ಠನಾದನು.) ಪಂಚಮಿಯ ದಿವಸ ಬಾಲಕನಾಗಿ ಷಷ್ಠಿಯ ದಿವಸ ಯುವಕನಾದನು. ಕೆಂಪಾದ ಕೊನ್ನಾರಿಗೆಡ್ಡೆಗಳಿಂದಲೂ (ಜೊಂಡಿನ ವಿಶೇಷ) ಸುವರ್ಣಕುಂಡದ ಕಾಂತಿಯಿಂದಲೂ ಪರಿವೃತನಾಗಿದ್ದ ಸ್ಕಂದನು ಕೆಂಪಾದ ಮೋಡದಿಂದ ಆವೃತನಾದ ಉದಯಕಾಲದ ಸೂರ್ಯನಂತೆಯೇ ಪ್ರಕಾಶಿಸಿ ದನು. ಹುಟ್ಟಿದ ಆರನೆಯ ದಿನವೇ ಯೌವನವನ್ನು ಹೊಂದಿದ ಆ ಸ್ಕಂದನು, ತ್ರಿಪುರಾಸುರನ ಸಂಹಾರಕಾಲದಲ್ಲಿ ಪರಶಿವನು ಸುರಶತ್ರುಗಳ ವಿನಾಶಕ್ಕಾಗಿ ಧರಿಸಿದ್ದ ಮಹಾಭಯಂಕರವಾದ, ಪರಮಶ್ರೇಷ್ಠವಾದ ಧನುಸ್ಸನ್ನು ಧರಿಸಿದವ ನಾಗಿ ಒಮ್ಮೆ ಗಟ್ಟಿಯಾಗಿ ನಿನಾದಮಾಡಿದನು. ಸ್ಕಂದನು ಮಾಡಿದ ಆ ಮಹಾ ಗರ್ಜನೆಯಿಂದಾಗಿ ತ್ರಿಭುವನಗಳೂ ನಡುಗಿಹೋದುವು. ಮಹಾಮೇಘ ಗಳಿಂದ ಹೊರಬೀಳುವ ಸಿಡಿಲಿನ ಶಬ್ದಕ್ಕೆ ಸಮಾನವಾದ ಗರ್ಜನೆಯನ್ನು ಕೇಳಿ ಚಿತ್ರ-ಐರಾವತಗಳೆಂಬ ಸರ್ಪಗಳು ಭಯದಿಂದ ಮೇಲಕ್ಕೆ ಹಾರಿದುವು. ಸೂರ್ಯನಿಗೆ ಸಮನಾದ ಕಾಂತಿಯನ್ನು ಹೊಂದಿದ್ದ, ಬಲಿಷ್ಠರಲ್ಲಿ ಶ್ರೇಷ್ಠನಾದ, ಅಗ್ನಿಯ ಪುತ್ರನಾದ ಸ್ಕಂದನು ಕೆಳಗೆ ಬೀಳುತ್ತಿದ್ದ ಆ ಎರಡು ನಾಗಗಳನ್ನೂ ತನ್ನೆರಡು ಕೈಗಳಿಂದ ಹಿಡಿದುಕೊಂಡು ಮತ್ತೊಂದು ಕೈಯಿಂದ ಶಕ್ತ್ಯಾಯುಧಗಳನ್ನೂ, ಇನ್ನೊಂದು ಕೈಯಿಂದ ದೊಡ್ಡ ಹುಂಜವನ್ನೂ ಹಿಡಿದು

ಕೊಂಡು ಮತ್ತೊಮ್ಮೆ ದೀರ್ಘವಾಗಿ ಗರ್ಜಿಸಿದನು ಮತ್ತು ಆ ಹುಂಜದೊಡನೆ ಆಟವಾಡಿದನು. ಮರುಕ್ಷಣದಲ್ಲಿಯೇ ತನ್ನೆರಡು ಕೈಗಳಿಂದ ದೊಡ್ಡದಾದ ಶಂಖವೊಂದನ್ನು ಎತ್ತಿಕೊಂಡು ಮಹಾಬಲಿಷ್ಠವಾದ ಪ್ರಾಣಿಗಳಿಗೂ ಭಯ ವಾಗುವ ರೀತಿಯಲ್ಲಿ ಗಟ್ಟಿಯಾಗಿ ಊದಿದನು. ತನ್ನೆರಡು ಭುಜಗಳನ್ನು



ಅನೇಕಬಾರಿ ತಟ್ಟಿಕೊಂಡು ಚಪ್ಪಾಳೆ ತಟ್ಟುತ್ತಾ ಘೋರವಾಗಿ ಶಬ್ದಮಾಡು ತ್ತಿದ್ದನು. ಅವನು ಆ ಪರ್ವತಶಿಖರದಲ್ಲಿ ಆಟವಾಡುತ್ತಾ ಮೂರು ಲೋಕ ಗಳನ್ನೂ ತನ್ನ ಆರು ಬಾಯಿಗಳಿಂದಲೇ ನುಂಗಿಬಿಡುವನೋ ಎಂಬಂತೆ ಕಾಣು

ತ್ತಿದ್ದನು. ಅವನು ಪರ್ವತಶಿಖರದಲ್ಲಿ ನಿಂತು ಆಟವಾಡುತ್ತಿದ್ದಾಗ ಉದಯಾಚಲದಲ್ಲಿ ಉದಯಿಸಿದ ಸೂರ್ಯನೋಪಾದಿಯಲ್ಲಿ ಕಾಣುತ್ತಿದ್ದನು.

ಅದ್ಭುತವಿಕ್ರಮನಾದ, ಪರಿಮಿತಿಯಿಲ್ಲದ ಶರೀರವನ್ನು ಹೊಂದಿದ್ದ ಸ್ಕಂದನು ಪರ್ವತದ ಶಿಖರದಲ್ಲಿ ಕುಳಿತು ತನ್ನ ಆರು ಮುಖಗಳಿಂದ ಎಲ್ಲ ದಿಕ್ಕುಗಳನ್ನೂ ನೋಡಿದನು. ದಶದಿಕ್ಕುಗಳಲ್ಲಿದ್ದ ವಿವಿಧವಾದ ಪ್ರಕೃತಿಯ ಸ್ವರೂಪವನ್ನು ಕಂಡು ಪುನಃ ಘೋರನಿನಾದಮಾಡಿದನು. ಅವನ ಆ ಘೋರನಿನಾದವನ್ನು ಕೇಳಿ ಅನೇಕರು ನಿಂತಲ್ಲಿಯೇ ಭಯದಿಂದ ಮೂರ್ಛೆ ಹೊಂದುತ್ತಿದ್ದರು. ಮತ್ತೆ ಕೆಲವರು ಉದ್ವಿಗ್ನರಾಗಿ ಭೀತ-ಭೀತರಾಗಿ ಅವನ ಬಳಿಗೆ ಬಂದು ಅವನಿಂದಲೇ ರಕ್ಷಣೆಯನ್ನು ಯಾಚಿಸುತ್ತಿದ್ದರು. ಆ ಸಮಯದಲ್ಲಿ ನಾನಾವರ್ಣದವರು ಬಂದು ದೇವನಾದ ಸ್ಕಂದನಿಂದ ರಕ್ಷಣೆಯನ್ನು ಯಾಚಿಸಿದರು. ಹೀಗೆ ಸ್ಕಂದನನ್ನು ಆಶ್ರಯಿಸಿದ ಮಹಾಬಲಶಾಲಿಗಳು ಷಣ್ಮುಖನ ಪಾರಿಷದರಾದರು. (ಪ್ರಮಥಗಣಗಳಾದರು.) ತನ್ನಿಂದ ರಕ್ಷಣೆಯನ್ನು ಪ್ರಾರ್ಥಿಸಲು ಬಂದಿದ್ದ ಮಹಾಬಲಿಷ್ಠರಾದ ಜನರನ್ನು ಕುಮಾರನು ಸಾಂತ್ವವಚನಗಳಿಂದ ಸಂತೈಸುತ್ತಾ, ತಾನು ಕುಳಿತಿದ್ದ ಸ್ಥಳದಿಂದ ಮೇಲೆದ್ದು ಮಹಾಧನುಸ್ಸಿಗೆ ಬಾಣವನ್ನು ಯೋಜಿಸಿ, ಶಿಂಜಿನಿಯನ್ನು ಸೆಳೆದು ಶ್ವೇತ ಪರ್ವತದಲ್ಲಿ ನಿಂತು ಕ್ರೌಂಚಪರ್ವತಕ್ಕೆ ಗುರಿಯಿಟ್ಟು ಹೊಡೆದನು. ಅವ್ಯಾಹತವಾದ ಬಾಣಪ್ರಯೋಗಗಳಿಂದ ಸ್ಕಂದನು ಹಿಮವಂತನ ಮಗನಾದ ಕ್ರೌಂಚಪರ್ವತವನ್ನು ಕ್ಷಣಮಾತ್ರದಲ್ಲಿ ಭೇದಿಸಿಬಿಟ್ಟನು. ಒಡನೆಯೇ ಕ್ರೌಂಚ ಪರ್ವತದಲ್ಲಿದ್ದ ಹಂಸಗಳೂ ಗೃಧ್ರಗಳೂ ಭೇದಿಸಿದ ಮಾರ್ಗದಿಂದ ಮೇರು ಪರ್ವತಕ್ಕೆ ಹಾರಿದುವು. ಕ್ರೌಂಚಪರ್ವತವು ಸ್ಕಂದನ ಬಾಣಾಘಾತಕ್ಕೆ ಸಿಕ್ಕಿ ಕೆಳಗೆ ಬೀಳುವಾಗ ಘೋರವಾದ ಶಬ್ದವಾಯಿತು. ಆ ಮಹಾಶಬ್ದವು ಸುತ್ತಲೂ ಇದ್ದ ಇತರ ಪರ್ವತಗಳಲ್ಲಿಯೂ ಪ್ರತಿಧ್ವನಿತವಾಯಿತು. ಆರ್ತವಾದ ಪಶು-ಮೃಗ-ಪಕ್ಷಿಗಳ ಮತ್ತು ಕೆಳಗೆ ಬೀಳುತ್ತಿದ್ದ ಪರ್ವತದ ಘೋರ ಧ್ವನಿಯನ್ನು ಕೇಳಿಯೂ ಸಹ ಸ್ಕಂದನು ವಿಚಲಿತನಾಗಲಿಲ್ಲ. ಮಹಾತ್ಮನಾದ ಸ್ಕಂದನು ಪುನಃ ತನ್ನ ಶಕ್ತ್ಯಾಯುಧವನ್ನು ಗರಗರನೆ ತಿರುಗಿಸಿ ಗುರಿಯಿಟ್ಟು ಶ್ವೇತಪರ್ವತಕ್ಕೆ ಹೊಡೆಯಲಾಗಿ ಮರುಕ್ಷಣದಲ್ಲಿಯೇ ಶ್ವೇತಪರ್ವತದ

ಶಿಖರವು ಭಿನ್ನವಾಯಿತು. ಸ್ಕಂದನ ಶಕ್ತ್ಯಾಯುಧದಿಂದ ಹೊಡೆಯಲ್ಪಟ್ಟು ಸೀಳಿಹೋಗಿದ್ದ ಶ್ವೇತಪರ್ವತವು ಸ್ಕಂದನ ವಿಷಯದಲ್ಲಿ ಭಯಗೊಂಡು ತನ್ನೊಡನಿದ್ದ ಇತರ ಪರ್ವತಗಳೊಡನೆ ಭೂಮಿಯಿಂದ ಮೇಲಕ್ಕೆ ಹಾರಿ ಬಿಟ್ಟಿತು. ಅದರಿಂದ ಪರ್ವತಗಳಿದ್ದೆಡೆಗಳಲ್ಲೆಲ್ಲಾ ಭೂಮಿಯು ಸೀಳಿ ಹೋದಂತಾಗಿ ಭೂದೇವಿಯು ಸ್ಕಂದನ ಸಮೀಪಕ್ಕೆ ಬಂದು ರಕ್ಷಣೆಯನ್ನು ಯಾಚಿಸಿದಳು ಮತ್ತು ಅವನ ಅನುಗ್ರಹದಿಂದ ಪುನಶ್ಚೇತನಗೊಂಡು ಮೊದಲಿನಂತೆಯೇ ವಿರಾಜಿಸಿದಳು. ಭೂದೇವಿಯನ್ನನುಸರಿಸಿ ಪರ್ವತಗಳೂ ಸಹ ಸ್ಕಂದನ ಬಳಿಗೆ ಬಂದು ಅವನಿಗೆ ನಮಸ್ಕರಿಸಿ ಅವನಿಂದ ಆಶ್ವಾಸನೆಯನ್ನು ಪಡೆದು ಭೂಮಿಯ ಮೇಲೆ ಯಥಾಪೂರ್ವಸ್ಥಳಗಳಲ್ಲಿ ಉಪಸ್ಥಿತವಾದುವು. ಅನಂತರದಲ್ಲಿ ಪ್ರತಿಯೊಂದು ಮಾಸದಲ್ಲಿಯೂ ಶುಕ್ಲಪಕ್ಷದ ಪಂಚಮಿಯ ದಿವಸ ಜನರು ಸ್ಕಂದನನ್ನು ಭಯ-ಭಕ್ತಿಗಳಿಂದ ಆರಾಧಿಸತೊಡಗಿದರು."

೨೨೫ನೆಯ ಅಧ್ಯಾಯವು ಮುಗಿಯಿತು.

೨೨೬ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ವಿಶ್ವಾಮಿತ್ರನು ಸ್ಕಂದನಿಗೆ ಜಾತಕರ್ಮಾದಿಗಳನ್ನು ಮಾಡಿದುದು : ವಿಶ್ವಾಮಿತ್ರನು ಸತ್ಯಾಂಶವೇನೆಂಬುದನ್ನು ಹೇಳಿದರೂ ಸಹ ಋಷಿಗಳು ತಮ್ಮ ಪತ್ನಿಯರನ್ನು ಪರಿತ್ಯಜಿಸಿದುದು : ಅಗ್ನಿಯೇ ಮೊದಲಾದವರು ಸ್ಕಂದನನ್ನು ರಕ್ಷಿಸಿದುದು

"ಯುಧಿಷ್ಠಿರ! ಮಹಾಸತ್ತ್ವನಾದ ಮಹಾಬಲನಾದ ಮಹಾಸೇನನು ನಾನು ಹೇಳಿದ ರೀತಿಯಲ್ಲಿ ಜನ್ಮತಾಳಲಾಗಿ, ನಾನಾವಿಧವಾದ ಘೋರರೂಪ ಗಳನ್ನು ಧರಿಸಿರುವ ಮಹೋತ್ಪಾತಗಳು ಕಾಣಿಸಿಕೊಂಡುವು. ಸ್ತ್ರೀ-ಪುರುಷರು ತಮ್ಮ ತಮ್ಮ ಸಹಜಗುಣಗಳಲ್ಲಿ ವೈಪರೀತ್ಯವನ್ನು ಹೊಂದಿದರು. ಶೀತವಾದ ಪ್ರದೇಶವು ಉಷ್ಣಪ್ರದೇಶವಾಗಿಯೂ, ಉಷ್ಣವಾಗಿದ್ದ ಪ್ರದೇಶವು ಶೀತ ಪ್ರದೇಶವಾಗಿಯೂ ಪರಿವರ್ತಿತವಾಯಿತು. ಗ್ರಹಗಳೂ, ದಿಕ್ಕುಗಳೂ ಮತ್ತು ಆಕಾಶವೂ ಪ್ರಜ್ವಲಿಸುತ್ತಿದ್ದುವು. ಭೂಮಿಯು ಶಬ್ದಮಾಡತೊಡಗಿತು.

ಲೋಕದ ಹಿತದಲ್ಲಿಯೇ ಸದಾ ಆಸಕ್ತರಾಗಿದ್ದ ಋಷಿಗಳು ತಮ್ಮ ಸುತ್ತಲೂ ಉಂಟಾದ ವೈಪರೀತ್ಯವನ್ನೂ, ಘೋರವಾದ ಉತ್ಪಾತಗಳನ್ನೂ ಕಂಡು ಉದ್ವಿಗ್ನರಾಗಿ ಪ್ರಪಂಚದಲ್ಲಿ ಶಾಂತಿಯನ್ನು ಪುನಃ ಸ್ಥಾಪಿಸಲು ಶಾಸ್ತ್ರೀಯ ಕರ್ಮಗಳನ್ನು ಆಚರಿಸಿದರು. ಚೈತ್ರರಥವೆಂಬ ಆ ಅರಣ್ಯದಲ್ಲಿಯೇ ವಾಸ ಮಾಡುತ್ತಿದ್ದ ಜನರು ಈ ಅನರ್ಥವು ಅಗ್ನಿಯಿಂದಲೇ ಉಂಟಾದುದೆಂದೂ, ಅಗ್ನಿಯು ಆರುಮಂದಿ ಪತಿವ್ರತೆಯರಾದ ಋಷಿಪತ್ನಿಯರ ಸಂಗಮಾಡಿದುದ ರಿಂದಾಗಿ ಇಂತಹ ಘೋರವಾದ ವಾತಾವರಣವುಂಟಾಗಿರುವುದೆಂದೂ– ಮಾತನಾಡಿಕೊಳ್ಳುತ್ತಿದ್ದರು. ಸ್ವಾಹಾದೇವಿಯು ಗರುಡಪಕ್ಷಿಯ ವೇಷವನ್ನು ಧರಿಸಿದ್ದ ಕಾಲದಲ್ಲಿ ಅಗ್ನಿಯ ರೇತಸ್ಸನ್ನು ಧರಿಸಿ ತಮ್ಮ ಆಶ್ರಮಗಳ ಮೇಲೆ ಹಾರುತ್ತಾ ಹೋಗುತ್ತಿದ್ದುದನ್ನು ನೋಡಿದ್ದ ಕೆಲವರು ಈ ಮಹೋತ್ಪಾತಕ್ಕೆ ಕಾರಣವು ಗರುಡಪಕ್ಷಿಯೆಂದು ತೆಗಳುತ್ತಿದ್ದರು. ಆದರೆ ಯಾರೊಬ್ಬರಿಗೂ ಸಹ ಅದು ಸ್ವಾಹಾದೇವಿಯು ಮಾಡಿದ ಕಾರ್ಯವೆಂದು ಊಹಿಸಲಾಗಲಿಲ್ಲ. ಯಾರಿಗೂ ಅದರ ಅರಿವೇ ಉಂಟಾಗಲಿಲ್ಲ. ಗರುಡಪಕ್ಷಿಯ ರೂಪದಲ್ಲಿದ್ದ ಸ್ವಾಹಾದೇವಿಯು ಅವರೆಲ್ಲರ ಮಾತುಗಳನ್ನು ಕೇಳಿ ಸ್ಕಂದನು ತನ್ನ ಮಗ ನೆಂಬುದನ್ನು ಮನಗಂಡವಳಾಗಿ ಅವನ ಬಳಿಗೆ ಮೆಲ್ಲಮೆಲ್ಲನೆ ಹೋಗಿ 'ನಾನೇ ನಿನ್ನ ತಾಯಿ' ಎಂದು ಹೇಳಿಕೊಂಡಳು. ಅರುಂಧತಿಯನ್ನು ಬಿಟ್ಟು ಉಳಿದ ಶಿವಾ ಮೊದಲಾದ ಆರು ಮಂದಿ ಋಷಿಪತ್ನಿಯರು ಅಗ್ನಿಯ ಸಂಗವನ್ನು ಮಾಡಿದರೆಂದೂ ಮತ್ತು ಸ್ಕಂದನ ಜನ್ಮಕ್ಕೆ ಆ ಆರುಮಂದಿಯೇ ಕಾರಣರೆಂದೂ ಅರಣ್ಯವಾಸಿಗಳು ಸಪ್ತರ್ಷಿಗಳಿಗೂ ದೂರಿತ್ತರು. ಮಹಾಪರಾಕ್ರಮಿಯಾದ ಪುತ್ರನೊಬ್ಬನು ಹುಟ್ಟಿದ್ದಾನೆಂದು ತಿಳಿದರೂ ಸಹ ತಮ್ಮ ಪತ್ನಿಯರು ಅಪಚಾರಮಾಡಿರುವರೆಂದು ನಿಶ್ಚಯಿಸಿ ವಿಶ್ವಾಮಿತ್ರಾದಿಗಳು ತಮ್ಮ-ತಮ್ಮ ಪತ್ನಿಯರನ್ನು ತೊರೆದರು. ನಿರಪರಾಧಿಗಳಿಗೆ ಪ್ರಾಪ್ತವಾದ ಶಿಕ್ಷೆಯನ್ನು ನೋಡಿ ಒಡನೆಯೇ ಸ್ವಾಹಾದೇವಿಯು ವಿಶ್ವಾಮಿತ್ರಾದಿ ಸಪ್ತರ್ಷಿಗಳ ಸಮೀಪಕ್ಕೆ ಹೋಗಿ ಬದ್ಧಾಂಜಲಿಯಾಗಿ ನಿಂತು ಹೇಳಿದಳು :

"ಮಹರ್ಷಿಗಳೇ! ಈ ಮಗುವು ನನ್ನದು. ನಿಮ್ಮ ಪತ್ನಿಯರಿಗೂ–ಈ ಮಗುವಿಗೂ ಯಾವ ಸಂಬಂಧವೂ ಇರುವುದಿಲ್ಲ. ನಿಮ್ಮ ಪತ್ನಿಯರೆಲ್ಲರೂ

ನಿರಪರಾಧಿನಿಯರು. ಈ ಮಗುವು ಹುಟ್ಟಲು ನಿಮ್ಮ ಪತ್ನಿಯರು ಖಂಡಿತವಾಗಿಯೂ ಕಾರಣರಲ್ಲ.”

ಈ ವಿಷಯವು ವಿಶ್ವಾಮಿತ್ರನಿಗೆ ಮಾತ್ರ ಸ್ಪಷ್ಟವಾಗಿ ತಿಳಿದಿದ್ದಿತು. ಸಪ್ತರ್ಷಿಗಳ ಮಹಾಯಾಗದ ಅವಭೃಥವನ್ನು ಮುಗಿಸಿದ ವಿಶ್ವಾಮಿತ್ರನು ಅಗ್ನಿಯ ಹಾವ-ಭಾವಗಳನ್ನು ಬಹುಸೂಕ್ಷ್ಮವಾಗಿ ಪರಿಶೀಲಿಸಿ ಅವನು ಕಾಮಾಭಿಭೂತನಾಗಿರುವನೆಂಬುದನ್ನು ಮನಗಂಡವನಾಗಿ, ಅದೃಶ್ಯನಾಗಿ ಅಗ್ನಿಯನ್ನನುಸರಿಸಿ ತಾನೂ ಸಹ ಅರಣ್ಯಕ್ಕೆ ಹೋಗಿ, ಅಲ್ಲಿ ನಡೆದ ವಿಷಯಗಳೆಲ್ಲವನ್ನೂ ಪ್ರತ್ಯಕ್ಷವಾಗಿ ಕಂಡಿದ್ದನು. ಕುಮಾರನ ಜನ್ಮರಹಸ್ಯವನ್ನು ಸಂಪೂರ್ಣವಾಗಿ ತಿಳಿದಿದ್ದ ವಿಶ್ವಾಮಿತ್ರನು ಮೊಟ್ಟಮೊದಲು ಸ್ಕಂದನಿಗೆ ಶರಣಾಗತನಾದನು. ಮಹಾಸೇನನನ್ನು ಕುರಿತು ಅತ್ಯಮೋಘವಾದ ಸ್ತೋತ್ರವನ್ನೂ ಸಹ ವಿಶ್ವಾಮಿತ್ರನು ಹಾಡಿದನು. ಶಿಶುವಿಗೆ ಮಾಡಬೇಕಾದ ಹದಿಮೂರು ಪ್ರಕಾರವಾದ ಜಾತಕರ್ಮಾದಿ ಕರ್ಮಗಳನ್ನೂ ಸಹ ವಿಶ್ವಾಮಿತ್ರನು ಸ್ವತಃ ಮಾಡಿದನು. ಪ್ರಪಂಚದ ಹಿತಾರ್ಥವಾಗಿ ವಿಶ್ವಾಮಿತ್ರನು ಸ್ಕಂದನ ಮಾಹಾತ್ಮ್ಯವನ್ನು ಪ್ರಪಂಚದಲ್ಲಿ ಹರಡಿದನಲ್ಲದೇ ಮೊಟ್ಟಮೊದಲು ಸ್ಕಂದನಿಗೆ ಪ್ರಾಪ್ತವಾದ ಕುಕ್ಕುಟಗ್ರಹಣವನ್ನೂ, ಶಕ್ತಿದೇವತೆಯ ಸಾಧನೆಯನ್ನೂ ಮತ್ತು ಅವನನ್ನು ಪೂಜಿಸುತ್ತಿದ್ದ ಜನರ ಸಾಧನೆಯನ್ನೂ ವಿಶ್ವಾಮಿತ್ರನು ಕೊಂಡಾಡಿದನು. ಈ ಕಾರಣದಿಂದಲೇ, ಯುಧಿಷ್ಠಿರ! ವಿಶ್ವಾಮಿತ್ರನು ಸ್ಕಂದನಿಗೆ ಪರಮಪ್ರಿಯನಾದನು.

ಸ್ವಾಹಾದೇವಿಯು ರೂಪಾಂತರವನ್ನು (ಋಷಿಗಳ ಪತ್ನಿಯರ ರೂಪವನ್ನು) ಧರಿಸಿ ಕಾಮಾಭಿಭೂತನಾಗಿದ್ದ ಅಗ್ನಿಯೊಡನೆ ರಮಿಸಿದಳೆಂಬ ವಿಷಯವು ವಿಶ್ವಾಮಿತ್ರನಿಗೆ ಸಂಪೂರ್ಣವಾಗಿ ತಿಳಿದಿತ್ತಾದ್ದರಿಂದ ಇತರ ಮಹರ್ಷಿಗಳನ್ನು ಕುರಿತು ವಿಶ್ವಾಮಿತ್ರನು ತಮ್ಮ ಪತ್ನಿಯರು ಯಾವ ಕಾರಣದಿಂದಲೂ ಅಪರಾಧಿನಿಯರಲ್ಲವೆಂಬುದನ್ನು ಸ್ಪಷ್ಟವಾಗಿ ಹೇಳಿದನು. ವಿಶ್ವಾಮಿತ್ರನೇ ಹೀಗೆಂದು ಹೇಳಿದರೂ, ತಮಗೂ ಸಹ ತಮ್ಮ ಪತ್ನಿಯರಲ್ಲಿ ಯಾವ ವಿಧವಾದ ಶಂಕೆಯೂ ಇಲ್ಲದಿದ್ದರೂ ಸಹ ಲೋಕಾಪವಾದದ ಭೀತಿಯಿಂದ ಋಷಿಗಳು ತಮ್ಮ-ತಮ್ಮ ಪತ್ನಿಯರನ್ನು ತ್ಯಜಿಸಿಯೇಬಿಟ್ಟರು.

ಸ್ಕಂದನ ಅಪ್ರತಿಮವಾದ ಪರಾಕ್ರಮವನ್ನು ಕರ್ಣಾಕರ್ಣಿಕೆಯಿಂದ ಕೇಳಿದ ದೇವತೆಗಳು ಭೀತರಾಗಿ ಇಂದ್ರನ ಸಮೀಪಕ್ಕೆ ಹೋಗಿ ಹೀಗೆಂದು ಹೇಳಿದರು : "ದೇವೇಂದ್ರ! ನೀನು ಸ್ವಲ್ಪವಾದರೂ ಸಾವಕಾಶಮಾಡದೇ ಈ ಒಡನೆಯೇ ಸ್ಕಂದನನ್ನು ಸಂಹರಿಸಿಬಿಡು. ಅವನೀಗಲೇ ಮಹಾಪರಾಕ್ರಮಿಯೆಂದು ಖ್ಯಾತನಾಗಿರುತ್ತಾನೆ. ಅವನ ಪರಾಕ್ರಮವು ಎಲ್ಲರಿಂದಲೂ ಸಹಿಸಲಶಕ್ಯವಾಗಿದೆ. ನೀನೇನಾದರೂ ಅವನನ್ನೀಗಲೇ ಸಂಹರಿಸದಿದ್ದರೆ ಅವನು ತನ್ನ ಅತುಲವಾದ ಪರಾಕ್ರಮದಿಂದ ಮೂರು ಲೋಕಗಳನ್ನೂ ಜಯಿಸುವನಲ್ಲದೇ ನಿನ್ನನ್ನೂ ಸಹ ಪರಾಜಯಗೊಳಿಸಿ ದೇವತೆಗಳಿಗೆಲ್ಲರಿಗೂ ತಾನೇ ಅಧಿಪತಿಯಾಗಿಬಿಡಬಹುದು."

ಇಂದ್ರನು ದೇವತೆಗಳ ಆ ಮಾತಿನಿಂದ ಮನಸ್ಸಿನಲ್ಲಿ ಉದ್ವಿಗ್ನತೆಯನ್ನೂ ದುಃಖವನ್ನೂ ಹೊಂದಿದವನಾಗಿ ದೇವತೆಗಳನ್ನು ಕುರಿತು ಹೇಳಿದನು : "ನೀವು ಹೇಳಿದಂತೆ ಆ ಬಾಲಕನು ನಿಶ್ಚಯವಾಗಿಯೂ ಮಹಾಬಲಿಷ್ಠನಾಗಿರುತ್ತಾನೆ. ಈ ಸಕಲಭುವನಗಳ ಸೃಷ್ಟಿಕರ್ತನಾದ ಬ್ರಹ್ಮನನ್ನೂ ಸಹ ಆ ಬಾಲಕನು ತನ್ನ ಅತುಲವಾದ ಪರಾಕ್ರಮದಿಂದ ವಿನಾಶಮಾಡಿಯಾನು. ಅಂತಹ ಸಾಮರ್ಥ್ಯವು ಅವನಲ್ಲಿರುವುದು. ಆದುದರಿಂದ ಅತುಲಪರಾಕ್ರಮಿಯಾದ ಬಾಲನಾದ ಸ್ಕಂದನೊಡನೆ ನಾನು ಸೆಣಸಹೋಗುವುದಿಲ್ಲ. ಅವನೊಡನೆ ಯುದ್ಧಮಾಡುವ ಉತ್ಸಾಹವೂ ನನ್ನಲ್ಲಿಲ್ಲ."

"ಇದೇನು ಮಹೇಂದ್ರ! ಹೀಗೆ ಮಾತನಾಡುತ್ತಿರುವೆ? ಹಾಗಾದರೆ ನಿನ್ನಲ್ಲಿ ಪೌರುಷವೇ ಇಲ್ಲವೇ? ಹಾಗಾದರೆ ಲೋಕದ ಮಾತೃದೇವತೆಗಳೆಲ್ಲರೂ ಈ ಕೂಡಲೇ ಸ್ಕಂದನ ಸಮೀಪಕ್ಕೆ ಧಾವಿಸಲಿ. ಮಾತೃದೇವತೆಗಳಿಗೆ ತಮಗೆ ಬೇಕಾಗುವಷ್ಟು ಸಾಮರ್ಥ್ಯವನ್ನು ಪಡೆಯುವ ಸಾಧ್ಯತೆಯಿದೆ. ಸ್ಕಂದನಿಗಿಂತಲೂ ಹೆಚ್ಚಿನ ಸಾಮರ್ಥ್ಯವನ್ನು ಅವರು ಪಡೆದು ಅವನನ್ನು ಸಂಹರಿಸಲಿ." ಹೀಗೆಂಬುದಾಗಿ ದೇವತೆಗಳು ಹೇಳಿದ ನಂತರ ಮಾತೃದೇವತೆಗಳು ಸ್ಕಂದನ ಬಳಿಗೆ ತೆರಳಿದರು.

ಸ್ಕಂದನನ್ನು ನೋಡಿದೊಡನೆಯೇ ತಾವು ಎಷ್ಟೇ ಪ್ರಯತ್ನಿಸಿದರೂ ಸ್ಕಂದನಿಗಿಂತಲೂ ಮಿಗಿಲಾದ ಪರಾಕ್ರಮವನ್ನು ಪಡೆದುಕೊಳ್ಳುವ ಸಾಧ್ಯತೆ

ಯಿಲ್ಲವೆಂಬ ಅರಿವು ಅವರಿಗುಂಟಾಯಿತು. ಅವನೊಡನೆ ಸೆಣಸಾಡುವ ಸಾಧ್ಯತೆಯೂ ಇಲ್ಲವೆಂಬುದನ್ನು ನಿರ್ಧರಿಸಿದವರಾಗಿ ಮಾತೃದೇವತೆಗಳು ಸ್ಕಂದನಿಗೆ ಶರಣಾಗತರಾಗಲು ನಿಶ್ಚಯಿಸಿದವರಾಗಿ ಅವನನ್ನು ಕುರಿತು ಹೀಗೆಂದು ಹೇಳಿದರು :

"ಮಹಾಬಲನಾದ ಸ್ಕಂದನೇ! ನೀನೇ ನಮ್ಮ ಪುತ್ರನಾಗು. ನಮ್ಮೆಲ್ಲರನ್ನೂ ನೀನು ಅಭಿನಂದಿಸು. ನಿನ್ನ ವಿಷಯದಲ್ಲಿ ನಮಗುಂಟಾಗಿರುವ ಪುತ್ರವಾತ್ಸಲ್ಯದಿಂದಾಗಿ ನಮ್ಮ ಸ್ತನಗಳಲ್ಲಿ ಹಾಲು ತುಂಬಿಕೊಂಡು ಹೊರಕ್ಕೆ ಸ್ರವಿಸುತ್ತಿದೆ."

ಮಾತೃಕೆಯರ ಮಾತುಗಳನ್ನು ಕೇಳಿ ಪ್ರಭುವಾದ ಸ್ಕಂದನು ಅವರ ವಿಷಯದಲ್ಲಿ ಪ್ರಸನ್ನನಾಗಿ ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಅವರ ಆಶಯವನ್ನು ಪೂರ್ಣಗೊಳಿಸಿದನು. ಒಬ್ಬೊಬ್ಬರೂ ಸ್ಕಂದನ ಒಂದೊಂದು ಬಾಯಿಗೆ ಹಾಲುಣಿಸಿದರು.

ಬಲಿಷ್ಠರಲ್ಲಿ ಪರಮಬಲಿಷ್ಠನಾದ ಸ್ಕಂದನು ತನ್ನ ತಂದೆಯಾದ ಅಗ್ನಿಯು ತನ್ನ ಸಮೀಪಕ್ಕೆ ಬರುತ್ತಿರುವುದನ್ನು ನೋಡಿದನು. ಅಗ್ನಿಯು ಕುಮಾರನ ಬಳಿಗೆ ಬಂದೊಡನೆಯೇ ಸ್ಕಂದನು ಅವನನ್ನು ಸಹ ಯಥಾಯೋಗ್ಯವಾಗಿ ಸತ್ಕರಿಸಿದನು. ಪುತ್ರನಿಂದ ಸತ್ಕೃತನಾದ ಅಗ್ನಿಯು ಮಾತೃಗಣದೊಡನೆ ಪುತ್ರನ ರಕ್ಷಣಾರ್ಥವಾಗಿ ಅವನ ಬಳಿಯಲ್ಲಿಯೇ ಇದ್ದುಬಿಟ್ಟನು. ಆ ಮಾತೃದೇವತೆಗಳಲ್ಲಿ ಕ್ರೋಧದಿಂದಲೇ ಉತ್ಪನ್ನಳಾಗಿದ್ದ ದೇವತೆಯೊಬ್ಬಳು– ಧಾತ್ರಿಯು ಮಗುವನ್ನು ಸರ್ವದಾ ಜಾಗರೂಕಳಾಗಿ ರಕ್ಷಿಸುವಂತೆ–ಶೂಲ ಪಾಣಿಯಾಗಿ ನಿಂತು ಸರ್ವದಾ ಸ್ಕಂದನನ್ನು ರಕ್ಷಣೆಮಾಡುತ್ತಿದ್ದಳು.

ರಕ್ತಸಾಗರರಾಜನ ಮಗಳಾದ ಮತ್ತು ರಕ್ತಪಾನದಿಂದಲೇ ಜೀವಿಸುತ್ತಿದ್ದ ಮಹಾಕ್ರೂರಳಾದ ಆ ಮಾತೃದೇವತೆಯು ಮಹಾಸೇನನನ್ನು ಯಾವಾಗಲೂ ತನ್ನ ಪುತ್ರನಂತೆ ಗಾಢಾಲಿಂಗನೆಯಲ್ಲಿಯೇ ಅಡಗಿಸಿಕೊಂಡಿರುತ್ತಿದ್ದು (ತನ್ನ ಉಡಿಯಲ್ಲಿಯೇ ಹುದುಗಿಸಿಕೊಂಡು) ಜಾಗರೂಕತೆಯಿಂದ ರಕ್ಷಿಸುತ್ತಿದ್ದಳು.

ವೇದಪ್ರತಿಪಾದ್ಯನಾದ, ಆಡಿನ ಮುಖವನ್ನು ಧರಿಸಿದ ಅಗ್ನಿಯು ತನ್ನ

ಅನೇಕ ಮಕ್ಕಳೊಡನೆ ಆಗಮಿಸಿ, ಆಟದಸಾಮಾನುಗಳಿಂದ ಮಗುವನ್ನು ಆಡಿಸುವಂತೆ–ಪರ್ವತಶಿಖರದಲ್ಲಿದ್ದ ಸ್ಕಂದನನ್ನು ಸಂತೋಷಪಡಿಸಿದನು.”

೨೨೬ನೆಯ ಅಧ್ಯಾಯವು ಮುಗಿಯಿತು.

೨೨೭ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಯುದ್ಧದಲ್ಲಿ ಪರಾಜಿತನಾಗಿ ಶರಣಾಗತನಾಗಿ ಬಂದ ಇಂದ್ರನಿಗೆ ಸ್ಕಂದನ ಅಭಯಪ್ರದಾನ

ಮಾರ್ಕಂಡೇಯರು ಮಹಾಸೇನನ ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

“ಧರ್ಮಜ! ಗ್ರಹಗಳು, ಉಪಗ್ರಹಗಳು, ಋಷಿಗಳು, ಬ್ರಾಹ್ಮೀ-ಮಾಹೇಶ್ವರೀ-ಕೌಮಾರೀ-ವೈಷ್ಣವೀ-ವಾರಾಹೀ-ಇಂದ್ರಾಣೀ-ಚಾಮುಂಡಾ ಈ ಮಾತೃಗಣಗಳೂ, ಅಗ್ನಿಪ್ರಮುಖರಾದ ಅನೇಕ ಪರಿಷದ್ಗಣಗಳೂ, ಘೋರ ರೂಪವನ್ನು ಧರಿಸಿದ ಅನೇಕ ಸ್ವರ್ಗನಿವಾಸಿಗಳೂ ಸಹ ಹಾಲುಣಿಸಿ ಸಂರಕ್ಷಿಸುತ್ತಿದ್ದ ಮಾತೃದೇವತೆಗಳ ಜೊತೆಯಲ್ಲಿ ಮಹಾಸೇನನನ್ನು ಸುತ್ತುವರಿದು ನಿಂತುಕೊಂಡು ಅವನ ಸೇವೆಯನ್ನು ನಾನಾಪ್ರಕಾರವಾಗಿ ಮಾಡುತ್ತಿದ್ದರು.

ಅತ್ತಲಾಗಿ ದೇವತೆಗಳಿಂದ ಮೂದಲಿಸಲ್ಪಟ್ಟ ದೇವೇಂದ್ರನು ತನ್ನ ವಿಜಯದ ವಿಷಯವಾಗಿ ಸಂಶಯವಿದ್ದರೂ ಸಹ, ಅನ್ಯಥಾ ವಿಧಿಯಿಲ್ಲದೇ ಐರಾವತವನ್ನು ಹತ್ತಿ ಸ್ಕಂದನನ್ನು ಜಯಿಸುವ ಆಶಯದಿಂದ ಅವನ ಬಳಿಗೆ ಬಂದನು. ಸರ್ವದೇವತೆಗಳಿಂದಲೂ ಪರಿವೃತನಾಗಿದ್ದ ಇಂದ್ರನು ವಜ್ರಾಯುಧವನ್ನು ಧರಿಸಿದ್ದನು. ಸ್ಕಂದನನ್ನು ಸಂಹರಿಸಲುದ್ದೇಶಿಸಿ ದೇವೇಂದ್ರನು ರಭಸದಿಂದ ಸ್ಕಂದನಲ್ಲಿಗೆ ಬರಲಾಗಿ, ಅವನನ್ನು ಹಿಂಬಾಲಿಸಿ ಕಾಂತಿಯುಕ್ತವಾಗಿದ್ದ ಚಿತ್ರ-ವಿಚಿತ್ರವಾದ ಧ್ವಜಪತಾಕೆಗಳನ್ನು ಹೊಂದಿದ್ದ, ನಾನಾವಿಧವಾದ ವಾಹನಗಳಲ್ಲಿ ಉಪಸ್ಥಿತವಾಗಿದ್ದ, ಸುಭದ್ರವಾದ ಕವಚಗಳನ್ನೂ ನಾನಾ ವಿಧವಾದ ಆಯುಧಗಳನ್ನೂ ಧರಿಸಿದ್ದ ದೇವಸೈನ್ಯವೂ ಸಿಂಹನಾದಮಾಡುತ್ತಾ ಹೊರಟಿತು.

ತನ್ನನ್ನು ಧ್ವಂಸಮಾಡಲು ಆಗಮಿಸಿದ, ಶ್ರೇಷ್ಠವಾದ ಪೀತಾಂಬರವನ್ನು ಧರಿಸಿದ್ದ, ಅಲಂಕೃತನಾಗಿದ್ದ, ಕಾಂತಿಯುಕ್ತನಾಗಿದ್ದ ಇಂದ್ರನನ್ನು ಕಂಡ

ಮಹಾಸೇನನು ಅವನನ್ನು ಅರ್ಧದಾರಿಯಲ್ಲಿಯೇ ಸಂಧಿಸಹೋದನು. ದೇವೇಂದ್ರನು ಸಿಂಹನಾದಮಾಡಿ ತನ್ನನ್ನನುಸರಿಸಿ ಬರುತ್ತಿದ್ದ ದೇವಸೈನ್ಯಕ್ಕೆ ಸಂತೋಷವನ್ನುಂಟುಮಾಡುತ್ತಾ ಕುಮಾರನನ್ನು ಸಂಹರಿಸಲು ಬೇಗನೆ ಬರುತ್ತಿದ್ದನು. ದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಸಹ ಅವನನ್ನು ಪರಿಪರಿಯಾಗಿ ಸ್ತೋತ್ರಮಾಡಿ ಪೂಜಿಸುತ್ತಿದ್ದರು. ಇಷ್ಟರೊಳಗಾಗಿ ತನ್ನೆದುರಿಗೇ ಬಂದ ಮಹಾಸೇನನನ್ನು ಕಂಡೊಡನೆಯೇ ಇಂದ್ರನು ದೇವತೆಗಳಿಂದೊಡಗೂಡಿ ಸಿಂಹನಾದಮಾಡಿದನು. ಗುಹನೂ ಸಹ ಇಂದ್ರನ ಆ ರಣನಿನಾದವನ್ನು ಕೇಳಿದೊಡನೆಯೇ ಸಮುದ್ರವು ಶಬ್ದಮಾಡುವಂತೆ ಘೋರನಿನಾದವನ್ನು ಮಾಡಿದನು. ಸ್ಕಂದನ ಆ ಘೋರಗರ್ಜನೆಯನ್ನು ಕೇಳಿದೊಡನೆಯೇ ಸಮುದ್ರದ ಅಲೆಗಳೋಪಾದಿಯಲ್ಲಿ ಮಹಾನಿನಾದಮಾಡುತ್ತಾ ತಂಡ-ತಂಡವಾಗಿ ಇಂದ್ರನನ್ನನುಸರಿಸಿ ಬರುತ್ತಿದ್ದ ದೇವಸೈನ್ಯವು ಚೇತನಾವಿಹೀನವಾಯಿತೋ ಎಂಬಂತೆ ಅಲ್ಲಲ್ಲಿಯೇ ಭ್ರಾಂತವಾಗಿ ನಿಂತುಬಿಟ್ಟಿತು.

ಅಗ್ನಿಯ ಮಗನಾದ ಸ್ಕಂದನು, ದೇವತೆಗಳು ತನ್ನನ್ನು ಕೊಲ್ಲುವ ಉದ್ದೇಶದಿಂದ ಇಂದ್ರಪ್ರಮುಖರಾಗಿ ಬಂದಿರುವರೆಂಬುದನ್ನು ತಿಳಿದು ಕುಪಿತನಾಗಿ ತನ್ನ ಬಾಯ್ತೆರೆದು ಅನುಸ್ಯೂತವಾದ, ಮಹಾಭಯಂಕರವಾದ ಜ್ವಾಲೆಗಳಿಂದ ಕೂಡಿದ ಅಗ್ನಿಯನ್ನು ಹೊರಗುಗುಳಿದನು. ಸ್ಕಂದನ ಘೋರ ಶಬ್ದವನ್ನು ಕೇಳಿದ ಮಾತ್ರದಿಂದಲೇ ಭೂಮಿಯ ಮೇಲೆ ನಡುಗುತ್ತಾ ನಿಂತಿದ್ದ ದೇವಸೈನ್ಯವನ್ನು ಅವನ ಮುಖಾರವಿಂದದಿಂದ ಹೊರಟ ಮಹಾಜ್ವಾಲೆಯು ಸುಡಲಾರಂಭಿಸಿತು. ಅವರ ತಲೆಗಳು, ಶರೀರಗಳು, ಕೈಗಳು, ಅವರು ಕುಳಿತಿದ್ದ ಯಾನಗಳು–ಎಲ್ಲವೂ ಜ್ವಾಲೆಗೆ ಗುರಿಯಾದುವು. ಸ್ವಸ್ಥಾನದಿಂದ ಚ್ಯುತವಾದ ನಕ್ಷತ್ರಗಳೋಪಾದಿಯಲ್ಲಿ ದೇವಸೈನಿಕರು ಕಾಂತಿಹೀನರಾದರು. ಹೀಗೆ ಸ್ಕಂದನ ಮುಖದಿಂದ ಹೊರಬರುತ್ತಿದ್ದ ಜ್ವಾಲೆಗೆ ಸಿಕ್ಕಿ ಸುಡಲ್ಪಡುತ್ತಿದ್ದ ದೇವತೆಗಳು ಇಂದ್ರನ ಪಕ್ಷವನ್ನು ತೊರೆದು ಮಹಾಸೇನನನ್ನೇ ತಮ್ಮ ರಕ್ಷಣೆಗಾಗಿ ಪ್ರಾರ್ಥಿಸಿ ಅವನಿಂದ ಅಭಯವನ್ನು ಪಡೆದು ಶಾಂತಮನಸ್ಕರಾದರು. ದೇವತೆಗಳಿಂದ ಪರಿತ್ಯಕ್ತನಾದ ಇಂದ್ರನು ಮಹಾ ಕೋಪದಿಂದ ತನ್ನ ವಜ್ರಾಯುಧವನ್ನು ಮಹಾಸೇನನ ಮೇಲೆ ರಭಸದಿಂದ ಪ್ರಯೋಗಿಸಿದನು.

ಇಂದ್ರನ ವಜ್ರಾಯುಧವು ಸ್ಕಂದನ ಬಲಭಾಗವನ್ನು ಘಾಸಿಪಡಿಸಿದುದು ಮಾತ್ರವಲ್ಲದೆ–ಅವನ ಬಲಪಾರ್ಶ್ವವನ್ನೇ ಸೀಳಿಬಿಟ್ಟಿತು. ವಜ್ರಾಯುಧ ಪ್ರಹಾರದಿಂದಲೂ ಸ್ಕಂದನು ಉದ್ವಿಗ್ನನಾಗಲಿಲ್ಲ. ಮಂದಸ್ಮಿತನಾಗಿಯೇ ನಿಂತಿದ್ದನು. ಸೀಳಿಹೋದ ಸ್ಕಂದನ ಬಲಪಾರ್ಶ್ವದಿಂದ ಒಬ್ಬ ಮಹಾಪುರುಷನು ಹುಟ್ಟಿದನು. ಹುಟ್ಟುವಾಗಲೇ ಅವನ ಕೈಯಲ್ಲಿ ಶಕ್ತ್ಯಾಯುಧವಿದ್ದಿತು. ಆ ಮಹಾಪುರುಷನು ದಿವ್ಯಕರ್ಣಕುಂಡಲಗಳನ್ನೂ, ಸುವರ್ಣಕವಚವನ್ನೂ ಧರಿಸಿದ್ದನು. ವಜ್ರಾಯುಧದ ವಿಶನದಿಂದ (ಪ್ರವೇಶದಿಂದ) ಅವನು ಹುಟ್ಟಿದ್ದರಿಂದ ಆ ಮಹಾಪುರುಷನಿಗೆ ವಿಶಾಖನೆಂದೇ ಹೆಸರಾಯಿತು.

ಪ್ರಳಯಕಾಲದ ಅಗ್ನಿಯೋಪಾದಿಯಲ್ಲಿ ಮಹಾತೇಜಸ್ಸಿನಿಂದ ಕೂಡಿದ್ದ ಮತ್ತೊಬ್ಬ ವೀರಪುರುಷನು ತನ್ನ ವಜ್ರಾಯುಧದಿಂದ ಪ್ರಹೃತನಾದ ಸ್ಕಂದನ ಶರೀರದಿಂದ ಉತ್ಪನ್ನನಾದುದನ್ನು ನೋಡಿದೊಡನೆಯೇ ಇಂದ್ರನು ಬಹು ಭೀತನಾಗಿ ಬದ್ಧಾಂಜಲಿಯಾಗಿ ನಿಂತು ಸ್ಕಂದನ ಆಶ್ರಯವನ್ನು ಯಾಚಿಸಿದನು. ಮಹಾಮಹಿಮನಾದ ಸ್ಕಂದನು ಇಂದ್ರನಿಗೂ ಅಭಯವಿತ್ತುದಲ್ಲದೇ ಅವನ ಸೈನ್ಯಕ್ಕೂ ಸಹ ಅಭಯಪ್ರದಾನಮಾಡಿದನು. ಅದರಿಂದ ಪ್ರಹೃಷ್ಟರಾದ ದೇವತೆಗಳು ಮಂಗಳವಾದ್ಯಗಳನ್ನು ಮೊಳಗಿಸಿದರು.”

೨೨೭ನೆಯ ಅಧ್ಯಾಯವು ಮುಗಿಯಿತು.

೨೨೮ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಸ್ಕಂದನ ಅನುಯಾಯಿಗಳ ವರ್ಣನೆ

“ಯುಧಿಷ್ಠಿರ! ಘೋರರೂಪಿಗಳಾದ, ಅದ್ಭುತದರ್ಶನರಾದ ಸ್ಕಂದನ ಅನುಯಾಯಿಗಳ ವಿವರಣೆಯನ್ನು ಕೇಳು. ಇಂದ್ರನ ವಜ್ರಾಯುಧದಿಂದ ಸ್ಕಂದನು ಪ್ರಹೃತನಾದೊಡನೆಯೇ ವಿಶಾಖನ ಜೊತೆಯಲ್ಲಿ ಅನೇಕ ಕುಮಾರರು ಉತ್ಪನ್ನರಾದರು. ದಾರುಣರೂಪಿಗಳಾದ ಆ ಕುಮಾರರು ಹುಟ್ಟಿದ ಮಗುವನ್ನೂ, ಗರ್ಭಸ್ಥವಾಗಿರುವ ಶಿಶುವನ್ನೂ ಅಪಹರಿಸಲು (ಪ್ರಾಣಾಪಹಾರ ಮಾಡಲು) ಯತ್ನಿಸುತ್ತಿರುತ್ತಾರೆ. ಆ ಕುಮಾರರ ಮತ್ತು ವಿಶಾಖನ ಜೊತೆಯಲ್ಲಿ ಮಹಾಬಲಿಷ್ಠೆಯರಾದ ಕನ್ಯೆಯರೂ ಸಹ ಹುಟ್ಟಿದರು. ಆ ಕುಮಾರ-

ಕುಮಾರಿಯರು ವಿಶಾಖನನ್ನೇ ತಂದೆಯೆಂದು ಭಾವಿಸಿದರು. ಆಡಿನ ಮುಖ ವನ್ನು ಧರಿಸಿದ್ದ ಮಹಾಕುಶಲನಾದ ಭದ್ರಶಾಖನೆಂಬುವನು ತನ್ನ ಹೆಣ್ಣು ಮತ್ತು ಗಂಡುಮಕ್ಕಳಿಂದ ಆವೃತನಾಗಿ ದೇವೇಂದ್ರನಿಗೂ ಮತ್ತು ಸ್ಕಂದನಿಗೂ ಯುದ್ಧವಾಗುತ್ತಿದ್ದ ಸಮಯದಲ್ಲಿ ಸ್ಕಂದನಿಗೆ ಬೆಂಗಾವಲಾಗಿ ಮಾತೃಗಣದ ಜೊತೆಯಲ್ಲಿದ್ದನು. ಈ ಕಾರಣದಿಂದಾಗಿ ಸ್ಕಂದನನ್ನೂ ಸಹ ಲೋಕದ ಜನರು ಈ ಕುಮಾರರ ತಂದೆಯೆಂದೇ ಕರೆಯುತ್ತಾರೆ. ಮಕ್ಕಳನ್ನು ಪಡೆಯ ಲಪೇಕ್ಷಿಸುವವರು ರುದ್ರನನ್ನು ಅಗ್ನಿಯ ರೂಪದಲ್ಲಿಯೂ, ಉಮಾದೇವಿ ಯನ್ನು ಸ್ವಾಹಾದೇವಿಯ ರೂಪದಲ್ಲಿಯೂ ಪೂಜಿಸಿ ಬಹುಶೀಘ್ರದಲ್ಲಿಯೇ ಮಕ್ಕಳನ್ನು ಪಡೆಯುತ್ತಾರೆ. ಮಕ್ಕಳಿರುವವರು ತಮ್ಮ ಮಕ್ಕಳ ರಕ್ಷಣೆಗಾಗಿ ಅವರನ್ನು ಪೂಜಿಸುತ್ತಾರೆ. ತಪ ಎಂಬ ಅಗ್ನಿಯಲ್ಲಿ ಹುಟ್ಟಿದ ಕನ್ಯೆಯರು ಸ್ಕಂದನ ಬಳಿಗೆ ಹೋಗಲಾಗಿ ಸ್ಕಂದನು ಅವರುಗಳನ್ನು ಕುರಿತು–"ನಾನು ನಿಮಗೇನು ಮಾಡಿಕೊಡಲಿ?"–ಎಂಬುದಾಗಿ ಪ್ರಶ್ನಿಸಿದನು. ಅದಕ್ಕುತ್ತರವಾಗಿ ಆ ಕನ್ಯೆಯರು ಕೈಜೋಡಿಸಿ ವಿನೀತರಾಗಿ ಹೇಳಿದರು : "ನಾವು ನಿನ್ನ ಪರಮಾನುಗ್ರಹದಿಂದ ಪ್ರಪಂಚದಲ್ಲಿ ಗೌರವಯುತರಾದ ತಾಯಂದಿರೆನಿಸಿ ಕೊಳ್ಳಬೇಕು. ದಯಮಾಡಿ ನಮಗೆ ಅತ್ಯಂತಪ್ರಿಯವಾದ ಈ ಅನುಗ್ರಹವನ್ನು ಮಾಡುವವನಾಗು."

ಅತ್ಯುದಾರನಾದ ಸ್ಕಂದನು ಹಾಗೆಯೇ ಆಗಲೆಂದು ಹೇಳಿ ಅವರನ್ನು ಕುರಿತು ಪುನಃ ಹೇಳಿದನು :

**ಶಿವಾಶ್ಚೈವಾಶಿವಾಶ್ಚೈವ ಭವಿಷ್ಯಧ್ವಂ ಪೃಥಗ್ವಿಧಾಃ ।**

"ನೀವು ನಿಮ್ಮಲ್ಲಿಯೇ ವಿಭಾಗಮಾಡಿಕೊಳ್ಳಿರಿ. ಕೆಲವರು ಶಿವೆಯ ರಾಗಿಯೂ ಕೆಲವರು ಅಶಿವೆಯರಾಗಿಯೂ ಆಗಿರಿ. (ಅಶಿವೆಯರು ಅಮಂಗಳ ವನ್ನುಂಟುಮಾಡುವವರು : ಲೋಕಕ್ಕೆ ಉಪದ್ರವವನ್ನು ಕೊಡತಕ್ಕವರು) ಕಾರ್ಯವನ್ನು ಪ್ರಾರಂಭಿಸಿದನಂತರವೇ ಶಿವೆಯರಿಗೆ (ಲೋಕಕ್ಕೆ ಹಿತವನ್ನುಂಟು ಮಾಡುವವರಿಗೆ) ಗೌರವ-ಪುರಸ್ಕಾರಗಳು ಸಿಕ್ಕುವುವು. ಸರ್ವರೂ ಮಂಗಳ ದಾಯಕರಾಗಿದ್ದರೂ ಕೀರ್ತಿಯನ್ನು ಗಳಿಸಲಾರಿರಿ. ಸರ್ವರೂ ಅಮಂಗಳ ದಾಯಕರಾಗಿದ್ದರೂ ಸಹ ಪ್ರಯೋಜನವಾಗುವುದಿಲ್ಲ. ಆದುದರಿಂದ ನಿಮ್ಮ

ನಿಮ್ಮಲ್ಲಿಯೇ ಕೆಲವರು ಶಿವೆಯರಾಗಿಯೂ ಮತ್ತೆ ಕೆಲವರು ಅಶಿವೆಯರಾಗಿಯೂ ವಿಭಾಗಮಾಡಿಕೊಂಡು ಕಾರ್ಯೋನ್ಮುಖರಾಗಿರಿ.”

ಸ್ಕಂದನ ಮಾತುಗಳನ್ನು ಕೇಳಿ ಅವನನ್ನೇ ತಮ್ಮ ಪುತ್ರನೆಂದು ಭಾವಿಸಿದವರಾಗಿ ಆ ಮಾತೃದೇವತೆಗಳು ಹೊರಟುಹೋದರು. ಕಾಕೀ, ಹಲಿಮಾ, ಮಾಲಿನೀ, ಬೃಂಹತಾ, ಆರ್ಯಾ, ಪಲಾಲಾ, ವೈಮಿತ್ರಾ–ಇವರೇ ಏಳು ಮಂದಿ ಶಿಶುಮಾತೆಯರು.

ಸ್ಕಂದನ ಅನುಗ್ರಹದಿಂದಾಗಿ ಅವರು ವೀರ್ಯಸಂಪನ್ನನಾದ, ಮಹಾ ಭಯಂಕರನಾದ, ಕೆಂಪಾದ ಕಣ್ಣುಗಳಿಂದ ಕೂಡಿದ್ದ, ಘೋರರೂಪಿಯಾದ ಶಿಶುವೆಂಬ ಹೆಸರಿನ ಪುತ್ರನನ್ನು ಪಡೆದರು. ಸ್ಕಂದನ ಮಾತೃಗಣಗಳಿಂದ ಹುಟ್ಟಿದ ಆ ಶಿಶುವು ಸಪ್ತಮಾತೃಕೆಯರಿಂದ ಕೂಡಿ ಎಂಟನೆಯ ವೀರನೆಂದು ಪರಿಗಣಿತನಾಗಿರುತ್ತಾನೆ. ಛಾಗಮುಖನಾದ ಸ್ಕಂದನೇ ಅವರ ಮಧ್ಯದಲ್ಲಿರುವ ಒಂಬತ್ತನೆಯ ವೀರನೆಂದು ಪರಿಗಣಿತನಾಗುತ್ತಾನೆ. ಸ್ಕಂದನ ಆರನೆಯ ಮುಖವು ಆಡಿನ ಮುಖದ ರೀತಿಯಲ್ಲಿಯೇ ಇರುವುದು. ಮುಖಗಳ ಮಧ್ಯೇ ಇರುವ ಆಡಿನ ಮುಖವನ್ನು ಅನುದಿನವೂ ಮಾತೃಗಣದವರು ಪೂಜಿಸುತ್ತಾರೆ. ಆ ಛಾಗಮಯಮುಖವು ಉಳಿದ ಐದು ಮುಖಗಳಿಗಿಂತಲೂ ಅತ್ಯಂತ ಶ್ರೇಷ್ಠವಾದುದೆಂದು ಹೇಳುತ್ತಾರೆ. ಆ ಮುಖದಿಂದಲೇ ಭದ್ರಶಾಖನನ್ನೂ ದಿವ್ಯವಾದ ಮಹಾಶಕ್ತಿಯನ್ನೂ ಸ್ಕಂದನು ಸೃಷ್ಟಿಸಿದನು. ಧರ್ಮಜ! ಶುಕ್ಲಪಕ್ಷದ ಪಂಚಮಿಯಂದು ಈ ವಿಧವಾದ ಅನೇಕಾನೇಕ ಚಿತ್ರ-ವಿಚಿತ್ರರಾದ ಪಾರ್ಷದರು ಉತ್ಪನ್ನರಾದರು. ಷಷ್ಠಿಯ ದಿವಸ ಘೋರವಾದ ಮಹಾಯುದ್ಧವು ನಡೆಯಿತು.”

೨೨೮ನೆಯ ಅಧ್ಯಾಯವು ಮುಗಿಯಿತು.

೨೨೯ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಇಂದ್ರನೊಡನೆ ಸ್ಕಂದನ ಸಂಭಾಷಣೆ : ಸ್ಕಂದನು ದೇವಸೈನ್ಯಕ್ಕೆ ಅಧಿಪತಿಯಾದುದು ಮತ್ತು ದೇವಸೇನೆಯನ್ನು ವಿವಾಹವಾದುದು

“ಯುಧಿಷ್ಠಿರ! ಸುವರ್ಣಕವಚವನ್ನೂ, ಸ್ವರ್ಣಮಾಲೆಯನ್ನೂ

ಧರಿಸಿದ್ದ, ಸುವರ್ಣಮಯವಾದ ಕಿರೀಟವನ್ನು ಧರಿಸಿದ್ದ, ಸುವರ್ಣದ ಕಾಂತಿಯಂತೆ ಕಾಂತಿಯುಕ್ತವಾದ ಕಣ್ಣುಗಳಿಂದ ಕೂಡಿದ್ದ, ಮಹಾಪ್ರಭೆಯಿಂದ ಕೂಡಿದ್ದ ಕೆಂಪಾದ ರೇಷ್ಮೆಯ ವಸ್ತ್ರವನ್ನು ಧರಿಸಿದ್ದ, ತೀಕ್ಷ್ಣವಾದ ದಂತ ಪಂಕ್ತಿಗಳಿಂದ ಕೂಡಿದ್ದ ಮುಖಾರವಿಂದಗಳನ್ನು ಹೊಂದಿದ್ದ, ಸುಂದರಕಾಯನಾಗಿಯೂ–ಸುಮನೋಹರನಾಗಿಯೂ ಇದ್ದ, ಸರ್ವಲಕ್ಷಣಸಂಪನ್ನನಾಗಿದ್ದ, ಮೂರು ಲೋಕಗಳಿಗೂ ಪರಮಪ್ರಿಯನಾಗಿದ್ದ, ವರದನಾದ, ಶೂರನಾದ, ಯುವಕನಾದ, ಥಳ-ಥಳಿಸುವ ಕರ್ಣಕುಂಡಲಗಳನ್ನು ಧರಿಸಿದ್ದ ಸ್ಕಂದನು ಸಕಲಪರಿವಾರಗಳೊಡನೆ ರತ್ನಸಿಂಹಾಸನದಲ್ಲಿ ಕುಳಿತಿರಲಾಗಿ, ಕಮಲದಂತೆ ಶೋಭಾಯಮಾನಳಾದ ಕಾಂತಿದೇವತೆಯು ಸ್ಕಂದನ ಸಮೀಪಕ್ಕೆ ಬಂದು ಅವನ ಆಶ್ರಯವನ್ನು ಪ್ರಾರ್ಥಿಸಿ ಪಡೆದುಕೊಂಡಳು. ಕಾಂತಿಯಿಂದ ಕೂಡಿದ, ಮಹಾಯಶಸ್ಕನಾದ, ಸುಕುಮಾರನಾದ, ಭೂತಗಣಗಳಿಂದ ಆವೃತನಾದ ಸ್ಕಂದನು ಪೂರ್ಣಿಮೆಯ ಚಂದ್ರನಂತೆಯೇ ಪ್ರಕಾಶಿಸಿದನು.

ಮಹಾತ್ಮರಾದ ಬ್ರಾಹ್ಮಣರು ಮಹಾಬಲನಾದ ಸ್ಕಂದನನ್ನು ಯಥಾಯೋಗ್ಯವಾಗಿ ಸಂಪೂಜಿಸಿದರು. ಅಲ್ಲಿದ್ದ ಮಹರ್ಷಿಗಳೂ ಸಹ ಸ್ಕಂದನನ್ನು ಕುರಿತು ಹೀಗೆಂದು ಹೇಳಿದರು :

**ಹಿರಣ್ಯಗರ್ಭ ಭದ್ರಂ ತೇ ಲೋಕಾನಾಂ ಶಙ್ಕರೋ ಭವ ।**
**ತ್ವಯಾ ಷಡ್ರಾತ್ರಜಾತೇನ ಸರ್ವೇ ಲೋಕಾ ವಶೀಕೃತಾಃ ॥೬॥**

**ಅಭಯಂ ಚ ಪುನರ್ದತ್ತಂ ತ್ವಯೈವೈಷಾಂ ಸುರೋತ್ತಮ ।**
**ತಸ್ಮಾದಿನ್ದ್ರೋ ಭವಾನಸ್ತು ತ್ರೈಲೋಕ್ಯಸ್ಯಾಭಯಂಕರಃ ॥೭॥**

“ಹಿರಣ್ಯಗರ್ಭನೇ! (ಬ್ರಹ್ಮಸದೃಶನೇ)! ನಿನಗೆ ಮಂಗಳವಾಗಲಿ. ಸಕಲಲೋಕಗಳಿಗೂ ಮಂಗಳವನ್ನುಂಟುಮಾಡುವವನಾಗು. ಕೇವಲ ಆರು ರಾತ್ರಿಗಳ ಹಿಂದೆ ಹುಟ್ಟಿದ ನಿನ್ನಿಂದ ಸಕಲಲೋಕಗಳೂ ವಶೀಕೃತವಾಗಿವೆ. ಇವರೆಲ್ಲರಿಗೂ ನೀನು ಪುನಃ ಅಭಯಪ್ರದಾನವನ್ನೂ ಮಾಡಿರುವೆ. ಸುರೋತ್ತಮ! ಆದುದರಿಂದ ನೀನು ಮೂರು ಲೋಕಗಳಿಗೂ ಸಕಲಕಾಲಗಳಲ್ಲಿಯೂ ಅಭಯಪ್ರದಾನಮಾಡುವವನಾಗಿ ತ್ರೈಲೋಕ್ಯಾಧಿಪತಿಯಾದ ಇಂದ್ರನಾಗು. (ಸರ್ವದಾ ಸಕಲರಿಗೂ ಸಂರಕ್ಷಕನಾಗಿರು.)”

ಋಷಿಗಳ ಮಾತುಗಳನ್ನು ಕೇಳಿ ಸ್ಕಂದನು ಹೇಳಿದನು : "ಋಷಿ ಸತ್ತಮರೇ! ಇಂದ್ರನು ಸಕಲಲೋಕಗಳಿಗೂ ಏನು ಮಾಡುತ್ತಾನೆ? (ಇಂದ್ರಪದವಿಯ ಕರ್ತವ್ಯವೇನಿದೆ?) ಈ ದೇವಗಣವನ್ನು ಸುರೇಶ್ವರನು ಅನುದಿನವೂ ಹೇಗೆ ಕಾಪಾಡುತ್ತಾನೆ?–ಎಲ್ಲವನ್ನೂ ವಿಶದವಾಗಿ ಹೇಳಿರಿ."

ಋಷಿಗಳು ಹೇಳಿದರು :

**ಇನ್ದ್ರೋ ದಧಾತಿ ಭೂತಾನಾಂ ಬಲಂ ತೇಜಃ ಪ್ರಜಾಃ ಸುಖಮ್ ।**
**ತುಷ್ಟಃ ಪ್ರಯಚ್ಛತಿ ತಥಾ ಸರ್ವಾನ್ಕಾಮಾನ್ಸುರೇಶ್ವರಃ ॥೯॥**

"ಇಂದ್ರನು ತುಷ್ಟನಾದರೆ (ಇಂದ್ರನನ್ನು ಪೂಜಾದಿಗಳಿಂದ ಸಂತೋಷ ಗೊಳಿಸಿದರೆ) ಪ್ರಪಂಚದ ಪ್ರಾಣಿಗಳಿಗೆ ಬಲ, ತೇಜಸ್ಸು, ಸಂತಾನ, ಸುಖ ಮುಂತಾದ ಸರ್ವಕಾಮನೆಗಳನ್ನೂ ದಯಪಾಲಿಸುತ್ತಾನೆ.

**ದುರ್ವೃತ್ತಾನಾಂ ಸಂಹರತಿ ವೃತಸ್ಥಾನಾಂ ಪ್ರಯಚ್ಛತಿ ।**
**ಅನುಶಾಸ್ತಿ ಚ ಭೂತಾನಿ ಕಾರ್ಯೇಷು ಬಲಸೂದನಃ ॥೧೦॥**

ದುಷ್ಟರಾದವರನ್ನು ಶಿಕ್ಷಿಸುವುದೂ, ಶಿಷ್ಟರಾದವರನ್ನು ರಕ್ಷಿಸುವುದೂ ಸಹ ಅವನ ಕಾರ್ಯವೇ ಆಗಿದೆ. ಬಲಸೂದನನಾದ ಇಂದ್ರನು ಪ್ರಾಣಿಗಳಿಗೆ ತಮ್ಮ ಕರ್ತವ್ಯಗಳನ್ನು ಮಾಡಲು ಅನುಶಾಸನಮಾಡುತ್ತಾನೆ. (ಮಾನವರು ತಮ್ಮ-ತಮ್ಮ ವರ್ಣಾಶ್ರಮಧರ್ಮಗಳಿಗೆ ಅನುಸಾರವಾಗಿರಲು ಅನುಶಾಸನ ಮಾಡುತ್ತಾನೆ.)

**ಅಸೂರ್ಯೇ ಚ ಭವೇತ್ಸೂರ್ಯಸ್ತಥಾಚನ್ದ್ರೇ ಚ ಚನ್ದ್ರಮಾಃ ।**
**ಭವತ್ಯಗ್ನಿಶ್ಚ ವಾಯುಶ್ಚ ಪೃಥಿವ್ಯಾಪಶ್ಚ ಕಾರಣೈಃ ॥೧೧॥**

**ಏತದಿನ್ದ್ರೇಣ ಕರ್ತವ್ಯಮಿನ್ದ್ರೇ ಹಿ ವಿಪುಲಂ ಬಲಮ್ ।**
**ತ್ವಂ ಚ ವೀರ ಬಲೀ ಶ್ರೇಷ್ಠಸ್ತಸ್ಮಾದಿನ್ದ್ರೋ ಭವಸ್ವ ನಃ ॥೧೨॥**

ಸೂರ್ಯನಿಲ್ಲದೆಡೆಯಲ್ಲಿ ಸೂರ್ಯನಾಗಿಯೂ, ಚಂದ್ರನಿಲ್ಲದೆಡೆಯಲ್ಲಿ ಚಂದ್ರನಾಗಿಯೂ ಕರ್ತವ್ಯವನ್ನು ನಿರ್ವಹಿಸುತ್ತಾನೆ. ಸಮಯಗಳಲ್ಲಿ ಅಗ್ನಿ ಯಾಗಿಯೂ, ವಾಯುವಾಗಿಯೂ, ಪೃಥಿವಿಯಾಗಿಯೂ, ನೀರಾಗಿಯೂ ಸಹ ಪರಿವರ್ತನೆಹೊಂದಿ ಕಾರ್ಯಮಾಡುವುದೂ ಉಂಟು. ಇವುಗಳು ಇಂದ್ರನು

ಅನುದಿನವೂ ಮಾಡಬೇಕಾಗಿರುವ ಕರ್ತವ್ಯಗಳಾಗಿವೆ. ಈ ಕರ್ತವ್ಯಗಳನ್ನು ನಿರ್ವಹಿಸಲು ಇಂದ್ರನಿಗೆ ಯಥೇಷ್ಟವಾದ ಬಲವೂ ಇರುವುದು. ನೀನೂ ಸಹ ಮಹಾಬಲಿಷ್ಠನೂ ಮಹಾವೀರನೂ ಆಗಿರುತ್ತೀಯೆ. ಆದುದರಿಂದ ನೀನೇ ನಮಗೆ ಇಂದ್ರನಾಗು."

ಋಷಿಗಳು ಹೀಗೆಂದು ಹೇಳಿದನಂತರ–ತನ್ನ ಅಭಿಪ್ರಾಯವು ಬೇರೆಯದಾಗಿದೆಯೆಂಬ ಭಾವನೆಯನ್ನು ತೊಡೆದುಹಾಕಲು–ಸ್ವತಃ ಇಂದ್ರನೇ ಸ್ಕಂದನನ್ನು ಕುರಿತು ಹೇಳಿದನು :

**ಭವಸ್ವೇನ್ದ್ರೋ ಮಹಾಬಾಹೋ ಸರ್ವೇಷಾಂ ನಃ ಸುಖಾವಹಃ ।**
**ಅಭಿಷಿಚ್ಯಸ್ವ ಚೈವಾದ್ಯ ಪ್ರಾಪ್ತರೂಪೋಽಸಿ ಸತ್ತಮ ॥೧೩॥**

"ಸ್ಕಂದ! ಮಹಾಬಾಹೋ! ನಮ್ಮೆಲ್ಲರಿಗೂ ನೀನೇ ಇಂದ್ರನಾಗಿ ಸುಖವನ್ನುಂಟುಮಾಡುವವನಾಗು. ನೀನು ಇಂದ್ರಪದವಿಗೆ ಅರ್ಹನಾಗಿರುವೆ. ಆದುದರಿಂದ ನಾವೆಲ್ಲರೂ ನಿನಗೀಗಲೇ ಇಂದ್ರಪದವಿಯ ಪಟ್ಟಗಟ್ಟುತ್ತೇವೆ."

ಇಂದ್ರನ ಮಾತನ್ನು ಕೇಳಿಯೂ ಉದಾರಿಯಾದ ಸ್ಕಂದನು ಹೇಳಿದನು:

**ಶಾಧಿ ತ್ವಮೇವ ತ್ರೈಲೋಕ್ಯಮವ್ಯಗ್ರೋ ವಿಜಯೇ ರತಃ ।**
**ಅಹಂ ತೇ ಕಿಙ್ಕರಃ ಶಕ್ರ ನ ಮಮೇನ್ದ್ರತ್ವಮೀಪ್ಸಿತಮ್ ॥೧೪॥**

"ಮಹೇಂದ್ರ! ನೀನೇ ಈ ಮೂರು ಲೋಕಗಳನ್ನೂ ಅವ್ಯಗ್ರನಾಗಿ ಶಾಸನಮಾಡುವವನಾಗು. ಶತ್ರುಗಳೊಡನೆ ಯುದ್ಧದಲ್ಲಿ ಜಯಗಳಿಸುವ ಉತ್ಸಾಹವು ನಿನಗೆ ಶಾಶ್ವತವಾಗಿರಲಿ. ನಾನು ನಿನ್ನ ಕಿಂಕರನಾಗಿಯೇ ಇರುತ್ತೇನೆ. ನೀನು ಹೇಳಿದುದನ್ನು ಮಾಡುತ್ತೇನೆ. ನಿನ್ನ ಇಂದ್ರಪದವಿಯನ್ನು ನಾನು ಯಾವಾಗಲೂ ಇಚ್ಛಿಸುವುದಿಲ್ಲ."

"ಹಾಗಲ್ಲ ಕುಮಾರ! ನಿನಗಿರುವ ಬಲವು ಅಪರಿಮಿತವಾದುದು. ಮಹಾವೀರನೇ! ದೇವತೆಗಳ ಸರ್ವಶತ್ರುಗಳನ್ನೂ ವಿನಾಶಗೊಳಿಸಲು ನೀನು ಸಮರ್ಥನಾಗಿರುವೆ. ಇಂದ್ರನ ಸ್ಥಾನವನ್ನು ಸ್ವೀಕರಿಸಿ ದೇವತೆಗಳ ಶತ್ರುಗಳೆಲ್ಲರನ್ನೂ ನಿಗ್ರಹಿಸುವವನಾಗು. ತ್ರಿಲೋಕಗಳೂ (ಮೂರು ಲೋಕಗಳ

ಜನರೂ) ನಿನ್ನ ಪರಮಾದ್ಭುತವಾದ ಪರಾಕ್ರಮವನ್ನು ನೋಡಿ ವಿಸ್ಮಯ ಗೊಂಡಿವೆ. ನಿನ್ನ ಮುಂದೆ ನಾನು ಬಲಹೀನನಾಗಿರುತ್ತೇನೆ ಮತ್ತು ನಿನ್ನಿಂದ ಪರಾಜಿತನೂ ಆಗಿರುತ್ತೇನೆ. ನನ್ನ ವಜ್ರಾಯುಧವೂ ಸಹ ನಿನ್ನ ಮುಂದೆ ನಿರರ್ಥಕವಾಗಿಹೋಯಿತು. ಹೀಗಿರುವಾಗ ನಾನು ಇಂದ್ರಪದವಿಯಲ್ಲಿಯೇ ಮುಂದುವರಿದರೆ ಈ ಲೋಕಗಳ ಜನರು ಖಂಡಿತವಾಗಿಯೂ ನನಗೆ ಪುರಸ್ಕಾರವನ್ನೀಯರು. ನನ್ನನ್ನು ತೃಣಪ್ರಾಯವಾಗಿ ಕಾಣುತ್ತಾರೆ. ಇಷ್ಟು ಮಾತ್ರವಲ್ಲ. ನನಗೂ ಮತ್ತು ನಿನಗೂ ವಿರಸವನ್ನು ತಂದೊಡ್ಡುತ್ತಾರೆ. ನನ್ನ ಕಡೆಗೂ ಹಲವಾರು ಮಂದಿ ಸೇರುತ್ತಾರೆ. ನಿನ್ನ ಕಡೆಗೂ ಹಲವಾರು ಮಂದಿ ಸೇರುತ್ತಾರೆ. ಮುಂದೆ ನಮ್ಮೆರಡು ಪಂಗಡಗಳಿಗೂ ಯುದ್ಧವಾಗುವುದು ಅನಿವಾರ್ಯವಾಗುತ್ತದೆ. ಆ ಯುದ್ಧದಲ್ಲಿಯೂ ಸಹ ನೀನೇ ವಿಜಯ ಹೊಂದುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ನೀನು ವಿಜಯವನ್ನೂ ಹೊಂದುವೆ ; ಮೂರು ಲೋಕಗಳಿಗೂ ಅಧಿಪತಿಯೂ ಆಗುವೆ. ಇಷ್ಟೆಲ್ಲಾ ಹಗರಣವು ನಡೆದಮೇಲೆ ನೀನು ಮೂರು ಲೋಕಗಳಿಗೂ ಅಧಿಪತಿಯಾಗು ವುದಕ್ಕಿಂತಲೂ ಈಗಲೇ ನಾನು ತ್ರೈಲೋಕ್ಯಾಧಿಪತ್ಯವನ್ನು ಸ್ವತಃ ನಿನಗೇ ವಹಿಸಿಬಿಡುತ್ತೇನೆ. ನೀನೇ ಇಂದ್ರನಾಗು. ಈ ವಿಷಯದಲ್ಲಿ ಪುನರಾಲೋಚಿ ಸುವ ಕಾರಣವಿಲ್ಲ!"

ಇಂದ್ರನು ಹೇಳಿದ ಮಾತುಗಳಿಗೆ ಕುಮಾರಸ್ವಾಮಿಯು ಯಥಾಯೋಗ್ಯ ವಾಗಿಯೇ ಉತ್ತರಿಸಿದನು :

**ತ್ವಮೇವ ರಾಜಾ ಭದ್ರಂ ತೇ ತ್ರೈಲೋಕ್ಯಸ್ಯ ಮಮೈವ ಚ ।**
**ಕರೋಮಿ ಕಿಂ ಚ ತೇ ಶಕ್ರ ಶಾಸನಂ ತದ್ಬ್ರವೀಹಿ ಮೇ ॥೧೯॥**

"ಮಹೇಂದ್ರ! ಮೂರು ಲೋಕಗಳಿಗೂ ಮತ್ತು ನನಗೂ ಯಥಾ ಪೂರ್ವವಾಗಿ ನೀನೇ ರಾಜನಾಗಿರು. ನಿನಗೆ ಮಂಗಳವಾಗಲಿ. ಇಷ್ಟು ಮಾತ್ರವಲ್ಲ. ನೀನು ನನಗೆ ಏನು ಶಾಸನಮಾಡುವೆಯೋ, ಏನೆಂದು ಆಜ್ಞಾಪಿಸುವೆಯೋ ಅದರಂತೆಯೇ ನಾನು ಮಾಡುವೆನು. ನಾನು ಮಾಡ ಬೇಕಾದ ಕಾರ್ಯವೇನಾದರೂ ಇದ್ದರೆ ಈಗಲೇ ಆಜ್ಞಾಪಿಸು. ಒಡನೆಯೇ ಮಾಡಿಕೊಡುವೆನು."

"ಕುಮಾರ! ನಾನು ಆಜ್ಞಾಪಿಸುವುದಂತಿರಲಿ. ನಿನ್ನ ನಿರ್ದೇಶನದಂತೆ ನಿನ್ನ ಮಾತಿನಂತೆ ನಾನು ಇಂದ್ರಪದವಿಯಲ್ಲಿ ಮುಂದುವರಿಯುತ್ತೇನೆ. (ನೀನು ಮಹಾಬಲಿಷ್ಠನಾಗಿರುವುದರಿಂದ ನೀನು ಹೇಳಿದಂತೆ ಕೇಳುವುದೇ ಇಂದಿನ ನನ್ನ ಕರ್ತವ್ಯವಾಗಿದೆ.) 'ನಾನು ಮಾಡಬೇಕಾದ ಕಾರ್ಯವೇನಾದರೂ ಇದ್ದರೆ ಈಗಲೇ ಆಜ್ಞಾಪಿಸು' ಎಂದೂ ನೀನು ಹೇಳಿದೆ. ಈ ಮಾತನ್ನು ನೀನು ಪರಿಹಾಸಕ್ಕಾಗಿ ಆಡಿರುವೆಯೋ ಅಥವಾ ನಿಶ್ಚಯವಾಗಿ ಹೇಳಿರುವೆಯೋ ಎಂಬುದೂ ನನಗೆ ತಿಳಿಯದು.

ಈ ಮಾತನ್ನು ನೀನು ಪರಿಹಾಸಕ್ಕಲ್ಲದೆ ಸತ್ಯವಾಗಿಯೇ ಹೇಳಿದ್ದರೆ, ನಾನು ಹೇಳುವ ಮಾತನ್ನು ನಡೆಸಿಕೊಡುವ ಆಶಯವು ಸಂಪೂರ್ಣವಾಗಿ ನಿನಗಿದ್ದರೆ ನಾನು ಹೇಳುವುದನ್ನು ಕೇಳು.

**ಅಭಿಷಿಚ್ಯಸ್ವ ದೇವಾನಾಂ ಸೈನಾಪತ್ಯೇ ಮಹಾಬಲ ॥೨೧॥**

ಮಹಾಬಲಿಷ್ಠನಾದ ಸ್ಕಂದನೇ! ದೇವಸೈನ್ಯಕ್ಕೆ ಅಧಿಪತಿಯಾಗಿ ಪಟ್ಟಾಭಿಷಿಕ್ತನಾಗು."

ಇಂದ್ರನ ಮಾತುಗಳನ್ನು ಕೇಳಿ ನಸುನಗುತ್ತಾ ಸ್ಕಂದನು ಹೇಳಿದನು :

**ದಾನವಾನಾಂ ವಿನಾಶಾಯ ದೇವಾನಾಮರ್ಥಸಿದ್ಧಯೇ ।**
**ಗೋಬ್ರಾಹ್ಮಣಹಿತಾರ್ಥಾಯ ಸೈನಾಪತ್ಯೇಽಭಿಷಿಞ್ಚ ಮಾಮ್ ॥೨೨॥**

"ಇಂದ್ರ! ದಾನವರ ವಿನಾಶಕ್ಕೂ, ದೇವತೆಗಳ ಇಷ್ಟಾರ್ಥಸಿದ್ಧಿಗೂ, ಗೋ-ಬ್ರಾಹ್ಮಣರ ಹಿತಾರ್ಥವಾಗಿಯೂ ದೇವಸೈನ್ಯಕ್ಕೆ ಅಧಿಪತಿಯಾಗಿ (ದಂಡನಾಯಕನಾಗಿ) ನನಗೆ ಪಟ್ಟಾಭಿಷೇಕವನ್ನು ಮಾಡುವವನಾಗು."

ಯುಧಿಷ್ಠಿರ! ಸ್ಕಂದನು ಹೀಗೆಂದು ಹೇಳಿದೊಡನೆಯೇ ಪಟ್ಟಾಭಿಷೇಕಕ್ಕೆ ಬೇಕಾದ ಸಾಮಗ್ರಿಗಳೆಲ್ಲವೂ ಸಿದ್ಧವಾದುವು. ದೇವದುಂದುಭಿ ನಿನಾದ ಗಳೊಡನೆ ಕುಮಾರನಿಗೆ ದೇವಸೇನಾಧಿಪತ್ಯದ ಪಟ್ಟಗಟ್ಟಿದರು. ದೇವೇಂದ್ರ ನಿಂದಲೂ ದೇವಗಣಗಳಿಂದಲೂ ಅಭಿಷಿಕ್ತನಾದ, ಋಷಿ-ಮಹರ್ಷಿಗಳಿಂದ ಸಂಪೂಜಿತನಾದ ಸ್ಕಂದನು ಬಹುವಾಗಿ ಶೋಭಿಸಿದನು. ಪಟ್ಟಾಭಿಷೇಕ ಕಾಲ ದಲ್ಲಿ ಅವನ ತಲೆಯ ಮೇಲೆ ಹಿಡಿದಿದ್ದ ಸುವರ್ಣಮಯವಾದ ಛತ್ರಿಯು,

ಪ್ರದೀಪ್ತನಾಗಿ ಮಂಡಲಾಕಾರವಾಗಿ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನೋಪಾದಿಯಲ್ಲಿ ಕಾಣುತ್ತಿದ್ದಿತು.

ತ್ರಿಪುರಹಂತಕನಾದ, ವೃಷಭಧ್ವಜನಾದ ಪರಮೇಶ್ವರನು ಉಮಾ ಸಮೇತನಾಗಿ ಪಟ್ಟಾಭಿಷೇಕದ ಶುಭಮುಹೂರ್ತಕ್ಕೆ ಆಗಮಿಸಿ ವಿಶ್ವಕರ್ಮನಿಂದ ನಿರ್ಮಿತವಾಗಿದ್ದ ಸುವರ್ಣಮಾಲಿಕೆಯನ್ನು ಕುಮಾರನ ಕೊರಳಿಗೆ ಹಾಕಿದನು.

ಧರ್ಮಜ! ಬ್ರಾಹ್ಮಣರು ಅಗ್ನಿಯನ್ನೇ ರುದ್ರನೆಂದೂ ಹೇಳುವರು. ಆದುದರಿಂದಲೇ ಸ್ಕಂದನು ರುದ್ರನ ಮಗನೆಂದೂ ಪ್ರಸಿದ್ಧನಾಗಿರುತ್ತಾನೆ. ಉತ್ಸೃಷ್ಟವಾದ ರುದ್ರನ ರೇತಸ್ಸು ಶ್ವೇತಪರ್ವತವಾಗಿ ಪರಿಣಮಿಸಿದ್ದಿತು. ಅದೇ ಶ್ವೇತಪರ್ವತದಲ್ಲಿಯೇ ಸ್ವಾಹಾದೇವಿಯಿಂದ ತಂದಿಡಲ್ಪಟ್ಟ ಅಗ್ನಿಯ ರೇತಸ್ಸು ಕೃತ್ತಿಕಾನಕ್ಷತ್ರದೇವತೆಗಳಿಂದ ರಕ್ಷಿಸಲ್ಪಡುತ್ತಿದ್ದಿತು.

ಮಹಾಸೇನನು ತನ್ನ ಮಗನೆಂಬ ಕಾರಣದಿಂದಲೇ ಶಿವನು ಪಾರ್ವತೀ ಸಮೇತನಾಗಿ ಅವನ ಪಟ್ಟಾಭಿಷೇಕಮಹೋತ್ಸವಕ್ಕೆ ಬಂದು ಸುವರ್ಣ ಮಾಲೆಯನ್ನು ಅವನ ಕೊರಳಿಗೆ ಹಾಕಿ ಸತ್ಕರಿಸಿದನು. ನಯನಮನೋಹರವಾದ ಆ ದಿವ್ಯದೃಶ್ಯವನ್ನು ನೋಡಿದ ದೇವತೆಗಳು ಗುಣವಂತರಲ್ಲಿ ಶ್ರೇಷ್ಠನಾದ ಗುಹನನ್ನು ಶಿವಸುತನೆಂದೇ ಕರೆದರು. ಈ ವಿಷಯವನ್ನು ಹೀಗೂ ನಿರೂಪಿಸಬಹುದಾಗಿದೆ, ಯುಧಿಷ್ಠಿರ!

**ಅನುಪ್ರವಿಶ್ಯ ರುದ್ರೇಣ ವಹ್ನಿಂ ಜಾತೋ ಹ್ಯಯಂ ಶಿಶುಃ ।**
**ತತ್ರ ಜಾತಸ್ತತಃ ಸ್ಕಂದೋ ರುದ್ರಸೂನುಸ್ತತೋಽಭವತ್ ॥೩೦॥**

ಅಗ್ನಿಯೊಳಗೆ ಅನುಪ್ರವಿಷ್ಟನಾಗಿದ್ದ (ಸೇರಿಕೊಂಡಿದ್ದ) ರುದ್ರನಿಂದ ಆ ಶಿಶುವು ಹುಟ್ಟಿತು. ಆ ಶಿಶುವು ಮೊದಲು ಸ್ಕಂದನೆಂಬ ಅನ್ವರ್ಥನಾಮವನ್ನು ಪಡೆದು ಅನಂತರದಲ್ಲಿ ಶಿವಸುತನೆಂದು ಪ್ರಸಿದ್ಧಿಹೊಂದಿತು. ಆದುದರಿಂದ ಸುರಶ್ರೇಷ್ಠನಾದ ಸ್ಕಂದನು–ರುದ್ರ, ಅಗ್ನಿ, ಸ್ವಾಹಾ, ಆರು ಕೃತ್ತಿಕಾದೇವತೆಗಳು ಅಥವಾ ಆರು ಋಷಿಪತ್ನಿಯರು–ಇವರುಗಳ ಕಾರಣದಿಂದ ಹುಟ್ಟಿದನು. ಹೀಗೆ ಶಿವನ ಮಗನಾದನು.

ಸ್ವಲ್ಪವಾದರೂ ಧೂಳಿರದ ಶುಭ್ರವಾದ ಎರಡು ರಕ್ತವಸ್ತ್ರಗಳನ್ನು

ಧಾರಣೆಮಾಡಿದ್ದ, ಪ್ರದೀಪ್ತವಾಗಿದ್ದ ಶರೀರಕಾಂತಿಯಿಂದ ಕೂಡಿದ್ದ, ಅಗ್ನಿಪುತ್ರನಾದ ಸ್ಕಂದನು–ಪ್ರಾತಃಕಾಲದಲ್ಲಿ ಕೆಂಪಾದ ಮೋಡಗಳಿಂದ ಹೊರಬರುವ ಸೂರ್ಯನೋಪಾದಿಯಲ್ಲಿ-ಕಂಗೊಳಿಸಿದನು. ಕ್ರೀಡಾರ್ಥವಾಗಿ ಅಗ್ನಿಯಿಂದ ಸ್ಕಂದನಿಗೆ ಕೊಡಲ್ಪಟ್ಟ ಹುಂಜವು ಅವನ ಧ್ವಜವನ್ನಲಂಕರಿಸಿ ಕುಳಿತುಕೊಂಡಿತು. ರಥದ ಮೇಲೆ ಕಟ್ಟಿದ್ದ ಆ ಕುಕ್ಕುಟಧ್ವಜವು ಕೆಂಪಾದ ಕಾಲಾಗ್ನಿಯಂತೆ ಪ್ರಕಾಶಿಸುತ್ತಿದ್ದಿತು. ಸರ್ವಭೂತಗಳೂ ಮಾಡುವ ಪ್ರಯತ್ನಕ್ಕೆ ಯಾವ ಶಕ್ತಿಯು ಕಾರಣವಾಗಿರುವುದೋ, ಯಾವ ಅಮೋಘವಾದ ಶಕ್ತಿಯಿಂದ ತೇಜಸ್ಸು, ಶಾಂತಿ, ಬಲಗಳು ಪ್ರಾಪ್ತವಾಗುವುವೋ, ದೇವತೆಗಳಿಗೆ ಯಾವ ಮಹಾಶಕ್ತಿಯು ಜಯವರ್ಧಿನಿಯಾಗಿರುವುದೋ, ಅಂತಹ ಮಹಾಶಕ್ತಿಯು ಸ್ಕಂದನಲ್ಲಿ ಮೂರ್ತಿಮತ್ತಾಗಿ ನೆಲೆಸಿತು. ಸ್ವಾಭಾವಿಕವಾದ ವಜ್ರಕವಚವು ಅವನ ಶರೀರದಲ್ಲಿ ಐಕ್ಯವಾಗಿದ್ದು ಯುದ್ಧಸಮಯಗಳಲ್ಲಿ ಮಾತ್ರ ಪ್ರಕಟವಾಗುತ್ತಿತ್ತು.

ಶಕ್ತಿ , ಧರ್ಮ, ಬಲ, ತೇಜಸ್ಸು, ಆಹ್ಲಾದ, ಸತ್ಯನಿಷ್ಠೆ, ಬ್ರಹ್ಮನಿಷ್ಠೆ, ವಿವೇಕ, ಭಕ್ತರಕ್ಷಣೆ, ದುಷ್ಟಶಿಕ್ಷಣ, ಲೋಕರಕ್ಷಣೆ–ಈ ಗುಣಗಳೆಲ್ಲವೂ ಸ್ಕಂದನ ಒಡಹುಟ್ಟಿದುವುಗಳು. ಅರ್ಥಾತ್ ಈ ಗುಣಗಳೆಲ್ಲವೂ ಸ್ಕಂದನಲ್ಲಿ ನೆಲೆಸಿದ್ದುವು.

ಈ ರೀತಿಯಾಗಿ ದೇವಗಣಗಳಿಂದ ಅಭಿಷಿಕ್ತನಾದ, ಸಮಲಂಕೃತನಾದ, ಸುಮನಸ್ಕನಾದ ಸ್ಕಂದನು ಪೂರ್ಣಚಂದ್ರನಂತೆಯೇ ವಿರಾಜಿಸಿದನು. ಒಂದೆಡೆಯಲ್ಲಿ ಬ್ರಾಹ್ಮಣರು ಪಟ್ಟಾಭಿಷೇಕಕಾಲದಲ್ಲಿ ಹೇಳಬೇಕಾದ ವೇದಮಂತ್ರಗಳನ್ನು ಹೇಳುತ್ತಿದ್ದರು. ಮತ್ತೊಂದೆಡೆಯಲ್ಲಿ ದೇವದುಂದುಭಿಗಳು ಮೊಳಗುತ್ತಿದ್ದುವು. ದೇವಗಂಧರ್ವರು ಗಾಯನಮಾಡುತ್ತಿದ್ದರು. ಅಪ್ಸರೆಯರು ನೃತ್ಯಮಾಡುತ್ತಿದ್ದರು. ಇವರುಗಳಲ್ಲದೆ ಇನ್ನೂ ತುಷ್ಟರಾದ ಮತ್ತು ಹೃಷ್ಟರಾದ ಅನೇಕ ದೇವತೆಗಳು ಸ್ಕಂದನನ್ನು ಸ್ತೋತ್ರಮಾಡುತ್ತಾ ಅವನ ಸುತ್ತಲೂ ನಿಂತಿದ್ದರು. ಪಿಶಾಚಗಣಗಳೂ ಸಹ ಅವನನ್ನು ಸುತ್ತುವರಿದು ನಿಂತಿದ್ದುವು. ಅವರೆಲ್ಲರಿಂದಲೂ ಪರಿವೃತನಾಗಿದ್ದ, ಅಭಿಷಿಕ್ತನಾಗಿದ್ದ ಸ್ಕಂದನು ತಾನೂ ಸಹ ಅವರೊಡನೆ ಕ್ರೀಡಿಸುತ್ತಾ ಬಹುವಾಗಿ ಪ್ರಕಾಶಿಸಿದನು. ಕತ್ತಲೆಯನ್ನು ನಾಶಗೊಳಿಸಿ ಉದಯಿಸುವ ಸೂರ್ಯನೋಪಾದಿಯಲ್ಲಿ ಅಭಿಷಿಕ್ತನಾದ

ಮಹಾಸೇನನು ದೇವತೆಗಳ ಮಧ್ಯದಲ್ಲಿ ಕಂಗೊಳಿಸಿದನು. ಅನಂತರದಲ್ಲಿ ತಮ್ಮ ನಾಯಕನಾಗಿ ಅಭಿಷಿಕ್ತನಾದ ಮಹಾಸೇನನನ್ನು ಆವರಿಸಿ ಅಸಂಖ್ಯಾತ ಸಂಖ್ಯೆಯಲ್ಲಿ ದೇವಯೋಧರು ಉಪಸ್ಥಿತರಾದರು.

"ನೀನೇ ನಮ್ಮ ಒಡೆಯನು ; ನಿನಗೆ ಜಯವಾಗಲಿ!" ಎಂದು ಘೋಷಣೆಮಾಡುತ್ತಿದ್ದ ದೇವಸೈನ್ಯವನ್ನು ದೇವಗಣಗಳಿಂದ ಆವೃತನಾಗಿದ್ದ ಸ್ಕಂದನು ಸಂಧಿಸಿ ಅವರಿಂದ ಪೂಜಿತನಾಗಿ ಅವರನ್ನು ಸಾಂತ್ವವಚನಗಳಿಂದ ಸಂತೈಸಿದನು.

ಯುಧಿಷ್ಠಿರ! ನಾನು ಹಿಂದೆ ಹೇಳಿದಂತೆ ಶತಕ್ರತುವು ಸ್ಕಂದನನ್ನು ದೇವಸೈನ್ಯಕ್ಕೆ ಅಧಿಪತಿಯಾಗಿ ಮಾಡಿದನಂತರ ತಾನು ಹಿಂದೆ ಅಸುರನಿಂದ ವಿಮುಕ್ತಿಗೊಳಿಸಿದ್ದ ದೇವಸೇನೆಯನ್ನು ಸ್ಮರಿಸಿಕೊಂಡವನಾಗಿ ಹೀಗೆಂದು ಯೋಚಿಸಿದನು.

"ನಿಶ್ಚಯವಾಗಿಯೂ ಈ ಸ್ಕಂದನೇ ದೇವಸೇನೆಗೆ ಪತಿಯಾಗಲು ಅರ್ಹನಾಗಿರುತ್ತಾನೆ. ಇವನನ್ನೇ ಅವಳ ಪತಿಯನ್ನಾಗಿ ಬ್ರಹ್ಮನು ಸೃಷ್ಟಿ ಮಾಡಿದ್ದಾನೆ."

ಹೀಗೆಂದು ಯೋಚಿಸಿದವನಾಗಿ ಸರ್ವಾಲಂಕಾರಭೂಷಿತೆಯಾದ ದೇವಸೇನೆಯನ್ನು ಸ್ಕಂದನ ಬಳಿಗೆ ಕರೆತಂದು ಅವನನ್ನು ಕುರಿತು ಹೀಗೆಂದು ಹೇಳಿದನು :

"ಸುರೋತ್ತಮ! ಈ ಕನ್ಯೆಯು ನೀನು ಹುಟ್ಟುವ ಮೊದಲೇ ಹುಟ್ಟಿದ್ದು ನಿನಗೆ ಭಾರ್ಯೆಯಾಗತಕ್ಕವಳೆಂದು ಬ್ರಹ್ಮನಿಂದ ನಿರ್ದೇಶಿಸಲ್ಪಟ್ಟಿದ್ದಳು. ಆದುದರಿಂದ ನೀನು ವಿಧಿವತ್ತಾಗಿ ಮಂತ್ರಪೂರ್ವಕವಾಗಿ ಈ ದೇವಿಯ ದಕ್ಷಿಣಪಾಣಿಯನ್ನು (ಬಲಗೈಯನ್ನು) ಪದ್ಮಪುಷ್ಪಕ್ಕೆ ಸಮಾನವಾದ ಕಾಂತಿಯಿಂದ ಕೂಡಿರುವ ನಿನ್ನ ದಕ್ಷಿಣಪಾಣಿಯಿಂದ ಪರಿಗ್ರಹಿಸು."

ಹೀಗೆಂಬುದಾಗಿ ಶತಕ್ರತುವಿನಿಂದ ನಿರ್ದೇಶಿತನಾದ ಸ್ಕಂದನು, ಮಂಗಳ ವಾದ್ಯಗಳು ಮೊಳಗುತ್ತಿರಲಾಗಿ, ವಿಧಿವತ್ತಾಗಿ, ಮಂತ್ರಪುರಸ್ಸರವಾಗಿ ದೇವ ಸೇನೆಯ ಪಾಣಿಗ್ರಹಣಮಾಡಿದನು. ಸ್ಕಂದನ ಪಾಣಿಗ್ರಹಣಕಾಲದಲ್ಲಿ ದೇವ ಪುರೋಹಿತನಾದ, ಮಂತ್ರವಿದನಾದ ಬೃಹಸ್ಪತಿಯೇ ಪೌರೋಹಿತ್ಯವನ್ನು ವಹಿಸಿ ಮಂತ್ರಪುನಶ್ಚರಣೆ ಮಾಡಿದನಲ್ಲದೇ ವಿವಾಹಸಂಬಂಧವಾದ ಹೋಮ

ಗಳನ್ನೂ ಸಹ ಮಾಡಿಸಿದನು. ಈ ರೀತಿಯಲ್ಲಿ ಮಹಾಸೇನ-ದೇವಸೇನೆಯರ ವಿವಾಹವು ನಡೆಯಿತು. ಅಂದಿನಿಂದ ದೇವಸೇನೆಯು ಮಹಾಸೇನನ ಧರ್ಮ ಪತ್ನಿಯೆಂದು ಪ್ರಸಿದ್ಧಳಾದಳು. ದೇವಸೇನೆಯನ್ನೇ ಷಷ್ಠೀ, ಲಕ್ಷ್ಮೀ, ಆಶಾ, ಸುಖಪ್ರದಾ, ಸಿನೀವಾಲೀ, ಕುಹೂ, ಸದ್ವೃತ್ತಿ, ಅಪರಾಜಿತಾ–ಎಂದೂ ಸಹ ಬ್ರಾಹ್ಮಣರು ಕರೆಯುತ್ತಾರೆ. ಯಾವಾಗ ಸ್ಕಂದನು ದೇವಸೇನೆಯನ್ನು ವಿಧಿವತ್ತಾಗಿ ವಿವಾಹವಾದನೋ ಆಗ ಶೋಭಾಸ್ವರೂಪಳಾದ ಲಕ್ಷ್ಮಿಯು ಮೂರ್ತಿಮತ್ತಾಗಿ ಮಹಾಸೇನನನ್ನು ಆಶ್ರಯಿಸಿದಳು.



**ಶ್ರೀಜುಷ್ಟಃ ಪಂಚಮೀಂ ಸ್ಕನ್ದಸ್ತಸ್ಮಾತ್ಛ್ರೀ ಪಞ್ಚಮೀ ಸ್ಮೃತಾ ।**
**ಷಷ್ಠ್ಯಾಂ ಕೃತಾರ್ಥೋಽಭೂದ್ಯಸ್ಮಾತ್ತಸ್ಮಾತ್ ಷಷ್ಠೀ ಮಹಾತಿಥಿಃ ॥**

ಸ್ಕಂದನು ಪಂಚಮಿಯ ದಿನ ಲಕ್ಷ್ಮಿಯೊಡನೆ ಸೇರಿದನಾದ್ದರಿಂದ ಆ ಮಹಾದಿನವನ್ನು ಶ್ರೀಪಂಚಮೀ ಎಂದು ಕರೆಯುತ್ತಾರೆ. ಷಷ್ಠಿಯ ದಿನ ಮಹಾಸೇನನು ದೇವಸೈನ್ಯಕ್ಕೆ ಅಧಿಪತಿಯಾಗಿ ದಂಡನಾಯಕನಾದುದರಿಂದ ಷಷ್ಠಿಯು ಪ್ರಕಾಶಮಾನವಾದ ಸುಪ್ರಸಿದ್ಧವಾದ ದಿನವಾಯಿತು."

೨೨೯ನೆಯ ಅಧ್ಯಾಯವು ಮುಗಿಯಿತು.

೨೩೦ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಸ್ಕಂದನು ಕೃತ್ತಿಕಾನಕ್ಷತ್ರಗಳಿಗೆ ನಕ್ಷತ್ರಮಂಡಲದಲ್ಲಿ ಸ್ಥಾನವನ್ನು ಕಲ್ಪಿಸಿಕೊಟ್ಟುದು : ಮನುಷ್ಯರಿಗೆ ಕಷ್ಟಕೊಡುವ ವಿವಿಧಗ್ರಹಗಳ ವರ್ಣನೆ

"ಧರ್ಮಜ! ಮಹಾಸೇನನು ಸಂಪದ್ಯುಕ್ತನಾದುದನ್ನೂ, ದೇವಸೈನ್ಯಾಧಿಪತಿಯಾಗಿ ಪಟ್ಟಾಭಿಷಿಕ್ತನಾದುದನ್ನೂ ಕೇಳಿ ಸಪ್ತರ್ಷಿಗಳ ಪತ್ನಿಯರಲ್ಲಿ ಅರುಂಧತಿಯನ್ನುಳಿದು ಉಳಿದ ಆರು ಮಂದಿ ಸ್ತ್ರೀಯರು ಮಹಾಸೇನನ ಸಮೀಪಕ್ಕೆ ಬಂದರು. ನಾನು ಹಿಂದೆಯೇ ಹೇಳಿದಂತೆ ಅವರೆಲ್ಲರೂ ಧರ್ಮಯುಕ್ತರಾಗಿದ್ದರು. ಮಹಾಸೇನನು ಪಟ್ಟಾಭಿಷಿಕ್ತನಾದ ವಾರ್ತೆಯನ್ನು ಕೇಳಿದೊಡನೆಯೇ ಬೇಗನೆ ಅವನ ಬಳಿಗೆ ಬಂದು ಪ್ರಭುವಾದ ದೇವಸೇನಾಪತಿಯನ್ನು ಕುರಿತು ಹೀಗೆಂದು ಹೇಳಿದರು :

"ಪುತ್ರ! ನಾವು ದೇವಸಮಾನರಾದ ನಮ್ಮ ಪತಿಗಳಿಂದ ಪರಿತ್ಯಕ್ತರಾಗಿದ್ದೇವೆ. ಯಾವುದೊಂದು ಕಾರಣವೂ ಇಲ್ಲದೇ ಅವರ ಕೋಪಕ್ಕೆ ಪಾತ್ರರಾಗಿ ನಾವುಗಳಿದ್ದ ಪುಣ್ಯಸ್ಥಾನಗಳಿಂದ ಪರಿಚ್ಯುತರಾಗಿರುತ್ತೇವೆ. ನಮ್ಮಲ್ಲಿ ಅಗ್ನಿಯಿಂದ ನೀನು ಹುಟ್ಟಿದೆಯೆಂದು ಯಾರೋ ಕೆಲವರು ಸುಳ್ಳುಸುದ್ದಿಯನ್ನು ಹುಟ್ಟಿಸಿದ್ದೇ ಇದಕ್ಕೆ ಕಾರಣ. ಅದನ್ನೇ ಸತ್ಯವೆಂದು ನಂಬಿದವರಾಗಿ ನಮ್ಮ ಪತಿಗಳು ನಮ್ಮನ್ನು ಹೊರಗಟ್ಟಿಬಿಟ್ಟರು. ಈ ಸಮಯದಲ್ಲಿ ನಮ್ಮನ್ನು ಈ ಅಪವಾದದಿಂದ ಪಾರುಮಾಡಲು ನೀನೇ ಸಮರ್ಥನಾಗಿರುವೆ. (ಆದರೆ ನಮ್ಮ ಮೇಲೆ ಬಂದಿರುವ ಅಪವಾದವನ್ನು ಕಳೆದುಕೊಳ್ಳಲೂ ನಮಗೆ ಇಷ್ಟವಿಲ್ಲ.) ಯದ್ಯಪಿ ನಾವು ನಿನ್ನ ಜನ್ಮಕ್ಕೆ ಕಾರಣರಾಗದಿದ್ದರೂ ಈಗ ನಾವು

ನಿನ್ನನ್ನು ನಮ್ಮ ಪುತ್ರನೆಂದೇ ಭಾವಿಸಿರುತ್ತೇವೆ. ನಿನ್ನ ಅನುಗ್ರಹದಿಂದ ನಮಗೆ ಕ್ಷಯರಹಿತವಾದ ಸ್ವರ್ಗವು ಪ್ರಾಪ್ತವಾಗಲಿ. ಈ ವರಪ್ರಸಾದವನ್ನಿತ್ತು ಮಾತೃಋಣದಿಂದ ನೀನು ವಿಮುಕ್ತನಾಗು."



ಋಷಿಪತ್ನಿಯರ ಆ ಮಾತಿಗೆ ಉತ್ತರವಾಗಿ ಕುಮಾರನು ಹೇಳಿದನು : "ದೋಷರಹಿತರಾದ ಋಷಿಪತ್ನಿಯರೇ! ನಿಮ್ಮ ಇಚ್ಛೆಯಂತೆಯೇ ನೀವು ನನ್ನ ತಾಯಂದಿರಾಗಿರಿ. ನಾನು ನಿಮ್ಮ ಮಗನಾಗುವೆನು. ನೀವು ಯಾವುದನ್ನು ಇಚ್ಛಿಸುವಿರೋ ಅವೆಲ್ಲವೂ ನಿಮಗೆ ಪ್ರಾಪ್ತವಾಗುವುವು."

ಯುಧಿಷ್ಠಿರ! ಆ ಸಮಯದಲ್ಲಿ ಇಂದ್ರನು ಸ್ಕಂದನೊಡನೆ ಮಾತ

ನಾಡುವ ಅಪೇಕ್ಷೆಯಿಂದಿದ್ದನು. ಮುಖಭಾವದಿಂದಲೇ ಇಂದ್ರನ ಆಶಯವನ್ನು ತಿಳಿದ ಸ್ಕಂದನು ಪುರಂದರನನ್ನು ಕುರಿತು ಹೇಳಿದನು : "ಮಹೇಂದ್ರ! ಏನನ್ನೋ ಹೇಳಬೇಕೆಂದಿರುವೆಯಲ್ಲವೇ?!

**ಅಭಿಜಿತ್ಸ್ಪರ್ಧಮಾನಾ ತು ರೋಹಿಣ್ಯಾ ಅನುಜಾ ಸ್ವಸಾ ।**
**ಇಚ್ಛನ್ತೀ ಜ್ಯೇಷ್ಠತಾಂ ದೇವೀ ತಪಸ್ತಪ್ತುಂ ವನಂ ಗತಾ ॥೮॥**
**ತತ್ರ ಮೂಢೋಽಸ್ಮಿ ಭದ್ರಂ ತೇ ನಕ್ಷತ್ರಂ ಗಗನಾಚ್ಚ್ಯುತಮ್ ।**
**ಕಾಲಂ ತ್ವಿಮಂ ಪರಂ ಸ್ಕನ್ದ ಬ್ರಹ್ಮಣಾ ಸಹ ಚಿನ್ತಯ ॥೯॥**

"ಮಹಾಸೇನ! ಅಭಿಜಿತಳು ರೋಹಿಣಿಯ ತಂಗಿ. ಆದರೆ ರೋಹಿಣಿಗಿಂತಲೂ ಉನ್ನತಸ್ಥಾನವು ತನಗೆ ಬೇಕೆಂಬುದು ಅಭಿಜಿತಳ ಆಶಯ. ನಿಯಾಮಕವಾದ ಸ್ಥಾನ-ಮಾನಗಳನ್ನು ನಾವುಗಳಾರೂ ಬದಲಾಯಿಸಲಾರೆವು. ಇದರಿಂದ ಖತಿಗೊಂಡ ಅಭಿಜಿತಳು (ನಕ್ಷತ್ರಾಧಿದೇವತೆಯು) ಜ್ಯೇಷ್ಠತ್ವವನ್ನು ಪಡೆಯುವ ಸಲುವಾಗಿ ಅಂತರಿಕ್ಷದಿಂದ ಧರೆಗಿಳಿದು ತಪಶ್ಚರಣೆಮಾಡಲು ಕಾಡಿಗೆ ಹೊರಟುಹೋದಳು. ಅವಳ ಸ್ಥಾನವನ್ನು ನಾವೀಗ ತುಂಬಬೇಕಾಗಿದೆ. ಈ ವಿಷಯದಲ್ಲಿ ನಾನು ಭ್ರಾಂತನಾಗಿದ್ದೇನೆ. ನೀನೀ ವಿಷಯವನ್ನು ಬ್ರಹ್ಮನೊಡನೆ ಸಮಾಲೋಚಿಸಬೇಕಾಗಿದೆ.

**ಧನಿಷ್ಠಾದಿಸ್ತದಾ ಕಾಲೋ ಬ್ರಹ್ಮಣಾ ಪರಿಕಲ್ಪಿತಃ ।**
**ರೋಹಿಣೀ ಹ್ಯಭವತ್ಪೂರ್ವಮೇವಂ ಸಂಖ್ಯಾ ಸಮಾಭವತ್ ॥೧೦॥**

ಧನಿಷ್ಠಾದಿಯಾದ ನಕ್ಷತ್ರಗಳನ್ನೊಳಗೊಂಡ ಕಾಲವು ಹಿಂದೆ ಬ್ರಹ್ಮನಿಂದ ಸೃಷ್ಟಿಯಾಗಿದ್ದಿತು. ಆ ಸಮಯದಲ್ಲಿ ರೋಹಿಣಿಯೂ ಆ ನಕ್ಷತ್ರಮಾಲೆಯಲ್ಲಿದ್ದಳು. ನಕ್ಷತ್ರಸಂಖ್ಯೆಯು ಪೂರ್ಣವಾಗಿದ್ದಿತು. ಈಗ ಅಭಿಜಿತಳು ಹೊರಟುಹೋಗಿರುವುದರಿಂದ ಅವಳ ಸ್ಥಾನಕ್ಕೆ ಬೇರೊಂದು ನಕ್ಷತ್ರವನ್ನು ತುಂಬಬೇಕಾಗಿದೆ. ಇಲ್ಲದಿದ್ದರೆ ಕಾಲದಲ್ಲಿ ವೈಪರೀತ್ಯವುಂಟಾಗುವುದು."

ಧರ್ಮಜ! ಇಂದ್ರನು ಹೀಗೆಂದು ಮಹಾಸೇನನೊಡನೆ ಹೇಳಲಾಗಿ, ಅವರಿಬ್ಬರ ಮನಸ್ಸಿನ ಆಶಯವನ್ನು ತಿಳಿದ ಕೃತ್ತಿಕೆಯರು (ಕೃತ್ತಿಕಾ ನಕ್ಷತ್ರಾಧಿದೇವತೆಗಳು) ತಾರಾಮಂಡಲವನ್ನು ಸೇರಿಕೊಂಡರು. ಆ ಕೃತ್ತಿಕಾ

ನಕ್ಷತ್ರವು ಏಳು ತಲೆಗಳುಳ್ಳಂತೆ ಪ್ರಕಾಶಿಸುತ್ತಿದೆ ಮತ್ತು ಆ ನಕ್ಷತ್ರಗಳ ಅಧಿದೇವತೆ ಅಗ್ನಿ.

**ಸಪ್ತ ಋಷಯಃ ಪ್ರಥಮಾಂ ಕೃತ್ತಿಕಾನಾಮರುನ್ಧತೀಂ ।**
**ಯದ್ಧ್ರುವತಾಗ್ಂ ಹನಿನ್ಯುಃ ।**
**ಷಟ್ಕೃತ್ತಿಕಾ ಮುಖ್ಯಯೋಗಂ ವಹನ್ತೀಯಮಸ್ಮಾಕಮೇಧತ್ವಷ್ಟಮೀ**

ಎಂಬ ವಿವಾಹಪ್ರವೇಶಹೋಮದಲ್ಲಿರುವ ಮಂತ್ರದಲ್ಲಿ ಇಲ್ಲಿಯ ಕಥೆಯು ಬರುತ್ತದೆ. "ಕೃತ್ತಿಕೆಯರು ಆರು ಜನ. ಧ್ರುವೆಯಾದ ಅರುಂಧತಿಯು ಏಳನೆಯವಳು. ವಿವಾಹಿತಳಾದ ವಧುವು ಎಂಟನೆಯವಳಾಗಿ ಅವರಂತೆ ಪತಿವ್ರತೆಯಾಗಲಿ"–ಎಂದು ಇದರ ಅರ್ಥ. ಈ ಆರು ಮಂದಿ ಕೃತ್ತಿಕಾನಕ್ಷತ್ರಾಧಿದೇವತೆಗಳೇ ವಸಿಷ್ಠಪತ್ನಿಯನ್ನು ಬಿಟ್ಟು ಉಳಿದ ಆರು ಋಷಿಗಳ ಪತ್ನಿಯರೆಂದು ಭಾಷ್ಯಕಾರರು ಅಭಿಪ್ರಾಯಪಡುತ್ತಾರೆ.

ಈ ಪ್ರಕರಣವನ್ನು ನೋಡಿದರೆ ಈಗಿರುವಂತೆ ಇತರ ಯುಗಗಳಲ್ಲಿಯೂ ನಕ್ಷತ್ರಗಳಲ್ಲಿ ಅಶ್ವಿನಿಯೇ ಮೊದಲನೆಯ ನಕ್ಷತ್ರವಾಗಿತ್ತೆಂದು ಹೇಳಲಾಗುವುದಿಲ್ಲ. "**ಧನಿಷ್ಠಾದಿಸ್ತದಾ ಕಾಲೋ ಬ್ರಹ್ಮಣಾ ಪರಿಕಲ್ಪಿತಃ**" ಎಂದು ಬಹುಸ್ಪಷ್ಟವಾಗಿಯೇ ಇಲ್ಲಿ ಹೇಳಿದೆ. ಎಂದರೆ ಧನಿಷ್ಠಾನಕ್ಷತ್ರವೇ ಮೊದಲನೆಯ ನಕ್ಷತ್ರವಾಗಿ ಯಾವುದೋ ಒಂದು ಯುಗದಲ್ಲಿದ್ದಿತು. ವೇದದಲ್ಲಿ ಬರುವ ನಕ್ಷತ್ರೇಷ್ಟಿಯನ್ನು ತೆಗೆದುಕೊಂಡರೆ "**ಅಗ್ನಿರ್ನಃ ಪಾತು ಕೃತ್ತಿಕಾಃ**" ಎಂಬುದಾಗಿ ಕೃತ್ತಿಕಾನಕ್ಷತ್ರಾಧಿದೇವತೆಯಾದ ಅಗ್ನಿಯ ಪ್ರಾರ್ಥನೆಯು ಮೊದಲನೆಯದಾಗಿರುವುದು. ಇದರಿಂದ ಮತ್ತೊಂದು ಯುಗದಲ್ಲಿ ಕೃತ್ತಿಕಾನಕ್ಷತ್ರವೇ ಮೊದಲನೆಯದಾಗಿರಬಹುದು. ಅಶ್ವಿನೀನಕ್ಷತ್ರವು ಮೊದಲಾದುದು ಎಂದಿನಿಂದ ಎಂಬುದಕ್ಕೂ, ಇದು ಸಹ ವ್ಯತ್ಯಾಸವಾಗಬಹುದೇ–ಎಂಬುದಕ್ಕೂ ಪರಿಣತರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ಕೊಡಲಾಗುವುದು.)

ಅನಂತರದಲ್ಲಿ ವಿನತೆಯೂ ಸಹ ಸ್ಕಂದನ ಬಳಿಗೆ ಬಂದು ಹೀಗೆಂದು ಹೇಳಿದಳು : "ಕುಮಾರ! ಪಿಂಡಪ್ರದನಾದ ಪುತ್ರನು ನೀನಾಗಬೇಕೆಂದು ನನ್ನ ಆಶಯವಾಗಿದೆ. ಆದುದರಿಂದಲೇ ನಾನು ಯಾವಾಗಲೂ ನಿನ್ನ ಜೊತೆಯಲ್ಲಿಯೇ ಇರಬೇಕೆಂದು ಇಚ್ಛಿಸುತ್ತೇನೆ."

“ಹಾಗೆಯೇ ಆಗಲಿ. ತಾಯಿಯಾದ ನಿನಗೆ ನಮಸ್ಕರಿಸುತ್ತೇನೆ. ನೀನೂ ಸಹ ನನ್ನನ್ನು ಪುತ್ರವಾತ್ಸಲ್ಯದಿಂದ ಕಾಣುತ್ತಾ ನಾನು ಮಾಡಬೇಕಾದ ಕಾರ್ಯಗಳಲ್ಲಿ ಅನುಶಾಸನಮಾಡುತ್ತಿರು. ನಿನ್ನ ಸೊಸೆಯಾದ ದೇವಸೇನೆಯಿಂದಲೂ ಪೂಜಿತಳಾಗಿ ಇಲ್ಲಿಯೇ ವಾಸವಾಗಿರು.”

ಯುಧಿಷ್ಠಿರ! ಅನಂತರದಲ್ಲಿ ಮಾತೃಗಣಗಳು ಬಂದು ಸ್ಕಂದನನ್ನು ಹೀಗೆಂದು ಪ್ರಾರ್ಥಿಸಿದುವು. (ಇಲ್ಲಿ ಬರುವ ಮಾತೃಗಣಗಳು ನಾಂದೀ ಪೂಜೆಯಲ್ಲಿ ಬರುವ ‘ಮಾತರೋ ಲೋಕಮಾತರಃ’ ಎಂಬ ಮಾತೃಗಣಗಳೆಂದು ತೋರುತ್ತದೆ.)

“ಮಹಾಸೇನ! ನಾವು ಸರ್ವಲೋಕಕ್ಕೂ ಮಾತೆಯರೆಂದು ವಿದ್ವಾಂಸರಿಂದ ಅನುದಿನವೂ ಸ್ತೋತ್ರಮಾಡಲ್ಪಡುತ್ತಿದ್ದೇವೆ. ನಿನಗೂ ಸಹ ನಾವು ತಾಯಂದಿರಾಗುವ ಅಪೇಕ್ಷೆಯಿಂದಿದ್ದೇವೆ. ನಮ್ಮನ್ನೂ ಸಹ ನೀನು ತಾಯಂದಿರೆಂದು ಸ್ವೀಕರಿಸಿ ನಮ್ಮಗಳನ್ನು ಮಾತೃಭಾವದಿಂದ ಪೂಜಿಸುವವನಾಗು.”

“ಹಾಗೆಯೇ ಆಗಲಿ. ನೀವು ನನ್ನ ತಾಯಂದಿರು. ನಾನು ನಿಮ್ಮ ಮಗ. ನಿಮ್ಮ ಇಚ್ಛೆಯೇನು? ನಾನು ನಿಮಗೆ ಮಾಡಿಕೊಡಬೇಕಾದ ಕಾರ್ಯವೇನಿದೆ? ಹೇಳಿರಿ. ಒಡನೆಯೇ ಮಾಡಿಕೊಡುವೆನು.”

“ಬ್ರಾಹ್ಮೀ, ಮಾಹೇಶ್ವರೀ–ಮೊದಲಾದ ಸಪ್ತಮಾತೃಕೆಯರು ಮೊದಲು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟರು. ಅವರುಗಳನ್ನು ಪ್ರಪಂಚದಲ್ಲಿ ಬಹುವಾಗಿ ಗೌರವಿಸುತ್ತಾರೆ. ಸಪ್ತಮಾತೃಗಳೆಂದರೆ ಬ್ರಾಹ್ಮೀ, ಮಾಹೇಶ್ವರೀ–ಮೊದಲಾದವರೇ ಎಂಬುದೂ ಸಹ ರೂಢವಾಗಿ ಹೋಗಿದೆ. ಅವರನ್ನು ಆ ಗೌರವ ಸ್ಥಾನಗಳಿಂದ ಕಿತ್ತುಹಾಕಬೇಕು. ನಮಗೆ ಆ ಸ್ಥಾನಗಳನ್ನು ಕಲ್ಪಿಸಿಕೊಡಬೇಕು. ಪ್ರಪಂಚದ ಜನರು ಅವರನ್ನೀಗ ಪೂಜಿಸುತ್ತಿರುವಂತೆಯೇ ಮುಂದೆ ನಮ್ಮನ್ನೇ ಪೂಜಿಸಬೇಕು. ನಮ್ಮ ಪ್ರಜೆಗಳನ್ನು ಆ ಮಾತೃಕೆಯರು ನಿನಗಾಗಿ ಅಪಹರಿಸಿದ್ದಾರೆ. ಆ ಪ್ರಜೆಗಳನ್ನೂ ಕೊಡು.”

“ಸಪ್ತಮಾತೃಕೆಯರನ್ನು ಅವರಿರುವ ಸ್ಥಾನಗಳಿಂದ ಬದಲಾಯಿಸುವುದು ಸಾಧ್ಯವಿಲ್ಲ. ಅವರಿಗೆ ಕೊಟ್ಟಿರುವ ಪ್ರಜೆಗಳನ್ನು ನಿಮಗೆ ಕೊಡುವ ಸಾಧ್ಯತೆಯೂ ಇಲ್ಲ. ಆದರೆ ನಿಮಗೂ ಅನೇಕ ಪ್ರಜೆಗಳನ್ನು ಸೃಷ್ಟಿಮಾಡಿ ಕೊಡಬಲ್ಲೆನು. ಅಪೇಕ್ಷೆಯಿದ್ದರೆ ಹೇಳಿರಿ.”

"ಹಾಗಾದರೆ ಈ ವರವನ್ನಾದರೂ ದಯಪಾಲಿಸು. ನಾವು ನಿನ್ನೊಡನೆಯೇ ಸರ್ವದಾ ಇದ್ದುಕೊಂಡು ಸಮಯಗಳಲ್ಲಿ ನಾನಾವಿಧವಾದ ರೂಪಗಳನ್ನು ಧರಿಸಿ ಆ ಸಪ್ತಮಾತೃಕೆಯರ ಮಕ್ಕಳನ್ನೂ ಮೊಮ್ಮಕ್ಕಳನ್ನೂ ವಿನಾಶಗೊಳಿಸುವಂತಹ ಸಾಮರ್ಥ್ಯವನ್ನಾದರೂ ನಮಗೆ ಅನುಗ್ರಹಿಸು."

"ನಿಮಗೆ ಪುತ್ರರ ಅಪೇಕ್ಷೆಯಿದ್ದರೆ ಅವರನ್ನು ಸೃಷ್ಟಿಮಾಡಿಯಾದರೂ ಕೊಟ್ಟೇನು. ಆದರೆ ಪ್ರಜೆಗಳನ್ನು ವಿನಾಶಗೊಳಿಸುವ ಸಾಮರ್ಥ್ಯವನ್ನು ಕೊಡಲು ನೀವು ಕೇಳಿರುವುದು ಕಷ್ಟಕರವಾದುದು. ನಿಮ್ಮನ್ನು ಏಕಾಗ್ರತೆಯಿಂದ ಪೂಜಿಸಿದ ಪ್ರಜೆಗಳನ್ನಾದರೂ ರಕ್ಷಣೆಮಾಡಿರಿ. ನಿಮಗೆ ಮಂಗಳವಾಗಲಿ."

"ಅಂತಹವರನ್ನು ನಾವು ರಕ್ಷಿಸಿಯೇ ತೀರುತ್ತೇವೆ. (ಆದರೆ ಕೇವಲ ಸಪ್ತಮಾತೃಕೆಯರ ಪೂಜೆಯನ್ನೇ ಮಾಡುತ್ತಾ ನಮ್ಮನ್ನು ತಿರಸ್ಕರಿಸುವವರ ಪ್ರಾಣಗಳನ್ನು ಮಾತ್ರ ಖಂಡಿತವಾಗಿಯೂ ಉಳಿಸಲಾರೆವು.) ನಿನಗೆ ಮಂಗಳವಾಗಲಿ. ನಿನ್ನ ಸಹವಾಸದಲ್ಲಿಯೇ ನಾವು ಸರ್ವದಾ ಇರಲಪೇಕ್ಷಿಸಿದ್ದೇವೆ. ನಿನ್ನ ಸಾಮೀಪ್ಯವು ನಮಗೆ ಅತ್ಯಂತ ಸಂತೋಷದಾಯಕವಾಗಿರುವುದು."

"ಹದಿನಾರು ವರ್ಷಗಳು ತುಂಬುವವರೆಗೂ ಮನುಷ್ಯರನ್ನು ನೀವು ನಾನಾವಿಧವಾದ ರೂಪಗಳನ್ನು ಧರಿಸಿ ಕಾಡಬಹುದಾಗಿದೆ. ಇದಕ್ಕಾಗಿ ನಾನು ನಿಮಗೆ ನನ್ನಲ್ಲಿಯೇ ಇರುವ ಶಾಶ್ವತವಾದ ಮತ್ತು ಮಹಾಘೋರವಾದ ರೂಪವನ್ನೇ ಕೊಡುತ್ತೇನೆ. ಆ ನನ್ನ ಪ್ರತಿರೂಪದಿಂದ ಕೂಡಿದವರಾಗಿ ಸರ್ವರಿಂದಲೂ ಪೂಜಿತರಾಗಿ ಸುಖವಾಗಿರಿ."

ಯುಧಿಷ್ಠಿರ! ಸ್ಕಂದನು ಹೀಗೆಂದು ಹೇಳಿದೊಡನೆಯೇ ಅವನ ಶರೀರದಿಂದ ಅತ್ಯಂತಶಕ್ತಿಯುತವಾದ, ಘೋರವಾದ, ಅಗ್ನಿಯ ಪ್ರಭೆಗೆ ಸಮಾನವಾದ ಪ್ರಭೆಯನ್ನು ಹೊಂದಿದ್ದ ಪುರುಷನು ಮಾನವರ ಮಕ್ಕಳನ್ನು ಕಬಳಿಸುವ ಸಲುವಾಗಿಯೇ ಹೊರಬಿದ್ದನು. ಭೂಮಿಯಲ್ಲಿ ಬಿದ್ದೊಡನೆಯೇ ಆ

---

* ಅಧ್ಯಾಯದ ಮೊದಲಿನಿಂದ ಇದುವರೆಗೂ ಬಂದಿರುವ ಕಥೆಯು ಸಮಸ್ಯಾರೂಪದಲ್ಲಿದೆ. ಇಲ್ಲಿರುವ ಶ್ಲೋಕಗಳಿಗೆ ನಾನಾವಿಧವಾಗಿ ಅರ್ಥಮಾಡಬಹುದಾಗಿದೆ. ಇದನ್ನು ಕ್ರೋಢೀಕರಿಸಿ ಪರಿಶಿಷ್ಟದಲ್ಲಿ ಕೊಡಲಾಗುವುದು.

ಪುರುಷನು ಮೂರ್ಛೆಹೊಂದಿದನು. ಕ್ಷಣಕಾಲ ಕಳೆದನಂತರ ಮೂರ್ಛೆಯಿಂದ ಎಚ್ಚೆತ್ತು ಹಸಿವಿನಿಂದ ಪೀಡಿತನಾಗಿದ್ದನು. ಸ್ಕಂದನಿಂದ ಆಜ್ಞಪ್ತನಾದ ಅವನು ಮರುಕ್ಷಣದಲ್ಲಿಯೇ ಘೋರವಾದ ಕ್ಷುದ್ರರೂಪಿಯಾದ ಗ್ರಹವಾದನು. ಬ್ರಾಹ್ಮಣಶ್ರೇಷ್ಠರು ಆ ಗ್ರಹವನ್ನು "ಸ್ಕಂದಾಪಸ್ಮಾರಗ್ರಹ" ಎಂದು ಕರೆಯುತ್ತಾರೆ. ಮಹಾರೌದ್ರಳಾದ ವಿನತೆಯು ಶಕುನಿಗ್ರಹವೆಂದು ಕರೆಯಲ್ಪಡುತ್ತಾಳೆ. ಪೂತನಾ ಎಂಬ ರಾಕ್ಷಸಿಯನ್ನು ಪೂತನಾಗ್ರಹವೆಂದು ಕರೆಯುತ್ತಾರೆ. ಮಾನವರಿಗೆ ಬಹಳ ಕಷ್ಟಕೊಡುವ, ಅತಿದಾರುಣವಾದ ಘೋರಾಕೃತಿಯನ್ನು ಹೊಂದಿರುವ, ರಾತ್ರಿಯಲ್ಲಿ ಮಾತ್ರವೇ ಸಂಚರಿಸುವ ಪಿಶಾಚಿಯನ್ನು ಶೀತಪೂತನಾ ಎಂದು ಕರೆಯುತ್ತಾರೆ. ಘೋರದರ್ಶನಳಾದ ಆ ಶೀತಪೂತನೆಯು ಮನುಷ್ಯರ ಗರ್ಭವನ್ನೇ ಅಪಹರಿಸಿಬಿಡುತ್ತದೆ. ಅದಿತಿಯನ್ನು ರೇವತಿಯೆಂಬುದಾಗಿ ಕರೆಯುತ್ತಾರೆ. ಆ ರೇವತಿಗೆ ಸಂಬಂಧಿಸಿದ ಗ್ರಹ ರೈವತಗ್ರಹ. ಮಹಾಘೋರರೂಪಿಯಾದ ಆ ಗ್ರಹವೂ ಸಹ ಬಾಲಕರನ್ನು ಬಹುವಾಗಿ ಪೀಡಿಸುತ್ತದೆ. ದೈತ್ಯರಿಗೆ ತಾಯಿಯಾದ ದಿತಿಯನ್ನು ಮುಖಮಂಡಿಕಾಗ್ರಹವೆನ್ನುತ್ತಾರೆ. ದುರಾಸದವಾದ ಆ ಮುಖಮಂಡಿಕಾ ಗ್ರಹವು ಶಿಶುಗಳ ಮಾಂಸಭಕ್ಷಣೆಯಿಂದ ಬಹುವಾಗಿ ಸಂತುಷ್ಟವಾಗುತ್ತದೆ. ಸ್ಕಂದಸಂಭವರಾದ ಕುಮಾರರೂ ಮತ್ತು ಕುಮಾರಿಯರೂ ಸಹ ಮಹಾಗ್ರಹಗಳು. ಅವುಗಳೂ ಸಹ ಗರ್ಭದಲ್ಲಿರುವಾಗಲೇ ಶಿಶುಗಳನ್ನು ತಿಂದುಹಾಕಿಬಿಡುತ್ತವೆ. ಆ ಕುಮಾರರೇ ಕುಮಾರಿಯರ ಪತಿಗಳೆಂದೂ ಪ್ರಸಿದ್ಧರಾಗಿರುತ್ತಾರೆ. ಆ ಕುಮಾರ-ಕುಮಾರಿಯರು ಹೊಟ್ಟೆಯಲ್ಲಿರುವಾಗಲೇ ಮಕ್ಕಳನ್ನು ಯಾರೊಬ್ಬರಿಗೂ ತಿಳಿಯದಂತೆಯೇ ಹಿಡಿದು ಸಂಹರಿಸುವುದೂ ಉಂಟು. ಈ ಪ್ರಪಂಚದಲ್ಲಿರುವ ಗೋವುಗಳ ಮಾತೆಯು ಸುರಭೀ ಎಂಬುವಳೆಂಬುದನ್ನು ಕೇಳಿರುವೆಯಲ್ಲವೇ? ಶಕುನಿ ಎಂಬ ಗ್ರಹವು ಸುರಭಿಯ ಮೇಲೆ ಕುಳಿತು ಭೂಲೋಕಕ್ಕೆ ಬಂದು ಅನೇಕಶಿಶುಗಳನ್ನು ತಿನ್ನುತ್ತಿರುತ್ತದೆ. ಪ್ರಪಂಚದಲ್ಲಿರುವ ನಾಯಿಗಳ ತಾಯಿಯಾದ ಸರಮೆಯೂ ಗರ್ಭದಲ್ಲಿರುವ ಶಿಶುಗಳ ಹತ್ಯೆಮಾಡುವ ಸ್ವಭಾವವುಳ್ಳದ್ದಾಗಿದೆ. ವೃಕ್ಷಗಳಿಗೆಲ್ಲಾ ತಾಯಿಯೆನಿಸಿದ ವೃಕ್ಷಾಧಿದೇವತೆಯು ಕರಂಜವೆಂಬ ವೃಕ್ಷದಲ್ಲಿ ತನ್ನ ನಿವಾಸವನ್ನು ಮಾಡಿಕೊಂಡಿರುತ್ತಾಳೆ. ಅವಳು ಮಾತ್ರ ಪ್ರಾಣಿಗಳ ಮತ್ತು ಮಾನವರ ವಿಷಯ

ದಲ್ಲಿ ಹೆಚ್ಚು ಕರುಣೆಯುಳ್ಳವಳಾಗಿರುತ್ತಾಳೆ. ಪ್ರಾರ್ಥಿಸಿದವರಿಗೆ ವರಗಳನ್ನು ಕೊಡುವವಳಾಗಿಯೂ, ಸೌಮ್ಯಳಾಗಿಯೂ, ದಯಾಮಯಿಯಾಗಿಯೂ ಇರುತ್ತಾಳೆ. ಕರಂಜವೃಕ್ಷನಿವಾಸಿನಿಯಾದ ಅವಳನ್ನು ಮಕ್ಕಳಿಲ್ಲದವರು ಪುತ್ರಪ್ರಾಪ್ತಿಗಾಗಿ ನಮಸ್ಕರಿಸುತ್ತಾರೆ. ಮಾಂಸ-ಮದ್ಯಸೇವನೆಯಲ್ಲಿಯೇ ಹೆಚ್ಚು ಆಸಕ್ತಿಯುಳ್ಳ ಈ ಹದಿನೆಂಟು ದುಷ್ಟಗ್ರಹಗಳೂ ಮತ್ತು ಇತರ ಗ್ರಹಗಳೂ ಸಹ ಪ್ರಸೂತಿಗೃಹದಲ್ಲಿ ಹತ್ತುದಿನಗಳ ಕಾಲ ನಿವಾಸಮಾಡಿಕೊಂಡಿರುತ್ತವೆ. ಕೆಲವು ಸಮಯಗಳಲ್ಲಿ ಕದ್ರೂ ಎಂಬುವಳು ಸೂಕ್ಷ್ಮರೂಪವನ್ನು ಧರಿಸಿದವಳಾಗಿ ಗರ್ಭಿಣಿಯರ ಗರ್ಭದೊಳಗೆ ಪ್ರವೇಶಿಸಿ, ಭ್ರೂಣವನ್ನು ತಿಂದುಹಾಕಿ ಆ ಗರ್ಭಿಣೀಸ್ತ್ರೀಯರು ಹಾವನ್ನು ಪ್ರಸವಿಸುವಂತೆ ಮಾಡುತ್ತಾಳೆ. ಮತ್ತೆ ಕೆಲವು ಸಮಯಗಳಲ್ಲಿ ಗಂಧರ್ವರ ತಾಯಿಯು ಗರ್ಭದೊಳಗೆ ಪ್ರವೇಶಿಸಿ ಗರ್ಭವನ್ನೇ ಅಪಹರಿಸಿಬಿಡುತ್ತಾಳೆ. ಇದರಿಂದಲೇ ಸ್ತ್ರೀಯರಿಗೆ ಗರ್ಭಪಾತವೆಂಬುದುಂಟಾಗುತ್ತದೆ. ಅಪ್ಸರೆಯರ ತಾಯಿಯೂ ಸಹ ಗರ್ಭವನ್ನು ವಿನಾಶಗೊಳಿಸುವವಳೇ ಆಗಿರುತ್ತಾಳೆ. ಆಕೆಯು ಮಾಡುವ ಗರ್ಭವಿನಾಶವನ್ನು ವಿದ್ವಾಂಸರು 'ಉಪನಷ್ಟ' ಎಂದು ಕರೆಯುತ್ತಾರೆ. ರಕ್ತ ಸಮುದ್ರದ ಮಗಳು ಸ್ಕಂದನನ್ನು ಸಾಕಿದಳೆಂದು ಹೇಳುತ್ತಾರೆ. ಅವಳನ್ನು 'ಲೋಹಿತಾಯನೀ' ಎಂದು ಕರೆಯುತ್ತಾರೆ ಮತ್ತು ಕದಂಬವೃಕ್ಷದಲ್ಲಿ ನೆಲೆಸಿ ರುವ ಅವಳನ್ನು ಮಕ್ಕಳ ಸಂಕಟಪರಿಹಾರಕ್ಕಾಗಿ ಪೂಜಿಸುತ್ತಾರೆ. ಪುರುಷರಲ್ಲಿ ರುದ್ರನು ಯಾವ ರೀತಿಯಲ್ಲಿ ತನ್ನ ಪ್ರಭಾವವನ್ನು ಬೀರುತ್ತಾನೆಯೋ–ಅದೇ ರೀತಿಯಲ್ಲಿ ಆರ್ಯೆಯು ಸ್ತ್ರೀಯರಲ್ಲಿ ತನ್ನ ಪ್ರಭಾವವನ್ನು ಬೀರುತ್ತಿರುತ್ತಾಳೆ. ಅವಳೂ ಕುಮಾರನ ತಾಯಿ. ಇಷ್ಟಾರ್ಥಸಿದ್ಧಿಗಾಗಿ ಅವಳನ್ನೂ ಸಹ ಪೂಜಿಸು ತ್ತಾರೆ. ನಾನು ಇದುವರೆಗೆ ಹೇಳಿದ ಮಹಾಗ್ರಹಗಳೆಲ್ಲವೂ ಹದಿನಾರು ವರ್ಷಗಳವರೆಗೆ ಮಕ್ಕಳಿಗೆ ಉಪದ್ರವವನ್ನು ಕೊಡುತ್ತಲೇ ಇರುತ್ತವೆ. ಹದಿನಾರು ವರ್ಷಗಳು ಕಳೆದನಂತರ ಈ ಮಹಾಗ್ರಹಗಳೇ ಮಕ್ಕಳಿಗೆ ಶುಭ ದಾಯಕಗಳಾಗುತ್ತವೆ.

ನಾನು ಹೇಳಿದ ಈ ಗ್ರಹಗಳೆಲ್ಲವನ್ನೂ ಸ್ಕಂದಗ್ರಹಗಳೆಂದು ಮಾನವರು ತಿಳಿಯಬೇಕು. ಸ್ನಾನ, ಧೂಪ, ಅಂಜನ, ಬಲಿಕರ್ಮ, ಉಪಹಾರಾದಿಗಳಿಂದ ಈ ಗ್ರಹಗಳಿಗೆ ಶಾಂತಿಯನ್ನು ಮಾಡುತ್ತಲೇ ಇರಬೇಕು. ಸಮಯಗಳಲ್ಲಿ

ಸ್ಕಂದನಿಗೆ ವಿಶೇಷವಾದ ಪೂಜೆಯನ್ನೂ ಸಲ್ಲಿಸುತ್ತಿರಬೇಕು. ಈ ಗ್ರಹಗಳನ್ನು ಗೌರವಿಸಿ, ಭಕ್ತಿಯಿಂದ ಪೂಜಿಸಿ, ನಮಸ್ಕರಿಸಿದ ಪಕ್ಷದಲ್ಲಿ ಖಂಡಿತವಾಗಿಯೂ ಈ ಗ್ರಹಗಳು ತೃಪ್ತಿಹೊಂದಿ ಮನುಷ್ಯನಿಗೆ ಶುಭವಾದ ಫಲಗಳನ್ನು ಕೊಟ್ಟು ಆಯುಷ್ಯವನ್ನೂ, ವೀರ್ಯವನ್ನೂ ವೃದ್ಧಿಗೊಳಿಸುತ್ತವೆ. ಇದರಲ್ಲಾವ ಸಂಶಯವೂ ಇಲ್ಲ. ಕ್ರೂರದೇವತೆಗಳಿಂದಾಗಲೀ, ದುಷ್ಟದೇವತೆಗಳಿಂದಾಗಲೀ ಇವುಗಳನ್ನು ತಾತ್ಸಾರಮಾಡಬಾರದು.

ಹದಿನಾರು ವರ್ಷಗಳು ಕಳೆದನಂತರ ಮಾನವನ ಅದೃಷ್ಟವನ್ನು ಬದಲಾಯಿಸಲು ಸಮರ್ಥವಾದ ಗ್ರಹಗಳಾವುವೆಂಬುದನ್ನು ಪರಮೇಶ್ವರನಿಗೆ ಭಕ್ತಿಯಿಂದ ನಮಸ್ಕರಿಸಿ ಹೇಳುತ್ತೇನೆ. ಕೇಳು, ಯುಧಿಷ್ಠಿರ!

ಯಾವ ಮನುಷ್ಯನು ಸ್ವಪ್ನಾವಸ್ಥೆಯಲ್ಲಿಯೇ ಆಗಲೀ, ಜಾಗ್ರದಾವಸ್ಥೆಯಲ್ಲಿಯೇ ಆಗಲೀ ದೇವತೆಗಳನ್ನು ಕಾಣುತ್ತಾನೆಯೋ–ಅಂತಹವನು ಒಡನೆಯೇ ಪ್ರಜ್ಞಾಹೀನನಾಗುತ್ತಾನೆ. ಇದಕ್ಕೆ ಕಾರಣವಾದ ಗ್ರಹವನ್ನು ದೇವಗ್ರಹವೆಂಬುದಾಗಿ ತಿಳಿಯಬೇಕು. (ಯದ್ಯಪಿ ದೇವತೆಯ ಆಕಾರವನ್ನು ಹೊಂದಿ ಇದು ಬಂದರೂ, ದೇವತೆಯಂತೆಯೇ ಮಾತನಾಡಿದರೂ–ಹೀಗೆ ಕಾಣುವ ದೇವತೆಯನ್ನು ದೇವತೆಯೆಂದೇ ಭ್ರಮಿಸಬಾರದು. ಇದು ದೇವಗ್ರಹ. ತಾನೇ ದೇವತೆಯೆಂದು ಹೇಳಿಕೊಳ್ಳುತ್ತದೆ. ಸರ್ವಾರ್ಥಸಿದ್ಧಿಯನ್ನೂ ತಾನೇ ಕೊಡುವುದಾಗಿ ಹೇಳುತ್ತದೆ. ನಿಜವಾದ ದೇವತೆಗಳು ಅನಾಹೂತರಾಗಿ ಅಪ್ರಾರ್ಥಿತರಾಗಿ ಹೀಗೆ ಕಾಣಿಸಿಕೊಳ್ಳುವುದೂ ಇಲ್ಲ ; ಯಾರೊಬ್ಬರ ಮೈಮೇಲೆಯೂ ಬರುವುದೂ ಇಲ್ಲ.) ಒಬ್ಬನು ಕುಳಿತಿರುವಾಗ ಅಥವಾ ಮಲಗಿರುವಾಗ ಸತ್ತು ಹೋದ ತನ್ನ ತಂದೆ-ತಾತಂದಿರನ್ನೂ, ತಾಯಿ-ಅಜ್ಜಿಯರನ್ನೂ ಕಾಣುವುದುಂಟು. ಅದರಿಂದವನು ಒಡನೆಯೇ ಭ್ರಾಂತನಾಗುವುದೂ ಉಂಟು. ಹೀಗೆ ಕಾಣಿಸಿಕೊಳ್ಳುವವರು ಅವನ ನಿಜವಾದ ಪಿತೃದೇವತೆಗಳಲ್ಲ. ಹೀಗೆ ಅನಾಹೂತವಾಗಿ ಅಪ್ರಾರ್ಥಿತವಾಗಿ ಪಿತೃಗಳ ರೂಪದಲ್ಲಿ ಕಾಣಿಸಿಕೊಳ್ಳುವುದನ್ನು ಪಿತೃಗ್ರಹವೆಂದು ತಿಳಿಯಬೇಕು.

ಯುಧಿಷ್ಠಿರ! ಕೆಲವು ಸಂದರ್ಭಗಳಲ್ಲಿ ಸತ್ಪುರುಷರ, ಸಿದ್ಧಪುರುಷರ ಕೋಪವೇ ಗ್ರಹರೂಪವೂ ಆಗುವುದುಂಟು. ಯಾವನು ಸಿದ್ಧಪುರುಷರನ್ನು ಗೌರವಿಸದೇ ಬಂದೆಡೆಗಳಲ್ಲಿ ಅವರನ್ನು ನಿಂದೆಮಾಡುತ್ತಾ ಅವರ ಕೋಪಕ್ಕೆ

ಮತ್ತು ಶಾಪಕ್ಕೆ ಪಾತ್ರನಾಗುತ್ತಾನೆಯೋ–ಅಂತಹವನು ಒಡನೆಯೇ ಬುದ್ಧಿಭ್ರಮಣೆಯನ್ನು ಹೊಂದುತ್ತಾನೆ. ಅಂತಹವನು ಸಿದ್ಧಗ್ರಹಪೀಡಿತ ನಾಗಿರುವನೆಂದು ತಿಳಿಯಬೇಕು. ರಾಕ್ಷಸಗ್ರಹವು ಪ್ರತ್ಯಕ್ಷವಾಗಿ ಕಾಣಿಸಿ ಕೊಳ್ಳದೇ ಇದ್ದರೂ ಅದು ಮಾಡುವ ಚರ್ಯೆಗಳಿಂದಲೇ ಮನುಷ್ಯರನ್ನು ಬಾಧಿಸುತ್ತದೆ. ಆ ಗ್ರಹದ ಚರ್ಯೆಯಿಂದಾಗಿ ಇದ್ದಕ್ಕಿದ್ದಂತೆ ವಾತಾವರಣವು ಸುವಾಸಿತವಾಗುತ್ತದೆ. ಅನೇಕವಿಧವಾದ ರಸಾಸ್ವಾದಕಪದಾರ್ಥಗಳು ಬಂದು ಬೀಳುತ್ತವೆ. ಇದರಿಂದಾಗಿ ಮನುಷ್ಯನ ಬುದ್ಧಿಯು ಭ್ರಮಣೆಹೊಂದುತ್ತದೆ. ಈ ಕಾರ್ಯವು ರಾಕ್ಷಸಗ್ರಹದ್ದೆಂದು ತಿಳಿಯಬೇಕು.

ಗಂಧರ್ವಗ್ರಹವೆಂಬುದೂ ಒಂದುಂಟು. ಇದು ಸೂಕ್ಷ್ಮರೂಪದಲ್ಲಿ ಮನುಷ್ಯನ ದೇಹವನ್ನು ಹೊಕ್ಕು ಮನುಷ್ಯನನ್ನು ಪ್ರಜ್ಞಾಹೀನನನ್ನಾಗಿ ಮಾಡಿ ಸುಶ್ರಾವ್ಯವಾಗಿ ಹಾಡುವುದರ ಮೂಲಕ ತನ್ನ ಅಸ್ತಿತ್ವವನ್ನು ತೋರಿಸಿಕೊಳ್ಳುತ್ತದೆ. ಅಂತಹ ಸಮಯದಲ್ಲಿ ಆ ಮನುಷ್ಯನನ್ನು ಗಂಧರ್ವ ಗ್ರಹಪೀಡಿತನಾದನೆಂದು ತಿಳಿದುಕೊಳ್ಳಬೇಕು. ಪಿಶಾಚವೆಂಬುದು ವಸ್ತುತಃ ಒಂದು ಗ್ರಹವೇ ಸರಿ. ಇದು ಮನುಷ್ಯರ ಹೆಗಲೇರಿ ಸದಾ ಅವರನ್ನು ಪೀಡಿಸುತ್ತಿರುತ್ತದೆ. ಕಾಲಕರ್ಮಸಂಯೋಗದಿಂದಾಗಿ ಯಕ್ಷರು ಮನುಷ್ಯನ ಶರೀರವನ್ನು ಪ್ರವೇಶಿಸಿಬಿಡುತ್ತಾರೆ. ಒಡನೆಯೇ ಮಾನವನು ಬುದ್ಧಿಹೀನ ನಾಗುತ್ತಾನೆ. ಅಂತಹ ಸಮಯಗಳಲ್ಲಿ ಅವನನ್ನು ಯಕ್ಷಗ್ರಹಪೀಡಿತನಾದವ ನೆಂದು ತಿಳಿದುಕೊಳ್ಳಬೇಕು.

ಧರ್ಮಜ! ಕೆಲವು ಸಮಯಗಳಲ್ಲಿ ಈ ಜನ್ಮದಲ್ಲಿಯೇ ಮಾಡಿದ ಅತಿ ತೀಕ್ಷ್ಣವಾದ ಪಾಪಕಾರ್ಯಗಳಿಂದ ಮಾನವನ ಮನಸ್ಸು ಪ್ರಕೋಪಿಸುವುದೂ ಉಂಟು. ಮನಸ್ಸಿಗೆ ಶಾಂತಿಯಿಲ್ಲದೇ ತಾನು ಮಾಡಿದ ಅತಿಶಯವಾದ ಪಾಪದ ಪರಿಣಾಮವಾಗಿ ಹುಚ್ಚನಾಗಿಬಿಡುತ್ತಾನೆ. ಅಂತಹ ಸಮಯಗಳಲ್ಲಿ ಶಾಸ್ತ್ರೀಯವಾದ ಪ್ರಾಯಶ್ಚಿತ್ತಾದಿಗಳನ್ನು ಮಾಡಿಸಿ ತನ್ಮೂಲಕವಾಗಿ ಅವನ ಪಾಪವು ಪರಿಹಾರವಾಯಿತೆಂಬುದನ್ನು ಅವನ ಮನಸ್ಸಿಗೆ ತಂದಲ್ಲಿ ಅವನ ಮನಸ್ಸು ಸುಸ್ಥಿರವಾಗಿ ನಿಲ್ಲಬಹುದು. ಮತ್ತೆ ಕೆಲವು ಸಮಯಗಳಲ್ಲಿ ಮಾನವನು ದಿಗ್ಭ್ರಮೆಯಿಂದಲೂ, ಭಯದಿಂದಲೂ ಮತ್ತು ಘೋರವಾದ ದೃಶ್ಯಗಳನ್ನು ನೋಡುವುದರಿಂದಲೂ ಹುಚ್ಚನಾಗುವುದುಂಟು. ಅಂತಹ

ಸಂದರ್ಭಗಳಲ್ಲಿ ಅವನನ್ನು ಸವಿಮಾತುಗಳಿಂದ ಸಂತೈಸುವುದೊಂದೇ ಅದಕ್ಕೆ ಪರಿಹಾರಮಾರ್ಗವಾಗಿರುತ್ತದೆ. ಗ್ರಹಗಳಲ್ಲಿ ಮೂರು ವಿಧವಾದ ಗ್ರಹಗಳಿರುತ್ತವೆ. ಕೆಲವಕ್ಕೆ ಕ್ರೀಡಾವಿನೋದಗಳಲ್ಲಿ ಆಶಯವಿರುತ್ತದೆ. ಮತ್ತೆ ಕೆಲವಕ್ಕೆ ಯಥೇಷ್ಟವಾಗಿ ತಿನ್ನುವ ಆಶಯವಿರುತ್ತದೆ. ಮತ್ತೆ ಕೆಲವಕ್ಕೆ ಕಾಮೋಪಭೋಗಗಳಲ್ಲಿ ಲಾಲಸೆಯಿರುತ್ತದೆ. ಮಾನವನಿಗೆ ಎಪ್ಪತ್ತುವರ್ಷಗಳು ತುಂಬುವವರೆಗೂ ನಾನು ಮೇಲೆ ಹೇಳಿದ ಗ್ರಹಗಳ ಬಾಧೆಯು ಒಂದಲ್ಲದೊಂದು ರೀತಿಯಲ್ಲಿ ಇದ್ದೇ ಇರುತ್ತದೆ. ಎಪ್ಪತ್ತುವರ್ಷಗಳು ತುಂಬಿದನಂತರ ಮನುಷ್ಯನನ್ನು ಕಾಡುವ ಏಕೈಕಗ್ರಹವೆಂದರೆ ಜ್ವರಗ್ರಹ. ಆದರೆ ಇಂದ್ರಿಯಗಳನ್ನು ಯಥೇಚ್ಛವಾಗಿ ಹರಿಯಬಿಡದೇ ಇರುವ ಜಿತೇಂದ್ರಿಯನಾದವನನ್ನೂ, ಸರ್ವದಾ ಶುಚಿಯಾಗಿರುವವನನ್ನೂ, ಯಾವಾಗಲೂ ಆಲಸ್ಯವಿಲ್ಲದವನನ್ನೂ, ಆಸ್ತಿಕನನ್ನೂ, ಕರ್ಮಶ್ರದ್ಧೆಯಿರುವವನನ್ನೂ–ಈ ಗ್ರಹಗಳು ಸ್ಪರ್ಶಿಸುವುದೂ ಇಲ್ಲ. ಈ ರೀತಿಯಾಗಿ ನಾನು ನಿನಗೆ ಮನುಷ್ಯನಿಗೆ ಬಾಲ್ಯದಾರಭ್ಯ ಅಂಟಿಕೊಳ್ಳಬಹುದಾದ ನಾನಾಗ್ರಹಗಳ ವಿವರಣೆಯೆಲ್ಲವನ್ನೂ ತಿಳಿಸಿರುತ್ತೇನೆ. ಭೂತಪತಿಯಾದ ಮಹೇಶ್ವರನ ಭಕ್ತರನ್ನು ಈ ಗ್ರಹಗಳು ಯಾವಾಗಲೂ ಮುಟ್ಟಲೂ ಸಹ ಯತ್ನಿಸುವುದಿಲ್ಲ."

೨೩೦ನೆಯ ಅಧ್ಯಾಯವು ಮುಗಿಯಿತು.

೨೩೧ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಸ್ಕಂದನು ಸ್ವಾಹಾದೇವಿಯನ್ನು ಸತ್ಕರಿಸಿದುದು : ರುದ್ರದೇವನೊಡನೆ ಸ್ಕಂದ ಮತ್ತು ದೇವತೆಗಳು ಭದ್ರವಟದ ಯಾತ್ರೆಮಾಡಿದುದು : ದೇವಾಸುರರ ಯುದ್ಧ: ಮಹಿಷಾಸುರನ ವಧೆ : ಸ್ಕಂದನ ಪ್ರಶಂಸೆ

ಮಾರ್ಕಂಡೇಯರು ಮುಂದುವರಿದು ಹೇಳುತ್ತಾರೆ :

"ಯುಧಿಷ್ಠಿರ! ನಾನು ಹೇಳಿದಂತೆ ಸ್ಕಂದನು ಮಾತೃಗಣಕ್ಕೆ ವರಪ್ರದಾನಮಾಡಿದನಂತರ ಸ್ವಾಹಾದೇವಿಯು ಸ್ಕಂದನನ್ನು ಕುರಿತು ಹೇಳಿದಳು :

"ಕುಮಾರ! ನೀನು ನನ್ನ ಔರಸಪುತ್ರನಾಗಿರುವೆ. ಆದುದರಿಂದ ನಾನು ಇತರರಿಗೆ ಪರಮದುರ್ಲಭವಾದ ನಿನ್ನ ಪ್ರೀತಿಯನ್ನು (ವರವನ್ನು) ಅಪೇಕ್ಷಿಸುವೆನು."

"ಯಾವ ವಿಧವಾದ ಪ್ರೀತಿಯನ್ನು (ವರವನ್ನು) ನನ್ನಿಂದ ನೀನು ಅಪೇಕ್ಷಿಸುವೆಯಮ್ಮಾ?"

"ಸ್ಕಂದ! ನಾನು ದಕ್ಷಬ್ರಹ್ಮನ ಪ್ರಿಯಪುತ್ರೀ. ನನ್ನನ್ನು ಸ್ವಾಹಾ ದೇವಿಯೆಂದು ಕರೆಯುತ್ತಾರೆ. ಬಾಲ್ಯದಿಂದಲೂ ಸಹ ನಾನು ಹುತಾಶನ ನಲ್ಲಿಯೇ ಅನುರಕ್ತಳಾಗಿರುತ್ತೇನೆ. ಆದರೆ ಮಹಾತ್ಮನಾದ ಅಗ್ನಿದೇವನು ಮಾತ್ರ ನಾನು ಅವನಲ್ಲಿ ಗಾಢಾನುರಕ್ತಳಾಗಿರುವೆನೆಂಬ ವಿಷಯವನ್ನು ತನ್ನ ಮನಸ್ಸಿಗೆ ತೆಗೆದುಕೊಂಡಿರುವುದಿಲ್ಲ. ನಿನ್ನ ಅನುಗ್ರಹದಿಂದಲಾದರೂ ನಾನು ಅಗ್ನಿಯೊಡನೆ ಶಾಶ್ವತವಾಗಿ ಸರ್ವಕಾಲದಲ್ಲಿಯೂ ಇರುವಿಕೆಯನ್ನು ಅಪೇಕ್ಷಿ ಸುತ್ತೇನೆ."

ಸ್ವಾಹಾದೇವಿಯ ಮಾತಿಗೆ ಸ್ಕಂದನು ನಸುನಗುತ್ತಾ ಉತ್ತರಿಸಿದನು :

"ಅಮ್ಮಾ! ದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಹವ್ಯಗಳಲ್ಲಿಯೇ ಆಗಲೀ, ಪಿತೃಗಳ ಪ್ರೀತ್ಯರ್ಥವಾಗಿ ಮಾಡುವ ಕವ್ಯಗಳಲ್ಲಿಯೇ ಆಗಲೀ ಅಥವಾ ಇತರ ಯಾವ ಕರ್ಮಗಳಲ್ಲಿಯೇ ಆಗಲೀ–ಸತ್ಪುರುಷರೂ ಸದಾ ಚಾರನಿಷ್ಠರೂ ಆದ ಬ್ರಾಹ್ಮಣರು ತತ್ತದ್ದೇವತೋದ್ದೇಶಕವಾದ ಮಂತ್ರಗಳಿಂದ 'ಸ್ವಾಹಾ' ಎಂದು ಹೇಳಿ ನಿನ್ನನ್ನು ಅನುಸಂಧಾನಮಾಡಿಯೇ ಇನ್ನು ಮುಂದೆ ಅಗ್ನಿಯಲ್ಲಿ ಹೋಮಮಾಡುತ್ತಾರೆ. ಹೀಗೆ ಮಾಡುವುದರಿಂದ ನೀನು ಸದಾ ಅಗ್ನಿಯೊಡನೆಯೇ ಇದ್ದಂತಾಗುವುದಿಲ್ಲವೇ?"

ಯುಧಿಷ್ಠಿರ! ಸ್ಕಂದನ ಈ ಮಾತುಗಳನ್ನು ಕೇಳಿ ಸ್ವಾಹಾದೇವಿಗೆ ಅಮಿತವಾದ ಆನಂದವುಂಟಾಯಿತು. ಸ್ಕಂದನ ಆಣತಿಯಂತೆ ತನ್ನ ಪತಿ ಯಾದ ಅಗ್ನಿದೇವನಿಂದೊಡಗೂಡಿ ಸ್ವಾಹಾದೇವಿಯು ಸ್ಕಂದನನ್ನು ಯಥೋ ಚಿತವಾಗಿ ಪೂಜಿಸಿದಳು.

ಅನಂತರ ಬ್ರಹ್ಮನು ಮಹಾಸೇನನನ್ನು ಕುರಿತು ಹೇಳಿದನು :

"ಸ್ಕಂದ! ನೀನೀಗಲೇ ತ್ರಿಪುರಾಸುರಹಂತಕನಾದ ನಿನ್ನ ತಂದೆಯಾದ ಮಹಾದೇವನ ಸಮೀಪಕ್ಕೆ ಹೋಗು. (ಹೋಗಿ ಅವನನ್ನು ಯಥೋಚಿತವಾಗಿ ಪೂಜಿಸು.) ಸಕಲಲೋಕಗಳ ಹಿತಾರ್ಥವಾಗಿ ರುದ್ರನು ಅಗ್ನಿಯೊಡನೆ ಸೇರಿಕೊಳ್ಳಲಾಗಿ, ಉಮಾದೇವಿಯು ಸ್ವಾಹಾದೇವಿಯೊಡನೆ ಸೇರಿಕೊಳ್ಳಲಾಗಿ

ಅವರಿಬ್ಬರ ಸಮಾಗಮದಿಂದ ಇತರರಿಂದ ಜಯಿಸಲು ಅಸಾಧ್ಯನಾದ ಮಹಾ ಪರಾಕ್ರಮಿಯಾದ ನೀನು ಹುಟ್ಟಿರುವೆ.

ಹಿಂದೊಮ್ಮೆ ಈಶ್ವರ-ಪಾರ್ವತಿಯರು ರತಿಕ್ರೀಡೆಯಾಡುತ್ತಿದ್ದಾಗ ರುದ್ರನ ವೀರ್ಯವು ಸ್ಖಲಿತವಾಗಿ ಈ ಪರ್ವತದ ಮೇಲೆ ಬಿದ್ದುಹೋಯಿತು. ಅದರ ಒಂದು ಭಾಗದಿಂದ ಮಿಂಜಿಕಾ-ಮಿಂಜಿಕರೆಂಬ ಅವಳೀಮಕ್ಕಳು ಹುಟ್ಟಿದುವು. ಇನ್ನೊಂದು ಭಾಗವು ರಕ್ತಸಮುದ್ರದಲ್ಲಿ ಬಿದ್ದಿತು. ಮತ್ತೊಂದು ಭಾಗವು ಸೂರ್ಯಕಿರಣಗಳಲ್ಲಿಯೂ, ನಾಲ್ಕನೆಯ ಭಾಗವು ಭೂಮಿಯಲ್ಲಿಯೂ ಐದನೆಯ ಭಾಗವು ವೃಕ್ಷಗಳಲ್ಲಿಯೂ ಸೇರಿಕೊಂಡಿತು. ಶಂಕರನ ರೇತಸ್ಸಿನಿಂದ ಹುಟ್ಟಿದ ಇವುಗಳನ್ನು ಪಂಚಗಣಗಳೆಂದೂ ಹೇಳುತ್ತಾರೆ. ರಕ್ತ ಮಾಂಸಾಶಿಗಳಾದ ಘೋರರೂಪಿಗಳಾದ ನಿನ್ನ ಅನೇಕ ಅನುಯಾಯಿಗಳೂ ಸಹ ರುದ್ರನ ವೀರ್ಯೋತ್ಪನ್ನರೆಂದೇ ತಿಳಿದವರು ಹೇಳುತ್ತಾರೆ.”

ಬ್ರಹ್ಮನು ಹೇಳಿದ ಮಾತುಗಳನ್ನು ಕೇಳಿ ಮಹಾಸೇನನು ‘ತಥಾಸ್ತು’ ಎಂದು ಪ್ರತಿವಚನವನ್ನಿತ್ತು ಮಹೇಶ್ವರನ ಬಳಿಗೆ ಹೋಗಿ ಅವನನ್ನು ಪಿತೃಭಕ್ತಿ ಪೂರ್ವಕವಾಗಿ ಪೂಜಿಸಿದನು.

ಯುಧಿಷ್ಠಿರ! ಧನಾರ್ಥಿಗಳಾದವರು ಮತ್ತು ರೋಗದಿಂದ ವಿಮೋಚನೆ ಯನ್ನು ಪಡೆಯಲಿಚ್ಛಿಸುವವರು ಈ ಪಂಚಗಣಗಳನ್ನೂ ಎಕ್ಕದ ಹೂಗಳಿಂದ ಪೂಜಿಸಬೇಕು. ರುದ್ರಸಂಭವರಾದ ಮಿಂಜಿಕಾ-ಮಿಂಜಿಕರನ್ನೂ ಸಹ ಶಿಶುಗಳ ಹಿತಾರ್ಥವಾಗಿ ಸರ್ವದಾ ಪೂಜಿಸುತ್ತಿರಬೇಕು. ಮನುಷ್ಯರ ಮಾಂಸದಿಂದಲೇ ಜೀವಿಸುವ ವೃದ್ಧಿಕಾ ಎಂಬ ಹೆಸರಿನ ಗ್ರಹಗಳು ವೃಕ್ಷಗಳಲ್ಲಿ ಹುಟ್ಟುತ್ತವೆ. ಮಕ್ಕಳನ್ನಪೇಕ್ಷಿಸುವವರು ಈ ವೃದ್ಧಿಕಾಗ್ರಹಗಳನ್ನು ಪೂಜಿಸಿ ಪ್ರಾರ್ಥಿಸಬೇಕು. ಈ ರೀತಿಯಾಗಿ ಈ ಪಿಶಾಚಗಣಗಳು ಅಸಂಖ್ಯಾತವಾಗಿವೆ.

ಇನ್ನು ಮುಂದೆ ನಾನು ಸ್ಕಂದನ ಪತಾಕೆ ಮತ್ತು ಘಂಟೆಯ ವಿಷಯ ವಾಗಿ ಹೇಳುತ್ತೇನೆ, ಕೇಳು. ಯುಧಿಷ್ಠಿರ! ಇಂದ್ರನ ಪಟ್ಟದಾನೆಯಾದ ಐರಾವತಕ್ಕೆ ಎರಡು ಘಂಟೆಗಳೂ ಎರಡು ಧ್ವಜಗಳೂ ಇದ್ದುವು. ಧೀಮಂತ ನಾದ ಇಂದ್ರನು ಅವುಗಳಲ್ಲಿ ಒಂದನ್ನು ವಿಶಾಖನಿಗೂ ಮತ್ತೊಂದನ್ನು ಸ್ಕಂದ ನಿಗೂ, ಅರ್ಪಿಸಿದನು. ಸ್ಕಂದ ಮತ್ತು ವಿಶಾಖರ ಪತಾಕೆಗಳು ಕೆಂಪುಬಣ್ಣ

ದಿಂದ ಕೂಡಿವೆ. ದೇವತೆಗಳು ಅರ್ಪಿಸಿದ ಆಟದ ವಸ್ತುಗಳಿಂದಲೇ ಮಹಾಸೇನನು ಸಂತುಷ್ಟನಾಗಿ ಆ ವಸ್ತುಗಳನ್ನೇ ಇಟ್ಟುಕೊಂಡು ಕ್ರೀಡಿಸುತ್ತಿದ್ದನು. ಪಿಶಾಚಗಣಗಳಿಂದಲೂ, ದೇವಗಣಗಳಿಂದಲೂ ಸುತ್ತುವರಿಯಲ್ಪಟ್ಟು ಸ್ವರ್ಣ ಶೈಲದಲ್ಲಿ ಉಪಸ್ಥಿತನಾಗಿದ್ದ ಸ್ಕಂದನು ನಯನಮನೋಹರವಾದ ಕಾಂತಿಯಿಂದ ಬೆಳಗಿದನು. ಸುಂದರವಾದ ಗುಹೆಗಳಿಂದ ಕೂಡಿದ ಮಂದರಪರ್ವತವು ಕಿರಣಗಳಿಂದ ಕೂಡಿದ ಸೂರ್ಯನಿಂದ ಪ್ರಕಾಶಮಾನವಾಗಿ ಕಾಣುವಂತೆ–ಕಾಂತಿಮಂತನಾದ ಗುಹನ ಸಾನ್ನಿಧ್ಯದಿಂದ ಸುಂದರವಾದ ಅರಣ್ಯ ಸಂಪತ್ತಿನಿಂದ ಕೂಡಿದ್ದ ಆ ಶ್ವೇತಪರ್ವತವು ಕಂಗೊಳಿಸಿತು. ಆ ಶ್ವೇತಪರ್ವತವು ಸ್ವರ್ಗಲೋಕದ ಪುಷ್ಪಭರಿತವಾದ ಸಂತಾನಕವೃಕ್ಷಗಳಿಂದ ಕೂಡಿದ ವನಗಳಿಂದಲೂ, ಕರವೀರವನಗಳಿಂದಲೂ, ಪಾರಿಜಾತವನಗಳಿಂದಲೂ, ಜಪಾಪುಷ್ಪಲತೆಗಳ ಮತ್ತು ಅಶೋಕವೃಕ್ಷಗಳ ವನಗಳಿಂದಲೂ, ಕದಂಬವನಗಳಿಂದಲೂ, ದೇವಲೋಕದ ಮೃಗ-ಪಕ್ಷಿಗಳ ಸಮೂಹಗಳಿಂದಲೂ ಕೂಡಿದ್ದಾಗಿ ಬಹುವಾಗಿ ಪ್ರಕಾಶಿಸುತ್ತಿದ್ದಿತು. ಸರ್ವದೇವಗಣಗಳೂ ದೇವರ್ಷಿಗಣಗಳೂ ಅಲ್ಲಿ ಉಪಸ್ಥಿತವಾಗಿದ್ದುವು. ಈ ಸಮಯದಲ್ಲಿ ಉಂಟಾದ ಮೇಘಗಳ ಮತ್ತು ವಾದ್ಯಗಳ ನಿನಾದವು ಸಮುದ್ರರಾಜನ ಭೋರ್ಗರೆಯುವ ಶಬ್ದವನ್ನು ಅನುಕರಣೆಮಾಡುತ್ತಿದ್ದಿತು. ಗಂಧರ್ವಾಪ್ಸರೆಯರು ನಯನಮನೋಹರ ವಾಗಿ ನೃತ್ಯಮಾಡುತ್ತಿದ್ದರು. ಸಂತುಷ್ಟವಾದ ಸಕಲಭೂತಗಳ ಆನಂದ ನಿನಾದವೂ ಆ ಶ್ವೇತಪರ್ವತದಲ್ಲಿ ಕೇಳಿಬರುತ್ತಿದ್ದಿತು. ಈ ರೀತಿಯಾಗಿ ಇಂದ್ರನೇ ಆದಿಯಾಗಿ ಸಕಲದೇವತೆಗಳೂ ಆ ಶ್ವೇತಪರ್ವತದಲ್ಲಿ ಉಪಸ್ಥಿತ ರಾಗಿ ಸ್ಕಂದನ ಮುಖಾರವಿಂದವನ್ನು ಎವೆಯಿಕ್ಕದೇ ನೋಡುತ್ತಿದ್ದರು. ಎಷ್ಟು ನೋಡಿದರೂ ಅವರಿಗೆ ತೃಪ್ತಿಯೆಂಬುದೇ ಇರುತ್ತಿರಲಿಲ್ಲ.

ಧರ್ಮಜ! ನಾನು ಹಿಂದೆ ಹೇಳಿದ ರೀತಿಯಲ್ಲಿ ಅಗ್ನಿಪುತ್ರನಾದ ಸ್ಕಂದನಿಗೆ ದೇವಸೇನಾಧಿಪತ್ಯದ ಪಟ್ಟಗಟ್ಟಲಾಗಿ, ಪರಮಸಂತುಷ್ಟನಾದ ಮಹಾದೇವನು ಸೂರ್ಯಸದೃಶವಾಗಿದ್ದ, ಸಹಸ್ರಸಿಂಹಗಳನ್ನು ಕಟ್ಟಿರುವ ಉತ್ತಮೋತ್ತಮವಾದ ರಥದಲ್ಲಿ ಪಾರ್ವತಿಯೊಡನೆ ಕುಳಿತು ಭದ್ರವಟವೆಂಬ ಸ್ಥಳಕ್ಕೆ ಪ್ರಯಾಣಹೊರಟನು. ಮಹಾಕಾಲನಿಂದ ನಡೆಸಲ್ಪಡುತ್ತಿದ್ದ ಆ ರಥವು ಆಕಾಶದ ಮಧ್ಯದಲ್ಲಿ ಪ್ರಯಾಣಮಾಡುತ್ತಿದ್ದಿತು. ಆ ಸಿಂಹಗಳು

ಹೋಗುತ್ತಿರುವುದನ್ನು ನೋಡಿದರೆ ಇವೇನಾದರೂ ಆಕಾಶವನ್ನೇ ಕಬಳಿಸುತ್ತಿರುವುವೋ–ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದುವು. ಸಕಲ ಚರಾಚರಗಳೂ ಆ ಸಿಂಹಗಳ ಗರ್ಜನೆಗಳಿಂದ ಭೀತವಾದುವು. ನಯನಮನೋಹರವಾದ ಕೇಶರಾಶಿಗಳಿಂದ ಕೂಡಿದ್ದ ಸಿಂಹಗಳು ಸಿಂಹನಾದಮಾಡುತ್ತಾ ಆಕಾಶದಲ್ಲಿ ಪ್ರಯಾಣಮಾಡುತ್ತಿದ್ದುವು. ಕಾಮನಬಿಲ್ಲಿನಿಂದ ಕೂಡಿದ ಮೇಘದಲ್ಲಿರುವ ಮಿಂಚಿನಿಂದ ಕೂಡಿದ ಸೂರ್ಯನಂತೆ–ದಿವ್ಯರಥದಲ್ಲಿ ಉಮೆಯೊಡನೆ ಉಪಸ್ಥಿತನಾಗಿದ್ದ ಪರಮೇಶ್ವರನು ಪ್ರಕಾಶಿಸಿದನು. ಮಹೇಶ್ವರನ ರಥದ ಮುಂಭಾಗದಲ್ಲಿ ನರವಾಹನನಾದ, ಧನದನಾದ ಕುಬೇರನು ಗುಹ್ಯಕರಿಂದ ಪರಿವೃತನಾಗಿ ಪುಷ್ಪಕವಿಮಾನದಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದನು.

ಇಂದ್ರನೂ ಸಹ ವರದನಾದ ವೃಷಭಧ್ವಜನನ್ನನುಸರಿಸಿ ಐರಾವತದ ಮೇಲೆ ಕುಳಿತು ದೇವತೆಗಳಿಂದ ಅನುಸೃತನಾಗಿ ರುದ್ರನ ರಥದ ಹಿಂಬದಿಯಲ್ಲಿ ಹೊರಟನು. ಪರಮೇಶ್ವರನ ರಥದ ಬಲಪಾರ್ಶ್ವದಲ್ಲಿ ಅಮೋಘನೆಂಬ ಮಹಾಯಕ್ಷನು ಸುಮನೋಹರವಾದ ರತ್ನಮಾಲಿಕೆಗಳಿಂದಲೂ-ಪುಷ್ಪಮಾಲಿಕೆಗಳಿಂದಲೂ ಅಲಂಕೃತನಾಗಿ, ಜಂಭಕರೇ ಮೊದಲಾದ ಯಕ್ಷ-ರಾಕ್ಷಸರಿಂದೊಡಗೂಡಿದವನಾಗಿ ಪ್ರಯಾಣಹೊರಟನು. ಅಮೋಘನ ಬಲಪಾರ್ಶ್ವದಲ್ಲಿ ಚಿತ್ರ-ವಿಚಿತ್ರವಾದ ಯುದ್ಧಗಳಲ್ಲಿ ಪರಿಶ್ರಮವಿರುವ ಬಹುಸಂಖ್ಯಾತರಾದ, ದೇವಯೋಧರು ವಸುಗಳಿಂದಲೂ, ರುದ್ರರಿಂದಲೂ ಕೂಡಿದವರಾಗಿ ಪ್ರಯಾಣಹೊರಟರು. ಘೋರವಾದ ಶರೀರದಿಂದ ಕೂಡಿದ್ದ ಯಮನೂ ಸಹ ಮೃತ್ಯುಸಮೇತನಾಗಿ ಘೋರರಾದ ನೂರಾರು ವ್ಯಾಧಿಗಳ ಅಧಿದೇವತೆಗಳಿಂದ ಅನುಸೃತನಾಗಿ ರುದ್ರನ ರಥವನ್ನನುಸರಿಸಿ ಹೊರಟನು. ಯಮನ ಹಿಂಭಾಗದಲ್ಲಿಯೇ ಮೂರು ತಲೆಗಳಿಂದ ಕೂಡಿದ್ದ, ಘೋರರೂಪಿಯಾಗಿದ್ದ ವಿಜಯ ಎಂಬ ಹೆಸರಿನ ರುದ್ರನ ಶೂಲವು ಸರ್ವಾಲಂಕಾರಭೂಷಿತವಾಗಿ ಹೊರಟಿತು. ಜಲದೇವತೆಯಾದ ವರುಣನು ಉಗ್ರಪಾಶವನ್ನು ಧರಿಸಿ, ಅನೇಕ ಜಲಜಂತುಗಳಿಂದ ಪರಿವೃತನಾಗಿ ತ್ರಿಶೂಲದ ಹಿಂದೆ ಹೊರಟನು. ತ್ರಿಶೂಲದ ಹಿಂಬದಿಯಲ್ಲಿ ಪಟ್ಟಿಶವೆಂಬ ದಿವ್ಯಾಯುಧವು, ಗದೆ, ಮುಸಲ, ಶಕ್ತ್ಯಾಯುಧಗಳೇ ಮುಂತಾದ ನಾನಾವಿಧವಾದ ಆಯುಧವಿಶೇಷಗಳಿಂದ ಪರಿವೃತವಾಗಿ ರುದ್ರನನ್ನನುಸರಿಸಿ ಹೊರಟಿತು.

ಪಟ್ಟಿಶದ ಹಿಂದೆಯೇ ದಿವ್ಯವಾದ ಪ್ರಭೆಯಿಂದ ಕೂಡಿದ್ದ ಶ್ವೇತಚ್ಛತ್ರಿಯು ಹೊರಟಿತು. ಮಹರ್ಷಿಗಣಸೇವಿತವಾದ ಕಮಂಡಲವೂ ಮತ್ತು ಕಾಂತಿಯುಕ್ತವಾಗಿದ್ದ ದಂಡವೂ ಸಹ ರಥದ ದಕ್ಷಿಣಪಾರ್ಶ್ವದಲ್ಲಿ ಪ್ರಯಾಣಮಾಡುತ್ತಿದ್ದುವು. ಅವುಗಳೆಲ್ಲವೂ ಹಿಂಬದಿಯಲ್ಲಿ ಬರುತ್ತಿರಲು ಮಹಾದೇವನು ವಿಮಲವಾದ ರಥದಲ್ಲಿ ಕುಳಿತು, ಭೃಗ್ವಂಗಿರಸಾದಿಗಳಿಂದ ಕೂಡಿದ ದೇವತೆಗಳಿಂದ ಪೂಜಿಸಲ್ಪಡುತ್ತಿದ್ದ ತನ್ನ ದಿವ್ಯವಾದ ತೇಜಸ್ಸಿನಿಂದ ದೇವೇಂದ್ರನೇ ಮೊದಲಾದ ಎಲ್ಲ ದೇವತೆಗಳಿಗೂ, ದೇವರ್ಷಿಗಳಿಗೂ, ಗಂಧರ್ವರಿಗೂ, ಸರ್ಪಗಳಿಗೂ ಸಂತಸವನ್ನುಂಟುಮಾಡುತ್ತಾ ಪ್ರಯಾಣಮಾಡುತ್ತಿದ್ದನು.

ಧರ್ಮಜ! ನದಿಗಳೂ, ಸರೋವರಗಳೂ, ಸಮುದ್ರಗಳೂ (ಅವುಗಳ ಅಧಿದೇವತೆಗಳು), ಅಪ್ಸರೆಯರೂ, ನಕ್ಷತ್ರ-ಗ್ರಹ-ತಾರೆಗಳೂ, ದೇವಶಿಶುಗಳೂ ಮತ್ತು ಅನೇಕವಿಧವಾದ ಆಕಾರವನ್ನು ಧರಿಸಿದ್ದ ಸ್ತ್ರೀಯರೂ ಮಹಾದೇವನ ಹಿಂಬದಿಯಲ್ಲಿ ಅವನನ್ನನುಸರಿಸಿ ಹೊರಟರು. ಮನೋಹರವಾದ ರೂಪವನ್ನು ಧರಿಸಿದ್ದ ವರಾಂಗನೆಯರು ಮಹೇಶ್ವರನು ಹೋಗುತ್ತಿದ್ದಾಗ ದಾರಿಯುದ್ದಕ್ಕೂ ಪುಷ್ಪವೃಷ್ಟಿಯನ್ನು ಕರೆಯುತ್ತಿದ್ದರು. ಪರ್ಜನ್ಯನೂ ಸಹ ರಥಾರೂಢನಾಗಿದ್ದ ರುದ್ರನಿಗೆ ನಮಸ್ಕರಿಸಿ ಅವನ ಹಿಂದೆಯೇ ಹೊರಟನು. ಸೋಮನು ಬಂದು ಪರಮೇಶ್ವರನ ತಲೆಯ ಮೇಲೆ ಶ್ವೇತಚ್ಛತ್ರಿಯನ್ನು ಹಿಡಿದು ನಿಂತನು. ವಾಯ್ವಗ್ನಿಗಳು ಎರಡು ಪಾರ್ಶ್ವಗಳಲ್ಲಿಯೂ ನಿಂತು ಚಾಮರಗಳನ್ನು ಬೀಸತೊಡಗಿದರು.

ಧರ್ಮಜ! ನಾನು ಹಿಂದೆಯೇ ಹೇಳಿದಂತೆ ಇಂದ್ರನು ರುದ್ರರಥದ ಹಿಂಬದಿಯಲ್ಲಿ ಪ್ರಯಾಣಮಾಡುತ್ತಿದ್ದನಲ್ಲದೇ ರಾಜರ್ಷಿಗಳೊಡನೆ ವೃಷಕೇತನನಾದ ಪರಶಿವನನ್ನು ನಾನಾಪ್ರಕಾರವಾದ ಸ್ತೋತ್ರಗಳಿಂದ ಸ್ತುತಿಮಾಡುತ್ತಿದ್ದನು. ಗೌರೀ, ವಿದ್ಯಾ, ಗಾಂಧಾರಿ, ಕೇಶಿನೀ, ಮಿತ್ರಾ–ಇವರು ಸಾವಿತ್ರಿಯಿಂದೊಡಗೂಡಿದವರಾಗಿ ಪಾರ್ವತಿಯನ್ನನುಸರಿಸಿ ಹೊರಟರು. ಅವರ ಹಿಂದೆ ವಿದ್ಯಾಧಿದೇವತೆಗಳೂ, ಕವಿಪ್ರಕಾಶಿತರಾದ ಕಾವ್ಯಾಧಿದೇವತೆಗಳೂ ಹೊರಟರು. ದೇವ-ದಾನವರ ಯುದ್ಧಸಮಯದಲ್ಲಿ ಇಂದ್ರಪ್ರಮುಖರಾದ ಎಲ್ಲ ದೇವತೆಗಳೂ ಒಂದು ರಾಕ್ಷಸಗ್ರಹದ ನಿರ್ದೇಶನದಂತೆ ನಡೆಯುತ್ತಾರೆ.

ಆ ರಾಕ್ಷಸಗ್ರಹವೇ ಇಂದು ರುದ್ರನ ಪತಾಕೆಯನ್ನು ಹಿಡಿದು ರಥದ ಮುಂದೆ ಹೊರಟಿತು. ಶ್ಮಶಾನದಲ್ಲಿಯೇ ನಿತ್ಯನಿವಾಸಿಯಾದ, ರುದ್ರಸಖನಾದ, ಪಿಂಗಲ ನೆಂಬ ಯಕ್ಷರಾಜನು ರುದ್ರನ ಪರಿವಾರದೊಡನೆ ಹೊರಟನು. ಆದರೆ ಅವನು ಯಾರೊಡನೆಯೂ ಒಂದು ಕ್ಷಣಕಾಲವೂ ನಿಲ್ಲದೆ ಕೆಲವೊಮ್ಮೆ ರುದ್ರರಥದ ಮುಂಭಾಗದಲ್ಲಿಯೂ ಮರುಕ್ಷಣದಲ್ಲಿಯೇ ರುದ್ರರಥದ ಹಿಂಭಾಗದಲ್ಲಿಯೂ ಇರುತ್ತಿದ್ದನು. ಅವನ ಗತಿಯು ಮಾತ್ರ ಯಾವಾಗಲೂ ಒಂದೇ ಸಮವಾಗಿರುತ್ತಿರಲಿಲ್ಲ. (ಉಳಿದವರೆಲ್ಲರೂ ಸಮಸ್ಥಿತಿಯಿಂದ ಹೋಗು ತ್ತಿದ್ದರು.)

ರುದ್ರದೇವತೆಯನ್ನು ಈ ಲೋಕದಲ್ಲಿ ಮಾನವರು ಸತ್ಕರ್ಮಗಳಿಂದ ಆರಾಧನೆಮಾಡುತ್ತಾರೆ. ಈಶನನ್ನು, ರುದ್ರನನ್ನು, ಪಿತಾಮಹನನ್ನು ಇಲ್ಲಿಯ ಜನಗಳು ಶಿವನೆಂದೇ (ಮಂಗಳದಾಯಕ) ಕರೆಯುತ್ತಾರೆ. ವಿವಿಧವಾದ ಅವತಾರರೂಪಗಳಲ್ಲಿಯೂ ಇವನನ್ನು (ಶಿವನನ್ನು) ಆರಾಧಿಸುತ್ತಾರೆ. ದೇವತೆಗಳು ರುದ್ರನ ರಥವನ್ನು ಅನುಸರಿಸಿ ಹೊರಟಂತೆಯೇ ದೇವಸೇನಾ ಪತಿಯಾದ, ಕೃತ್ತಿಕಾಸುತನಾದ, ಬ್ರಹ್ಮಣ್ಯನಾದ ಸ್ಕಂದನೂ ಸಹ ದೇವಸೈನ್ಯ ಗಳಿಂದ ಕೂಡಿದವನಾಗಿ ತನ್ನನ್ನೇ ಅನುಸರಿಸಿ ಬರುತ್ತಿರುವುದನ್ನು ಕಂಡು ಮಹೇಶ್ವರನು ಪ್ರಫುಲ್ಲವದನನಾಗಿ ಮಹಾಸೇನನನ್ನು ಕುರಿತು ಮಹತ್ತರ ವಾದ ಈ ಮಾತನ್ನು ಹೇಳಿದನು :

"ಸ್ಕಂದ! ನೀನು ಬಹುಜಾಗರೂಕತೆಯಿಂದಿರುತ್ತಾ ಮಾರುತಸ್ಕಂಧ ವೆಂಬ ದೇವತೆಗಳ ಏಳನೆಯ ಸೈನ್ಯವಿಭಾಗವನ್ನು ಸಂರಕ್ಷಿಸು."

"ಪ್ರಭುವೇ! ನಿನ್ನ ಆಜ್ಞೆಯಂತೆಯೇ ದೇವತೆಗಳ ಏಳನೆಯ ಸೈನ್ಯ ವಿಭಾಗದ ಪಾಲನೆಮಾಡುತ್ತೇನೆ. ಇನ್ನೇನಾದರೂ ನಾನು ಮಾಡುವ ಕಾರ್ಯ ವಿದ್ದರೆ ಒಡನೆಯೇ ಆಜ್ಞಾಪಿಸು."

"ಪುತ್ರ! ಮಾಡುವ ಕಾರ್ಯಗಳಲ್ಲಿ ನಿನ್ನಿಂದ ನಾನು ಯಾವಾಗಲೂ ನೋಡಲ್ಪಡಬೇಕು. (ನನ್ನ ಅನುಗ್ರಹವನ್ನು ಪಡೆಯಬೇಕು.) ನನ್ನ ಸಂದರ್ಶನ ದಿಂದಲೂ ಮತ್ತು ನನ್ನಲ್ಲಿರುವ ಭಕ್ತಿಯಿಂದಲೂ ನಿನಗೆ ಪರಮೋ ತ್ಕೃಷ್ಟವಾದ ಶ್ರೇಯಸ್ಸು ಲಭಿಸುತ್ತದೆ."

ಧರ್ಮಜ! ಮಹೇಶ್ವರನು ಹೀಗೆಂದು ಹೇಳಿ ತನ್ನ ಪ್ರಿಯಪುತ್ರನಾದ ಮಹಾಸೇನನನ್ನು ಗಾಢವಾಗಿ ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಅವನನ್ನು ದೇವಸೇನೆಯ ಏಳನೆಯ ವಿಭಾಗದ ರಕ್ಷಣೆಗಾಗಿ ಕಳುಹಿಸಿ ಕೊಟ್ಟನು.



ಮಹಾಸೇನನನ್ನು ರುದ್ರನು ಕಳುಹಿಸಿಕೊಟ್ಟ ಸ್ವಲ್ಪಕಾಲದಲ್ಲಿಯೇ ಮಹತ್ತರವಾದ ಉತ್ಪಾತವುಂಟಾಯಿತು. ಆ ಉತ್ಪಾತವು ಸಕಲದೇವತೆಗಳನ್ನೂ ಭ್ರಾಂತರನ್ನಾಗಿ ಮಾಡಿತು. ನಕ್ಷತ್ರಸಹಿತವಾದ ಆಕಾಶವು ಧಗ- ಧಗನೆ ಉರಿಯಹತ್ತಿತು. ಸಕಲಭುವನಗಳೂ ಒಡನೆಯೇ ಭ್ರಾಂತವಾದುವು. ಭೂಮಿಯು ಕಂಪಿಸಿತು. ಘೋರವಾದ ಶಬ್ದವಾಯಿತು. ಜಗತ್ತಿನಲ್ಲೆಲ್ಲಾ

ಕತ್ತಲೆಯು ಆವರಿಸಿತು. ದಾರುಣವಾದ ಆ ಭಯಾನಕದೃಶ್ಯವನ್ನು ಕಂಡು ಶಂಕರನೂ ಕ್ಷುಭಿತನಾದನು. ಶಂಕರನೇ ಭ್ರಾಂತನಾದನೆಂದರೆ ಉಳಿದವರ ಪಾಡೇನು? ಮಹಾಭಾಗೆಯಾದ ಉಮೆಯೂ, ದೇವತೆಗಳೂ, ಋಷಿ-ಮಹರ್ಷಿಗಳೂ ಭ್ರಾಂತರಾದರು. ಎಲ್ಲರೂ ಈ ರೀತಿಯಲ್ಲಿ ದಿಙ್ಮೂಢರಾಗಲಾಗಿ ಪರ್ವತಕ್ಕೆ ಅಥವಾ ಮೋಡಕ್ಕೆ ಸಮಾನವಾದ, ನಾನಾವಿಧವಾದ ಆಯುಧಗಳಿಂದ ಸಜ್ಜಾಗಿದ್ದ ದೊಡ್ಡ ಸೈನ್ಯವೊಂದು ಅವರ ಕಣ್ಣಿಗೆ ಕಾಣಿಸಿತು. ಭಯಂಕರಾಕಾರರಾದ, ಅಸಂಖ್ಯಾತರಾದ ಯೋಧರು ಹಲವಾರು ವೀರೋಕ್ತಿಗಳನ್ನು ಹೇಳಿಕೊಂಡು ಗರ್ಜನೆಮಾಡುತ್ತಾ, ಶಂಕರನೂ ಮತ್ತು ದೇವತೆಗಳೂ ಇದ್ದ ಸ್ಥಳಕ್ಕೆ–ಅವರೊಡನೆ ಯುದ್ಧಮಾಡುವ ಸಲುವಾಗಿಯೇ ಧಾವಿಸಿ ಬಂದರು. ಆ ಘೋರಸೈನಿಕರು ಬರುತ್ತಿರುವಾಗಲೇ ದೇವಸೈನ್ಯದ ಮೇಲೆ ಬಾಣಗಳ ಮಳೆಯನ್ನು ಕರೆದರು. ಮತ್ತೆ ಕೆಲವು ಸೈನಿಕರು ಪರ್ವತಗಳನ್ನೇ ಕಿತ್ತು ದೇವಸೇನೆಯ ಕಡೆಗೆ ತೂರಿದರು. ಶತಘ್ನೀ, ಪ್ರಾಸ, ಕತ್ತಿ, ಪರಿಘ, ಗದೆ–ಇವುಗಳು ಅವ್ಯಾಹತವಾಗಿ ದೇವಸೇನೆಯ ಮೇಲೆ ಬೀಳುತ್ತಿರಲಾಗಿ ದೇವಸೇನೆಯು ಓಡತೊಡಗಿತು. ಅವರಿಗೆ ಆ ಸಮಯದಲ್ಲಿ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಇಂದ್ರಾದಿ ನಾಯಕರೂ ಸಹ ಕ್ಷಣಕಾಲ ಏನೂ ತೋಚದೇ ಸ್ತಬ್ಧರಾಗಿಯೇ ನಿಂತಿದ್ದರು. ದೇವಸೇನೆಯು ಹಿಮ್ಮೆಟ್ಟಿ ಹೋಗಲು ಸಿದ್ಧವಾಗುತ್ತಿದ್ದಿತು. ವಿಮುಖರಾಗದೇ ಮತ್ತೇನು ಮಾಡಿಯಾರು? ಸಾವಿರಾರು ಯೋಧರು ದಾನವರ ಶಸ್ತ್ರಪ್ರಹಾರದಿಂದ ಅಸುನೀಗಿ ತೊಪ-ತೊಪನೆ ಕೆಳಗೆ ಬೀಳುತ್ತಿದ್ದರು. ಪ್ರಾಣಗಳನ್ನು ತೊರೆದು ಕೆಳಗುರುಳಿದ ಆನೆ-ಕುದುರೆಗಳ ಸಂಖ್ಯೆಯೂ ಅಗಣಿತವಾಯಿತು. ಅನೇಕಾನೇಕ ರಥಗಳೂ ಚೂರ್ಣೀಕೃತವಾದುವು. ಅಳಿದುಳಿದ ಯೋಧರಿಗೆ ಪಲಾಯನ ಮಾಡದಿದ್ದರೆ ತಾವೂ ಉಳಿಯಲಾರೆವೆನ್ನಿಸಿತು. ಒಂದು ಕಡೆ ಹತ್ತಿದ ಕಾಡು ಗಿಚ್ಚಿನಿಂದ ಅರಣ್ಯದ ಮಹಾವೃಕ್ಷಗಳೆಲ್ಲವೂ ಸಂಪೂರ್ಣವಾಗಿ ವಿನಾಶವಾಗುವಂತೆ–ದಾನವರಿಂದ ದೇವಸೈನ್ಯವು ವಿನಾಶಹೊಂದಿತು. ಸಾವಿರಾರು ದೇವಸೈನಿಕರ ರುಂಡಗಳು ಮುಂಡಗಳಿಂದ ಪ್ರತ್ಯೇಕಿಸಲ್ಪಟ್ಟುವು. ಸೈನಿಕರನ್ನು ಸುವ್ಯವಸ್ಥೆಗೊಳಿಸಲು ಕ್ಷಣಕಾಲ ಯಾರೂ ಮುಂದೆ ಬರಲಿಲ್ಲ. "ತಮ್ಮನ್ನು

ರಕ್ಷಿಸುವ ನಾಯಕನಾರು? ತಾವು ಯಾರ ಆಜ್ಞೆಯಂತೆ ನಡೆಯಬೇಕು?"–ಎಂಬುದೂ ದೇವಸೈನ್ಯಕ್ಕೆ ತಿಳಿಯಲಿಲ್ಲ. ದೇವೇಂದ್ರನು ತನ್ನ ಸೇನೆಯ ದುಃಸ್ಥಿತಿಯನ್ನು ನೋಡಿ ಅದನ್ನು ಸುವ್ಯವಸ್ಥಿತವನ್ನಾಗಿ ಮಾಡಲು, ಹಿಮ್ಮೆಟ್ಟುವುದರಲ್ಲಿದ್ದ ಸೇನೆಯನ್ನು ಕುರಿತು ಹೀಗೆಂದು ಹೇಳಿದನು :

"ಸೈನಿಕರೇ! ಭಯವನ್ನು ತ್ಯಜಿಸಿರಿ. ನಿಮಗೆ ಮಂಗಳವಾಗಲಿ. ನೀವೆಲ್ಲರೂ ಮಹಾಶೂರರಾಗಿರುತ್ತೀರಿ. ನೀವು ಆಯುಧಪಾಣಿಗಳಾಗಿ ನಿಂತರೆ ನಿಮ್ಮನ್ನು ಯಾರೂ ಎದುರಿಸಲಾರರು. ಆದುದರಿಂದ ಈ ಕೂಡಲೇ ಆಯುಧಪಾಣಿಗಳಾಗಿರಿ. ನಿಮ್ಮ ಪರಾಕ್ರಮವನ್ನು ಪ್ರದರ್ಶಿಸುವ ನಿಶ್ಚಯಮಾಡಿರಿ. ಹೀಗೆ ನಿಶ್ಚಯಮಾಡಿದ್ದೇ ಆದರೆ ನಿಮಗೆ ಯಾವ ವಿಧವಾದ ವ್ಯಥೆಯೂ ಉಂಟಾಗದು. ದುರ್ವೃತ್ತರಾದ, ಘೋರರೂಪಿಗಳಾದ ಈ ದಾನವರನ್ನು ದೃಢತೆಯಿಂದ ಜಯಿಸಿರಿ. ನಿಮಗೆ ಮಂಗಳವಾಗಲಿ. ನೀವು ಈಗಲೇ ನನ್ನನ್ನನುಸರಿಸಿ ದಾನವರ ಅಭಿಮುಖವಾಗಿ ಯುದ್ಧಸನ್ನದ್ಧರಾಗಿರಿ."

ಇಂದ್ರನ ಮಾತುಗಳನ್ನು ಕೇಳಿ ದೇವಸೈನ್ಯಕ್ಕೆ ನವಚೇತನವೇ ಬಂದಂತಾಯಿತು. ಇಂದ್ರನ ನಾಯಕತ್ವದಲ್ಲಿ ದಾನವರೊಡನೆ ಯುದ್ಧಮಾಡಲು ತೊಡಗಿದರು. ಸರ್ವದೇವತೆಗಳೂ, ಮಹಾಬಲರಾದ ಮರುತ್ತುಗಳೂ, ಸಾಧ್ಯರೂ, ವಸುಗಳೂ ಸಹ ಯುದ್ಧಸನ್ನದ್ಧರಾದರು. ಕುಪಿತರಾದ ದೇವತೆಗಳು ಪ್ರಯೋಗಿಸಿದ ನಿಶಿತವಾದ ಶಸ್ತ್ರಾಸ್ತ್ರಗಳು ಅನೇಕದಾನವರ, ಆನೆ-ಕುದುರೆಗಳ ರಕ್ತವನ್ನು ಹೀರಿದುವು. ಅವರು ಬಿಡುತ್ತಿದ್ದ ಬಾಣಗಳ ರಭಸವು ಹೇಗಿತ್ತೆಂದರೆ : ಅವುಗಳು ದಾನವಶರೀರಗಳಲ್ಲಿ ಒಳಹೊಕ್ಕು ಪುನಃ ಅವರ ಪ್ರಾಣಸಮೇತವಾಗಿ ಹೊರಬಂದು ಭೂಮಿಯ ಮೇಲೆ ಬೀಳುತ್ತಿದ್ದುವು. ಬಾಣಗಳು ರಾಕ್ಷಸರ ದೇಹಗಳನ್ನು ಭೇದಿಸಿ ಹೊರಗೆ ಬಂದು ಬೀಳುತ್ತಿದ್ದುದನ್ನು ನೋಡಿದರೆ–ಬೆಟ್ಟಗಳಿಂದೇನಾದರೂ ಹಾವುಗಳು ಉದುರುತ್ತಿವೆಯೋ–ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತು. ಸುತ್ತಲೂ ಸತ್ತುಬಿದ್ದಿದ್ದ ದಾನವರನ್ನು ನೋಡಿದರೆ–ಕಪ್ಪಾದ ಮೋಡಗಳೇನಾದರೂ ಸಣ್ಣ-ಸಣ್ಣ ತುಂಡುಗಳಾಗಿ

ನೆಲದ ಮೇಲೆ ಬಿದ್ದಿವೆಯೋ–ಎಂಬಂತೆ ಕಾಣುತ್ತಿದ್ದಿತು. ಅನುಸ್ಯೂತವಾಗಿ ತಮ್ಮ ಮೇಲೆ ಬೀಳುತ್ತಿದ್ದ ವಿಧ-ವಿಧವಾದ ಆಯುಧಗಳ ಆಘಾತಗಳಿಂದ ದಾನವಸೈನ್ಯವು ಕಂಗೆಟ್ಟು ಹಿಮ್ಮೆಟ್ಟಿತು. ಅದನ್ನು ಕಂಡು ಸುಸಜ್ಜಾದ ದೇವ ಸೈನ್ಯವು ಜಯಘೋಷಮಾಡಿತು. ಜಯದುಂದುಭಿಗಳು ಮೊಳಗಿದುವು. ದೇವತೆಗಳು ತುತ್ತೂರಿಗಳನ್ನು ಊದಿದರು. ಯುಧಿಷ್ಠಿರ! ಈ ರೀತಿಯಾಗಿ ಮಹಾದಾರುಣವಾದ ದೇವ-ದಾನವರ ಯುದ್ಧವು ನಡೆಯಿತು. ಯುದ್ಧರಂಗ ದಲ್ಲಿ ದೇವ-ದಾನವರ ರಕ್ತವು ಸುರಿದು ನೆಲವೆಲ್ಲಾ ಕೆಸರಾಗಿ ಹೋಗಿದ್ದಿತು. ದೇವತೆಗಳು ಮಾಡುತ್ತಿದ್ದ ಜಯಘೋಷಗಳು ಹೆಚ್ಚುಕಾಲ ಮುಂದುವರಿಯ ಲಿಲ್ಲ. ಪುನಃ ದಾನವರು ಅಗಣಿತಸಂಖ್ಯೆಯಲ್ಲಿ ಬಂದು ದೇವತೆಗಳ ಮೇಲೆ ದಾಳಿಮಾಡಿದರು. ದೇವತೆಗಳು ತತ್ತರಿಸಿದರು. ದಾನವರ ಪಕ್ಷದಲ್ಲೂ ಜಯ ಘೋಷಗಳು ಮೊಳಗಿದುವು. ಅವರು ಮಾಡುತ್ತಿದ್ದ ತುತ್ತೂರಿ-ಭೇರಿಗಳ ನಿನಾದಗಳು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾದುವು. ಜಯದಿಂದ ಮದಿಸಿದ ದಾನವನಾಯಕರು ರಣಗರ್ಜನೆಯನ್ನು ಮಾಡುತ್ತಿದ್ದರು.

ದೈತ್ಯಸೈನ್ಯದ ಮಧ್ಯದಿಂದ ಮಹಾಘೋರನಾದ ಮಹಾಬಲನಾದ ಮಹಿಷನೆಂಬ ರಾಕ್ಷಸನೊಬ್ಬನು ದೊಡ್ಡದಾದ ಪರ್ವತಶಿಖರವನ್ನು ಎರಡು ಕೈಗಳಲ್ಲಿಯೂ ಎತ್ತಿಕೊಂಡು ದೇವತೆಗಳಿಗೆ ಅಭಿಮುಖವಾಗಿ ಧಾವಿಸಿ ಬಂದನು. ಕಪ್ಪುಮೋಡಗಳ ಸಮೂಹದಿಂದ ಸೂರ್ಯನು ಹೊರಬರುವಂತೆ ಆ ಮಹಿಷರಾಕ್ಷಸನು ದೈತ್ಯರ ಅಪಾರಸೈನ್ಯದಿಂದ ಹೊರಬಿದ್ದನು. ಭಯಂಕರ ನಾದ ಮಹಿಷನನ್ನು ನೋಡುತ್ತಲೇ ದೇವಸೈನ್ಯವು ಪರ್ವತಶಿಖರವು ತಮ್ಮ ಮೇಲೆ ಬೀಳುವುದೆಂಬ ಭಯದಿಂದ ಕಂಗೆಟ್ಟು ಓಡಲಾರಂಭಿಸಿತು. ಮಹಿ ಷನು ಓಡಿಹೋಗುತ್ತಿದ್ದ ದೇವಸೈನ್ಯವನ್ನು ಹಿಂಬಾಲಿಸಿ ಹೋಗಿ ತನ್ನ ಕೈಯ ಲ್ಲಿದ್ದ ಪರ್ವತಶಿಖರವನ್ನು ದೇವಸೈನ್ಯದ ಮೇಲೆ ಅಪ್ಪಳಿಸಿದನು. ಸಾವಿರಾರು ದೊಡ್ಡ-ದೊಡ್ಡ ಬಂಡೆಗಳಿಂದ ಕೂಡಿದ್ದ ಆ ಪರ್ವತಶಿಖರವು ದೇವಸೈನ್ಯದ ಮೇಲೆ ಬೀಳಲಾಗಿ ಸುಮಾರು ಹತ್ತುಸಾವಿರ ಸೈನಿಕರು ಮೃತಪಟ್ಟರು. ಅದ ರಿಂದಾಗಿ ದೇವಸೈನ್ಯವು ಸಂಪೂರ್ಣವಾಗಿ ಕಂಗೆಟ್ಟಿತು. ಅದೇ ಸುಸಮಯ ವೆಂದು ಭಾವಿಸಿದ ಆ ದೈತ್ಯನು ತನ್ನ ಸಹಚರರಾದ ದೈತ್ಯರಿಂದ ಕೂಡಿದವ

ನಾಗಿ–ಸಿಂಹವು ಜಿಂಕೆಗಳ (ಕ್ಷುದ್ರಮೃಗಗಳ) ಗುಂಪಿನ ಮೇಲೆ ಬೀಳುವಂತೆ–ದೇವಸೈನ್ಯದ ಮೇಲೆ ಬಿದ್ದು ಪುನಃ ದಾಳಿಮಾಡಿದನು.

ಇಂದ್ರನೇ ಮೊದಲಾದ ದೇವತೆಗಳೂ ಸಹ ಮಹಿಷನು ತಮ್ಮೆದುರಾಗಿ ರಭಸದಿಂದ ಬರುತ್ತಿರುವುದನ್ನು ಕಂಡು ಭೀತರಾಗಿ, ಆಯುಧ-ಧ್ವಜಪಟಗಳನ್ನೂ ಸಹ ವಿಸರ್ಜಿಸಿ ಓಡಿದರು. ಅದರಿಂದ ಮಹಿಷನು ಮತ್ತಷ್ಟು ಗರ್ವಿತನಾಗಿ ರುದ್ರನು ಕುಳಿತಿದ್ದ ರಥದ ಕಡೆಗೇ ಧಾವಿಸಿ ಆ ರಥದ ಕೂಬರವನ್ನು (ಮೂಕಿ) ತನ್ನ ಕೈಯಿಂದ ಹಿಡಿದುಕೊಂಡನು. ಕುಪಿತನಾದ ಮಹಿಷನು ರುದ್ರನ ಅಮೋಘವಾದ ರಥವನ್ನೂ ಸಹ ಹಿಡಿದು ನಿಲ್ಲಿಸಲಾಗಿ ಭೂಮ್ಯಂತರಿಕ್ಷಗಳಲ್ಲಿ ಕೋಲಾಹಲವೆದ್ದಿತು. ಋಷಿ-ಮಹರ್ಷಿಗಳು ಭ್ರಾಂತರಾದರು. ವಿಜಯಲಕ್ಷ್ಮಿಯು ತಮ್ಮ ಕೈವಶಳಾದಳೆಂದು ಭಾವಿಸಿ ಮೇಘದಂತಿರುವ ದೈತ್ಯರು ಆನಂದಪುಲಕಿತರಾಗಿ ಗರ್ಜಿಸಿದರು. ಪರಿಸ್ಥಿತಿಯು ಇಷ್ಟೊಂದು ವಿಷಮಿಸಿದ್ದರೂ ಸಹ ಭಗವಾನ್ ಶಂಕರನು ಮಹಿಷನನ್ನು ಕೊಲ್ಲಲು ಇಚ್ಛೆಪಡಲಿಲ್ಲ. ಮಹಿಷಾಸುರನ ಸಂಹಾರಕ್ಕಾಗಿಯೇ ಅವತರಿಸಿದ್ದ ಸ್ಕಂದನನ್ನು ಸ್ಮರಿಸಿದನು.

ರಥವನ್ನು ಆಕ್ರಮಿಸಿದರೂ ಸಹ ರುದ್ರನು ತನ್ನ ಮೇಲೆ ಕೈಮಾಡದಿರುವುದನ್ನು ಕಂಡು–ಈಶ್ವರನೂ ಸಹ ತನ್ನ ಪರಾಕ್ರಮವನ್ನು ಕಂಡು ಬೆದರಿದನೆಂದು ಭಾವಿಸಿದ ಮಹಿಷಾಸುರನು ಸಂತೋಷಭರಿತನಾಗಿ ರಣಘೋಷ ಮಾಡಿದನು. ಅವನ ಆ ರಣಘೋಷವು ದೈತ್ಯರಿಗೆ ಸಂತೋಷದಾಯಕವೂ, ದೇವತೆಗಳಿಗೆ ದುಃಖದಾಯಕವೂ ಆಗಿದ್ದಿತು.

ಇತ್ತಲಾಗಿ, ರುದ್ರನು ಸ್ಮರಿಸಿಕೊಂಡೊಡನೆಯೇ ಮಹಾಸೇನನು ದೇವತೆಗಳಿಗೊದಗಿರುವ ವಿಪತ್ತನ್ನು ತಿಳಿದು ಕೋಪಗೊಂಡವನಾಗಿ, ಪ್ರಜ್ವಲಿಸುವ ಸೂರ್ಯದೇವನೋಪಾದಿಯಲ್ಲಿ ತನ್ನ ದಿವ್ಯತೇಜಸ್ಸಿನಿಂದ ನಾಲ್ಕು ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ, ರಣಾಂಗಣಕ್ಕೆ ಧಾವಿಸಿ ಬಂದನು. ಆ ಸಮಯದಲ್ಲಿ ಮಹಾಸೇನನು ಕೆಂಪು ಬಟ್ಟೆಯನ್ನು ಉಟ್ಟು ಕೆಂಪಾದ ಹೂಗಳ ಹಾರಗಳಿಂದ ಅಲಂಕೃತನಾಗಿದ್ದನು. ಅವನ ರಥಕ್ಕೂ ಸಹ ಕೆಂಪಾದ ಕುದುರೆಗಳು ಕಟ್ಟಲ್ಪಟ್ಟಿದ್ದುವು.

ಸುವರ್ಣಮಯವಾದ ಕವಚವನ್ನು ಧರಿಸಿದ್ದ ಮಹಾಬಾಹುವಾದ ಮಹಾಸೇನನು ಸ್ವರ್ಣಕಾಂತಿಯಿಂದ ಕೂಡಿದ್ದ, ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ರಥದಲ್ಲಿ ಕುಳಿತಿದ್ದನು. ಅವನನ್ನು ಕಾಣುತ್ತಲೇ ದೈತ್ಯಸೇನೆಯ ಜಂಘಾಬಲವೇ ಉಡುಗಿಹೋಯಿತು. ಅನೇಕ ದೈತ್ಯರು ಪಲಾಯನಮಾಡತೊಡಗಿದರು. ಮಹಾಬಲನಾದ ಮಹಾಸೇನನು



ಮರುಕ್ಷಣದಲ್ಲಿಯೇ ಜಾಜ್ವಲ್ಯಮಾನವಾಗಿದ್ದ, ಮಹಿಷಾಸುರವಿದಾರಿಣಿಯಾದ ಶಕ್ತ್ಯಾಯುಧವನ್ನು ಮಹಿಷಾಸುರನ ಮೇಲೆ ರಭಸದಿಂದ ಪ್ರಯೋಗಿಸಿದನು. ಕುಮಾರನಿಂದ ಪ್ರಯೋಗಿಸಲ್ಪಟ್ಟ ಆ ಶಕ್ತ್ಯಾಯುಧವು ನಿಮಿಷಮಾತ್ರದಲ್ಲಿ

ಮಹಿಷಾಸುರನ ಮಹಾಶಿರಸ್ಸನ್ನು ಹಾರಿಸಿಬಿಟ್ಟಿತು. ಶಿರೋವಿಹೀನವಾದ ಮಹಿಷಾಸುರನ ಮುಂಡವು ಚೇತನಾರಹಿತವಾಗಿ ಕೆಳಗುರುಳಿತು. ಪರ್ವತೋಪಮವಾದ ಅವನ ಶಿರಸ್ಸು ರಭಸದಿಂದ ಭೂಮಿಯ ಮೇಲೆ ಬಿದ್ದಾಗ ಹದಿನಾರು ಯೋಜನಗಳಷ್ಟು ಭೂಮಿಯೊಳಗೆ ಹಳ್ಳವನ್ನೇ ಮಾಡಿಬಿಟ್ಟಿತು. ಅದೇ ಬಿಲದ ಮೂಲಕವಾಗಿ ಉತ್ತರಕುರುಗಳು ಈಗಲೂ ಸಹ ಸುಖವಾಗಿ ಇತರ ಪ್ರದೇಶಗಳಿಗೆ ಹೋಗಿ-ಬಂದು ಮಾಡುತ್ತಿರುತ್ತಾರೆ, ಯುಧಿಷ್ಠಿರ!

ಆ ಮಹಾಶಕ್ತ್ಯಾಯುಧವನ್ನು ಸ್ಕಂದನು ಬಾರಿ-ಬಾರಿಗೂ ಪ್ರಯೋಗಿಸುತ್ತಲೇ ಇದ್ದನು. ಒಮ್ಮೊಮ್ಮೆ ಪ್ರಯೋಗಿಸಿದಾಗಲೂ ಆ ದಿವ್ಯಾಯುಧವು ಸಾವಿರಾರು ದಾನವರ ಪ್ರಾಣಗಳನ್ನು ಹೀರಿ ಪುನಃ ಸ್ಕಂದನ ಕೈಸೇರುತ್ತಿದ್ದಿತು. ಈ ರೀತಿಯಾಗಿ ಸ್ವಲ್ಪಕಾಲದಲ್ಲಿಯೇ ಮಹಾಸೇನನು ದಾನವಸೈನ್ಯವೆಲ್ಲವನ್ನೂ ವಿನಾಶಗೊಳಿಸಿಬಿಟ್ಟನು. ಮಹಾಸೇನನ ಪರಮಾದ್ಭುತವಾದ ಆ ಶಕ್ತಿಯನ್ನು ತೆರೆದ ಕಣ್ಣುಗಳಿಂದ ನೋಡುತ್ತಿದ್ದ ದೇವ-ದಾನವರು ಪುಲಕಿತರಾದರು. ಇಷ್ಟು ಮಾತ್ರವಲ್ಲ, ಯುಧಿಷ್ಠಿರ! ಅಳಿದುಳಿದು ಪಲಾಯನಮಾಡುತ್ತಿದ್ದ ದಾನವಯೋಧರನ್ನು ಸ್ಕಂದನ ಅನುಯಾಯಿಗಳು ಹಿಡಿದು ಅವರುಗಳನ್ನು ಕ್ಷಣಮಾತ್ರದಲ್ಲಿ ಕೊಂದು ಎಲ್ಲರನ್ನೂ ಭಕ್ಷಿಸಿಬಿಟ್ಟರು. ರಣರಂಗವನ್ನು ದಾನವರಹಿತವನ್ನಾಗಿ ಮಾಡಿದರು.

ಸೂರ್ಯದೇವನು ಕತ್ತಲೆಯನ್ನು ಕ್ಷಣಮಾತ್ರದಲ್ಲಿ ಹೋಗಲಾಡಿಸುವಂತೆ–ಕಾಡುಗಿಚ್ಚು ಅರಣ್ಯವನ್ನು ನಿಶ್ಶೇಷವಾಗಿ ದಹಿಸಿಬಿಡುವಂತೆ–ಸುಂಟರಗಾಳಿಯು ಮೋಡಗಳನ್ನು ಕ್ಷಣಮಾತ್ರದಲ್ಲಿ ಚದುರಿಸಿಬಿಡುವಂತೆ–ಮಹಾಸೇನನು ದಾನವಸೇನೆಯನ್ನು ಕ್ಷಣಮಾತ್ರದಲ್ಲಿ ವಿಧ್ವಂಸಮಾಡಿದನು. ಈ ರೀತಿಯಾಗಿ ಸ್ಕಂದನು ದೇವಶತ್ರುಗಳನ್ನು ಸಂಪೂರ್ಣವಾಗಿ ಪರಾಭವಗೊಳಿಸಿದನು. ದೇವತೆಗಳ ಅಧಿಪತಿಗಳು ನಾಮುಂದು-ತಾಮುಂದೆಂದು ಬಂದು ಸ್ಕಂದನನ್ನು ಅಭಿನಂದಿಸಿದರು. ಸ್ಕಂದನು ಅವರ ಅಭಿನಂದನೆಗಳನ್ನು ಮುಗುಳ್ನಗೆಯಿಂದಲೇ ಸ್ವೀಕರಿಸಿ, ತನ್ನ ತಂದೆಯಾದ ಮಹೇಶ್ವರನನ್ನು ಯಥೋಚಿತವಾಗಿ ಪೂಜಿಸಿದನು. ನಿಶ್ಚಯವಾಗಿಯೂ ಆ ಸಮಯದಲ್ಲಿ ಕೃತ್ತಿಕಾಸುತನು ಅಂಶುಮಂತನಾದ ಸೂರ್ಯದೇವನಂತೆಯೇ ಪ್ರಕಾಶಿಸುತ್ತಿದ್ದನು. ಶತ್ರುಗಳೆಲ್ಲರನ್ನೂ ಧ್ವಂಸಮಾಡಿ ಕುಮಾರನಾದ ಕಾರ್ತಿಕೇಯನು

ಪರಮೇಶ್ವರನ ಸಮೀಪದಲ್ಲಿ ವಿರಾಜಮಾನನಾಗಿರಲಾಗಿ, ಪುರಂದರನು ಸ್ಕಂದನ ಬಳಿಗೆ ಬಂದು ಬಾಚಿ ತಬ್ಬಿಕೊಂಡು ಅವನನ್ನು ಕುರಿತು ಹೀಗೆಂದು ಹೇಳಿದನು :

"ಕುಮಾರ! ಬ್ರಹ್ಮನ ವರಪ್ರಸಾದದಿಂದ ಈ ಮಹಿಷನು ಅಪ್ರತಿಹತನಾಗಿದ್ದನು. ಅಂತಹವನನ್ನೂ ಸಹ ನೀನಿಂದು ಸಂಹಾರಮಾಡಿರುವೆ. ಜಯಶೀಲನೇ! ಈ ದುರುಳನು ದೇವತೆಗಳನ್ನು ತೃಣಪ್ರಾಯವಾಗಿ ಕಾಣುತ್ತಿದ್ದನು. ದೇವತೆಗಳಿಗೆ ಕಂಟಕಪ್ರಾಯನಾಗಿದ್ದ ಇವನಿಂದು ನಿನ್ನಿಂದ ದಮನಮಾಡಲ್ಪಟ್ಟನು. ಇವನನ್ನು ಸಂಹರಿಸಿದ್ದು ಮಾತ್ರವಲ್ಲದೇ–ಇವನಿಗೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ ನೂರಾರು ದಾನವರನ್ನಿಂದು ನೀನು ಸಂಹಾರಮಾಡಿರುವೆ. ಇವರೆಲ್ಲರೂ ದೇವತೆಗಳಿಗೆ ಸರ್ವಕಾಲದಲ್ಲಿಯೂ ಉಪಟಳವನ್ನು ಕೊಡುತ್ತಲೇ ಇದ್ದರು. ನಿನ್ನ ಅನುಚರರೂ ಅನೇಕ ದಾನವರನ್ನು ನುಂಗಿಹಾಕಿಬಿಟ್ಟರು.

ಉಮಾಪತಿಯಾದ ಪರಮೇಶ್ವರನಂತೆಯೇ ನೀನೂ ಸಹ ಯುದ್ಧದಲ್ಲಿ ಅಜೇಯನಾಗಿರುವೆ. ನೀನು ಮಾಡಿದ ಪ್ರಪ್ರಥಮವಾದ ಈ ಮಹಾಕಾರ್ಯವು ಪ್ರಪಂಚದಲ್ಲೆಲ್ಲಾ ವಿಖ್ಯಾತವಾಗುತ್ತದೆ. ಮೂರು ಲೋಕಗಳಲ್ಲಿಯೂ ನಿನ್ನ ಕೀರ್ತಿಯು ಕ್ಷಯರಹಿತವಾಗಿರುತ್ತದೆ. ಮಹಾಭುಜನೇ! ಇನ್ನು ಮುಂದೆ ದೇವತೆಗಳು ಯಾವಾಗಲೂ ನಿನ್ನನ್ನಾಶ್ರಯಿಸಿಯೇ ಇರುತ್ತಾರೆ."

ಧರ್ಮಜ! ದೇವೇಂದ್ರನು ಮಹಾಸೇನನೊಡನೆ ಹೀಗೆಂದು ಹೇಳಿ ತ್ರ್ಯಂಬಕನ ಅಪ್ಪಣೆಯನ್ನೂ ಪಡೆದು ದೇವತೆಗಳಿಂದೊಡಗೂಡಿ ಸ್ವಸ್ಥಾನಕ್ಕೆ ತೆರಳಿದನು. ರುದ್ರನು ತನ್ನ ಪರಿವಾರದೊಡನೆ ಭದ್ರವಟವನ್ನು ಸೇರಿದ ನಂತರ ತನ್ನನ್ನನುಸರಿಸಿ ಬಂದಿದ್ದ ಉಳಿದ ದೇವತೆಗಳನ್ನು ಕುರಿತು ಹೇಳಿದನು : "ನನ್ನನ್ನು ನೀವು ಎಷ್ಟು ಭಕ್ತಿ-ಗೌರವಗಳಿಂದ ಕಾಣುತ್ತಿರುವಿರೋ ಅಂತೆಯೇ ಕುಮಾರನನ್ನೂ ಸಹ ಅಷ್ಟೇ ಭಕ್ತಿ-ಗೌರವಗಳಿಂದ ಕಾಣಿರಿ."

ದೇವತೆಗಳು ಹಾಗೆಯೇ ಆಗಲೆಂದು ಹೇಳಿ ಸ್ವಸ್ಥಾನಗಳಿಗೆ ತೆರಳಿದರು.

ಯುಧಿಷ್ಠಿರ! ಈ ರೀತಿಯಲ್ಲಿ ಅಗ್ನಿಯ ಪುತ್ರನಾದ, ಋಷಿ-ಮಹರ್ಷಿಗಳಿಂದಲೂ ಸಂಪೂಜ್ಯನಾದ ಸ್ಕಂದನು ದೇವತೆಗಳ ಶತ್ರುವಾದ ಮತ್ತು

ಅಜೇಯನೆನಿಸಿದ್ದ ಮಹಿಷನನ್ನೂ, ಅವನ ಅನುಯಾಯಿಗಳನ್ನೂ ಜಯಿಸಿ ಮೂರು ಲೋಕಗಳನ್ನೂ ಒಂದೇ ದಿನದಲ್ಲಿ ಗೆದ್ದನು.

ಧರ್ಮಜ! ಈ ಸ್ಕಂದಕಥಾಪ್ರವಚನವು ಮಹಾಪುಣ್ಯಪ್ರಾಪಕ ವಾದುದು.

**ಸ್ಕನ್ದಸ್ಯ ಯ ಇದಂ ವಿಪ್ರಃ ಪಠೇಜ್ಜನ್ಮ ಸಮಾಹಿತಃ ।**
**ಸ ಪುಷ್ಟಿಮಿಹ ಸಮ್ಪ್ರಾಪ್ಯ ಸ್ಕನ್ದ ಸಾಲೋಕ್ಯಮಾಪ್ನುಯಾತ್ ॥**

ಯಾವ ಬ್ರಾಹ್ಮಣನು ಚಿತ್ತೈಕಾಗ್ರತೆಯಿಂದ ಈ ಸ್ಕಂದನ ಜನ್ಮ ವೃತ್ತಾಂತವನ್ನು ಪಠನಮಾಡುತ್ತಾನೆಯೋ ಅವನು ಈ ಜನ್ಮದಲ್ಲಿ ಪುಷ್ಟಿ-ತುಷ್ಟಿಗಳನ್ನೂ, ಜನ್ಮಾಂತರದಲ್ಲಿ ಸ್ಕಂದನ ಸಾಲೋಕ್ಯವನ್ನೂ ಪಡೆಯುತ್ತಾನೆ."

ಇ೩೧ನೆಯ ಅಧ್ಯಾಯವು ಮುಗಿಯಿತು.

೨೩೨ನೆಯ ಅಧ್ಯಾಯ ಮಾರ್ಕಣ್ಡೇಯಸಮಾಸ್ಯಾಪರ್ವ (ಮುಂದುವರಿದಿದೆ.)

## ಕಾರ್ತಿಕೇಯನ ಪ್ರಸಿದ್ಧ ನಾಮಗಳ ವರ್ಣನೆ ಮತ್ತು ಸ್ತೋತ್ರ

ಮಾರ್ಕಂಡೇಯರು ಹೇಳಿದ ಪ್ರವಚನವನ್ನು ಕೇಳಿ ಸಂತುಷ್ಟನಾದ ಧರ್ಮಜನು ಅವರನ್ನು ಪ್ರಶ್ನಿಸಿದನು :

"ಮಹರ್ಷೇ! ದ್ವಿಜೋತ್ತಮ! ಮೂರು ಲೋಕಗಳಲ್ಲಿಯೂ ವಿಖ್ಯಾತ ನಾದ ಮಹಾತ್ಮನಾದ ಸ್ಕಂದನ ದಿವ್ಯನಾಮಗಳನ್ನು ನಿಮ್ಮ ಮುಖಾರವಿಂದ ದಿಂದ ಕೇಳಿ ತಿಳಿಯಬೇಕೆಂದಿರುವೆನು. ದಯಮಾಡಿ ಹೇಳಿರಿ."

ಜನಮೇಜಯ! ಮಹರ್ಷಿಗಳ ಸನ್ನಿಧಿಯಲ್ಲಿ ಮಹಾತ್ಮನಾದ ಧರ್ಮಜನಿಂದ ಈ ರೀತಿ ಪ್ರಾರ್ಥಿತರಾದ ಮಹಾತಪಸ್ವಿಗಳಾದ ಮಾರ್ಕಂಡೇ ಯರು ನಸುನಗುತ್ತಾ ಸ್ಕಂದನ ನಾಮಾವಳಿಯನ್ನು ಭಕ್ತಿಭಾವದಿಂದ ಹೇಳಲುಪಕ್ರಮಿಸಿದರು.

**ಆಗ್ನೇಯಶ್ಚೈವ ಸ್ಕನ್ದಶ್ಚ ದೀಪ್ತಕೀರ್ತಿರನಾಮಯಃ ।**
**ಮಯೂರಕೇತುರ್ಧರ್ಮಾತ್ಮಾ ಭೂತೇಶೋ ಮಹಿಷಾರ್ದನಃ ॥**

**ಕಾಮಜಿತ್ಕಾಮದಃ ಕಾನ್ತಃ ಸತ್ಯವಾಗ್ಭುವನೇಶ್ವರಃ ।**
**ಶಿಶುಃ ಶೀಘ್ರಃ ಶುಚಿಶ್ಚಣ್ಡೋ ದೀಪ್ತವರ್ಣಃ ಶುಭಾನನಃ ॥೪॥**

**ಅಮೋಘಸ್ತ್ವನಘೋ ರೌದ್ರಃ ಪ್ರಿಯಶ್ಚನ್ದ್ರಾನನಸ್ತಥಾ ।**
**ದೀಪ್ತಶಕ್ತಿಃ ಪ್ರಶಾನ್ತಾತ್ಮಾ ಭದ್ರಕೃತ್ಕೂಟಮೋಹನಃ ॥೫॥**

**ಷಷ್ಠೀಪ್ರಿಯಶ್ಚ ಧರ್ಮಾತ್ಮಾ ಪವಿತ್ರೋ ಮಾತೃವತ್ಸಲಃ ।**
**ಕನ್ಯಾಭರ್ತಾ ವಿಭಕ್ತಶ್ಚ ಸ್ವಾಹೇಯೋ ರೇವತೀಸುತಃ ॥೬॥**

**ಪ್ರಭುರ್ನೇತಾ ವಿಶಾಖಶ್ಚ ನೈಗಮೇಯಃ ಸುದುಶ್ಚರಃ ।**
**ಸುವ್ರತೋ ಲಲಿತಶ್ಚೈವ ಬಾಲಕ್ರೀಡನಕಪ್ರಿಯಃ ॥೭॥**

**ಖಚಾರೀ ಬ್ರಹ್ಮಚಾರೀ ಚ ಶೂರಃ ಶರವಣೋದ್ಭವಃ ।**
**ವಿಶ್ವಾಮಿತ್ರಪ್ರಿಯಶ್ಚೈವ ದೇವಸೇನಾಪ್ರಿಯಸ್ತಥಾ ॥೮॥**

**ವಾಸುದೇವಪ್ರಿಯಶ್ಚೈವ ಪ್ರಿಯಃ ಪ್ರಿಯಕೃದೇವ ತು ।**
**ನಾಮಾನ್ಯೇತಾನಿ ದಿವ್ಯಾನಿ ಕಾರ್ತಿಕೇಯಸ್ಯ ಯಃ ಪಠೇತ್ ।**
**ಸ್ವರ್ಗಂ ಕೀರ್ತಿಂ ಧನಂ ಚೈವ ಸ ಲಭೇನ್ನಾತ್ರ ಸಂಶಯಃ ॥೯॥**

ಆಗ್ನೇಯ, ಸ್ಕಂದ, ದೀಪ್ತಕೀರ್ತಿ, ಅನಾಮಯ, ಮಯೂರಕೇತು, ಧರ್ಮಾತ್ಮಾ, ಭೂತೇಶ, ಮಹಿಷಾರ್ದನ, ಕಾಮಜಿತ್, ಕಾಮದ, ಕಾಂತ, ಸತ್ಯವಾಕ್, ಭುವನೇಶ್ವರ, ಶಿಶು, ಶೀಘ್ರ, ಶುಚಿ, ಚಂಡ, ದೀಪ್ತವರ್ಣ, ಶುಭಾನನ, ಅಮೋಘ, ಅನಘ, ರೌದ್ರ, ಪ್ರಿಯ, ಚಂದ್ರಾನನ, ದೀಪ್ತಶಕ್ತಿ, ಪ್ರಶಾಂತಾತ್ಮಾ, ಭದ್ರಕೃತ್, ಕೂಟಮೋಹನ, ಷಷ್ಠೀಪ್ರಿಯ, ಧರ್ಮಾತ್ಮಾ, ಪವಿತ್ರ, ಮಾತೃವತ್ಸಲ, ಕನ್ಯಾಭರ್ತಾ, ವಿಭಕ್ತ, ಸ್ವಾಹೇಯ, ರೇವತೀಸುತ, ಪ್ರಭು, ನೇತಾ, ವಿಶಾಖ, ನೈಗಮೇಯ, ಸುದುಶ್ಚರ, ಸುವ್ರತ, ಲಲಿತ, ಬಾಲಕ್ರೀಡನಕಪ್ರಿಯ, ಖಚಾರೀ, ಬ್ರಹ್ಮಚಾರೀ, ಶೂರ, ಶರವಣೋದ್ಭವ, ವಿಶ್ವಾಮಿತ್ರಪ್ರಿಯ, ದೇವಸೇನಾಪ್ರಿಯ, ವಾಸುದೇವಪ್ರಿಯ, ಪ್ರಿಯ ಮತ್ತು ಪ್ರಿಯಕೃತ್–ಈ ಐವತ್ತುಮೂರು ಕಾರ್ತಿಕೇಯನ ದಿವ್ಯನಾಮಗಳು. ಈ ನಾಮಾವಳಿಯನ್ನು ಯಾರು ಅನುದಿನವೂ ಭಕ್ತಿಯಿಂದ ಪಠಿಸುತ್ತಾರೆಯೋ ಅವರಿಗೆ ಸ್ವರ್ಗ, ಕೀರ್ತಿ, ಧನ–ಎಲ್ಲವೂ ಲಭಿಸುತ್ತವೆ. ಇದರಲ್ಲಾವ ಸಂಶಯವೂ ಇಲ್ಲ, ಧರ್ಮಜ!”

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

ಜನಮೇಜಯ! ಮಾರ್ಕಂಡೇಯರು ಸ್ಕಂದನ ನಾಮಾವಳಿಯನ್ನು ಹೇಳಿದನಂತರ ತಾವೇ ಪುನಃ ಮಹಾಸೇನನನ್ನು ಸ್ತೋತ್ರಮಾಡಿದರು.

ಸ್ತೋಷ್ಯಾಮಿ ದೇವೈರ್ಋಷಿಭಿಶ್ಚ ಜುಷ್ಟಂ
ಶಕ್ತ್ಯಾ ಗುಹಂ ನಾಮಭಿರಪ್ರಮೇಯಮ್ ।
ಷಡಾನನಂ ಶಕ್ತಿಧರಂ ಸುವೀರಂ
ನಿಬೋಧ ಚೈತಾನಿ ಕುರುಪ್ರವೀರ ॥೧೦॥

“ಧರ್ಮಜ! ನಾನೀಗ ದೇವತೆಗಳಿಂದಲೂ ಮತ್ತು ಋಷಿಗಳಿಂದಲೂ ಸೇವಿತನಾದ, ಅಪ್ರಮೇಯನಾದ, ಆರು ಮುಖಗಳಿಂದ ಕೂಡಿರುವ, ಶಕ್ತ್ಯಾಯುಧಪಾಣಿಯಾದ, ಮಹಾವೀರನಾದ ಗುಹನನ್ನು ದಿವ್ಯನಾಮಗಳಿಂದ ಸ್ತೋತ್ರಮಾಡುತ್ತೇನೆ. ಈ ದಿವ್ಯಸಂಕೀರ್ತನವನ್ನು ಶ್ರವಣಮಾಡು.

ಬ್ರಹ್ಮಣ್ಯೋ ವೈ ಬ್ರಹ್ಮಜೋ ಬ್ರಹ್ಮವಿಚ್ಚ
ಬ್ರಹ್ಮೇಶಯೋ ಬ್ರಹ್ಮವತಾಂ ವರಿಷ್ಠಃ ।
ಬ್ರಹ್ಮಪ್ರಿಯೋ ಬ್ರಾಹ್ಮಣಸವ್ರತೀ ತ್ವಂ
ಬ್ರಹ್ಮಜ್ಞೋ ವೈ ಬ್ರಾಹ್ಮಣಾನಾಂ ಚ ನೇತಾ ॥೧೧॥

ಮಹಾನುಭಾವ! ನೀನು ಬ್ರಹ್ಮನಿಷ್ಠನು. ಬ್ರಹ್ಮನಿಂದ ಹುಟ್ಟಿದವನು. ಬ್ರಹ್ಮವನ್ನು ತಿಳಿದಿರುವವನು. ಬ್ರಹ್ಮನಲ್ಲಿಯೇ ಯಾವಾಗಲೂ ಇರುವವನು. (ನಿನ್ನ ಮನಸ್ಸು ಯಾವಾಗಲೂ ಬ್ರಹ್ಮವಸ್ತುವಿನಲ್ಲಿಯೇ ಲೀನವಾಗಿರುತ್ತದೆ.) ಆದುದರಿಂದಲೇ ನೀನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು. ನೀನು ಬ್ರಹ್ಮಪ್ರಿಯ. ನಿನಗೆ ಬ್ರಹ್ಮವಿದ್ಯೆಯಲ್ಲಿಯೇ ಹೆಚ್ಚಿನ ಆಸಕ್ತಿ. ಬ್ರಾಹ್ಮಣರಂತೆ ವ್ರತಾನುಷ್ಠಾನಗಳನ್ನು ಮಾಡುವವನಾಗಿರುವೆ. ಬ್ರಹ್ಮಜ್ಞನು. (ವೇದಾರ್ಥವನ್ನು ತಿಳಿದವನು.) ಬ್ರಾಹ್ಮಣರಿಗೆ ನಾಯಕನೂ ಸಹ ನೀನೇ ಆಗಿರುವೆ.

ಸ್ವಾಹಾ ಸ್ವಧಾ ತ್ವಂ ಪರಮಂ ಪವಿತ್ರಂ
ಮನ್ತ್ರಸ್ತುತಸ್ತ್ವಂ ಪ್ರಥಿತಃ ಷಡರ್ಚಿಃ ।

**ಸಂವತ್ಸರಸ್ತ್ವಮೃತವಶ್ಚ ಷಡ್ವೈ-**
**ಮಾಸಾರ್ಧಮಾಸಾವಯನಂ ದಿಶಶ್ಚ ॥೧೨॥**

ಸ್ವಾಹಾರೂಪನೂ ಮತ್ತು ಸ್ವಧಾರೂಪನೂ ನೀನೇ ಆಗಿರುವೆ. ಪರಮ ಪವಿತ್ರನು ನೀನು. ಮಂತ್ರಗಳಿಂದ ಸ್ತೋತ್ರಮಾಡಲ್ಪಡುವೆ. ಆರು ವಿಧವಾದ ಜ್ವಾಲೆಗಳುಳ್ಳ ಅಗ್ನಿಯೆಂದು ಪ್ರಸಿದ್ಧನಾಗಿರುವೆ. ಸಂವತ್ಸರ, ಋತುಗಳು, ಅಯನಗಳು, ಮಾಸಗಳು, ಪಕ್ಷಗಳು ಮತ್ತು ದಶದಿಕ್ಕುಗಳೂ ಸಹ ನೀನೇ ಆಗಿರುವೆ.

**ತ್ವಂ ಪುಷ್ಕರಾಕ್ಷಸ್ತ್ವ ರವಿನ್ದವಕ್ತ್ರಃ**
**ಸಹಸ್ರವಕ್ತ್ರೋಽಸಿ ಸಹಸ್ರಬಾಹುಃ ।**
**ತ್ವಂ ಲೋಕಪಾಲಃ ಪರಮಂ ಹವಿಶ್ಚ**
**ತ್ವಂ ಭಾವನಃ ಸರ್ವಸುರಾಸುರಾಣಾಮ್ ॥೧೩॥**

ಕಮಲಗಳಂತೆ ಕಣ್ಣುಗಳುಳ್ಳವನು ನೀನು. ಕಮಲಪುಷ್ಪದಂತಿರುವ ಸುಂದರವಾದ ಮುಖವುಳ್ಳವನು. ನಿನಗೆ ಸಾವಿರ (ಅಸಂಖ್ಯಾತ) ಮುಖಗಳೂ–ಸಾವಿರ (ಅಸಂಖ್ಯಾತ) ಬಾಹುಗಳೂ ಇರುವುವು. ಸಕಲಭುವನಗಳನ್ನೂ ರಕ್ಷಿಸುವವನೂ ನೀನಾಗಿರುವೆ. ಶ್ರೇಷ್ಠವಾದ ಹವಿಸ್ಸೂ ನೀನೇ ಆಗಿರುವೆ. ಸರ್ವದೇವಾಸುರರ ರಕ್ಷಣೆಗೂ ಸಹ ನೀನೇ ಕಾರಣನಾಗಿರುವೆ.

**ತ್ವಮೇವ ಸೇನಾಧಿಪತಿಃ ಪ್ರಚಣ್ಡಃ**
**ಪ್ರಭುರ್ವಿಭುಶ್ಚಾಪ್ಯಥ ಶತ್ರುಜೇತಾ ।**
**ಸಹಸ್ರಭೂಸ್ತ್ವಂ ಧರಣೀ ತ್ವಮೇವ**
**ಸಹಸ್ರತುಷ್ಟಿಶ್ಚ ಸಹಸ್ರಭುಕ್ಚ ॥೧೪॥**

ನೀನೇ ಸಕಲ ದೇವಸೇನೆಗೂ ದಂಡನಾಯಕನು. ನೀನು ಪ್ರಚಂಡನು. ನೀನೇ ಸಕಲಭುವನಗಳಿಗೂ ಒಡೆಯನು. ಸರ್ವಾಂತರ್ಯಾಮೀ. ಶತ್ರುಗಳನ್ನು ಜಯಿಸುವವನು ನೀನು. ಅನಂತವಾದ ಆಕಾರಗಳನ್ನು ಹೊಂದಿರುವವನು. ಈ ಪ್ರಪಂಚವೂ ನೀನೇ ಆಗಿರುವೆ. ನಿನ್ನನ್ನು ಒಮ್ಮೆ ಸ್ತೋತ್ರ ಮಾಡಿದರೂ ಸಾವಿರ ಬಾರಿ ಸ್ತೋತ್ರಮಾಡಿದಷ್ಟು ತುಷ್ಟನಾಗುವೆ. ಅಗ್ನಿ

ರೂಪನಾದ ನಿನ್ನಲ್ಲಿ ಹೋಮಮಾಡಿದ ಸಾವಿರಾರು (ಸಕಲ) ವಸ್ತುಗಳನ್ನೂ ಜೀರ್ಣಿಸಿಕೊಳ್ಳುವವನಾಗಿರುವೆ.

**ಸಹಸ್ರಶೀರ್ಷಸ್ತ್ವಮನನ್ತರೂಪಃ**
**ಸಹಸ್ರಪಾತ್ತ್ವಂ ಗುಹ ಶಕ್ತಿಧಾರೀ ।**
**ಗಙ್ಗಾಸುತಸ್ತ್ವಂ ಸ್ವಮತೇನ ದೇವ**
**ಸ್ವಾಹಾಮಹೀಕೃತ್ತಿಕಾನಾಂ ತಥೈವ ॥೧೫॥**

ನೀನು ಸಾವಿರ (ಅನಂತವಾದ) ತಲೆಗಳುಳ್ಳವನು. ಅಗಣಿತವಾದ ರೂಪಗಳುಳ್ಳವನು. ಸಾವಿರ (ಅನಂತವಾದ) ಕಾಲುಗಳುಳ್ಳವನು. ಶಕ್ತ್ಯಾಯುಧವನ್ನು ಧರಿಸಿರುವವನು ನೀನು. ನಿನ್ನ ಸ್ವಂತ ಇಚ್ಛೆಯಿಂದಲೇ ನೀನು ಗಂಗಾದೇವೀ, ಸ್ವಾಹಾದೇವೀ, ಭೂದೇವೀ ಮತ್ತು ಕೃತ್ತಿಕಾದೇವಿಯರಿಗೆ ಮಗನಾಗಿರುವೆ. (ಅವರುಗಳನ್ನು ತಾಯಿಯರೆಂದು ಪರಿಗ್ರಹಿಸಿರುವೆ.)

**ತ್ವಂ ಕ್ರೀಡಸೇ ಷಣ್ಮುಖ ಕುಕ್ಕುಟೇನ**
**ಯಥೇಷ್ಟನಾನಾವಿಧಕಾಮರೂಪೀ ।**
**ದೀಕ್ಷಾಸಿ ಸೋಮೋ ಮರುತಃ ಸದೈವ**
**ಧರ್ಮೋಽಸಿ ವಾಯುರಚಲೇನ್ದ್ರ ಇನ್ದ್ರಃ ॥೧೬॥**

ಮಹಾಮಹಿಮನಾದ ಷಣ್ಮುಖನೇ! ನೀನು ಹುಂಜದೊಡನೆ ಆಟವಾಡುವೆ. ಯಥೇಷ್ಟವಾದ, ನಾನಾವಿಧವಾದ ರೂಪಗಳನ್ನೂ ಸಹ ಧರಿಸಲು ನೀನು ಸಮರ್ಥನಾಗಿರುವೆ. ದೀಕ್ಷಾ, ಸೋಮ, ಮರುತ್ತುಗಳು, ಯಮಧರ್ಮ, ವಾಯು, ಅಚಲೇಂದ್ರನಾದ ಹಿಮವಂತ ಮತ್ತು ದೇವತೆಗಳಿಗೊಡೆಯನಾದ ಇಂದ್ರ–ಎಲ್ಲವೂ ನೀನೇ ಆಗಿರುವೆ. (ಅವರೆಲ್ಲರೂ ನಿನ್ನ ಅಂಶಜರೇ ಆಗಿರುತ್ತಾರೆ.)

**ಸನಾತನಾನಾಮಪಿ ಶಾಶ್ವತಸ್ತ್ವಂ**
**ಪ್ರಭುಃ ಪ್ರಭೂಣಾಮಪಿ ಚೋಗ್ರಧನ್ವಾ ।**
**ಋತಸ್ಯ ಕರ್ತಾ ದಿತಿಜಾನ್ತಕಸ್ತ್ವಂ**
**ಜೇತಾ ರಿಪೂಣಾಂ ಪ್ರವರಃ ಸುರಾಣಾಮ್ ॥೧೭॥**

ನೀನು ಸನಾತನರಿಗೂ ಸನಾತನನಾದವನು. ನಿನಗೆ ಹುಟ್ಟು-ಸಾವು ಗಳೆಂಬುದೇ ಇಲ್ಲ. ನೀನು ಶಾಶ್ವತನು. ಉಗ್ರವಾದ ಧನುಸ್ಸನ್ನು ಹಿಡಿದಿರುವ ನೀನು ಪ್ರಭುಗಳಿಗೂ ಪ್ರಭುವಾಗಿರುವೆ. ಸತ್ಯದ ಪ್ರವರ್ತಕನೂ ನೀನೇ ಆಗಿರುವೆ. (ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳ ನಿಯಾಮಕನು ನೀನಾಗಿರುವೆ.) ದಿತಿಯ ಮಕ್ಕಳಾದ ದೈತ್ಯರಿಗೆ ನೀನು ಯಮಪ್ರಾಯನು. ಶತ್ರುಗಳನ್ನು ಸರ್ವಕಾಲದಲ್ಲಿಯೂ ಜಯಿಸುವವನು. (ನಿನಗೆ ಪರಾಭವವೆಂಬುದೇ ಇಲ್ಲ.) ನೀನು ದೇವತೆಗಳಲ್ಲೆಲ್ಲಾ ಪರಮಶ್ರೇಷ್ಠನಾಗಿರುವೆ.

**ಸೂಕ್ಷ್ಮಂ ತಪಸ್ತತ್ಪರಮಂ ತ್ವಮೇವ**
**ಪರಾವರಜ್ಞೋಽಸಿ ಪರಾವರಸ್ತ್ವಮ್ ।**
**ಧರ್ಮಸ್ಯ ಕಾಮಸ್ಯ ಪರಸ್ಯ ಚೈವ**
**ತ್ವತ್ತೇಜಸಾ ಕೃತ್ಸ್ನಮಿದಂ ಮಹಾತ್ಮನ್ ॥೧೮॥**

ಅಣೋರಣೀಯನೂ–ಮಹತೋಮಹೀಯನೂ ನೀನೇ ಆಗಿರುವೆ. ಸೂಕ್ಷ್ಮವಸ್ತುಗಳೆಲ್ಲಕ್ಕೂ ಅತಿಸೂಕ್ಷ್ಮನೂ, ಮಹದ್ವಸ್ತುಗಳೆಲ್ಲಕ್ಕೂ ಮಹದ್ವಸ್ತುವೂ ನೀನೇ ಆಗಿರುವೆ. ಪರಾ ಮತ್ತು ಅಪರಾವಿದ್ಯೆಗಳನ್ನು ತಿಳಿದವನಾಗಿರುವೆ ಮತ್ತು ಆ ವಿದ್ಯೆಗಳ ಮೂಲಸ್ವರೂಪನೂ ಸಹ ನೀನೇ ಆಗಿರುವೆ. ಮಹಾತ್ಮನೇ! ಧರ್ಮಕ್ಕೆ, ಕಾಮಕ್ಕೆ ಮತ್ತು ಮೋಕ್ಷಕ್ಕೆ ನೀನೇ ಮೂಲಕಾರಣನಾಗಿರುವೆ. ನಿನ್ನ ದಿವ್ಯತೇಜಸ್ಸಿನಿಂದಲೇ ಸಕಲವಾದ ಈ ಪ್ರಪಂಚವೂ ಪ್ರಕಾಶಿತವಾಗಿದೆ.

**ವ್ಯಾಪ್ತಂ ಜಗತ್ಸರ್ವಸುರಪ್ರವೀರ**
**ಶಕ್ತ್ಯಾ ಮಯಾ ಸಂಸ್ತುತ ಲೋಕನಾಥ ।**
**ನಮೋಽಸ್ತು ತೇ ದ್ವಾದಶನೇತ್ರಬಾಹೋ**
**ಅತಃ ಪರಂ ವೇದ್ಮಿ ಗತಿಂ ನ ತೇಽಹಮ್ ॥೧೯॥**

ಸಕಲದೇವತೆಗಳಿಗೂ ಶ್ರೇಷ್ಠನಾಗಿರುವ ಸ್ಕಂದನೇ! ನಿನ್ನ ಶಕ್ತಿ ಯಿಂದಲೇ ಈ ವಿಶ್ವವು ವ್ಯಾಪ್ತವಾಗಿದೆ. ಲೋಕನಾಥನೇ! ನಾನು ನಿನ್ನನ್ನು ಯಥಾಮತಿ ಸ್ತೋತ್ರಮಾಡಿದ್ದೇನೆ. ಹನ್ನೆರಡು ಕೈಗಳುಳ್ಳವನೇ! ಹನ್ನೆರಡು ಕಣ್ಣುಗಳುಳ್ಳವನೇ! ನಿನಗೆ ಅನಂತಾನಂತ ನಮಸ್ಕಾರಗಳು.

ನಿನ್ನ ಅಪಾರವಾದ ಮಹಿಮೆಯಲ್ಲಿ ಇದಕ್ಕಿಂತಲೂ ಹೆಚ್ಚಿನದನ್ನು ಅಲ್ಪ ಮತಿಯಾದ ನಾನು ತಿಳಿದವನಾಗಿಲ್ಲ. ನೀನೇ ನನಗೆ ದಿಕ್ಕು. ಬೇರೆಯಿಲ್ಲ. (ಅಲ್ಪಮತಿಯಿಂದ ಮಾಡಿರುವ ಈ ಸ್ತೋತ್ರದಿಂದಲೇ ನೀನು ಪ್ರಸನ್ನನಾಗು.)

**ಫಲಶ್ರುತಿಃ**

**ಸ್ಕನ್ದಸ್ಯ ಯ ಇದಂ ವಿಪ್ರಃ ಪಠೇಜ್ಜನ್ಮ ಸಮಾಹಿತಃ ।**
**ಶ್ರಾವಯೇದ್ಬ್ರಾಹ್ಮಣೇಭ್ಯೋ ಯಃ ಶೃಣುಯಾದ್ವಾ**
**ದ್ವಿಜೇರಿತಮ್ ॥೨೦॥**

**ಧನಮಾಯುರ್ಯಶೋ ದೀಪ್ತಂ ಪುತ್ರಾಞ್ಛತ್ರುಜಯಂ ತಥಾ ।**
**ಸ ಪುಷ್ಟಿತುಷ್ಟೀ ಸಮ್ಪ್ರಾಪ್ಯ ಸ್ಕನ್ದಸಾಲೋಕ್ಯಮಾಪ್ನುಯಾತ್ ॥೨೧॥**

ಸ್ಕಂದನ ಜನ್ಮಕಥೆಯನ್ನೂ ಮತ್ತು ಈ ಸ್ತೋತ್ರವನ್ನೂ ಸಹ ಯಾವನು ಬ್ರಾಹ್ಮಣರ ಸಮ್ಮುಖದಲ್ಲಿ ಹೇಳುತ್ತಾನೆಯೋ ಮತ್ತು ಹೇಳುವುದನ್ನು ಯಾವನು ಕೇಳುತ್ತಾನೆಯೋ ಅವನು ಧನ, ಆಯುಸ್ಸು, ಯಶಸ್ಸು, ಸುಪುತ್ರರು–ಈ ಎಲ್ಲವನ್ನೂ ಪಡೆಯುತ್ತಾನೆ. ಶತ್ರುಗಳನ್ನು ಗೆಲ್ಲುತ್ತಾನೆ. ಈ ಜನ್ಮದಲ್ಲಿ ಪ್ರಾದುರ್ಭಾವವನ್ನೂ (ಪುಷ್ಟಿಯನ್ನೂ ) ಮತ್ತು ಎಲ್ಲದರಲ್ಲಿಯೂ ತೃಪ್ತಿಯನ್ನೂ ಹೊಂದಿದವನಾಗಿ ಅವಸಾನಾನಂತರದಲ್ಲಿ ಸ್ಕಂದನ ಸಾಲೋಕ್ಯವನ್ನೂ ಪಡೆಯುತ್ತಾನೆ."

೨೩೨ನೆಯ ಅಧ್ಯಾಯವು ಮುಗಿಯಿತು.

೨೩೩ನೆಯ ಅಧ್ಯಾಯ ದ್ರೌಪದೀ-ಸತ್ಯಭಾಮಾಸಂವಾದಪರ್ವ

## ದ್ರೌಪದಿಯು ಸತ್ಯಭಾಮೆಗೆ ಸತೀತ್ವದ ವಿಷಯದಲ್ಲಿ ಉಪದೇಶಮಾಡಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ಕೃಷ್ಣನೊಡನೆ ಸತ್ಯಭಾಮೆಯೂ ಸಹ ಪಾಂಡವರ ಸಂದರ್ಶನಾರ್ಥವಾಗಿ ಬಂದಿದ್ದಳೆಂಬ ವಿಷಯವನ್ನು ಈ ಹಿಂದೆಯೇ ತಿಳಿಸಿರು ವೆನಲ್ಲವೇ? ಒಂದು ದಿನ ಪಾಂಡವರು ಮತ್ತು ಅವರ ಅನುಯಾಯಿಗಳಾ ಗಿದ್ದ ಬ್ರಾಹ್ಮಣರೂ ಸಹ ತಮ್ಮ ನಿತ್ಯ-ನೈಮಿತ್ತಿಕಕರ್ಮಗಳೆಲ್ಲವನ್ನೂ ಮುಗಿಸಿ

ಕೊಂಡು ಸುಖಾಸೀನರಾಗಿದ್ದರು. ಆ ಸಮಯದಲ್ಲಿ ದ್ರೌಪದೀ-ಸತ್ಯಭಾಮೆಯರು ಬೇರೊಂದೆಡೆಗೆ ಹೋಗಿ ಕುಳಿತರು. ಬಹಳ ಕಾಲಾನಂತರ ಪುನಃ ಪರಸ್ಪರಸಮಾಗಮದಿಂದ ಸಂತುಷ್ಟರಾದ ಆ ಸಾಧ್ವೀಮಣಿಯರು ಹಾರ್ದಿಕವಾಗಿ ಮಾತನಾಡುತ್ತಾ-ನಗುತ್ತಾ ಹಾಸ್ಯ-ವಿನೋದಗಳಲ್ಲಿ ನಿರತರಾದರು. ಪ್ರಿಯಭಾಷಿಣಿಯರಾದ ಆ ರಾಜಕುಮಾರಿಯರು ಕುರು ಮತ್ತು



ಯದುಕುಲಗಳಿಗೆ ಸಂಬಂಧಿಸಿದ ಅನೇಕಾನೇಕವಿಷಯಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಿದನಂತರ ಸತ್ರಾಜಿತನ ಮಗಳೂ ಕೃಷ್ಣನ ಪ್ರಿಯತಮೆಯೂ ಆದ ಸತ್ಯಭಾಮೆಯು ಯಾಜ್ಞಸೇನಿಯನ್ನು ಪ್ರಶ್ನಿಸಿದಳು :

**ಕೇನ ದ್ರೌಪದಿ ವೃತ್ತೇನ ಪಾಣ್ಡವಾನಧಿತಿಷ್ಠಸಿ ।**

**ಲೋಕಪಾಲೋಪಮಾನ್ವೀರಾನ್ಯೂನಃ ಪರಮಸಂಹತಾನ್ ।**
**ಕಥಂ ಚ ವಶಗಾಸ್ತುಭ್ಯಂ ನ ಕುಪ್ಯನ್ತಿ ಚ ತೇ ಶುಭೇ ॥೫॥**

**ತವ ವಶ್ಯಾ ಹಿ ಸತತಂ ಪಾಣ್ಡವಾಃ ಪ್ರಿಯದರ್ಶನೇ ।**
**ಮುಖಪ್ರೇಕ್ಷಾಶ್ಚ ತೇ ಸರ್ವೇ ತತ್ತ್ವಮೇತದ್ಬ್ರವೀಹಿ ಮೇ ॥೬॥**

"ದ್ರೌಪದಿ! ನೀನು ಮಹಾಮಹಿಮರಾದ, ಪರಾಕ್ರಮಿಗಳಾದ, ಸ್ಫುರದ್ರೂಪಿಗಳಾದ, ಲೋಕಪಾಲಕರಿಗೆ ಸಮಾನರಾದ ಪಾಂಡವರನ್ನು ಯಾವ ಪ್ರಕ್ರಿಯೆಯಿಂದ ನಿನ್ನ ವಶಮಾಡಿಕೊಂಡಿರುವೆ? ಇಂತಹ ಪರಾಕ್ರಮಿಗಳು ನಿನ್ನ ವಶವರ್ತಿಗಳು ಹೇಗಾದರು? ನಿನ್ನ ವಿಷಯದಲ್ಲಿ ಅವರು ಯಾವಾಗಲೂ ಕೋಪವನ್ನೇ ಮಾಡಿಕೊಳ್ಳುವುದಿಲ್ಲ. ನೀನು ಹೇಳಿದಂತೆ ಅವರು ಯಾವಾಗಲೂ ನಡೆದುಕೊಳ್ಳುತ್ತಾರೆ. ಅವರು ನಿನ್ನ ವಿಷಯದಲ್ಲಿ ಹೀಗಿರಲು ಕಾರಣವೇನು? ಯಾವ ಪ್ರಕ್ರಿಯೆಯಿಂದ ನೀನವರನ್ನು ನಿನ್ನ ಅಧೀನರನ್ನಾಗಿ ಮಾಡಿಕೊಂಡಿರುವೆ? ಅವರು ಯಾವಾಗಲೂ ನಿನ್ನ ಮುಖವನ್ನೇ ನೋಡುತ್ತಿದ್ದು ನಿನ್ನ ಮುಖಭಾವದಿಂದಲೇ ನಿನ್ನ ಮನಸ್ಸಿನ ಇಂಗಿತವನ್ನರಿತು ಅದಕ್ಕೆ ತಕ್ಕಂತೆ ಕಾರ್ಯಮಾಡುತ್ತಿರುತ್ತಾರೆ. ಅವರು ಹೀಗಿರುವಂತೆ ನೀನು ಮಾಡಿದ ಕ್ರಿಯೆಯ ರಹಸ್ಯವನ್ನು ನನಗೆ ಮರೆಮಾಚದೇ ಹೇಳು.

**ವ್ರತಚರ್ಯಾ ತಪೋ ವಾಪಿ ಸ್ನಾನಮನ್ತ್ರೌಷಧಾನಿ ವಾ ।**
**ವಿದ್ಯಾವೀರ್ಯಂ ಮೂಲವೀರ್ಯಂ ಜಪಹೋಮಾಗದಾಸ್ತಥಾ ॥೭॥**

**ಮಮಾದ್ಯಾಚಕ್ಷ್ವ ಪಾಞ್ಚಾಲಿ ಯಶಸ್ಯಂ ಭಗದೈವತಮ್ ।**
**ಯೇನ ಕೃಷ್ಣೇ ಭವೇನ್ನಿತ್ಯಂ ಮಮ ಕೃಷ್ಣೋ ವಶಾನುಗಃ ॥೮॥**

ದ್ರೌಪದಿ! ಪಾಂಡವರು ನಿನ್ನ ವಶವರ್ತಿಗಳಾಗಿರುವುದಕ್ಕೆ ವ್ರತೋಪವಾಸಗಳನ್ನೇನಾದರೂ ಮಾಡಿದೆಯಾ? ತಪಸ್ಸನ್ನು ಆಚರಿಸಿರುವೆಯಾ? ಪವಿತ್ರವಾದ ಸಂಗಮಸ್ಥಾನಗಳಲ್ಲಿ ಸ್ನಾನಮಾಡಿದುದರಿಂದ ಈ ಶಕ್ತಿಯು ನಿನಗೆ ಪ್ರಾಪ್ತವಾಯಿತೇ? ಮಂತ್ರಬಲದಿಂದ ಇದನ್ನು ಸಾಧಿಸಿರುವೆಯಾ? ಸ್ನಾನಮಾಡುವಾಗ ಮೂಲಿಕೆಗಳನ್ನೇನಾದರೂ ಸ್ನಾನಕ್ಕಾಗಿ ಉಪಯೋಗಿಸಿದೆಯಾ? ಕಾಮಶಾಸ್ತ್ರದಲ್ಲಿ ಹೇಳಿರುವಂತೆ ತಂತ್ರವನ್ನೇನಾದರೂ ಮಾಡಿರುವೆಯಾ? ಅಥವಾ ನಿನ್ನ ಅನುಪಮವಾದ ತಾರುಣ್ಯ-ಲಾವಣ್ಯಗಳೇ ಇದಕ್ಕೆ

ಕಾರಣವಾಗಿರುವುವೇ? ಪತಿಗಳ ವಶೀಕರಣಕ್ಕಾಗಿ ಜಪ-ಹೋಮ ಗಳನ್ನೇನಾದರೂ ಮಾಡಿದೆಯಾ? ಯಾವುದಾದರೂ ಅಂಜನವನ್ನು (ಔಷಧ ವನ್ನು ) ಕಂಡುಕೊಂಡಿರುವೆಯಾ? ಮರೆಮಾಚದೇ ಹೇಳು, ದ್ರೌಪದಿ! ನೀನು ಆಚರಿಸಿದಂತೆಯೇ ನಾನೂ ನಡೆದು ಅದರಿಂದ ಪರಮಸೌಭಾಗ್ಯವನ್ನು ಪಡೆಯಬೇಕೆಂದಿರುವೆನು. ಪಾಂಡವರು ನಿನ್ನ ವಶವರ್ತಿಗಳಾಗಿರುವಂತೆ ಶ್ರೀಕೃಷ್ಣನೂ ನನ್ನ ವಶವರ್ತಿಯಾಗಬೇಕು. ಇದು ನನ್ನ ಇಚ್ಛೆಯಾಗಿದೆ."

ಹಲವಾರು ಪ್ರಶ್ನೆಗಳನ್ನು ಕೇಳಿ ಸತ್ಯಭಾಮೆಯು ವಿರಮಿಸುತ್ತಲೇ ಪತಿವ್ರತೆಯಾದ, ಮಹಾಭಾಗೆಯಾದ ದ್ರೌಪದಿಯು ಪ್ರತ್ಯುತ್ತರವನ್ನಿತ್ತಳು :

**ಅಸತ್ಸ್ತ್ರೀಣಾಂ ಸಮಾಚಾರಂ ಸತ್ಯೇ ಮಾಮನುಪೃಚ್ಛಸಿ ।**
**ಅಸದಾಚರಿತೇ ಮಾರ್ಗೇ ಕಥಂ ಸ್ಯಾದನುಕೀರ್ತನಮ್ ॥೧೦॥**

"ಸತ್ಯಭಾಮೇ! ನೀತಿಗೆಟ್ಟ ಸ್ತ್ರೀಯರ ಕುಕಾರ್ಯದ ವಿಷಯವಾಗಿ ನನ್ನನ್ನು ಪ್ರಶ್ನಿಸುತ್ತಿರುವೆ. ಕುತ್ಸಿತರಾದ ಸ್ತ್ರೀಯರು ಅನುಸರಿಸುವ ಕುಮಾರ್ಗಗಳ ವಿಷಯವಾಗಿ ನನ್ನನ್ನು ನೀನು ಪ್ರಶ್ನಿಸಿದರೆ ಅಂತಹವರ ಕುಮಾರ್ಗದಿಂದ ಬಹಳ ದೂರವಿರುವ ನಾನು ಹೇಗೆ ತಾನೇ ಉತ್ತರಿಸಲಿ?

**ಅನುಪ್ರಶ್ನಃ ಸಂಶಯೋ ವಾ ನೈತತ್ತ್ವಯ್ಯುಪಪದ್ಯತೇ ।**
**ತಥಾ ಹ್ಯುಪೇತಾ ಬುದ್ಧ್ಯಾ ತ್ವಂ ಕೃಷ್ಣಸ್ಯ ಮಹಿಷೀ ಪ್ರಿಯಾ ॥೧೧॥**

ಬುದ್ಧಿಶಾಲಿನಿಯಾಗಿರುವ ಮೇಲಾಗಿ ಧರ್ಮಾತ್ಮನಾದ ಶ್ರೀಕೃಷ್ಣನ ಭಾರ್ಯೆಯಾಗಿರುವ ನಿನಗೆ ಇಂತಹ ಕುತ್ಸಿತವಾದ ಪ್ರಶ್ನೆಗಳನ್ನು ಕೇಳುವು ದಾಗಲೀ ಅಥವಾ ಪತಿಯ ವಿಷಯದಲ್ಲಿ ಸಂಶಯಿಸುವುದಾಗಲೀ ಯುಕ್ತ ವೆನಿಸುವುದಿಲ್ಲ.

**ಯದೈವ ಭರ್ತಾ ಜಾನೀಯಾನ್ಮಂತ್ರಮೂಲಪರಾಂ ಸ್ತ್ರಿಯಮ್ ।**
**ಉದ್ವಿಜೇತ ತದೈವಾಸ್ಯಾಃ ಸರ್ಪಾದ್ವೇಶ್ಮಗತಾದಿವ ॥೧೨॥**

ಪತ್ನಿಯು ತನ್ನನ್ನು ದಾಸನನ್ನಾಗಿ ಮಾಡಿಕೊಳ್ಳಲು ಮಂತ್ರ-ಔಷಧ-ಮೂಲಿಕೆಗಳನ್ನು ಪ್ರಯೋಗಿಸಲಿರುವಳೆಂದು ತಿಳಿದೊಡನೆಯೇ ಗಂಡನಾದ ವನು ಅವಳ ವಿಷಯದಲ್ಲಿ–ಮನೆಯನ್ನು ಹೊಕ್ಕ ಸರ್ಪದಿಂದ ಹೇಗೋ ಹಾಗೆ–ಭಯಪಡುವನು. (ಸ್ತ್ರೀಯರು ಮಾಡುವ ಈ ವಿಧವಾದ ಕುತ್ಸಿತಕೃತ್ಯಗಳು

ಎಂದಾದರೊಂದು ದಿನ ಬಯಲಿಗೆ ಬಂದೇ ಬರುವುವು. ಇಂತಹ ಪ್ರಯೋಗ ಗಳನ್ನು ಪದೇ-ಪದೇ ಮಾಡುತ್ತಲೇ ಇರಬೇಕಾಗುವುದು. ಯಾವ ಪ್ರಯೋ ಗವೂ ಯಾರ ಮೇಲೆಯೂ ಜೀವನಪರ್ಯಂತವಾಗಿ ಪ್ರಭಾವಬೀರುವುದು ಸಾಧ್ಯವಿಲ್ಲ. ಅಂತಹ ಸಂದರ್ಭಗಳಲ್ಲಿ ಪತ್ನಿಯ ಕುಕೃತ್ಯವು ಬಯಲಾಯಿ ತೆಂದರೆ ಪರಿಸ್ಥಿತಿಯು ಬಹಳ ಕಲುಷಿತವಾಗುವುದು. ಆದುದರಿಂದ ಸಾಧ್ವಿ ಯರಾದವರಾರೂ ಅಂತಹ ಕುಕೃತ್ಯಗಳಿಗೆ ಎಂದೂ ಪ್ರಯತ್ನಿಸಬಾರದು.)

ಪತ್ನಿಯು ತನ್ನನ್ನು ದಾಸನನ್ನಾಗಿ ಮಾಡಿಕೊಳ್ಳಲು ಕುತ್ಸಿತವಾದ ಮಾರ್ಗವನ್ನು ಹಿಡಿದಿರುವಳೆಂಬುದು ತಿಳಿದೊಡನೆಯೇ ಪತಿಯು ಉದ್ವಿಗ್ನ ನಾಗುವನು. ಮನಸ್ಸಿನಲ್ಲಿ ಭಯವು ಹುಟ್ಟಿದೊಡನೆಯೇ ಶಾಂತಿಯ ಭಂಗ ವಾಗುವುದು.

**ಉದ್ವಿಗ್ನಸ್ಯ ಕುತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ।**

ಉದ್ವಿಗ್ನನಾದವನಿಗೆ ಶಾಂತಿಯೆಲ್ಲಿಯದು? ಮನಶ್ಯಾಂತಿಯಿಲ್ಲದವನಿಗೆ ಸುಖವೆಲ್ಲಿಯದು?

ನನ್ನ ನಿಶ್ಚಿತಾಭಿಪ್ರಾಯವೇನೆಂದರೆ :

**ನ ಜಾತು ವಶಗೋ ಭರ್ತಾ ಸ್ತ್ರಿಯಾಃ ಸ್ಯಾನ್ಮನ್ತ್ರಕರ್ಮಣಾ ॥೧೩॥**

ಮಂತ್ರಪ್ರಕ್ರಿಯೆಯಿಂದ ಗಂಡನು ಖಂಡಿತವಾಗಿಯೂ ಪತ್ನಿಯ ವಶನಾಗುವುದಿಲ್ಲ.

**ಅಮಿತ್ರಪ್ರಹಿತಾಂಶ್ಚಾಪಿ ಗದಾನ್ಪರಮದಾರುಣಾನ್ ।**
**ಮೂಲಪ್ರಚಾರೈರ್ಹಿ ವಿಷಂ ಪ್ರಯಚ್ಛನ್ತಿ ಜಿಘಾಂಸವಃ ॥೧೪॥**

ಶತ್ರುಗಳಾದವರು ಸಾಮಾನ್ಯವಾಗಿ ತಮ್ಮ ಎದುರಾಳಿಯ ಬುದ್ಧಿಯನ್ನು ಕೆಡಿಸಲು, ಅವನನ್ನು ರೋಗಗ್ರಸ್ತನನ್ನಾಗಿ ಮಾಡಲು ಅಥವಾ ಅವನನ್ನು ವಿನಾಶಮಾಡಲು ರಹಸ್ಯವಾಗಿ ದಾರುಣವಾದ ರೋಗಾಣುಗಳನ್ನೇ ವಿವಿಧರೀತಿಯಲ್ಲಿ ಕಳುಹಿಸುವುದುಂಟು. ಪತಿಯನ್ನು ವಶಪಡಿಸಿಕೊಳ್ಳ ಬೇಕೆಂಬ ದುರಾಸೆಯಿಂದಿರುವ ಸ್ತ್ರೀಯರು ಕೆಲಸಮಯದಲ್ಲಿ ಅಮಿತ್ರರು ರಹಸ್ಯದಲ್ಲಿ ಕಳುಹಿಸಿದ ಪರಮದಾರುಣವಾದ ಈ ವಿಷವನ್ನೇ (ಚೂರ್ಣ ಗಳನ್ನೇ) ಪತಿಗೆ ಕೊಟ್ಟುಬಿಡುತ್ತಾರೆ. (ಅದರಿಂದಾಗುವ ಪರಿಣಾಮವನ್ನು

ಆ ದುಷ್ಟಸ್ತ್ರೀಯರು ಒಮ್ಮೆಯಾದರೂ ಯೋಚಿಸುವುದಿಲ್ಲ. ಪತಿಯನ್ನು ವಶಪಡಿಸಿಕೊಳ್ಳಬೇಕೆಂಬ ಅವರ ಇಚ್ಛೆಯು ಪತಿಯ ಹನನದಲ್ಲಿ ಪರ್ಯವಸಾನಹೊಂದುತ್ತದೆ.)

**ಜಿಹ್ವಯಾ ಯಾನಿ ಪುರುಷಸ್ತ್ವಚಾ ವಾಪ್ಯುಪಸೇವತೇ ।**
**ತತ್ರ ಚೂರ್ಣಾನಿ ದತ್ತಾನಿ ಹನ್ಯುಃ ಕ್ಷಿಪ್ರಮಸಂಶಯಮ್ ॥೧೫॥**

ವಶೀಕರಣಕ್ಕೆಂದು ಪತ್ನಿಯಿಂದ ಕೊಡಲ್ಪಡುವ ಇಂತಹ ಔಷಧಗಳನ್ನು ಪತಿಯು ಮುಟ್ಟಿದರೂ ಸಹ ರೋಗಗ್ರಸ್ತನಾಗುತ್ತಾನೆ. ಕೆಲವು ಸಮಯಗಳಲ್ಲಿ ವಿವೇಚನೆಯಿಲ್ಲದೇ ತಿಂದು ಸತ್ತುಹೋಗುವುದೂ ಉಂಟು. ವಶೀಕರಣಮಾಡಿಕೊಳ್ಳಲು ಪತಿಯ ಮೇಲೆ ಪ್ರಯೋಗಿಸಿದ ಅಥವಾ ಪತಿಗೆ ಉಪಾಯಾಂತರದಿಂದ ತಿನ್ನಿಸಿದ ಆ ಮೂಲಿಕೆಗಳು ಕೆಲವು ಕಾಲಾನಂತರದಲ್ಲಿ ಅನೇಕವಿಧವಾದ ವ್ಯಾಧಿಗಳನ್ನೂ ಉಂಟುಮಾಡುತ್ತವೆಂದು ಕೇಳಿದ್ದೇನೆ.

**ಜಲೋದರಸಮಾಯುಕ್ತಾಃ ಶ್ವಿತ್ರಿಣಃ ಪಲಿತಾಸ್ತಥಾ ।**
**ಅಪುಮಾಂಸಃ ಕೃತಾಃ ಸ್ತ್ರೀಭಿರ್ಜಡಾನ್ಧಬಧಿರಾಸ್ತಥಾ ॥೧೬॥**

ಜಲೋದರರೋಗ, ಕುಷ್ಠ, ಅಕಾಲವಾರ್ಧಕ್ಯ, ನಪುಂಸಕತೆ, ಜಡತ್ವ, ಅಂಧತ್ವ, ಬಧಿರತ್ವ–ಇವುಗಳೆಲ್ಲವೂ ಈ ವಶೀಕರಣಮೂಲಿಕೆಗಳ ಪ್ರಯೋಗದಿಂದ ಕಾಲಾಂತರದಲ್ಲಿ ಪ್ರಾಪ್ತವಾಗುವ ಮಹಾರೋಗಗಳು. ಪತಿಯು ವಶನಾಗಿದ್ದರೂ ಸಹ ಇಂತಹ ಮಹಾರೋಗಗಳಿಂದ ಪೀಡಿತನಾಗಿದ್ದರೆ ಪತ್ನಿಗೆ ಯಾವ ವಿಧವಾದ ಸುಖವಿದೆ? ಸತ್ಯಭಾಮೇ! ಆದುದರಿಂದ ವಿವೇಚನಾಪರಳಾದ ಸಾಧ್ವಿಯಾದ ಸ್ತ್ರೀಯು ಯಾವ ಕಾರಣದಿಂದಲೂ ಇಂತಹ ಕುತ್ಸಿತಕಾರ್ಯಗಳಿಗೆ ಕೈಹಾಕಬಾರದು. ಪತಿಯನ್ನು ಯಾವಾಗಲೂ ಯಾವ ಕಾರಣದಿಂದಲೂ ನೋಯಿಸಬಾರದು.

**ಪಾಪಾನುಗಾಸ್ತು ಪಾಪಸ್ತಾನಪತೀನುಪಸೃಜನ್ತ್ಯುತ ।**

ಪಾಪಿಷ್ಠರ ಮಾರ್ಗವನ್ನು ಅನುಸರಿಸುವ ಪಾಪಾತ್ಮರಾದ ಅಂತಹ ಸ್ತ್ರೀಯರು ಪತಿಯನ್ನು ತಮ್ಮ ವಶಪಡಿಸಿಕೊಳ್ಳಬೇಕೆಂಬ ದುರಾಶೆಯಿಂದಾಗಿ ಅನೇಕವಿಧವಾದ ವಿಪತ್ತುಗಳಲ್ಲಿ ತೊಡಗಿಸುತ್ತಾರೆ. ಅನೇಕ ಕಷ್ಟಗಳಿಗೆ ಗುರಿಮಾಡುತ್ತಾರೆ.

**ನ ಜಾತು ವಿಪ್ರಿಯಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂಚನ ॥೧೭॥**

ಗಂಡನಿಗೆ ಅಪ್ರಿಯವಾದ ಯಾವ ಕಾರ್ಯವನ್ನೂ ಸ್ತ್ರೀಯು ಯಾವಾಗಲೂ ಮಾಡಬಾರದು.

ನನ್ನ ಪತಿಗಳು ನನ್ನ ವಿಷಯದಲ್ಲಿ ಇಷ್ಟೊಂದು ಪ್ರೇಮಪೂರ್ಣರಾಗಿರುವುದಕ್ಕೆ ನಾನವರಲ್ಲಿಟ್ಟಿರುವ ಪ್ರೀತ್ಯಾದರ–ಗೌರವಗಳೇ ಕಾರಣಗಳಾಗಿವೆ. ಮಹಾತ್ಮರಾದ ಪಾಂಡವರ ವಿಷಯದಲ್ಲಿ ನಾನು ಹೇಗೆ ನಡೆದುಕೊಳ್ಳುತ್ತಿರುವೆನೆಂಬುದರ ಸತ್ಯಾಂಶವನ್ನು ಮರೆಮಾಚದೆ ನಿನ್ನೊಡನೆ ಹೇಳುವೆನು ಕೇಳು, ಸತ್ಯಭಾಮೇ!

**ಅಹಂಕಾರಂ ವಿಹಾಯಾಹಂ ಕಾಮಕ್ರೋಧೌ ಚ ಸರ್ವದಾ ।**
**ಸದಾರಾನ್ಪಾಣ್ಡವಾನ್ನಿತ್ಯಂ ಪ್ರಯತೋಪಚರಾಮ್ಯಹಮ್ ॥೧೯॥**

ಪತಿಸೇವಾಪರಾಯಣಳಾದವಳಿಗೆ ಅಹಂಕಾರ-ಕಾಮ-ಕ್ರೋಧಗಳೊಂದೂ ಇರಬಾರದು, ಸತ್ಯೇ! ಅವುಗಳೆಲ್ಲವನ್ನೂ ನಾನು ಪೂರ್ಣವಾಗಿ ವಿಸರ್ಜಿಸಿ, ಪಾಂಡವರನ್ನೂ ಅವರ ಇತರ ಪತ್ನಿಯರನ್ನೂ ಅನುದಿನವೂ ಸಾವಧಾನತೆಯಿಂದ ಉಪಚರಿಸುತ್ತೇನೆ.

**ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ ।**
**ಶುಶ್ರೂಷುರ್ನಿರಹಂಮಾನಾ ಪತೀನಾಂ ಚಿತ್ತರಕ್ಷಿಣೀ ॥೨೦॥**

ನನ್ನ ಮನಸ್ಸಿನಲ್ಲಿ ಹುಟ್ಟಬಹುದಾದ ಅಪೇಕ್ಷೆಗಳನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿ, ನನ್ನ ಮನಸ್ಸನ್ನು ಆತ್ಮನಲ್ಲಿ ಲೀನಮಾಡಿ, ಪತಿಶುಶ್ರೂಷೆಯಲ್ಲಿಯೇ ನಿಯತಮನಸ್ಕಳಾಗಿ, ಅಭಿಮಾನರಹಿತಳಾಗಿ, ನನ್ನ ಗಂಡಂದಿರ ಮನಸ್ಸಿನ ಆಶಯವೇನೆಂಬುದನ್ನು ಕ್ಷಣ-ಕ್ಷಣಕ್ಕೂ ಜಾಗರೂಕತೆಯಿಂದ ತಿಳಿದುಕೊಳ್ಳುತ್ತಾ ಅದಕ್ಕನುಗುಣವಾಗಿ ಅವರ ಸೇವೆಮಾಡುತ್ತಿರುತ್ತೇನೆ.

**ದುರ್ವ್ಯಾಹೃತಾಚ್ಛಙ್ಕಮಾನಾ ದುಃಸ್ಥಿತಾದ್ದುರವೇಕ್ಷಿತಾತ್ ।**
**ದುರಾಸಿತಾದ್ದುರ್ವ್ರಜಿತಾದಿಙ್ಗಿತಾಧ್ಯಾಸಿತಾದಪಿ ॥೨೧॥**

ಅವರೊಡನೆ ಕೆಟ್ಟಮಾತುಗಳನ್ನಾಗಲೀ, ಸುಳ್ಳುಮಾತುಗಳನ್ನಾಗಲೀ ಆಡುವುದಿಲ್ಲ. ಅವರಿಗೆ ಸಂಶಯವುಂಟಾಗುವ ರೀತಿಯಲ್ಲಿ ಕಂಡ-ಕಂಡವರನ್ನು ನೋಡುವುದಿಲ್ಲ. ಅವರ ಕಟಾಕ್ಷವೀಕ್ಷಣದಿಂದಲೇ ಅವರ ಮನಸ್ಸಿನ ಇಂಗಿತವನ್ನರಿತು ಅವರ ಸೇವೆಮಾಡುತ್ತಿರುತ್ತೇನೆ. (ಅವರಿಗೆ ನನ್ನ ಮಾತು,

ನಡತೆ, ನೋಟ, ಕುಳಿತುಕೊಳ್ಳುವಿಕೆ ಮೊದಲಾದುವುಗಳಲ್ಲಿ ಯಾವ ರೀತಿಯ ಶಂಕೆಯೂ ಮೂಡದಂತೆ ನಡೆದುಕೊಳ್ಳುತ್ತೇನೆ.)

**ಸೂರ್ಯವೈಶ್ವಾನರಸಮಾನ್ಸೋಮಕಲ್ಪಾನ್ಮಹಾರಥಾನ್ ।**
**ಸೇವೇ ಚಕ್ಷುರ್ಹಣಃ ಪಾರ್ಥಾನುಗ್ರವೀರ್ಯಪ್ರತಾಪಿನಃ ॥೨೨॥**

ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ, ಚಂದ್ರನಂತೆ ಆಹ್ಲಾದಕರವಾದ ಮುಖಕಾಂತಿಯಿಂದ ಕೂಡಿರುವ, ಮಹಾರಥರಾದ, ಕೇವಲ ವೀಕ್ಷಣಮಾತ್ರದಿಂದಲೇ ಶತ್ರುಗಳನ್ನು ನಿರ್ಮೂಲಮಾಡುವ ಸಾಮರ್ಥ್ಯವುಳ್ಳ, ಮಹಾಪರಾಕ್ರಮಿಗಳಾದ ಪೃಥಾಪುತ್ರರನ್ನು ಏಕಾಗ್ರತೆಯಿಂದ ಸೇವೆಮಾಡುತ್ತೇನೆ.

**ದೇವೋ ಮನುಷ್ಯೋ ಗನ್ಧರ್ವೋ ಯುವಾ ಚಾಪಿ ಸ್ವಲಂಕೃತಃ ।**
**ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ ॥೨೩॥**

ಸರ್ವಾಲಂಕಾರಭೂಷಿತನಾಗಿರಲಿ, ಯುವಕನಾಗಿರಲಿ, ದೇವತೆಯೇ ಆಗಿರಲಿ, ಗಂಧರ್ವನೇ ಆಗಿರಲಿ, ಮನುಷ್ಯನೇ ಆಗಿರಲಿ, ಸರ್ವೈಶ್ವರ್ಯಸಂಪನ್ನನೇ ಆಗಿರಲಿ, ಅನುಪಮವಾದ ಸೌಂದರ್ಯವನ್ನು ಹೊಂದಿರುವವನೇ ಆಗಿರಲಿ–ಅವನು ನನಗೆ ಪಾಂಡವರಿಗಿಂತಲೂ ಉತ್ತಮನೆನಿಸುವುದಿಲ್ಲ.

**ನಾಭುಕ್ತವತಿ ನಾಸ್ನಾತೇ ನಾಸಂವಿಷ್ಟೇ ಚ ಭರ್ತರಿ ।**
**ನ ಸಂವಿಶಾಮಿ ನಾಶ್ನಾಮಿ ಸದಾ ಕರ್ಮಕರೇಷ್ವಪಿ ॥೨೪॥**

ನನ್ನ ಪತಿಗಳ ಸ್ನಾನಕ್ಕೆ ಅಣಿಮಾಡಿಕೊಟ್ಟು ಅವರೆಲ್ಲರೂ ಸ್ನಾನಮಾಡಿದನಂತರ ನಾನು ಸ್ನಾನಮಾಡುತ್ತೇನೆ. ಅವರೆಲ್ಲರೂ ಊಟಮಾಡುವ ಮೊದಲು ನಾನು ಊಟಮಾಡುವುದಿಲ್ಲ. ಅವರೆಲ್ಲರಿಗೂ ಉಣಬಡಿಸಿ ಉಪಚರಿಸಿದನಂತರವೇ ನಾನು ಊಟಮಾಡುತ್ತೇನೆ. ಅವರು ಮಲಗುವ ಮೊದಲು ನಾನು ಮಲಗುವುದಿಲ್ಲ. ಅವರೆಲ್ಲರಿಗೂ ಹಾಸಿಗೆಗಳನ್ನು ಸಿದ್ಧಗೊಳಿಸಿ ಅವರು ಮಲಗಿದನಂತರ ನಾನು ಮಲಗಲು ಹೋಗುತ್ತೇನೆ. ನಾನು ಮನೆಗೆ ಯಜಮಾನಿಯಾಗಿರುವುದರಿಂದ ನನಗೆ ಅನೇಕ ಸೇವಕರಿದ್ದಾರೆ. ಸೇವಕರಿದ್ದರೂ ನನ್ನ ಪತಿಗಳ ಶುಶ್ರೂಷೆಯನ್ನು ಅವರಿಗೊಪ್ಪಿಸದೇ ನಾನೇ ಮಾಡುತ್ತೇನೆ.

**ಕ್ಷೇತ್ರಾದ್ವನಾದ್ವಾ ಗ್ರಾಮಾದ್ವಾ ಭರ್ತಾರಂ ಗೃಹಮಾಗತಮ್ ।**
**ಅಭ್ಯುತ್ಥಾಯಾಭಿನನ್ದಾಮಿ ಆಸನೇನೋದಕೇನ ಚ ॥೨೫॥**

ಜಮೀನಿನಿಂದಾಗಲೀ, ಅರಣ್ಯದಿಂದಾಗಲೀ, ಗ್ರಾಮಾಂತರದಿಂದಾಗಲೀ ನನ್ನ ಪತಿಯು ಮನೆಗೆ ಪುನರಾಗಮಿಸಿದೊಡನೆಯೇ ಕುಳಿತಲ್ಲಿಂದ ಎದ್ದು ನಿಂತು ಎರಡು ಹೆಜ್ಜೆ ಮುಂದೆ ಹೋಗಿ ಮುಗುಳ್ನಗೆಯಿಂದ ಸ್ವಾಗತಿಸಿ ಆಸನ ವನ್ನಿತ್ತು ದಣಿದುಬಂದವನಿಗೆ ಕಾಲು ತೊಳೆಯಲು ಮತ್ತು ಕುಡಿಯಲು ನೀರು ಕೊಟ್ಟು ಅಭಿನಂದಿಸುತ್ತೇನೆ.

**ಪ್ರಮೃಷ್ಟಭಾಣ್ಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ ।**
**ಸಂಯತಾ ಗುಪ್ತಧಾನ್ಯಾ ಚ ಸುಸಂಮೃಷ್ಟನಿವೇಶನಾ ॥೨೬॥**

ಮನೆಯಲ್ಲಿರುವ ಎಲ್ಲ ಪಾತ್ರೆಗಳನ್ನೂ ಸ್ವಚ್ಛವಾಗಿಟ್ಟಿರುತ್ತೇನೆ. ಶುಚಿ-ರುಚಿಯಾಗಿರುವ ಮೃಷ್ಟಾನ್ನವನ್ನು ನನ್ನ ಪತಿಗಳಿಗಾಗಿ ಸಿದ್ಧಮಾಡುತ್ತೇನೆ. ಹೊತ್ತಿಗೆ ಸರಿಯಾಗಿ ಅವರಿಗೆ ಊಟವನ್ನು ಬಡಿಸುತ್ತೇನೆ. ಆಹಾರಪದಾರ್ಥ ಗಳನ್ನೂ ಮತ್ತು ಧಾನ್ಯಾದಿಗಳನ್ನೂ ಗುಪ್ತ (ಸುರಕ್ಷಿತ) ವಾಗಿಡುತ್ತೇನೆ. ಮನೆಯನ್ನು ಯಾವಾಗಲೂ ಸ್ವಚ್ಛವಾಗಿಡುತ್ತೇನೆ. ಎಲ್ಲ ವಿಷಯಗಳಲ್ಲಿಯೂ ಜಾಗರೂಕಳಾಗಿರುತ್ತೇನೆ.

**ಅತಿರಸ್ಕೃತಸಮ್ಭಾಷಾ ದುಃಸ್ತ್ರಿಯೋ ನಾನುಸೇವತೀ ।**
**ಅನುಕೂಲವತೀ ನಿತ್ಯಂ ಭವಾಮ್ಯನಲಸಾ ಸದಾ ॥೨೭॥**

ತಿರಸ್ಕಾರಸೂಚಕವಾದ ಮಾತುಗಳನ್ನೆಂದಿಗೂ ನನ್ನ ಪತಿಯೊಡನೆ ಆಡುವುದಿಲ್ಲ. ದುಷ್ಟಸ್ತ್ರೀಯರ ಗೊಡವೆಗೆ ಹೋಗುವುದಿಲ್ಲ. ಸ್ವಲ್ಪವಾದರೂ ಪಾಲುಮಾರಿಕೆಯಿಲ್ಲದೇ ಪತಿಗಳ ಸೇವೆಯನ್ನು ಮಾಡುತ್ತೇನೆ ಮತ್ತು ಸರ್ವದಾ ಅವರಿಗೆ ಅನುಕೂಲಳಾಗಿಯೇ ಇರುತ್ತೇನೆ.

**ಅನರ್ಮ ಚಾಪಿ ಹಸಿತಂ ದ್ವಾರಿ ಸ್ಥಾನಮಭೀಕ್ಷ್ಣಶಃ ।**
**ಅವಸ್ಕರೇ ಚಿರಸ್ಥಾನಂ ನಿಷ್ಕುಟೇಷು ಚ ವರ್ಜಯೇ ॥೨೮॥**

ಪರಿಹಾಸದ ಸನ್ನಿವೇಶದಲ್ಲಿ ಮಾತ್ರ ನಸುನಗುತ್ತೇನೆಯೇ ಹೊರತು ಅಕಾಲದಲ್ಲಿ ಅಕಾರಣವಾಗಿ ನಗುವುದಿಲ್ಲ. ಮನೆಯ ಬಾಗಿಲಿನಲ್ಲಿ ಪದೇ-ಪದೇ ಹೋಗಿ ನಿಂತುಕೊಳ್ಳುವುದಿಲ್ಲ. (ಕಾರಣವಿಲ್ಲದೇ ನಗುವುದನ್ನೂ ಬಾರಿ-

ಬಾರಿಗೂ ಬಾಗಿಲಿನಲ್ಲಿ ಹೋಗಿ ನಿಲ್ಲುವುದನ್ನೂ ನಾನು ವರ್ಜಿಸುತ್ತೇನೆ.) ಮನೆಯ ತೋಟದಲ್ಲಿಯೂ ಸಹ ಹೆಚ್ಚುಕಾಲದ ಓಡಾಟವನ್ನು ವರ್ಜಿಸುತ್ತೇನೆ.

**ಅತಿಹಾಸಾತಿರೋಷೌ ಚ ಕ್ರೋಧಸ್ಥಾನಂ ಚ ವರ್ಜಯೇ ।**
**ನಿರತಾಹಂ ಸದಾ ಸತ್ಯೇ ಭರ್ತ್ಯಾಣಾಮುಪಸೇವನೇ ॥೨೯॥**

ಸತ್ಯಭಾಮೇ! ನಾನು ಯಾವ ಕಾರಣದಿಂದಲೂ ಅತಿಯಾಗಿ ನಗುವುದಿಲ್ಲ. ಎಂತಹ ಉದ್ವಿಗ್ನಾವಸ್ಥೆಯಲ್ಲಿಯೂ ರೋಷವನ್ನು ತ್ಯಜಿಸುತ್ತೇನೆ. ಕೋಪಬರುವ ಸನ್ನಿವೇಶವನ್ನೇ ಬರಗೊಡುವುದಿಲ್ಲ. ನಾನು ಯಾವಾಗಲೂ, ಯಾವ ಕಾರಣದಿಂದಲೂ, ಯಾರ ಮೇಲೆಯೂ ಕೋಪಗೊಳ್ಳುವುದಿಲ್ಲ. ಹೀಗಿದ್ದುಕೊಂಡು ನಾನು ಯಾವಾಗಲೂ ಪತಿಗಳ ಸೇವೆಯಲ್ಲಿಯೇ ನಿರತಳಾಗಿರುತ್ತೇನೆ.

**ಸರ್ವಥಾ ಭರ್ತೃರಹಿತಂ ನ ಮಮೇಷ್ಟಂ ಕಥಂಚನ ।**
**ಯದಾ ಪ್ರವಸತೇ ಭರ್ತಾ ಕುಟುಮ್ಬಾರ್ಥೇನ ಕೇನಚಿತ್ ।**
**ಸುಮನೋವರ್ಣಕಾಪೇತಾ ಭವಾಮಿ ವ್ರತಚಾರಿಣೀ ॥೩೦॥**

ನನ್ನ ಪತಿಗಳಿಂದ ಪ್ರತ್ಯೇಕವಾಗಿರಲು ನಾನು ಸರ್ವಥಾ ಇಷ್ಟಪಡುವುದಿಲ್ಲ. ಯಾವಾಗಲಾದರೂ, ಯಾವುದಾದರೂ ಸಾಂಸಾರಿಕವಾದ ಕಾರಣದಿಂದ ನನ್ನ ಪತಿಯು ಬೇರೆಯೆಡೆಗೆ ಪ್ರವಾಸ ಹೊರಟಿದ್ದೇ ಆದರೆ, ಅವನು ಮರಳಿ ಆಶ್ರಮಕ್ಕೆ ಬರುವವರೆಗೂ ನಾನೂ ಹೂವನ್ನು ಮುಡಿದುಕೊಳ್ಳುವುದಿಲ್ಲ. ಗಂಧವನ್ನು ಪೂಸಿಕೊಳ್ಳುವುದಿಲ್ಲ. ಯಾವ ವಿಧವಾದ ಅಲಂಕಾರವನ್ನೂ ಮಾಡಿಕೊಳ್ಳುವುದಿಲ್ಲ. ಪತಿಯ ಸುಖಾಗಮನವನ್ನೇ ಬಯಸುತ್ತಾ ವ್ರತನಿಷ್ಠಳಾಗಿದ್ದುಬಿಡುತ್ತೇನೆ.

**ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ।**
**ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ವರ್ಜಯಾಮ್ಯಹಮ್ ॥**

ಯಾವ ಪಾನೀಯವನ್ನು ನನ್ನ ಪತಿಯು ವರ್ಜಿಸುತ್ತಾನೆಯೋ, ಯಾವ ಆಹಾರವನ್ನು ನನ್ನ ಪತಿಯು ಸ್ವೀಕರಿಸುವುದಿಲ್ಲವೋ, ಯಾವ ವಸ್ತುವಿನ ಸುಖವನ್ನು ನನ್ನ ಪತಿಯು ವರ್ಜಿಸುತ್ತಾನೆಯೋ, ಯಾವ ವಸ್ತುವಿನ ಸುಖವನ್ನು ನನ್ನ ಪತಿಯು ದೂರೀಕರಿಸುತ್ತಾನೆಯೋ–ಅವುಗಳೆಲ್ಲವನ್ನೂ ನಾನೂ ಸಹ ವರ್ಜಿಸುತ್ತೇನೆ.

**ಯಥೋಪದೇಶಂ ನಿಯತಾ ವರ್ತಮಾನಾ ವರಾಙ್ಗನೇ ।**
**ಸ್ವಲಂಕೃತಾ ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ ॥೩೨॥**

ಸುಂದರಿ! ನನ್ನ ಪತಿಯು ಯಾವ ರೀತಿಯಲ್ಲಿ ಆಜ್ಞೆಮಾಡಿರುವನೋ ಅದರಂತೆಯೇ (ಶಾಸ್ತ್ರಾನುಸಾರವಾಗಿಯೇ) ನಡೆಯುತ್ತಿರುತ್ತೇನೆ. ಪತಿಯ ಮನಸ್ಸನ್ನು ಆಹ್ಲಾದಿಸುವ ಸಲುವಾಗಿಯೇ ಅಲಂಕರಿಸಿಕೊಳ್ಳುತ್ತೇನೆ. ಸರ್ವದಾ ಅವನಿಗೆ ಪ್ರಿಯವಾಗುವ ಕಾರ್ಯವನ್ನು ಮಾಡುವುದರಲ್ಲಿಯೇ ನಿರತಳಾಗಿರುತ್ತೇನೆ.

**ಯೇ ಚ ಧರ್ಮಾಃ ಕುಟುಮ್ಬೇಷು ಶ್ವಶ್ರ್ವಾ ಮೇ ಕಥಿತಾಃ ಪುರಾ ।**
**ಭಿಕ್ಷಾಬಲಿಶ್ರಾದ್ಧಮಿತಿ ಸ್ಥಾಲೀಪಾಕಾಶ್ಚ ಪರ್ವಸು ॥೩೩॥**

**ಮಾನ್ಯಾನಾಂ ಮಾನಸತ್ಕಾರಾ ಯೇ ಚಾನ್ಯೇ ವಿದಿತಾ ಮಮ ॥೩೪॥**

**ತಾನ್ಸರ್ವಾನನುವರ್ತೇಽಹಂ ದಿವಾರಾತ್ರಮತನ್ದ್ರಿತಾ ।**
**ವಿನಯಾನ್ನಿಯಮಾಂಶ್ಚೈವ ಸದಾ ಸರ್ವಾತ್ಮನಾ ಶ್ರಿತಾ ॥೩೫॥**

ಕುಟುಂಬಧರ್ಮದ ವಿಷಯವಾಗಿ ನನ್ನ ಅತ್ತೆಯಾದ ಕುಂತೀದೇವಿಯು ಹೇಗೆ ಉಪದೇಶಮಾಡಿರುವಳೋ ಅದರಂತೆಯೇ ನಾನು ನಡೆದುಕೊಳ್ಳುತ್ತೇನೆ. ಭಿಕ್ಷೆನೀಡುವುದು, ಕಾಲಕಾಲದಲ್ಲಿ ಬಲಿಹರಣಕ್ಕೆ ಸಿದ್ಧಮಾಡುವುದು, ಶ್ರಾದ್ಧದಿನಗಳಲ್ಲಿ ಮಾಡಬೇಕಾದ ಕರ್ತವ್ಯ, ಪರ್ವಗಳಲ್ಲಿ ಮಾಡಬೇಕಾದ ಸ್ಥಾಲೀಪಾಕಾದಿಗಳಿಗೆ ಸಿದ್ಧಪಡಿಸುವುದು, ಮಾನನೀಯರಾದ ಅತಿಥಿಗಳನ್ನು ಯಥೋಕ್ತವಾದ ಆದರ-ಗೌರವಗಳಿಂದ ಸತ್ಕರಿಸುವುದು–ಇವೇ ಮೊದಲಾದ ಸಂಸಾರಕ್ಕೆ ಸಂಬಂಧಿಸಿದ ಸಕಲವಿಷಯಗಳೂ ನನಗೆ ನಮ್ಮ ಅತ್ತೆಯಿಂದ ಉಪದೇಶಿತವಾಗಿವೆ. ಸ್ವಲ್ಪವಾದರೂ ಆಲಸ್ಯವಿಲ್ಲದೆ ಹಗಲು-ರಾತ್ರಿಗಳಲ್ಲಿ ಮಾಡಬೇಕಾದ ಕಾರ್ಯಗಳನ್ನೂ ನಿಯಮದಿಂದ ಮಾಡಬೇಕಾದ ಕಾರ್ಯಗಳನ್ನೂ ನಾನು ಮನದಟ್ಟುಮಾಡಿಕೊಂಡು ಕಾರ್ಯಮಾಡುತ್ತೇನೆ.

**ಮೃದೂನ್ಸತಃ ಸತ್ಯಶೀಲಾನ್ಸತ್ಯಧರ್ಮಾನುಪಾಲಿನಃ ।**
**ಆಶೀವಿಷಾನಿವ ಕ್ರುದ್ಧಾನ್ಪತೀನ್ಪರಿಚರಾಮ್ಯಹಮ್ ॥೩೬॥**

ನನ್ನ ಪತಿಗಳು ಮೃದುಸ್ವಭಾವದವರು, ಸತ್ಪುರುಷರು, ಸತ್ಯಶೀಲರು, ಧರ್ಮಿಷ್ಠರು ಮತ್ತು ಧರ್ಮಪಾಲಕರು. ಆದರೆ ತಮಗಾಗಲೀ, ಧರ್ಮ

ಕ್ಕಾಗಲೀ ಅಲ್ಪವಾದ ಅಪಚಾರವು ನಡೆದರೂ ಸಹಿಸತಕ್ಕವರಲ್ಲ. ಸರ್ಪಗಳಂತೆಯೇ ಶೀಘ್ರಕೋಪಿಗಳು. ಇಂತಹವರನ್ನು ನಾನು ಬಹುಜಾಗರೂಕತೆಯಿಂದ ಸೇವಿಸುತ್ತಿದ್ದೇನೆ.

**ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ ।**
**ಸ ದೇವಃ ಸಾ ಗತಿರ್ನಾನ್ಯಾ ತಸ್ಯ ಕಾ ವಿಪ್ರಿಯಂ ಚರೇತ್ ॥೩೭॥**

ಪತಿಯ ಆಶ್ರಯದಲ್ಲಿರುವುದು, ಪತಿಶುಶ್ರೂಷಾಪರಾಯಣಳಾಗಿರುವುದು ಸ್ತ್ರೀಯಾದವಳಿಗೆ ಮುಖ್ಯಧರ್ಮ ಮತ್ತು ಅದೇ ಸನಾತನಧರ್ಮವೆಂದೂ ನನ್ನ ಅಭಿಮತವಾಗಿದೆ. ಪತಿಯೇ ದೇವರು ; ಅವನೇ ದಿಕ್ಕು ; ಅವನನ್ನು ಬಿಟ್ಟು ಸತಿಯಾದವಳಿಗೆ ಬೇರೆ ದಿಕ್ಕೇ ಇಲ್ಲ. ಅಂತಹ ಪತಿಯ ವಿಷಯದಲ್ಲಿ ಯಾವಳು ತಾನೇ ಅಪ್ರಿಯವಾದ ಕಾರ್ಯಮಾಡಲು ಯತ್ನಿಸಿಯಾಳು ?

**ಅಹಂ ಪತೀನ್ನಾತಿಶಯೇ ನಾತ್ಯಶ್ನೇ ನಾತಿಭೂಷಯೇ ।**
**ನಾಪಿ ಶ್ವಶ್ರೂಂ ಪರಿವದೇ ಸರ್ವದಾ ಪರಿಯನ್ತ್ರಿತಾ ॥೩೮॥**

ಪತಿಗಳು ಮಲಗುವ ಮೊದಲು ನಾನು ಮಲಗುವುದಿಲ್ಲ ಮತ್ತು ಅವರ ಇಚ್ಛೆಗೆ ವಿರುದ್ಧವಾಗಿ ಊಟಮಾಡುವುದಿಲ್ಲ. ನನ್ನ ಪತಿಗಳ ಇಚ್ಛೆಗೆ ವಿರುದ್ಧವಾಗಿ ಅಲಂಕರಿಸಿಕೊಳ್ಳುವುದಿಲ್ಲ. (ಶಯನ, ಭೋಜನ ಮತ್ತು ಭೂಷಣಗಳಲ್ಲಿ ಪತಿಗಳಿಗಿಂತಲೂ ಮೇಲಾಗಿ ಇರುವುದಿಲ್ಲ.) ನನ್ನ ಅತ್ತೆಯನ್ನು ನಾನೆಂದಿಗೂ ಯಾವ ಕಾರಣದಿಂದಲೂ ನಿಂದಿಸುವುದಿಲ್ಲ. ನನ್ನ ಪತಿಗಳಿಂದ ನಾನು ಸರ್ವದಾ ನಿಯಂತ್ರಿತಳಾಗಿರುತ್ತೇನೆ. ಅವರು ಹೇಳಿದಂತೆ ಮಾಡುತ್ತಿರುತ್ತೇನೆ.

**ಅವಧಾನೇನ ಸುಭಗೇ ನಿತ್ಯೋತ್ಥಿತತಯೈವ ಚ ।**
**ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥೩೯॥**

ಅಪ್ರಮತ್ತಳಾಗಿ, ವಿನೀತಳಾಗಿ, ಅನುದಿನವೂ ನಾನವರನ್ನು ಸೇವೆ ಮಾಡುತ್ತಿರುವುದರಿಂದಲೂ, ಹಿರಿಯರ ಶುಶ್ರೂಷೆಯಿಂದಲೂ ನನ್ನ ಪತಿಗಳು ನನ್ನ ವಶವರ್ತಿಗಳಾಗಿರುತ್ತಾರೆ.

**ನಿತ್ಯಮಾರ್ಯಾಮಹಂ ಕುನ್ತೀಂ ವೀರಸೂಂ ಸತ್ಯವಾದಿನೀಮ್ ।**
**ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನಭೋಜನೈಃ ॥೪೦॥**

ವೀರಮಾತೆಯಾದ, ಸತ್ಯವಾದಿನಿಯಾದ, ಆರ್ಯೆಯಾದ ಕುಂತೀದೇವಿ

ಯನ್ನು ಸ್ನಾನ-ಪಾನ-ಭೋಜನ-ವಸ್ತ್ರಾದಿಗಳಿಂದ ಅನುದಿನವೂ ನಾನೇ ಉಪಚರಿಸುತ್ತೇನೆ.

**ನೈತಾಮತಿಶಯೇ ಜಾತು ವಸ್ತ್ರಭೂಷಣಭೋಜನೈಃ ।**
**ನಾಪಿ ಪರಿವದೇ ಚಾಹಂ ತಾಂ ಪೃಥಾಂ ಪೃಥಿವೀಸಮಾಮ್ ॥೪೧॥**

ಆಕೆಯು ಉಡುವ ಸೀರೆಗಿಂತಲೂ ಹೆಚ್ಚು ಶೋಭಾಯಮಾನವಾದ ಸೀರೆಯನ್ನು ನಾನು ಉಡುವುದಿಲ್ಲ. ಆಕೆಯು ಊಟಮಾಡುವುದನ್ನೇ ನಾನೂ ಊಟಮಾಡುತ್ತೇನೆ. ಯಾವ ವಿಧದಲ್ಲಿಯೂ ಆಕೆಯು ತನ್ನ ಮನಸ್ಸನ್ನು ಚಿಕ್ಕದುಮಾಡಿಕೊಳ್ಳದಂತೆ ಜಾಗರೂಕತೆಯಿಂದಿರುತ್ತೇನೆ. ಭೂದೇವಿಗೆ ಸಮಾನವಾದ ಕ್ಷಮಾಗುಣವುಳ್ಳ ಕುಂತೀದೇವಿಯ ವಿಷಯದಲ್ಲಿ ನಾನು ಯಾವ ಕಾರಣದಿಂದಲೂ ಒಂದು ಬಿರುನುಡಿಯನ್ನೂ ಆಡುವುದಿಲ್ಲ.

ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿ ರಾಜ್ಯಭಾರಮಾಡುತ್ತಿದ್ದಾಗಿನ ದಿನಗಳನ್ನು ನೆನೆದು ಹೇಳುತ್ತೇನೆ ಕೇಳು, ಸತ್ಯೇ! ಎಂಟು ಸಾವಿರ ಬ್ರಾಹ್ಮಣರು ಅನುದಿನವೂ ಯುಧಿಷ್ಠಿರನ ಅರಮನೆಯಲ್ಲಿ ಸುವರ್ಣಮಯವಾದ ತಟ್ಟೆಗಳಲ್ಲಿ ಭೋಜನಮಾಡುತ್ತಿದ್ದರು. ಎಂಭತ್ತು ಸಾವಿರ ಸ್ನಾತಕರನ್ನು ಯುಧಿಷ್ಠಿರನು ಉಪಚರಿಸುತ್ತಿದ್ದನು. ಪ್ರತಿಯೊಬ್ಬ ಸ್ನಾತಕನನ್ನೂ ಉಪಚರಿಸಲು ಯುಧಿಷ್ಠಿರನು ಮೂವತ್ತು ಮಂದಿ ದಾಸಿಯರನ್ನು ನಿಯಮಿಸಿದ್ದನು. ಅವರುಗಳಲ್ಲದೇ ಹತ್ತು ಸಾವಿರ ಊರ್ಧ್ವರೇತಸ್ಕರಾದ ಯತಿಗಳು ಯುಧಿಷ್ಠಿರನ ಅರಮನೆಯಲ್ಲಿ ಸುವರ್ಣಮಯವಾದ ಪಾತ್ರೆಗಳಲ್ಲಿ ಬಡಿಸಿದ್ದ ಅನ್ನವನ್ನು ಭೋಜನಮಾಡುತ್ತಿದ್ದರು. ಅವರೆಲ್ಲರನ್ನೂ ವೇದವಿದರಾದ ಬ್ರಾಹ್ಮಣರನ್ನೂ ಸಹ ನಾನು ಆಚ್ಛಾದನ-ಪಾನ-ಭೋಜನಾದಿಗಳಿಂದ ತೃಪ್ತಿಪಡಿಸುತ್ತಿದ್ದೆನು. ಶಂಖದ ಬಳೆಗಳಿಂದಲೂ, ಕೇಯೂರಹಾರಾದಿಗಳಿಂದಲೂ, ದಿವ್ಯವಾದ ಮಾಲೆಗಳಿಂದಲೂ, ಚಂದನಾಗರುಗಳಿಂದಲೂ ಅಲಂಕೃತರಾದ ಒಂದು ಲಕ್ಷ ದಾಸಿಯರು ಯುಧಿಷ್ಠಿರನನ್ನು ಉಪಚರಿಸುತ್ತಿದ್ದರು. ಮಣಿಮೇಖಲೆಗಳನ್ನು ಧರಿಸಿದ್ದ ಅವರು ನೃತ್ಯ-ಗೀತಗಳಲ್ಲಿ ಪರಿಣತೆಯರಾಗಿದ್ದರು. ಆ ಒಂದು ಲಕ್ಷ ಸೇವಕಿಯರ ಹೆಸರುಗಳೆಲ್ಲವೂ ನನಗೆ ತಿಳಿದಿತ್ತು. ಅವರ ಭೋಜನದ ಮತ್ತು ಮಲಗುವ ವ್ಯವಸ್ಥೆಗಳೆಲ್ಲವನ್ನೂ ನಾನೇ ವಿಚಾರಿಸಿಕೊಳ್ಳುತ್ತಿದ್ದೆನು. ಅವರುಗಳಲ್ಲದೆ ಅತಿಥಿಗಳಿಗೆ ಊಟಬಡಿಸಿ ಉಪಚರಿಸುವ ಸಲುವಾಗಿಯೇ

ಯುಧಿಷ್ಠಿರನ ಅರಮನೆಯಲ್ಲಿ ಒಂದು ಲಕ್ಷ ಸೇವಕಿಯರಿದ್ದರು. ಅವರೆಲ್ಲರೂ ಕೈಯಲ್ಲಿ ಸುವರ್ಣಮಯವಾದ ಪಾತ್ರೆಗಳನ್ನು ಹಿಡಿದು ಸದಾಕಾಲದಲ್ಲಿಯೂ ಅತಿಥಿಗಳನ್ನು ಉಪಚರಿಸಲು ಸಿದ್ಧರಾಗಿರುತ್ತಿದ್ದರು.

ಯುಧಿಷ್ಠಿರನು ನಗರಪ್ರದಕ್ಷಿಣೆಗೆ ಹೊರಟನೆಂದರೆ ಒಂದು ಲಕ್ಷ ಅಶ್ವ ಸೇನೆಯೂ, ಒಂದು ಲಕ್ಷ ಗಜಸೇನೆಯೂ, ಅಸಂಖ್ಯಾತವಾದ ಪದಾತಿ ಸೇನೆಯೂ ಅವನನ್ನು ಹಿಂಬಾಲಿಸುತ್ತಿದ್ದುವು. ಯುಧಿಷ್ಠಿರನು ರಾಜ್ಯವಾಳುತ್ತಿದ್ದಾಗ ಆ ಅಪಾರವಾದ ಪರಿವಾರದ ಸಂಪೂರ್ಣವಾದ ಮೇಲ್ವಿಚಾರಣೆಯನ್ನೂ ನಾನೇ ವಹಿಸಿಕೊಂಡಿದ್ದೆನು. ಇಂತಹವರಿಗೆ ಇಂತಿಂತಹ ಕರ್ತವ್ಯವೆಂಬುದನ್ನು ನಾನೇ ನಿಯಮಮಾಡುತ್ತಿದ್ದೆನು. ಇಂತಿಂತಹ ಕಾರ್ಯಕ್ಕೆ ಇಷ್ಟೇ ಜನರಿರಬೇಕೆಂದು ನಾನೇ ಗೊತ್ತುಮಾಡುತ್ತಿದ್ದೆನು. ಅವರ ಯಾವದ್ವಿಶಿಷ್ಟವಾದ ಕುಂದು-ಕೊರತೆಗಳನ್ನೂ ನಾನೇ ಕೇಳಿ ಸರಿಪಡಿಸುತ್ತಿದ್ದೆನು. ಲಕ್ಷೋಪಲಕ್ಷ ದಾಸಿಯರ ಮತ್ತು ಭೃತ್ಯರ ಆಗಮನ-ನಿರ್ಗಮನಗಳನ್ನೂ ಮತ್ತು ಅವರ ಕಾರ್ಯಗಳನ್ನೂ ನಾನು ಸಂಪೂರ್ಣವಾಗಿ ತಿಳಿದಿದ್ದೆನಲ್ಲದೇ–ಅರಮನೆಯ ಗೋಶಾಲೆ, ಅಶ್ವಶಾಲೆ, ಗಜಶಾಲೆ ಮತ್ತು ಗೋಪಾಲಕರು–ಇವರೆಲ್ಲರ ಸಂಪೂರ್ಣವಾದ ಮಾಹಿತಿಯನ್ನೂ ಪಡೆದಿದ್ದೆನು. ರಾಜನ ಆದಾಯ-ವ್ಯಯಗಳೂ ಮತ್ತು ಐಶ್ವರ್ಯವೂ ನನಗೊಬ್ಬಳಿಗೆ ಮಾತ್ರವೇ ಸಂಪೂರ್ಣವಾಗಿ ತಿಳಿದಿದ್ದಿತು. ಕುಟುಂಬನಿರ್ವಹಣಾಕಾರ್ಯವನ್ನು ಸಂಪೂರ್ಣವಾಗಿ ನನ್ನ ಮೇಲೆ ಹೊರೆಸಿದ್ದ ಪಾಂಡವರು ನನ್ನನ್ನು ವಿಶೇಷವಾದ ಪ್ರೀತಿ-ವಿಶ್ವಾಸಗಳಿಂದ ಕಾಣುತ್ತಿದ್ದರು.

**ತಮಹಂ ಭಾರಮಾಸಕ್ತಮನಾಧೃಷ್ಯಂ ದುರಾತ್ಮಭಿಃ ।**
**ಸುಖಂ ಸರ್ವಂ ಪರಿತ್ಯಜ್ಯ ರಾತ್ರ್ಯಹಾನಿ ಘಟಾಮಿ ವೈ ॥೫೫॥**

ನಿಶ್ಚಯವಾಗಿಯೂ ದುರಾತ್ಮರಾದವರಿಂದ ಇಂತಹ ಕುಟುಂಬಭಾರವನ್ನು ವಹಿಸಿ ನಿರ್ವಹಿಸುವ ಸಾಧ್ಯತೆಯೇ ಇಲ್ಲ, ಸತ್ಯಭಾಮೇ! ನಾನು ಮಾತ್ರ ಹಗಲು-ರಾತ್ರಿಗಳಿಗೆ ವ್ಯತ್ಯಾಸವನ್ನೇ ಕಾಣದೇ ಸರ್ವಕಾಲದಲ್ಲಿಯೂ ಆ ಅಪಾರಪರಿವಾರದ ಯೋಗ-ಕ್ಷೇಮಗಳನ್ನು ನೋಡಿಕೊಳ್ಳುತ್ತಿದ್ದೆನು. ಆ ಸಮಯದಲ್ಲಿ ನಾನು ನನ್ನ ಸುಖದ ಕಡೆಗೆ ಸ್ವಲ್ಪವಾದರೂ ಲಕ್ಷ್ಯಕೊಡುತ್ತಿರಲಿಲ್ಲ. ಆ ಅಪಾರಪರಿವಾರದ ಯೋಗ-ಕ್ಷೇಮಗಳನ್ನೂ ಸುವ್ಯವಸ್ಥಿತವಾಗಿ ನೋಡಿಕೊಳ್ಳುವುದರ ಜೊತೆಗೆ ನನ್ನ ಗಂಡಂದಿರ ಉಪಚಾರವನ್ನೂ ಕಾಲ

ಕಾಲಕ್ಕೆ ಮಾಡಿ ಅವರನ್ನೂ ಸಂತಸಗೊಳಿಸುತ್ತಿದ್ದೆನು. ಅವರನ್ನು ಯಾವ ಕಾರಣದಿಂದಲೂ ಯಾವಾಗಲೂ ಉಪೇಕ್ಷಿಸುತ್ತಿರಲಿಲ್ಲ. ಈ ಕಾರಣದಿಂದಲೇ ಅವರು ನನ್ನ ವಶವರ್ತಿಗಳಾಗಿರುತ್ತಾರೆ, ಸತ್ಯಭಾಮೇ!

**ಅಧೃಷ್ಯಂ ವರುಣಸ್ಯೇವ ನಿಧಿಪೂರ್ಣಮಿವೋದಧಿಮ್ ।**
**ಏಕಾಹಂ ವೇದ್ಮಿ ಕೋಶಂ ವೈ ಪತೀನಾಂ ಧರ್ಮಚಾರಿಣಾಮ್ ॥**

ಧರ್ಮಚಾರಿಗಳಾದ ಪಾಂಡವರ–ನಿಧಿಪೂರ್ಣವಾದ ವರುಣನ ಮಹೋದಧಿಗೆ ಸಮಾನವಾದ ಅಕ್ಷಯವಾದ ಅತುಲೈಶ್ವರ್ಯದ ಕೋಶಾಗಾರವನ್ನು ನಾನೊಬ್ಬಳೇ ನೋಡಿಕೊಳ್ಳುತ್ತಿದ್ದೆನು. ಎಷ್ಟು ವ್ಯಯಮಾಡಿದರೂ ಅದು ಸರ್ವಕಾಲದಲ್ಲಿಯೂ ತುಂಬಿಯೇ ಇರುತ್ತಿದ್ದಿತು.

**ಅನಿಶಾಯಾಂ ನಿಶಾಯಾಂ ಚ ಸಹಾಯಾ ಕ್ಷುತ್ಪಿಪಾಸಯೋಃ ।**
**ಆರಾಧಯನ್ತ್ಯಾಃ ಕೌರವ್ಯಾಂಸ್ತುಲ್ಯಾ ರಾತ್ರಿರಹಶ್ಚ ಮೇ ॥೫೭॥**

ಹಸಿವು-ಬಾಯಾರಿಕೆಗಳನ್ನು ಲಕ್ಷಿಸದೇ, ಸ್ವಸುಖವನ್ನು ಸಂಪೂರ್ಣವಾಗಿ ಬದಿಗಿಟ್ಟು, ರಾತ್ರಿ-ಹಗಲುಗಳಲ್ಲಿಯೂ ಸಹ ನಾನು ಪಾಂಡವರ ಸೇವೆಯಲ್ಲಿ ಮತ್ತು ಅಪಾರಸಂಸಾರದ ನಿರ್ವಹಣೆಯಲ್ಲಿ ತೊಡಗಿರುತ್ತಿದ್ದೆನು. ಹಗಲು-ರಾತ್ರಿಗಳೆರಡೂ ನನಗೆ ಒಂದೇ ಆಗಿದ್ದುವು.

**ಪ್ರಥಮಂ ಪ್ರತಿಬುಧ್ಯಾಮಿ ಚರಮಂ ಸಂವಿಶಾಮಿ ಚ ।**
**ನಿತ್ಯಕಾಲಮಹಂ ಸತ್ಯೇ ಏತತ್ಸಂವನನಂ ಮಮ ॥೫೮॥**

ಸತ್ಯೇ! ನಾನು ಎಲ್ಲರಿಗಿಂತಲೂ ಮೊದಲು ಏಳುತ್ತೇನೆ ಮತ್ತು ಎಲ್ಲರೂ ಮಲಗಿದ ನಂತರ ಮಲಗಲು ಹೋಗುತ್ತೇನೆ. ಈ ರೀತಿಯಾಗಿ ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಸ್ವಸುಖವನ್ನು ಬದಿಗೊತ್ತಿ ಪತಿಸೇವಾನಿರತಳಾಗಿರುವುದೇ ಪಾಂಡವರು ನನಗೆ ವಶ್ಯರಾಗಲು ಮುಖ್ಯಕಾರಣವಾಗಿದೆ.

**ಏತಜ್ಜಾನಾಮ್ಯಹಂ ಕರ್ತುಂ ಭರ್ತೃಸಂವನನಂ ಮಹತ್ ।**
**ಅಸತ್ಸ್ತ್ರೀಣಾಂ ಸಮಾಚಾರಂ ನಾಹಂ ಕುರ್ಯಾಂ ನ ಕಾಮಯೇ ॥**

ನಿರಂತರವಾದ ಸೇವೆಯಿಂದ ಅವರನ್ನು ವಶಪಡಿಸಿಕೊಳ್ಳುವ ರಹಸ್ಯವನ್ನು ನಾನು ಚೆನ್ನಾಗಿ ಬಲ್ಲೆನು. ಇದರ ಹೊರತಾಗಿ ದುಷ್ಟಸ್ತ್ರೀಯರು ಗಂಡನ ವಶೀಕರಣಕ್ಕಾಗಿ ಮಾಡುವ ಮಂತ್ರ-ಹೋಮ-ಔಷಧಪ್ರಯೋಗ

ಗಳನ್ನು ನಾನು ತಿಳಿದವಳೂ ಅಲ್ಲ ; ಹಾಗೆ ಮಾಡುವ ಇಚ್ಛೆಯೂ ನನಗಿರುವುದಿಲ್ಲ."

ಜನಮೇಜಯ! ಧರ್ಮಸಮ್ಮತವಾದ ಪಾಂಚಾಲಿಯ ಮಾತುಗಳನ್ನು ಕೇಳಿ ಸಂತುಷ್ಟಳಾದ ಸತ್ಯಭಾಮೆಯು ಧರ್ಮಚಾರಿಣಿಯಾದ ದ್ರೌಪದಿಯನ್ನು ಆದರಿಸುತ್ತಾ ಹೇಳಿದಳು :

"ಪಾಂಚಾಲಿ! ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. (ನಾನು ನಿನ್ನನ್ನು ಉದ್ಧಟತನದಿಂದ ಪ್ರಶ್ನಿಸಿದೆನು.) ದಯಮಾಡಿ ಕ್ಷಮಿಸಿಬಿಡು.

**ಕಾಮಕಾರಃ ಸಖೀನಾಂ ಹಿ ಸೋಪಹಾಸಂ ಪ್ರಭಾಷಿತಮ್ ॥೬೧॥**

ಸಖಿಯರು ಪರಸ್ಪರವಾಗಿ ಸಂಧಿಸಿದಾಗ ಮನಬಂದಂತೆ ವಿನೋದವಾಗಿ ಮಾತನಾಡುವುದು ಸ್ವಾಭಾವಿಕವಲ್ಲವೇ? ದ್ರೌಪದಿ! ನಾನೂ ಸಹ ಕೇವಲ ಪರಿಹಾಸ್ಯಕ್ಕಾಗಿ ನಿನ್ನೊಡನೆ ಈ ಮಾತುಗಳನ್ನಾಡಿದೆನು."

ಎ೩೩ನೆಯ ಅಧ್ಯಾಯವು ಮುಗಿಯಿತು.

ಎ೩೪ನೆಯ ಅಧ್ಯಾಯ ದ್ರೌಪದೀ-ಸತ್ಯಭಾಮಾಸಂವಾದಪರ್ವ (ಮುಂದುವರಿದಿದೆ.)

## ಪತಿಯನ್ನು ಅನುಕೂಲನನ್ನಾಗಿ ಮಾಡಿಕೊಳ್ಳುವ ಉಪಾಯ : ಅನನ್ಯಭಾವದಿಂದ ಪತಿಯ ಸೇವೆಯನ್ನು ಮಾಡುವುದು

ಜನಮೇಜಯ! ದ್ರೌಪದಿಯು ಸತ್ಯಭಾಮೆಗೆ ಪತ್ನಿಯ ಕರ್ತವ್ಯದ ವಿಷಯವಾಗಿ ತಿಳಿಯಹೇಳುತ್ತಾಳೆ :

"ಭಾಮೇ! ಗಂಡನ ಮನಸ್ಸನ್ನು ಆಕರ್ಷಿಸಲು ವಂಚನಾರಹಿತವಾದ ಮಾರ್ಗಗಳೇನೆಂಬುದನ್ನು ಹೇಳುತ್ತೇನೆ. ನಾನು ಹೇಳಿದಂತೆಯೇ ನೀನು ವರ್ತಿಸಿದೆಯಾದರೆ ನಿಶ್ಚಯವಾಗಿಯೂ ನೀನೂ ನಿನ್ನ ಪತಿಯನ್ನು ಸಂಪೂರ್ಣವಾಗಿ ವಶಮಾಡಿಕೊಳ್ಳಲು ಸಮರ್ಥಳಾಗುವೆ. ನಿನ್ನನ್ನು ಬಿಟ್ಟು ನಿನ್ನ ಪತಿಯು ಬೇರೆಯ ಹೆಂಗಸರ ಜೊತೆಯಲ್ಲಿ ಖಂಡಿತವಾಗಿಯೂ ಹೋಗಲಾರನು. ಒಂದು ವೇಳೆ ಯಾವಾಗಲಾದರೊಮ್ಮೆ ಇತರ ಪತ್ನಿಯರ ಕಡೆಗೆ ಹೋದರೂ ಸಹ ನಿನ್ನಲ್ಲಿಗೇ ನಿನ್ನ ಪತಿಯು ಆಕರ್ಷಿತನಾಗುತ್ತಾನೆ. ಪತಿಯನ್ನಾಕರ್ಷಿಸುವ ಅಂತಹ ಉತ್ತಮೋತ್ತಮವಾದ ವಿದ್ಯೆಯನ್ನು ನಾನು ನಿನಗೆ ಉಪದೇಶಿಸುವೆನು. ಏಕಾಗ್ರಚಿತ್ತಳಾಗಿ ಕೇಳು.

**ನೈತಾದೃಶಂ ದೈವತಮಸ್ತಿ ಸತ್ಯೇ**
**ಸರ್ವೇಷು ಲೋಕೇಷು ಸದೇವಕೇಷು ।**
**ಯಥಾ ಪತಿಸ್ತಸ್ಯ ತು ಸರ್ವಕಾಮಾ**
**ಲಭ್ಯಾಃ ಪ್ರಸಾದಾತ್ಕುಪಿತಶ್ಚ ಹನ್ಯಾತ್ ॥೨॥**

ಸತ್ಯೇ! ಪತ್ನಿಯಾದವಳು ಮೊದಲು ಪತಿಯ ವಿಷಯದಲ್ಲಿ ಈ ಭಾವನೆಯನ್ನು ತಾಳಬೇಕು ; ಭುವನತ್ರಯದಲ್ಲಾಗಲೀ, ಸಕಲದೇವತೆಗಳಲ್ಲಾಗಲೀ ಪತಿಗೆ ಸಮಾನನಾದ ದೇವರು ಮತ್ತೊಬ್ಬನಿಲ್ಲ. ಪತಿಯೇನಾದರೂ ಪತ್ನಿಯ ವಿಷಯದಲ್ಲಿ ಪ್ರಸನ್ನನಾದನೆಂದರೆ ಅವಳ ಸಕಲಕಾಮನೆಗಳನ್ನೂ ನೆರವೇರಿಸಿ ಕೊಡುತ್ತಾನೆ. ಅವನೇನಾದರೂ ಸತಿಯ ವಿಷಯದಲ್ಲಿ ಕುಪಿತನಾದರೆ ಅವಳನ್ನು ವಿನಾಶಮಾಡಲೂ ಬಹುದು.

**ತಸ್ಮಾದಪತ್ಯಂ ವಿವಿಧಾಶ್ಚ ಭೋಗಾಃ**
**ಶಯ್ಯಾಸನಾನ್ಯುತ್ತಮದರ್ಶನಾನಿ ।**
**ವಸ್ತ್ರಾಣಿ ಮಾಲ್ಯಾನಿ ತಥೈವ ಗನ್ಧಾಃ**
**ಸ್ವರ್ಗಶ್ಚ ಲೋಕೋ ವಿಪುಲಾ ಚ ಕೀರ್ತಿಃ ॥೩॥**

ಪತಿಯಿಂದ ಪಡೆಯಲಾಗದ ವಸ್ತುವೇ ಇಲ್ಲ. ಪತಿಯಿಂದಲೇ ನಾವು ಮಕ್ಕಳನ್ನು ಪಡೆಯುತ್ತೇವೆ. ಸುಖೋಪಭೋಗಗಳನ್ನು ಪಡೆಯುತ್ತೇವೆ. ಶಯ್ಯಾಸನ-ವಸ್ತ್ರ-ಮಾಲ್ಯ-ಗಂಧಾದಿ ವಸ್ತುಗಳನ್ನೂ, ಭೋಗ್ಯವಸ್ತುಗಳನ್ನೂ ಪಡೆಯುತ್ತೇವೆ. ಅವನ ಅನುಸರಣೆಯಿಂದ ದಿವ್ಯಸ್ಥಳಗಳನ್ನು ಸಂದರ್ಶನ ಮಾಡುತ್ತೇವೆ. ಪತಿಯ ಅನವರತಸೇವೆಯಿಂದ ಅವಸಾನಾನಂತರದಲ್ಲಿ ಸ್ವರ್ಗಪ್ರಾಪ್ತಿಯೂ ಆಗುವುದಲ್ಲದೇ ಇಲ್ಲಿ ವಿಪುಲವಾದ ಕೀರ್ತಿಯೂ ಸಹ ನಮಗೆ ಲಭಿಸುತ್ತದೆ.

**ಸುಖಂ ಸುಖೇನೇಹ ನ ಜಾತು ಲಭ್ಯಂ**
**ದುಃಖೇನ ಸಾಧ್ವೀ ಲಭತೇ ಸುಖಾನಿ ।**
**ಸಾ ಕೃಷ್ಣಮಾರಾಧಯ ಸೌಹೃದೇನ**
**ಪ್ರೇಮ್ಣಾ ಚ ನಿತ್ಯಂ ಪ್ರತಿಕರ್ಮಣಾ ಚ ॥೪॥**

ಸುಖವಾಗಿದ್ದುಕೊಂಡು (ಯಾವ ವಿಧವಾದ ಪತಿಶುಶ್ರೂಷೆಯನ್ನೂ

ಮಾಡದೆ ಸ್ವೇಚ್ಛೆಯಿಂದ ಇದ್ದುಕೊಂಡು) ಶಾಶ್ವತಸುಖವನ್ನೂ, ಕೀರ್ತಿಯನ್ನೂ ಪಡೆಯಲು ಖಂಡಿತವಾಗಿಯೂ ಸಾಧ್ಯವಿಲ್ಲ. ಸತ್ಯೇ! ಸಾಧ್ವಿಯಾದವಳು ಪತಿಶುಶ್ರೂಷೆಯೆಂಬ ಶಾರೀರಕಶ್ರಮದಿಂದ (ಬಹಳ ಕಷ್ಟಪಟ್ಟು) ಶಾಶ್ವತವಾದ ಸೌಖ್ಯವನ್ನೂ ಮತ್ತು ಕೀರ್ತಿಯನ್ನೂ ಪಡೆಯುವಳು. ಆದುದರಿಂದ ನೀನೂ ಸಹ ಶ್ರೀಕೃಷ್ಣನನ್ನು ಅನುದಿನವೂ ಹೃತ್ಪೂರ್ವಕವಾದ ಪ್ರೀತಿಯಿಂದ ಆರಾಧಿಸು. ಕಾಯಕ್ಲೇಶವನ್ನು ಲೆಕ್ಕಿಸದೇ ಹಗಲಿರುಳೂ ಅವನ ಶುಶ್ರೂಷೆಯನ್ನು ಮಾಡು.

**ತಥಾಸನೈಶ್ಚಾರುಭಿರಗ್ರಮಾಲ್ಯೈ-**
**ರ್ದಾಕ್ಷಿಣ್ಯಯೋಗೈರ್ವಿವಿಧೈಶ್ಚ ಗನ್ಧೈಃ ।**
**ಅಸ್ಯಾಃ ಪ್ರಿಯೋಽಸ್ಮೀತಿ ಯಥಾ ವಿದಿತ್ವಾ**
**ತ್ವಾಮೇವ ಸಂಶ್ಲಿಷ್ಯತಿ ತದ್ವಿಧತ್ಸ್ವ ॥೫॥**

ಪತಿಗೆ ಕುಳಿತುಕೊಳ್ಳಲು ಒಳ್ಳೆಯ ಆಸನವನ್ನು ಕೊಡಬೇಕು. ಅಲಂಕರಿಸಿಕೊಳ್ಳಲು ಘಮಘಮಿಸುವ ಪುಷ್ಪಮಾಲೆಯನ್ನು ಕೊಡಬೇಕು. ಉತ್ತಮೋತ್ತಮವಾದ ದಿವ್ಯಪರಿಮಳಯುಕ್ತವಾದ ಗಂಧವನ್ನು ಪೂಸಬೇಕು. ಪತಿಯು ಯಾವ ಸಮಯದಲ್ಲಿ ಏನೇ ಕೇಳಿದರೂ, ಏನೇ ಹೇಳಿದರೂ ಒಡನೆಯೇ ಅವನ ಕಾರ್ಯವನ್ನು ಮಾಡಿಕೊಡಬೇಕು. 'ಈ ಸತ್ಯಭಾಮೆಗೆ ನಾನು ಪರಮಪ್ರಿಯನು'–ಎಂಬ ಭಾವನೆಯಿಂದ ನಿನ್ನ ಪತಿಯು ನಿನ್ನನ್ನು ಆಲಿಂಗಿಸಿಕೊಳ್ಳುವಂತೆ ನೀನವನ ಸೇವೆಯನ್ನು ಮಾಡುತ್ತಿರಬೇಕು.

**ಶ್ರುತ್ವಾ ಸ್ವರಂ ದ್ವಾರಗತಸ್ಯ ಭರ್ತುಃ**
**ಪ್ರತ್ಯುತ್ಥಿತಾ ತಿಷ್ಠ ಗೃಹಸ್ಯ ಮಧ್ಯೇ ।**
**ದೃಷ್ಟ್ವಾ ಪ್ರವಿಷ್ಟಂ ತ್ವರಿತಾಸನೇನ**
**ಪಾದ್ಯೇನ ಚೈನಂ ಪ್ರತಿಪೂಜಯಸ್ವ ॥೬॥**

ಮಹಾದ್ವಾರದ ಒಳಗೆ ಪ್ರವೇಶಿಸಿದ ನಿನ್ನ ಪತಿಯ ಮಾತಿನ ಧ್ವನಿಯನ್ನು ಕೇಳಿದೊಡನೆಯೇ ನೀನು ಎದ್ದುನಿಂತು ಅವನ ಸೇವೆಗೆ ಸಿದ್ಧಳಾಗಬೇಕು. ಅವನು ಮನೆಯೊಳಗೆ ಪ್ರವೇಶಿಸಿದೊಡನೆಯೇ ನಸುನಗುತ್ತಾ ಅವ

ನನ್ನು ಸ್ವಾಗತಿಸಿ, ಕಾಲುತೊಳೆಯಲು ನೀರುಕೊಟ್ಟು, ಸುಖಾಸನದಲ್ಲಿ ಕುಳ್ಳಿರಿಸಿ ಯಥೋಚಿತವಾಗಿ ಸತ್ಕರಿಸಬೇಕು.

ಸಮ್ಪ್ರೇಷಿತಾಯಾಮಥ ಚೈವ ದಾಸ್ಯಾ-
ಮುತ್ಥಾಯ ಸರ್ವಂ ಸ್ವಯಮೇವ ಕಾರ್ಯಮ್ ।
ಜಾನಾತು ಕೃಷ್ಣಸ್ತವ ಭಾವಮೇತಂ
ಸರ್ವಾತ್ಮನಾ ಮಾಂ ಭಜತೀತಿ ಸತ್ಯೇ ॥೭॥

ನಿನ್ನ ಗಂಡನು ಯಾವುದಾದರೂ ಕಾರ್ಯದ ಸಲುವಾಗಿ ದಾಸಿಯನ್ನು ಕಳುಹಿಸಿರಲಾಗಿ ಅವಳ ಕಾರ್ಯವನ್ನು ನೀನೇ ಮಾಡಿ ಮುಗಿಸಬೇಕು. "ಅವಳು ಮಾಡುವ ಕಾರ್ಯವನ್ನು ನೀನೇಕೆ ಮಾಡುವೆ?"–ಎಂದು ನಿನ್ನ ಪತಿಯು ಆಕ್ಷೇಪಿಸಿದರೂ ಸಹ ಅದಕ್ಕೆ ಲಕ್ಷ್ಯಕೊಡದೇ ನಗುನಗುತ್ತಾ ಆ ಕಾರ್ಯವನ್ನು ಮಾಡಬೇಕು. ಅದರಿಂದ ಖಂಡಿತವಾಗಿಯೂ ನಿನ್ನ ಪತಿಯು ಬಹಳ ಪ್ರಸನ್ನನಾಗುವನು. ಇಂತಹ ನಿನ್ನ ಮನೋಭಾವನೆಯು ಶ್ರೀಕೃಷ್ಣನಿಗೆ ತಿಳಿಯಬೇಕು. 'ಸತ್ಯಭಾಮೆಯು ನನ್ನನ್ನು ಸರ್ವಾತ್ಮನಾ ಸೇವಿಸುತ್ತಾಳೆ. ಇವಳು ನನ್ನ ಮೇಲಿಟ್ಟಿರುವ ಪ್ರೀತಿಯು ಅಸದೃಶವಾದುದು' ಎಂದು ಅವನು ಭಾವಿಸುವಂತಾಗಬೇಕು.

ತ್ವತ್ಸಂನಿಧೌ ಯತ್ಕಥಯೇತ್ಪತಿಸ್ತೇ
ಯದ್ಯಪ್ಯಗುಹ್ಯಂ ಪರಿರಕ್ಷಿತವ್ಯಮ್ ।
ಕಾಚಿತ್ಸ ಪತ್ನೀ ತವ ವಾಸುದೇವಂ
ಪ್ರತ್ಯಾದಿಶೇತ್ತೇನ ಭವೇದ್ವಿರಾಗಃ ॥೮॥

ಶ್ರೀಕೃಷ್ಣನು ನಿನ್ನೊಡನೆ ಹೇಳುವ ಮಾತುಗಳು ಯದ್ಯಪಿ ರಹಸ್ಯವಲ್ಲ ದಿದ್ದರೂ ಅಂತಹ ಮಾತುಗಳನ್ನೂ ಸಹ ಇತರರೊಡನೆ ಹೇಳಬಾರದು. ನಿಮ್ಮಿಬ್ಬರ ಪರಸ್ಪರಸಂಭಾಷಣೆಯನ್ನು ಬಹಳ ಗೋಪ್ಯವಾಗಿಯೇ ಇಟ್ಟು ಕೊಂಡಿರಬೇಕು. ನೀನೇನಾದರೂ ಹಾಗೆ ಮಾಡದೆ ನಿನ್ನ ಸವತಿಯರೊಡನೆ ವಾಸುದೇವನು ನಿನ್ನೊಡನೆ ಹೇಳಿದ ವಿಷಯವನ್ನು ಹೇಳಿದರೆ ಅನಂತರ ಅವರು ಅದೇ ವಿಷಯವನ್ನು ಬಣ್ಣಕಟ್ಟಿ ಕೃಷ್ಣನೊಡನೆ ಹೇಳಿದರೆಂದರೆ–ನಿನ್ನ ಪತಿಯು ಖಂಡಿತವಾಗಿಯೂ ನಿನ್ನ ವಿಷಯದಲ್ಲಿ ಅನುರಾಗರಹಿತನಾಗುವನು.

ಪ್ರಿಯಾಂಶ್ಚ ರಕ್ತಾಂಶ್ಚ ಹಿತಾಂಶ್ಚ ಭರ್ತು-
ಸ್ತಾನ್ಭೋಜಯೇಥಾ ವಿವಿಧೈರುಪಾಯೈಃ ।
ದ್ವೇಷ್ಯೈರುಪೇಕ್ಷ್ಯೈ ರಹಿತೈಶ್ಚ ತಸ್ಯ
ಭಿದ್ಯಸ್ವ ನಿತ್ಯಂ ಕುಹಕೋದ್ಯತೈಶ್ಚ ॥೯॥

ನಿನ್ನ ಪತಿಗೆ ಪ್ರಿಯರಾದವರನ್ನೂ, ನಿನ್ನ ಪತಿಯಲ್ಲಿ ಹೆಚ್ಚು ಅನುರಕ್ತರಾಗಿರುವವರನ್ನೂ ಮತ್ತು ನಿನ್ನ ಪತಿಗೆ ಹೆಚ್ಚು ಹಿತರಾದವರನ್ನೂ ಮೃಷ್ಟಾನ್ನವಿಟ್ಟು ಸಂತೋಷಗೊಳಿಸು. ಅವರನ್ನು ವಿಶೇಷವಾದ ಆದರದಿಂದ ಸತ್ಕರಿಸು. ಅದರಿಂದ ನಿನ್ನ ಪತಿಯು ಸುಪ್ರೀತನಾಗುವನು. ಇದೇ ರೀತಿಯಲ್ಲಿ ನಿನ್ನ ಪತಿಯ ವಿರೋಧಿಗಳನ್ನೂ, ನಿನ್ನ ಪತಿಯನ್ನು ಅಲಕ್ಷಿಸುವವರನ್ನೂ ಮತ್ತು ನಿನ್ನ ಪತಿಗೆ ಯಾವಾಗಲೂ ಅಹಿತವನ್ನೇ ಬಯಸುವವರನ್ನೂ ಬಹುದೂರದಲ್ಲಿಟ್ಟಿರು. ಅವರ ಸಂಬಂಧವನ್ನು ಸ್ವಲ್ಪವಾದರೂ ಇಟ್ಟುಕೊಳ್ಳಬೇಡ. ಮೋಸಗಾರರ ವಿಷಯದಲ್ಲಿಯೂ ಸದಾ ಜಾಗರೂಕಳಾಗಿರು.

ಮದಂ ಪ್ರಮಾದಂ ಪುರುಷೇಷು ಹಿತ್ವಾ
ಸಂಯಚ್ಛ ಭಾವಂ ಪ್ರತಿಗೃಹ್ಯ ಮೌನಮ್ ।
ಪ್ರದ್ಯುಮ್ನಸಾಮ್ಬಾವಪಿ ತೇ ಕುಮಾರೌ
ನೋಪಾಸಿತವ್ಯೌ ರಹಿತೇ ಕದಾಚಿತ್ ॥೧೦॥

ಪುರುಷರಲ್ಲಿ ಪರಸ್ಪರವಾಗಿ ವಿವಾದವುಂಟಾದಾಗ ಅವರ ಪರಸ್ಪರ ಸಂಭಾಷಣೆಯಿಂದ ನಿನಗುಂಟಾಗಬಹುದಾದ ಉದ್ವೇಗವನ್ನು ಸಂಪೂರ್ಣವಾಗಿ ತಡೆಹಿಡಿಯಬೇಕು. ಬಹುಜಾಗರೂಕಳಾಗಿದ್ದು ಯಾರ ಪಕ್ಷವನ್ನೂ ಅನುಮೋದಿಸದೇ ಅಥವಾ ನಿರಾಕರಿಸದೇ ಮೌನವನ್ನೇ ಧರಿಸಿರಬೇಕು. (ಪುರುಷರಿಬ್ಬರು ಮಾತನಾಡುವಾಗ ಸ್ತ್ರೀಯರು ಮಧ್ಯೇ ಪ್ರವೇಶಿಸಿ ಪಕ್ಷ-ಪ್ರತಿಪಕ್ಷಗಳನ್ನು ಹಿಡಿದು ಮಾತನಾಡಲು ಹೋದರೆ ಹೆಚ್ಚು ಘರ್ಷಣೆಗೆ ಅವಕಾಶವಾಗುತ್ತದೆ. ಅಂತಹ ಸಮಯಗಳಲ್ಲಿ ಮೌನಧರಿಸುವುದೇ ಲೇಸು.) ನಿನ್ನ ಮಕ್ಕಳಾದ ಪ್ರದ್ಯುಮ್ನ-ಸಾಂಬರೊಡನೆಯೂ ಸಹ ಏಕಾಂತದಲ್ಲಿ ಹೆಚ್ಚು ಸಲಿಗೆಯಿಂದ ವರ್ತಿಸಬೇಡ.

**ಮಹಾಕುಲೀನಾಭಿರಪಾಪಿಕಾಭಿಃ**
**ಸ್ತ್ರೀಭಿಃ ಸತೀಭಿಸ್ತವ ಸಖ್ಯಮಸ್ತು ।**
**ಚಣ್ಡಾಶ್ಚ ಶೌಣ್ಡಾಶ್ಚ ಮಹಾಶನಾಶ್ಚ**
**ಚೌರಾಶ್ಚ ದುಷ್ಟಾಶ್ಚ ಪಲಾಶ್ಚ ವರ್ಜ್ಯಾಃ ॥೧೧॥**

ಮಹಾಕುಲಪ್ರಸೂತೆಯರಾದ, ನಿಷ್ಕಳಂಕಿನಿಯರಾದ, ಪಾಪರಹಿತೆಯರಾದ, ಸಾಧ್ವಿಯರಾದ ಸ್ತ್ರೀಯರೊಡನೆ ನಿನಗೆ ಸಖ್ಯವಿರಲಿ. ಕ್ರೂರಿಗಳಾದವರನ್ನೂ, ಪಾನದಲ್ಲಿ ಹೆಚ್ಚು ಆಸಕ್ತಿಯುಳ್ಳವರನ್ನೂ, ಹೆಚ್ಚು ತಿನ್ನುವವರನ್ನೂ, ಕಳ್ಳತನಮಾಡುವ ಸ್ವಭಾವವುಳ್ಳವರನ್ನೂ, ದುಷ್ಟೆಯರನ್ನೂ, ಚಂಚಲಸ್ವಭಾವವುಳ್ಳವರನ್ನೂ ಪರಿತ್ಯಜಿಸಬೇಕು. ಅಂತಹವರೊಡನೆ ಮಾತನಾಡಲೂ ಬಾರದು.

**ಏತದ್ಯಶಸ್ಯಂ ಭಗದೈವತಂ ಚ**
**ಸ್ವಾರ್ಥ್ಯಂ ತಥಾ ಶತ್ರುನಿಬರ್ಹಣಂ ಚ ।**
**ಮಹಾರ್ಹಮಾಲ್ಯಾಭರಣಾಙ್ಗರಾಗಾ**
**ಭರ್ತಾರಮಾರಾಧಯ ಪುಣ್ಯಗನ್ಧಾ ॥೧೨॥**

ಹೀಗೆ ಮಾಡುವುದು ಯಶಸ್ಕರವಾದುದು. ಸೌಭಾಗ್ಯದಾಯಕವಾದುದು. ಸವತಿಯರ ಉಪಟಳವನ್ನು ತಪ್ಪಿಸಿಕೊಳ್ಳಲು ಉತ್ತಮವಾದ ಮಾರ್ಗವೇ ಇದಾಗಿರುವುದು. ಆದುದರಿಂದ ನೀನೂ ಸಹ ನಿನ್ನ ಶರೀರವನ್ನು ಅನರ್ಘ್ಯವಾದ ಮಾಲ್ಯಾಭರಣಗಳಿಂದಲೂ, ದಿವ್ಯಾಂಬರಗಳಿಂದಲೂ, ಚಂದನಾಗರುಗಳಿಂದಲೂ–ನಿನ್ನ ಪತಿಯ ಮನವೊಪ್ಪುವಂತೆ ಅಲಂಕರಿಸಿಕೊಂಡು ಅವನನ್ನು ನಿರಂತರವಾಗಿ ಆರಾಧಿಸು, ಸತ್ಯಭಾಮೇ!”

೨೩೪ನೆಯ ಅಧ್ಯಾಯವು ಮುಗಿಯಿತು.

೨೩೫ನೆಯ ಅಧ್ಯಾಯ ದ್ರೌಪದೀ-ಸತ್ಯಭಾಮಾಸಂವಾದಪರ್ವ (ಮುಂದುವರಿದಿದೆ.)

## ಸತ್ಯಭಾಮೆಯು ದ್ರೌಪದಿಯನ್ನು ಸಮಾಧಾನಪಡಿಸಿ ಕೃಷ್ಣನೊಡನೆ ದ್ವಾರಕೆಗೆ ಪ್ರಯಾಣಮಾಡಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

“ಜನಮೇಜಯ! ಮಧುಹಂತಕನಾದ ಶ್ರೀಕೃಷ್ಣನು ಮಾರ್ಕಂಡೇಯಾದಿ ವಿಪ್ರಶ್ರೇಷ್ಠರೊಡನೆಯೂ, ಧರ್ಮಾತ್ಮರಾದ ಪಾಂಡವರೊಡನೆಯೂ ಕೆಲವು ದಿನಗಳಿದ್ದು ಕರ್ಣಾನಂದಕರವಾದ ಅನೇಕಾನೇಕ ಕಥಾಪ್ರವಚನಗಳನ್ನು ಕೇಳಿ, ಸಂತುಷ್ಟನಾಗಿ ದ್ವಾರವತಿಗೆ ಹಿಂದಿರುಗಲು ನಿಶ್ಚಯಿಸಿದವನಾಗಿ, ಮಾರ್ಕಂಡೇಯಾದಿ ವಿಪ್ರರ ಮತ್ತು ಪಾಂಡವರ ಅನುಜ್ಞೆಯನ್ನು ಪಡೆದು ರಥವನ್ನು ಏರಲು ಇಚ್ಛಿಸಿದವನಾಗಿ ಸತ್ಯಭಾಮೆಯನ್ನೂ ರಥದಲ್ಲಿ ಕುಳಿತುಕೊಳ್ಳಲು ಹೇಳಿದನು. ಸತ್ಯಭಾಮೆಯು ಮೇಲೆದ್ದು ದ್ರೌಪದಿಯನ್ನು ಗಾಢವಾಗಿ ಆಲಿಂಗಿಸಿ ಹೃದ್ಯವಾದ, ಮನೋಭಾವಸೂಚಕವಾದ, ಪ್ರೇಮಪುರಸ್ಸರವಾದ ಈ ಮಾತುಗಳನ್ನು ಹೇಳಿದಳು : “ಕೃಷ್ಣೇ! ನೀನು ಅಧೀರಳಾಗಬೇಡ. ವ್ಯಸನಪಡಬೇಡ. ಎಲ್ಲ ರಾತ್ರಿಗಳನ್ನೂ ನಿದ್ದೆಮಾಡದೆಯೇ ಕಳೆಯಬೇಡ (ಯಾವಾಗಲೂ ಯೋಚನೆಯಲ್ಲಿಯೇ ಮಗ್ನಳಾಗಿರಬೇಡ). ದೇವಸದೃಶರಾದ ನಿನ್ನ ಪತಿಗಳು ಪುನಃ ಗೆದ್ದುಕೊಳ್ಳುವ ಸಾಮ್ರಾಜ್ಯಕ್ಕೆ ನೀನು ಖಂಡಿತವಾಗಿಯೂ ಪಟ್ಟದ ರಾಣಿಯಾಗುವೆ. ನಿನ್ನಂತಹ ಶೀಲಸಂಪನ್ನೆಯರೂ, ರೂಪಲಕ್ಷಣವುಳ್ಳವರೂ ಚಿರಕಾಲದವರೆಗೆ ಒಂದೇ ವಿಧವಾದ ದುಃಖವನ್ನನುಭವಿಸುತ್ತಿರಲಾರರು. ಈ ದುಃಖದ ಪಾರವನ್ನು ನೀನು ಬಹು ಶೀಘ್ರದಲ್ಲಿಯೇ ಕಾಣಲಿರುವೆ. ನಿಷ್ಕಂಟಕಳಾದ, ನಿರುಪದ್ರವಿಯಾದ ಈ ವಸುಂಧರೆಯು ನಿನ್ನಿಂದಲೂ ಮತ್ತು ನಿನ್ನ ಗಂಡಂದಿರಿಂದಲೂ ಚಿರಕಾಲದವರೆಗೆ ಅನುಭವಿಸಲ್ಪಡುತ್ತಾಳೆಂಬ ವಿಷಯವನ್ನು ನಾನು ಅನೇಕ ಬಾರಿ ಅನೇಕ ಮಹಾತ್ಮರಿಂದಲೇ ಕೇಳಿದ್ದೇನೆ. ದುಷ್ಟಕೌರವರನ್ನು ನಿಗ್ರಹಿಸಿದ ನಂತರ ಧರ್ಮಾತ್ಮನಾದ ಯುಧಿಷ್ಠಿರನು ಈ ಚಕ್ರಾಧಿಪತ್ಯಕ್ಕೆ ಸ್ವಾಮಿಯಾಗುವುದನ್ನು ಅತ್ಯಲ್ಪಕಾಲದಲ್ಲಿಯೇ ನೀನು ಕಾಣಲಿರುವೆ. ಕೌರವರು ನಿನ್ನ ವಿಷಯದಲ್ಲಿ ತೋರಿದ ದೌಷ್ಟ್ಯದ ಸೇಡನ್ನು ನಿನ್ನ ಗಂಡಂದಿರು ಖಂಡಿತವಾಗಿಯೂ ತೀರಿಸಿಕೊಳ್ಳುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ನೀನು ನಿನ್ನ ಪತಿಗಳೊಡನೆ ಅರಣ್ಯಕ್ಕೆ ಹೊರಟಾಗ ಯಾವ ದುರ್ಯೋಧನಾದಿಗಳ ಪತ್ನಿಯರು ನಿನ್ನ ಕಡೆಗೆ ಬೆರಳಿಟ್ಟು ತೋರಿ ಅಪಹಾಸ್ಯಮಾಡಿ ನಕ್ಕರೋ ಆ ಕುರುಕುಲ ಸ್ತ್ರೀಯರು ಬಹುಶೀಘ್ರದಲ್ಲಿಯೇ ಹತಾಶರಾಗುವುದನ್ನು ನೀನು ನಿನ್ನೀ ಕಣ್ಣುಗಳಿಂದಲೇ ನೋಡಲಿರುವೆ. ದ್ರೌಪದಿ! ನೀನು ದುಃಖಾಭಿತಪ್ತಳಾಗಿದ್ದಾಗ

ಯಾರು ನಿನ್ನನ್ನು ಮತ್ತೂ ಕಾಡಿಸಿ ಸಂಕಟಪಡಿಸಿದರೋ–ಅವರು ಈಗಾಗಲೇ ಯಮಲೋಕದ ಮಾರ್ಗವನ್ನು ಹಿಡಿದು ಹೊರಟುಬಿಟ್ಟಿರುತ್ತಾರೆ. ನಿನ್ನ ಮಕ್ಕಳಾದ ಪ್ರತಿವಿಂಧ್ಯ, ಸುತಸೋಮ, ಶ್ರುತಕರ್ಮಾ, ಶತಾನೀಕ ಮತ್ತು ಶ್ರುತಸೇನರು ಸಕಲವಿಧವಾದ ಶಸ್ತ್ರಾಸ್ತ್ರಗಳಲ್ಲಿಯೂ ಪ್ರವೀಣರಾಗಿದ್ದಾರೆ. ಅಭಿಮನ್ಯುವಿನಂತೆಯೇ ಅವರೂ ಸಹ ದ್ವಾರವತಿಯಲ್ಲಿ ಸುಖವಾಗಿ ಕಾಲ ವನ್ನು ಕಳೆಯುತ್ತಿದ್ದಾರೆ.

ಸುಭದ್ರೆಯೂ ಸಹ ಬಹಳ ಆದರದಿಂದಲೂ, ಜಾಗರೂಕತೆಯಿಂದಲೂ ನಿನ್ನ ಮಕ್ಕಳ ಯೋಗ-ಕ್ಷೇಮವನ್ನು ನೋಡಿಕೊಳ್ಳುತ್ತಿದ್ದಾಳೆ. ನೀನು ಹೇಗೆ ನಿನ್ನ ಆ ಐವರು ಮಕ್ಕಳನ್ನೂ ಕಂಡು ಸಂತೋಷಪಡುವೆಯೋ ಅಂತೆಯೇ ಸುಭದ್ರೆಯೂ ಸಹ ನಿನ್ನ ಐವರು ಮಕ್ಕಳ ಆಟ-ಪಾಟಗಳನ್ನೂ, ಶಸ್ತ್ರಾಸ್ತ್ರ ಪ್ರಯೋಗಗಳಲ್ಲಿ ಅವರಿಗಿರುವ ಕೌಶಲವನ್ನೂ ನೋಡಿ ಹಿರಿಹಿಗ್ಗುತ್ತಾಳೆ. ಯಾವುದಾದರೂ ಕಾರಣದಿಂದ ನಿನ್ನ ಮಕ್ಕಳೇನಾದರೂ ದುಃಖಿತರಾದರೆ ತಾನೂ ಸಹ ಅವರ ಜೊತೆಯಲ್ಲಿಯೇ ದುಃಖಿಸುತ್ತಾಳೆ. ಅವರು ಸಂತೋಷಿ ಸುತ್ತಿದ್ದರೆ ತಾನೂ ಅವರೊಡನೆ ಸೇರಿ ನಗುತ್ತಾಳೆ. ಅವಳಿಗೆ ಅಭಿಮನ್ಯು ಮತ್ತು ನಿನ್ನ ಮಕ್ಕಳ ವಿಷಯದಲ್ಲಿ ಪಕ್ಷಪಾತವೆಂಬುದು ಲೇಶಮಾತ್ರವೂ ಇರುವುದಿಲ್ಲ. ಸುಭದ್ರೆಯಂತೆಯೇ ಪ್ರದ್ಯುಮ್ನನ ತಾಯಿಯಾದ ರುಕ್ಮಿಣಿಯೂ ಸಹ ನಿನ್ನ ಮಕ್ಕಳನ್ನು ತಾಯಿಗಿಂತಲೂ ಹೆಚ್ಚಾಗಿ ಆದರಿಸುತ್ತಾಳೆ. ಕೇಶವನೂ ಸಹ ತನ್ನ ಮಕ್ಕಳಾದ ಭಾನು ಮುಂತಾದವರನ್ನು ಜಾಗರೂಕತೆಯಿಂದ ನೋಡಿಕೊಳ್ಳುವಂತೆಯೇ ನಿನ್ನ ಮಕ್ಕಳನ್ನೂ ಬಹುಜಾಗರೂಕತೆಯಿಂದ ನೋಡಿಕೊಳ್ಳುತ್ತಿರುತ್ತಾನೆ. ನನ್ನ ಮಾವನು (ಶ್ರೀಕೃಷ್ಣನ ತಂದೆಯಾದ ವಸುದೇವನು) ನಿನ್ನ ಮಕ್ಕಳ ಊಟ-ಉಪಚಾರಗಳಲ್ಲಿ ಮತ್ತು ಉಡುಗೆ-ತೊಡುಗೆಗಳಲ್ಲಿ ಸರ್ವದಾ ಗಮನವಿಟ್ಟಿರುತ್ತಾನೆ. ಹೆಚ್ಚೇನು ಹೇಳಲಿ, ದ್ರೌಪದಿ! ಎಲ್ಲ ಅಂಧಕರೂ ಮತ್ತು ಬಲರಾಮನಾದಿಯಾದ ವೃಷ್ಣಿಕುಲ ದವರೂ ನಿನ್ನ ಐವರು ಮಕ್ಕಳನ್ನೂ ಬಹುಪ್ರೀತಿಯಿಂದ ಕಾಣುತ್ತಾರೆ. ಅಂಧಕ-ವೃಷ್ಣಿಕುಲದವರಿಗೆ ಪ್ರದ್ಯುಮ್ನನ ಮೇಲೆ ಎಷ್ಟು ಪ್ರೇಮವಿದೆಯೋ ಅಷ್ಟೇ ಪ್ರೇಮವು ನಿನ್ನ ಮಕ್ಕಳ ವಿಷಯದಲ್ಲಿಯೂ ಇರುವುದು.”

ಜನಮೇಜಯ! ಇವೇ ಮುಂತಾದ ಪ್ರಿಯವೂ, ಸತ್ಯವೂ, ಹೃದ್ಯವೂ,

ಮನಸ್ಸಿಗೆ ಹರ್ಷದಾಯಕವೂ ಆದ ಮಾತುಗಳನ್ನು ಸತ್ಯಭಾಮೆಯು ದ್ರೌಪದಿಗೆ ಹೇಳಿದನಂತರ ವಾಸುದೇವನು ಕುಳಿತಿದ್ದ ರಥದಲ್ಲಿ ಹತ್ತಿ ಕುಳಿತುಕೊಳ್ಳಲು ನಿಶ್ಚಯಿಸಿ, ಪಾಂಡವರ ಪತ್ನಿಯಾದ ದ್ರೌಪದಿಯನ್ನೊಮ್ಮೆ ಗಾಢಾಲಿಂಗನಮಾಡಿಕೊಂಡು, ಅನಂತರ ಅವಳಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಅವಳ ಅನುಮತಿಯನ್ನು ಪಡೆದು ರಥದಲ್ಲಿ ಕುಳಿತುಕೊಂಡಳು.



ಶ್ರೀಕೃಷ್ಣನು ಮುಗುಳ್ನಗೆಯಿಂದ ದ್ರೌಪದಿಯನ್ನೊಮ್ಮೆ ನೋಡಿ, ಕೇವಲ ಕಟಾಕ್ಷವೀಕ್ಷಣದಿಂದಲೇ ಅವಳನ್ನು ಸಂತೈಸಿ, ಪಾಂಡವರನ್ನು ಆಶ್ರಮಕ್ಕೆ ಹಿಂದಿರುಗುವಂತೆ ಹೇಳಿ, ಬಹುಶೀಘ್ರಗತಿಯುಳ್ಳ ಕುದುರೆಗಳಿಂದ ಸಜ್ಜಾಗಿದ್ದ ರಥದಲ್ಲಿ ಕುಳಿತು ದ್ವಾರಕೆಗೆ ಪ್ರಯಾಣಮಾಡಿದನು."

೨೩೫ನೆಯ ಅಧ್ಯಾಯವು ಮುಗಿಯಿತು.

೨೩೬ನೆಯ ಅಧ್ಯಾಯ ಘೋಷಯಾತ್ರಾಪರ್ವ

## ಬ್ರಾಹ್ಮಣನ ಮೂಲಕ ಪಾಂಡವರ ಸಮಾಚಾರವನ್ನು ಕೇಳಿದ ಧೃತರಾಷ್ಟ್ರನು ಚಿಂತಿಸಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಏವಂ ವನೇ ವರ್ತಮಾನಾ ನರಾಗ್ರ್ಯಾಃ**
**ಶೀತೋಷ್ಣವಾತಾತಪಕರ್ಷಿತಾಙ್ಗಾಃ ।**
**ಸರಸ್ತದಾಸಾದ್ಯ ವನಂ ಚ ಪುಣ್ಯಂ**
**ತತಃ ಪರಂ ಕಿಮಕುರ್ವನ್ತ ಪಾರ್ಥಾಃ ॥೧॥**

"ಅರಣ್ಯದಲ್ಲಿದ್ದುಕೊಂಡು ಅನಿವಾರ್ಯವಾದ ಶೀತ-ಉಷ್ಣ, ಗಾಳಿ-ಬಿಸಿಲು–ಇವುಗಳಿಂದ ಜರ್ಝರಿತರಾದ, ನರಶ್ರೇಷ್ಠರಾದ ಪಾಂಡವರು ಪುಣ್ಯತಮವಾದ ದ್ವೈತಸರೋವರವಿರುವ ದ್ವೈತವನವನ್ನು ಸೇರಿದನಂತರ ಮುಂದೇನು ಮಾಡಿದರೆಂಬ ವಿಷಯವನ್ನು ವಿಶದವಾಗಿ ಹೇಳಿರಿ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಪಾಂಡವರು ದ್ವೈತಸರೋವರದ ಬಳಿಗೆ ಬಂದನಂತರ ಮನುಷ್ಯವಸತಿಯಿಲ್ಲದ ಮತ್ತು ಮನುಷ್ಯಸಂಚಾರವಿಲ್ಲದ ಸ್ಥಳವೊಂದರಲ್ಲಿ ಬಿಡಾರಮಾಡಿದರು. ಅನುದಿನವೂ ಅವರು ರಮ್ಯವಾದ ವನಪ್ರದೇಶಗಳಲ್ಲಿಯೂ, ಪರ್ವತಪ್ರದೇಶಗಳಲ್ಲಿಯೂ, ನದಿಗಳ ತೀರಪ್ರದೇಶಗಳಲ್ಲಿಯೂ ಯಥೇಚ್ಛವಾಗಿ ಸಂಚರಿಸುತ್ತಿದ್ದರು. ದ್ವೈತವನದಲ್ಲಿ ಪಾಂಡವರು ಬಿಡಾರಮಾಡಿದನಂತರ ಅವರು ಅಲ್ಲಿಗೆ ಆಗಮಿಸಿರುವ ವಾರ್ತೆಯನ್ನು ಕರ್ಣಾಕರ್ಣಿಕೆಯಿಂದ ತಿಳಿದು ತಪೋಧನರೂ, ಸ್ವಾಧ್ಯಾಯನಿಷ್ಠರೂ ಆದ ವಿಪ್ರರ್ಷಿಗಳು ಅವರ ಆಶ್ರಮಕ್ಕೆ ಬಂದು-ಹೋಗತೊಡಗಿದರು. ಪಾಂಡವರೂ ಸಹ ವೇದವಿದರಾದ ಆ ವಿಪ್ರರ್ಷಿಗಳನ್ನು ಬಹಳ ಆದರದಿಂದ ಸ್ವಾಗತಿಸಿ ಸತ್ಕರಿಸುತ್ತಿದ್ದರು. ಒಂದು ದಿನ ಕಥಾಪ್ರವಚನಗಳಲ್ಲಿ ನಿಷ್ಣಾತನಾದ ಬ್ರಾಹ್ಮಣನೊಬ್ಬನು ಯುಧಿಷ್ಠಿರನ ಆಶ್ರಮಕ್ಕೆ ಆಗಮಿಸಿದನು. ಯಥಾಪೂರ್ವವಾಗಿ ಪಾಂಡವರು ಆ ಬ್ರಾಹ್ಮಣನನ್ನೂ ಸಹ ಆದರಪೂರ್ವಕವಾಗಿ ಸ್ವಾಗತಿಸಿ ಸತ್ಕರಿಸಿದರು. ಆ ಬ್ರಾಹ್ಮಣನು ಪಾಂಡವರಿತ್ತ ಸತ್ಕಾರವನ್ನು ಸ್ವೀಕರಿಸಿ

ಪಾಂಡವರ ಅಂದಿನ ದುಃಸ್ಥಿತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅರಿತು ಕೊಂಡು, ಪಾಂಡವರೊಡನೆ ಯಥೋಚಿತವಾಗಿ ನಾಲ್ಕು ಮಾತುಗಳನ್ನಾಡಿ ಅನಂತರ ಪಾಂಡವರಿಂದ ಬೀಳ್ಕೊಡಲ್ಪಟ್ಟವನಾಗಿ, ತನ್ನ ಸ್ವಂತ ಇಚ್ಛೆಯಿಂದ ನೇರವಾಗಿ ಹಸ್ತಿನಾಪಟ್ಟಣಕ್ಕೆ ಹೊರಟನು. ನಾಲ್ಕಾರು ದಿನಗಳು ಪ್ರಯಾಣಮಾಡಿ ಹಸ್ತಿನಾಪಟ್ಟಣವನ್ನು ಸೇರಿದನಂತರ ಆ ಬ್ರಾಹ್ಮಣನು ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನನ್ನು ಸಂಧಿಸಿದನು. ಆಗಮಿಸಿದ ಬ್ರಾಹ್ಮಣನನ್ನು ರಾಜಪರಿವಾರದವರು ಯಥೋಚಿತವಾಗಿ ಸತ್ಕರಿಸಿ ರಾಜನ ಸಮೀಪದ ಸುಖಾಸನದಲ್ಲಿ ಕುಳ್ಳಿರಿಸಿದರು. ಪರಸ್ಪರವಾಗಿ ಕುಶಲಪ್ರಶ್ನೆಗಳಾದ ಬಳಿಕ ಧೃತರಾಷ್ಟ್ರನು, ಬ್ರಾಹ್ಮಣನು ಕೈಗೊಂಡಿರುವ ದೇಶಪರ್ಯಟನದಿಂದ ತಿಳಿದುಬಂದಿರುವ ವಾರ್ತೆಗಳನ್ನು ಹೇಳುವಂತೆ ಬ್ರಾಹ್ಮಣನನ್ನು ಪ್ರಾರ್ಥಿಸಿದನು. ಈ ಹಿಂದೆ ಅವನು ಕಾಡಿನಲ್ಲಿದ್ದ ಪಾಂಡವರ ಬಳಿಗೆ ಹೋಗಿದ್ದನಾದುದರಿಂದ ಆಗ ತಾನು ಪ್ರತ್ಯಕ್ಷವಾಗಿ ಕಂಡ ಧರ್ಮಾದಿಗಳ ಸ್ಥಿತಿ-ಗತಿಗಳನ್ನು ಆ ಬ್ರಾಹ್ಮಣನು ಹೇಳಲುಪಕ್ರಮಿಸಿದನು.

"ಧೃತರಾಷ್ಟ್ರ! ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರು ಬಹಳ ಕಷ್ಟದೆಸೆಯಲ್ಲಿದ್ದಾರೆ. ಅತ್ಯಂತದುಃಖವನ್ನು ಅನುಭವಿಸುತ್ತಿದ್ದಾರೆ. ಅನವರತವಾಗಿ ಮಳೆ-ಗಾಳಿ-ಬಿಸಿಲುಗಳಿಗೆ ಗುರಿಯಾಗಿರುವ ಆ ರಾಜಕುಮಾರರ ದೇಹಗಳು ಬಹಳ ಕೃಶವಾಗಿ ಹೋಗಿವೆ. ಕೃಷ್ಣೆಯ ಸಂಕಟವನ್ನಂತೂ ಹೇಳತೀರದು. ಅವಳಿಗೆ ದೇವಸಮಾನರಾದ ಐವರು ಪತಿಗಳಿದ್ದರೂ ಬಹುಕಷ್ಟದಲ್ಲಿ ಸಿಲುಕಿರುತ್ತಾಳೆ. ಅವಳೂ ಸಹ ಕೃಶಳಾಗಿರು ತ್ತಾಳೆ. ಮಹಾವೀರರೇ ಅವಳ ನಾಥರಾಗಿದ್ದರೂ ಅವಳಿಂದು ಅನಾಥೆ ಯಂತೆಯೇ ಕಾಣುತ್ತಿದ್ದಾಳೆ."

ಬ್ರಾಹ್ಮಣನ ಮಾತುಗಳನ್ನು ಕೇಳಿ-ರಾಜಪೌತ್ರರೂ, ರಾಜಪುತ್ರರೂ ಆಗಿರುವ ತನ್ನ ಮಕ್ಕಳು ದುಃಖವೆಂಬ ನದಿಯಲ್ಲಿಯೇ ಮುಳುಗಿರುವ ರೆಂಬುದನ್ನು ತಿಳಿದು-ಧೃತರಾಷ್ಟ್ರನು ಬಹಳ ದುಃಖಿತನಾದನು. ಅವನ ಅಂತರಾತ್ಮವು ಪರಿತಪಿಸಿತು. ದೀರ್ಘವಾಗಿ ನಿಟ್ಟುಸಿರುಬಿಟ್ಟನು. ತನ್ನಿಂದಲೇ ಪಾಂಡವರು ಇಷ್ಟು ದುಃಖಕ್ಕೊಳಗಾದರೆಂಬುದನ್ನು ನೆನೆದು ಧೃತರಾಷ್ಟ್ರನ ಹೃದಯವು ಮತ್ತೂ ತಲ್ಲಣಿಸಿತು. ಕ್ಷಣಕಾಲ ಬಾಯಿಂದ ಮಾತುಗಳೇ

ಹೊರಡಲಿಲ್ಲ. ಕಷ್ಟಪಟ್ಟು ಮನಸ್ಸನ್ನು ಸ್ಥಿರಮಾಡಿಕೊಂಡು ಬ್ರಾಹ್ಮಣನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಬ್ರಾಹ್ಮಣೋತ್ತಮ! ನಿನ್ನ ಮಾತುಗಳನ್ನು ಕೇಳಿ ನನ್ನ ಹೃದಯವು ಬಹುವಾಗಿ ತಲ್ಲಣಿಸುತ್ತಿದೆ. ಯುಧಿಷ್ಠಿರನು ನನ್ನ ಎಲ್ಲ ಮಕ್ಕಳಲ್ಲಿ ಹಿರಿಯವನು. ಸತ್ಯನಿಷ್ಠನಾದವನು. ಅಂತಶ್ಶುದ್ಧಿ-ಬಹಿಶ್ಶುದ್ಧಿಗಳುಳ್ಳವನು. ನಮ್ಮ ಹಿರಿಯರು ಅನುಸರಿಸಿದ ಧರ್ಮಮಾರ್ಗದಲ್ಲಿಯೇ ನಡೆಯತಕ್ಕವನು. ಅವನಿಗೆ ಶತ್ರುಗಳೆಂಬುವರೇ ಇದುವರೆವಿಗೂ ಹುಟ್ಟಿರುವುದಿಲ್ಲ. ರಂಕುಮೃಗದ ಮೃದುವಾದ ಕೂದಲಿನಿಂದ ನಿರ್ಮಿತವಾದ ಹಂಸತೂಲಿಕಾತಲ್ಪದಲ್ಲಿ ಅನುದಿನವೂ ಮಲಗುತ್ತಿದ್ದ ಧರ್ಮರಾಜನಿಂದು ಬಹಳ ಗಡುಸಾದ ನೆಲದ ಮೇಲೆ ಹೇಗೆ ತಾನೇ ಮಲಗಿಯಾನು? ಇಂದ್ರನಿಗೆ ಸಮಾನನಾದ ಅವನನ್ನು ಅನುದಿನವೂ ಸೂತ-ಮಾಗಧರು ಸುಶ್ರಾವ್ಯವಾಗಿ ಪರಾಕುಗಳನ್ನು ಹೇಳಿ ಎಬ್ಬಿಸುತ್ತಿದ್ದರು. ಆದರೆ ಭೂಶಾಯಿಯಾಗಿರುವ ಅವನನ್ನಿಂದು ವನಪಕ್ಷಿಗಳು ತಮ್ಮ ಚಿಲಿಪಿಲಿ ಶಬ್ದಗಳಿಂದ ಬ್ರಾಹ್ಮಮುಹೂರ್ತದಲ್ಲಿ ಎಚ್ಚರಗೊಳಿಸುತ್ತಿವೆ. ಅಯ್ಯೋ! ಇದನ್ನು ಸ್ಮರಿಸಿದ ಮಾತ್ರದಿಂದಲೇ ನನ್ನ ಹೃದಯವು ಬೆಂದುಹೋಗುತ್ತಿರುವುದಲ್ಲಾ! ಮಹಾಕಾಯನಾದ ಭೀಮನು ತಾನೇ ಹೇಗೆ ಆ ನೆಲದಲ್ಲಿ ಮಲಗಿಕೊಳ್ಳುತ್ತಿದ್ದಾನೆ? ಗಾಳಿಯ ಬಡಿತಕ್ಕೂ, ಬಿಸಲಿನ ಬೇಗೆಗೂ ಸಿಕ್ಕಿ ಕೃಶವಾಗಿರುವ ಶರೀರವುಳ್ಳ ಭೀಮನು ಕೋಪಾಗ್ನಿಯನ್ನು ಹೃದಯದಲ್ಲಡಗಿಸಿಕೊಂಡು ಅದರಿಂದಲೂ ಸಹ ಬಹುವಾಗಿ ಪರಿತಾಪಪಡುತ್ತಿದ್ದಾನೆ. ಮಹಾಕಾಯನಾದ, ಮಹಾಬಾಹುವಾದ ಭೀಮನು ಖಂಡಿತವಾಗಿಯೂ ಹಂಸತೂಲಿಕಾತಲ್ಪದ ಮೇಲೆ ಮಲಗಬೇಕಲ್ಲದೇ ನೆಲದ ಮೇಲೆ ಮಲಗಲು ಸರ್ವಥಾ ಯೋಗ್ಯನಲ್ಲ. ಮೇಲಾಗಿ ಪಟ್ಟದ ರಾಣಿಯಾದ ದ್ರೌಪದಿಯ ಸಮಕ್ಷದಲ್ಲಿಯೇ ಆ ಧೀರನು ನೆಲದ ಮೇಲೆ ಹೇಗೆ ಮಲಗುವನು?

ಸುಕುಮಾರನಾದ ಮನನಶೀಲನಾದ ಅರ್ಜುನನು ಇಂತಹ ಸಂಕಟವನ್ನು ಸಹಿಸಲಾರನು. ಆದರೂ ಸಹ ಯುಧಿಷ್ಠಿರನಿಗವನು ಅತ್ಯಂತ ವಿಧೇಯನಾಗಿರುವುದರಿಂದ, ಅವನ ಆಜ್ಞೆಗೆ ಇದಿರಾಡದೇ ಎಲ್ಲ ಕಷ್ಟ-ಕಾರ್ಪಣ್ಯಗಳನ್ನೂ ಮನಸ್ಸಿನಲ್ಲಿಯೇ ಅನುಭವಿಸುತ್ತಿರುತ್ತಾನೆ. ಅವನಿಗೆ ರಾತ್ರಿಯಲ್ಲಿ ನಿದ್ದೆಬರುವುದೆಂದೂ ನಾನು ಭಾವಿಸುವುದಿಲ್ಲ. ನನ್ನ ಮಕ್ಕಳು ಮಾಡಿದ

ಅಪರಾಧವನ್ನು ರಾತ್ರಿಯ ವೇಳೆಯಲ್ಲಿ ನೆನೆಯುತ್ತಾ, ಅದರಿಂದಲೇ ಕಿಡಿ-ಕಿಡಿ ಯಾಗುತ್ತಾ, ನಿದ್ರೆಯಿಲ್ಲದೆಯೇ ಎಲ್ಲ ರಾತ್ರಿಗಳನ್ನೂ ಕಳೆಯುತ್ತಿರಬಹು ದಲ್ಲವೇ? ಸುಖದಿಂದ ವಂಚಿತರಾಗಿರುವ, ಮನಮೋಹಕವಾದ ರೂಪಗಳುಳ್ಳ ನಕುಲ-ಸಹದೇವರನ್ನೂ, ದ್ರೌಪದಿಯನ್ನೂ, ಯುಧಿಷ್ಠಿರನನ್ನೂ ಮತ್ತು



ಭೀಮನನ್ನೂ ನೋಡಿ–ರಾಜಕುಮಾರರಾದ ಅವರು ಕಠಿನವಾದ ನೆಲದ ಮೇಲೆ ಮಲಗಿರುವುದನ್ನು ಕಂಡು ಕೋಪಗೊಂಡ ಅರ್ಜುನನು–ವಿಷಸರ್ಪ ದಂತೆಯೇ ಸುದೀರ್ಘವಾದ ನಿಟ್ಟುಸಿರನ್ನು ಬಿಡುತ್ತಿರುತ್ತಾನೆ. ಕೋಪ ದಿಂದಾಗಿ ಖಂಡಿತವಾಗಿಯೂ ಅವನು ರಾತ್ರಿಯಲ್ಲಿ ನಿದ್ರಿಸಲಾರನು.

ದೇವಲೋಕದಲ್ಲಿರುವ ದೇವತೆಗಳಂತೆಯೇ ದಿವ್ಯರೂಪಿಗಳಾದ ಸುಖಾರ್ಹರಾದ ನಕುಲ-ಸಹದೇವರೂ ಇಂದು ಅತ್ಯಂತದುಃಖದಲ್ಲಿ ಮತ್ತು ಕಷ್ಟದಲ್ಲಿ ಮುಳುಗಿಬಿಟ್ಟಿದ್ದಾರೆ. ಅವರಿಗೆ ಮನಶ್ಶಾಂತಿಯೆಂಬುದೇ ಇಲ್ಲ. ಅವರೂ ರಾತ್ರಿಯಲ್ಲಿ ನಿದ್ರಿಸದೇ ಸರ್ವದಾ ಜಾಗ್ರತರಾಗಿಯೇ ಇರುತ್ತಾರೆ. ಕೇವಲ ಸತ್ಯ-ಧರ್ಮಪರವಶರಾದ ಅವರು ನನ್ನ ಮಕ್ಕಳ ಮೇಲೆ ಸೇಡು ತೀರಿಸಿಕೊಳ್ಳದೇ ಅಣ್ಣನ ಆಜ್ಞಾನುಸಾರವಾಗಿ ಸುಮ್ಮನಿದ್ದಾರೆ. ಸತ್ಯ-ಧರ್ಮಗಳೇ ಅವರನ್ನು ತಡೆಹಿಡಿದಿವೆ. ವಾಯುಪುತ್ರನಾದ ಮತ್ತು ವಾಯುವಿಗೆ ಸಮಾನವಾದ ಬಲವುಳ್ಳ ಭೀಮಸೇನನು ಕೋಪಾವಿಷ್ಟನಾಗಿ ಕಟ-ಕಟನೆ ಹಲ್ಲುಕಡಿಯುತ್ತಾ ದೀರ್ಘವಾಗಿ ನಿಟ್ಟುಸಿರುಬಿಡುತ್ತಿರುತ್ತಾನೆ. ಅವನು ನನ್ನ ಮಕ್ಕಳ ವಿಷಯದಲ್ಲಿ ಮಾಡಬೇಕಾದ ಪ್ರತಿಕ್ರಿಯೆಯು ಧರ್ಮರಾಜನ ಧರ್ಮವೆಂಬ ಹಗ್ಗದಿಂದ ಬಿಗಿಯಲ್ಪಟ್ಟಿದೆ. ಧರ್ಮಜನ ಧರ್ಮಪಾಶವೆಂಬ ಹಗ್ಗದಿಂದ ಭೀಮನು ಬಂಧಿತನಾಗಿ ದ್ರೋಹವನ್ನೆಸಗಿದವರಿಗೆ ಪ್ರತಿಕ್ರಿಯೆಯನ್ನು ಮಾಡಲಾಗದೇ ನಿಟ್ಟುಸಿರುಬಿಡುವುದರಿಂದ ಮಾತ್ರವೇ ಕೋಪವನ್ನು ಸಹಿಸಿಕೊಳ್ಳುತ್ತಾನೆ. ಇದು ನಿಶ್ಚಯ.

ಯುದ್ಧದಲ್ಲಿ ವೃಕೋದರನಿಗೆ ಸಮರಾದವರು ಮತ್ತಾರೂ ಇರುವುದಿಲ್ಲ. ಇದು ಸರ್ವವಿದಿತವಾದ ವಿಷಯ. ಆದರೂ ಸಹ ಅವನಿಂದು ಅನಾಥನಂತೆ ನೆಲದ ಮೇಲೆ ಮಲಗಿ ಹೊರಳಾಡುತ್ತಿರುತ್ತಾನೆ. ನನ್ನ ಮಕ್ಕಳ ವಧೆಯನ್ನು ಕ್ಷಣ-ಕ್ಷಣಕ್ಕೂ ಅವನು ಆಶಿಸುತ್ತಿದ್ದರೂ ಕಾರ್ಯರೂಪಕ್ಕೆ ತರುವಂತಿಲ್ಲ. ಸತ್ಯ-ಧರ್ಮದ ಪಾಶವು ಅವನನ್ನು ನಿಷ್ಕ್ರಿಯನನ್ನಾಗಿ ಮಾಡಿಬಿಟ್ಟಿದೆ. ಅವನು ಕಾಲನಿರೀಕ್ಷಣೆಯಲ್ಲಿದ್ದಾನೆ. ಅಜಾತಶತ್ರುವನ್ನು ಮೋಸದ ಪಗಡೆಯಾಟದಲ್ಲಿ ಗೆದ್ದನಂತರ ಗರ್ವಿಷ್ಠನಾದ ದುಶ್ಶಾಸನನು ಹೇಳಿದ ಅತಿನಿಂದ್ಯವಾದ ಮಾತುಗಳು ಭೀಮನ ಹೃದಯವನ್ನು ಹೊಕ್ಕು-ಪೊದೆಯಲ್ಲಿ ಬಿದ್ದ ಅಗ್ನಿಯು ಆ ಪೊದೆಯಲ್ಲಡಗಿರುವ ಮರದ ತುಂಡನ್ನು ಬಹಳ ನಿಧಾನವಾಗಿ ಸುಡುವಂತೆ–ಸುಡುತ್ತಿವೆ.

ಧರ್ಮರಾಜನೆಂದಿಗೂ ನನ್ನ ಮಕ್ಕಳಿಗೆ ಕೆಟ್ಟುದ್ದನ್ನು ಚಿಂತಿಸುವುದಿಲ್ಲ. ಸತ್ಯ-ಧರ್ಮಗಳಿಗೆ ವಿರುದ್ಧವಾಗಿ ನಡೆಯುವುದೂ ಇಲ್ಲ. ಕಾಯಕ್ಲೇಶವು ಎಷ್ಟೇ ಸಂಭವಿಸಿದರೂ ಸತ್ಯ ಮತ್ತು ಧರ್ಮಗಳ ಆಚರಣೆಯೇ ಶ್ರೇಷ್ಠವಾದ

ಮಾರ್ಗವೆಂದು ದೃಢವಾಗಿ ನಂಬಿದ್ದಾನೆ. ಧನಂಜಯನಿಗೆ ಇಂದಿನ ಪರಿಸ್ಥಿತಿಯನ್ನು ನೋಡಿ ಮನಸ್ಸಿಗೆ ಎಷ್ಟೇ ಕಷ್ಟವಾದರೂ ಅಣ್ಣನ ಅಭಿಪ್ರಾಯಕ್ಕೆ ಅವನು ಸ್ವಲ್ಪವೂ ವಿರೋಧವಾಗಿ ನಡೆದುಕೊಳ್ಳುವುದಿಲ್ಲ. ಆದರೆ ಭೀಮನ ಕೋಪವನ್ನು ಮಾತ್ರ ಯಾರಿಂದಲೂ ಉಪಶಮನಮಾಡುವ ಸಾಧ್ಯತೆಯಿಲ್ಲ. ಕಾಡುಗಿಚ್ಚು ಅರಣ್ಯದಲ್ಲಿ ಬೀಸುವ ಗಾಳಿಯಿಂದ ಉಲ್ಬಣಿಸುವಂತೆ–ಅರಣ್ಯವಾಸದಿಂದ ಅವನ ಹೃದಯದಲ್ಲಡಗಿರುವ ಕೋಪಾಗ್ನಿಯು ದಿನ-ದಿನಕ್ಕೂ ವೃದ್ಧಿಹೊಂದುತ್ತಿರುತ್ತದೆ. ಭೀಮನು ತಾನೂ ತನ್ನ ಸಹೋದರರೂ ದ್ರೌಪದಿಯೊಂದಿಗೆ ನೆಲದ ಮೇಲೆ ಮಲಗಿರುವುದನ್ನು ಯೋಚಿಸಿ, ನನ್ನ ಮಕ್ಕಳು ಮಾಡಿದ ಅಪರಾಧವನ್ನು ನೆನೆದು, ಒಡನೆಯೇ ಕೋಪಾವೇಶಗೊಂಡವನಾಗಿ ಮೇಲೆದ್ದು ಕಟ-ಕಟನೆ ಹಲ್ಲುಕಡಿಯುತ್ತಾ ನನ್ನ ಮಕ್ಕಳನ್ನೂ, ಮೊಮ್ಮಕ್ಕಳನ್ನೂ ಏಕಕಾಲದಲ್ಲಿ ಸುಟ್ಟುಬಿಡುವನೋ ಎಂಬಂತೆ ತನ್ನೆರಡು ಬಿಸಿಯಾದ ಕೈಗಳನ್ನೂ ಪರಸ್ಪರವಾಗಿ ಉಜ್ಜುತ್ತಾ ದೀರ್ಘವಾದ ನಿಟ್ಟುಸಿರು ಬಿಡುತ್ತಾನೆ. ಗಾಂಡೀವಿ-ವೃಕೋದರರು ಕೋಪಗೊಂಡರೆಂದರೆ ಯಮ ಮತ್ತು ಕಾಲರಂತೆಯೇ ಸರಿ. ಯುದ್ಧದಲ್ಲಿ ಸಿಡಿಲಿಗೆ ಸಮಾನವಾದ ಘೋರ ನಿನಾದದಿಂದ ಕೂಡಿದ ತಮ್ಮ ಬಾಣಗಳನ್ನು ಅನುಸ್ಯೂತವಾಗಿ ಶತ್ರುಸೈನ್ಯದ ಮೇಲೆ ಪ್ರಯೋಗಿಸುತ್ತಾ ಕ್ಷಣಮಾತ್ರದಲ್ಲಿ ಶತ್ರುಸಮೂಹವನ್ನು ನಿಶ್ಶೇಷ ಮಾಡಿಬಿಡುತ್ತಾರೆ. ಆದರೆ, ಬ್ರಾಹ್ಮಣೋತ್ತಮ! ಮಂದಬುದ್ಧಿಯಿಂದ ಕೂಡಿರುವ ದುರ್ಯೋಧನ, ಶಕುನಿ, ಕರ್ಣ, ದುಶ್ಶಾಸನ–ಇವರು ಕಪಟದ್ಯೂತರಿಂದ ಸಂಪಾದಿಸಿದ ಈ ರಾಜ್ಯಸುಖವನ್ನು ಜೇನುತುಪ್ಪದಂತೆ ಸವಿಯುತ್ತಿದ್ದಾರೆ. ಕೆಳಗಿರುವ ಪ್ರಪಾತವು (ಆಳವಾದ ಹಳ್ಳದಲ್ಲಿ ಬೀಳುವುದು) ಇವರಿಗಿನ್ನೂ ತಿಳಿದಿರುವುದಿಲ್ಲ. ಮುಂದೇನಾಗಬಹುದೆಂಬುದನ್ನು ಮನಗಾಣದೇ ಸ್ವೇಚ್ಛೆಯಿಂದ ಕಾಲಕಳೆಯುತ್ತಿದ್ದಾರೆ. ಆದರೆ ಇನ್ನೊಂದು ರೀತಿಯಲ್ಲಿ ವಿವೇಚಿಸಿದರೆ ಅವರುಗಳು ಮನಗಂಡರೂ ಸಹ ಈ ದುರಂತದಿಂದ ತಪ್ಪಿಸಿಕೊಳ್ಳುವ ಸಾಧ್ಯತೆಯು ಇಲ್ಲವೆಂದೇ ಹೇಳಬೇಕು.

**ಶುಭಾಶುಭಂ ಕರ್ಮ ನರೋ ಹಿ ಕೃತ್ವಾ**
**ಪ್ರತೀಕ್ಷತೇ ತಸ್ಯ ಫಲಂ ಸ್ಮ ಕರ್ತಾ ।**

**ಸ ತೇನ ಮುಹ್ಯತ್ಯವಶಃ ಫಲೇನ**
**ಮೋಕ್ಷಃ ಕಥಂ ಸ್ಯಾತ್ಪುರುಷಸ್ಯ ತಸ್ಮಾತ್ ॥೨೨॥**

ಮಾನವನು ಶುಭಾಶುಭಕರ್ಮಗಳನ್ನು ಮಾಡಿ ಅದರ ಫಲವನ್ನು ಪ್ರತೀಕ್ಷಿಸುತ್ತಿರುತ್ತಾನೆ. (ಅವನು ಪ್ರತೀಕ್ಷಿಸದೇ ಇದ್ದರೂ ಕರ್ಮಗಳಿಗೆ ಅನುಗುಣವಾದ ಫಲಗಳು ಅವನಿಗೆ ಸಿದ್ಧವಾಗಿಯೇ ಇರುತ್ತವೆ.) ಕರ್ಮಫಲಕ್ಕೆ ಅಧೀನನಾದ ಮನುಷ್ಯನು ತಾನು ಮಾಡಬೇಕಾದ ಕೆಲಸದ ವಿಷಯ ಬಂದಾಗ ಭ್ರಾಂತನಾಗುತ್ತಾನೆ. ಮೂಢನಾದ ಮತ್ತು ಅಶುಭಕರ್ಮವನ್ನೂ, ಕುತ್ಸಿತ ಕರ್ಮವನ್ನೂ ಮಾಡುವ ಮನುಷ್ಯನು ದುಷ್ಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕಲ್ಲದೇ ಅದರಿಂದ ಬಿಡುಗಡೆಯು ಹೇಗೆ ತಾನೇ ಲಭಿಸೀತು? ದುಷ್ಫಲದಿಂದ ತಪ್ಪಿಸಿಕೊಳ್ಳಲು ಹೇಗೆ ತಾನೇ ಸಾಧ್ಯವಾದೀತು?

**ಕ್ಷೇತ್ರೇ ಸುಕೃಷ್ಟೇ ಹ್ಯುಪಿತೇ ಚ ಬೀಜೇ**
**ದೇವೇ ಚ ವರ್ಷತ್ಯೃತುಕಾಲಯುಕ್ತಮ್ ।**
**ನ ಸ್ಯಾತ್ಫಲಂ ತಸ್ಯ ಕುತಃ ಪ್ರಸಿದ್ಧಿ-**
**ರನ್ಯತ್ರ ದೈವಾದಿತಿ ಚಿನ್ತಯಾಮಿ ॥೨೩॥**

ಬ್ರಾಹ್ಮಣೋತ್ತಮ! ಎಲ್ಲವೂ ವಿಧಿವಿಲಾಸದಂತೆಯೇ ನಡೆಯುವುದು. ದೈವನಿಶ್ಚಯದ ಮುಂದೆ ನಮ್ಮ ಚಿಂತನಗಳೆಲ್ಲವೂ ವ್ಯರ್ಥವೇ ಸರಿ. ಕ್ಷೇತ್ರವನ್ನು ಸಕಾಲದಲ್ಲಿ ಉತ್ತು-ಬಿತ್ತಲೂಬಹುದು. ಋತುಧರ್ಮಾನುಸಾರವಾಗಿ ಸಕಾಲದಲ್ಲಿ ಪರ್ಜನ್ಯದೇವನು ವೃಷ್ಟಿಯನ್ನೂ ಸುರಿಸಬಹುದು. ಇಷ್ಟಾದರೂ ಬಿತ್ತಿದ ಬೀಜವು ಮೊಳೆಯದೆಯೇ ಇರಬಹುದು. ಇಂತಹ ನಿದರ್ಶನಗಳನ್ನು ನಾವು ಎಷ್ಟೋ ನೋಡಿದ್ದೇವೆ ಮತ್ತು ತಿಳಿದಿದ್ದೇವೆ. 'ಆದರೆ ಇದಕ್ಕೆ ಕಾರಣವೇನಿರಬಹುದು?' 'ಇದು ಹೇಗಾಯಿತು?'–ಎಂದು ಯೋಚಿಸಿದರೆ–'ಇದು ಕೇವಲ ದೈವೇಚ್ಛೆ'–ಎಂದು ಮಾತ್ರ ನಾವು ನಿಶ್ಚಯಿಸುತ್ತೇವೆ.

(ದ್ಯೂತವಾಡುವುದು ತಪ್ಪೆಂಬುದು ನಮ್ಮೆಲ್ಲರಿಗೂ ಗೊತ್ತು. ಅದರಲ್ಲಿಯೂ ಕಪಟದ್ಯೂತವು ಸರ್ವಥಾ ನಿಷಿದ್ಧವೇ ಸರಿ. ಪಾಂಡವರನ್ನು ಈ ವಿಧವಾಗಿ ವಂಚಿಸಬಾರದೆಂದು ನನ್ನ ಮನಸ್ಸು ಹೇಳುತ್ತಿದ್ದಿತು ; ನಾನದನ್ನೇ ದುರ್ಯೋಧನನಿಗೂ ಹೇಳಿದೆನು. ದುರ್ಯೋಧನ-ಶಕುನಿ-ದುಶ್ಶಾಸನ-

ಕರ್ಣರು ಹೊರತಾಗಿ ಅದಕ್ಕೆ ಎಲ್ಲರೂ ವಿರೋಧಿಗಳಾಗಿದ್ದರು. ಆದರೂ ಸಹ ಕಪಟದ್ಯೂತವು ನಮ್ಮ ಕಣ್ಣುಮುಂದೆಯೇ ನಡೆಯಿತು. ಪಾಂಡವರು ವನವಾಸಕ್ಕೆ ನಾವು ನೋಡುತ್ತಿರುವಂತೆಯೇ ತೆರಳಿದರು. ಮಹಾಸಭೆಯಲ್ಲಿ ದ್ರೌಪದಿಗಾದ ಅಪಮಾನವನ್ನು ತಡೆಯಲು ನಾನು ಅಸಮರ್ಥನಾದೆನು. ಇದನ್ನೇ ನಾನು ವಿಧಿವಿಲಾಸವೆಂದು ಭಾವಿಸುತ್ತೇನೆ. ವಿಧಿಯ ನಿಶ್ಚಯವೇ ಬೇರೆಯಿರುವಾಗ ನಮ್ಮ ಪ್ರಯತ್ನಗಳೆಲ್ಲವೂ ವಿಫಲವಾಗುತ್ತವೆ. ವಿಧಿನಿಯಮ ವನ್ನು ನಾವುಗಳಾರೂ ತಪ್ಪಿಸಲಾರೆವು. ನಾವು ಯಾವಾಗಲೂ ವಿಧಿಯ ಸುಳಿ ಯಲ್ಲಿ ಸಿಕ್ಕಿ ಕೇವಲ ಸೂತ್ರದ ಗೊಂಬೆಗಳಂತೆಯೇ ಕಾರ್ಯಮಾಡುತ್ತಿರು ತ್ತೇವೆ.)

**ಕೃತಂ ಮತಾಕ್ಷೇಣ ಯಥಾ ನ ಸಾಧು**
**ಸಾಧುಪ್ರವೃತ್ತೇನ ಚ ಪಾಣ್ಡವೇನ ।**
**ಮಯಾ ಚ ದುಷ್ಪುತ್ರವಶಾನುಗೇನ**
**ತಥಾ ಕುರೂಣಾಮಯಮನ್ತಕಾಲಃ ॥೨೪॥**

ಜೂಜುಕೋರನಾದ ಶಕುನಿಯು ಧರ್ಮಾತ್ಮನಾದ ಧರ್ಮಜನ ವಿಷಯದಲ್ಲಿ ಮೋಸಕೃತ್ಯವನ್ನೆಸಗಿದನು. ಸಾಧುಸ್ವಭಾವವುಳ್ಳ ಧರ್ಮ ರಾಜನೂ ಆ ಸಮಯದಲ್ಲಿ ವಿವೇಚನೆಯಿಂದ ನಡೆದುಕೊಳ್ಳಲಿಲ್ಲ. (ಶಕುನಿ ಯೊಡನೆ ಆಟವಾಡಲು ಒಪ್ಪದೇ ಇರಬಹುದಾಗಿದ್ದಿತು.) ಪುತ್ರವ್ಯಾಮೋಹ ದಿಂದ ಪೀಡಿತನಾದ ನಾನೂ ಸಹ ಅಂತಹ ಹೇಯಕೃತ್ಯವನ್ನೆಸಗಿದ್ದರಿಂದಲೇ ಇಂದು ಕುರುವಂಶದ ವಿನಾಶವು ಸನ್ನಿಹಿತವಾಗಿದೆ.

**ಧ್ರುವಂ ಪ್ರವಾಸ್ಯತ್ಯಸಮೀರಿತೋಽಪಿ**
**ಧ್ರುವಂ ಪ್ರಜಾಸ್ಯತ್ಯುತ ಗರ್ಭಿಣೀ ಯಾ ।**
**ಧ್ರುವಂ ದಿನಾದೌ ರಜನೀಪ್ರಣಾಶ-**
**ಸ್ತಥಾ ಕ್ಷಪಾದೌ ಚ ದಿನಪ್ರಣಾಶಃ ॥೨೫॥**

ಅಥವಾ ಬ್ರಾಹ್ಮಣೋತ್ತಮ! ಈಗ ಪ್ರಾಪ್ತವಾಗಿರುವ ಈ ಕುರುವಂಶದ ವಿನಾಶವು ಅನಿವಾರ್ಯವಾದುದೇ ಸರಿ. ಗಾಳಿಯನ್ನು ಬೀಸುವಂತೆ ಯಾರೂ ಪ್ರೇರಿಸಬೇಕಾಗಿಲ್ಲ. ಮಂದವಾಗಿ, ರಭಸವಾಗಿ, ಕೆಲವು ಸಮಯಗಳಲ್ಲಿ ಭೀಕರವಾಗಿ ಗಾಳಿಯು ಬೀಸುತ್ತಲೇ ಇರುತ್ತದೆ. ಅದನ್ನು ನಿಯಂತ್ರಿಸುವ

ಸಾಮರ್ಥ್ಯವು ಯಾರಿಗೂ ಇಲ್ಲ. ಗರ್ಭಿಣಿಯಾದವಳು ಪ್ರಸವಿಸಿಯೇ ತೀರುತ್ತಾಳೆ. ಇದು ಅನಿವಾರ್ಯ. ಬೆಳಗಾಗುತ್ತಲೇ ಕತ್ತಲೆಯು ನಾಶವಾಗುತ್ತದೆ ; ಸಾಯಂಕಾಲವಾಗಿ ಕತ್ತಲೆಯಾಯಿತೆಂದರೆ ದಿನದ ನಾಶವಾಗುತ್ತದೆ. ಇವುಗಳೆಲ್ಲವೂ ಹೇಗೆ ಅನಿವಾರ್ಯವೋ ಹಾಗೆಯೇ ಕುರುವಂಶದ ವಿನಾಶವೂ ಸಹ ಅನಿವಾರ್ಯವೇ ಇರಬಹುದಲ್ಲವೆ?

**ಕ್ರಿಯೇತ ಕಸ್ಮಾದಪರೇ ಚ ಕುರ್ಯು-**
**ರ್ವಿತ್ತಂ ನ ದದ್ಯುಃ ಪುರುಷಾಃ ಕಥಂಚಿತ್ ।**
**ಪ್ರಾಪ್ಯಾರ್ಥಕಾಲಂ ಚ ಭವೇದನರ್ಥಃ**
**ಕಥಂ ನ ತತ್ಸ್ಯಾದಿತಿ ತತ್ಕುತಃ ಸ್ಯಾತ್ ॥೨೬॥**

ಬ್ರಾಹ್ಮಣೋತ್ತಮ! 'ಅರ್ಥವು ಅನರ್ಥಕಾರೀ', ಅದರಲ್ಲಿಯೂ 'ಅನ್ಯಾಯಾರ್ಜಿತವಾದ ವಿತ್ತವು ಕುಲವಿನಾಶಕರ'–ಎಂಬುದೂ ಸರ್ವವಿದಿತವಾಗಿದೆ. ಆದರೂ ಸಹ ನಾವೇಕೆ ಅರ್ಥಸಂಪಾದನೆಯಲ್ಲಿ ತೊಡಗುತ್ತೇವೆ? ನಮ್ಮಂತೆಯೇ ಹಿಂದಿನ ರಾಜರೂ ಸಹ ಏಕೆ ಧನಸಂಪಾದನೆಯಲ್ಲಿ ನಿರತರಾಗಿರುತ್ತಿದ್ದರು? ಮೇಲಾಗಿ ಸಂಪಾದಿಸಿದ ಧನವನ್ನು ಇತರರಿಗೆ ದಾನಮಾಡಲೂ ಸಹ ಸಾಮಾನ್ಯಮನುಷ್ಯರಿಗೆ ಇಚ್ಛೆಯುಂಟಾಗುವುದಿಲ್ಲ. ಅನ್ಯಾಯಾರ್ಜಿತವಾದ ವಿತ್ತದಿಂದ ಅನರ್ಥವುಂಟಾಗುವುದೆಂಬುದಂತೂ ಶತಾಂಶ ಸತ್ಯವಾದುದು. ಹೀಗಿದ್ದರೂ ಸಹ ಮಾನವನು ನ್ಯಾಯಾನ್ಯಾಯಗಳನ್ನು ವಿವೇಚಿಸದೇ ಸಂಪಾದನೆಯಲ್ಲಿ ಏಕೆ ತೊಡಗುತ್ತಾನೆಂದರೆ : ಇದು ಮನುಷ್ಯನ ಸ್ವಭಾವಗುಣವಾಗಿರುತ್ತದೆ. (ಅನುದಿನವೂ ತನ್ನ ಕಣ್ಣೆದುರಿನಲ್ಲಿಯೇ ಅನೇಕರು ಸತ್ತುಹೋಗುತ್ತಿದ್ದರೂ ತಾನೂ ಒಮ್ಮೆ ಸಾಯುವೆನೆಂಬ ಭಾವನೆಯು ಮಾನವನಿಗೆ ಹೇಗೆ ಉಂಟಾಗುವುದಿಲ್ಲವೋ–ಅದೇ ರೀತಿಯಲ್ಲಿ ಅನ್ಯಾಯಾರ್ಜಿತವಾದ ಅರ್ಥವು ಅನರ್ಥಕಾರೀ ಎಂಬುದು ಸ್ಪಷ್ಟವಾಗಿ ತಿಳಿದಿದ್ದರೂ ಸಹ ಅರ್ಥವನ್ನು ಸಂಪಾದಿಸುತ್ತಾ ಹೋಗುವುದೇ ಮಾನವನ ಸ್ವಭಾವಗುಣವಾಗಿರುತ್ತದೆ.)

**ಕಥಂ ನ ವಿದ್ಯೇತ ನ ಚ ಸ್ರವೇತ**
**ನ ಚ ಪ್ರಸಿಚ್ಯೇದಿತಿ ರಕ್ಷಿತವ್ಯಮ್ ।**
**ಅರಕ್ಷ್ಯಮಾಣಂ ಶತಧಾ ಪ್ರಕೀರ್ಯೇ-**
**ದ್ಧ್ರುವಂ ನ ನಾಶೋಽಸ್ತಿ ಕೃತಸ್ಯ ಲೋಕೇ ॥೨೭॥**

ಪ್ರಾಪ್ತವಾಗಿರುವ ಐಶ್ವರ್ಯವನ್ನು ಸರಿಯಾದ ರೀತಿಯಲ್ಲಿ ವಿತರಣೆ ಮಾಡದಿದ್ದರೆ ನಿಂತ ನೀರಿನಂತೆ ರಾಡಿಯಾಗಿ ವ್ಯರ್ಥವಾಗುವುದಿಲ್ಲವೇ? ಈ ರೀತಿ ಯೋಚಿಸಿ ಸರಿಯಾದ ಕ್ರಮದಲ್ಲಿ ಐಶ್ವರ್ಯವನ್ನು ರಕ್ಷಿಸಬೇಕಾದುದು ಮುಖ್ಯಕರ್ತವ್ಯ. ಹಾಗೆ ಸರಿಯಾಗಿ ವಿಭಜಿಸದೇ ರಕ್ಷಿಸದಿದ್ದರೆ ನೂರಾರು ಮಾರ್ಗಗಳಲ್ಲಿ ಐಶ್ವರ್ಯವು ಹರಿದುಹೋಗುತ್ತದೆ. ಪ್ರಪಂಚದಲ್ಲಿ ಮಾಡಿದ ಕರ್ಮದ ಫಲಕ್ಕೆ ನಾಶವು ಎಂದಿಗೂ ಇಲ್ಲ. ಇದು ನಿಶ್ಚಯ. (ಆದ್ದರಿಂದ ಸದ್ವಿನಿಯೋಗವೇ ಐಶ್ವರ್ಯಕ್ಕೆ ಮುಖ್ಯಧ್ಯೇಯ.)

ಬ್ರಾಹ್ಮಣೋತ್ತಮ! ಸಶರೀರನಾಗಿ ಸ್ವರ್ಗಕ್ಕೆ ಹೋಗುವುದೆಂದರೇನು? ಸ್ವರ್ಗದಿಂದ ಪುನಃ ಬರುವುದೆಂದರೇನು? ಗಾಂಡೀವಿಯ ಸಾಹಸವನ್ನಾದರೂ ನೋಡು! ಅರಣ್ಯದಿಂದ ನೇರವಾಗಿ ಅವನು ಸ್ವರ್ಗಾರೋಹಣವನ್ನು ಮಾಡಿದನು. ಅಲ್ಲಿ ಹಲವಾರು ವರ್ಷಗಳಿದ್ದು ನಾಲ್ಕು ವಿಧವಾದ ದಿವ್ಯಾಸ್ತ್ರಗಳನ್ನೂ ತಿಳಿದುಕೊಂಡು ಪುನಃ ಭೂಲೋಕಕ್ಕೆ ಹೊರಟುಬಂದಿರುತ್ತಾನೆ. (ಇಂತಹವನು ನಮ್ಮ ಶತ್ರುವಾಗಿರುವಾಗ ನಮ್ಮ ಸರ್ವನಾಶವೂ ಸನ್ನಿಹಿತವಾದಂತೆಯೇ ಅಲ್ಲವೇ?) ಮೇಲಾಗಿ ಅವನ ಬುದ್ಧಿಯ ಸ್ಥಿರತೆಯನ್ನಾದರೂ ನೋಡು, ಬ್ರಾಹ್ಮಣೋತ್ತಮ! ಸ್ವರ್ಗಸುಖವನ್ನು ತೃಣೀಕರಿಸಿ ಭೂಮಿಗೆ ಪುನಃ ಆಗಮಿಸಿದ್ದಾನೆ. ಯಾವ ಮಾನವನು ತಾನೇ ಸಶರೀರವಾಗಿ ಸ್ವರ್ಗಕ್ಕೆ ಹೋಗಿ ಧರಣಿಗೆ ಹಿಂದಿರುಗುವನು? 'ಕುರುಗಳು ಕಾಲಗತಿಗೆ ಸಿಕ್ಕಿ ಸಾಯಲಿಚ್ಛೆಯುಳ್ಳವರಾಗಿದ್ದಾರೆ'–ಎಂಬುದನ್ನು ಚೆನ್ನಾಗಿ ತಿಳಿದೇ ಅರ್ಜುನನು ಹಿಂದಿರುಗಿ ಬಂದಿರುವನು. ಮಾನವರಲ್ಲಿಯೇ ಇಂತಹ ಮಹಾಪುರುಷರು ಮತ್ತಾರಿದ್ದಾರೆ?

**ಧನುರ್ಗ್ರಾಹಶ್ಚಾರ್ಜುನಃ ಸವ್ಯಸಾಚೀ**
**ಧನುಶ್ಚ ತದ್ಗಾಣ್ಡೀವಂ ಭೀಮವೇಗಮ್ ।**
**ಅಸ್ತ್ರಾಣಿ ದಿವ್ಯಾನಿ ಚ ತಾನಿ ತಸ್ಯ**
**ತ್ರಯಸ್ಯ ತೇಜಃ ಪ್ರಸಹೇತ ಕೋಽತ್ರ ॥೩೦॥**

ದಿವ್ಯವಾದ ಧನುಸ್ಸನ್ನು ಧಾರಣೆಮಾಡಿರುವ ಮತ್ತು ಎರಡೂ ಕೈಗಳಿಂದಲೂ ಬಾಣಪ್ರಯೋಗಮಾಡುವ ಸಾಮರ್ಥ್ಯವುಳ್ಳ ಅರ್ಜುನ ; ಧನುಸ್ಸಾದರೋ ಭಯಂಕರವಾದ ಗಾಂಡೀವ ; ಅವನ ಅಸ್ತ್ರಗಳಾದರೋ ದಿವ್ಯಾಸ್ತ್ರ

ಗಳು–ಈ ಮೂರು ದಿವ್ಯಶಕ್ತಿಗಳನ್ನೂ ಏಕಕಾಲದಲ್ಲಿ ಸಹಿಸಿಕೊಳ್ಳುವವರು ಯಾರು ತಾನೇ ಇದ್ದಾರೆ?"

ಏಕಾಂತದಲ್ಲಿ ಬ್ರಾಹ್ಮಣನೊಡನೆ ಧೃತರಾಷ್ಟ್ರನು ಹೇಳಿದ ಮಾತುಗಳನ್ನು ಅಲ್ಲಿಯೇ ಇದ್ದ ಶಕುನಿಯು ಕೇಳಿದವನಾಗಿ ಒಡನೆಯೇ ಮೇಲೆದ್ದು ಮರೆಯಲ್ಲಿದ್ದ ಕರ್ಣ-ದುರ್ಯೋಧನರ ಬಳಿಗೆ ಹೋಗಿ ಎಲ್ಲವನ್ನೂ ಯಥಾವತ್ತಾಗಿ ಅವರಿಗೆ ತಿಳಿಸಿದನು. ಅಲ್ಪಬುದ್ಧಿಯಾದ ದುರ್ಯೋಧನನು ಶಕುನಿಯ ಮಾತುಗಳನ್ನು ಕೇಳಿ ಅಧೀರನಾದನು. (ಸಂತೋಷವಿಲ್ಲದವನಾದನು.)

೨೩೬ನೆಯ ಅಧ್ಯಾಯವು ಮುಗಿಯಿತು.

೨೩೭ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಶಕುನಿ ಮತ್ತು ಕರ್ಣರು ದುರ್ಯೋಧನನನ್ನು ಪ್ರಶಂಸೆ ಮಾಡಿದುದು ಮತ್ತು ಅವನನ್ನು ಪಾಂಡವರ ಬಳಿಗೆ ಹೋಗುವಂತೆ ಪ್ರೇರಿಸಿದುದು

ಜನಮೇಜಯ! ನಾನು ಹೇಳಿದಂತೆ ಧೃತರಾಷ್ಟ್ರನು ಬ್ರಾಹ್ಮಣನೊಡನೆ ಹೇಳಿದ ವಿಷಯವನ್ನು ಕೇಳಿದ ಶಕುನಿಯು ದುರ್ಯೋಧನನು ಕರ್ಣನೊಡನೆ ಕುಳಿತಿದ್ದ ಸ್ಥಳಕ್ಕೆ ಧಾವಿಸಿ ಅವನಿಗೆ ಎಲ್ಲ ವಿಷಯಗಳನ್ನೂ ವಿವರವಾಗಿ ಹೇಳಿದನು. ಅರ್ಜುನನ ಪ್ರಾದುರ್ಭಾವದ ವಿಷಯವನ್ನು ಕೇಳಿ ದುರ್ಯೋಧನನು ಖಿನ್ನನಾಗಲು, ರಾಜನನ್ನು ಪುನಃ ಹುರಿದುಂಬಿಸುವ ಸಲುವಾಗಿ ಕರ್ಣ-ಶಕುನಿಗಳಿಬ್ಬರೂ ಹೇಳತೊಡಗಿದರು :

"ದುರ್ಯೋಧನ! ನೀನು ಇದಕ್ಕಾಗಿ ಖಿನ್ನನಾಗುವ ಕಾರಣವಿಲ್ಲ. ನಿನ್ನ ಶೌರ್ಯದಿಂದ ಪಾಂಡವರನ್ನು ಅರಣ್ಯಕ್ಕೆ ಕಳುಹಿಸಿದ್ದಾಗಿದೆ. ಶಂಬರಾಸುರನ ಸಂಹಾರವಾದನಂತರ ಇಂದ್ರನು ನಿಷ್ಕಂಟಕವಾದ ಸ್ವರ್ಗವನ್ನು ಆಳುತ್ತಿರುವಂತೆ–ನೀನೂ ಸಹ ಕಂಟಕರಹಿತವಾದ ಈ ಸಾಮ್ರಾಜ್ಯವನ್ನು ಆಳುವವನಾಗು. ಶತ್ರುರಹಿತವಾದ ಸಾಮ್ರಾಜ್ಯವನ್ನು ಅನುಭವಿಸು. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ–ಈ ನಾಲ್ಕು ದಿಕ್ಕುಗಳಲ್ಲಿರುವ ಸಕಲಸಾಮಂತ ರಾಜರೂ ನಿನಗಿಂದು ಕಪ್ಪ-ಕಾಣಿಕೆಗಳನ್ನು ಸಲ್ಲಿಸುತ್ತಿದ್ದಾರೆ. ಯಾವ

ಸಾಮ್ರಾಜ್ಯಲಕ್ಷ್ಮಿಯು ಹಿಂದೆ ಪಾಂಡವರನ್ನು ಸೇವೆಮಾಡುತ್ತಿದ್ದಳೋ–ಆ ಸಾಮ್ರಾಜ್ಯಲಕ್ಷ್ಮಿಯಿಂದು ಅನುಜರಿಂದೊಡಗೂಡಿದ ನಿನ್ನನ್ನು ಸೇವಿಸುತ್ತಿದ್ದಾಳೆ. ಯಾವ ಸಾಮ್ರಾಜ್ಯಶ್ರೀಯು ಇಂದ್ರಪ್ರಸ್ಥದಲ್ಲಿ ಯುಧಿಷ್ಠಿರನೊಡನಿದ್ದುದನ್ನು ನಾವು ಕಾಣುತ್ತಿದ್ದೆವೋ–ಅದೇ ಸಾಮ್ರಾಜ್ಯಲಕ್ಷ್ಮಿಯು ಇಂದು ನಿನ್ನೊಡನಿರುವುದನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದೇವೆ. ನಿನ್ನ ಶತ್ರುಗಳನ್ನು ನೀನು ಯುದ್ಧಕ್ಕೆ ಆಹ್ವಾನಿಸಿ ಅವರನ್ನು ನಿರಂತರವಾದ ದುಃಖದಲ್ಲಿ ಮುಳುಗಿಸಲು ಯತ್ನಿಸಲಿಲ್ಲ. ಕೇವಲ ನಿನ್ನ ಬುದ್ಧಿಬಲದಿಂದಲೇ ಅವರನ್ನು ನೀನು ಪರಾಜಿತರನ್ನಾಗಿ ಮಾಡಿ ಸಾಮ್ರಾಜ್ಯಲಕ್ಷ್ಮಿಯನ್ನು ಅವರಿಂದ ಅಪಹರಿಸಿರುವೆ.

ಈ ಸಾಮ್ರಾಜ್ಯಲಕ್ಷ್ಮಿಯು ನಿನ್ನನ್ನು ಸೇರಿದನಂತರ ದೇದೀಪ್ಯಮಾನಳಾಗಿ ಕಾಣುತ್ತಿದ್ದಾಳೆ. ನಿನ್ನ ಅಧೀನರಾಗಿರುವ ಸಾಮಂತರಾಜರು ಹಿಂದೆ ಯುಧಿಷ್ಠಿರನ ಆಜ್ಞಾಧಾರಕರಾಗಿದ್ದಂತೆ ನಿನ್ನ ಆಜ್ಞಾಧಾರಕರಾಗಿ–'ನಾವು ಏನು ಮಾಡಬೇಕೋ ಅಪ್ಪಣೆಯಾಗಲಿ'–ಎಂದು ಹೇಳುತ್ತಾ ಕೈಕಟ್ಟಿ ನಿಂತಿದ್ದಾರೆ. ಸಾಗರಾಂತಳಾದ, ನದೀ-ನದ-ಪರ್ವತಗಳಿಂದಲೂ, ಹಳ್ಳಿ-ಊರು-ಗ್ರಾಮ-ಪಟ್ಟಣ-ದೇಶಗಳಿಂದಲೂ ಪರಿಶೋಭಿತಳಾದ, ಸಕಲವಿಧವಾದ ಖನಿಜಸಂಪತ್ತುಗಳಿಂದಲೂ ಪರಿಪೂರ್ಣಳಾದ ಭೂದೇವಿಯು ಈಗ ನಿನ್ನವಳಾಗಿದ್ದಾಳೆ. ವೇದವಿದರಾದ ಬ್ರಾಹ್ಮಣರಿಂದಲೂ ಮತ್ತು ಸಾಮಂತರಾಜರಿಂದಲೂ ಗೌರವಿಸಲ್ಪಡುತ್ತಿರುವ ನೀನು ದೇವತೆಗಳ ಮಧ್ಯದಲ್ಲಿ ಸಾಕ್ಷಾತ್ ಸೂರ್ಯದೇವನಂತೆಯೇ ನಿನ್ನ ಪ್ರಭಾವದಿಂದ ಈ ಭೂಮಿಯನ್ನು ಬೆಳಗುತ್ತಿರುವೆ. ಏಕಾದಶರುದ್ರರಿಂದ ಪರಿವೃತನಾದ ಯಮನಂತೆಯೂ–ಸಪ್ತ ಮರುತ್ತುಗಳಿಂದ ಸುತ್ತುವರಿಯಲ್ಪಟ್ಟ ಇಂದ್ರನಂತೆಯೂ–ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆಯೂ–ಕುರುರಾಜಪುತ್ರರಿಂದ ಪರಿವೃತನಾದ ನೀನು ಪ್ರಕಾಶಿಸುತ್ತಿರುವೆ.

ಆದರೆ ನೀನಿನ್ನೂ ಜಯಿಸದಿರುವ ಅಥವಾ ನಿನಗೆ ಅಧೀನರಾಗದಿರುವ ಜನರಿನ್ನೂ ಇದ್ದಾರೆ. ಅವರು ಪಾಂಡವರೇ ಆಗಿದ್ದಾರೆ. ನಿನ್ನ ಬುದ್ಧಿವಂತಿಕೆಯಿಂದ ನೀನವರನ್ನು ಕಾಡಿಗಟ್ಟಿ ಅವರಾಳುತ್ತಿದ್ದ ರಾಜ್ಯಗಳೆಲ್ಲವನ್ನೂ ನಿನ್ನ ಸ್ವಾಧೀನಪಡಿಸಿಕೊಂಡಿರುವೆಯೇ ಹೊರತು ನೀನು ಅವರನ್ನು ಯುದ್ಧದಲ್ಲಿ

ಪರಾಭವಗೊಳಿಸಿಲ್ಲ ಮತ್ತು ಅವರು ನಿನ್ನ ಆಜ್ಞಾಧಾರಕರಾಗಿಯೂ ಇರುವುದಿಲ್ಲ. ಶ್ರೀಹೀನರಾಗಿ ವನದಲ್ಲಿ ವಾಸಮಾಡುತ್ತಿರುವ ಆ ಪಾಂಡವರನ್ನು ನೋಡಲು ಹೋಗೋಣ. ಅವರೀಗ ಅನೇಕಾನೇಕ ಬ್ರಾಹ್ಮಣರಿಂದ ಪರಿವೃತರಾಗಿ ದ್ವೈತವೆಂಬ ಸರೋವರದ ಸಮೀಪದಲ್ಲಿರುವ ವನದಲ್ಲಿದ್ದಾರೆಂದು ಈಗತಾನೇ ಧೃತರಾಷ್ಟ್ರನ ಆಸ್ಥಾನಕ್ಕಾಗಮಿಸಿದ ಬ್ರಾಹ್ಮಣನೊಬ್ಬನು ಹೇಳಿದನು.

ನೀನಲ್ಲಿಗೆ ಹೋಗಬೇಕಾದರೆ ಅಟ್ಟಹಾಸದಿಂದಲೇ ಹೋಗಬೇಕು. ಸಕಲಪರಿವಾರದೊಡನೆಯೂ ಹೋಗಬೇಕು. ನಿನ್ನ ಪರಿವಾರವು ಸರ್ವಾಲಂಕಾರಭೂಷಿತವಾಗಿಯೂ ಇರಬೇಕು.

ಸೂರ್ಯನು ನೋಡುವವರ ಕಣ್ಣುಗಳನ್ನು ಚುಚ್ಚುವಂತೆ ಮತ್ತು ತಾಪವನ್ನುಂಟುಮಾಡುವಂತೆ ವೈಭವಪೂರ್ಣವಾದ ಸಮೃದ್ಧಿಯುಳ್ಳ ನೀನು ರಾಜ್ಯಲಕ್ಷ್ಮಿಯಿಂದ ವಿರಹಿತರಾಗಿರುವ ಪಾಂಡವರ ದೇಹ-ಮನಗಳಿಗೆ ಪರಿತಾಪಪಡಿಸು. ಇಂದು ನಿನಗೂ ಮತ್ತು ಅವರಿಗೂ ಇರುವ ಅಂತರವನ್ನಾದರೂ ನೋಡು, ದುರ್ಯೋಧನ!

> ಸ್ಥಿತೋ ರಾಜ್ಯೇ ಚ್ಯುತಾನ್ರಾಜ್ಯಾ-
> ಚ್ಛ್ರಿಯಾ ಹೀನಾಞ್ಛ್ರಿಯಾ ವೃತಃ ।
> ಅಸಮೃದ್ಧಾನ್ಸಮೃದ್ಧಾರ್ಥಃ
> ಪಶ್ಯ ಪಾಣ್ಡುಸುತಾನ್ ನೃಪ ॥೧೫॥

ನೀನಿಂದು ರಾಜ್ಯದಲ್ಲಿ ಪ್ರತಿಷ್ಠಿತನಾಗಿರುವೆ. (ರಾಜ್ಯಾಧಿಪತ್ಯವನ್ನು ಹೊಂದಿರುವೆ.) ಅವರಿಂದು ರಾಜ್ಯದಿಂದ ಭ್ರಷ್ಟರಾಗಿದ್ದಾರೆ. ಅವರಿಂದು ಸಂಪತ್ತಿನಿಂದಲೂ ತತ್ಸಂಬಂಧವಾದ ಕಾಂತಿಯಿಂದಲೂ ಹೀನರಾಗಿದ್ದಾರೆ. ನೀನಿಂದು ಸರ್ವಸಂಪತ್ಸಮೃದ್ಧಿಯನ್ನೂ ಹೊಂದಿ ದಿವ್ಯಕಾಂತಿಯಿಂದ ಬೆಳಗುತ್ತಿರುವೆ. ನಿನಗೆ ಯಾವುದರಲ್ಲಿಯೂ ಕೊರತೆಯೆಂಬುದಿಲ್ಲ. ಆದರೆ ಅವರಿಂದು ದಟ್ಟದರಿದ್ರರಾಗಿದ್ದಾರೆ. ಇಂತಹ ಪಾಂಡವರನ್ನು ಈ ಸಮಯದಲ್ಲಿಯೇ ಕಾಣುವುದು ಸರ್ವಥಾ ಯುಕ್ತವಾಗಿದೆ. ಹತಭಾಗ್ಯರಾದ ಪಾಂಡುಪುತ್ರರನ್ನು ನೋಡಲೇಬೇಕು, ದುರ್ಯೋಧನ!

ದೊಡ್ಡಕುಲದಲ್ಲಿ ಹುಟ್ಟಿರುವ, ಮಹಾತೇಜಸ್ವಿಯಾದ, ನಹುಷನ ಮಗನಾದ ಯಯಾತಿಯಂತೆ–ಅನೇಕಾನೇಕ ಅನುಯಾಯಿಗಳಿಂದ ಕೂಡಿರುವ, ಸಕಲವಿಧವಾದ ಸಂಪತ್ತಿಗೂ ಒಡೆಯನಾದ, ವೈಭವಪೂರ್ಣನಾದ, ಸರ್ವಾಲಂಕಾರಸಂಪನ್ನನಾದ ನಿನ್ನನ್ನು ಪಾಂಡವರು ತಮ್ಮ ತೆರೆದ ಕಣ್ಣುಗಳಿಂದ ನೋಡಲಿ.

**ಯಾಂ ಶ್ರಿಯಂ ಸುಹೃದಶ್ಚೈವ ದುರ್ಹೃದಶ್ಚ ವಿಶಾಮ್ಪತೇ ।**
**ಪಶ್ಯನ್ತಿ ಪುರುಷೇ ದೀಪ್ತಾಂ ಸಾ ಸಮರ್ಥಾ ಭವತ್ಯುತ ॥೧೭॥**

ಒಬ್ಬ ಪುರುಷನಿಗೆ ಪ್ರಾಪ್ತವಾದ ಸಂಪತ್ತಿಯನ್ನು ಅವನ ಮಿತ್ರರೂ ಮತ್ತು ಶತ್ರುಗಳೂ ನೋಡಬೇಕು. ಇದರಿಂದ ಮಿತ್ರರ ಹೃದಯಗಳಲ್ಲಿ ಸಂತೋಷವೂ–ಶತ್ರುಗಳ ಹೃದಯಗಳಲ್ಲಿ ದುಃಖವೂ ಏಕಕಾಲದಲ್ಲಿ ಉಂಟಾಗುವುದು. ಇಂತಹ ಸಂಪತ್ತೇ ಸಮರ್ಥವಾಗುತ್ತದೆ.

**ಸಮಸ್ಥೋ ವಿಷಮಸ್ಥಾನ್ಹಿ ದುರ್ಹೃದೋ ಯೋಽಭಿವೀಕ್ಷತೇ ।**
**ಜಗತೀಸ್ಥಾನಿವಾದ್ರಿಸ್ಥಃ ಕಿಮತಃ ಪರಮಂ ಸುಖಮ್ ॥೧೮॥**

ಶತ್ರುವಿನ ವಿನಾಶದಿಂದ ಜಯಶಾಲಿಯಾದವನಿಗೆ ಸುಖವುಂಟಾಗಬಹುದು. ಆದರೆ 'ಶತ್ರುವು ಬದುಕಿರಬೇಕು. ಗೆದ್ದವನ ಕಣ್ಣೆದುರಿನಲ್ಲಿಯೇ ಅವನು ದೈನ್ಯದಿಂದ ಜೀವನವನ್ನು ಸಾಗಿಸುತ್ತಿರಬೇಕು.' ಅಂತಹವನನ್ನು ನೋಡುವುದಕ್ಕಿಂತಲೂ ಅಧಿಕವಾದ ಪರಮಸುಖವು ಮತ್ತೊಂದಿಲ್ಲ. ಉಚ್ಚಸ್ಥಾನದಲ್ಲಿ ತಾನಿದ್ದುಕೊಂಡು ಅಧೋಗತಿಗಿಳಿದಿರುವ ದಯನೀಯರಾದ ತನ್ನ ಶತ್ರುಗಳನ್ನು ಯಾವನು ನೋಡುತ್ತಾನೆಯೋ ಅವನು–ಪರ್ವತದ ಶಿಖರವನ್ನು ಹತ್ತಿರುವವನು ಭೂಮಿಯ ಮೇಲೆ ನಡೆಯುತ್ತಿರುವವರನ್ನು ಕಂಡು ಅವರನ್ನು ಹೀಯಾಳಿಸಿ ತಾನು ಉನ್ನತಸ್ಥಾನದಲ್ಲಿರುವೆನೆಂದು ಭಾವಿಸಿ ಸಂತೋಷಿಸುವಂತೆ–ಸಂತೋಷಿಸುತ್ತಾನೆ. ಇದಕ್ಕಿಂತಲೂ ಅಧಿಕವಾದ ಪರಮಸುಖವೆಂಬುದು ಬೇರೊಂದಿಲ್ಲ, ದುರ್ಯೋಧನ!

**ನ ಪುತ್ರಧನಲಾಭೇನ ನ ರಾಜ್ಯೇನಾಪಿ ವಿನ್ದತಿ ।**
**ಪ್ರೀತಿಂ ನೃಪತಿಶಾರ್ದೂಲ ಯಾಮಮಿತ್ರಾಘದರ್ಶನಾತ್ ॥೧೯॥**

ಶತ್ರುಗಳು ದುಃಖದಲ್ಲಿರುವ ಪರಿಸ್ಥಿತಿಯನ್ನು ನೋಡುವುದರಿಂದ

ಪ್ರಾಪ್ತವಾಗುವ ಆನಂದವು ಅಪರಿಮಿತವಾದುದು. ಮಹಾರಾಜ! ಈ ವಿಧವಾದ ಆನಂದವು ಪುತ್ರಲಾಭದಿಂದಾಗಲೀ, ರಾಜ್ಯಲಾಭದಿಂದಾಗಲೀ ಪ್ರಾಪ್ತವಾಗುವುದಿಲ್ಲ. ಸಿದ್ಧಾರ್ಥನಾದ, ಸಕಲಸಂಪತ್ಸಮೃದ್ಧಿಯುಳ್ಳ ನೀನು, ಗುಡಿಸಲಿನಲ್ಲಿ ವಾಸಮಾಡುತ್ತಾ, ಉಡಲು ಬಟ್ಟೆಯಿಲ್ಲದೇ ಮಾನವನ್ನು ಮುಚ್ಚಿಕೊಳ್ಳಲು ನಾರುಬಟ್ಟೆಯನ್ನೂ ಚರ್ಮವನ್ನೂ ಉಟ್ಟಿರುವ ಶತ್ರುವಾದ ಧನಂಜಯನ ದುರವಸ್ಥೆಯನ್ನು ನೋಡುವುದಕ್ಕಿಂತಲೂ ಹೆಚ್ಚಿನ ಆನಂದವು ಬೇರಾವುದಿದೆ? ಇಷ್ಟು ಮಾತ್ರವಲ್ಲ. ನಿನ್ನ ಪತ್ನಿಯರೂ ಸಹ ನಾನಾವಿಧವಾದ ಅನರ್ಘ್ಯವಾದ ಆಭರಣಗಳನ್ನು ಧರಿಸಿಕೊಳ್ಳಲಿ. ಅಮೂಲ್ಯವಾದ ಪೀತಾಂಬರಗಳನ್ನುಟ್ಟುಕೊಳ್ಳಲಿ. ಸಖಿಯರಿಂದ ಸಂಸೇವ್ಯಮಾನರಾಗಿ ಚೀರ-ಕೃಷ್ಣಾಜಿನಗಳನ್ನು ಧರಿಸಿರುವ ತಾಪಸೀವೇಷದಲ್ಲಿರುವ ದ್ರೌಪದಿಯನ್ನು ಅಟ್ಟಹಾಸದಿಂದ ಕಾಣಲಿ. ಅದರಿಂದವಳ ಮಾನಸಿಕ ಸಂಕಟವು ನೂರ್ಮಡಿಯಾಗುವುದು. ಅವಳಿಗೆ ತನ್ನ ಜೀವಿತದಲ್ಲಿಯೇ ಸಂಪೂರ್ಣವಾದ ನಿರಾಸೆಯುಂಟಾಗುವುದು.

ಐಶ್ವರ್ಯದಿಂದ ಹೀನವಾದ ತನ್ನ ಜೀವನವನ್ನು ತಾನೇ ಹಳಿದು ಕೊಳ್ಳುವಂತಾಗುವುದು. ಸರ್ವಾಲಂಕಾರಭೂಷಿತೆಯರಾದ ನಿನ್ನ ಭಾರ್ಯೆಯರನ್ನು ಕಂಡೊಡನೆಯೇ ಅವಳಿಗೆ ತನ್ನ ಹಿಂದಿನ ವೈಭವಗಳೆಲ್ಲವೂ ನೆನಪಿಗೆ ಬರುವುವು. ಹಿಂದೆ ದುಃಶಾಸನನು ಸಭೆಯಲ್ಲಿ ಮಾಡಿದ ಅವಮಾನದಿಂದುಂಟಾದ ಸಂಕಟಕ್ಕಿಂತಲೂ ಹೆಚ್ಚಾದ ಸಂಕಟವು ಸರ್ವಾಂಗಭೂಷಿತೆಯರಾದ ನಿನ್ನ ಪತ್ನಿಯರನ್ನು ನೋಡಿದಾಗ ಉಂಟಾಗುವುದು."

ಜನಮೇಜಯ! ಶಕುನಿ-ಕರ್ಣರು ಜೊತೆಗೂಡಿ ದುರ್ಯೋಧನನಿಗೆ ಹೀಗೆಂದು ಹೇಳಿ ವಿರಮಿಸಿದರು.

(ಈ ಪ್ರಕರಣದಲ್ಲಿ ಶಕುನಿ-ಕರ್ಣರು ದುರ್ಯೋಧನನನ್ನು ಕುರಿತು ಹೇಳುವುದನ್ನು ಓದಿದರೆ ನಿಶ್ಚಯವಾಗಿಯೂ ಬೇಸರಿಕೆಯಾಗುವುದು ನಿಶ್ಚಯ. ಆದರೆ ಪ್ರಪಂಚದಲ್ಲಿ ಒಬ್ಬನ ಅಧೋಗತಿಯನ್ನು ನೋಡಿ ಸಂತೋಷಿಸುವವರೇ ಹೇರಳವಾಗಿದ್ದಾರೆ. ಉನ್ನತಸ್ಥಾನದಲ್ಲಿದ್ದವನನ್ನು ಅಧೋಗತಿಗಿಳಿಸಲು ಜನರು ಹೆಚ್ಚು-ಹೆಚ್ಚು ಪ್ರಯತ್ನಿಸುತ್ತಾರೆ. ಕೆಳಗೆ ಬಿದ್ದವನನ್ನು

ಮೇಲಕ್ಕೆತ್ತಬೇಕೆನ್ನುವ ಅಥವಾ ಉದ್ಧರಿಸಬೇಕೆನ್ನುವ ಬುದ್ಧಿ ಮೂಡುವುದು ಅತಿವಿರಳ. ಅದರಲ್ಲಿಯೂ ಪರಸ್ಪರ ವಿರೋಧವಿದ್ದರಂತೂ ಹೇಳಬೇಕಾಗಿಯೇ ಇಲ್ಲ. ತಮ್ಮ ಶತ್ರುವಿನ ಅಧೋಗತಿಗೆ ಇಲ್ಲ-ಸಲ್ಲದ ಕಾರಣಗಳನ್ನೆಲ್ಲಾ ಸೇರಿಸಿ ಹೇಳಿ, ಅವನ ವಿಷಯದಲ್ಲಿ ಯಾರಿಗೂ ಯಾವ ವಿಧವಾದ ಅನುತಾಪವೂ ಉಂಟಾಗದಂತೆ ಮಾಡುತ್ತಾರೆ. ಸುಖ-ದುಃಖಗಳು, ಐಶ್ವರ್ಯ-ದಾರಿದ್ರ್ಯಗಳು, ಯೌವನ-ವಾರ್ಧಕ್ಯಗಳು, ಹಗಲು-ರಾತ್ರಿಗಳು ಒಂದರ ಪಕ್ಕದಲ್ಲಿಯೇ ಮತ್ತೊಂದಿದೆಯೆಂದೂ ಯಾರೂ ಯಾವಾಗಲೂ ಭಾವಿಸುವುದಿಲ್ಲ. ಇದು ಪ್ರಪಂಚದಲ್ಲಿ ಸರ್ವಸಾಮಾನ್ಯರ ಸ್ವಾಭಾವಿಕಗುಣವಾಗಿರುತ್ತದೆ.)

೨೩೭ನೆಯ ಅಧ್ಯಾಯವು ಮುಗಿಯಿತು.

೨೩೮ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಕರ್ಣ-ಶಕುನಿಯರೊಡನೆ ದುರ್ಯೋಧನನ ಮಂತ್ರಾಲೋಚನೆ : ಘೋಷಯಾತ್ರಾನಿಮಿತ್ತದಿಂದ ದ್ವೈತವನಕ್ಕೆ ಹೋಗಲು ಕರ್ಣಾದಿಗಳು ಧೃತರಾಷ್ಟ್ರನಿಂದ ಅನುಮತಿಯನ್ನು ಪಡೆದುಕೊಳ್ಳಲು ನಿಶ್ಚಯಿಸಿದುದು

ಜನಮೇಜಯ! ಕರ್ಣನ ಮಾತುಗಳನ್ನು ಕೇಳಿ ದುರ್ಯೋಧನನಿಗೆ ಅಮಿತವಾದ ಆನಂದವುಂಟಾಯಿತು. ಆದರೆ ಮರುಕ್ಷಣದಲ್ಲಿಯೇ ಮುಖವು ಕಪ್ಪಿಟ್ಟಿತು. ಬಹುದೀನತೆಯಿಂದ ಕೂಡಿದ ದುರ್ಯೋಧನನು ಕರ್ಣನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಕರ್ಣ! ನೀನು ಹೇಳುವ ಮೊದಲೇ ನನ್ನ ಮನಸ್ಸಿಗೂ ಈ ಯೋಚನೆಯು ಹೊಳೆದಿದ್ದಿತು. ಆದರೆ ಪಾಂಡವರಿರುವೆಡೆಗೆ ಹೋಗಲು ನನಗೆ ಅನುಜ್ಞೆಯು ಮಾತ್ರ ಖಂಡಿತವಾಗಿಯೂ ಸಿಕ್ಕಲಾರದು. ಧೃತರಾಷ್ಟ್ರರಾಜನು ನಿಶ್ಚಯವಾಗಿಯೂ ಪಾಂಡವರ ವಿಷಯದಲ್ಲಿ ಬಹಳ ಅನುಕಂಪವನ್ನಿಟ್ಟಿದ್ದಾನೆ. ಮೇಲಾಗಿ ತಪಶ್ಚರ್ಯಾದಿಗಳಿಂದ ಇತ್ತೀಚೆಗೆ ಪಾಂಡವರು ಬಹಳ ಬಲಿಷ್ಠರಾಗಿಬಿಟ್ಟಿದ್ದಾರೆಂಬ ಭಾವನೆಯೂ ಸಹ ಅವನಿಗುಂಟಾಗಿದೆ. ರಾಜನೇನಾದರೂ ನಮ್ಮ ಮನೋಗತವಾದ ಆಶಯವನ್ನು ತಿಳಿದರೆ ಮುಂದಿನ ಆಗು-ಹೋಗು

ಗಳನ್ನು ಯೋಚಿಸಿ ನಮ್ಮನ್ನಲ್ಲಿಗೆ ಕಳುಹಲು ಖಂಡಿತವಾಗಿಯೂ ಸಮ್ಮತಿಸುವುದಿಲ್ಲ. ಅಥವಾ ಬೇರಾವುದಾದರೂ ನೆಪಮಾಡಿ ಅಲ್ಲಿಗೆ ಹೋಗೋಣವೆಂದರೆ ಪಾಂಡವರನ್ನು ನಾಶಮಾಡುವ ಕಾರ್ಯದ ಹೊರತಾಗಿ ಬೇರಾವ ಕಾರ್ಯವೂ ಆ ದ್ವೈತವನದಲ್ಲಿ ನಮಗಿರುವುದಿಲ್ಲ. ಪಗಡೆಯಾಟದ ಕಾಲದಲ್ಲಿ ನಿಮಗೂ ಮತ್ತು ನನಗೂ ವಿದುರನು ಹೇಳಿದ್ದ ಮಾತುಗಳು ನಿಮ್ಮೆಲ್ಲರಿಗೂ ತಿಳಿದೇ ಇರುವುದು. ಆಗಿನ ಸಮಯದಲ್ಲಿ ಅವನು ಹೇಳಿದ ಮಾತುಗಳನ್ನೂ ಮತ್ತು ಪಾಂಡವರ ವಿಷಯದಲ್ಲಿ ಪ್ರಜೆಗಳು ತೋರಿದ ಅನುತಾಪವನ್ನೂ ನೆನೆದು ನಾನು ಈ ಸಮಯದಲ್ಲಿ ಅವರ ಬಳಿಗೆ ಹೋಗುವುದು ಯುಕ್ತವೇ? ಎಂಬ ವಿಷಯವಾಗಿ ಆಲೋಚಿಸುತ್ತಿದ್ದೇನೆ. ಹೋಗುವುದೇ? ಬೇಡವೇ? ಎಂಬ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ನಿಶ್ಚಯವಿಲ್ಲ. ಮನಸ್ಸು ಡೋಲಾಯಮಾನವಾಗಿದೆ. ಆದರೆ ಮುಂದಾಗುವ ಪ್ರತಿಕ್ರಿಯೆಯ ವಿಷಯವಾಗಿ ಮನಸ್ಸು ಹಿಂಜರಿದರೂ ಅರಣ್ಯವಾಸದಿಂದ ಬಹಳ ಕ್ಲೇಶಿತರಾಗಿರುವ (ಬಳಲಿ ಕೃಶರಾಗಿರುವ) ದ್ರೌಪದಿಯೊಡನಿರುವ ಭೀಮಾರ್ಜುನರನ್ನು ನೋಡುವುದರಿಂದ ನನ್ನ ಮನಸ್ಸಿಗೇನೋ ಮಹಾನಂದವಾಗುವುದಂತೂ ನಿಶ್ಚಯ.

ನನ್ನ ಜನ್ಮಶತ್ರುಗಳಾದ ಪಾಂಡವರು ಜಟೆಯನ್ನು ಧರಿಸಿ, ನಾರುಮಡಿಗಳನ್ನುಟ್ಟು, ಅನಾಥರಂತೆ ಕಾಡು-ಮೇಡುಗಳಲ್ಲಿ ತಿರುಗುತ್ತಿರುವುದನ್ನು ನೋಡುವುದರಿಂದ ಉಂಟಾಗುವ ಸಂತೋಷವು ನನಗೆ ಅಖಂಡಸಾಮ್ರಾಜ್ಯವನ್ನು ಪಡೆದುದಕ್ಕಿಂತಲೂ ಮಿಗಿಲಾಗುತ್ತದೆ. ಚಿಂದೀಬಟ್ಟೆಯನ್ನು (ಕಾವೀ ಬಟ್ಟೆಯನ್ನು ) ಧರಿಸಿ ಕಾಡಿನಲ್ಲಿ ತಿರುಗಾಡುತ್ತಿರುವ ದ್ರೌಪದಿಯನ್ನು ಅವಳ ಈ ಸ್ಥಿತಿಯಲ್ಲಿ ನೋಡುವುದರಿಂದ ಪ್ರಾಪ್ತವಾಗುವ ಆನಂದಕ್ಕಿಂತಲೂ ಹೆಚ್ಚಿನ ಆನಂದವು ನನಗೆ ಬೇರಾವುದರಿಂದ ಲಭ್ಯವಾಗುತ್ತದೆ? ಯುಧಿಷ್ಠಿರ-ಭೀಮರು ನನ್ನ ಪ್ರಾದುರ್ಭಾವದ ಪರಾಕಾಷ್ಠೆಯನ್ನು ನೋಡುವುದರಿಂದಲೇ ನನಗೆ ಆನಂದದ ಪಾರವನ್ನು ಕಂಡಂತಾಗುವುದು. ನನ್ನ ಜೀವನವು ಸಾರ್ಥಕ್ಯವನ್ನು ಹೊಂದಿದಂತಾಗುವುದು. ಆದರೆ ಯಾವ ನೆಪಮಾಡಿಕೊಂಡು ಅವರೀಗ ವಾಸಮಾಡುತ್ತಿರುವ ದ್ವೈತವನಕ್ಕೆ ಹೋಗಬೇಕೆಂಬುದರ ವಿಷಯವಾಗಿ ನನಗಿನ್ನೂ ಉಪಾಯವು ಹೊಳೆದಿರುವುದಿಲ್ಲ. ನಾವು ಉಪಾಯಾಂತರದಿಂದ ಅಲ್ಲಿಗೆ ಹೋಗಬೇಕಾಗಿದೆ. ಮತ್ತು ನಮ್ಮ ಪ್ರಯಾಣಕ್ಕೆ ರಾಜನ ಅನುಮತಿಯನ್ನೂ

ಪಡೆದೇ ಹೋಗಬೇಕಾಗಿದೆ. ಆದುದರಿಂದ ಕರ್ಣ! ನೀನು ಶಕುನಿಯೊಡನೆಯೂ, ದುಃಶಾಸನನೊಡನೆಯೂ, ಸಮಾಲೋಚನೆ ನಡೆಸಿ, ದ್ವೈತವನಕ್ಕೆ ಹೋಗಲು ಯೋಗ್ಯವಾದ ಉಪಾಯವನ್ನು ಯೋಚಿಸು. ಬೇರೆಯ ಕಾರಣ



ವನ್ನು ಮುಂದುಮಾಡಿ ರಾಜನ ಅನುಮತಿಯನ್ನು ಪಡೆದು ನಾವು ದ್ವೈತವನಕ್ಕೆ ಹೋಗಿಯೇ ತೀರಬೇಕು. ಅಷ್ಟರೊಳಗಾಗಿ ನಾನೂ ಸಹ ಈ ಸಮಯದಲ್ಲಿ ಪಾಂಡವರ ಬಳಿಗೆ ಹೋಗುವುದು ಯುಕ್ತವೇ ಅಯುಕ್ತವೇ ಎಂಬ ವಿಷಯವಾಗಿ ಒಂದು ನಿರ್ಧಾರಕ್ಕೆ ಬರುತ್ತೇನೆ. ನಿಮ್ಮ ಸಮಾಲೋಚನೆಯ ಫಲಿತಾಂಶವು ತಿಳಿದನಂತರ ನಾಳೆಯೇ ಧೃತರಾಷ್ಟ್ರನ ಬಳಿಗೆ ಹೋಗುತ್ತೇನೆ. ನಾನು ನಮ್ಮ ತಂದೆಯೊಡನೆಯೂ ಭೀಷ್ಮನೊಡನೆಯೂ ಕುಳಿತಿರುವಾಗ ನೀನು ಶಕುನಿಯೊಡನೆ ಆಗಮಿಸಿ ದ್ವೈತವನಕ್ಕೆ ಪ್ರಯಾಣಮಾಡಬೇಕಾಗಿರುವ

ವಿಷಯವನ್ನು ನಮ್ಮ ಮುಂದಿಡು. ನಮ್ಮ ತಂದೆ ಮತ್ತು ಭೀಷ್ಮರು ಈ ವಿಷಯವಾಗಿ ಏನು ಹೇಳುತ್ತಾರೆಂಬುದನ್ನು ಕೇಳಿದನಂತರ ನಾನು ಅಂತ್ಯ ನಿರ್ಧಾರವನ್ನು ಕೈಗೊಂಡು ಅದಕ್ಕೆ ಒಪ್ಪುವಂತೆ ಭೀಷ್ಮನನ್ನೂ ನಮ್ಮ ತಂದೆಯನ್ನೂ ಕೇಳಿಕೊಳ್ಳುವೆನು.”

ದುರ್ಯೋಧನನು ಹೇಳಿದ ಮಾತುಗಳನ್ನು ಕೇಳಿ, ‘ಹಾಗೆಯೇ ಆಗಲಿ’ ಎಂದು ಹೇಳಿ, ಶಕುನಿ-ಕರ್ಣರು ತಮ್ಮ-ತಮ್ಮ ನಿವಾಸಗಳಿಗೆ ಹೊರಟು ಹೋದರು.

ಮರುದಿನ ಬೆಳಗಾಗುತ್ತಲೇ ಕರ್ಣನು ರಾಜನ ಅರಮನೆಗೆ ಆಗಮಿಸಿ ದುರ್ಯೋಧನನನ್ನು ಕಂಡು ನಗು-ನಗುತ್ತಾ ಈ ಮಾತುಗಳನ್ನು ಹೇಳಿದನು :

“ವಯಸ್ಯ! ದ್ವೈತವನಕ್ಕೆ ಹೋಗಲು ನಾನೀಗಲೇ ಒಂದು ಉಪಾಯವನ್ನು ಯೋಚಿಸಿರುವೆನು. ಈಗ ನಮ್ಮ ಗೋವುಗಳ ದೊಡ್ಡಿಗಳು (ಗೊಲ್ಲರ ಹಳ್ಳಿಗಳು) ದ್ವೈತವನದಲ್ಲಿವೆ. ಅವುಗಳು ನಿನ್ನ ಪ್ರತೀಕ್ಷೆಯಲ್ಲಿವೆ. ಅಲ್ಲಿರುವ ಗೋವುಗಳನ್ನು ರಾಜನು ಆಗಿಂದಾಗ್ಗೆ ಪರಿಶೀಲಿಸುವುದು ಹಿಂದಿನಿಂದಲೂ ಬಂದಿರುವ ಪದ್ಧತಿಯಾಗಿದೆ. ಆದುದರಿಂದ ಗೋವುಗಳನ್ನು ಸಂಧಿಸಲು ಯಾತ್ರೆ ಹೋಗಬೇಕೆಂದರೆ ಯಾರೂ ಬೇಡವೆನ್ನಲಾರರು. ಇದನ್ನೇ ಮುಂದೆ ಮಾಡಿ ಹೇಳಿ ಘೋಷಯಾತ್ರೆಗೆ ಹೋಗಬೇಕೆನ್ನುವುದಾದರೆ ನಿಮ್ಮ ತಂದೆಯು ಖಂಡಿತವಾಗಿಯೂ ಬೇಡವೆನ್ನಲಾರನು. ಅವನ ಅನುಮತಿಯು ಸಿಕ್ಕಿಯೇ ತೀರುವುದು.”

ದುರ್ಯೋಧನ-ಕರ್ಣರು ಹೀಗೆಂದು ಮಾತನಾಡುತ್ತಿದ್ದಾಗ ಗಾಂಧಾರ ರಾಜನಾದ ಶಕುನಿಯು ಆಗಮಿಸಿ ಕರ್ಣನು ಹಾಕಿಕೊಟ್ಟ ಯೋಜನೆಯನ್ನು ಕೇಳಿ ನಗೆಯ ಮುಖಭಾವದಿಂದ ಹೀಗೆಂದು ಹೇಳಿದನು :

“ನಿಶ್ಚಯವಾಗಿಯೂ ನಿಮ್ಮ ಈ ಯೋಜನೆಯು ಯಾವ ವಿಧವಾದ ತೊಂದರೆಯೂ ಇಲ್ಲದೆ ನೆರವೇರುವುದು. ಇದನ್ನೇ ನಾನೂ ಸಹ ಯೋಚಿಸುತ್ತಿದ್ದೆನು. ಈ ಕಾರಣವನ್ನೇ ನಾವು ಮುಂದುಮಾಡಿ ಹೇಳಿದರೆ ರಾಜನು ಖಂಡಿತವಾಗಿಯೂ ನಾವಲ್ಲಿಗೆ ಹೋಗಲು ಅನುಮತಿಯನ್ನು ನೀಡುವನು. ಅಥವಾ ತಾನಾಗಿಯೇ ನಮ್ಮನ್ನು ಅಲ್ಲಿಗೆ ಹೋಗುವಂತೆ ಎಚ್ಚರಿಸಲೂ

ಬಹುದು. ನಮ್ಮ ಗೋಶಾಲೆಗಳು ದ್ವೈತವನದಲ್ಲಿ ನಮಗಾಗಿ ಪ್ರತೀಕ್ಷೆಮಾಡುತ್ತಿವೆ. ಗೋವುಗಳ ಮೇಲ್ವಿಚಾರಣೆಮಾಡುವ ವ್ಯಾಜದಿಂದ ನಾವೆಲ್ಲರೂ ಈಗಲೇ ದ್ವೈತವನಕ್ಕೆ ಪ್ರಯಾಣಮಾಡೋಣ. ಈ ಯೋಜನೆಯು ನಮಗೆ ಹೊಳೆದ ನಂತರ ನಾವು ದ್ವೈತವನಕ್ಕೆ ಹೋಗುವುದರಲ್ಲಿ ಯಾವ ತಡೆಯೂ ಇಲ್ಲ. ದುರ್ಯೋಧನ!"

ಶಕುನಿಯು ಹೀಗೆಂದು ಹೇಳಲು ಮೂವರೂ ಸಹ ಗಹಗಹಿಸಿ ನಕ್ಕರು. ಪರಸ್ಪರ ಕೈಕುಲುಕಿದರು. ಘೋಷಯಾತ್ರಾವ್ಯಾಜವನ್ನೇ ಮುಂದುಮಾಡಿ ರಾಜನ ಅನುಮತಿಯನ್ನು ಪಡೆಯಬೇಕೆಂಬುದಾಗಿ ನಿಶ್ಚಯಿಸಿ ಎಲ್ಲರೂ ಸೇರಿ ಧೃತರಾಷ್ಟ್ರನ ಬಳಿಗೆ ತೆರಳಿದರು.

೨೩೮ನೆಯ ಅಧ್ಯಾಯವು ಮುಗಿಯಿತು.

೨೩೯ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಕರ್ಣಾದಿಗಳು ಧೃತರಾಷ್ಟ್ರನ ಮುಂದೆ ಘೋಷಯಾತ್ರೆಗಾಗಿ ದ್ವೈತವನಕ್ಕೆ ಹೋಗುವ ಪ್ರಸ್ತಾಪಮಾಡಿದುದು : ರಾಜನ ಅಸಮ್ಮತಿ : ಶಕುನಿಯು ಸಮಾಧಾನಹೇಳಿದುದು : ರಾಜನು ಸಮ್ಮತಿಸಿದುದು : ದುರ್ಯೋಧನನ ಪ್ರಸ್ಥಾನ

ಜನಮೇಜಯ! ಅನಂತರದಲ್ಲಿ ಅವರೆಲ್ಲರೂ ಧೃತರಾಷ್ಟ್ರನ ಬಳಿಗೆ ಹೋಗಿ ಕುಶಲಪ್ರಶ್ನೆಮಾಡಿದರು. ರಾಜನೂ ಸಹ ಕುಶಲಿಯಾಗಿರುವೆನೆಂದು ಹೇಳಿ, 'ನೀವೆಲ್ಲರೂ ಕುಶಲಿಗಳಾಗಿರುವಿರಾ?' ಎಂದು ಪ್ರಶ್ನಿಸಿದನು. ಕರ್ಣಾದಿಗಳು ಮಾಡಿದ್ದ ಪೂರ್ವಯೋಜನೆಯಂತೆ ಆ ಸಮಯಕ್ಕೆ ಸರಿಯಾಗಿ ಸಮಂಗನೆಂಬ ಗೋಪಾಲನು ಧೃತರಾಷ್ಟ್ರನ ಸಮೀಪಕ್ಕೆ ಬಂದು ರಾಜನಿಗೆ ಯಥಾವಿಧಿಯಾಗಿ ನಮಸ್ಕರಿಸಿ, ಹಸುಗಳ ಗುಂಪು ಸಮೀಪಸ್ಥವಾಗಿರುವ ಸಮಾಚಾರವನ್ನು ವಿಜ್ಞಾಪಿಸಿದನು. ರಾಜನು ಉತ್ತರಿಸುವ ಮೊದಲೇ ಕರ್ಣ-ಶಕುನಿಯರು ರಾಜನನ್ನು ಕುರಿತು ಹೇಳಿದರು : "ಮಹಾರಾಜ! ಈ ಸಮಯದಲ್ಲಿ ನಮ್ಮ ಗೋವುಗಳ ಸಮೂಹವು ಬಹಳ ರಮಣೀಯವಾದ ಪ್ರದೇಶದಲ್ಲಿದೆ. ಅವುಗಳ ವಯಸ್ಸನ್ನು ತಿಳಿಯಲು, ಅವುಗಳನ್ನು ಯಥಾಯೋಗ್ಯವಾಗಿ ವಿಂಗಡಿಸಲು ಮತ್ತು ಅವುಗಳ ಕರುಗಳನ್ನೂ ಸಹ ಗುರುತಿಸಲು ಇದು

ಯೋಗ್ಯವಾದ ಕಾಲವಾಗಿದೆ. ಗೋವುಗಳ ಸಂಖ್ಯೆಯನ್ನೂ ನಾವು ಅವಶ್ಯವಾಗಿ ತಿಳಿಯಬೇಕಾಗಿದೆ. ಮೇಲಾಗಿ ಇದು ನಿನ್ನ ಮಗನು ಬೇಟೆಯಾಡಲು ಯೋಗ್ಯವಾದ ಕಾಲವೂ ಆಗಿದೆ. ಆದುದರಿಂದ ಗೋವುಗಳ ಪರಿಶೀಲನೆಗೆ ನಿನ್ನ ಮಗನಾದ ದುರ್ಯೋಧನನಿಗೆ ಅನುಮತಿಯನ್ನಿತ್ತು ಕಳುಹಿಸಿಕೊಡುವುದು ನಿನಗೆ ಯುಕ್ತವಾಗಿದೆ.”



“ಮಗು, ಕರ್ಣ! ಮೃಗಗಳನ್ನು ಬೇಟೆಯಾಡುವುದೂ ಮತ್ತು ಗೋವುಗಳನ್ನು ಕಾಲ-ಕಾಲಕ್ಕೆ ಪರೀಕ್ಷಿಸುತ್ತಿರುವುದೂ ರಾಜರಿಗೆ ಯುಕ್ತವೇ ಸರಿ. ಗೋರಕ್ಷಣೆಯ ವಿಷಯದಲ್ಲಿ ನಾವು ಕೇವಲ ಗೋಪಾಲಕರನ್ನೇ ನಂಬಿ ಕುಳಿತುಕೊಳ್ಳಕೂಡದು. ನಾವು ಸಹ ಪದೇ-ಪದೇ ನಮ್ಮ ಗೋಧನವನ್ನು

ಪರೀಕ್ಷಿಸುತ್ತಿರಬೇಕು. ಆದರೆ ಪುರುಷವ್ಯಾಘ್ರರಾದ ಪಾಂಡವರು ಈಗ ಆ ಗೋವುಗಳ ಸಮೀಪದಲ್ಲಿಯೇ ಅರಣ್ಯ (ದ್ವೈತವನ)ದಲ್ಲಿ ವಾಸಮಾಡುತ್ತಿದ್ದಾರೆಂಬ ವಾರ್ತೆಯನ್ನು ಕೇಳಿದೆನು. ಆದುದರಿಂದ ಈ ಸಮಯದಲ್ಲಿ ನೀವು ಖಂಡಿತವಾಗಿಯೂ ಅಲ್ಲಿಗೆ ಹೋಗಬಾರದೆಂಬುದು ನನ್ನ ಅಭಿಪ್ರಾಯವಾಗಿದೆ. ಅವರನ್ನು ನಾವು ಕಪಟದ್ಯೂತದಲ್ಲಿ ಸೋಲಿಸಿ ಕಾಡಿಗಟ್ಟಿದೆವು. ಅವರಿಂದು ಕಾಡಿನ ಮಧ್ಯದಲ್ಲಿದ್ದುಕೊಂಡು ಬಹಳ ಕಷ್ಟಪಡುತ್ತಿದ್ದಾರೆ. ಯದ್ಯಪಿ ಈಗ ಅವರು ತಪೋನಿಷ್ಠರೂ ಆಗಿದ್ದಾರೆ. ಸಮರ್ಥರಾದ ಮಹಾರಥರೂ ಆಗಿದ್ದಾರೆ. ಧರ್ಮರಾಜನೇನೋ ಸಾಮಾನ್ಯವಾಗಿ ಕೋಪಗೊಳ್ಳುವುದಿಲ್ಲ. ಆದರೆ ಭೀಮನು ಮಹಾಕೋಪಿಷ್ಠ. ಯಜ್ಞಸೇನನ ಮಗಳಾದ ದ್ರೌಪದಿಯು ಸಾಕ್ಷಾತ್ ತೇಜಸ್ಸಿನ ಮೂರ್ತಿಯೇ ಆಗಿರುತ್ತಾಳೆ.

ದರ್ಪ-ದುರಭಿಮಾನಗಳಿಂದ ಕೂಡಿರುವ ನೀವು ಪಾಂಡವರ ವಿಷಯದಲ್ಲಿ ಅಪರಾಧವನ್ನೆಸಗುವುದಂತೂ ನಿಶ್ಚಯ. ಕಾಡಿಗೆ ಹೋದನಂತರ ತಪಸ್ಸಿನಲ್ಲಿಯೇ ನಿರತರಾಗಿರುವ ಅವರು ತಮ್ಮ ತಪಃಶಕ್ತಿಯಿಂದ ನಿಮ್ಮನ್ನು ದಹಿಸಿಬಿಟ್ಟಾರು! ಅಥವಾ ತಪಃಶಕ್ತಿಯಿಂದ ನಿಮ್ಮನ್ನು ದಹಿಸದಿದ್ದರೂ ನಿಮ್ಮ ವಿಷಯದಲ್ಲಿ ಕೋಪಾವಿಷ್ಟರಾದ ಅವರು ಶಸ್ತ್ರಪಾಣಿಗಳಾಗಿ ಯುದ್ಧಕ್ಕೆ ಬಂದು ನಿಮ್ಮೆಲ್ಲರನ್ನೂ ತಮ್ಮ ದಿವ್ಯಾಸ್ತ್ರಗಳಿಂದಾದರೂ ಭಸ್ಮಮಾಡಿಬಿಡಬಹುದು. ನೀವು ಬಹುಸಂಖ್ಯೆಯಲ್ಲಿರುವುದರಿಂದ ಕೇವಲ ಐದು ಮಂದಿಯನ್ನು ಪರಾಜಯಗೊಳಿಸಿಬಿಡಬಹುದೆಂದೂ ನೀವು ಭಾವಿಸಿರಬಹುದು. ಮೊದಲನೆಯದಾಗಿ : ಅಲ್ಪಸಂಖ್ಯಾತರಾದ ಅವರ ಮೇಲೆ ಯುದ್ಧಕ್ಕೆ ಹೋಗುವುದು ಆರ್ಯರಿಗೆ ಉಚಿತವೆನಿಸಿದ ಮಾರ್ಗವಲ್ಲ. ಎರಡನೆಯದಾಗಿ : ಅವರು ಅಲ್ಪಸಂಖ್ಯಾತರಾದರೂ ಸಹ ಬಹುಸಂಖ್ಯಾತರಾದ ನೀವು ಅವರನ್ನು ಪರಾಜಯಗೊಳಿಸಲಾರಿರೆಂದೇ ನನ್ನ ಭಾವನೆಯಾಗಿದೆ.

ಆ ಐವರಲ್ಲಿ ಒಬ್ಬೊಬ್ಬರೂ ಶಸ್ತ್ರವಿದ್ಯೆಯಲ್ಲಿ ಅಸಾಧಾರಣಪಾಂಡಿತ್ಯವನ್ನು ಪಡೆದಿರುತ್ತಾರೆ. ಧನಂಜಯನು ಸ್ವರ್ಗಕ್ಕೆ ಹೋಗಿ ಅಲ್ಲಿ ದೇವೇಂದ್ರನೊಡನೆ ಹಲವಾರು ವರ್ಷಗಳಿದ್ದು ದಿವ್ಯಾಸ್ತ್ರಗಳನ್ನು ಪಡೆದು ಪುನಃ ಅರಣ್ಯಕ್ಕೆ ಆಗಮಿಸಿರುವನು.

ಅರ್ಜುನನು ಇಂತಹ ಯಾವ ವಿಧವಾದ ದಿವ್ಯಾಸ್ತ್ರಗಳ ಪರಿಚಯವೂ ಇಲ್ಲದಿದ್ದಾಗಲೇ ಈ ಪೃಥ್ವಿಯೆಲ್ಲವನ್ನೂ ಯುಧಿಷ್ಠಿರನಿಗಾಗಿ ಜಯಿಸಿಕೊಟ್ಟಿದ್ದನು. ಸ್ವರ್ಗದಿಂದ ದಿವ್ಯಾಸ್ತ್ರಗಳನ್ನು ಪಡೆದು ಬಂದನಂತರ ನಿಮ್ಮೆಲ್ಲರನ್ನೂ ಅವನೊಬ್ಬನೇ ಧ್ವಂಸಮಾಡಲಾರನೇ? ಒಂದು ವೇಳೆ ನೀವು ನನ್ನ ಮಾತಿಗೆ ಪುರಸ್ಕಾರವನ್ನಿತ್ತು ಅರಣ್ಯದಲ್ಲಿ ಅವರ ಗೊಡವೆಗೆ ಹೋಗದೇ ಕೇವಲ ಹಸುಗಳ ಪರೀಕ್ಷೆಯಲ್ಲಿಯೇ ನಿರತರಾಗುವಿರಿ–ಎಂದು ಭಾವಿಸಿದರೂ ಆಗ ನಿಮಗೆ ಅರಣ್ಯಕ್ಕೆ ಹೋಗುವುದರಿಂದ ಯಾವ ವಿಧವಾದ ಆನಂದವೂ ಉಂಟಾಗುವುದಿಲ್ಲ. ಏಕೆಂದರೆ : ಪ್ರಕೃತಸಂದರ್ಭದಲ್ಲಿ ಅವರನ್ನು ನೀವು ನೋಡಿದರೆ ಅವರು ಏನೂ ಮಾಡಲಾರರೆಂಬ ಅಭಿಪ್ರಾಯವು ನಿಮಗುಂಟಾಗುತ್ತದೆ. ಅಂತಹ ಸಮಯದಲ್ಲಿಯೇ ಅವರಿಗೆ ಕಿರುಕುಳ ಕೊಡಬೇಕೆಂಬ ಆಶಯವು ನಿಮ್ಮ ಮನಸ್ಸಿನಲ್ಲಿ ಮೂಡುವುದೂ ಸಹ ಸ್ವಾಭಾವಿಕವಾಗಿಯೇ ಇದೆ. ನಿಮ್ಮ ಚೇಷ್ಟೆಯು ನಂಬಿಕೆಯಿಂದ (ನಿರ್ಯೋಚನೆಯಿಂದ) ವಾಸಿಸುತ್ತಿರುವ ಪಾಂಡವರ ಉದ್ವೇಗಕ್ಕೆ ಕಾರಣವಾಗಿ ಅದರಿಂದ ನಿಮಗೆ ದುಃಖವುಂಟಾಗುವುದು. ಇದು ಸತ್ಯ. ನೀವು ಪರಿವಾರಸಮೇತರಾಗಿ ಚತುರಂಗ ಬಲದೊಡನೆ ಅಲ್ಲಿಗೆ ಹೋಗಬೇಕೆಂದು ಇಚ್ಛಿಸಿರುವಿರಿ. ಒಂದು ವೇಳೆ ನೀವು ಸುಮ್ಮನಿದ್ದರೂ ನಿಮ್ಮ ಮನಸ್ಸಿಗೆ ಹರ್ಷವನ್ನುಂಟುಮಾಡುವ ಆಶಯದಿಂದ ಯಾವನಾದರೂ ಸೈನಿಕನೊಬ್ಬನು ಅವರ ವಿಷಯದಲ್ಲಿ ಅಪಚಾರವನ್ನೆಸಗಿದರೂ ನೀವುಗಳೇ ಅಪಚಾರವೆಸಗಿದವರೆಂದು ಅವರು ಭಾವಿಸುವರು. ಆದುದರಿಂದ ವಿಧೇಯನಾದ ಮತ್ತು ನಂಬಲು ಅರ್ಹನಾದ ಆಪ್ತನೊಬ್ಬನು ಹಸುಗಳ ಪರೀಕ್ಷೆಗೆ ಹೋಗಲಿ. ಈ ಸಮಯದಲ್ಲಿ ನೀವು ಅಲ್ಲಿಗೆ ಹೋಗುವುದು ಉಚಿತವೆನಿಸುವುದಿಲ್ಲ.'' ಧೃತರಾಷ್ಟ್ರನ ಮಾತುಗಳನ್ನು ಕೇಳಿದ ನಂತರ ಶಕುನಿಯು ಮಾತನಾಡಲು ಉಪಕ್ರಮಿಸಿದನು :

“ಮಹಾರಾಜ! ನಮ್ಮ ವಿಷಯದಲ್ಲಿ ಪಾಂಡವರೇನೂ ಮಾಡಲಾರರೆಂದು ಭಾವಿಸುತ್ತೇನೆ. ಪಾಂಡವರಲ್ಲಿ ಜ್ಯೇಷ್ಠನಾದ ಧರ್ಮರಾಜನು ಧರ್ಮಜ್ಞನು, ಧರ್ಮನಿಷ್ಠನು. ಹನ್ನೆರಡು ವರ್ಷಗಳ ಕಾಲ ವನವಾಸ ಮಾಡುವುದಾಗಿ ಮಹಾಸಭೆಯಲ್ಲಿಯೇ ಅವನು ಪ್ರತಿಜ್ಞೆಮಾಡಿರುತ್ತಾನೆ. ಅವನ ತಮ್ಮಂದಿರೂ ಅಣ್ಣನ ವಿಷಯದಲ್ಲಿ ವಿಧೇಯರಾಗಿರುತ್ತಾರೆ. ಅವರು

ಸಹ ಧರ್ಮಮಾರ್ಗದಲ್ಲಿಯೇ ಇರತಕ್ಕವರಾಗಿರುತ್ತಾರೆ. ಈ ಕಾರಣಗಳಿಂದ ನಾವೇನಾದರೂ ಅರಣ್ಯಕ್ಕೆ ಹೋದರೆ ಯುಧಿಷ್ಠಿರನು ನಮ್ಮ ವಿಷಯದಲ್ಲಿ ಖಂಡಿತವಾಗಿಯೂ ಕೋಪಿಸಿಕೊಳ್ಳುವುದಿಲ್ಲ. ಮೇಲಾಗಿ ನಾವು ಪಾಂಡವ ರನ್ನು ಕಾಣಲೋಸುಗವಾಗಿ ಹೋಗುತ್ತಿಲ್ಲವಲ್ಲ! ಬೇಟೆಗಾಗಿ ನಾವೀಗ ಅರಣ್ಯಕ್ಕೆ ಹೋಗುತ್ತಿದ್ದೇವೆ. ಹಾಗೆಯೇ ಹಸುಗಳ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳುತ್ತೇವೆ. ಇಷ್ಟು ಹೊರತಾಗಿ ನಮಗೆ ಪಾಂಡವರನ್ನು ಕಾಣುವ ಇಚ್ಛೆಯೇ ಇಲ್ಲ. ಅವರ ಆಶ್ರಮವಿರುವ ಪ್ರದೇಶಕ್ಕೂ ನಾವು ಹೋಗುವು ದಿಲ್ಲ. ಅವರ ಹತ್ತಿರಕ್ಕೂ ಹೋಗದಿದ್ದ ಮೇಲೆ ಅವರ ವಿಷಯದಲ್ಲಿ ಅನಾರ್ಯರಂತೆ ವರ್ತಿಸುವ ಸಂಭವವೇ ಇಲ್ಲ."

ಶಕುನಿಯು ಹೀಗೆಂದು ಹೇಳಿದನಂತರ ಮಹಾರಾಜನಾದ ಧೃತರಾಷ್ಟ್ರನು ಇಚ್ಛೆಯಿಲ್ಲದಿದ್ದರೂ ಸಹ ತನ್ನ ಸಂಗಡಿಗರೊಡನೆ ದ್ವೈತವನಕ್ಕೆ ಹೋಗಲು ದುರ್ಯೋಧನನಿಗೆ ಅನುಮತಿಯನ್ನಿತ್ತನು.

ರಾಜನ ಅನುಜ್ಞೆಯು ಸಿಕ್ಕಿದೊಡನೆಯೇ ಸಂತೋಷಭರಿತನಾದ ದುರ್ಯೋಧನನು ಕರ್ಣನೊಡಗೂಡಿ ಅಪಾರವಾದ ಪರಿವಾರದೊಡನೆ ಘೋಷಯಾತ್ರೆಗೆ ಹೊರಟನು. ದುಶ್ಶಾಸನ, ಶಕುನಿ ಮತ್ತು ಇನ್ನೂ ಇತರ ದುರ್ಯೋಧನನ ಸಹೋದರರೂ, ಅವರುಗಳ ಪತ್ನಿಯರೂ ಮತ್ತು ಅವರು ಗಳ ಸಾವಿರಾರು ದಾಸಿಯರೂ ದುರ್ಯೋಧನನನ್ನೇ ಅನುಸರಿಸಿದರು. ದ್ವೈತವೆಂಬ ಸರೋವರವನ್ನು ನೋಡಲು ದುರ್ಯೋಧನನು ಪ್ರಯಾಣ ಹೊರಟಿದ್ದಾನೆಂದು ತಿಳಿದೊಡನೆಯೇ ಹಸ್ತಿನಾಪಟ್ಟಣದ ನಾಗರಿಕರೂ ಸಹ ತಮ್ಮ-ತಮ್ಮ ಪತ್ನಿಯರೊಡನೆ ರಾಜನ ಜೊತೆಯಲ್ಲಿ ಅರಣ್ಯಕ್ಕೆ ಪ್ರಯಾಣ ಹೊರಟರು. ಎಂಟು ಸಾವಿರ ರಥಗಳೂ, ಮೂವತ್ತು ಸಾವಿರ ಆನೆಗಳೂ, ಒಂಬತ್ತು ಸಾವಿರ ಕುದುರೆಗಳೂ ಮತ್ತು ಅಸಂಖ್ಯಾತರಾದ ಕಾಲಾಳುಗಳೂ ರಾಜನ ಹಿಂದೆ ಹೊರಟುವು. ಅಂಗಡಿಗಳ ಮತ್ತು ಗುಡಾರಗಳ ಸಾಮಗ್ರಿ ಗಳನ್ನು ಹೊತ್ತು ಸಾವಿರಾರು ಎತ್ತಿನ ಗಾಡಿಗಳೂ ಹೊರಟುವು. ವ್ಯಾಪಾರ ಗಾರರೂ, ಕುಶಲರಾದ ಬೇಟೆಗಾರರೂ, ವಂದಿ-ಮಾಗಧರೂ, ವೇಶ್ಯೆಯರೂ ರಾಜನನ್ನನುಸರಿಸಿ ಅರಣ್ಯಕ್ಕೆ ಪ್ರಯಾಣಮಾಡಿದರು. ಆ ಅಪಾರವಾದ ಜನ ಸಂದಣಿಯೊಡನೆ ದುರ್ಯೋಧನನು ಹೋಗುತ್ತಿದ್ದಾಗ-ವರ್ಷಾಕಾಲದಲ್ಲಿ

ವೇಗವಾಗಿ ಗಾಳಿಯು ಬೀಸುವುದರಿಂದ ಉಂಟಾಗುವ ಶಬ್ದದಂತೆ–ಶಬ್ದವಾಗುತ್ತಿದ್ದಿತು. ತನ್ನ ಅನುಯಾಯಿಗಳೊಡನೆಯೂ, ಚತುರಂಗಬಲದೊಡನೆಯೂ, ಅನೇಕಾನೇಕ ವಾಹನಗಳೊಡನೆಯೂ ಕೂಡಿದವನಾಗಿ ದುರ್ಯೋಧನನು ದ್ವೈತವನಕ್ಕೆ ಪ್ರಯಾಣಮಾಡಿದನು. ಪ್ರಯಾಣದ ಅಂತ್ಯದಲ್ಲಿ ದ್ವೈತಸರೋವರಕ್ಕೆ ಎರಡು ಕ್ರೋಶಗಳ ಅಂತರವಿರುವ ಸ್ಥಳದಲ್ಲಿ ಬಿಡಾರಮಾಡಿದನು."

೨೩೯ನೆಯ ಅಧ್ಯಾಯವು ಮುಗಿಯಿತು.

೨೪೦ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ದುರ್ಯೋಧನನು ಸೇನಾಸಹಿತನಾಗಿ ದ್ವೈತವನಕ್ಕೆ ಹೋಗಿ ಹಸುಗಳನ್ನು ಪರೀಕ್ಷಿಸಿದುದು : ಸೈನಿಕರಿಗೂ ಗಂಧರ್ವರಿಗೂ ವಾಗ್ವಾದ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ದುರ್ಯೋಧನನು ಪರಿವಾರಸಮೇತನಾಗಿ ಅರಣ್ಯದಿಂದ ಅರಣ್ಯಕ್ಕೆ ಪ್ರಯಾಣಮಾಡಿ ಕಟ್ಟಕಡೆಯಲ್ಲಿ ಗೊಲ್ಲರ ಹಳ್ಳಿಗಳ ಬಳಿಗೆ ಬಂದು ಅಲ್ಲಿ ಬಿಡಾರಮಾಡಿದನು. ಅವನ ಸೇವಕರು ಬಲಸಮೃದ್ಧಿಯಿದ್ದ, ಹಸಿರೆಲೆಗಳ ವೃಕ್ಷಗಳಿಂದ ಆವೃತವಾಗಿದ್ದ, ನಯನಮನೋಹರವಾಗಿದ್ದ ಪ್ರದೇಶದಲ್ಲಿ ದುರ್ಯೋಧನನಿಗೂ ಮತ್ತು ಪರಿವಾರದವರಿಗೂ ತಾತ್ಕಾಲಿಕವಾದ ಗುಡಾರಗಳನ್ನು ಕಟ್ಟಿದರು. ದುರ್ಯೋಧನನ ಕುಟೀರಕ್ಕೆ ಸಮೀಪದಲ್ಲಿಯೇ ಕರ್ಣ, ಶಕುನಿ ಮತ್ತು ದುಃಶ್ಶಾಸನಾದಿಗಳಾದ ದುರ್ಯೋಧನನ ಅನುಜರಿಗೂ ಸಹ ಪ್ರತ್ಯೇಕ-ಪ್ರತ್ಯೇಕವಾಗಿ ಕುಟೀರಗಳನ್ನು ರಾಜಸೇವಕರು ಸಿದ್ಧಪಡಿಸಿದರು. ಆ ಸಮಯದಲ್ಲಿ ರಾಜನು ನೂರಾರು-ಸಾವಿರಾರು ಧೇನುಗಳನ್ನು ಅವುಗಳ ಮೇಲಿದ್ದ ಚಿಹ್ನೆಗಳಿಂದಲೂ ಮತ್ತು ಲಕ್ಷಣಗಳಿಂದಲೂ ಪರೀಕ್ಷಿಸಿ, ಉತ್ತಮ-ಮಧ್ಯಮ-ಅಧಮಜಾತಿಯ ಗೋವುಗಳನ್ನು ವಿಂಗಡಿಸಿದನು. ಸಾವಿರಾರು ಕರುಗಳ ಮೇಲೆ ಗುರುತುಮಾಡಲು ಆಜ್ಞಾಪಿಸಿ, ಅವುಗಳಲ್ಲಿ ಪಳಗಿಸಬೇಕಾಗಿದ್ದ ಕರುಗಳನ್ನು ಪ್ರತ್ಯೇಕಿಸಿದನು. ಹಸುಗಳನ್ನು ಬಿಟ್ಟಿರಲಾರದ ಎಳೆಯ ಕರುಗಳ ಸಂಖ್ಯೆಯೆಷ್ಟೆಂಬುದನ್ನು ತಿಳಿಸಬೇಕೆಂದು ಗೋಪಾಲಕರಿಗೆ ಆಜ್ಞಾಪಿಸಿ, ಅವುಗಳ ಸಂಖ್ಯೆಯನ್ನೂ

ಸಹ ರಾಜನು ಸಂಗ್ರಹಿಸಿದನು. ಮೂರು ವರ್ಷದ ಮೇಲ್ಪಟ್ಟಿರುವ ಕರುಗಳ ಸಂಖ್ಯೆಯನ್ನೂ ಸಂಗ್ರಹಿಸಿ ಆ ಕರುಗಳೆಲ್ಲಕ್ಕೂ ರಾಜಮುದ್ರೆಯನ್ನೊತ್ತಿಸಿದ ನಂತರ ದುರ್ಯೋಧನನು ಗೋಪಾಲಕರಿಂದ ಆವೃತನಾಗಿ ಅವರೊಡನೆ ಸ್ವೇಚ್ಛೆಯಿಂದ ಅರಣ್ಯದ ನಾನಾಕಡೆಗಳಲ್ಲಿ ಸಂಚರಿಸುತ್ತಿದ್ದನು.

ರಾಜನ ಜೊತೆಯಲ್ಲಿಯೇ ಬಂದಿದ್ದ ಪಟ್ಟಣಿಗರೂ ಮತ್ತು ಸೈನಿಕರೂ ದೇವತೆಗಳು ಸ್ವೇಚ್ಛೆಯಿಂದ ವಿಹರಿಸುವಂತೆ–ತಮ್ಮ ಮನಸ್ಸಿಗೆ ತೋಚಿದ ಆಟಗಳನ್ನಾಡುತ್ತಾ ಸಂತೋಷದಿಂದ ಕಾಲಕಳೆಯುತ್ತಿದ್ದರು. ಗಾಯನದಲ್ಲಿ, ನೃತ್ಯದಲ್ಲಿ, ಭೇರೀ-ತಾಳ-ಮೃದಂಗ-ವೀಣಾವಾದ್ಯಗಳಲ್ಲಿ ಹೆಚ್ಚು ಪರಿಶ್ರಮ ವಿದ್ದ ಗೋಪಾಲಕರೂ ಮತ್ತು ಗೋಪಾಲಕನ್ಯೆಯರೂ ತಮ್ಮ ರಾಜನ ಮುಂದೆ ತಮ್ಮ ತಮ್ಮ ಕಲಾಪ್ರದರ್ಶನಮಾಡುತ್ತಾ ರಾಜನ ಆನಂದವನ್ನು ಮತ್ತಷ್ಟು ಹೆಚ್ಚಿಸುವುದರಲ್ಲಿ ನಿರತರಾಗಿದ್ದರು.

ಅಂತಃಪುರಸ್ತ್ರೀಯರಿಂದ ಪರಿವೃತನಾಗಿ ಸುಶ್ರಾವ್ಯವಾದ ಗಾನ-ನೃತ್ಯ-ವಾದ್ಯಗಳನ್ನು ಕೇಳಿದ ರಾಜನು, ತನ್ನನ್ನು ಸಂತೋಷಪಡಿಸಲು ಬಂದ ಗಾಯಕರಿಗೆ, ನರ್ತನಪಟುಗಳಿಗೆ ಮತ್ತು ವೈಣಿಕರಿಗೆ ಯಥಾಯೋಗ್ಯವಾದ ಪಾರಿತೋಷಿಕಗಳನ್ನು ಕೊಟ್ಟನಲ್ಲದೇ ಅವರುಗಳನ್ನು ಅನ್ನ-ಪಾನಾದಿ ಗಳಿಂದಲೂ ತೃಪ್ತಿಪಡಿಸಿದನು.

ಅನಂತರದಲ್ಲಿ ದುರ್ಯೋಧನನು ತನ್ನ ಅನುಯಾಯಿಗಳೊಡನೆ ಬೇಟೆ ಯಾಡಲು ಹೊರಟವನಾಗಿ ತರಕ್ಷುಮೃಗ (ಶಿವಂಗಿ)ಗಳನ್ನೂ, ಕಾಡುಕೋಣ ಗಳನ್ನೂ, ಜಿಂಕೆಗಳನ್ನೂ, ಕಾಡುಹಂದಿಗಳನ್ನೂ, ಕರಡಿಗಳನ್ನೂ, ನೂರಾರು ಸಂಖ್ಯೆಯಲ್ಲಿ ತನ್ನ ನಿಶಿತವಾದ ಬಾಣಗಳಿಂದ ಘಾಸಿಪಡಿಸಿದನು. ಅರಣ್ಯ ದಲ್ಲಿದ್ದ ಅನೇಕ ಆನೆಗಳನ್ನೂ ಸಹ ದುರ್ಯೋಧನನು ತನ್ನ ನಿಶಿತವಾದ ಬಾಣಗಳಿಂದ ಘಾಸಿಪಡಿಸಿದನು. ಸಾವಿರಾರು ಸಂಖ್ಯೆಯಲ್ಲಿ ಅರಣ್ಯದಲ್ಲಿದ್ದ ದುಷ್ಟಮೃಗಗಳು ಪ್ರಾಣತೊರೆದುವು. ರಮಣೀಯವಾದ ಪ್ರದೇಶಗಳಲ್ಲಿ ಅನೇಕ ಜಿಂಕೆಗಳನ್ನು ಬಲೆಗಳ ಮೂಲಕವಾಗಿ ಬಂಧಿಸಿದನು. ಹಸುವಿನ ಹಾಲನ್ನು ಯಥೇಚ್ಛವಾಗಿ ಕುಡಿಯುತ್ತಾ, ಕಾಡಿನಲ್ಲಿ ಸಿಕ್ಕುವ ರುಚಿರುಚಿ ಯಾದ ಹಣ್ಣುಗಳನ್ನು ಆಸ್ವಾದಿಸುತ್ತಾ, ಝೇಂಕರಿಸುವ ದುಂಬಿಗಳಿಂದಲೂ

ಮತ್ತು ಜಾಗರವಾಡುತ್ತಿದ್ದ ನವಿಲುಗಳಿಂದಲೂ ಕೂಡಿದ ಅರಣ್ಯಪ್ರದೇಶ ದಲ್ಲಿ ನಡೆದು ಹೋಗುತ್ತಾ, ಕಟ್ಟಕಡೆಗೆ ದುರ್ಯೋಧನನು ಮದಿಸಿದ ದುಂಬಿಗಳಿಂದ ಕೂಡಿದುದಾಗಿಯೂ, ನೀಲವಾದ ಕಂಠವುಳ್ಳ ನವಿಲುಗಳಿಂದ ಆವೃತವಾದುದಾಗಿಯೂ, ಏಳೆಲೆಬಾಳೆ ಗಿಡಗಳಿಂದಲೂ, ಪುನ್ನಾಗ (ಸುರಹೊನ್ನೆ)-ಬಕುಳ–ಇತ್ಯಾದಿ ವೃಕ್ಷಗಳಿಂದಲೂ ನಿಬಿಡವಾಗಿದ್ದ ದ್ವೈತ ಸರೋವರದ ಸಮೀಪಕ್ಕೆ ಬಂದನು.

ಅತುಲೈಶ್ವರ್ಯಸಂಪನ್ನನಾಗಿದ್ದ ದುರ್ಯೋಧನನು ಆ ಸಮಯದಲ್ಲಿ ಸಾಕ್ಷಾತ್ ಶಚೀಪತಿಯಾದ ಇಂದ್ರನಂತೆಯೇ ವಿರಾಜಿಸಿದನು.

ಅದೇ ಸಮಯದಲ್ಲಿ ಧರ್ಮಾತ್ಮನಾದ ಮತ್ತು ಮೇಧಾವಿಯಾದ ಯುಧಿಷ್ಠಿರನು ಧರ್ಮಪತ್ನಿಯಾದ ದ್ರೌಪದಿಯೊಡನೆ ಒಂದೇ ಹಗಲಿನಲ್ಲಿ ಮಾಡಲು ಸಾಧ್ಯವಾದ 'ಸಾದ್ಯಸ್ಕ' ಎಂಬ ಯಜ್ಞವನ್ನು ಅರಣ್ಯದಲ್ಲಿದ್ದು ಕೊಂಡು ಮಾಡಬಹುದಾದ ವಿಶೇಷವಿಧಿಯನ್ನನುಸರಿಸಿ–ದ್ವೈತಸರೋವರದ ಪಕ್ಕದಲ್ಲಿ ಸಿದ್ಧಪಡಿಸಿದ್ದ ನಿವೇಶನದಲ್ಲಿ ಮಾಡುತ್ತಿದ್ದನು.

ದ್ವೈತಸರೋವರದ ಸಮೀಪಕ್ಕೆ ಬರುತ್ತಲೇ ದುರ್ಯೋಧನನು ತನ್ನ ಸಾವಿರಾರು ಸೇವಕರನ್ನು ಕುರಿತು ದ್ವೈತವನದ ಸುತ್ತಲೂ ನೂರಾರು ಕ್ರೀಡಾಗೃಹಗಳನ್ನು ಬಹುಶೀಘ್ರವಾಗಿ ನಿರ್ಮಿಸುವಂತೆ ಆಜ್ಞಾಪಿಸಿದನು. ದುರ್ಯೋಧನನ ಆಜ್ಞಾಧಾರಕರಾದ ರಾಜಭಟರು ರಾಜನ ಆಜ್ಞೆಯನ್ನು ಶಿರಸಾವಹಿಸಿ ದ್ವೈತಸರೋವರದ ದಂಡೆಯಲ್ಲಿ ಕ್ರೀಡಾಗೃಹಗಳನ್ನು ನಿರ್ಮಿಸಲು ಹೊರಟುಹೋದರು.

ದುರ್ಯೋಧನನ ಸೇನಾಪ್ರಮುಖರು ಕ್ರೀಡಾಗೃಹಗಳನ್ನು ನಿರ್ಮಿಸುವ ಸಲುವಾಗಿ ದ್ವೈತಸರೋವರದ ಮಹಾದ್ವಾರವನ್ನು ತಲುಪುತ್ತಲೇ ಆ ಮಹಾದ್ವಾರದ ಎರಡು ಪಾರ್ಶ್ವಗಳಲ್ಲಿಯೂ ಆಯುಧಪಾಣಿಗಳಾಗಿ ನಿಂತಿದ್ದ ಗಂಧರ್ವರು ದ್ವಾರವನ್ನು ಪ್ರವೇಶಿಸದಂತೆ ತಡೆದರು.

ಜನಮೇಜಯ! ದುರ್ಯೋಧನನ ಸೇನಾನಾಯಕರು ದ್ವೈತವನದ ಮಹಾದ್ವಾರದ ಬಳಿಗೆ ಬರುವುದಕ್ಕೆ ಸ್ವಲ್ಪ ಮುಂಚಿತವಾಗಿ ಗಂಧರ್ವರಾಜನು ತನ್ನ ಪರಿವಾರದೊಡನೆ ಕುಬೇರನ ಲೋಕದಿಂದ ಆ ದ್ವೈತಸರೋವರಕ್ಕೆ ಕ್ರೀಡಾರ್ಥವಾಗಿ ಬಂದಿದ್ದನು. ಅನೇಕಾನೇಕ ಅಪ್ಸರೆಯರೊಡನೆಯೂ, ದೇವತೆ

ಗಳ ಮಕ್ಕಳೊಡನೆಯೂ ಕ್ರೀಡಾರ್ಥವಾಗಿ ಬಂದಿದ್ದ ವಿಹಾರಶೀಲನಾದ ಗಂಧರ್ವರಾಜನಿಂದ ಆ ದ್ವೈತಸರೋವರದ ಪ್ರದೇಶವೆಲ್ಲವೂ ತುಂಬಿ ಹೋಗಿದ್ದಿತು.

ಗಂಧರ್ವರಾಜನಾದ ಚಿತ್ರಸೇನನಿಂದಲೂ ಮತ್ತು ಅವನ ಅನುಯಾಯಿಗಳಿಂದಲೂ ದ್ವೈತಸರೋವರವು ಆಕ್ರಮಿತವಾಗಿದ್ದುದನ್ನು ಕಂಡು ದ್ವೈತವನದ ಮಹಾದ್ವಾರದೊಳಗೆ ಪ್ರವೇಶಸಿಕ್ಕದೇ ದುರ್ಯೋಧನನ ಸೈನಿಕರು ರಾಜನಿದ್ದೆಡೆಗೆ ಹಿಂದಿರುಗಿ ವಿಷಯವನ್ನು ತಿಳಿಸಿದರು. ದುರ್ಯೋಧನನಾದರೋ ತನ್ನ ಸೈನಿಕರ ಮಾತನ್ನು ಕೇಳಿ ಒಡನೆಯೇ ಕುಪಿತನಾಗಿ, ಯುದ್ಧದಲ್ಲಿ ಪರಾಜಯವೆಂಬುದನ್ನೇ ಕಾಣದೇ ಮದಿಸಿಹೋಗಿದ್ದ ಸಾವಿರಾರು ಯೋಧರನ್ನು ಕರೆಯಿಸಿ, ಗಂಧರ್ವರಾಜನನ್ನೂ ಮತ್ತು ಅವನ ಅನುಯಾಯಿಗಳನ್ನೂ ದ್ವೈತವನಪ್ರದೇಶದಿಂದ ಹೊಡೆದೋಡಿಸುವಂತೆ ನಿರ್ದೇಶನವನ್ನಿತ್ತು ಕಳುಹಿಸಿಕೊಟ್ಟನು. ರಾಜನ ಮಾತುಗಳನ್ನು ಕೇಳಿ ಸೇನೆಯ ಅಗ್ರೇಸರರು ದ್ವೈತವನದ ಸಮೀಪಕ್ಕೆ ಹೋಗಿ ಮಹಾದ್ವಾರದಲ್ಲಿ ಯಥಾಪೂರ್ವಕವಾಗಿ ನಿಂತಿದ್ದ ಗಂಧರ್ವರನ್ನು ಕುರಿತು ಹೇಳಿದರು.

**ರಾಜಾ ದುರ್ಯೋಧನೋ ನಾಮ ಧೃತರಾಷ್ಟ್ರಸುತೋ ಬಲೀ ।**
**ವಿಜಿಹೀರ್ಷುರಿಹಾಯಾತಿ ತದರ್ಥಮಪಸರ್ಪತ ॥೨೬॥**

"ಧೃತರಾಷ್ಟ್ರನ ಮಗನಾದ ಬಲಿಷ್ಠನಾದ ದುರ್ಯೋಧನನಾಮಕನಾದ ನಮ್ಮ ರಾಜನು ವಿಹರಿಸಲು ಈ ದ್ವೈತವನಕ್ಕೆ ಬರಲಿದ್ದಾನೆ. ಆದುದರಿಂದ ಒಡನೆಯೇ ನೀವೆಲ್ಲರೂ ಇಲ್ಲಿಂದ ತೆರಳಿರಿ."

ಜನಮೇಜಯ! ದುರ್ಯೋಧನನ ಸೇನಾನಾಯಕರು ಹೇಳಿದ ಮಾತುಗಳನ್ನು ಕೇಳುತ್ತಲೇ ಗಂಧರ್ವರು ಗಹಗಹಿಸಿ ನಕ್ಕು ಅವರನ್ನು ಕುರಿತು ಅತಿನಿಷ್ಠುರವಾದ ಈ ಮಾತುಗಳನ್ನು ಹೇಳಿದರು :

"ನಿಶ್ಚಯವಾಗಿಯೂ ನಿಮ್ಮ ರಾಜನಿಗೆ ಸ್ವಲ್ಪವಾದರೂ ವಿವೇಕವಿಲ್ಲ. ದುರ್ಯೋಧನನು ಬಹುಮಂದಬುದ್ಧಿಯವನೆಂದೇ ತೋರುತ್ತದೆ. ಅವನಿಗೆ ಸ್ವಲ್ಪವಾದರೂ ವಿವೇಚನೆಯಿದ್ದಿದ್ದರೆ ನಮ್ಮನ್ನು ಅವನು ಇಷ್ಟು ಲಾಘವದಿಂದ ಕಾಣುತ್ತಿರಲಿಲ್ಲ. ಸ್ವರ್ಗವಾಸಿಗಳಾದ ನಮ್ಮನ್ನು ತನ್ನ ಅಧೀನರನ್ನು ಆಜ್ಞಾಪಿಸುವಂತೆ–ಆಜ್ಞಾಪಿಸುತ್ತಿರಲಿಲ್ಲ. ನಿಮಗಾದರೂ ಸಹ ವಿವೇಕವಿಲ್ಲ.

ನೀವೂ ಮಂದಬುದ್ಧಿಯವರೇ ಸರಿ. ನಿಮಗೂ ಸಹ ಮರಣಕಾಲವು ಸನ್ನಿಹಿತವಾಗಿದೆಯೆಂದೇ ತೋರುತ್ತದೆ. ಸ್ವಲ್ಪವಾದರೂ ನಿಮ್ಮ ಪ್ರಾಣಾಪಾಯದ ಕಡೆಗೆ ಲಕ್ಷ್ಯವೀಯದೆ ತಿಳಿಗೇಡಿಯು ಹೇಳಿಕಳುಹಿಸಿದ ಮಾತನ್ನು ನಮ್ಮೆದುರಿನಲ್ಲಿ ನಿಂತು ಧೈರ್ಯದಿಂದ ಹೇಳುತ್ತಿರುವಿರಲ್ಲವೇ? ನಿಶ್ಚಯವಾಗಿಯೂ ಗಂಧರ್ವರಾಜನ ಗೌರವಕ್ಕೆ ಭಂಗತರುವ ಈ ಮಾತನ್ನು ಹೇಳಿದ ನೀವು ವಧಾರ್ಹರೇ ಸರಿ. ಆದರೂ ಸಹ ರಾಜನ ಆಜ್ಞಾಧಾರಕರಾದ ಸೈನಿಕರೆಂಬ ಕಾರಣದಿಂದ ನಿಮ್ಮನ್ನು ವಧೆಮಾಡದೆ ಬಿಟ್ಟುಬಿಡುತ್ತೇವೆ. ನೀವು ಈ ಕ್ಷಣದಲ್ಲಿಯೇ ಅವಿವೇಕಿಯಾದ ನಿಮ್ಮ ರಾಜನ ಬಳಿಗೆ ತೊಲಗಿರಿ. ಹಾಗಿಲ್ಲದಿದ್ದರೆ ಯಮನ ಮನೆಗೆ ಹೋಗಲು ಸಿದ್ಧರಾಗಿರಿ."

ಜನಮೇಜಯ! ಗಂಧರ್ವರು ಹೇಳಿದ ಈ ಮಾತುಗಳನ್ನು ಕೇಳುತ್ತಲೇ ದುರ್ಯೋಧನನ ಸೇನೆಯ ಅಗ್ರೇಸರರು ತಮ್ಮ ರಾಜನ ಬಳಿಗೆ ಅವಸರದಿಂದ ಧಾವಿಸಿದರು."

೨೪೦ನೆಯ ಅಧ್ಯಾಯವು ಮುಗಿಯಿತು.

೨೪೧ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಕೌರವ-ಗಂಧರ್ವರ ಯುದ್ಧ: ಕರ್ಣನ ಪರಾಜಯ

"ಜನಮೇಜಯ! ದುರ್ಯೋಧನನ ಸೇನಾಪ್ರಮುಖರು ತಮ್ಮ ರಾಜನ ಬಳಿಗೆ ಹಿಂದಿರುಗಿಬಂದವರಾಗಿ ಗಂಧರ್ವರು ಹೇಳಿದುದೆಲ್ಲವನ್ನೂ ಚಾಚೂ ತಪ್ಪದೇ ಹೇಳಿದರು. ಪ್ರತಾಪಶಾಲಿಯಾದ ದುರ್ಯೋಧನನು ತನ್ನ ಸೇನಾಪ್ರಮುಖರು ಹೇಳಿದ ಮಾತನ್ನು ಕೇಳಿ ಗಂಧರ್ವರು ತನ್ನ ಸೇನಾಪ್ರಮುಖರನ್ನು ತಡೆದು ಹಿಂದಿರುಗಿಸಿದುದಕ್ಕಾಗಿ ಬಹಳ ಕೋಪಗೊಂಡು ಅವರನ್ನು ಕುರಿತು ಹೀಗೆಂದು ಹೇಳಿದನು :

**ಶಾಸತೈನಾನಧರ್ಮಜ್ಞಾನ್ಮಮ ವಿಪ್ರಿಯಕಾರಿಣಃ ।**
**ಯದಿ ಪ್ರಕ್ರೀಡತೇ ಸರ್ವೈರ್ದೇವೈಃ ಸಹ ಶತಕ್ರತುಃ ॥೩॥**

“ರಾಜಧರ್ಮ ಅಥವಾ ರಾಜಶಾಸನವೇನೆಂಬುದನ್ನೇ ತಿಳಿಯದಿರುವ ಮತ್ತು ನನಗೆ ಅಪ್ರಿಯವನ್ನು ಮಾಡಲಿಚ್ಛಿಸಿರುವ ಈ ದುರುಳರನ್ನು ಈಗಲೇ ಶಾಸನಮಾಡಿರಿ (ದಂಡಿಸಿರಿ.) ಇವರು ಕುಬೇರನ ಪಟ್ಟಣದಿಂದ ಬಂದಿರುವರೆಂದು ನೀವು ಭಯಪಡಬೇಕಾಗಿಲ್ಲ. ಸರ್ವದೇವತೆಗಳಿಂದ ಕೂಡಿದ ದೇವೇಂದ್ರನೇ ಬಂದು ನನ್ನ ಅನುಶಾಸನಕ್ಕೆ ವಿರೋಧವಾಗಿ ಇಲ್ಲಿ ಕ್ರೀಡೆಯಾಡುತ್ತಿದ್ದರೂ ಅವನೂ ಸಹ ಶಾಸನಾರ್ಹನೇ ಆಗಿರುತ್ತಾನೆ. ಈಗಲಾದರೂ ದೇವೇಂದ್ರನೇ ದೇವತೆಗಳಿಂದೊಡಗೂಡಿ ವಿಹರಿಸುತ್ತಿದ್ದರೂ ನೀವು ಅವನನ್ನೂ ದಂಡಿಸಿರಿ.”

ಜನಮೇಜಯ! ದುರ್ಯೋಧನನ ಪೌರುಷಯುಕ್ತವಾದ ಆ ಮಾತನ್ನು ಕೇಳಿದೊಡನೆಯೇ ಧೃತರಾಷ್ಟ್ರನ ಎಲ್ಲ ಮಕ್ಕಳೂ, ಮಹಾಬಲಿಷ್ಠರಾದ ಎಲ್ಲ ಸೇನಾನಾಯಕರೂ, ಸಾವಿರಾರು ಮಂದಿ ಸೈನಿಕರೂ ತಮ್ಮ ತಮ್ಮ ಆಯುಧಗಳನ್ನು ಕೈಗೆತ್ತಿಕೊಂಡು ಸಜ್ಜಾಗಿ ನಿಂತರು. ತಮ್ಮ ಸಿಂಹನಾದಗಳಿಂದ ಹತ್ತು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಕೌರವಸೇನೆಯು ದ್ವೈತವನದ ಮಹಾದ್ವಾರದಲ್ಲಿದ್ದ ಕಾವಲುಗಾರರನ್ನು ಕ್ಷಣಮಾತ್ರದಲ್ಲಿ ಕೆಳಕ್ಕುರುಳಿಸಿ ದ್ವೈತವನದೊಳಕ್ಕೆ ನುಗ್ಗಿತು. ಅನತಿದೂರದಲ್ಲಿಯೇ ನಿಂತಿದ್ದ ಗಂಧರ್ವಸೈನಿಕರು ನುಗ್ಗಿಬರುತ್ತಿದ್ದ ಕೌರವಸೈನ್ಯವನ್ನು ಪುನಃ ಸಾಮೋಪಾಯದಿಂದಲೇ ತಡೆದರು. ಆದರೆ ಕೌರವಸೈನ್ಯದಲ್ಲಿ ಸಂಖ್ಯಾಬಲವು ಬಹಳ ಹೆಚ್ಚಾಗಿದ್ದುದರಿಂದ ಗಂಧರ್ವರು ಒಡ್ಡಿದ್ದ ಪ್ರತಿಬಂಧಕವನ್ನು ನಿರ್ಲಕ್ಷಿಸಿ ಕೌರವಸೇನೆಯು ಮುಂದುವರಿಯಿತು. ಪಹರೆಯಲ್ಲಿದ್ದ ಗಂಧರ್ವರಿಗೆ, ಸೈನ್ಯಸಮೇತನಾದ ದುರ್ಯೋಧನನನ್ನು ಕೇವಲ ಮಾತಿನಿಂದ ತಡೆಯಲು ಸಾಧ್ಯವಿಲ್ಲವೆಂಬುದು ಮನವರಿಕೆಯಾಗಿ ಅವರು ಒಡನೆಯೇ ತಮ್ಮರಾಜನಾದ ಚಿತ್ರಸೇನನ ಸಮೀಪಕ್ಕೆ ಹೋಗಿ ಎಲ್ಲ ವಿಷಯಗಳನ್ನೂ ಅವನಿಗೆ ನಿವೇದಿಸಿದರು. ಚಿತ್ರಸೇನನು ತನ್ನ ಸೇವಕರ ಮಾತುಗಳನ್ನು ಕೇಳಿ ಬಹುಕುಪಿತನಾಗಿ ಆ ಅನಾರ್ಯರಿಗೆ ತಕ್ಕ ಶಾಸನಮಾಡಿರೆಂದು ತನ್ನ ಸೇವಕರಿಗೆ ಹೇಳಿದನು.

ಗಂಧರ್ವರಾಜನ ಆಜ್ಞೆಯಾಗುತ್ತಲೇ ಅವನ ಸೈನಿಕರು ಆಯುಧಪಾಣಿಗಳಾಗಿ ರಭಸದಿಂದ ಕೌರವಸೇನೆಯ ಮೇಲೆ ತಂಡೋಪತಂಡವಾಗಿ ಬಿದ್ದರು.

ಗಂಧರ್ವರ ನಿಶಿತಾಸ್ತ್ರಗಳ ಪೆಟ್ಟನ್ನು ತಡೆದುಕೊಳ್ಳಲು ಅಸಮರ್ಥವಾದ ಕೌರವಸೇನೆಯು ದುರ್ಯೋಧನನ ಸಮಕ್ಷದಲ್ಲಿಯೇ ದಿಕ್ಕಾಪಾಲಾಗಿ ಚದುರಿ ಹೋಯಿತು. ಕುರುಸೈನ್ಯಪ್ರಮುಖರೆಲ್ಲರೂ ಶತ್ರುವಿಗೆ ಬೆನ್ನುತೋರಿಸಿಕೊಂಡು ಓಡುತ್ತಿರುವುದನ್ನು ನೋಡಿ ವೀರನಾದ ಕರ್ಣನು ಮಾತ್ರ ಅವರಂತೆಯೇ ತಾನೂ ಪರಾಙ್ಮುಖನಾಗಲಿಲ್ಲ. ಧನುಷ್ಪಾಣಿಯಾಗಿ ಗಂಧರ್ವರ ಸಮ್ಮುಖದಲ್ಲಿ ನಿಂತು ತನ್ನ ಕೈಚಳಕದಿಂದ ಗಂಧರ್ವಸೈನ್ಯದ ಮೇಲೆ ಬಾಣಗಳ ಮಳೆಗರೆಯುತ್ತಾ ಆ ಅಪಾರವಾದ ಗಂಧರ್ವಸೈನ್ಯವನ್ನೂ ಎದುರಿಸಿ ತಡೆದು ನಿಂತನು.

ವತ್ಸದಂತದಿಂದಲೂ, ಕಬ್ಬಿಣದಿಂದಲೂ ತಯಾರಾಗಿದ್ದ ಕ್ಷುರಪ್ರ, ವಿಶಿಖ, ಭಲ್ಲ–ಮುಂತಾದ ಆಯುಧಗಳನ್ನು ಸಮಯೋಚಿತವಾಗಿ ಪ್ರಯೋಗಿಸುತ್ತಾ ತನ್ನ ಕೈಚಳಕದಿಂದ ರಾಧೇಯನು ನೂರಾರು ಗಂಧರ್ವ ಪ್ರಮುಖರನ್ನು ಕೆಳಗುರುಳಿಸಿದನು. ಕ್ಷಣಮಾತ್ರದಲ್ಲಿ ಸಾವಿರಾರು ಗಂಧರ್ವರ ರುಂಡಗಳನ್ನು ಕೆಳಗುರುಳಿಸಿ ಗಂಧರ್ವಸೈನ್ಯವು ಕಂಗೆಟ್ಟು ಅರಚಿಕೊಳ್ಳುವಂತೆ ಮಹಾಶೂರನಾದ ಕರ್ಣನು ಯುದ್ಧಮಾಡಿದನು. ಆದರೆ ಧೀಮಂತನಾದ ಕರ್ಣನು ಎಷ್ಟೇ ಪ್ರಯತ್ನಿಸಿದರೂ ಗಂಧರ್ವಸೈನ್ಯವನ್ನು ಪೂರ್ಣವಾಗಿ ನಾಶಮಾಡಲು ಸಾಧ್ಯವಾಗಲಿಲ್ಲ. ಕರ್ಣನು ತನ್ನ ಕೈಚಳಕದಿಂದ ಸಾವಿರಾರು ಮಂದಿಯ ರುಂಡಗಳನ್ನು ಕೆಳಗುರುಳಿಸುವಷ್ಟರಲ್ಲಿ ದ್ವಿಗುಣಿತರಾದ ಗಂಧರ್ವಸೈನಿಕರು ಅವನಿಗೆ ಎದುರಾಗಿ ಬಂದು ನಿಲ್ಲುತ್ತಿದ್ದರು.

ಚಿತ್ರಸೇನನ ಆಜ್ಞಾಧಾರಕರಾಗಿ ಮಹಾವೇಗದಿಂದ ಭೂಮಿಗೆ ಆಗಮಿಸುತ್ತಿದ್ದ ಗಂಧರ್ವಸೈನಿಕರಿಂದ ಭೂಮಿಯೇ ತುಂಬಿಹೋಯಿತು. ಗರುಡನಂತೆ ಧ್ವನಿಮಾಡುತ್ತಿದ್ದ ರಥಗಳಲ್ಲಿ ಕುಳಿತು ದುರ್ಯೋಧನ, ಶಕುನಿ, ದುಃಶಾಸನ, ವಿಕರ್ಣ–ಮುಂತಾದವರು ಕರ್ಣನ ನಾಯಕತ್ವದಲ್ಲಿ ಯುದ್ಧರಂಗಕ್ಕಿಳಿದು ಪ್ರವಾಹರೂಪವಾಗಿ ಬರುತ್ತಿದ್ದ ಗಂಧರ್ವಸೈನ್ಯವನ್ನು ನಾಶಮಾಡಲುಪಕ್ರಮಿಸಿದರು. ನಾಯಕತ್ವವನ್ನು ವಹಿಸಿ ಯುದ್ಧಮಾಡುತ್ತಿದ್ದ ಕರ್ಣನಿಗೆ ಒತ್ತಾಸೆಕೊಡುವ ಸಲುವಾಗಿ ಅಸಂಖ್ಯಾತವಾದ ರಥಸೈನ್ಯವನ್ನೂ, ಅಶ್ವಸೈನ್ಯವನ್ನೂ ಕರ್ಣನ ಹಿಂಬದಿಯಲ್ಲಿ ಕೇಂದ್ರೀಕರಿಸಲಾಯಿತು. ಅಪಾರ

ವಾದ ಗಂಧರ್ವಸೇನೆ ಮತ್ತು ಕರ್ಣಪ್ರಮುಖವಾಗಿದ್ದ ಕೌರವಸೇನೆಗಳ ನಡುವೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಗಂಧರ್ವ-ಕೌರವರ ಯುದ್ಧವು ನೋಡಿದವರಿಗೆ ನಿಶ್ಚಯವಾಗಿಯೂ ರೋಮಾಂಚನವನ್ನುಂಟು ಮಾಡುವುದಾಗಿದ್ದಿತು. ಕಟ್ಟಕಡೆಗೆ ಅವ್ಯಾಹತವಾದ ಬಾಣಗಳಿಂದ ಪೀಡಿತ ರಾದ ಗಂಧರ್ವರು ಆಯಾಸಗೊಂಡಂತೆ ಕಂಡುಬಂದರು. ಗಂಧರ್ವರ ಬಲವು ಕುಗ್ಗುತ್ತಿರುವುದನ್ನು ಕಂಡು ಕೌರವಸೈನ್ಯವು ಜಯಘೋಷ ಮಾಡಿತು.

ಗಂಧರ್ವಸೇನೆಯು ಹಿಮ್ಮೆಟ್ಟುತ್ತಿರುವುದನ್ನು ಕಂಡೊಡನೆಯೇ ರಾಜನಾದ ಚಿತ್ರಸೇನನು ಕುಪಿತನಾಗಿ, ಕುಳಿತಿದ್ದ ಸ್ಥಳದಿಂದ ಥಂಗನೆ ಮೇಲೆದ್ದು ಕೌರವರನ್ನು ನಿರ್ಮೂಲಮಾಡಬೇಕೆಂದು ನಿಶ್ಚಯಿಸಿ ಹೊರಟನು. ಯುದ್ಧದಲ್ಲಿ ಚಿತ್ರ-ವಿಚಿತ್ರವಾದ ಮಾರ್ಗಗಳನ್ನು ತಿಳಿದಿದ್ದ ಚಿತ್ರಸೇನನು ಮಾಯಾಯುದ್ಧವನ್ನು ಆಶ್ರಯಿಸಿ ಮಾಯಾಸ್ತ್ರಗಳನ್ನು ಕೌರವಸೈನ್ಯದ ಮೇಲೆ ಪ್ರಯೋಗಿಸತೊಡಗಿದನು. ಚಿತ್ರಸೇನನ ಮಾಯಾಯುದ್ಧದಿಂದ ಕೌರವಸೈನಿಕರೆಲ್ಲರೂ ಭ್ರಾಂತರಾದರು. ಚಿತ್ರಸೇನನ ಮಾಯಾಪ್ರಕ್ರಿಯೆ ಯಿಂದಾಗಿ ಪ್ರತಿಯೊಬ್ಬ ಕೌರವಯೋಧನ ಮುಂದೆ ಹತ್ತು-ಹತ್ತು ಮಂದಿ ಗಂಧರ್ವಸೈನಿಕರು ನಿಂತು ಯುದ್ಧಮಾಡುತ್ತಿರುವಂತೆ ಕೌರವಸೇನೆಗೆ ಭಾಸವಾಯಿತು. ಬಲಿಷ್ಠರಾದ ಹತ್ತು-ಹತ್ತು ಗಂಧರ್ವಯೋಧರಿಂದ ಪೀಡಿತನಾದ ಪ್ರತಿಯೊಬ್ಬ ಕೌರವಯೋಧನೂ ಕಂಗೆಟ್ಟುಹೋದನು. ಅನೇಕ ಕೌರವಯೋಧರು ಪ್ರಾಣತೊರೆದರು. ಪ್ರಾಣವುಳಿಸಿಕೊಳ್ಳುವ ಆಶೆಯಿದ್ದವರು ಅನ್ಯಥಾ ವಿಧಿಯಿಲ್ಲದೇ ಪಲಾಯನಮಾಡಿದರು. ಇದೇ ರೀತಿಯಲ್ಲಿ ಕೌರವಸೇನೆಯೆಲ್ಲವೂ ಧ್ವಂಸಿತವಾದರೂ ಅಥವಾ ಪಲಾಯಿತವಾದರೂ ಸೂರ್ಯನ ಮಗನಾದ ಕರ್ಣನು ಮಾತ್ರ ಪರ್ವತದಂತೆ ಸುಸ್ಥಿರನಾಗಿ ಯುದ್ಧರಂಗದಲ್ಲಿಯೇ ನಿಂತು ಯುದ್ಧಮಾಡುತ್ತಿದ್ದನು. ದುರ್ಯೋಧನ-ಕರ್ಣ-ಶಕುನಿ-ದುಃಶ್ಯಾಸನರು ಯದ್ಯಪಿ ಬಹುವಾಗಿ ಗಾಯಗೊಂಡಿದ್ದರೂ ಧೈರ್ಯದಿಂದ ತಮ್ಮ ಹೋರಾಟವನ್ನು ಮುಂದುವರಿಸಿದರು.

ಎಲ್ಲ ಗಂಧರ್ವರೂ ಸೇರಿ ತಮ್ಮೆದುರಾಗಿ ಪರ್ವತೋಪಮನಾಗಿ ನಿಂತಿದ್ದ ಕರ್ಣನನ್ನು ಸಂಹರಿಸಲು ನಿಶ್ಚಯಿಸಿದವರಾಗಿ ಸಾವಿರಾರು ಸಂಖ್ಯೆ

ಯಲ್ಲಿ ಒಟ್ಟಾಗಿ ಏಕಕಾಲದಲ್ಲಿ ಕರ್ಣನ ಮೇಲೆ ಬಿದ್ದರು. ಕತ್ತಿ, ಪಟ್ಟಿಶ, ಶೂಲ, ಗದೆ–ಮುಂತಾದ ದಿವ್ಯಾಯುಧಗಳನ್ನು ಧರಿಸಿದ್ದ ಮಹಾಬಲರಾದ ಗಂಧರ್ವರು ಕರ್ಣನನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿದರು. ಕೆಲವು ಗಂಧರ್ವಸೈನಿಕರು ಕರ್ಣನ ರಥದ ಮೂಕಿಯನ್ನು ಕತ್ತರಿಸಿದರು ; ಮತ್ತೆ ಕೆಲವರು ಕುದುರೆಗಳ ಕಡಿವಾಣಗಳನ್ನು ಕತ್ತರಿಸಿದರು ; ಮತ್ತೆ ಕೆಲವರು ಪತಾಕೆಯನ್ನೂ, ಮತ್ತೆ ಕೆಲವರು ಅವನ ರಥದ ಧುರಿಯನ್ನೂ, ಮತ್ತೆ ಕೆಲವರು ಅವನ ತಲೆಯ ಮೇಲಿದ್ದ ಛತ್ರಿಯನ್ನೂ ಕತ್ತರಿಸಿದರು. ಮರುಕ್ಷಣದಲ್ಲಿಯೇ ಕೆಲವರು ಗಂಧರ್ವಯೋಧರು ಕರ್ಣನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಯಮಾಲಯಕ್ಕೆ ಕಳುಹಿಸಿದರು. ಈ ರೀತಿಯಾಗಿ ಕರ್ಣನು ಕುಳಿತಿದ್ದ ರಥವನ್ನು ಗಂಧರ್ವಸೈನಿಕರು ಕ್ಷಣಮಾತ್ರದಲ್ಲಿ ನುಚ್ಚುನೂರುಮಾಡಿದರು. ತನ್ನ ರಥದ ಅವಸ್ಥೆಯನ್ನು ನೋಡಿದ ಕರ್ಣನು ಯುದ್ಧಮಾಡಲಾರದೇ ಕತ್ತಿ-ಗುರಾಣಿಗಳನ್ನು ಕೈಯಲ್ಲಿ ಹಿಡಿದು ಅನತಿದೂರ ದಲ್ಲಿದ್ದ ವಿಕರ್ಣನ ರಥಕ್ಕೆ ಹತ್ತಿ ಅದರಲ್ಲಿ ಕುಳಿತು ಆತ್ಮರಕ್ಷಣಾರ್ಥವಾಗಿ ಯುದ್ಧಭೂಮಿಯಿಂದ ಪರಾಙ್ಮುಖನಾದನು.

೨೪೧ನೆಯ ಅಧ್ಯಾಯವು ಮುಗಿಯಿತು.

೨೪೨ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಗಂಧರ್ವರಿಂದ ದುರ್ಯೋಧನಾದಿಗಳ ಪರಾಜಯ : ಗಂಧರ್ವರು ದುರ್ಯೋಧನನನ್ನೂ ಮತ್ತು ಅವನ ಪರಿವಾರದವರನ್ನೂ ಸೆರೆಹಿಡಿದುದು

ಜನಮೇಜಯ! ಆ ಮೊದಲೇ ಸಾವಿರಾರು ಮಂದಿ ಕೌರವಯೋಧರು ಗಂಧರ್ವರ ಪ್ರಹಾರವನ್ನು ತಡೆದುಕೊಳ್ಳಲಾರದೇ ಪಲಾಯನಮಾಡಿದ್ದರು. ತಮ್ಮ ಏಕೈಕರಕ್ಷಕನಾಗಿದ್ದ ಕರ್ಣನೂ ಯುದ್ಧಭೂಮಿಯಿಂದ ಹಿಂದಿರುಗಿದ ಮೇಲೆ ಅಲ್ಲಿ ಕೌರವರ ಒಬ್ಬ ಸೈನಿಕನೂ ನಿಲ್ಲಲಿಲ್ಲ. ದುರ್ಯೋಧನನ ಸಮ್ಮುಖ ದಲ್ಲಿಯೇ ಎಲ್ಲ ಸೈನಿಕರೂ ಯುದ್ಧರಂಗದಿಂದ ಕಾಲುಕಿತ್ತರು. ತನ್ನ ಅಪಾರ ಸೈನ್ಯವೂ ಸಹ ಶತ್ರುವಿಗೆ ಬೆನ್ನುತೋರಿಸಿಕೊಂಡು ಪಲಾಯನಮಾಡುತ್ತಿ

ದ್ದರೂ ಅಭಿಮಾನಿಯಾದ ದುರ್ಯೋಧನನು ಮಾತ್ರ ಹಿಮ್ಮೆಟ್ಟಲಿಲ್ಲ. ಅಪಾರ ವಾದ ಗಂಧರ್ವಸೈನ್ಯವೇ ತನ್ನೆಡೆಗೆ ಧಾವಿಸಿ ಬರುತ್ತಿರುವುದನ್ನು ಕಂಡು ಅರಿಂದಮನಾದ ದುರ್ಯೋಧನನು ಬಾಣಗಳ ಮಳೆಯನ್ನೇ ಗಂಧರ್ವಸೈನ್ಯದ ಮೇಲೆ ಸುರಿಸಿದನು. ಅನುಸ್ಯೂತವಾಗಿ ಬೀಳುತ್ತಿದ್ದ ಆ ಬಾಣಗಳ ವರ್ಷ ವನ್ನೂ ಲೆಕ್ಕಿಸದೇ ಗಂಧರ್ವಸೈನಿಕರು ದುರ್ಯೋಧನನನ್ನೂ ಸಂಹರಿಸಿಬಿಡ



ಬೇಕೆಂಬ ಏಕೈಕನಿಶ್ಚಯದಿಂದ ಅವನ ರಥವನ್ನು ಸುತ್ತುವರಿದು ನಿಂತು ಯುದ್ಧಮಾಡಲು ಉಪಕ್ರಮಿಸಿದರು. ನಿಶಿತವಾದ ಬಾಣಗಳಿಂದ ಕ್ಷಣಮಾತ್ರ ದಲ್ಲಿ ಗಂಧರ್ವಯೋಧರು ದುರ್ಯೋಧನನ ರಥದ ನೊಗವನ್ನೂ, ಮೂಕಿ ಯನ್ನೂ, ಚಕ್ರಗಳನ್ನೂ, ಪತಾಕೆಯನ್ನೂ, ತ್ರಿವೇಣಿಗಳನ್ನೂ ಕತ್ತರಿಸಿ ಪುಡಿ

ಮಾಡಿ ಮರುಕ್ಷಣದಲ್ಲಿ ಕುದುರೆಗಳನ್ನೂ, ಸಾರಥಿಯನ್ನೂ ಸಂಹರಿಸಿದರು. ದುರ್ಯೋಧನನು ರಥಹೀನನಾಗಿ ಭೂಮಿಯ ಮೇಲೆ ಬಿದ್ದನು. ಅನಾಥನಂತೆ ಭೂಮಿಯ ಮೇಲೆ ಬಿದ್ದಿದ್ದ ದುರ್ಯೋಧನನನ್ನು ಮಹಾಬಾಹುವಾದ ಚಿತ್ರ ಸೇನನು ಒಡನೆಯೇ ಮುನ್ನುಗ್ಗಿ ಹೋಗಿ ಜೀವಸಹಿತವಾಗಿ ಸೆರೆಹಿಡಿದನು.

ರಾಜನನ್ನು ಸೆರೆಹಿಡಿದನಂತರ ಗಂಧರ್ವಪ್ರಮುಖರು ರಥದಲ್ಲಿ ಕುಳಿತಿದ್ದ ದುಃಶಾಸನನನ್ನು ಆಕ್ರಮಿಸಿ ಕ್ಷಣಮಾತ್ರದಲ್ಲಿ ಅವನನ್ನೂ ಸೆರೆಹಿಡಿದರು. ಮತ್ತೆ ಕೆಲವು ಗಂಧರ್ವಯೋಧರು ವಿವಿಂಶತಿಯನ್ನೂ, ಚಿತ್ರಸೇನನೆಂಬ ದುರ್ಯೋಧನನ ತಮ್ಮನನ್ನೂ ಸೆರೆಹಿಡಿದರು. ಮತ್ತೆ ಕೆಲವು ಗಂಧರ್ವ ಪ್ರಮುಖರು ವಿಂದಾನುವಿಂದರನ್ನೂ, ಮತ್ತೆ ಕೆಲವರು ದುರ್ಯೋಧನನ ಅಂತಃಪುರದ ಸ್ತ್ರೀಯರನ್ನೂ ಸೆರೆಹಿಡಿದರು.

ಜನಮೇಜಯ! ಅನಂತರ ಪರಾಜಿತರಾದ ಮತ್ತು ಪರಾಙ್ಮುಖರಾದ ದುರ್ಯೋಧನನ ಸೈನಿಕರು ಒಟ್ಟಾಗಿ ಸಮಾಲೋಚಿಸಿ ಅನತಿದೂರದಲ್ಲಿದ್ದ ಪಾಂಡವರ ಸಮೀಪಕ್ಕೆ ತೆರಳಿದರು. ದುರ್ಯೋಧನಾದಿಗಳನ್ನು ಗಂಧರ್ವರು ಸೆರೆಹಿಡಿದನಂತರ ಕೌರವಸೈನಿಕರು ಹಸ್ತಿನಾಪುರದಿಂದ ಕರೆತಂದಿದ್ದ ವಾಹನ ಗಳುಳ್ಳವರೂ, ಅಂಗಡಿ-ಮುಂಗಟ್ಟುಗಳುಳ್ಳವರೂ ರಕ್ಷಣೆಗಾಗಿ ಪಾಂಡವರಿಗೆ ಶರಣಾಗತರಾದರು. ಸೈನಿಕರೂ, ಅಮಾತ್ಯರೂ ಬದ್ಧಾಂಜಲಿಗಳಾಗಿ ನಿಂತು ಯುಧಿಷ್ಠಿರನನ್ನು ಪ್ರಾರ್ಥಿಸತೊಡಗಿದರು :

"ಮಹಾರಾಜ! ಪ್ರಿಯದರ್ಶಿಯಾದ, ಮಹಾಬಾಹುವಾದ, ಬಲಶಾಲಿ ಯಾದ, ಧೃತರಾಷ್ಟ್ರನ ಮಗನಾದ ದುರ್ಯೋಧನನು ಗಂಧರ್ವರಿಂದ ಸೆರೆ ಹಿಡಿಯಲ್ಪಟ್ಟಿದ್ದಾನೆ. ಪಾರ್ಥರೇ! ನೀವೀಗಲೇ ಆ ಗಂಧರ್ವರನ್ನು ಬೆನ್ನಟ್ಟಿ ಹೋಗಿ ನಮ್ಮ ರಾಜನನ್ನು ಬಿಡಿಸಿರಿ. ನಮ್ಮ ರಾಜನು ಮಾತ್ರವೇ ಅಲ್ಲ; ಅವನ ಅನುಜರಾದ ದುಃಶಾಸನ-ದುರ್ವಿಷಹ-ದುರ್ಮುಖ-ದುರ್ಜಯಾದಿ ಗಳೇ ಅಲ್ಲದೇ ರಾಜನ ಅಂತಃಪುರದ ಸ್ತ್ರೀಯರೂ ಸಹ ಗಂಧರ್ವರಿಂದ ಸೆರೆ ಹಿಡಿಯಲ್ಪಟ್ಟಿದ್ದಾರೆ"—ಹೀಗೆಂಬುದಾಗಿ ದುರ್ಯೋಧನಾಮಾತ್ಯರು ಅಳುತ್ತ ಳುತ್ತಾ ಯುಧಿಷ್ಠಿರನಲ್ಲಿ ತಮ್ಮ ರಾಜನ ಬಿಡುಗಡೆಗಾಗಿ ಪ್ರಾರ್ಥಿಸಿದರು.

ಬಹಳ ದುಃಖಿತರಾದ, ದೀನರಾದ, ವೃದ್ಧರಾದ, ದುರ್ಯೋಧನನ ವಿಮೋಚನೆಗಾಗಿ ಯುಧಿಷ್ಠಿರನನ್ನು ಅಂಗಲಾಚಿ ಬೇಡುತ್ತಿದ್ದ ಅಮಾತ್ಯರನ್ನು ಕುರಿತು ಭೀಮನು ಹೀಗೆಂದು ಹೇಳಿದನು :

**ಮಹತಾ ಹಿ ಪ್ರಯತ್ನೇನ ಸಂನಹ್ಯ ಗಜವಾಜಿಭಿಃ ।**
**ಅಸ್ಮಾಭಿರ್ಯದನುಷ್ಠೇಯಂ ಗನ್ಧರ್ವೈಸ್ತದನುಷ್ಠಿತಮ್ ॥೧೫॥**

**ಅನ್ಯಥಾ ವರ್ತಮಾನಾನಾಮರ್ಥೋ ಜಾತೋಽಯಮನ್ಯಥಾ ।**
**ದುರ್ಮನ್ತ್ರಿತಮಿದಂ ತಾವದ್ರಾಜ್ಞೋ ದುರ್ದ್ಯೂತದೇವಿನಃ ॥೧೬॥**

"ಎಲೈ ಅಮಾತ್ಯರೇ! ನಾವು ಬಹಳ ಪ್ರಯತ್ನದಿಂದ ಲಕ್ಷ-ಲಕ್ಷ ರಥ-ಗಜಾಶ್ವ-ಪದಾತಿಸೈನ್ಯಗಳನ್ನು ಸಂಗ್ರಹಿಸಿ ಮಾಡಬೇಕಾಗಿದ್ದ ಕಾರ್ಯವನ್ನು ಗಂಧರ್ವರಿಂದು ಮಾಡಿಬಿಟ್ಟಿದ್ದಾರೆ. ಯಾವುದೋ ದುರುದ್ದೇಶದಿಂದ ಬಂದ ಕೌರವರಿಗೆ ತಮ್ಮ ಆಲೋಚನೆಗೆ ಮೀರಿದ ಯಾವುದೋ ಕಾರ್ಯವು ನಡೆದುಹೋಯಿತು. ಮೋಸದ ಪಗಡೆಯಾಟವನ್ನು ಚೆನ್ನಾಗಿ ತಿಳಿದಿರುವ ರಾಜನ ಕೆಟ್ಟ ಮಂತ್ರಾಲೋಚನೆಯ ಫಲವೇ ಇದಾಗಿರಬೇಕು.

**ದ್ವೇಷ್ಟಾರಮನ್ಯೇ ಕ್ಲೀಬಸ್ಯ ಪಾತಯನ್ತೀತಿ ನಃ ಶ್ರುತಮ್ ।**
**ಇದಂ ಕೃತಂ ನಃ ಪ್ರತ್ಯಕ್ಷಂ ಗನ್ಧರ್ವೈರತಿಮಾನುಷಮ್ ॥೧೭॥**

ದುರ್ಬಲನಾದವನೊಬ್ಬನನ್ನು ದ್ವೇಷಮಾಡುವ ದುಷ್ಟನನ್ನು ಮೂರನೆಯವರು ಬಂದು ಧ್ವಂಸಮಾಡಿಬಿಡುತ್ತಾರೆಂಬ ಹಿರಿಯರ ಮಾತನ್ನು ನಾವು ಹಿಂದೆ ಕೇಳಿದ್ದೆವು. ಈ ಮಾತು ನಮ್ಮ ಕಣ್ಣೆದುರಿನಲ್ಲಿಯೇ ಸ್ಥಿರೀಕರಿಸಲ್ಪಟ್ಟಿತು. ಗಂಧರ್ವರು ಅತಿಮಾನುಷಪರಾಕ್ರಮವನ್ನು ಪ್ರದರ್ಶಿಸಿ ಆ ಉಕ್ತಿಯನ್ನಿಂದು ಸತ್ಯೋಕ್ತಿಯನ್ನಾಗಿ ಮಾಡಿ ತೋರಿಸಿಬಿಟ್ಟಿದ್ದಾರೆ.

**ದಿಷ್ಟ್ಯಾ ಲೋಕೇ ಪುಮಾನಸ್ತಿ ಕಶ್ಚಿದಸ್ಮತ್ಪ್ರಿಯೇ ಸ್ಥಿತಃ ।**
**ಯೇನಾಸ್ಮಾಕಂ ಹೃತೋ ಭಾರ ಆಸೀನಾನಾಂ ಸುಖಾವಹಃ ॥೧೮॥**

ನಿಶ್ಚಯವಾಗಿಯೂ ಈ ಲೋಕದಲ್ಲಿ ನಮಗೆ ಪ್ರಿಯವನ್ನೆಸಗುವ ಅಥವಾ ನಾವು ಮಾಡಬೇಕಾಗಿದ್ದ ಕಾರ್ಯವನ್ನು ಮಾಡಿ ನಮ್ಮ ಭಾರವಿಳಿಸುವ ವ್ಯಕ್ತಿಗಳು ಅದೃಷ್ಟವಶಾತ್ ಒಬ್ಬಿಬ್ಬರಾದರೂ ಇದ್ದಾರೆಂಬುದು

ಗಂಧರ್ವರ ಈ ಕಾರ್ಯದಿಂದ ತಿಳಿಯಲ್ಪಟ್ಟಿತು. ಕಾರ್ಯಮಾಡಬೇಕಾಗಿರುವ ನಾವು ಇಲ್ಲಿ ಸುಮ್ಮನೆ ಕುಳಿತಿದ್ದೇವೆ. ನಾವು ಮಾಡಬೇಕಾಗಿದ್ದ ಕಾರ್ಯವನ್ನೀಗ ಮತ್ತೊಬ್ಬನು ಮಾಡಿ ಮುಗಿಸಿಯೇ ಬಿಟ್ಟಿರುತ್ತಾನೆ.

**ಶೀತವಾತಾತಪಸಹಾಂಸ್ತಪಸಾ ಚೈವ ಕರ್ಶಿತಾನ್ ।**
**ಸಮಸ್ಥೋ ವಿಷಮಸ್ಥಾನ್ಹಿ ದ್ರಷ್ಟುಮಿಚ್ಛತಿ ದುರ್ಮತಿಃ ॥೧೯॥**

ಈ ದುಷ್ಟ ದುರ್ಯೋಧನನು ನಮ್ಮನ್ನು ಕುಚೋದ್ಯಮಾಡುವುದಕ್ಕೋಸ್ಕರ ಸಕಲವಿಧವಾದ ವೈಭವದೊಡನೆಯೂ ಇಲ್ಲಿಗೆ ಆಗಮಿಸಿದ್ದನು. ಮಳೆ-ಗಾಳಿ-ಬಿಸಿಲುಗಳಿಗೆ ಸಿಲುಕಿ, ತಪಸ್ಸಿನಿಂದ ಕೃಶರಾದ, ರಾಜ್ಯ-ಕೋಶಾದಿಗಳನ್ನು ಕಳೆದುಕೊಂಡಿರುವ ನಮ್ಮನ್ನು–ಸಮಭೂಮಿಯಲ್ಲಿರುವವನು ಹಳ್ಳದಲ್ಲಿ ಬಿದ್ದಿರುವವನನ್ನು ನೋಡಿ ಅಪಹಾಸ್ಯಮಾಡುವಂತೆ–ನೋಡಿ ಅಪಹಾಸ್ಯಮಾಡುವ ಸಲುವಾಗಿ ಮತ್ತು ತನ್ನ ವೈಭವವನ್ನು ತೋರಿಸಿಕೊಳ್ಳುವ ಸಲುವಾಗಿ ದುರ್ಮತಿಯಾದ ದುರ್ಯೋಧನನು ಇಲ್ಲಿಗೆ ಆಗಮಿಸಿದ್ದನು.

**ಅಧರ್ಮಚಾರಿಣಸ್ತಸ್ಯ ಕೌರವ್ಯಸ್ಯ ದುರಾತ್ಮನಃ ।**
**ಯೇ ಶೀಲಮನುವರ್ತನ್ತೇ ತೇ ಪಶ್ಯನ್ತಿ ಪರಾಭವಮ್ ॥೨೦॥**

ಅಧರ್ಮಿಯಾದ, ದುರಾತ್ಮನಾದ ದುಷ್ಟ ದುರ್ಯೋಧನನ ಗುಣ-ಶೀಲಗಳನ್ನು ಯಾರು ಅನುಸರಣೆಮಾಡುತ್ತಿರುತ್ತಾರೆಯೋ ಅವರಿಗಿಂದು ಅದರ ಫಲವೇನೆಂಬುದರ ಪ್ರತ್ಯಕ್ಷದರ್ಶನವಾಗಿದೆ.

**ಅಧರ್ಮೋ ಹಿ ಕೃತಸ್ತೇನ ಯೇನೈತದುಪಶಿಕ್ಷಿತಮ್ ।**
**ಅನೃಶಂಸಾಸ್ತು ಕೌನ್ತೇಯಾಸ್ತತ್ಪ್ರತ್ಯಕ್ಷಂ ಬ್ರವೀಮಿ ವಃ ॥೨೧॥**

ಹೀಗೆ ಮಾಡಬೇಕೆಂದು ಯಾರು ದುರ್ಯೋಧನನಿಗೆ ಯೋಜನೆಯನ್ನು ಹಾಕಿಕೊಟ್ಟರೋ ಅವರು ಮಹಾಪಾಪಿಷ್ಠರೇ ಸರಿ. ಕುಂತಿಯ ಮಕ್ಕಳಾದರೋ ಖಂಡಿತವಾಗಿಯೂ ಕ್ರೂರಿಗಳಲ್ಲ ; ದುಷ್ಟಬುದ್ಧಿಯವರೂ ಅಲ್ಲ. ಅದನ್ನಿಂದು ನಿಮ್ಮ ಸಮಕ್ಷದಲ್ಲಿಯೇ ಹೇಳುತ್ತೇನೆ."

ಕರ್ಕಶವಾದ ಧ್ವನಿಯಲ್ಲಿ ಕುಂತೀಪುತ್ರನಾದ ಭೀಮನು ದುರ್ಯೋ-

ಧನನ ಅಮಾತ್ಯರಿಗೆ ವ್ಯಂಗ್ಯವಾಗಿ ಹೀಗೆ ಹೇಳುತ್ತಿರಲಾಗಿ ಧರ್ಮಾತ್ಮನಾದ ಯುಧಿಷ್ಠಿರನು ಭೀಮನನ್ನು ಕುರಿತು ಹೇಳಿದನು :

**ನ ಕಾಲಃ ಪರುಷಸ್ಯಾಯಂ**

"ಕಠಿನವಾಕ್ಯಗಳನ್ನು ಅಥವಾ ಮನನೋಯಿಸುವ ಮಾತುಗಳನ್ನಾಡಲು ಇದು ಸಮಯವಲ್ಲ, ಭೀಮಸೇನ!"

೨೪೨ನೆಯ ಅಧ್ಯಾಯವು ಮುಗಿಯಿತು.

೨೪೩ನೆಯ ಅಧ್ಯಾಯ — ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಭೀಮಸೇನನಿಗೆ ಕೌರವರನ್ನು ಗಂಧರ್ವರಿಂದ ಬಿಡಿಸಿಕೊಂಡುಬರುವಂತೆ ಹೇಳಿದುದು : ಕೌರವರನ್ನು ಬಿಡಿಸಿಕೊಂಡು ಬರಲು ಅರ್ಜುನನ ಪ್ರತಿಜ್ಞೆ

ಯುಧಿಷ್ಠಿರನು ಮುಂದುವರಿದು ಹೇಳಿದನು :

"ಮಗು ಭೀಮಸೇನ! ಭೀತರಾಗಿರುವ, ಶರಣಾಗತರಾಗಿರುವ, ಕಷ್ಟದಲ್ಲಿ ಸಿಕ್ಕಿಕೊಂಡಿರುವ ಕೌರವರ ವಿಷಯದಲ್ಲಿ ನೀನೀಗ ಇಂತಹ ಮನನೋಯಿಸುವ ಮಾತುಗಳನ್ನು ಹೇಗೆ ತಾನೇ ಆಡುವೆ?

**ಭವನ್ತಿ ಭೇದಾ ಜ್ಞಾತೀನಾಂ ಕಲಹಾಶ್ಚ ವೃಕೋದರ ।**
**ಪ್ರಸಕ್ತಾನಿ ಚ ವೈರಾಣಿ ಕುಲಧರ್ಮೋ ನ ನಶ್ಯತಿ ॥೨॥**

**ಯದಾ ತು ಕಶ್ಚಿಜ್ಜ್ಞಾತೀನಾಂ ಬಾಹ್ಯಃ ಪ್ರೋಥಯತೇ ಕುಲಮ್ ।**
**ನ ಮರ್ಷಯನ್ತಿ ತತ್ಸನ್ತೋ ಬಾಹ್ಯೇನಾಭಿಪ್ರಧರ್ಷಣಮ್ ॥೩॥**

ಜ್ಞಾತಿಗಳಲ್ಲಿ (ಅಣ್ಣ-ತಮ್ಮಂದಿರಲ್ಲಿ) ಪರಸ್ಪರವಾಗಿ ಅಭಿಪ್ರಾಯಭೇದಗಳೂ ಇರುತ್ತವೆ. ಅದೇ ಕಾರಣದಿಂದ ಕಲಹಗಳೂ ಸಹ ಆಗುತ್ತಲೇ ಇರುತ್ತವೆ. ಈ ವಿಧವಾದ ವೈರಗಳು ಪರಸ್ಪರ ಇದ್ದೇ ಇರುತ್ತವೆ. ಆದರೆ ಇದರಿಂದಾಗಿ ಕುಲಧರ್ಮವು ಹಾಳಾದಂತಾಗುವುದಿಲ್ಲ. ಆದರೆ ಹೊರಗಿನವನೊಬ್ಬನು ಬಂದು ತಮ್ಮ ಕುಲದವರನ್ನು ಅವಮಾನಗೊಳಿಸಲು ಯತ್ನಿಸಿದರೆ

ಅಂತಹ ಅವಮಾನವನ್ನು ಸತ್ಪುರುಷರಾದವರು ಸಹಿಸಿಕೊಳ್ಳುವುದಿಲ್ಲ. ಪ್ರಸಕ್ತಸಂದರ್ಭದಲ್ಲಿ ದುರ್ಯೋಧನನಿಗೆ ಆಗಿರುವ ಅವಮಾನವು ನಮಗೂ ಆದಂತೆಯೇ ಸರಿ. ಮೇಲಾಗಿ ದುಷ್ಟಬುದ್ಧಿಯಾದ ಆ ಗಂಧರ್ವರಾಜನು ನಾವು ಇಲ್ಲಿಯೇ ಸ್ವಲ್ಪಕಾಲದಿಂದ ತಂಗಿರುವೆವೆಂಬ ವಿಷಯವನ್ನೂ ಸಹ ತಿಳಿದಿರುತ್ತಾನೆ. ನಮ್ಮನ್ನೂ ನಿರ್ಲಕ್ಷಿಸಿ ನಮಗೆ ಪರಮಾಪ್ರಿಯವಾದ ಈ ಹೇಯಕಾರ್ಯವನ್ನು ಆ ಚಿತ್ರಸೇನನು ಮಾಡಿರುತ್ತಾನೆ. ಸಕಲಭುವನಗಳಿಗೂ ಪ್ರಭುವಾಗಲು ಯೋಗ್ಯನಾಗಿರುವ ಭೀಮಸೇನನೇ! ಆ ದುಷ್ಟ ಗಂಧರ್ವ ನಿಂದು ದುರ್ಯೋಧನನನ್ನು ಬಲಾತ್ಕಾರವಾಗಿ ಸೆರೆಹಿಡಿದುಕೊಂಡು ಹೋಗಿ ರುವುದರಿಂದಲೂ ಮತ್ತು ನಮ್ಮ ಮನೆಯ ಹೆಂಗಸರನ್ನು ಪರಕೀಯರು ಸೆಳೆದುಕೊಂಡು ಹೋಗಿರುವುದರಿಂದಲೂ–ನಮ್ಮ ವಂಶದ ಕೀರ್ತಿಯು ಹೋದಂತಾಗಿದೆ. ಆದುದರಿಂದ ಪುರುಷವ್ಯಾಘ್ರರೇ! ನೀವೀಗಲೇ ಆಯುಧ ಪಾಣಿಗಳಾಗಿ ಹೋಗಿ ನಮ್ಮ ವಂಶದ ಕೀರ್ತಿಯನ್ನು ರಕ್ಷಿಸುವ ಸಲುವಾಗಿ ಸೆರೆಯಾಗಿರುವವರನ್ನು ಬಿಡಿಸಿಕೊಂಡು ಬನ್ನಿರಿ. ಮೇಲಾಗಿ ಕೌರವರೇ ಬಂದು ನಮ್ಮ ರಕ್ಷಣೆಯನ್ನು ಕೇಳುತ್ತಿದ್ದಾರೆಂದಮೇಲೆ ನಾವು ಪುನಃ ಯೋಚಿಸಬೇಕಾದ ಪ್ರಮೇಯವೇ ಇಲ್ಲ. ಶರಣಾಗತರನ್ನು ರಕ್ಷಿಸುವುದು ನಮ್ಮ ಕುಲ ಧರ್ಮ. ತಡಮಾಡಬೇಡಿರಿ. ನರವ್ಯಾಘ್ರರೇ! ಒಡನೆಯೇ ಸಜ್ಜಾಗಿ ನಿಲ್ಲಿರಿ. ಅರ್ಜುನನು ಹೊರಡಲಿ ; ನಕುಲ-ಸಹದೇವರೂ ಹೊರಡಲಿ. ಯುದ್ಧದಲ್ಲಿ ಪರಾಜಯವೆಂಬುದನ್ನೇ ಅರಿಯದ ನೀನೂ ಹೊರಡು, ಭೀಮಸೇನ! ಗಂಧರ್ವರಿಂದ ಸೆಳೆಯಲ್ಪಡುತ್ತಿರುವ ದುರ್ಯೋಧನನನ್ನು ಈಗಲೇ ಬಿಡು ಗಡೆಮಾಡಿರಿ. ಸಜ್ಜಾಗಿರುವ ರಥಗಳಿಲ್ಲವೆಂದೂ ನೀವು ಯೋಚಿಸಬೇಕಾಗಿಲ್ಲ. ಸರ್ವಶಸ್ತ್ರಸಮನ್ವಿತವಾದ, ದೋಷರಹಿತವಾದ, ಸುವರ್ಣಪತಾಕೆಗಳಿಂದ ಕೂಡಿರುವ ದುರ್ಯೋಧನಾದಿಗಳ ರಥಗಳು ಸಿದ್ಧವಾಗಿಯೇ ಇವೆ.

ಶಸ್ತ್ರಪ್ರಯೋಗಕುಶಲರಾದ ಇಂದ್ರಸೇನಾದಿ ಸಾರಥಿಗಳು ಆ ರಥಗಳ ಸಾರಥ್ಯವನ್ನು ವಹಿಸಲಿ. ಗಂಭೀರಶಬ್ದವನ್ನುಂಟುಮಾಡುವ ಸುಸಜ್ಜಿತವಾದ ಆ ರಥಗಳನ್ನು ನೀವು ಒಡನೆಯೇ ಆರೋಹಣಮಾಡಿರಿ. ರಥಗಳಲ್ಲಿ ಕುಳಿತು ಗಂಧರ್ವರೊಡನೆ ಯುದ್ಧಮಾಡಿ ದುರ್ಯೋಧನನ ವಿಮೋಚನೆಯನ್ನು ಸಾಧಿಸಿರಿ. ಆಲಸ್ಯಮಾಡದೇ ಬೇಗ ಹೊರಡಿರಿ.

**ಯ ಏವ ಕಶ್ಚಿದ್ರಾಜನ್ಯಃ ಶರಣಾರ್ಥಮಿಹಾಗತಮ್ ।**
**ಪರಂ ಶಕ್ತ್ಯಾಭಿರಕ್ಷೇತ ಕಿಂ ಪುನಸ್ತ್ವಂ ವೃಕೋದರ ॥೧೧॥**

ಸಾಮಾನ್ಯನಾದ ಒಬ್ಬ ಕ್ಷತ್ರಿಯರಾಜನೇ ಆದರೂ ಆಶ್ರಿತನಾಗಿ ಬಂದ ಶರಣಾಗತನನ್ನು ತನ್ನ ಪೂರ್ಣಶಕ್ತಿಯನ್ನೂ ನಿಯೋಜಿಸಿ ರಕ್ಷಿಸುತ್ತಾನೆ. ಇದು ಕ್ಷತ್ರಿಯಧರ್ಮ. ಹೀಗಿರುವಾಗ ನಿನ್ನ ವಿಷಯದಲ್ಲಿ ಹೇಳಬೇಕಾದ್ದೇನಿದೆ? ಭೀಮಸೇನ!

**ಕ ಇಹಾರ್ಯೋ ಭವೇತ್ತ್ರಾಣಮಭಿಧಾವೇತಿ ನೋದಿತಃ ।**
**ಪ್ರಾಞ್ಜಲಿಂ ಶರಣಾಪನ್ನಂ ದೃಷ್ಟ್ವಾ ಶತ್ರುಮಪಿ ಧ್ರುವಮ್ ॥೧೨॥**

ಬದ್ಧಾಂಜಲಿಯಾಗಿ ನಮ್ಮನ್ನಿಂದು ರಕ್ಷಣೆಕೇಳಿರುವವನು ನಮ್ಮ ಶತ್ರುವೇ ಆಗಿರಬಹುದು. ಅವನು ನಮ್ಮ ಶತ್ರುವೇ ಆದರೂ ಸಹ ತನ್ನ ರಕ್ಷಣೆಗೆ ಬರಬೇಕೆಂದು ನಮ್ಮನ್ನು ಅಂಗಲಾಚಿ ಬೇಡುತ್ತಿದ್ದಾನೆ. ಇಂತಹವನ ರಕ್ಷಣೆಗೆ ಇಲ್ಲಿರುವ ಆರ್ಯರಲ್ಲಿ ಯಾರು ಮುಂದೆ ಬರುತ್ತೀರಿ? ಯಾರಿವನ ರಕ್ಷಣೆಯ ಭಾರವನ್ನು ವಹಿಸುತ್ತೀರಿ?

**ವರಪ್ರದಾನಂ ರಾಜ್ಯಂ ಚ ಪುತ್ರಜನ್ಮ ಚ ಪಾಣ್ಡವಾಃ ।**
**ಶತ್ರೋಶ್ಚ ಮೋಕ್ಷಣಂ ಕ್ಲೇಶಾತ್ತ್ರೀಣಿ ಚೈಕಂ ಚ ತತ್ಸಮಮ್ ॥೧೩॥**

ಅಮೋಘವಾದ ವರವೊಂದನ್ನು ಕೊಡುವುದು, ರಾಜ್ಯಪ್ರಾಪ್ತಿ ಮತ್ತು ಪುತ್ರಪ್ರಾಪ್ತಿ–ಇವುಗಳು ಹೆಚ್ಚು ಸಂತೋಷದಾಯಕಗಳು. ಆದರೆ ಶತ್ರುವೊಬ್ಬನು ಸಂಕಟದಲ್ಲಿರುವಾಗ ಅವನನ್ನು ಸಂರಕ್ಷಿಸುವುದು–ಈ ಮೂರು ಆನಂದಗಳೂ ಒಟ್ಟಿಗೆ ಸೇರಿದಷ್ಟು ಆನಂದವನ್ನು ಉಂಟುಮಾಡುತ್ತದೆ.

**ಕಿಂ ಚಾಪ್ಯಧಿಕಮೇತಸ್ಮಾದ್ಯದಾಪನ್ನಃ ಸುಯೋಧನಃ ।**
**ತ್ವದ್ಬಾಹುಬಲಮಾಶ್ರಿತ್ಯ ಜೀವಿತಂ ಪರಿಮಾರ್ಗತೇ ॥೧೪॥**

ಭೀಮಸೇನ! ನಿನಗೆ ಇದಕ್ಕಿಂತಲೂ ಹೆಚ್ಚಿನ ಆನಂದವೊಂದಿದೆಯೇ? ನಿನ್ನ ಪರಮಶತ್ರುವಾದ ಸುಯೋಧನನಿಂದು ಸಂಕಟಕ್ಕೆ ಸಿಕ್ಕಿದ್ದಾನೆ. ನಿನ್ನ ಬಾಹುಬಲವನ್ನಾಶ್ರಯಿಸಿ ಜೀವಿಸುವ ಹಾದಿಯನ್ನು ನೋಡುತ್ತಿದ್ದಾನೆ.

ಇಂತಹ ಸಮಯದಲ್ಲಿ ನಿನ್ನ ಭುಜಬಲ-ಪರಾಕ್ರಮಗಳಿಂದ ಅವನ ಬಿಡುಗಡೆ ಮಾಡಿಸುವುದು ನಿನಗೆ ಸಂತೋಷದಾಯಕವಲ್ಲವೇ? ನಾನು ಉಪಕ್ರಮಿಸಿರುವ ಕ್ರತುವಿನ ಅವಭೃಥವಾಗಿಬಿಟ್ಟಿದ್ದರೆ ನಾನೇ ಆಯುಧಪಾಣಿಯಾಗಿ ಅವನ ರಕ್ಷಣೆಗೆ ಹೊರಟುಬಿಡುತ್ತಿದ್ದೆನು. ಇದರಲ್ಲಾವ ಸಂಶಯವೂ ಇಲ್ಲ. ಆದರೆ ಯಜ್ಞದ ಅವಭೃಥವಾಗದೇ ಇರುವುದರಿಂದ ನಿಮ್ಮನ್ನು ಈ ಕಾರ್ಯಕ್ಕೆ ನಿಯೋಜಿಸಬೇಕಾಗಿದೆ. ಭಾರತರೇ! ನೀವು ಗಂಧರ್ವರಾಜನೊಡನೆ ಮೊದಲು ಸಾಮೋಪಾಯದಿಂದಲೇ ದುರ್ಯೋಧನನ ಬಿಡುಗಡೆಗೆ ಯತ್ನಿಸಿರಿ. ಒಂದು ವೇಳೆ ಆ ಗಂಧರ್ವರಾಜನು ಸಾಮೋಪಾಯಕ್ಕೆ ಮಣಿಯದಿದ್ದರೆ ಅನಂತರದಲ್ಲಿ ಹೆಚ್ಚು ಪ್ರಾಣಾಪಾಯವಾಗದಂತೆ ಮೃದುಯುದ್ಧಮಾಡಿ ದುರ್ಯೋಧನನನ್ನು ಸೆರೆಯಿಂದ ಬಿಡಿಸಿರಿ. ಒಂದು ವೇಳೆ ಶತ್ರುವು ಅಲ್ಲಿಗೂ ಬಗ್ಗದೇ ತನ್ನ ಸಕಲಬಲವನ್ನೂ ನಿಮ್ಮನ್ನು ಪರಾಜಯಗೊಳಿಸುವ ಸಲುವಾಗಿಯೇ ವಿನಿಯೋಗಿಸಿದರೆ ಆ ಸಮಯದಲ್ಲಿ ನೀವೂ ಸಹ ಮಹಾಸ್ತ್ರಗಳ ಆಶ್ರಯಪಡೆದು ಗಂಧರ್ವರಾಜನನ್ನು ವಿಧ್ವಂಸಮಾಡಿಯಾದರೂ ದುರ್ಯೋಧನನನ್ನು ಬಿಡುಗಡೆಮಾಡಿರಿ. ಭೀಮಸೇನ! ನಾನು ನಿಮಗೆ ಹೇಳುವುದು ಇಷ್ಟು ಮಾತ್ರ. ಇದಕ್ಕಿಂತಲೂ ಹೆಚ್ಚು ನಾನೇನನ್ನೂ ಹೇಳಲಾರೆ. ಕ್ರತುವಿನ್ನೂ ಮುಗಿಯದೇ ಇರುವುದರಿಂದ ನಾನು ಯಾವ ಕಾರ್ಯವನ್ನೂ ಮಾಡುವಂತಿಲ್ಲ."

ಜನಮೇಜಯ! ಅಜಾತಶತ್ರುವಿನ ಈ ಮಾತುಗಳನ್ನು ಕೇಳಿ ಅಣ್ಣನ ಆಜ್ಞೆಗೆ ಸಂಪೂರ್ಣವಾಗಿ ಗೌರವತೋರುವ ಸಲುವಾಗಿ ಅರ್ಜುನನು ಅಲ್ಲಿ ನೆರೆದಿದ್ದವರ ಮುಂದೆ ಕೌರವರ ವಿಮೋಚನೆಗಾಗಿ ಈ ಪ್ರತಿಜ್ಞೆಯನ್ನು ಮಾಡಿದನು :

**ಯದಿ ಸಾಮ್ನಾ ನ ಮೋಕ್ಷ್ಯನ್ತಿ ಗನ್ಧರ್ವಾ ಧೃತರಾಷ್ಟ್ರಜಾನ್ ।**
**ಅದ್ಯ ಗನ್ಧರ್ವರಾಜಸ್ಯ ಭೂಮಿಃ ಪಾಸ್ಯತಿ ಶೋಣಿತಮ್ ॥೨೧॥**

"ಒಳ್ಳೆಯ ಮಾತುಗಳಿಂದ ಗಂಧರ್ವರೇನಾದರೂ ಧೃತರಾಷ್ಟ್ರನ ಮಕ್ಕಳನ್ನು ಬಿಡುಗಡೆಮಾಡದಿದ್ದರೆ ಈ ಕ್ಷಣದಲ್ಲಿಯೇ ಈ ಪೃಥ್ವಿಯು ಗಂಧರ್ವರಾಜನ ರಕ್ತವನ್ನು ಪಾನಮಾಡುತ್ತಾಳೆ."

ಜನಮೇಜಯ! ಸತ್ಯವಾದಿಯಾದ ಅರ್ಜುನನ ಪ್ರತಿಜ್ಞಾವಚನವನ್ನು



ಕೇಳಿದನಂತರ ಕೌರವರ ಮನಸ್ಸಿನ ಉದ್ವೇಗವು ಸ್ವಲ್ಪ ಕಡಿಮೆಯಾಯಿತು. ದುಃಖದಿಂದ ಸಂಕಟಪಡುತ್ತಿದ್ದ ಅವರ ಮನಸ್ಸು ಸ್ವಲ್ಪ ಸಮಾಧಾನ ಹೊಂದಿತು.

೨೪೩ನೆಯ ಅಧ್ಯಾಯವು ಮುಗಿಯಿತು.

೨೪೪ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಗಂಧರ್ವರೊಡನೆ ಪಾಂಡವರ ಯುದ್ಧ

ಜನಮೇಜಯ! ಯುಧಿಷ್ಠಿರನ ಮಾತುಗಳನ್ನು ಕೇಳಿದೊಡನೆಯೇ

ಭೀಮಾದಿಗಳು ಸಂತಸದಿಂದ ಅರಳಿದ ಮುಖಾರವಿಂದವುಳ್ಳವರಾಗಿ ಕುಳಿತಿದ್ದ ಆಸನಗಳಿಂದ ಎದ್ದುನಿಂತರು. ಸುವರ್ಣಮಯವಾದ, ಚಿತ್ರ-ವಿಚಿತ್ರವಾದ ಮತ್ತು ಅಭೇದ್ಯವಾದ ಕವಚಗಳನ್ನು ತೊಟ್ಟುಕೊಂಡರು. ದಿವ್ಯವಾದ, ನಾನಾವಿಧವಾದ ಆಯುಧಗಳನ್ನು ತೆಗೆದುಕೊಂಡರು. ಯುದ್ಧಸಾಮಗ್ರಿಗಳಿಂದ ಸಮೃದ್ಧವಾಗಿದ್ದ ರಥಗಳಲ್ಲಿ ಕುಳಿತ ಪಾಂಡವರು ನಿಶ್ಚಯವಾಗಿಯೂ ಅಗ್ನಿದೇವತೆಗಳಂತೆಯೇ ಪ್ರಕಾಶಿಸಿದರು. ದಿವ್ಯವಾದ ರಥಗಳಲ್ಲಿ ಕುಳಿತು ಸ್ವಲ್ಪವೂ ಸಾವಕಾಶಮಾಡದೇ ಭೀಮಾದಿಗಳು ಗಂಧರ್ವರನ್ನು ಬೆನ್ನಟ್ಟಿ ಹೋದರು. ಮಹಾಪರಾಕ್ರಮಶಾಲಿಗಳಾದ ಪಾಂಡುವಿನ ಪುತ್ರರು ದುರ್ಯೋಧನನ ವಿಮೋಚನೆಗಾಗಿ ರಥಗಳಲ್ಲಿ ಕುಳಿತು ಪ್ರಯಾಣಮಾಡುತ್ತಿರುವುದನ್ನು ಕಂಡು ಕುರುಸೈನ್ಯವು ಜಯಕಾರಮಾಡಿತು. ಮಹಾರಥರಾದ ಪಾಂಡುಪುತ್ರರು ಒಟ್ಟಾಗಿ ಬರುತ್ತಿರುವುದನ್ನು ನೋಡಿ ಜಯಶಾಲಿಗಳಾಗಿ ಹಿಂದಿರುಗುವುದರಲ್ಲಿದ್ದ ಗಂಧರ್ವರು ತಮ್ಮ ಸೈನ್ಯವನ್ನು ಪುನಃ ಸಮಸ್ಥಿತಿಯಲ್ಲಿ ನಿಲ್ಲಿಸಿದರು. ಆ ನಾಲ್ವರು ಪಾಂಡವರೂ, ಕುಪಿತರಾಗಿ ಬಂದಿರುವ ದಿಕ್ಪಾಲಕರಂತೆ– ಕಾಣುತ್ತಿದ್ದರು. ಗಂಧರ್ವ-ಪಾಂಡವರ ಯುದ್ಧವು ಪ್ರಾರಂಭವಾಯಿತು.

ಯುಧಿಷ್ಠಿರನ ನಿರ್ದೇಶನದಂತೆಯೇ ಯುದ್ಧವು ತೀವ್ರವಾಗಿ ನಡೆಯಲಿಲ್ಲ. ಅರ್ಜುನನು ಹೆಚ್ಚು ಮಾರಕಗಳಲ್ಲದ ಬಾಣಗಳನ್ನೇ ಪ್ರಯೋಗಿಸುತ್ತಿದ್ದನು. ಆದರೆ ಅದರಿಂದ ಗಂಧರ್ವರು ಎಚ್ಚರಗೊಂಡಂತೆ ಕಾಣಲಿಲ್ಲ. ಅರ್ಜುನನಲ್ಲಿರುವ ಬಲವೇ ಇಷ್ಟೆಂದು ಗಂಧರ್ವಸೈನ್ಯವು ಭಾವಿಸಿತು. ಗಂಧರ್ವರ ಶ್ರೇಯಸ್ಸಿಗಾಗಿ ಮೃದುತ್ವದಿಂದ ಯುದ್ಧಮಾಡುವುದು ವ್ಯರ್ಥವೆಂದು ಅರ್ಜುನನು ಭಾವಿಸಿದನು. ಆ ಮಂದಬುದ್ಧಿಯ ಸೈನಿಕರಿಗೆ ಸರಿಯಾದ ಎಚ್ಚರಿಕೆಯನ್ನು ನೀಡಬೇಕೆಂದು ನಿಶ್ಚಯಿಸಿ ಗಂಧರ್ವರನ್ನು ಕುರಿತು ಕಿರೀಟಿಯು ಸಾಂತ್ವವಚನಗಳನ್ನಾಡಿದನು :

**ವಿಸರ್ಜಯತ ರಾಜಾನಂ ಭ್ರಾತರಂ ಮೇ ಸುಯೋಧನಮ್ ॥೧೨॥**

“ನಮ್ಮ ಅಣ್ಣನಾದ ಮತ್ತು ರಾಜನಾದ ಸುಯೋಧನನನ್ನು ಬಿಟ್ಟುಬಿಡಿರಿ.” ಅರ್ಜುನನ ಮಾತುಗಳನ್ನು ಕೇಳಿ ಗಂಧರ್ವರು ಗಹಗಹಿಸಿ ನಕ್ಕು ಹೀಗೆಂದು ಪ್ರತ್ಯುತ್ತರಿಸಿದರು :

**ಏಕಸ್ಯೈವ ವಯಂ ತಾತ ಕುರ್ಯಾಮ ವಚನಂ ಭುವಿ ।**
**ಯಸ್ಯ ಶಾಸನಮಾಜ್ಞಾಯ ಚರಾಮೋ ವಿಗತಜ್ವರಾಃ ॥೧೪॥**

"ತಾತ! ತ್ರಿಭುವನಗಳಲ್ಲಿ ನಾವು ಒಬ್ಬನೇ ಒಬ್ಬನ ಆಜ್ಞಾಧಾರಕ ರಾಗಿರುತ್ತೇವೆ. ಅವನ ಆಜ್ಞೆಯಂತೆ ನಾವು ನಡೆದೆವಾದರೆ ನಮಗೆ ಯಾವ ವಿಧವಾದ ಬಾಧಕಗಳೂ ಉಂಟಾಗುವುದಿಲ್ಲ. ಅವನ ಆಜ್ಞೆಯಂತೆ ನಡೆಯು ವುದೇ ನಮ್ಮ ಕರ್ತವ್ಯ. ಉಳಿದ ನಮ್ಮ ಯೋಗ-ಕ್ಷೇಮಗಳೆಲ್ಲವನ್ನೂ ಸಂಪೂರ್ಣವಾಗಿ ಅವನೇ ನೋಡಿಕೊಳ್ಳುತ್ತಾನೆ. ಆದುದರಿಂದ ಅವನು ಯಾವ ರೀತಿಯಲ್ಲಿ ಆಜ್ಞೆಮಾಡಿರುವನೋ ಅದರಂತೆ ನಾವು ವರ್ತಿಸುತ್ತೇವೆ. ಸುರೇಶ್ವರನಿಗಿಂತಲೂ ಬೇರೆಯವನೊಬ್ಬನು ನಮಗೆ ಆಜ್ಞೆಮಾಡುವವನಿಲ್ಲ. ಆದುದರಿಂದ ನೀನು ದುರ್ಯೋಧನನನ್ನು ಬಿಟ್ಟುಬಿಡಿರೆಂದಮಾತ್ರಕ್ಕೆ ನಾವು ಬಿಟ್ಟುಹೋಗಲು ಸಿದ್ಧರಾಗಿಲ್ಲ."

ಗಂಧರ್ವರಿಂದ ಹೀಗೆಂದು ಹೇಳಲ್ಪಟ್ಟ ಧನಂಜಯನು ಪುನಃ ಅವರನ್ನು ಕುರಿತು ಹೇಳಿದನು :

**ನ ತದ್ಗನ್ಧರ್ವರಾಜಸ್ಯ ಯುಕ್ತಂ ಕರ್ಮ ಜುಗುಪ್ಸಿತಮ್ ।**
**ಪರದಾರಾಭಿಮರ್ಶಶ್ಚ ಮಾನುಷ್ಯೈಶ್ಚ ಸಮಾಗಮಃ ॥೧೭॥**

"ನೀವು ಹೇಳುವುದೂ ಸರಿಯೇ. ಆದರೆ ರಾಜನಾದವನು ಯಾವಾ ಗಲೂ ಯುಕ್ತವಾದುದನ್ನೇ ಮಾಡಬೇಕು. ಅಯುಕ್ತವಾದುದನ್ನೆಂದಿಗೂ ಮಾಡಕೂಡದು. ನಿಮ್ಮ ಗಂಧರ್ವರಾಜನಿಂದು ಅಕಾರ್ಯವನ್ನು ಮಾಡಿದ್ದಾನೆ. ಮನುಷ್ಯರಿಗೂ-ಗಂಧರ್ವರಿಗೂ ಯಾವ ಸಂಬಂಧವಿದೆ? ಪರಸ್ತ್ರೀಯರನ್ನು ಸೆಳೆದೊಯ್ಯುವುದು, ಮಾನವರೊಡನೆ ಸಮಾಗಮಮಾಡುವುದು ಅಥವಾ ಮಾನವರನ್ನು ಬೆದರಿಸಿ ಅವರೊಡನೆ ಮಾಯಾಯುದ್ಧಮಾಡಿ ಸೆರೆಹಿಡಿಯು ವುದು–ಇವುಗಳು ಗಂಧರ್ವರಾಜನು ಮಾಡತಕ್ಕ ಕಾರ್ಯಗಳಲ್ಲ. ಆದುದ ರಿಂದ ವೀರರಾದ ಧೃತರಾಷ್ಟ್ರನ ಮಕ್ಕಳನ್ನು ಈ ಕ್ಷಣದಲ್ಲಿಯೇ ಬಿಡುಗಡೆ ಮಾಡಿರಿ. ಇವರೊಡನೆ ನೀವು ಬಂಧಿಸಿರುವ ಅಂತಃಪುರದ ಸ್ತ್ರೀಯರನ್ನೂ ಬಿಡುಗಡೆಮಾಡಿರಿ. ಇದು ಧರ್ಮರಾಜನ ಶಾಸನವಾಗಿದೆ. ನೀವೀಗ ಧರ್ಮ ರಾಜನ ಶಾಸನದಂತೆಯೇ ನಡೆಯಬೇಕು. ನೀವೇನಾದರೂ ಧೃತರಾಷ್ಟ್ರನ

ಮಕ್ಕಳನ್ನು ಒಳ್ಳೆಯ ಮಾತಿನಿಂದ ಬಿಡುಗಡೆಮಾಡದಿದ್ದರೆ ನಾನು ನನ್ನ ಭುಜ ಬಲ-ಪರಾಕ್ರಮಗಳಿಂದ ಸುಯೋಧನನನ್ನು ವಿಮುಕ್ತಿಗೊಳಿಸುತ್ತೇನೆ.” ಹೀಗೆಂಬುದಾಗಿ ಎಚ್ಚರಿಸಿ ಸವ್ಯಸಾಚಿಯಾದ ಪಾರ್ಥನು ಗಂಧರ್ವರ ಮೇಲೆ ಬಹುತೀಕ್ಷ್ಣವಾದ ಬಾಣಗಳ ಮಳೆಗರೆದನು. ಬಲೋತ್ಕಟರಾದ ಗಂಧ ರ್ವರೂ ಪಾಂಡವರ ಮೇಲೆ ಪ್ರತಿಯಾಗಿ ಬಾಣಗಳ ಮಳೆಗರೆದರು. ವೇಗ ಗಾಮಿಗಳಾದ ಗಂಧರ್ವರಿಗೂ–ಭೀಮವೇಗವುಳ್ಳ ಪಾಂಡವರಿಗೂ ಘೋರ ವಾದ ಯುದ್ಧವು ಪ್ರಾರಂಭವಾಯಿತು.

೨೪೪ನೆಯ ಅಧ್ಯಾಯವು ಮುಗಿಯಿತು.

೨೪೫ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಪಾಂಡವರಿಂದ ಗಂಧರ್ವರು ಪರಾಜಿತರಾದುದು

ಜನಮೇಜಯ! ಅನಂತರದಲ್ಲಿ ಸುವರ್ಣಮಯವಾದ ಮಾಲಿಕೆಗಳನ್ನು ಧರಿಸಿದ್ದ, ದಿವ್ಯಾಸ್ತ್ರಗಳಲ್ಲಿ ಪರಿಪೂರ್ಣಜ್ಞಾನವನ್ನು ಪಡೆದಿದ್ದ ಗಂಧರ್ವರು ಪ್ರಜ್ವಲಿಸುತ್ತಿದ್ದ ಬಾಣಗಳನ್ನು ಬಿಡುತ್ತಾ ಪಾಂಡವರನ್ನು ಮುತ್ತಿದರು. ಆದರೆ ಜನಮೇಜಯ! ಆ ಯುದ್ಧದಲ್ಲಿ ಪಾಂಡವರು ನಾಲ್ವರೇ ಒಂದು ಪಕ್ಷದ ಲ್ಲಿಯೂ ಸಾವಿರಾರು ಮಂದಿ ಗಂಧರ್ವರು ಇನ್ನೊಂದು ಪಕ್ಷದಲ್ಲಿಯೂ ನಿಂತು ಹೋರಾಡುತ್ತಿದ್ದರು. ಅದು ಬಹಳ ಅದ್ಭುತವಾಗಿ ಕಾಣುತ್ತಿದ್ದಿತು. ಹಿಂದೆ ಗಂಧರ್ವರು ಕರ್ಣ ಮತ್ತು ದುರ್ಯೋಧನರ ರಥಗಳನ್ನು ನುಚ್ಚುನೂರಾಗಿ ಮಾಡಿದ್ದರು. ಅಂತೆಯೇ ಭೀಮಾರ್ಜುನ-ನಕುಲ-ಸಹದೇವರ ರಥಗಳನ್ನೂ ಛಿದ್ರ-ವಿಚ್ಛಿದ್ರಗೊಳಿಸಲು ಅವರು ಬಹುವಾಗಿ ಪ್ರಯತ್ನಿಸಿದರು. ಆದರೆ ಸಾವಿ ರಾರು ಗಂಧರ್ವರು ನಿಶಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಮುಂದೆ-ಮುಂದೆ ಬರುತ್ತಿದ್ದರೂ ಧೀರರಾದ ಕುಂತೀಪುತ್ರರು ಮಹಾವೃಷ್ಟಿರೂಪವಾದ ಬಾಣಪ್ರಯೋಗವನ್ನು ಎಡಬಿಡದೇ ಮಾಡುತ್ತಾ ಅವರನ್ನು ದೂರದಲ್ಲಿಯೇ ತಡೆದು ನಿಲ್ಲಿಸುತ್ತಿದ್ದರು. ಗಂಧರ್ವರು ಎಷ್ಟೇ ಪ್ರಯತ್ನಿಸಿದರೂ ಪಾಂಡವರ ಸಮೀಪಕ್ಕೆ ಬರಲೂ ಸಾಧ್ಯವಾಗಲಿಲ್ಲ. ಬಹುಕುಪಿತರಾಗಿ ಮೇಲೆ ಬೀಳಲು ಬರುತ್ತಿದ್ದ ಗಂಧರ್ವರ ವಿಷಯದಲ್ಲಿ ಅರ್ಜುನನೂ ಬಹುಕುಪಿತನಾಗಿ ಅವರು

ಗಳ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಲು ಉಪಕ್ರಮಿಸಿದನು. ಮಹಾಬಲ ಶಾಲಿಯಾದ ಅರ್ಜುನನು ಆಗ್ನೇಯಾಸ್ತ್ರವನ್ನು ಮಂತ್ರಪುರಸ್ಸರವಾಗಿ ಪ್ರಯೋಗಿಸಿ ಕ್ಷಣಮಾತ್ರದಲ್ಲಿ ಲಕ್ಷ-ಲಕ್ಷ ಗಂಧರ್ವರನ್ನು ಯಮಾಲಯಕ್ಕೆ ಕಳುಹಿಸಿದನು. ದೊಡ್ಡದಾದ ಧನುಸ್ಸನ್ನು ಧರಿಸಿದ್ದ, ಬಲಿಷ್ಠರಲ್ಲಿ ಶ್ರೇಷ್ಠನೆನಿಸಿದ್ದ ಭೀಮಸೇನನೂ ಕೂಡ ಅವ್ಯಾಹತವಾಗಿ ಬಿಡುತ್ತಿದ್ದ ಚೂಪಾದ ಬಾಣಗಳಿಂದ ನೂರಾರು ಗಂಧರ್ವರನ್ನು ಯಮನ ಅರಮನೆಗೆ ಕಳುಹಿಸಿಕೊಟ್ಟನು. ಅತ್ಯಂತ ಬಲಶಾಲಿಗಳಾದ ಮಾದ್ರಿಯ ಮಕ್ಕಳೂ ನೂರಾರು ಗಂಧರ್ವರನ್ನು ಎದುರಿಸಿ ನಿಂತು ಅವರೆಲ್ಲರನ್ನೂ ತೀಕ್ಷ್ಣವಾದ ಬಾಣಪ್ರಯೋಗದಿಂದ ಯಮಾಲಯಕ್ಕೆ ಕಳುಹಿಸಿದರು. ಮಹಾಪರಾಕ್ರಮಿಗಳಾದ ಪಾಂಡವರ ದಿವ್ಯಾಸ್ತ್ರಪ್ರಯೋಗಗಳಿಂದ ಅನೇಕ ಗಂಧರ್ವರು ಹತರಾಗಿ ಹೋಗಲಾಗಿ, ಅಳಿದುಳಿದವರು ಧೃತರಾಷ್ಟ್ರನ ಮಕ್ಕಳನ್ನು ಎತ್ತಿಕೊಂಡೇ ಅಂತರಿಕ್ಷಕ್ಕೆ ಹಾರಿದರು.

ಅದನ್ನು ನೋಡಿದ ಧನಂಜಯನು ಕ್ಷಣಮಾತ್ರದಲ್ಲಿ ತನ್ನ ಕೈಚಳಕದಿಂದ ಬಾಣಪ್ರಯೋಗಮಾಡಿ ಗಂಧರ್ವರ ಸುತ್ತಲೂ ಆಕಾಶದಲ್ಲಿ ಶರ ಪಂಜರವನ್ನೇ ಕಟ್ಟಿಬಿಟ್ಟನು. ಪಕ್ಷಿಗಳು ಪಂಜರದಲ್ಲಿ ಸಿಕ್ಕಿಬೀಳುವಂತೆ–ಅರ್ಜುನನ ಶರಪಂಜರದಲ್ಲಿ ಸಿಕ್ಕಿಬಿದ್ದ ಗಂಧರ್ವರು ಮುಂದೆ ಹೋಗಲು ಸಾಧ್ಯವಾಗದೆ ಕುಪಿತರಾಗಿ ಗದೆಗಳಿಂದಲೂ, ಭರ್ಜಿಗಳಿಂದಲೂ, ಕತ್ತಿಗಳಿಂದಲೂ ಅರ್ಜುನನನ್ನು ಪ್ರಹರಿಸತೊಡಗಿದರು. ಪರಮಾಸ್ತ್ರಗಳ ರಹಸ್ಯವನ್ನು ಪೂರ್ಣವಾಗಿ ತಿಳಿದಿದ್ದ ಅರ್ಜುನನು ತನ್ನ ಮೇಲೆ ಅನುಸ್ಯೂತವಾಗಿ ಬೀಳುತ್ತಿದ್ದ ಗದೆ, ಭರ್ಜಿ, ಕತ್ತಿ, ಶಕ್ತ್ಯಾಯುಧ–ಮುಂತಾದುವುಗಳೆಲ್ಲವನ್ನೂ ನಿವಾರಣೆ ಮಾಡಿಕೊಂಡು ಭಲ್ಲಾಯುಧಗಳಿಂದ ಗಂಧರ್ವರ ಶರೀರಗಳನ್ನು ಕತ್ತರಿಸುತ್ತಿದ್ದನು. ಗಂಧರ್ವರ ತಲೆಗಳು, ಕಾಲುಗಳು, ಕೈಗಳು, ತೋಳುಗಳು, ಕಲ್ಲಿನ ಮಳೆಯೋಪಾದಿಯಲ್ಲಿ ಆಕಾಶದಿಂದ ಭೂಮಿಯ ಮೇಲೆ ಬೀಳುತ್ತಿದ್ದುವು.

ಆ ಭಯಂಕರಸಮರದಿಂದಾಗಿ ಗಂಧರ್ವರು ಭೀತರಾದರು. ಆದರೂ ಧೃತಿಗೆಡದೆ ಅಳಿದುಳಿದ ಗಂಧರ್ವರು ಭೂಮಿಯ ಮೇಲಿದ್ದ ಅರ್ಜುನನ ಮೇಲೆ ಆಕಾಶದಿಂದಲೇ ಬಾಣಗಳ ಮಳೆಗರೆದರು. ಪರಂತಪನಾದ, ತೇಜಸ್ವಿಯಾದ ಸವ್ಯಸಾಚಿಯು ಆ ಶರವರ್ಷವನ್ನೂ ಕೂಡ ದಿವ್ಯಾಸ್ತ್ರಗಳಿಂದ ತಡೆದವನಾಗಿ ಪುನಃ ಅವರುಗಳನ್ನು ದಿವ್ಯಾಸ್ತ್ರಗಳಿಂದ ಬಾಧೆಪಡಿಸಿದನು. ಆ ಸಮಯ

ದಲ್ಲಿ ಅರ್ಜುನನು ಸುಪ್ರಸಿದ್ಧವಾದ ಸ್ಥೂಣಾಕರ್ಣ, ಇಂದ್ರಜಾಲ, ಸೌರ, ಆಗ್ನೇಯ, ಸೌಮ್ಯಗಳೆಂಬ ಮಹಾಸ್ತ್ರಗಳನ್ನು ಗಂಧರ್ವರ ಮೇಲೆ ಪ್ರಯೋಗಿಸಿದನು. ಇಂದ್ರನ ವಜ್ರಾಯುಧಪ್ರಹಾರಕ್ಕೆ ಸಿಕ್ಕಿದ ದೈತ್ಯರು ದಹಿಸಿಹೋಗುವಂತೆ–ಅರ್ಜುನನ ಆ ದಿವ್ಯಾಸ್ತ್ರಗಳ ಪ್ರಹಾರಕ್ಕೆ ತುತ್ತಾದ ಗಂಧರ್ವರೆಲ್ಲರೂ ದಹಿಸಲ್ಪಡುತ್ತಾ ಏನು ಮಾಡಬೇಕೆಂಬುದೇ ತಿಳಿಯದೇ ಬಹುವಾಗಿ ವಿಷಾದಿಸಿದರು. ಆದರೂ ಅವರು ಯುದ್ಧವನ್ನು ನಿಲ್ಲಿಸಿ ದುರ್ಯೋಧನನನ್ನು ಒಪ್ಪಿಸಲು ಸಿದ್ಧರಾಗಿರಲಿಲ್ಲ. ತಮ್ಮ ಲೋಕಕ್ಕೆ ಹೊರಟುಹೋಗೋಣವೆಂದರೆ ಅರ್ಜುನನು ನಿರ್ಮಿಸಿದ್ದ ಶರಪಂಜರವು ಅವರುಗಳನ್ನು ಬಂಧಿಸಿದ್ದಿತು. ಕೆಳಗಿನಿಂದ ಅನುಸ್ಯೂತವಾಗಿ ಅರ್ಜುನನಿಂದ ಪ್ರಯೋಗಿಸಲ್ಪಡುತ್ತಿದ್ದ ಭಲ್ಲಾಯುಧಗಳು ಅವರುಗಳನ್ನು ಕತ್ತರಿಸುತ್ತಿದ್ದುವು.

ತನ್ನ ಅನುಯಾಯಿಗಳಿಗೊದಗಿದ ದಾರುಣಸ್ಥಿತಿಯನ್ನು ನೋಡಿ ಗಂಧರ್ವರಾಜನಾದ ಚಿತ್ರಸೇನನು ಗದಾಪಾಣಿಯಾಗಿ ಅರ್ಜುನನ ಕಡೆಗೆ ಧಾವಿಸಿದನು. ಆಕಾಶದ ಮೇಲಿನಿಂದ ಚಿತ್ರಸೇನನು ಗದೆಯನ್ನೆತ್ತಿ ಅರ್ಜುನನನ್ನು ಅಪ್ಪಳಿಸುವ ಸಲುವಾಗಿ ಭೂಮಿಯ ಕಡೆಗೆ ರಭಸದಿಂದ ಬರುತ್ತಿರಲು, ಅರ್ಜುನನು ನಿಮಿಷಮಾತ್ರದಲ್ಲಿ ತನ್ನ ದಿವ್ಯಾಸ್ತ್ರವನ್ನು ಪ್ರಯೋಗಿಸಿ ಚಿತ್ರಸೇನನ ಕೈಯಲ್ಲಿದ್ದ ಉಕ್ಕಿನ ಗದೆಯನ್ನು ಏಳು ತುಂಡುಗಳಾಗಿ ಕತ್ತರಿಸಿಬಿಟ್ಟನು. ವೇಗಶಾಲಿಯಾದ ಅರ್ಜುನನ ಬಾಣಗಳಿಂದ ತನ್ನ ಗದೆಯು ಅನೇಕ ಭಾಗಗಳಾಗಿ ಕತ್ತರಿಸಲ್ಪಟ್ಟುದನ್ನು ನೋಡಿ ಚಿತ್ರಸೇನನು ಮಾಯಾಯುದ್ಧದಿಂದ ಅರ್ಜುನನನ್ನು ನಿಗ್ರಹಿಸಲು ನಿಶ್ಚಯಿಸಿ ಅದೃಶ್ಯನಾದನು. ಅದೃಶ್ಯವಾಗಿಯೇ ನಿಂತು ಅಸ್ತ್ರಪ್ರಯೋಗವನ್ನು ಮಾಡಲು ಉಪಕ್ರಮಿಸಿದನು. ಅವುಗಳೆಲ್ಲವನ್ನೂ–ವೀರನಾದ ಅರ್ಜುನನು ತನ್ನ ದಿವ್ಯಾಸ್ತ್ರಗಳ ಪ್ರಯೋಗಗಳಿಂದ ನಿರ್ವೀರ್ಯಗಳನ್ನಾಗಿ ಮಾಡಿಬಿಟ್ಟನು. ಅದರಿಂದಲೂ ಗಂಧರ್ವರಾಜನು ಅಧೀರನಾಗಲಿಲ್ಲ. ಮಾಯಾಯುದ್ಧದ ಮೂಲಕವಾಗಿ ಅರ್ಜುನನ ಪೌರುಷವನ್ನಡಗಿಸಬೇಕೆಂದು ನಿಶ್ಚಯಿಸಿದವನಾಗಿ ನಾಲ್ಕು ದಿಕ್ಕುಗಳಿಂದಲೂ ಶರವೃಷ್ಟಿಯು ಅರ್ಜುನನ ಮೇಲೆ ಬೀಳುವಂತೆ ಮಾಡಿದನು. ಶರಪ್ರಯೋಗಮಾಡುವವರು ಕಾಣುತ್ತಿರಲಿಲ್ಲ. ಬಾಣಗಳು ಮಾತ್ರ ನಾಲ್ಕು ದಿಕ್ಕುಗಳಿಂದಲೂ ಅವ್ಯಾಹತವಾಗಿ ಬಂದು ಅರ್ಜುನನ ಮೇಲೆ ಬೀಳುತ್ತಿ

ದ್ದುವು. ಆದುದರಿಂದ ಅರ್ಜುನನು ಬಹುಕ್ರುದ್ಧನಾಗಿ ಮಹಾಮಂತ್ರಗಳನ್ನು ಪುನಶ್ಚರಣೆಮಾಡಿ ಅಸ್ತ್ರಗಳನ್ನು ಪ್ರಯೋಗಿಸಿ, ಗಂಧರ್ವನ ಮಾಯೆಯನ್ನು ಹೋಗಲಾಡಿಸಿದನಲ್ಲದೇ–ಶಬ್ದವೇಧೀ ಎಂಬ ವಿದ್ಯೆಯ ಬಲದಿಂದ ಅದೃಶ್ಯನಾಗಿದ್ದ ಗಂಧರ್ವರಾಜನ ಮೇಲೂ ಬಾಣಪ್ರಯೋಗವನ್ನು ಅವ್ಯಾಹತವಾಗಿ ಮಾಡಿದನು. ಗಂಧರ್ವರಾಜನಿಗೆ ಮುಂದೇನು ಮಾಡಬೇಕೆಂಬುದೇ ತೋರಲಿಲ್ಲ. ಮೇಲಾಗಿ ಗಂಧರ್ವರಾಜನು ಅರ್ಜುನನ ಪ್ರಿಯಮಿತ್ರನೂ ಆಗಿದ್ದನು. (ಅರ್ಜುನನ ಪರಾಕ್ರಮವೆಷ್ಟೆಂಬುದನ್ನು ಪ್ರಪಂಚಕ್ಕೆ–ಅದರಲ್ಲಿಯೂ ಮುಖ್ಯ



ವಾಗಿ ದುಷ್ಟದುರ್ಯೋಧನನಿಗೆ–ತೋರಿಸಿಕೊಡುವುದು ಗಂಧರ್ವರಾಜನ ಉದ್ದೇಶವಾಗಿದ್ದಿತು.) ಮಾಯೆಯನ್ನು ತೊರೆದು ಹೊರಬಂದ ಚಿತ್ರಸೇನನು

ಅರ್ಜುನನನ್ನು ಕುರಿತು ಹೇಳಿದನು : "ಸಖಾಯಂ ಯುಧಿ ವಿದ್ಧಿ ಮಾಮ್" "ನಿನ್ನೊಡನೆ ಯುದ್ಧಮಾಡುತ್ತಿರುವ ನನ್ನನ್ನು ನಿನ್ನ ಪ್ರಿಯಮಿತ್ರನೆಂದು ತಿಳಿಯುವವನಾಗು, ಅರ್ಜುನ!"

ಯುದ್ಧಮಾಡಿ ಆಯಾಸಗೊಂಡಿದ್ದ ತನ್ನ ಮಿತ್ರನಾದ ಚಿತ್ರಸೇನನನ್ನು ನೋಡಿದೊಡನೆಯೇ ಪಾಂಡವರ್ಷಭನಾದ ಅರ್ಜುನನು ತಾನು ಪ್ರಯೋಗಿಸಿದ್ದ ದಿವ್ಯಾಸ್ತ್ರಗಳೆಲ್ಲವನ್ನೂ ಉಪಸಂಹಾರಗೊಳಿಸಿದನು. ಅರ್ಜುನನು ಮಹಾಸ್ತ್ರಗಳನ್ನು ಉಪಸಂಹಾರಗೊಳಿಸಿ ಮೇಲೆತ್ತಿದ್ದ ಧನುಸ್ಸನ್ನು ಕೆಳಗಿಳಿಸಿದೊಡನೆಯೇ ಭೀಮ-ನಕುಲ-ಸಹದೇವರೂ ತಮ್ಮ ಕುದುರೆಗಳ ಕಡಿವಾಣಗಳನ್ನು ಹಿಡಿದು ನಿಲ್ಲಿಸಿ, ಕತ್ತಿಗಳನ್ನು ಒರೆಯೊಳಗಿಟ್ಟು, ಬಾಣಗಳನ್ನು ಬತ್ತಳಿಕೆಗಳಿಗೆ ಸೇರಿಸಿದರು. ಅನಂತರದಲ್ಲಿ ಚಿತ್ರಸೇನ-ಅರ್ಜುನ-ಭೀಮ-ನಕುಲ-ಸಹದೇವರು ರಥಗಳಲ್ಲಿ ಕುಳಿತು ಪರಸ್ಪರ ಕುಶಲಪ್ರಶ್ನೆಮಾಡಿದರು."

೨೪೫ನೆಯ ಅಧ್ಯಾಯವು ಮುಗಿಯಿತು.

೨೪೬ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಚಿತ್ರಸೇನನೊಡನೆ ಅರ್ಜುನ-ಯುಧಿಷ್ಠಿರರ ಸಂವಾದ

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

"ಜನಮೇಜಯ! ಮಹಾದ್ಯುತಿಮಂತನಾದ, ಮಹೇಷ್ವಾಸನಾದ (ದೊಡ್ಡದಾದ ಧನುಸ್ಸನ್ನು ಧರಿಸಿದ್ದ) ಅರ್ಜುನನು ಗಂಧರ್ವಸೈನ್ಯದ ಮಧ್ಯದಲ್ಲಿ ತನ್ನ ಅನುಜರೊಡಗೂಡಿ ನಗು-ನಗುತ್ತಾ ಗಂಧರ್ವರಾಜನಾದ ಚಿತ್ರಸೇನನನ್ನು ಪ್ರಶ್ನಿಸಿದನು : "ಚಿತ್ರಸೇನ! ಕೌರವರನ್ನು ನಿಗ್ರಹಮಾಡಿದ್ದರಿಂದ ನಿನಗುಂಟಾಗುವ ಪ್ರಯೋಜನವಾದರೂ ಏನಿದೆ? ಪತ್ನೀಸಮೇತನಾದ ಸುಯೋಧನನನ್ನೇಕೆ ನೀನು ಹೀಗೆ ಶಿಕ್ಷಿಸಿದೆ?"

"ಧನಂಜಯ! ನಾನಿವನನ್ನು ಶಿಕ್ಷಿಸಲು ಕಾರಣವಿಲ್ಲದೇ ಇಲ್ಲ. ನಿಶ್ಚಯವಾಗಿ ಹೇಳುವುದಾದರೆ ನಾನಿವನನ್ನು ಶಿಕ್ಷಿಸಲೆಂದೇ ಈ ದ್ವೈತವನಕ್ಕೆ ಪರಿವಾರಸಮೇತನಾಗಿ ಬಂದೆನು. ಅಮರಾವತಿಯಲ್ಲಿರುವ ಇಂದ್ರನಿಗೆ ಈ ದುಷ್ಟದುರ್ಯೋಧನನೂ ಮತ್ತು ಕರ್ಣನೂ ದ್ವೈತವನಕ್ಕೆ ಆಗಮಿಸಿರುವ

ಕಾರಣವು ತಿಳಿದಿತ್ತು. ಈ ದುರುಳರ ಉದ್ದೇಶವು ಮಾತ್ಸರ್ಯಪೂರಿತವಾಗಿದ್ದಿತು. ನೀವು ಈ ದ್ವೈತವನದಲ್ಲಿ ಅನಾಥರಂತೆ ಕೃಶವಾದ ಶರೀರವುಳ್ಳವರಾಗಿ, ಮಳೆ-ಗಾಳಿ-ಬಿಸಿಲುಗಳಿಗೆ ತುತ್ತಾಗಿ ತೊಂದರೆಯನ್ನನುಭವಿಸುತ್ತಿರುವಿರೆಂಬ ವಿಷಯವು ಈ ದುರುಳನಿಗೆ ಬ್ರಾಹ್ಮಣನ ಮೂಲಕವಾಗಿ ತಿಳಿಯಿತು. ತಾನು ಬಹಳ ಉಚ್ಛ್ರಾಯಸ್ಥಿತಿಯಲ್ಲಿರುವುದರಿಂದ ಅಧೋಗತಿಗಿಳಿದಿರುವ ತನ್ನ ಶತ್ರುಗಳನ್ನು (ನಿಮ್ಮನ್ನು ) ಪ್ರತ್ಯಕ್ಷವಾಗಿ ನೋಡಿ ಆನಂದಿಸಬೇಕೆಂದು ವ್ಯಾಜಾಂತರದಿಂದ ಇವನು ಈ ದ್ವೈತವನಕ್ಕೆ ಆಗಮಿಸಿದನು. ಈ ದ್ವೈತವನಕ್ಕೆ ಸಪರಿವಾರನಾಗಿ ಬಂದು ನಿಮ್ಮನ್ನೂ ಮತ್ತು ಯಶಸ್ವಿನಿಯಾದ ದ್ರೌಪದಿಯನ್ನೂ ಅಪಹಾಸ್ಯಮಾಡುವುದೇ ದ್ವೈತವನಕ್ಕೆ ಆಗಮಿಸಿದ ಅವನ ಮುಖ್ಯೋದ್ದೇಶವಾಗಿತ್ತು. ಈ ದುಷ್ಟಯೋಜನೆಯು ಶಚೀಪತಿಯಾದ ಮತ್ತು ನಿನ್ನ ತಂದೆಯಾದ ಇಂದ್ರನಿಗೆ ತಿಳಿದು ಅವನು ನನ್ನನ್ನು ಕರೆದು ಹೀಗೆಂದು ಹೇಳಿದನು :

"ಚಿತ್ರಸೇನ! ನೀನು ಈಗಲೇ ಹೋಗಿ ದುಷ್ಟದುರ್ಯೋಧನನನ್ನು ಅವನ ಒಡನಾಡಿಗಳೊಡನೆ  ಬಂಧಿಸಿ ಇಲ್ಲಿಗೆ ಸೆಳೆದುಕೊಂಡು ಬರುವವನಾಗು. ಅವನ ಕಾರಣದಿಂದಾಗಿ  ಧನಂಜಯನೂ ಕೂಡ ನಿನ್ನ ಮೇಲೆ ಯುದ್ಧಕ್ಕೆ ಬರಬಹುದು. ಧನಂಜಯನು ನಿನ್ನ ಶಿಷ್ಯನೂ ಮತ್ತು ಪ್ರಿಯವಯಸ್ಯನೂ ಆಗಿರುವುದರಿಂದ ಅವನನ್ನೂ ಮತ್ತು ಅವನ ಸಹೋದರರನ್ನೂ ರಕ್ಷಿಸಬೇಕೇ ಹೊರತು ಶಿಕ್ಷಿಸಕೂಡದು."

ದೇವರಾಜನು ಹೇಳಿದ ಮಾತುಗಳನ್ನು ಕೇಳುತ್ತಲೇ ನಾನು ಅವಸರದಿಂದ ಪರಿವಾರಸಮೇತನಾಗಿ ಇಲ್ಲಿಗೆ ಆಗಮಿಸಿದೆನು. ಪಾರ್ಥ! ನಾನು ಬಂದ ಕಾರ್ಯವು ಮುಗಿದು ಈ ದುರಾತ್ಮನನ್ನು ಬಂಧಿಸಿದ್ದಾಯಿತು. ನಾನಿನ್ನು ಇವನನ್ನು ಸೆಳೆದುಕೊಂಡು ದೇವಲೋಕಕ್ಕೆ ಹೋಗಿ ದೇವರಾಜನಿಗೆ ಒಪ್ಪಿಸಿಬಿಡುವೆನು. ಇಂದ್ರನು ಹೀಗೆ ಆಜ್ಞೆಮಾಡಿರುವುದರಿಂದ ಅವನ ಆಜ್ಞೆಯಂತೆ ನಡೆಯುವುದು ನನ್ನ ಕರ್ತವ್ಯವೂ ಆಗಿದೆಯಲ್ಲವೇ?"

"ಚಿತ್ರಸೇನ! ಸುಯೋಧನನಿಲ್ಲಿಗೆ ಯಾವ ಉದ್ದೇಶದಿಂದ ಬಂದಿದ್ದನೆಂಬುದು ನಾನು ಪರಿಗಣಿಸಬೇಕಾದ ವಿಷಯವಲ್ಲ. ಸುಯೋಧನನು ನನ್ನ

ಅಣ್ಣ. ಪ್ರಕೃತಸಂದರ್ಭದಲ್ಲಿ ಅವನನ್ನು ವಿಮೋಚನೆಗೊಳಿಸಬೇಕೆಂಬುದೇ ಯುಧಿಷ್ಠಿರನ ಆದೇಶವಾಗಿದೆ. ಆದುದರಿಂದ ನನಗೇನಾದರೂ ಪ್ರಿಯವಾದ ಕಾರ್ಯವನ್ನು ಮಾಡಿಕೊಡಬೇಕೆನ್ನುವ ಅಭಿಪ್ರಾಯವು ನಿನಗಿರುವುದಾದರೆ ಒಡನೆಯೇ ಈ ಸುಯೋಧನನನ್ನು ವಿಮುಕ್ತಿಗೊಳಿಸು."

"ಅರ್ಜುನ! ಈ ದುರ್ಯೋಧನನು ಕಡುಪಾಪಿ. ನಿಮ್ಮೆಗಳ ಐಶ್ವರ್ಯವನ್ನು ಮೋಸದಿಂದ ವಶಪಡಿಸಿಕೊಂಡು ಯಥೇಚ್ಛವಾದ ಐಶ್ವರ್ಯದಿಂದ ಕೊಬ್ಬಿಹೋಗಿದ್ದಾನೆ. ಆದುದರಿಂದ ಇವನು ಖಂಡಿತವಾಗಿಯೂ ಬಂಧವಿಮೋಚನೆಗೆ ಅರ್ಹನಲ್ಲ. ಮೇಲಾಗಿ ಇವನು ಧರ್ಮಾತ್ಮನಾದ ಯುಧಿಷ್ಠಿರನಿಗೂ ಮತ್ತು ಸಾಧ್ವಿಯಾದ ದ್ರೌಪದಿಗೂ ವಂಚನೆಮಾಡಿದ್ದಾನೆ. ಇವನು ದ್ವೈತವನಕ್ಕೆ ಆಗಮಿಸಿರುವ ಕಾರಣವೇನೆಂಬುದು ಪರಿಶುದ್ಧಾತ್ಮನಾದ ಧರ್ಮರಾಜನಿಗೆ ತಿಳಿದಿಲ್ಲ. ಆದುದರಿಂದ ಯುಧಿಷ್ಠಿರನು ಮೊದಲು ದುಷ್ಟ ದುರ್ಯೋಧನನು ಇಲ್ಲಿಗೆ ಆಗಮಿಸಿದ ಕಾರಣವನ್ನು ತಿಳಿಯಲಿ. ಅನಂತರ ಅವನ ಇಚ್ಛೆಬಂದಂತೆ ವರ್ತಿಸಲಿ."

ಜನಮೇಜಯ! ಚಿತ್ರಸೇನನ ಮಾತಿಗೆ ಧನಂಜಯನೂ ಸಮ್ಮತಿಸಿದನು. ಚಿತ್ರಸೇನನೊಡನೆ ಭೀಮಾದಿಗಳು ಯುಧಿಷ್ಠಿರನಲ್ಲಿಗೆ ತೆರಳಿದರು. ಸುಖಾಸೀನನಾಗಿದ್ದ ಯುಧಿಷ್ಠಿರನಿಗೆ ದುರ್ಯೋಧನನ ದುಷ್ಟಯೋಜನೆಗಳೆಲ್ಲವನ್ನೂ ವಿವರಿಸಿ ಹೇಳಿದರು. ತಮ್ಮನ್ನು ಅಪಹಾಸ್ಯಮಾಡಲು ದುರ್ಯೋಧನಾದಿಗಳು ದ್ವೈತವನಕ್ಕೆ ಆಗಮಿಸಿರುವರೆಂಬ ವಿಷಯವು ಗಂಧರ್ವನಿಂದಲೇ ತಿಳಿದರೂ ಯುಧಿಷ್ಠಿರನು ಆ ವಿಷಯಕ್ಕೆ ಸ್ವಲ್ಪವಾದರೂ ಗಮನಕೊಡದೇ ದುರ್ಯೋಧನಾದಿಗಳನ್ನು ಒಡನೆಯೇ ಬಿಡುಗಡೆಮಾಡಬೇಕೆಂದು ಗಂಧರ್ವರಾಜನನ್ನು ಪ್ರಾರ್ಥಿಸಿದನು. ದುರ್ಯೋಧನಾದಿಗಳು ಮರುಕ್ಷಣದಲ್ಲಿಯೇ ವಿಮೋಚನೆಹೊಂದಿದರು. ತನ್ನ ಪ್ರಾರ್ಥನೆಗೆ ಮನ್ನಣೆಯನ್ನು ಕೊಟ್ಟುದಕ್ಕಾಗಿ ಯುಧಿಷ್ಠಿರನು ಗಂಧರ್ವರಾಜನನ್ನು ಸ್ತೋತ್ರಮಾಡಿದನು.

"ಗಂಧರ್ವರಾಜ! ಇದು ಅದೃಷ್ಟವೆಂದೇ ಹೇಳಬೇಕು. ಏಕೆಂದರೆ : ಅತುಲಪರಾಕ್ರಮಿಯಾಗಿದ್ದರೂ ದುರ್ಯೋಧನನನ್ನೂ, ಅವನ ಅನುಯಾಯಿಗಳನ್ನೂ ಸಂಹರಿಸದೇ ಬಂಧಿಸಿದೆ. ನೀನು ಇಚ್ಛಿಸಿದ್ದರೆ ಈ ದುಷ್ಟನನ್ನು

ಅವನ ಅನುಯಾಯಿಗಳೊಡನೆ ಧ್ವಂಸಮಾಡಿಬಿಡಬಹುದಾಗಿತ್ತು. ಇದು ಗಂಧರ್ವರು ನನಗೆ ಮಾಡಿದ ಮಹೋಪಕಾರವೆಂದೇ ನಾನು ಭಾವಿಸುತ್ತೇನೆ. ದುರಾತ್ಮನಾದ ದುರ್ಯೋಧನನನ್ನು ಬಂಧನದಿಂದ ವಿಮೋಚನೆಮಾಡಿದ್ದರಿಂದ ಕುರುಕುಲಕ್ಕೆ ಪ್ರಾಪ್ತವಾಗುವುದರಲ್ಲಿದ್ದ ಕಳಂಕವೂ ದೂರವಾಯಿತು.

ಗಂಧರ್ವರೇ! ನಿಮ್ಮೆಲ್ಲರ ಸಂದರ್ಶನದಿಂದ ನಾನು ಸುಪ್ರೀತನಾಗಿದ್ದೇನೆ. ನಿಮಗೆ ಇಷ್ಟವಾದ ಯಾವ ಕಾರ್ಯಮಾಡಲೂ ಸಿದ್ಧನಾಗಿದ್ದೇನೆ. ನಿಮಗೆ ಇಷ್ಟವಾದುದೆಲ್ಲವನ್ನೂ ನನ್ನಿಂದ ಪಡೆದವರಾಗಿ (ನನ್ನ ಆತಿಥ್ಯವನ್ನು ಸ್ವೀಕರಿಸಿ) ನಿಮ್ಮ ಸ್ಥಳಕ್ಕೆ ಪ್ರಯಾಣಮಾಡಿರಿ."

ಧರ್ಮಾತ್ಮನಾದ ಯುಧಿಷ್ಠಿರನ ಮಾತುಗಳನ್ನು ಕೇಳಿ ಚಿತ್ರಸೇನ ಪ್ರಮುಖರಾದ ಗಂಧರ್ವರು ಬಹಳ ಸಂತುಷ್ಟರಾಗಿ ಯುಧಿಷ್ಠಿರನ ಅನುಮತಿಯನ್ನು ಪಡೆದು ಅಪ್ಸರೆಯರೊಡನೆ ದೇವಲೋಕಕ್ಕೆ ತೆರಳಿದರು. ಅನಂತರ ದೇವೇಂದ್ರನು ಗಂಧರ್ವ-ಪಾಂಡವರ ಯುದ್ಧದಲ್ಲಿ ಸತ್ತುಬಿದ್ದಿದ್ದ ಗಂಧರ್ವಯೋಧರ ಮೇಲೆ ಅಮೃತವನ್ನು ಸಂಪ್ರೋಕ್ಷಿಸಿ ಅವರೆಲ್ಲರನ್ನೂ ಪುನಶ್ಚೇತನಗೊಳಿಸಿದನು. ಗಂಧರ್ವರೊಡನೆ ಬಹಳ ಸಾಹಸದಿಂದ ದುಸ್ತರವಾದ ಯುದ್ಧವನ್ನು ಮಾಡಿ ವಿಜಯಗಳಿಸಿ, ತಮ್ಮ ಬಾಂಧವರನ್ನೂ, ಅಂತಃಪುರದ ಸ್ತ್ರೀಯರನ್ನೂ ವಿಮೋಚನಗೊಳಿಸಿದುದಕ್ಕಾಗಿ ಪಾಂಡವರು ಸಂತುಷ್ಟರಾದರು. ಕುರುಕುಲದ ಸ್ತ್ರೀಯರಿಂದಲೂ, ರಾಜಕುಮಾರರಿಂದಲೂ, ಅಪಾರವಾದ ಜನಸ್ತೋಮದಿಂದಲೂ ಸಂಪೂಜಿತರಾದ, ಮಹಾರಥರಾದ ಪಾಂಡುಕುಮಾರರು ಯಜ್ಞವೇದಿಕೆಯ ಮಧ್ಯದಲ್ಲಿರುವ ಅಗ್ನಿಗಳಂತೆ–ದೇದೀಪ್ಯಮಾನವಾದ ತೇಜಸ್ಸಿನಿಂದ ವಿರಾಜಿಸಿದರು.

ತನ್ನ ಅನುಜರಿಂದೊಡಗೂಡಿದ ಯುಧಿಷ್ಠಿರನು ಗಂಧರ್ವರಿಂದ ವಿಮುಕ್ತನಾಗಿದ್ದ ದುರ್ಯೋಧನನನ್ನು ಕುರಿತು ಪ್ರೀತಿಯಿಂದ ಈ ಮಾತುಗಳನ್ನು ಹೇಳಿದನು :

**ಮಾ ಸ್ಮ ತಾತ ಪುನಃ ಕಾರ್ಷೀರೀದೃಶಂ ಸಾಹಸಂ ಕ್ವಚಿತ್ ।**
**ನ ಹಿ ಸಾಹಸಕರ್ತಾರಃ ಸುಖಮೇಧನ್ತಿ ಭಾರತ ॥೨೨॥**

**ಸ್ವಸ್ತಿಮಾನ್ಸಹಿತಃ ಸರ್ವೈರ್ಭ್ರಾತೃಭಿಃ ಕುರುನನ್ದನ ।**
**ಗೃಹಾನ್ವ್ರಜ ಯಥಾಕಾಮಂ ವೈಮನಸ್ಯಂ ಚ ಮಾ ಕೃಥಾಃ ॥೨೩॥**



"ಮಗು ದುರ್ಯೋಧನ! ಇಂತಹ ದುಃಸಾಹಸವನ್ನು ಮತ್ತೆಂದಿಗೂ ಮಾಡಬೇಡ. ಈ ವಿಧವಾದ ಸಾಹಸಕಾರ್ಯಮಾಡುವ ಪ್ರವೃತ್ತಿಯುಳ್ಳವರು ಖಂಡಿತವಾಗಿಯೂ ಸುಖಿಗಳಾಗುವುದಿಲ್ಲ. ಸಕಲಸಹೋದರರಿಂದಲೂ ಸಹಿತನಾದ ನಿನಗೆ ಮಂಗಳವುಂಟಾಗಲಿ. ನಿನ್ನ ಇಚ್ಛೆಬಂದಂತೆ ರಾಜಧಾನಿಗೆ ಪರಿವಾರಸಮೇತನಾಗಿ ಹೋಗಿ ಸೇರು. ಯಾರ ವಿಷಯದಲ್ಲಿಯೂ ದ್ವೇಷ ಬುದ್ಧಿಯನ್ನಿಟ್ಟುಕೊಳ್ಳಬೇಡ ಮತ್ತು ಹೀಗಾಯಿತೆಂದು ಮನಸ್ಸನ್ನು ಚಿಕ್ಕದೂ ಮಾಡಿಕೊಳ್ಳಬೇಡ."

ಜನಮೇಜಯ! ಯುಧಿಷ್ಠಿರನು ಹೀಗೆಂದು ಹೇಳಿದೊಡನೆಯೇ ದುರ್ಯೋಧನನೆದ್ದು ಧರ್ಮರಾಜನಿಗೆ ನಮಸ್ಕರಿಸಿ, ಪರಿವಾರಸಮೇತನಾಗಿ ರಾಜಧಾನಿಯ ಕಡೆಗೆ ಪ್ರಯಾಣಹೊರಟನು. ಅವನ ಮುಖವು ಕಾಂತಿಹೀನ ವಾಗಿತ್ತು. ನಾಚಿಕೆಯಿಂದ ಮ್ಲಾನವಾಗಿದ್ದ ಅವನ ಮುಖವನ್ನು ಯಾರೂ ನೋಡುವಂತಿರಲಿಲ್ಲ. ತಲೆಯನ್ನು ತಗ್ಗಿಸಿಕೊಂಡೇ ಹೋಗುತ್ತಿದ್ದನು. ಹೃದಯವು ಒಡೆದು ನುಚ್ಚುನೂರಾಗಿದ್ದಿತು. ಇಂದ್ರಿಯಪಟುತ್ವವು ನಷ್ಟವಾದ ರೋಗಿಯಂತೆ–ಯಾರನ್ನೂ ನೋಡದೇ, ಯಾವುದೊಂದು ಮಾತನ್ನೂ ಆಡದೇ, ಯಾರೊಬ್ಬರ ಮಾತನ್ನೂ ಕೇಳದೇ–ದುರ್ಯೋಧನನು ಹಸ್ತಿನಾ ಪುರಕ್ಕೆ ಪ್ರಯಾಣಮಾಡಿದನು.

ದುರ್ಯೋಧನನು ಸಪರಿವಾರನಾಗಿ ಹೊರಟುಹೋದನಂತರ ಯುಧಿಷ್ಠಿರನು ತನ್ನ ವಿಧೇಯರಾದ ಅನುಜರಿಂದ ಕೂಡಿ, ಬ್ರಾಹ್ಮಣರಿಂದ ಗೌರವಿಸಲ್ಪಟ್ಟವನಾಗಿ, ತಪಸ್ವಿಗಳಿಂದಲೂ, ಋಷಿ-ಮಹರ್ಷಿಗಳಿಂದಲೂ ಪರಿವೃತನಾಗಿ, ದೇವತೆಗಳ ಮಧ್ಯದಲ್ಲಿರುವ ಶಚೀಪತಿಯಂತೆಯೇ ವಿರಾಜಿ ಸುತ್ತಾ ಮುಂದಿನ ತನ್ನ ಅರಣ್ಯವಾಸದ ದಿನಗಳನ್ನು ದ್ವೈತವನದಲ್ಲಿ ಸಂತೋಷಯುಕ್ತನಾಗಿ ಸುಖವಾಗಿ ಕಳೆಯುತ್ತಿದ್ದನು.”

೨೪೬ನೆಯ ಅಧ್ಯಾಯವು ಮುಗಿಯಿತು.

೨೪೭ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ದುರ್ಯೋಧನನು ಸೇನೆಯೊಡನೆ ಮಾರ್ಗಮಧ್ಯದಲ್ಲಿಯೇ ಬಿಡಾರ ಮಾಡಿದುದು : ಕರ್ಣನು ದುರ್ಯೋಧನನನ್ನು ಅಭಿನಂದಿಸಿದುದು

ಜನಮೇಜಯಮಹಾರಾಜನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

“ಬ್ರಾಹ್ಮಣೋತ್ತಮರೇ! ತಾವೇನೋ ‘ಜಗಾಮ ನಗರಂ ಪ್ರತಿ’ ದುರ್ಯೋಧನನು ಹಸ್ತಿನಾಪಟ್ಟಣಕ್ಕೆ ಹೊರಟುಹೋದನು ಎಂದು ಹೇಳಿದಿರಿ. ಆದರೆ ಅವನು ಅಷ್ಟು ಸುಲಭವಾಗಿ ಏನೂ ನಡೆಯಲಿಲ್ಲವೆಂಬ ರೀತಿಯಲ್ಲಿ ನಡೆದುದೆಲ್ಲವನ್ನೂ ಕ್ಷಣಮಾತ್ರದಲ್ಲಿ ಮರೆತು ಹಸ್ತಿನಾಪಟ್ಟಣಕ್ಕೆ ಹೋಗಿರ

ಲಾರನೆಂದು ನನಗನಿಸುತ್ತದೆ. ಏಕೆಂದರೆ : ಮಹಾದುರಭಿಮಾನಿಯಾದ ದುರ್ಯೋಧನನಿಗೆ ಆ ಸಮಯದಲ್ಲಿ ಆದ ಅವಮಾನವು ಅಷ್ಟಿಷ್ಟಲ್ಲ. ಮೊದಲನೆಯದಾಗಿ ಗಂಧರ್ವರೊಡನೆ ಯುದ್ಧಮಾಡಲು ಹೋಗಿ ಪರಾಜಿತ ನಾಗಿ ಸೆರೆಸಿಕ್ಕಿದನು. ಅವನನ್ನು ಮಾತ್ರವಲ್ಲದೇ ಅವನ ಅಂತಃಪುರದ ಸ್ತ್ರೀಯ ರನ್ನೂ ಗಂಧರ್ವರು ಸೆರೆಹಿಡಿದರು. ಅವನನ್ನು ಬಿಡುಗಡೆಮಾಡಿದವರು ಅವನ ಆಜನ್ಮಶತ್ರುಗಳಾದ ಪಾಂಡವರು. ಅದಕ್ಕೂ ಮಿಗಿಲಾಗಿ ಯಾರಿಂದವನು ಸೋತಿದ್ದನೋ ಅದೇ ಗಂಧರ್ವನನ್ನು ಪಾಂಡವರು ತಮ್ಮ ಸ್ವಶಕ್ತಿಯಿಂದ ಪರಾಭವಗೊಳಿಸಿ ಅವನನ್ನು ಬಿಡುಗಡೆಮಾಡಿದರು.

ಸ್ವಭಾವತಃ ದುರ್ಯೋಧನನು ಮಹಾಮಾನೀ ; ಆತ್ಮಸ್ತುತಿಪರಾಯಣ ; ಐಶ್ವರ್ಯ ಮತ್ತು ಯೌವನಮದಗಳಿಂದ ಕೊಬ್ಬಿದ್ದವನು ; ಮಹಾದುರ ಹಂಕಾರಿಯಾಗಿ ಯಾವಾಗಲೂ ತನ್ನ ಪೌರುಷವನ್ನೇ ಕೊಚ್ಚಿಕೊಳ್ಳುತ್ತಾ ಧರ್ಮಾತ್ಮರಾದ ಪಾಂಡವರನ್ನು ತೆಗಳುವ ಸ್ವಭಾವದವನು ; ಮಹಾಪಾಪಿಷ್ಠ. ಇಂತಹವನು ಅಂತಹ ಅವಮಾನವನ್ನು ಹೇಗೆ ತಾನೇ ಸಹಿಸಿಕೊಂಡನು? ತಲೆಯೆತ್ತಿಕೊಂಡು ಪುರಪ್ರವೇಶಮಾಡಲು ಅವನಿಗೆ ಹೇಗೆ ಸಾಧ್ಯವಾಯಿತು? ಶೋಕದಿಂದ ವ್ಯಾಕುಲವಾದ ಮನಸ್ಸಿನಿಂದ ಕೂಡಿದ್ದ, ಲಜ್ಜಾನ್ವಿತನಾಗಿದ್ದ ದುರ್ಯೋಧನನು ಪಟ್ಟಣಪ್ರವೇಶವನ್ನು ಹೇಗೆ ಮಾಡಿದನೆಂಬುದನ್ನು ನನಗೆ ವಿಸ್ತಾರವಾಗಿ ಹೇಳಿರಿ."

"ಮಹಾರಾಜ! ನಿನ್ನ ಊಹೆಯೂ ನಿಶ್ಚಯವೇ. ಅವನು ಅಷ್ಟು ಸುಲಭವಾಗಿ ರಾಜಧಾನಿಯನ್ನು ಪ್ರವೇಶಮಾಡಲಿಲ್ಲ. ತನಗಾದ ಅವಮಾನ ವನ್ನು ಮರೆಯಲೂ ಇಲ್ಲ. ತಾನು ಪಾಂಡವರ ವಿಷಯದಲ್ಲಿ ಅಪಚಾರ ಮಾಡಲು ಹೋದುದು ತಪ್ಪಾಯಿತೆಂದು ಪಶ್ಚಾತ್ತಾಪಪಡಲೂ ಇಲ್ಲ. ಎಲ್ಲ ವಿಷಯಗಳನ್ನೂ ನಿನ್ನ ಇಚ್ಛೆಯಂತೆಯೇ ಸವಿಸ್ತರವಾಗಿ ಹೇಳುವೆನು ಕೇಳು : ಧರ್ಮಾತ್ಮನಾದ ಯುಧಿಷ್ಠಿರನು ಬೀಳ್ಕೊಟ್ಟನಂತರ ದುರ್ಯೋಧನನು ಬಹು ದುಃಖಿತನಾಗಿ ತಲೆಯನ್ನು ಮೇಲಕ್ಕೆತ್ತದೇ ನಾಚಿಕೆಯಿಂದ ಕೂಡಿದವನಾಗಿ ಮೆಲ್ಲ-ಮೆಲ್ಲನೆ ಹೆಜ್ಜೆಯಿಡುತ್ತಾ ಹೋಗಿ ರಥದಲ್ಲಿ ಕುಳಿತನು. ಯಾರೊಡ ನೆಯೂ ಮಾತನಾಡಲಿಲ್ಲ. ಅವನ ರಥವನ್ನನುಸರಿಸಿ ಚತುರಂಗಬಲವೂ

ನಗರಾಭಿಮುಖವಾಗಿ ಪ್ರಯಾಣಹೊರಟಿತು. ಗಂಧರ್ವರೊಡನೆ ನಡೆದ ಯುದ್ಧದಲ್ಲಿ ತನಗುಂಟಾದ ಪರಾಭವವನ್ನೂ, ತನ್ನ ಬಂಧನ ಮತ್ತು ವಿಮೋಚನೆಗಳನ್ನೂ ಬಾರಿ-ಬಾರಿಗೂ ಸ್ಮರಿಸುತ್ತಾ ರಾಜನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ನಗರಾಭಿಮುಖವಾಗಿ ಸ್ವಲ್ಪದೂರ ಪ್ರಯಾಣಮಾಡಿದ ನಂತರ ಜಲ-ತೃಣ-ಕಾಷ್ಠಸಮೃದ್ಧವಾಗಿದ್ದ ರಮ್ಯವಾಗಿದ್ದ ಒಂದು ಪ್ರದೇಶದಲ್ಲಿ ರಥವನ್ನು ನಿಲ್ಲಿಸಿದನು. ಅವನನ್ನು ಹಿಂಬಾಲಿಸಿ ಬರುತ್ತಿದ್ದ ಹಸ್ತ್ಯಶ್ವರಥ ಪದಾತಿಗಳೂ ಪುರಜನರೂ ಆ ಪ್ರದೇಶದ ಸುತ್ತಲೂ ಬಿಡಾರಮಾಡಿದರು. ರಾಜನು ರಥದಿಂದಿಳಿದು ಥಳ-ಥಳನೆ ಹೊಳೆಯುತ್ತಿದ್ದ ಎತ್ತರವಾದ ಪರ್ಯಂಕದಲ್ಲಿ ಕುಳಿತನು. ಆ ಸಮಯದಲ್ಲಿ ದುರ್ಯೋಧನನನ್ನು ನೋಡಿದರೆ ಬೆಳಗಾಗುವ ಸಮಯದಲ್ಲಿ ರಾಹುಗ್ರಸ್ತನಾದ ಚಂದ್ರನಂತೆಯೇ ಕಾಂತಿಹೀನನಾಗಿ ಕಾಣುತ್ತಿದ್ದನು. ಈ ರೀತಿಯಲ್ಲಿ ಕಾಂತಿಹೀನನಾಗಿದ್ದ ದುರ್ಯೋಧನನ ಬಳಿಗೆ ಕರ್ಣನು ಬಂದು ಅವನನ್ನು ಕುರಿತು ಹೀಗೆಂದು ಹೇಳಿದನು :

"ದುರ್ಯೋಧನ! ಅದೃಷ್ಟವಶಾತ್ ನೀನಿಂದು ಪ್ರಾಣಾಪಾಯದಿಂದ ಪಾರಾಗಿ ಬಂದಿರುವೆ. ನಾವು ಅದೃಷ್ಟಶಾಲಿಗಳಾದುದರಿಂದಲೇ ಪುನಃ ಪರಸ್ಪರ ಸೇರಲು ಅವಕಾಶವಾಯಿತು. ಅಪೇಕ್ಷಿಸಿದ ರೂಪಗಳನ್ನು ಧರಿಸುವ ಸಾಮರ್ಥ್ಯವುಳ್ಳ ಗಂಧರ್ವರು ಅದೃಷ್ಟವಶಾತ್ ನಿನ್ನಿಂದ ಪರಾಜಿತರಾದರು. ನಾನೂ ಕೂಡ ಅದೃಷ್ಟಶಾಲಿಯಾದುದರಿಂದಲೇ ಯುದ್ಧದಲ್ಲಿ ಜಯಶಾಲಿಯಾದ ನಿನ್ನನ್ನೂ, ನಿನ್ನ ಅನುಜರನ್ನೂ ಮತ್ತು ನಮ್ಮ ಕೌರವಸೇನೆಯನ್ನೂ ಪುನಃ ನೋಡಲು ಸಾಧ್ಯವಾಯಿತು. ನನ್ನ ವಿಷಯವನ್ನು ತಿಳಿಸಲು ನಾನು ಖಂಡಿತವಾಗಿಯೂ ನಾಚಬೇಕಾಗಿದೆ. ರಥವನ್ನು ಕಳೆದುಕೊಂಡ ನಾನು ನನ್ನ ಸುತ್ತಲೂ ಸಾವಿರಾರು ಸಂಖ್ಯೆಯಲ್ಲಿ ನಿಂತಿದ್ದ ಗಂಧರ್ವರನ್ನೆದುರಿಸಿ ಯುದ್ಧ ಮಾಡಲು ಸಾಧ್ಯವಾಗದೆ ವಿಕರ್ಣನ ರಥದಲ್ಲಿ ಕುಳಿತು ನಿನ್ನೆದುರಿನಲ್ಲಿಯೇ ಪಲಾಯನಮಾಡಿದೆನು. ಆ ಸಮಯದಲ್ಲಿ ನನಗೆ, ಪಲಾಯನಮಾಡುತ್ತಿದ್ದ ನಮ್ಮ ಸೈನಿಕರನ್ನು ಒಟ್ಟುಗೂಡಿಸಲು ಸಾಧ್ಯವಾಗಲಿಲ್ಲ. ಎದುರಾಳಿಗಳ ಅವ್ಯಾಹತವಾದ ಬಾಣಪ್ರಯೋಗದಿಂದ ಶರೀರವೆಲ್ಲವೂ ಗಾಯಗೊಂಡಿದ್ದಿತು. ಆದುದರಿಂದಲೇ ನಾನು ಯುದ್ಧದಿಂದ ತಪ್ಪಿಸಿಕೊಂಡು ರಕ್ಷಣೆಯನ್ನು ಪಡೆಯಬೇಕಾಯಿತು. ನಾನು ಯುದ್ಧಭೂಮಿಯಿಂದ ಹೊರಬಂದರೂ ನೀನು,

ನಿನ್ನ ಅನುಜರು, ಅಂತಃಪುರದ ಸ್ತ್ರೀಯರು, ಚತುರಂಗಬಲ–ಎಲ್ಲರೂ ಅಮಾನುಷವಾದ ಆ ಯುದ್ಧದಿಂದ ತಪ್ಪಿಸಿಕೊಂಡು ಸುಕ್ಷೇಮವಾಗಿ ನಗರಕ್ಕೆ ಪ್ರಯಾಣಮಾಡುತ್ತಿರುವುದನ್ನು ನೋಡಿದರೆ ಅತ್ಯಾಶ್ಚರ್ಯವೆನಿಸುತ್ತದೆ. ಗಂಧರ್ವರೊಡನೆ ನೀನೂ ಮತ್ತು ನಿನ್ನ ಸಹೋದರರೂ ಸೇರಿ ಗಳಿಸಿರುವ ಜಯದ ಸಾಧನೆಯು ಅನ್ಯಾದೃಶವಾದುದು. ಊಹಿಸಲು ಕೂಡ ಅಶಕ್ಯ ವಾದುದು. ನಿಮಗೆ ಸಮಾನರಾದವರು ಈ ಲೋಕದಲ್ಲಿಯೇ ಮತ್ತಾರೂ ಇಲ್ಲವೆಂದು ಘೋಷಣೆಮಾಡಿ ಹೇಳುತ್ತೇನೆ.”



ಜನಮೇಜಯ! ಕರ್ಣನಿಗೆ ದುರ್ಯೋಧನನ ಬಂಧನ-ವಿಮೋಚನೆ ಗಳೊಂದೂ ತಿಳಿದಿರಲಿಲ್ಲ. ವಿಷಯವೇನೆಂಬುದನ್ನೇ ತಿಳಿಯದೇ ಹೀಗೆಂದು

ಮಾತನಾಡುತ್ತಿದ್ದ ಕರ್ಣನನ್ನು ಕುರಿತು ದುರ್ಯೋಧನನು ಗದ್ಗದಕಂಠದಿಂದ ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳತೊಡಗಿದನು.

೨೪೭ನೆಯ ಅಧ್ಯಾಯವು ಮುಗಿಯಿತು.

೨೪೮ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ದುರ್ಯೋಧನನು ಯುದ್ಧದಲ್ಲಿ ತನಗಾದ ಪರಾಜಯವನ್ನು ಕರ್ಣನಿಗೆ ವರ್ಣಿಸಿ ಹೇಳಿದುದು

(ಶತ್ರುಗಳಿಂದ ಬಂಧಿತನಾಗಿ ಅನಂತರ ಮತ್ತೊಬ್ಬ ಶತ್ರುವಿನಿಂದ ವಿಮೋಚಿತನಾಗಿರುವನೊಬ್ಬನನ್ನು ಕುರಿತು "ನೀನು ಮಹಾಶೂರ, ಲೋಕೈಕವೀರ, ಅಂತಹ ಮಹಾಶತ್ರುಗಳನ್ನೂ ನಿಗ್ರಹಿಸಿ ಬಂದೆ"–ಎಂದು ಮುಂತಾಗಿ ಹೇಳಿದರೆ ಅವನ ಮನಸ್ಸು ಎಷ್ಟು ನೋಯುವುದೆಂಬುದನ್ನು ಹೇಳುವ ಕಾರಣವಿಲ್ಲ. ಪ್ರಕೃತ ದುರ್ಯೋಧನನ ಪಾಡೂ ಹಾಗೆಯೇ ಆಯಿತು. ವಿಷಯವೇನೆಂಬುದನ್ನು ಸರಿಯಾಗಿ ತಿಳಿದುಕೊಳ್ಳದೆ ಕರ್ಣನು ದುರ್ಯೋಧನನನ್ನು ಬಹಳವಾಗಿ ಹೊಗಳಿದನು.) ದುರ್ಯೋಧನನ ಮನಸ್ಸಿಗೆ ಕರ್ಣನ ಮಾತುಗಳನ್ನು ಕೇಳಿ ಪರಿತಾಪವಾದರೂ ತನ್ನ ಮನಸ್ಸಿನ ಸಂಕಟವನ್ನು ತಾನೇ ನುಂಗಿಕೊಂಡು ಕರ್ಣನನ್ನು ಕುರಿತು ಅವನು ಹೀಗೆಂದು ಹೇಳಿದನು :

**ಅಜಾನತಸ್ತೇ ರಾಧೇಯ ನಾಭ್ಯಸೂಯಾಮ್ಯಹಂ ವಚಃ ||೧||**

"ನಿನಗೆ ವಿಷಯವೇನೆಂಬುದು ತಿಳಿಯದೇ ಇರುವುದರಿಂದ ಮನಸ್ಸನ್ನು ಚುಚ್ಚುವ ನಿನ್ನ ಈ ಮಾತುಗಳನ್ನು ಕೇಳಿಯೂ ನಾನೂ ಕೋಪಗೊಳ್ಳುವುದಿಲ್ಲ. ನನ್ನ ಭುಜಬಲ-ಪರಾಕ್ರಮಗಳಿಂದಲೇ ನಾನು ಗಂಧರ್ವರೆಲ್ಲರನ್ನೂ ಪರಾಜಯಗೊಳಿಸಿಬಿಟ್ಟೆನೆಂದು ನೀನು ಭಾವಿಸಿರುವೆ. ಮಹಾಬಾಹುವೇ! ನಿಶ್ಚಯವಾಗಿಯೂ ನನ್ನ ಅನುಜರೂ ನನ್ನ ಬೆಂಬಲವನ್ನು ಪಡೆದು ಗಂಧರ್ವರೊಡನೆ ಬಹುಕಾಲ ಸೆಣೆಸಾಡಿದರು. ಎರಡು ಪಕ್ಷಗಳಲ್ಲಿಯೂ ಅಸಂಖ್ಯಾತರಾದ ಸೈನಿಕರು ಪ್ರಾಣತೆತ್ತರು. ಜಯಾಪಜಯಗಳು ಎರಡು ಪಕ್ಷಗಳಿಗೂ ಸಮವಾಗಿದ್ದುವು. ಆದರೆ ಯಾವಾಗ ಗಂಧರ್ವರು ಆಕಾಶಕ್ಕೆ ಹಾರಿ ಮಾಯಾಯುದ್ಧಕ್ಕೆ ತೊಡಗಿದರೋ–ಆಗ ಬಲಾಬಲಗಳು ವ್ಯತ್ಯಾಸ

ವಾಗತೊಡಗಿದುವು. ಕ್ಷಣ-ಕ್ಷಣಕ್ಕೂ ಗಂಧರ್ವರೇ ವಿಜಯಿಗಳಾಗುತ್ತಿದ್ದರು. ನಾವು ಸೋಲುತ್ತಿದ್ದುದು ಮಾತ್ರವಲ್ಲದೇ–ನಮ್ಮಲ್ಲನೇಕರನ್ನು ಅವರು ಬಂಧಿಸಲೂ ತೊಡಗಿದರು. ನಮ್ಮ ಮಂತ್ರಿಗಳು, ಸೇನಾಪ್ರಮುಖರು, ಮಕ್ಕಳು, ಪತ್ನಿಯರು–ಎಲ್ಲರೂ ಅನುಕ್ರಮವಾಗಿ ಗಂಧರ್ವರ ಬಂದಿಗಳಾದರು. ಅನುಜರೊಡನೆ ನಾನೂ ಕೂಡ ಅವರಿಂದ ಸೆರೆಹಿಡಿಯಲ್ಪಟ್ಟೆನು. ನಮ್ಮನ್ನು ಸೆರೆಹಿಡಿದ ಗಂಧರ್ವರು ನಮ್ಮೆಲ್ಲರನ್ನೂ ಆಕಾಶಮಾರ್ಗದಲ್ಲಿ ಕರೆದೊಯ್ಯುತ್ತಿದ್ದಾಗ ಭೂಮಿಯ ಮೇಲೆ ಅಳಿದುಳಿದಿದ್ದ ನಮ್ಮ ಕೆಲವು ಸೈನಿಕರು ಮತ್ತು ಮಂತ್ರಿಗಳು ಬಹುದುಃಖಿತರಾಗಿ ಅನತಿದೂರದಲ್ಲಿಯೇ ಇದ್ದ ಶರಣಾಗತರಕ್ಷಕರಾದ ಪಾಂಡವರ ಸಮೀಪಕ್ಕೆ ತೆರಳಿದರು. ಧರ್ಮಿಷ್ಠನಾದ ಯುಧಿಷ್ಠಿರನನ್ನು ಸಂದರ್ಶಿಸಿದನಂತರ ಬದ್ಧಾಂಜಲಿಗಳಾಗಿ ಅವನನ್ನು ಕುರಿತು ನಮ್ಮ ಸೈನಿಕರು ಹೀಗೆಂದು ಹೇಳಿದರು :

“ಮಹಾರಾಜ! ಧೃತರಾಷ್ಟ್ರನ ಮಗನಾದ ದುರ್ಯೋಧನನು ಪರಿವಾರಸಮೇತನಾಗಿ ಗಂಧರ್ವರಿಂದ ಸೆರೆಹಿಡಿಯಲ್ಪಟ್ಟಿದ್ದಾನೆ. ಸಪರಿವಾರನಾದ ಅವನನ್ನು ಗಂಧರ್ವರು ಆಕಾಶಮಾರ್ಗದಲ್ಲಿ ಸೆಳೆದೊಯ್ಯುತ್ತಿದ್ದಾರೆ. ಆದುದರಿಂದ ನೀನೀಗಲೇ ದಯಮಾಡಿ ದುರ್ಯೋಧನನನ್ನೂ, ಅವನ ಅಂತಃಪುರದ ಸ್ತ್ರೀಯರನ್ನೂ ಬಿಡುಗಡೆಮಾಡಿಸು. ಕುರುಕುಲದ ಸ್ತ್ರೀಯರಿಗೆ ಯಾವ ಕಾರಣದಿಂದಲೂ ಅಪಮಾನವಾಗದಂತೆ ನೋಡಿಕೊಳ್ಳುವುದು ಯುಕ್ತವಾಗಿದೆ.” ಕರ್ಣ! ನಮ್ಮ ಸೈನಿಕರ ಮಾತುಗಳನ್ನು ಕೇಳಿ ಧರ್ಮಾತ್ಮನಾದ, ಪಾಂಡುವಿನ ಹಿರಿಯ ಮಗನಾದ ಧರ್ಮಜನು ಪ್ರಸನ್ನನಾಗಿ, ಒಡನೆಯೇ ತನ್ನ ಅನುಜರನ್ನು ಕರೆಯಿಸಿ ನಮ್ಮಗಳನ್ನು ಕೂಡಲೇ ಬಿಡುಗಡೆ ಮಾಡಿಸುವಂತೆ ಆಜ್ಞಾಪಿಸಿದನು. ಅಣ್ಣನ ಆಜ್ಞಾನುಸಾರವಾಗಿ ಭೀಮ ಪ್ರಮುಖರಾದ ಪಾಂಡವರು ಒಡನೆಯೇ ಗಂಧರ್ವರನ್ನು ಹಿಂಬಾಲಿಸಿ ಬಂದರು. ತಮ್ಮ ಭುಜಬಲ-ಪರಾಕ್ರಮಗಳಿಂದಲೇ ನಮ್ಮನ್ನು ಬಿಡುಗಡೆ ಮಾಡುವ ಸಾಮರ್ಥ್ಯವು ಅವರಿಗಿದ್ದರೂ ನಮ್ಮನ್ನು ಬಿಡುಗಡೆಮಾಡಬೇಕೆಂದು ಗಂಧರ್ವರಿಗೆ ಒಳ್ಳೆಯ ಮಾತಿನಲ್ಲಿಯೇ ಹೇಳಿದರು. ಆದರೆ ಅವರ ಸಾಂತ್ವವಚನಕ್ಕೆ ಗಂಧರ್ವರು ಮಣಿಯಲಿಲ್ಲ. ನಮ್ಮನ್ನು ಬಿಡುಗಡೆಮಾಡಲು ನಿರಾಕರಿಸಿದರು. ಮರುಕ್ಷಣದಲ್ಲಿಯೇ ಭೀಮಾರ್ಜುನ-ನಕುಲ-ಸಹದೇವರು

ಗಂಧರ್ವರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿಬಿಟ್ಟರು. ಅನುಸ್ಯೂತವಾದ ಬಾಣಗಳ ಆಘಾತವನ್ನು ತಡೆದುಕೊಳ್ಳಲಾರದೇ ನಮ್ಮನ್ನು ಎತ್ತಿ ಕೊಂಡೇ ಗಂಧರ್ವರು ಆಕಾಶಕ್ಕೆ ಹಾರಿ ಜಯಸೂಚಕವಾದ ಗರ್ಜನೆಗಳನ್ನು ಮಾಡುತ್ತಿದ್ದಾಗಲೇ ಅವರ ಸುತ್ತಲೂ ಅರ್ಜುನನಿಂದ ಶರಪಂಜರವೇ ಕಟ್ಟಲ್ಪಟ್ಟಿತು. ಆದರಿಂದಾಗಿ ಆಕಾಶಮಾರ್ಗವು ಮುಚ್ಚಲ್ಪಟ್ಟಿತು. ಶರಪಂಜರವನ್ನು ಕಟ್ಟಿ ಅರ್ಜುನನು ಮಹಾಸ್ತ್ರಗಳನ್ನು ಶತ್ರುಗಳ ಮೇಲೆ ಪ್ರಯೋಗಮಾಡಲು ಉಪಕ್ರಮಿಸಿದನು. ಗಂಧರ್ವರಿಗೆ ಮುಂದೇನು ಮಾಡಬೇಕೆಂದೇ ತೋರಲಿಲ್ಲ. ತನ್ನ ಸೈನ್ಯಕ್ಕೆ ಪ್ರಾಪ್ತವಾದ ದುರವಸ್ಥೆಯನ್ನು ಕಂಡು ಗಂಧರ್ವರ ನಾಯಕನೂ ಅರ್ಜುನನ ಪ್ರಿಯಮಿತ್ರನೂ ಆದ ಚಿತ್ರಸೇನನು ಅರ್ಜುನನಿಗೆದುರಾಗಿ ಬಂದು ನಿಂತನು. ಗೆಳೆಯರಿಬ್ಬರೂ ಆದರದಿಂದ ಪರಸ್ಪರವಾಗಿ ಆಲಿಂಗನೆಮಾಡಿಕೊಂಡು ಕುಶಲಪ್ರಶ್ನೆಮಾಡಿದರು. ಕುಶಲಪ್ರಶ್ನೆಯಾದನಂತರದಲ್ಲಿ ಚಿತ್ರಸೇನನು ಭೀಮ-ನಕುಲ-ಸಹದೇವರನ್ನೂ ಪ್ರತ್ಯೇಕವಾಗಿ ಆಲಿಂಗಿಸಿ ಅವರ ಯೋಗ-ಕ್ಷೇಮಗಳನ್ನೂ ವಿಚಾರಿಸಿದನು. ಈ ರೀತಿಯಾಗಿ ಪರಸ್ಪರ ಕುಶಲಪ್ರಶ್ನೆಯಾದನಂತರ ಗಂಧರ್ವರೆಲ್ಲರೂ ತಮ್ಮ-ತಮ್ಮ ಆಯುಧಗಳನ್ನು ವಿಸರ್ಜಿಸಿ ಪಾಂಡವರೊಡನೆ ಸಖ್ಯದ ಮಾತುಗಳನ್ನಾಡಲು ಪ್ರಾರಂಭಿಸಿದರು. ಚಿತ್ರಸೇನನು ಅರ್ಜುನನನ್ನೂ-ಅರ್ಜುನನು ಚಿತ್ರಸೇನನನ್ನೂ ಪರಸ್ಪರವಾಗಿ ಆದರಿಸಿ ಗೌರವಿಸಿದರು."

೨೪೮ನೆಯ ಅಧ್ಯಾಯವು ಮುಗಿಯಿತು.

೨೪೯ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ದುರ್ಯೋಧನನು ಆಮರಣಾಂತವಾಗಿ ಉಪವಾಸಮಾಡಲು ನಿಶ್ಚಯಿಸಿ ದುಃಶಾಸನನಿಗೆ ಪಟ್ಟಗಟ್ಟಲು ಹೇಳಿದುದು : ದುರ್ಯೋಧನನಿಗೆ ಕರ್ಣನು ಸಮಾಧಾನ ಹೇಳಿದುದು

ದುರ್ಯೋಧನನು ಮುಂದುವರಿಸಿ ಹೇಳಿದನು :

"ಕರ್ಣ! ಶತ್ರುನಿಷೂದನನಾದ ಅರ್ಜುನನು ನಸುನಗುತ್ತಾ ಚಿತ್ರಸೇನನನ್ನು ಕುರಿತು ಪೌರುಷಯುಕ್ತವಾದ ಈ ಮಾತುಗಳನ್ನಾಡಿದನು : 'ಗಂಧರ್ವಸತ್ತಮ! ಈ ನನ್ನ ಸಹೋದರರನ್ನು ವಿಮೋಚನೆಮಾಡುವುದು

ಸಾಧುವಾಗಿದೆ. ಪಾಂಡುವಿನ ಮಕ್ಕಳು ಎಲ್ಲಿಯವರೆಗೆ ಈ ಭೂಮಿಯಲ್ಲಿ ಜೀವಿಸಿರುವರೋ ಅಲ್ಲಿಯವರೆಗೂ ಈ ಕುರುರಾಜಕುಮಾರರು ಇತರ ಶತ್ರುಗಳಿಂದ ಅವಮಾನಿತರಾಗತಕ್ಕವರಲ್ಲ. ಇವರನ್ನು ಅವಮಾನಗೊಳಿಸಲು ನಾವು ಖಂಡಿತವಾಗಿಯೂ ಅವಕಾಶಕೊಡುವುದಿಲ್ಲ.'

ಅರ್ಜುನನ ಪೌರುಷಯುಕ್ತವಾದ ಈ ಮಾತುಗಳನ್ನು ಕೇಳಿ ಗಂಧರ್ವನು, ನಾವು ಪರಿವಾರಸಮೇತರಾಗಿ ದ್ವೈತವನಕ್ಕೆ ಪ್ರಯಾಣಮಾಡಲು ಕಾರಣವೇನೆಂಬುದನ್ನು ವಿವರಿಸಿ ಅರ್ಜುನನೊಡನೆ ಹೇಳಿಬಿಟ್ಟನು : 'ಇವರು ಕಷ್ಟದಲ್ಲಿರುವ ನಿಮ್ಮನ್ನೂ ದ್ರೌಪದಿಯನ್ನೂ ನೋಡಿ ಸಂತೋಷಿಸಲು ದ್ವೈತ ವನಕ್ಕೆ ಆಗಮಿಸಿದ್ದರು. ದುರುಳನಾದ ದುರ್ಯೋಧನನಿಗೆ ತನ್ನ ವೈಭವವನ್ನು ನಿಮ್ಮ ಮುಂದೆ ಪ್ರದರ್ಶಿಸುವುದೇ ಮುಖ್ಯವಾದ ಧ್ಯೇಯವಾಗಿದ್ದಿತು. ಈ ವಿಷಯವನ್ನು ತಿಳಿದೇ ನಾನಿವನಿಗೆ ಸರಿಯಾಗಿ ಬುದ್ಧಿಕಲಿಸುವ ಸಲುವಾಗಿ ಇಂದ್ರನಿಂದಲೂ ಪ್ರೇರಿತನಾಗಿ ಇಲ್ಲಿಗೆ ಬಂದೆನು. ಈಗ ಇವನನ್ನು ಬಂಧಿಸಿ ದೇವಲೋಕಕ್ಕೆ ಕರೆದೊಯ್ಯುತ್ತಿದ್ದೇನೆ'–ಎಂದು ಸ್ಪಷ್ಟವಾಗಿಯೇ ಹೇಳಿಬಿಟ್ಟನು.

ಗಂಧರ್ವನು ನಮ್ಮ ರಹಸ್ಯಯೋಜನೆಯ ವಿಷಯವನ್ನು ಹೊರಗೆಡಹಿದಾಗ ನನಗಾದ ಸಂಕಟವು ಅಷ್ಟಿಷ್ಟಲ್ಲ. ನಾಚಿ ತಲೆತಗ್ಗಿಸಿದವನು ಮೇಲೆತ್ತಲೇ ಇಲ್ಲ. ಭೂಮಿಯು ಬಿರುಕುಬಿಟ್ಟು ಅವಕಾಶ ನೀಡಿದರೆ ಅದರೊಳಗೆ ಹುದುಗಿಕೊಂಡುಬಿಡಬೇಕೆನ್ನಿಸಿತು. ಅನಂತರದಲ್ಲಿ ಚಿತ್ರಸೇನಾರ್ಜುನರಿಬ್ಬರೂ ಒಂದು ನಿರ್ಣಯಕ್ಕೆ ಬಂದು ಬಂದಿಗಳಾಗಿದ್ದ ನಮ್ಮೆಲ್ಲರನ್ನೂ ಕರೆದುಕೊಂಡು ಯುಧಿಷ್ಠಿರನಲ್ಲಿಗೆ ಹೋಗಿ ಅವನೊಡನೆಯೂ ಸಹ ನಮ್ಮ ದುರಾಲೋಚನೆಯನ್ನು ಹೇಳಿಬಿಟ್ಟರು. 'ಇಂತಹ ದುರುಳನಿಗೆ ಯೋಗ್ಯವಾದ ಶಿಕ್ಷೆಕೊಡುವುದು ನಿನಗೆ ಸೇರಿದ್ದಾಗಿದೆ'–ಎಂದು ಹೇಳಿ ಹಗ್ಗದಿಂದ ಬಿಗಿಯಲ್ಪಟ್ಟಿದ್ದ ನನ್ನನ್ನೂ ಮತ್ತು ನನ್ನ ಪರಿವಾರದವರನ್ನೂ ಗಂಧರ್ವರಾಜನು ಯುಧಿಷ್ಠಿರನಿಗೊಪ್ಪಿಸಿಬಿಟ್ಟನು.

ಕರ್ಣ! ಈಗ ನೀನೇ ಯೋಚಿಸಿ ಹೇಳು. ಕಪ್ಪವನ್ನು ರಾಜನಿಗೊಪ್ಪಿಸುವಂತೆ–ನನ್ನನ್ನು ಗಂಧರ್ವನು ಯುಧಿಷ್ಠಿರನಿಗೊಪ್ಪಿಸಿದನು. ಅದೂ ಸಹ

ನಮ್ಮ ಅಂತಃಪುರಸ್ತ್ರೀಯರ ಸಮ್ಮುಖದಲ್ಲಿ ಹಗ್ಗದಿಂದ ಬಿಗಿಯಲ್ಪಟ್ಟಿದ್ದ ನನ್ನನ್ನು ಯುಧಿಷ್ಠಿರನ ಪಾದದಡಿಯಲ್ಲಿ ಹಾಕಿಬಿಟ್ಟನು. ನನ್ನ ಮೇಲಿನ ಪೂರ್ಣಾಧಿಕಾರವೂ ನಮ್ಮ ಶತ್ರುವಿನ ಹತೋಟಿಗೇ ಸೇರಿಹೋಯಿತು. ನನ್ನ ಅಳಿವು-ಉಳಿವುಗಳು ನನ್ನ ಶತ್ರುವಿನ ದಯೆಗೆ ಪಾತ್ರವಾಯಿತು. ನಾನು ಯಾರನ್ನು ಮೊದಲಿನಿಂದಲೂ ನಾನಾರೀತಿಯಲ್ಲಿ ತೊಂದರೆಪಡಿಸಿದ್ದೆನೋ, ನಾನು ಯಾರಿಗೆ ಮೊದಲಿನಿಂದಲೂ ಶತ್ರುವಾಗಿದ್ದೆನೋ–ಅಂತಹವರಿಂದಲೇ ನಾನು ಬಂಧನದಿಂದ ವಿಮುಕ್ತಿಹೊಂದಬೇಕಾಯಿತು. ಅವರೇ ನನಗಿಂದು ಜೀವದಾನವನ್ನು ಮಾಡಿದಂತಾಯಿತು.

ನಿಶ್ಚಯವಾಗಿಯೂ ಕರ್ಣ! ನಾನೇನಾದರೂ ಗಂಧರ್ವರೊಡನೆ ನಡೆದ ಮಹಾಸಮರದಲ್ಲಿಯೇ ಪ್ರಾಣತೆತ್ತಿದ್ದರೆ ಅದು ನನಗೆ ಹೆಚ್ಚಿನ ಶ್ರೇಯಸ್ಸನ್ನುಂಟುಮಾಡುವುದಾಗಿದ್ದಿತು. ಈ ವಿಧದಲ್ಲಿ ಜೀವದಾನಪಡೆಯುವುದಕ್ಕಿಂತಲೂ ಗಂಧರ್ವರೊಡನೆ ನಡೆದ ಯುದ್ಧದಲ್ಲಿ ನಾನೇನಾದರೂ ಪ್ರಾಣ ತೊರೆದಿದ್ದರೆ ನನ್ನ ಕೀರ್ತಿಯು ದಿಗಂತದವರೆಗೂ ವ್ಯಾಪಿಸುತ್ತಿದ್ದಿತು ಮತ್ತು ಮಹೇಂದ್ರಭವನದಲ್ಲಿ ನನಗೆ ಅಕ್ಷಯವಾದ ಪುಣ್ಯಲೋಕಗಳೂ ಪ್ರಾಪ್ತವಾಗುತ್ತಿದ್ದುವು. ನನ್ನ ದೌರ್ಭಾಗ್ಯದ ಅಥವಾ ನಾನು ಮಾಡಿದ ಪಾಪಕರ್ಮದ ಫಲವಾಗಿ ನಾನಿಂದು ಹೀಗೆ ಅವಮಾನಿತನಾಗಿದ್ದೇನೆ.”

ದುಃಶಾಸನಾದಿ ತನ್ನ ಅನುಜರನ್ನು ಕುರಿತು ದುರ್ಯೋಧನನು ಹೇಳಿದನು:

“ನರರ್ಷಭರೇ! ನಾನು ಮುಂದೇನು ಮಾಡಬೇಕೆಂದಿರುವೆನೆಂಬುದನ್ನು ಹೇಳುವೆನು ; ಕೇಳಿರಿ. ನಾನೊಬ್ಬನು ಇಲ್ಲಿಯೇ ಇದ್ದು ಪ್ರಾಯೋಪವೇಶ ಮಾಡುತ್ತೇನೆ. ನೀವುಗಳೆಲ್ಲರೂ ಹಸ್ತಿನಾಪುರಕ್ಕೆ ಪ್ರಯಾಣಮಾಡಿರಿ. ನನ್ನ ತಮ್ಮಂದಿರೆಲ್ಲರೂ ಹಸ್ತಿನಾಪಟ್ಟಣಕ್ಕೆ ಹೋಗಲಿ. ದುಃಶಾಸನಪ್ರಮುಖರಾದ ಅನುಜರೂ ಕರ್ಣನೇ ಮೊದಲಾದ ನಮ್ಮ ಬಂಧು-ಮಿತ್ರರೆಲ್ಲರೂ ಈಗಲೇ ಹಸ್ತಿನಾಪಟ್ಟಣಕ್ಕೆ ಪ್ರಯಾಣಮಾಡಲಿ. ಶತ್ರುವಿನಿಂದ ಅವಮಾನಿತನಾದ ನಾನಿನ್ನು ಖಂಡಿತವಾಗಿಯೂ ಹಸ್ತಿನೆಗೆ ಹಿಂದಿರುಗಲಾರೆನು. ಹಿಂದೆ ನಾನು ಶತ್ರುಗಳ ಮಾನಾಪಹಾರಕನಾಗಿ ನಮ್ಮ ಸುಹೃದರಿಗೆ ಸಂತಸವನ್ನುಂಟುಮಾಡುತ್ತಿದ್ದೆನು. ಅಂತಹ ನಾನಿಂದು ಅವಮಾನಿತನಾಗಿ ಮಿತ್ರರಿಗೆ ದುಃಖದಾಯಕನೂ

ಶತ್ರುಗಳಿಗೆ ಸಂತೋಷದಾಯಕನೂ ಆಗಿರುತ್ತೇನೆ. ಹಸ್ತಿನಾಪಟ್ಟಣಕ್ಕೆ ಹೋದನಂತರ ನಾನು ರಾಜನಾದ ಧೃತರಾಷ್ಟ್ರನಿಗೆ ಏನೆಂದು ಹೇಳಲಿ?

ಭೀಷ್ಮ-ದ್ರೋಣ-ಕೃಪ-ಅಶ್ವತ್ಥಾಮ-ವಿದುರ-ಸಂಜಯ-ಬಾಹ್ಲಿಕ-ಭೂರಿಶ್ರವರೂ, ಬ್ರಾಹ್ಮಣ-ವೈಶ್ಯರೇ ಮುಂತಾದ ನಮ್ಮ ನಾಗರಿಕರೂ ನನ್ನನ್ನು ಕಂಡು ಏನೆಂದಾರು? ಅವರೆಲ್ಲರಿಗೂ ನಾನು ಏನುತ್ತರಕೊಡಲಿ? ಇದುವರೆಗೂ ನಾನು ನನ್ನ ಶತ್ರುಗಳ ತಲೆಗಳನ್ನು ಮೆಟ್ಟಿ ಕುಳಿತಿದ್ದೆನು. ನಾನು ಇದುವರೆಗೂ ಅವರ ಎದೆಗೆ ಶೂಲಪ್ರಾಯನಾಗಿದ್ದೆನು. ಆದರೆ ಇಂದು ನನ್ನ ಸ್ವದೋಷದಿಂದಲೇ ನನಗಿದ್ದ ಪ್ರೌಢಿಮೆಯನ್ನು ಹಾಳುಮಾಡಿಕೊಂಡೆನು. ಈ ವಿಷಯವನ್ನು ನಾನು ಅವರೊಂದಿಗೆ ಹೇಗೆ ತಾನೇ ಹೇಳಲಿ? ಹಿರಿಯರು ಹೇಳುವ ಈ ಮಾತು ಸತ್ಯವಾದುದು :

**ದುರ್ವಿನೀತಾಃ ಶ್ರಿಯಂ ಪ್ರಾಪ್ಯ ವಿದ್ಯಾಮೈಶ್ವರ್ಯಮೇವ ಚ ।**
**ತಿಷ್ಠನ್ತಿ ಚ ಚಿರಂ ಭದ್ರೇ ಯಥಾಹಂ ಮದಗರ್ವಿತಃ ॥೧೮॥**

ವಿನಯಗುಣವಿಲ್ಲದವರು ಐಶ್ವರ್ಯ-ವಿದ್ಯೆ-ರಾಜ್ಯ-ಸಂಪತ್ತುಗಳನ್ನು ಎಷ್ಟೇ ಪಡೆದಿದ್ದರೂ ಕಲ್ಯಾಣಮಯವಾದ ಸ್ಥಾನದಲ್ಲಿ ಹೆಚ್ಚುಕಾಲ ನಿಲ್ಲುವುದಿಲ್ಲ. ಅವಿನೀತರು ಚಿರಕಾಲ ಸೌಭಾಗ್ಯವನ್ನು ಅನುಭವಿಸಲಾರರು. ಇದಕ್ಕೆ ನಾನೇ ಸಾಕ್ಷಿ. ನಾನು ಅಹಂಕಾರದಿಂದ ಕೊಬ್ಬಿಹೋಗಿದ್ದೆನು. ಪಾಂಡವರ ವಿಷಯದಲ್ಲಿ ಧೂರ್ತನಂತೆಯೇ ವರ್ತಿಸಿದೆನು. ಆದುದರಿಂದಲೇ ಇಂದು ನನಗೆ ಈ ಶಿಕ್ಷೆಯಾಯಿತು.

ನಿಶ್ಚಯವಾಗಿಯೂ ನಾನು ಮಾಡಿದುದು ಅಯೋಗ್ಯಕಾರ್ಯ. ನಾನು ಇಂತಹ ದುಷ್ಕಾರ್ಯವನ್ನು ಖಂಡಿತವಾಗಿಯೂ ಮಾಡಕೂಡದಾಗಿತ್ತು. ನಾನು ದುರ್ಬುದ್ಧಿಯಿಂದಲೂ ದುರಹಂಕಾರದಿಂದಲೂ ಈ ದುಷ್ಕಾರ್ಯ ಮಾಡಿದೆನು. ಅದರ ಕಾರಣದಿಂದಲೇ ನಾನಿಂದು ಇಷ್ಟು ಅವಮಾನಿತನಾದೆನು. ಆದುದರಿಂದ ಪ್ರಾಯೋಪವೇಶಮಾಡಿ ಪ್ರಾಣವನ್ನು ತೊರೆಯುತ್ತೇನೆ. ನನಗಿನ್ನು ನನ್ನ ಜೀವದ ಮೇಲೆ ಆಸೆಯಿಲ್ಲ. ಶತ್ರುವಿನ ದಯೆಯಿಂದ ಜೀವದಾನ ಪಡೆದ ಯಾವ ವೀರನು ತಾನೇ ಹೆಚ್ಚು ಕಾಲ ಜೀವಂತನಾಗಿ ಉಳಿಯಲು ಇಚ್ಛಿಸಿಯಾನು? ನಾನು ದುರಭಿಮಾನೀ. ಆದರೆ ಪೌರುಷವಿಲ್ಲದವನಾದೆನು. ಶತ್ರುಗಳು ನನ್ನನ್ನು ಅಪಹಾಸ್ಯಮಾಡಿದರು. ಮಹಾಪರಾಕ್ರಮಿ

ಗಳಾದ, ಮಹಾಬಲಶಾಲಿಗಳಾದ ಪಾಂಡವರು ನನ್ನನ್ನು ಪರಿಹಾಸದೃಷ್ಟಿಯಿಂದ ನೋಡಿದರು. ಹೀಗೆ ಅವಮಾನಿತನಾಗಿ ಏಕೆ ಬದುಕಬೇಕು?"

ಜನಮೇಜಯ! ಚಿಂತೆಯಲ್ಲಿಯೇ ಮುಳುಗಿಹೋಗಿದ್ದ ದುರ್ಯೋಧನನು ಕ್ಷಣಕಾಲ ಮೌನಧರಿಸಿದ್ದು ನಿಟ್ಟುಸಿರುಬಿಟ್ಟು ಪುನಃ ದುಃಶಾಸನನನ್ನು ಕುರಿತು ಹೇಳಿದನು : "ಭರತಕುಲಾವತಂಸನೇ! ನಾನೀಗ ಹೇಳುವುದನ್ನು ಏಕಾಗ್ರಚಿತ್ತನಾಗಿ ಕೇಳು. ನಾನಿಂದು ಇಲ್ಲಿಯೇ ನಿನಗೆ ಪಟ್ಟಾಭಿಷೇಕ ಮಾಡಿಬಿಡುತ್ತೇನೆ. ಇನ್ನು ಮುಂದೆ ನನಗೆ ಬದಲಾಗಿ ನೀನೇ ರಾಜ್ಯದ ಸಿಂಹಾಸನವನ್ನು ಆರೋಹಣಮಾಡು. ಕರ್ಣ-ಶಕುನಿಗಳ ಭುಜಬಲ-ಪರಾಕ್ರಮಗಳಿಂದ ರಕ್ಷಿಸಲ್ಪಡುವ ಈ ಭೂಮಂಡಲಕ್ಕೆ ನೀನೇ ಒಡೆಯನಾಗು. ವೃತ್ರಾಸುರಹಂತಕನಾದ ಇಂದ್ರನು ಯಾವ ರೀತಿಯಲ್ಲಿ ಮರುತ್ತುಗಳನ್ನು ಪರಿಪಾಲಿಸುತ್ತಿರುವನೋ–ಅದೇ ರೀತಿಯಲ್ಲಿ ನೀನೂ ಸಹ ನಿನ್ನ ಅನುಜರನ್ನು ಅಪ್ರಮತ್ತನಾಗಿ ಪರಿಪಾಲಿಸು. ದೇವತೆಗಳು ದೇವೇಂದ್ರನನ್ನು ಆಶ್ರಯಿಸಿರುವಂತೆ, ಬಂಧು-ಮಿತ್ರರೆಲ್ಲರೂ ನಿನ್ನನ್ನು ಆಶ್ರಯಿಸಲಿ. ಬ್ರಾಹ್ಮಣರನ್ನು ಯಾವಾಗಲೂ ಅಪ್ರಮತ್ತನಾಗಿ ಸತ್ಕರಿಸು. ಬಂಧುಗಳಿಗೂ ಮಿತ್ರರಿಗೂ ಯಾವಾಗಲೂ ಆಶ್ರಯನಾಗಿರು. ವಿಷ್ಣುವು ದೇವಗಣದ ಯೋಗ-ಕ್ಷೇಮಗಳನ್ನು ಯಾವ ರೀತಿಯಲ್ಲಿ ಸದಾ ನೋಡಿಕೊಳ್ಳುವನೋ–ಅದೇ ರೀತಿಯಲ್ಲಿ ನೀನೂ ಸಹ ನಿನ್ನ ಜ್ಞಾತಿಗಳ ಯೋಗ-ಕ್ಷೇಮಗಳನ್ನು ನೋಡಿಕೊಳ್ಳುತ್ತಿರು. ಗುರುಜನರನ್ನು ನೀನು ಬಹಳ ಜಾಗರೂಕತೆಯಿಂದ ನೋಡಿಕೊಳ್ಳ ಬೇಕು. ಈ ರೀತಿಯಲ್ಲಿದ್ದುಕೊಂಡು ಅನಿರ್ಬಾಧಿತವಾದ ಈ ಭೂಮಂಡಲವನ್ನು ಪರಿಪಾಲಿಸು, ದುಃಶಾಸನ! ನೀನು ರಾಜನಾಗಿ ನಿನ್ನ ಸುಹೃದರಿಗೆ ಆಹ್ಲಾದವನ್ನುಂಟುಮಾಡು ಮತ್ತು ಶತ್ರುಗಳನ್ನು ನಿನ್ನ ಪರಾಕ್ರಮದಿಂದ ಭಯಪಡಿಸು" ಹೀಗೆಂದು ಹೇಳುತ್ತಾ ದುರ್ಯೋಧನನು ದುಃಶಾಸನನನ್ನು ಗಾಢವಾಗಿ ಆಲಿಂಗಿಸಿಕೊಂಡು–'ಇನ್ನು ಹೊರಡು'–ಎಂದು ಹೇಳಿದನು.

ದುಃಶಾಸನನಿಗೆ ಅಣ್ಣನ ಮಾತುಗಳನ್ನು ಕೇಳಿ ಬಹಳ ದುಃಖವಾಯಿತು. ಎರಡು ಕಣ್ಣುಗಳಿಂದಲೂ ನೀರು ದಳ-ದಳನೆ ಹರಿಯತೊಡಗಿತು. ಬಾಯಿಂದ ಮಾತೇ ಹೊರಡದಾಯಿತು. ಬಿಕ್ಕಿ-ಬಿಕ್ಕಿ ಅಳುತ್ತಿದ್ದನು. ಎರಡು ಕೈಗಳನ್ನೂ ಜೋಡಿಸಿಕೊಂಡು ಬಹಳ ಕಷ್ಟದಿಂದ ದುರ್ಯೋಧನನಿಗೆ 'ಪ್ರಸೀದ'

'ಪ್ರಸನ್ನನಾಗು'–ಎಂದು ಹೇಳುತ್ತಾ ಕೆಳಗೆ ಬಿದ್ದುಬಿಟ್ಟನು. ಬಿದ್ದವನು ಹಾಗೆಯೇ ಅಣ್ಣನ ಪಾದಾರವಿಂದಗಳ ಕಡೆಗೆ ಹೊರಳಿ ಅವುಗಳನ್ನು ಭದ್ರವಾಗಿ ಹಿಡಿದು, ತನ್ನ ಎರಡು ಕಣ್ಣುಗಳಿಂದಲೂ ಸತತವಾಗಿ ಹೊರಬರುತ್ತಿದ್ದ ಅಶ್ರುಧಾರೆಗಳಿಂದ ಅಣ್ಣನ ಕಾಲುಗಳನ್ನು ತೋಯಿಸುತ್ತಾ ದುರ್ಯೋಧನನನ್ನು ಕುರಿತು ಹೇಳಿದನು : "ಅಣ್ಣಾ! ನೀನು ನನ್ನನ್ನು ರಾಜನಾಗೆಂದು ಹೇಳಿದೆಯಲ್ಲವೇ? ಅದು ಮಾತ್ರ ಖಂಡಿತವಾಗಿಯೂ ಸಾಧ್ಯವಾಗಲಾರದು. ಭೂಮಿಯು ಸೀಳಿಹೋಗಬಹುದು ; ಆಕಾಶವು ಚೂರು-ಚೂರಾಗಬಹುದು; ಸೂರ್ಯನು ತನ್ನ ಆತ್ಮಪ್ರಭೆಯನ್ನೂ ತ್ಯಜಿಸಬಹುದು ; ಚಂದ್ರನು ತನ್ನ ಶೀತಕಿರಣಗಳನ್ನೂ ವಿಸರ್ಜಿಸಬಹುದು ; ಗಾಳಿಯೂ ಬೀಸದಿರಬಹುದು ; ಸಮುದ್ರವೂ ಬತ್ತಿಹೋಗಬಹುದು ; ಅಗ್ನಿಯೂ ತನ್ನ ಶಾಖವನ್ನು ತ್ಯಜಿಸಬಹುದು ; ಅಸಂಭಾವ್ಯವಾದ ಇವುಗಳೆಲ್ಲವೂ ನಡೆದರೂ ಸಹ ನಿನ್ನನ್ನು ಬಿಟ್ಟು ನಾನು ಮಾತ್ರ ರಾಜನಾಗುವುದಿಲ್ಲ. ಪ್ರಸನ್ನನಾಗಣ್ಣ! ನಿನ್ನ ಹೃದಯವನ್ನು ದುಃಖಕ್ಕೀಡುಮಾಡಿಕೊಳ್ಳಬೇಡ. ಇನ್ನು ಮುಂದಿನ ನೂರು ವರ್ಷಗಳಿಗೂ ಸಹ ನಮ್ಮ ಕುಲಕ್ಕೆ ನೀನೇ ಅಧಿಪತಿಯಾಗಿರಬೇಕು. ದಯಮಾಡಿ ಪ್ರಸನ್ನನಾಗು"–ಹೀಗೆಂದು ಹೇಳುತ್ತಾ ದುರ್ಯೋಧನನ ಪೂಜಾರ್ಹವಾದ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ದುಃಶಾಸನನು ಗೋಳಿಡುತ್ತಿದ್ದನು.

ಅವರಿಬ್ಬರೂ ಈ ಪರಿಯಲ್ಲಿ ಅಳುತ್ತಿರುವುದನ್ನು ನೋಡಿ ಬಹು ದುಃಖಿತನಾದ ಕರ್ಣನು ಅವರಿಬ್ಬರನ್ನೂ ಕುರಿತು ಹೇಳಿದನು : "ಕುರುರಾಜ ಕುಮಾರರೇ! ನೀವಿಬ್ಬರೂ ನಿಷ್ಕಾರಣವಾಗಿ ದುಃಖಿಸುತ್ತಿರುವಿರೇಕೆ? ವೀರರಾದ ನೀವು ಸಾಮಾನ್ಯಮನುಷ್ಯರಂತೆ–ಅವಿವೇಕಿಗಳಂತೆ ಅಳುತ್ತಿರುವಿರಲ್ಲಾ!

**ನ ಶೋಕಃ ಶೋಚಮಾನಸ್ಯ ವಿನಿವರ್ತೇತ ಕರ್ಹಿಚಿತ್ ॥೩೬॥**

ದುಃಖಿಸುತ್ತಲೇ ಇದ್ದರೆ ದುಃಖವು ಖಂಡಿತವಾಗಿಯೂ ಹೋಗಿ ಬಿಡುವುದಿಲ್ಲ. ದುಃಖಿಸುತ್ತಿರುವುದರಿಂದಲೇ ದುಃಖನಿವಾರಣೆಯಾಗುವುದಿಲ್ಲ ವೆಂಬುದು ಬಹುಸ್ಪಷ್ಟವಾಗಿರುವಾಗ ನೀವೀಗ ದುಃಖಿಸಿ ಸಾಧಿಸುವ ಕಾರ್ಯ ವಾದರೂ ಏನಿದೆ? ದುಃಖಿಸುವುದರಲ್ಲಿ ಸಾಮರ್ಥ್ಯವೇನಿದೆ? ಧೈರ್ಯವನ್ನು

ತಂದುಕೊಳ್ಳಿ. ನೀವು ದುಃಖಸಾಗರದಲ್ಲಿ ಮುಳುಗಿ ನಿಮ್ಮ ಶತ್ರುಗಳು ಸಂತೋಷಪಡಲು ಕಾರಣರಾಗಬೇಡಿರಿ. ದುರ್ಯೋಧನ! ನಿನ್ನ ಜನ್ಮಶತ್ರುಗಳಾದ ಪಾಂಡವರೇ ನಿನಗೆ ಪ್ರಾಣಭಿಕ್ಷೆಯನ್ನು ಕೊಡಬೇಕಾಯಿತೆಂಬ ಭ್ರಾಂತಿಯು ನಿನ್ನನ್ನು ಇಷ್ಟು ಅಧೀರನನ್ನಾಗಿ ಮಾಡಿರಬಹುದಲ್ಲವೇ? ಪಾಂಡವರು ನಿನ್ನ ಮೇಲೆ ಕರುಣೆತೋರಲು ಈ ಕಾರ್ಯಮಾಡಿಲ್ಲ. ಅದು ಅವರ ಕರ್ತವ್ಯವಾಗಿದ್ದುದರಿಂದಲೇ ಈ ಕಾರ್ಯಮಾಡಿದರು.

**ಕರ್ತವ್ಯಂ ಹಿ ಕೃತಂ ರಾಜನ್ಪಾಣ್ಡವೈಸ್ತವ ಮೋಕ್ಷಣಮ್ ।**
**ನಿತ್ಯಮೇವ ಪ್ರಿಯಂ ಕಾರ್ಯಂ ರಾಜ್ಞೋ ವಿಷಯವಾಸಿಭಿಃ ॥೩೯॥**

ದೇಶದಲ್ಲಿ ವಾಸಮಾಡುವ ಪ್ರತಿಯೊಬ್ಬ ಪ್ರಜೆಯೂ ಅನುದಿನವೂ ರಾಜನಿಗೆ ಪ್ರಿಯವನ್ನೇ ಮಾಡುತ್ತಿರಬೇಕು. ಈ ಕರ್ತವ್ಯದೃಷ್ಟಿಯಿಂದ ಅವರು ತಮ್ಮ ಕಾರ್ಯಮಾಡಿದ್ದಾರೆ. ರಾಜನಿಗೆ ಜಯಾಪಜಯಗಳು ಸ್ವಾಭಾವಿಕ. ರಾಜನನ್ನು ಬಿಡುಗಡೆಮಾಡುವ ಸಾಮರ್ಥ್ಯವು ತಮ್ಮಲ್ಲಿದ್ದುದರಿಂದಲೇ ಪಾಂಡವರು ನಿನ್ನನ್ನು ಬಿಡುಗಡೆಮಾಡಿದರು. ಹಾಗೆ ಮಾಡದಿದ್ದರೆ ಅವರು ಕರ್ತವ್ಯಭ್ರಷ್ಟರಾಗುತ್ತಿದ್ದರು.

ರಕ್ಷಣೆಯೆಂಬುದು ಅನ್ಯೋನ್ಯಸಂಬಂಧವುಳ್ಳದ್ದು. ನೀನು ಸೈನಿಕರನ್ನು ರಕ್ಷಿಸಿದರೆ ಸೈನಿಕರು ನಿನ್ನನ್ನೂ ನಿನ್ನ ರಾಜ್ಯವನ್ನೂ ಸಮಯಗಳಲ್ಲಿ ರಕ್ಷಿಸಬೇಕಲ್ಲವೇ? ಅಂತೆಯೇ ಪಾಂಡವರು ನಿನ್ನ ರಕ್ಷಣೆಗೊಳಪಟ್ಟವರಾಗಿ ಈ ರಾಜ್ಯದಲ್ಲಿ ವಾಸವಾಗಿದ್ದಾರೆ. ಆದುದರಿಂದಲೇ ನೀನು ಕಷ್ಟದಲ್ಲಿ ಸಿಕ್ಕಿರುವಾಗ ನಿನಗೆ ರಕ್ಷಣೆಕೊಡುವುದು ಅವರ ಕರ್ತವ್ಯವಾಗಿರುತ್ತದೆ. 'ರಕ್ಷಣೆ' ಯಲ್ಲಿರುವ ಪರಸ್ಪರಸಂಬಂಧವನ್ನು ಅರ್ಥಮಾಡಿಕೊಳ್ಳದೇ ಸಾಮಾನ್ಯಮನುಷ್ಯನಂತೆ ನೀನೇಕೆ ಅಳುತ್ತಿರುವೆ? ಸಾಮಾನ್ಯಮನುಷ್ಯನಂತೆ ಸಾಮಾನ್ಯವಿಷಯದಲ್ಲಿ ಈ ರೀತಿಯಲ್ಲಿ ದುಃಖಿಸುವುದು ವೀರನಾದ ನಿನಗೆ ಖಂಡಿತವಾಗಿಯೂ ಯೋಗ್ಯವಲ್ಲ. ನೋಡು, ದುರ್ಯೋಧನ! ನೀನು ಪ್ರಾಯೋಪವೇಶ ಮಾಡುವೆನೆಂದು ಹೇಳಿದೊಡನೆಯೇ ನಿನ್ನ ನೂರುಮಂದಿ ಅನುಜರೂ ವಿಷಣ್ಣರಾಗಿ ದುಃಖಸಾಗರದಲ್ಲಿ ಮುಳುಗಿಹೋಗಿದ್ದಾರೆ. ಅವರ ಮುಖಗಳಲ್ಲಿ ಕಾಂತಿಯೆಂಬುದೇ ಇಲ್ಲವಾಗಿದೆ. ಏಳು ; ಎದ್ದೇಳು. ನಿನಗೆ ಮಂಗಳ

ವಾಗಲಿ. ನಿನ್ನ ಅನುಜರನ್ನೂ ಸಮಾಧಾನಗೊಳಿಸು. ಹಸ್ತಿನಾಪುರಕ್ಕೆ ಹೊರಡಲು ಸಿದ್ಧನಾಗು.”

೨೪೯ನೆಯ ಅಧ್ಯಾಯವು ಮುಗಿಯಿತು.

೨೫೦ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಕರ್ಣನು ಸಮಾಧಾನಪಡಿಸಿದರೂ ದುರ್ಯೋಧನನು ಆಮರಣಾಂತವಾಗಿ ಉಪವಾಸವನ್ನು ಪ್ರಾರಂಭಿಸಿದುದು

ಜನಮೇಜಯ! ಕರ್ಣನು ಪುನಃ ಮುಂದುವರಿದು ಹೇಳಿದನು :

“ದುರ್ಯೋಧನ! ನೀನಿಂದು ಸತ್ತ್ವಹೀನನಂತೆ ವರ್ತಿಸುತ್ತಿರುವೆ. ಇದನ್ನು ನೋಡಿ ನನಗೆ ಬಹಳ ಆಶ್ಚರ್ಯವೆನಿಸಿದೆ. ನೀನು ಶತ್ರುಗಳಿಂದ ಪರಾಜಿತನಾಗಿದ್ದ ಸಮಯದಲ್ಲಿ ಪಾಂಡವರು ನಿನ್ನನ್ನು ಬಿಡುಗಡೆ ಮಾಡಿದ ರೆಂಬುದರಲ್ಲಿ ಆಶ್ಚರ್ಯವೇನಿದೆ? ಇದರಲ್ಲಿ ಸಂತಾಪಪಡುವ ಕಾರಣ ವಾದರೂ ಏನು? ಒಂದು ವೇಳೆ ಅವರು ನಿನ್ನನ್ನು ವಿಮೋಚನೆಮಾಡದಿದ್ದರೆ ಅವರ ಔದಾಸೀನ್ಯಕ್ಕಾಗಿ ನಾವು ಆಶ್ಚರ್ಯಪಡಬಹುದಾಗಿದ್ದಿತು ಮತ್ತು ಅವರು ತಮ್ಮ ಕರ್ತವ್ಯವನ್ನು ಮಾಡದಿದ್ದರೆ ಅವರನ್ನು ಕರ್ತವ್ಯಭ್ರಷ್ಟರೆಂದೇ ಹೇಳಬೇಕಾಗಿದ್ದಿತು. ಆಯುಧಪಾಣಿಗಳಾದ ಸೈನಿಕರೂ ಮತ್ತು ದೇಶವಾಸಿಗಳೂ ಯಾವಾಗಲೂ ರಾಜನಿಗೆ ಹಿತವನ್ನು ಮಾಡಿಯೇ ತೀರಬೇಕು. ಇದು ಅವರ ಕರ್ತವ್ಯವಾಗಿರುತ್ತದೆ. ಅವರಿಗೆ ತಮ್ಮ ರಾಜನ ಪರಿಚಯವಿದ್ದರೂ ಸರಿಯೇ, ಪರಿಚಯವಿಲ್ಲದಿದ್ದರೂ ಸರಿಯೇ–ಸೈನಿಕ ವೃತ್ತಿಯುಳ್ಳವರು ತಮ್ಮ ಕರ್ತವ್ಯವನ್ನು ಮಾಡಿಯೇ ತೀರಬೇಕು. ಅನೇಕ ಯುದ್ಧಗಳಲ್ಲಿ ಪ್ರಾಯಶಃ ಪ್ರಧಾನಭೂತರಾದವರು ಕೆಚ್ಚೆದೆಯಿಂದ ಯುದ್ಧ ಮಾಡುತ್ತಾ ಶತ್ರುಗಳನ್ನು ನಿರ್ಮೂಲಮಾಡುತ್ತಿದ್ದು ಕೆಲವು ಸಮಯಗಳಲ್ಲಿ ಆಕಸ್ಮಿಕವಾಗಿ ಶತ್ರುವಿನಿಂದ ಪರಾಜಿತರೂ ಆಗುವುದುಂಟು. ಅಂತಹ ಸಂದರ್ಭಗಳಲ್ಲಿ ಸೆರೆಯಾದ ನಾಯಕನನ್ನು ಕೆಚ್ಚೆದೆಯ ಸೈನಿಕರು ಹೋರಾಡಿ ಬಿಡಿಸಿಕೊಳ್ಳುತ್ತಾರೆ. ಹೀಗೆ ಮಾಡುವುದು ಸೈನಿಕರ ಕರ್ತವ್ಯವಾಗಿರುತ್ತದೆ.

ಒಬ್ಬ ರಾಜನ ರಾಜ್ಯದಲ್ಲಿ ವಾಸವಾಗಿರುವ ಮತ್ತು ಹೋರಾಡಬಲ್ಲ ಶೂರರು ರಾಜನ ಕಷ್ಟಸಮಯಗಳಲ್ಲಿ ಒಂದಾಗಿ ಸೇರಿ ರಾಜನ ಬಂಧವಿಮೋ

ಚನೆಗೆ ಪ್ರಯತ್ನಿಸಲೇಬೇಕು. ಇದು ಅವರ ಕರ್ತವ್ಯವಾಗಿರುತ್ತದೆ. ನೀನು ಶತ್ರುಗಳೊಡನೆ ಶೌರ್ಯದಿಂದ ಯುದ್ಧಮಾಡಿ ಆಕಸ್ಮಿಕವಾಗಿ ಬಂಧಿತನಾದಾಗ ನಿನ್ನ ರಾಜ್ಯದಲ್ಲಿಯೇ ಇರುವ ಆಯುಧಪಾಣಿಗಳಾದ ಪಾಂಡವರು ನಿನ್ನನ್ನು ಸೆರೆಯಿಂದ ಬಿಡಿಸಿದರೆಂಬ ವಿಷಯದಲ್ಲಿ ನಾಚತಕ್ಕದ್ದೇನಿದೆ? ಅಥವಾ ವಿಷಾದಿಸತಕ್ಕದ್ದೇನಿದೆ? ಅವರು ತಮ್ಮ ಕರ್ತವ್ಯವನ್ನು ಅರಿತುಕೊಂಡರು. ನೀನು ಗಂಧರ್ವರೊಡನೆ ಯುದ್ಧವನ್ನು ಪ್ರಾರಂಭಿಸಿದಾಗಲೇ ಅವರು ನಿನ್ನೊಡನೆ ಅಥವಾ ನಿನ್ನ ಸೈನ್ಯದೊಡನೆ ಸೇರಿಕೊಂಡು ನಿನಗೆ ಬೆಂಬಲವನ್ನೀಯಬೇಕಾಗಿದ್ದಿತು. ಮೇಲಾಗಿ ಅವರು ನಿನ್ನ ದಾಸರಾಗಿ ರುತ್ತಾರೆ. ಅವರನ್ನು ದ್ಯೂತದಲ್ಲಿ ಗೆದ್ದು ನಿನ್ನ ದಾಸರನ್ನಾಗಿ ಮಾಡಿ ಕೊಂಡಿರುವೆ. ಮೇಲಾಗಿ ಅವರು ದಸ್ಯುಗಳಲ್ಲ; ಮಹಾಪರಾಕ್ರಮಿಗಳು, ಶೂರರು, ಬಲಿಷ್ಠರು, ಯುದ್ಧದಲ್ಲಿ ಹಿಂಜರಿಯದವರು. ಇಂತಹ ವೀರರು ನಿನಗೆ ಮೊದಲೇ ಸಹಕಾರವೀಯಬೇಕಾಗಿದ್ದಿತು. ಅನಂತರದಲ್ಲಾದರೂ ತಮ್ಮ ಕರ್ತವ್ಯವನ್ನು ಮಾಡಿದ್ದಾರೆ. ಇದರಿಂದ ನೀನು ಖಿನ್ನನಾಗುವ ಕಾರಣವಿಲ್ಲ. ನೀನು ಪಾಂಡವರ ಸಕಲೈಶ್ವರ್ಯವನ್ನೂ ಉಪಭುಂಜಿಸುತ್ತಿರುವೆ. ನಿನ್ನಿಂದ ಅವರ ಸರ್ವಸಂಪತ್ತು ಅಪಹೃತವಾದರೂ, ಅವರನ್ನು ನೀನು ವಿಧ-ವಿಧವಾಗಿ ಅವಮಾನಿಸಿದರೂ ಅವರಿನ್ನೂ ಬದುಕಿಯೇ ಇದ್ದಾರೆ. ಅವರೂ ಸಹ ನಿನ್ನಂತೆ ಪ್ರಾಯೋಪವೇಶಮಾಡಿ ಪ್ರಾಣತೊರೆಯಲು ಪ್ರಯತ್ನಿಸಲಿಲ್ಲ. ಈ ವಿಷಯವನ್ನು ಮನಗಂಡಾದರೂ ಮೇಲೇಳು, ದುರ್ಯೋಧನ! ನಿನಗೆ ಮಂಗಳವಾಗಲಿ. ಬಹುಕಾಲ ದುಃಖಿತನಾಗಿರುವುದು ಖಂಡಿತವಾಗಿಯೂ ಯುಕ್ತವಲ್ಲ. ನಾನು ಹಿಂದೆಯೇ ಹೇಳಿದಂತೆ ರಾಜನೊಬ್ಬನ ರಾಜ್ಯದಲ್ಲಿ ವಾಸಮಾಡುತ್ತಿರುವವರು ರಾಜನಿಗೆ ಯಾವಾಗಲೂ ಪ್ರಿಯವನ್ನೇ ಮಾಡಬೇಕು. ತಮ್ಮ ಕರ್ತವ್ಯದೃಷ್ಟಿಯಿಂದ ನಿನ್ನ ಪ್ರಜೆಗಳು ನಿನಗೆ ಹಿತವಾದುದನ್ನು ಮಾಡಿದರೆ ಅದಕ್ಕೆ ನೀನು ಪರಿತಪಿಸುವುದೇಕೆ?

ಮಹಾರಾಜ! ನೀನೇನಾದರೂ ನನ್ನ ಮಾತನ್ನು ಕೇಳದೆಯೇ ಹೋದರೆ ನಾನೂ ಸಹ ಇಲ್ಲಿಯೇ ನಿನ್ನ ಪಾದಸೇವೆಮಾಡಿಕೊಂಡು ಇದ್ದುಬಿಡುವೆನು. ನಿಶ್ಚಯವಾಗಿಯೂ ನಿನ್ನನ್ನು ಬಿಟ್ಟು ನಾನು ಒಂದುಕ್ಷಣವಾದರೂ ಬದುಕಿರಲು

ಇಚ್ಛಿಸುವುದಿಲ್ಲ. ನೀನೇನಾದರೂ ಪ್ರಾಯೋಪವೇಶಮಾಡಿ ಪ್ರಾಣತೊರೆಯಲು ನಿರ್ಧರಿಸುವುದೇ ಆದರೆ ನಿನ್ನ ಈ ನಡವಳಿಕೆಯನ್ನು ಈ ಪ್ರಪಂಚದ ಸಕಲರಾಜರೂ ಟೀಕಿಸುತ್ತಾ ಗಹಗಹಿಸಿ ನಗುವರು. ಪಾಂಡವರಿಂದ ನೀನು ಬಂಧವಿಮುಕ್ತಿಯನ್ನು ಹೊಂದಿದುದಕ್ಕಾಗಿ ಯಾರೂ ನಿನ್ನನ್ನು ಅಪಹಾಸ್ಯ ಮಾಡುವುದಿಲ್ಲ. ಕ್ಷತ್ರಿಯನಾಗಿದ್ದುಕೊಂಡು ಪ್ರಾಯೋಪವೇಶದ ಮೂಲಕವಾಗಿ ಪ್ರಾಣತೊರೆಯಲು ನಿಶ್ಚಯಿಸಿದರೆ ಆಗ ಖಂಡಿತವಾಗಿಯೂ ನಿನ್ನನ್ನು ಎಲ್ಲರೂ ಅಪಹಾಸ್ಯಮಾಡುವರು."

ಜನಮೇಜಯ! ಕರ್ಣನು ಇಷ್ಟು ಸ್ಪಷ್ಟೋಕ್ತಿಗಳಿಂದ ಮತ್ತು ತರ್ಕಶುದ್ಧವಾದ ಮಾತುಗಳಿಂದ ದುರ್ಯೋಧನನಿಗೆ ಪ್ರಾಯೋಪವೇಶ ವ್ರತವನ್ನು ಬಿಟ್ಟು ನಗರಿಗೆ ಹಿಂದಿರುಗುವಂತೆ ಹೇಳಿದರೂ ಪ್ರಯೋಜನವಾಗಲಿಲ್ಲ. ಪ್ರಾಯೋಪವೇಶದ ಮೂಲಕವಾಗಿ ದೇಹವನ್ನು ತೊರೆದು ಸ್ವರ್ಗಕ್ಕೆ ಹೋಗಲು ದೃಢಸಂಕಲ್ಪವನ್ನು ಮಾಡಿದ್ದ ದುರ್ಯೋಧನನು ಕುಳಿತಿದ್ದ ಸ್ಥಳದಿಂದ ಮೇಲೇಳಲಿಲ್ಲ.

೨೫೦ನೆಯ ಅಧ್ಯಾಯವು ಮುಗಿಯಿತು.

೨೫೧ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಶಕುನಿಯ ಸಾಂತ್ವವಚನಗಳನ್ನೂ ತಿರಸ್ಕರಿಸಿದ ದುರ್ಯೋಧನನನ್ನು ದೈತ್ಯರು ರಸಾತಲಕ್ಕೆ ಕರೆದುಕೊಂಡು ಹೋದುದು

ಜನಮೇಜಯ! ಮಾನಧನನಾದ ದುರ್ಯೋಧನನಿಗೆ ತನಗಾದ ಅವಮಾನದ ಸ್ಮರಣೆಯುಂಟಾದಂತೆಲ್ಲಾ ಸಾಯಲೇಬೇಕೆನ್ನುವ ಇಚ್ಛೆಯು ಅಧಿಕವಾಗುತ್ತಿದ್ದಿತು. ಯಾರ ಮಾತೂ ಅವನಿಗೆ ಪಥ್ಯವಾಗಲಿಲ್ಲ. ಕರ್ಣನ ಮಾತುಗಳು ಅವನ ಮೇಲೆ ಸ್ವಲ್ಪವೂ ಪರಿಣಾಮವನ್ನುಂಟುಮಾಡಲಿಲ್ಲ. ಅನ್ನಾಹಾರಗಳನ್ನು ತೊರೆದು ಕುಳಿತಲ್ಲಿಯೇ ಕುಳಿತು ಪ್ರಾಣವನ್ನು ತೊರೆದು ಬಿಡಬೇಕೆಂಬ ದೃಢಸಂಕಲ್ಪವನ್ನೇ ಮಾಡಿಬಿಟ್ಟಿದ್ದನು. ಆ ಸಮಯದಲ್ಲಿ ಮಹಾಚತುರನಾದ, ಸುಬಲನ ಮಗನಾದ ಶಕುನಿಯು ದುರ್ಯೋಧನನನ್ನು ಕುರಿತು ಕೆಲವು ಸಾಂತ್ವವಚನಗಳನ್ನು ಹೇಳಿದನು : "ಕುರುಕುಲಾವ

ತಂಸನೇ! ಕರ್ಣನು ಹೇಳಿದುದನ್ನು ನೀನು ಕೇಳಿದೆಯಲ್ಲವೇ? ನಿಶ್ಚಯವಾಗಿಯೂ ಕರ್ಣನು ಹೇಳಿರುವುದು ಆಚರಿಸಲು ಯೋಗ್ಯವಾದ ಯುಕ್ತಿಯುಕ್ತವಾದ ಮಾತುಗಳೇ ಆಗಿವೆ. ಸಕಲಸಂಪತ್ಸಮೃದ್ಧವಾದ ಈ ಅಖಂಡ ಸಾಮ್ರಾಜ್ಯವೂ ನಿನಗೆ ನನ್ನ ಚಾತುರ್ಯದಿಂದ ಪ್ರಾಪ್ತವಾಯಿತು.

ಅತುಲೈಶ್ವರ್ಯಸಂಪನ್ನವಾದ ಈ ಸಾಮ್ರಾಜ್ಯವನ್ನು ತೊರೆದು ಪ್ರಾಯೋಪವೇಶದಿಂದ ಪ್ರಾಣತೊರೆಯಲು ನಿಶ್ಚಯಿಸಿರುವ ನೀನು ನಿಜವಾಗಿಯೂ ಅಲ್ಪಬುದ್ಧಿಯವನೇ ಸರಿ. ಕ್ಷುಲ್ಲಕವಾದ ಕಾರಣವೊಂದನ್ನು ಮುಂದೆಮಾಡಿಕೊಂಡು ಪ್ರಾಣತೊರೆಯಲು ನಿಶ್ಚಯಿಸಬಹುದೇ? ನಿನ್ನ ಈ ಅಲ್ಪಬುದ್ಧಿಯನ್ನು ನೋಡಿದರೆ ನೀನು ಹಿರಿಯರ ಸೇವೆಯನ್ನು ಎಂದೂ ಮಾಡಿದವನೇ ಅಲ್ಲವೆಂದು ಭಾಸವಾಗುತ್ತದೆ. ನೀನು ಹಿರಿಯರ ಸೇವೆಯನ್ನು ಮಾಡಿದ್ದಿದ್ದರೆ ಇಂತಹ ಪ್ರಸಂಗದಲ್ಲಿ ಏನು ಮಾಡಬೇಕೆಂಬುದು ನಿನಗೆ ಅವರ ಮಾತುಗಳಿಂದ ತಿಳಿದು ಬರುತ್ತಿತ್ತು.

**ಯಃ ಸಮುತ್ಪತಿತಂ ಹರ್ಷಂ ದೈನ್ಯಂ ವಾ ನ ನಿಯಚ್ಛತಿ ।**
**ಸ ನಶ್ಯತಿ ಶ್ರಿಯಂ ಪ್ರಾಪ್ಯ ಪಾತ್ರಮಾಮಮಿವಾಮ್ಭಸಿ ॥೪॥**

ಯಾವನು ತನಗೆ ಹಠಾತ್ತಾಗಿ ಪ್ರಾಪ್ತವಾದ ಸಂತೋಷವನ್ನು ಅಥವಾ ದುಃಖವನ್ನು ತಡೆದುಕೊಳ್ಳಲು ಅಸಮರ್ಥನೋ–ಅಂತಹವನು ಸುಡದಿರುವ ಹಸೀಮಡಕೆಯು ನೀರಿನಲ್ಲಿ ಕರಗಿಹೋಗುವಂತೆ–ಐಶ್ವರ್ಯವನ್ನು ಪಡೆದೂ ನಾಶಹೊಂದುತ್ತಾನೆ.

**ಅತಿಭೀರುಮತಿಕ್ಲೀಬಂ ದೀರ್ಘಸೂತ್ರಂ ಪ್ರಮಾದಿನಮ್ ।**
**ವ್ಯಸನಾದ್ವಿಷಯಾಕ್ರಾನ್ತಂ ನ ಭಜನ್ತಿ ನೃಪಂ ಪ್ರಜಾಃ ॥೫॥**

ಬಹಳ ಭಯಪಡುವವನನ್ನೂ, ಪುರುಷತ್ವವೇ ಇಲ್ಲದವನನ್ನೂ, ಸೋಮಾರಿಯನ್ನೂ, ಯಾವಾಗಲೂ ತಪ್ಪುಮಾಡುವವನನ್ನೂ, ಹೆಚ್ಚು ವಿಷಯಾಸಕ್ತನನ್ನೂ–ಪ್ರಜೆಗಳು ಸೇವಿಸುವುದಿಲ್ಲ.

ದುರ್ಯೋಧನ! ನೀನು ಯಾರಿಂದಲೂ ಅವಮಾನಿತನಾಗಿರುವುದಿಲ್ಲ. ನಿನ್ನ ಮತ್ತು ನಿನ್ನ ಪರಿವಾರದವರ ಬಂಧನವನ್ನು ಬಿಡಿಸಿ ನಿಮ್ಮ ಕೌರವ

ವಂಶಕ್ಕೇ ಪಾಂಡವರು ಕೀರ್ತಿಯನ್ನು ತಂದಿರುತ್ತಾರೆ. ಹೀಗಿರುವಾಗ ನೀನು ಅವಮಾನವಾಯಿತೆಂದು ಹೇಗೆ ನಿರ್ಧರಿಸುವೆ? ಒಂದು ವೇಳೆ ಗಂಧರ್ವರು ನಿನ್ನನ್ನೂ, ನಿನ್ನ ಪರಿವಾರದವರನ್ನೂ ಕರೆದೊಯ್ದು ಶಿಕ್ಷಿಸಿದ್ದರೆ ಆಗಲಾದರೂ ಅವಮಾನವಾಯಿತೆಂದು ಹೇಳಿಕೊಳ್ಳಬಹುದಾಗಿತ್ತು. ಈಗ ಅಂತಹ ಪ್ರಸಂಗವೇ ಇಲ್ಲ. ರಾಜನೆಂದು ಮರ್ಯಾದೆಯನ್ನು ಕೊಟ್ಟು ಪಾಂಡವರು ತಮ್ಮ ಭುಜಬಲ-ಪರಾಕ್ರಮಗಳಿಂದ ನಿನ್ನನ್ನೂ, ನಿನ್ನ ಅಂತಃಪುರದ ಸ್ತ್ರೀಯರನ್ನೂ ಬಂಧಮುಕ್ತರನ್ನಾಗಿ ಮಾಡಿದರು.

ಯುಧಿಷ್ಠಿರನೂ ಸಹ ನಿನ್ನನ್ನು ಸಂತೈಸಿ ಬೀಳ್ಕೊಟ್ಟನು. ಹೀಗಿರುವಾಗ ನಿನಗೆ ಅವಮಾನವಾಯಿತೆಂಬ ಭ್ರಾಂತಿಯು ಹೇಗೆ ತಾನೇ ಉಂಟಾಯಿತು? ಪಾಂಡವರು ಮಾಡಿದ ಒಳ್ಳೆಯ ಕಾರ್ಯವನ್ನು ನೀನು ಹಾಳುಮಾಡಲು ಯೋಚಿಸಬೇಡ. ಕುರುಕುಲದ ರಾಜಕುಮಾರನು ಗೌರವದಿಂದ ಜೀವಿಸಿರಬೇಕೆಂಬ ಆಶಯದಿಂದಲೇ ಅವರು ನಿನ್ನನ್ನು ಬಿಡುಗಡೆ ಮಾಡಿದರು. ನಿನ್ನ ಅಲ್ಪಬುದ್ಧಿಯಿಂದ ನೀನೇನಾದರೂ ಪ್ರಾಣತೊರೆದರೆ ಅವರು ಮಾಡಿದ ಒಳ್ಳೆಯ ಕಾರ್ಯವು ವ್ಯರ್ಥವಾಗಿ ಹೋಗುವುದು. ನಿನ್ನ ಬಂಧನದ ಮುಕ್ತಿಯಾದುದಕ್ಕಾಗಿ ನೀನು ಹರ್ಷಿಸಬೇಕು ಮತ್ತು ಬಂಧನದಿಂದ ವಿಮೋಚಿಸಿದ ಪಾಂಡವರನ್ನು ನೀನು ಸತ್ಕರಿಸಬೇಕು. ಇದಕ್ಕೆ ಬದಲಾಗಿ ನೀನಿಂದು ದುಃಖದಲ್ಲಿಯೇ ಮುಳುಗಿಹೋಗಿರುವೆ. ಈ ನಿನ್ನ ವಿಪರೀತವಾದ ಚರ್ಯೆಯು ನನಗೆ ಬಹಳ ಆಶ್ಚರ್ಯವನ್ನುಂಟುಮಾಡಿದೆ.

ಪ್ರಸನ್ನನಾಗು, ದುರ್ಯೋಧನ! ಅಧೀರನಾಗಬೇಡ. ಸಲ್ಲದ ಶೋಕಕ್ಕೆ ಎಡೆಗೊಡಬೇಡ. ಆತ್ಮಹತ್ಯೆಮಾಡಿಕೊಳ್ಳುವುದು ಮಹಾಪಾಪಕರವಾದುದು. ರಾಜನಾದವನಿಗೆ ಈ ಪ್ರಾಯೋಪವೇಶವು ಖಂಡಿತವಾಗಿಯೂ ಯೋಗ್ಯವಲ್ಲ. ತುಷ್ಟನಾಗು. ಪಾಂಡವರು ನಿನ್ನ ವಿಷಯದಲ್ಲಿ ಮಾಡಿರುವ ಉಪಕಾರವನ್ನು ಸ್ಮರಣೆಮಾಡು. ಅವರು ನಿಶ್ಚಯವಾಗಿಯೂ ನಿನ್ನನ್ನು ಬಂಧನದಿಂದ ಬಿಡಿಸಿ ನಿನ್ನ ಗೌರವವನ್ನು ಮಾತ್ರವಲ್ಲ–ಕುರುವಂಶದ ಗೌರವವನ್ನೂ ಕಾಪಾಡಿದ್ದಾರೆ. ಈ ಸಮಯದಲ್ಲಿಯೇ ಅವರನ್ನು ಅರಣ್ಯದಿಂದ ಕರೆಯಿಸಿ

ಅವರಿಗೆ ಸಲ್ಲಬೇಕಾದ ರಾಜ್ಯವನ್ನು ಕೊಟ್ಟುಬಿಡು. ಇದರಿಂದ ನಿನಗೆ ಅಪಾರವಾದ ಕೀರ್ತಿಯೂ ಲಭ್ಯವಾಗುತ್ತದೆ. ನೀನು ಹೀಗೆ ಮಾಡುವುದರಿಂದ ಅವರು ಮಾಡಿದ ಉಪಕಾರಕ್ಕೆ ಕೃತಜ್ಞತೆಯನ್ನೂ ತೋರಿಸಿದಂತಾಗುತ್ತದೆ. ಅವರೊಡನೆ ಪುನಃ ಸಹೋದರಭಾವವನ್ನು ಬೆಳೆಸಿಕೊಂಡು ಅವರಿಗೆ ಸಲ್ಲಬೇಕಾದ ರಾಜ್ಯವನ್ನೂ ಸಹ ಅವರಿಗೊಪ್ಪಿಸಿ ನೀನು ಸುಖವಾಗಿ ಬಾಳುವವನಾಗು. ಇದರಿಂದ ನಿನಗೆ ನಿಶ್ಚಯವಾಗಿಯೂ ಅಮಿತವಾದ ಸುಖ-ಶಾಂತಿಗಳು ಲಭ್ಯವಾಗುತ್ತವೆ."

ಜನಮೇಜಯ! ಶಕುನಿಯ ಮಾತುಗಳನ್ನು ಕೇಳಿದನಂತರ ದುರ್ಯೋಧನನು ದುಃಶಾಸನನ ಕಡೆಗೆ ನೋಡಿದನು. ಬಹುದುಃಖಿತನಾಗಿದ್ದ ಮತ್ತು ಅಳುತ್ತಿದ್ದ ದುಃಶಾಸನನು ಭದ್ರವಾಗಿ ಹಿಡಿದಿದ್ದ ತನ್ನ ಅಣ್ಣನ ಕಾಲುಗಳನ್ನೂ ಇನ್ನೂ ಬಿಟ್ಟಿರಲಿಲ್ಲ. ಅವನನ್ನು ದುರ್ಯೋಧನನು ಬಹು ಪ್ರಯಾಸದಿಂದ ಹಿಡಿದು ಮೇಲೆತ್ತಿ ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಸಂತೈಸಿದನು. ಶಕುನಿ-ಕರ್ಣರ ಮಾತುಗಳಿಂದ ದುರ್ಯೋಧನನಿಗೆ ಜಗತ್ತೇ ಶೂನ್ಯವಾಗಿ ಕಾಣುತ್ತಿದ್ದಿತು. ರಾಜವೈಭವ-ಐಶ್ವರ್ಯಗಳಾವುವೂ ಬೇಡವೆನಿಸಿದುವು. ತನ್ನ ಇನ್ನೂ ಅನೇಕ ಗೆಳೆಯರೂ ಮತ್ತು ಬಂಧುಗಳೂ ಹೇಳಿದ್ದನ್ನು ಕೇಳಿದನಂತರ ದುರ್ಯೋಧನನು ಮತ್ತೂ ದುಃಖಿತನಾಗಿ ಅವರನ್ನು ಕುರಿತು ಈ ರೀತಿ ಹೇಳಿದನು :

**ನ ಧರ್ಮಧನಸೌಖ್ಯೇನ ನೈಶ್ವರ್ಯೇಣ ನ ಚಾಜ್ಞಯಾ ।**
**ನೈವ ಭೋಗೈಶ್ಚ ಮೇ ಕಾರ್ಯಂ ಮಾ ವಿಹನ್ಯತ ಗಚ್ಛತ ॥೧೫॥**

"ಧರ್ಮ, ಧನ, ಸೌಖ್ಯ, ಐಶ್ವರ್ಯ, ಶಾಸನ, ಭೋಗ–ಇವಾವುದ ರಿಂದಲೂ ನಾನೇನನ್ನೂ ಮಾಡಬೇಕಾಗಿಲ್ಲ. ಇವುಗಳೆಲ್ಲವೂ ಇಂದು ನನ್ನ ದೃಷ್ಟಿಯಲ್ಲಿ ನಿಷ್ಪ್ರಯೋಜಕವಾದುವುಗಳು. ನನ್ನ ಸೌಕಲ್ಪವನ್ನು ವಿಫಲ ಗೊಳಿಸಲು ಪ್ರಯತ್ನಿಸಬೇಡಿರಿ. ನನ್ನನ್ನು ಬಿಟ್ಟು ಎಲ್ಲರೂ ಹೊರಟು ಹೋಗಿರಿ. ಪ್ರಾಯೋಪವೇಶದಿಂದ ಈ ದೇಹವನ್ನು ತ್ಯಾಗಮಾಡಿಯೇ ತೀರ ಬೇಕೆಂದು ನಾನು ನಿಶ್ಚಯಿಸಿಬಿಟ್ಟಿದ್ದೇನೆ. ಈ ನಿಶ್ಚಯವನ್ನು ಬದಲಾಯಿಸುವ

ಸಾಧ್ಯತೆಯೇ ಇಲ್ಲ. ಆದುದರಿಂದ ಪುನಃ ಪುನಃ ನನ್ನನ್ನು ನನ್ನ ಸಂಕಲ್ಪದಿಂದ ವಿಮುಖನನ್ನಾಗಿ ಮಾಡಲು ಪ್ರಯತ್ನಿಸದೇ ಹಸ್ತಿನಾಪಟ್ಟಣಕ್ಕೆ ಹೋಗಿ ಅಲ್ಲಿ ನಮ್ಮ ಹಿರಿಯರನ್ನು ಆದರಿಸಿ ಗೌರವಿಸಿರಿ."



ಜನಮೇಜಯ! ದುರ್ಯೋಧನನು ಹೀಗೆಂದು ಹೇಳಲಾಗಿ ಅಲ್ಲಿ ನೆರೆದಿದ್ದವರೆಲ್ಲರೂ ಏಕಕಂಠದಿಂದ ದುರ್ಯೋಧನನನ್ನು ಕುರಿತು ಹೀಗೆಂದು ಹೇಳಿದರು :

**ಯಾ ಗತಿಸ್ತವ ರಾಜೇನ್ದ್ರ ಸಾಸ್ಮಾಕಮಪಿ ಭಾರತ ।**
**ಕಥಂ ವಾ ಸಮ್ಪ್ರವೇಕ್ಷ್ಯಾಮಸ್ತ್ವದ್ವಿಹೀನಾಃ ಪುರಂ ವಯಮ್ ॥**

"ನೀನು ಯಾವ ಮಾರ್ಗವನ್ನು ಹಿಡಿದು ಹೋಗುತ್ತಿರುವೆಯೋ ಅದೇ

ಮಾರ್ಗವೇ ನಮ್ಮದೂ ಆಗಿರುತ್ತದೆ. ನಿನ್ನಿಂದ ವಿಹೀನರಾಗಿ ನಾವು ಹೇಗೆ ತಾನೇ ಹಸ್ತಿನಾಪಟ್ಟಣವನ್ನು ಪ್ರವೇಶಮಾಡಿಯೇವು?"

ಜನಮೇಜಯ! ಯಾರು ಏನೇ ಹೇಳಿದರೂ ದುರ್ಯೋಧನನ ಮನಸ್ಸಿನ ಮೇಲೆ ಸ್ವಲ್ಪವಾದರೂ ಪರಿಣಾಮವುಂಟಾಗಲಿಲ್ಲ. ಧೃತರಾಷ್ಟ್ರನ ಮಗನಾದ ದುರ್ಯೋಧನನು ತನ್ನ ಸಂಕಲ್ಪದಂತೆಯೇ ಪ್ರಾಯೋಪವೇಶವ್ರತವನ್ನು ಉಪಕ್ರಮಿಸಲು ನೆಲದ ಮೇಲೆ ದರ್ಭೆಯನ್ನು ಹಾಸಿ, ಆಚಮನಮಾಡಿ, ಹಾಸಿದ್ದ ದರ್ಭಾಸ್ತರಣದ ಮೇಲೆ ಕುಳಿತನು. ಈ ಸಮಯದಲ್ಲಿ ರಾಜನು ನಾರುಮಡಿಯನ್ನುಟ್ಟಿದ್ದನು. ಮೌನಿಯಾಗಿ ಕುಳಿತು ಬಹಿರ್ವ್ಯಾಪಾರಗಳೆಲ್ಲವನ್ನೂ ಸಂಪೂರ್ಣವಾಗಿ ನಿಲ್ಲಿಸಿ, ಪರಮಪದವನ್ನು ಸೇರುವ ಅಭಿಲಾಷೆಯಿಂದ ಧ್ಯಾನಾಸಕ್ತನಾಗಿ ಕುಳಿತನು. ದುರ್ಯೋಧನನು ತನ್ನ ಸಂಕಲ್ಪದಿಂದ ವಿಮುಖವಾಗುವನೆಂಬ ಆಶಯವು ಅವನ ಬಂಧು-ಮಿತ್ರರಲ್ಲಿ ಯಾರಿಗೂ ಉಳಿಯಲಿಲ್ಲ.

ಮನುಷ್ಯಸಂಕಲ್ಪವು ಹೇಗಿದ್ದರೂ ಅನೇಕಸಂದರ್ಭಗಳಲ್ಲಿ ದೈವಗತಿಯೇ ಬೇರೆಯದಾಗಿರುತ್ತದಲ್ಲವೇ?

ಹಿಂದೆ ದೇವತೆಗಳಿಂದ ಪರಾಜಿತರಾಗಿದ್ದ ದೈತ್ಯ-ದಾನವರು ಪಾತಾಳಲೋಕದಲ್ಲಿ ಅಡಗಿಕೊಂಡಿದ್ದರು. ಅವರಿಗೆ ದುರ್ಯೋಧನನ ಮೂಲಕವಾದರೂ ತಮ್ಮ ಶತ್ರುಗಳಾದ ದೇವತೆಗಳನ್ನು ನಾಶಪಡಿಸುವ ಅಥವಾ ದೇವತೆಗಳ ಪ್ರಭಾವವನ್ನು ಕಡಿಮೆಮಾಡಬೇಕೆಂಬ ಆಶಯವು ಬಹಳವಾಗಿದ್ದಿತು. ದುರ್ಯೋಧನನು ಗಂಧರ್ವರಿಂದ ಅವಮಾನಿತನಾಗಿ ಪ್ರಾಯೋಪವೇಶವ್ರತವನ್ನು ಉಪಕ್ರಮಿಸಿರುವ ವಾರ್ತೆಯು ಅವರಿಗೆ ತಿಳಿಯಿತು. ಅವನು ಜೀವತ್ಯಾಗಮಾಡಿಬಿಟ್ಟರೆ ತಮ್ಮ ಪಕ್ಷವು ದುರ್ಬಲವಾಗಿಬಿಡುವುದೆಂಬ ಭಯದಿಂದ ದೈತ್ಯರು ಒಡನೆಯೇ ಒಂದು ಯಾಗವನ್ನು ಮಾಡಲು ಉಪಕ್ರಮಿಸಿದರು. ಆ ಯಾಗದ ಪ್ರಯೋಗವು ಬೃಹಸ್ಪತಿ ಮತ್ತು ಶುಕ್ರರಿಂದ ಪ್ರೋಕ್ತವಾಗಿದ್ದಿತು. ಅದೊಂದು ವೈತಾನಸಂಭವ (ಅಗ್ನಿಸಾಧ್ಯ) ವಾದ ಕರ್ಮ. ಅದರ ಮಂತ್ರಗಳು ಅಥರ್ವಣವೇದದಿಂದಲೂ ಮತ್ತು ಉಪನಿಷತ್ತುಗಳಿಂದಲೂ ಉದ್ಧೃತವಾದುವುಗಳು. ಆ ಕ್ರತುವಿನಲ್ಲಿ ಜಪ-ಹೋಮಗಳೆರಡೂ ಇದ್ದುವು. ದೃಢ

ವ್ರತರಾದ, ವೇದ-ವೇದಾಂಗಪಾರಂಗತರಾದ, ಏಕಾಗ್ರಚಿತ್ತರಾದ ಬ್ರಾಹ್ಮಣರು (ಬ್ರಹ್ಮರಾಕ್ಷಸರು) ಮಂತ್ರೋಚ್ಚಾರಣೆಮಾಡಿ ಯಥಾವಿಧಿಯಾಗಿ ಕ್ಷೀರವನ್ನೂ ಮತ್ತು ತುಪ್ಪವನ್ನೂ ಯಜ್ಞೇಶ್ವರನಲ್ಲಿ ಹೋಮಮಾಡಿದರು. ಜಪ-ಹೋಮಾದಿಗಳೆಲ್ಲವೂ ಯಥೋಕ್ತವಾಗಿ, ವರ್ಣಲೋಪ-ಕ್ರಿಯಾಲೋಪಗಳಿಲ್ಲದೇ ಮುಗಿಯಲಾಗಿ, ಅಗಲವಾಗಿ ಬಾಯಿಬಿಟ್ಟುಕೊಂಡಿದ್ದ (ಆಕಳಿಸುತ್ತಿದ್ದ), ಅದ್ಭುತವಾದ ಒಂದು ಭೂತವು ಯಜ್ಞೇಶ್ವರನಿಂದ ಹೊರಕ್ಕೆ ಬಂದು–"ನಾನೇನು ಮಾಡಲಿ?" ಎಂದು ಯಜಮಾನನನ್ನು ಕೇಳಿತು.

ಯಜ್ಞದ ಫಲವಾಗಿ ಕೃತ್ಯೆಯು ಬಂದುದನ್ನು ಕಂಡು ಸಂತುಷ್ಟರಾದ ದೈತ್ಯರು ಆ ಕೃತ್ಯೆಯನ್ನು ಕುರಿತು ಹೇಳಿದರು : "ಧೃತರಾಷ್ಟ್ರನ ಮಗನಾದ ದುರ್ಯೋಧನನು ಪ್ರಾಯೋಪವೇಶವ್ರತದಿಂದ ಪ್ರಾಣತೊರೆಯಲು ಸಂಕಲ್ಪಿಸಿ ಅನ್ನಾಹಾರಗಳನ್ನು ಬಿಟ್ಟು ಮೌನಿಯಾಗಿ ದರ್ಭೆಯ ಮೇಲೆ ಕುಳಿತಿದ್ದಾನೆ. ಮತ್ತಾರಿಗೂ ತಿಳಿಯದ ರೀತಿಯಲ್ಲಿ ಅವನನ್ನಿಲ್ಲಿಗೆ ಎತ್ತಿಕೊಂಡು ಬರಬೇಕಾಗಿದೆ." ದೈತ್ಯರ ಆಜ್ಞೆಯನ್ನು ಕೇಳುತ್ತಲೇ ಆ ಕೃತ್ಯೆಯು ಹಾಗೆಯೇ ಆಗಲೆಂದು ಹೇಳಿ ಹೊರಟುಹೋಯಿತು. ರೆಪ್ಪೆಯನ್ನು ಮುಚ್ಚಿ ತೆಗೆಯುವುದರೊಳಗಾಗಿ ಆ ಕೃತ್ಯೆಯು ಪಾತಾಳಲೋಕದಿಂದ ಭೂಲೋಕದಲ್ಲಿ ದುರ್ಯೋಧನನಿದ್ದೆಡೆಗೆ ಹೋಗಿ ಅವನನ್ನೆತ್ತಿಕೊಂಡು ಹಿಂದಿರುಗಿ ಬಂದು ದಾನವರ ವಶಕ್ಕೊಪ್ಪಿಸಿತು. ತಮ್ಮ ಅಭಿಲಾಷೆಯಂತೆ ಕ್ಷಣಮಾತ್ರದಲ್ಲಿ ದುರ್ಯೋಧನನು ತಮ್ಮ ಬಳಿಗೆ ಬಂದಿದ್ದರಿಂದ ಬಹಳ ಸಂತಸಗೊಂಡ ದೈತ್ಯರು ಸಭೆ ಸೇರಿ, ಪ್ರಹೃಷ್ಟಮನಸ್ಕರಾಗಿ, ಸ್ವಲ್ಪ ಅರಳಿದ ಕಣ್ಣುಳ್ಳವರಾಗಿ ಅಭಿಮಾನಯುಕ್ತವಾದ ಈ ಮಾತುಗಳನ್ನು ದುರ್ಯೋಧನನನ್ನುದ್ದೇಶಿಸಿ ಹೇಳಿದರು.

೨೫೧ನೆಯ ಅಧ್ಯಾಯವು ಮುಗಿಯಿತು.

೨೫೨ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ದಾನವರು ದುರ್ಯೋಧನನನ್ನು ಸಮಾಧಾನಪಡಿಸಿದುದು : ಕರ್ಣನ ಅನುರೋಧದಿಂದಾಗಿ ದುರ್ಯೋಧನನು ಪ್ರಾಯೋಪವೇಶವ್ರತವನ್ನು ನಿಲ್ಲಿಸಿ ಹಸ್ತಿನಾಪುರಕ್ಕೆ ಪ್ರಯಾಣಮಾಡಿದುದು

ಜನಮೇಜಯ! ದುರ್ಯೋಧನನನ್ನು ತಮ್ಮ ಮಧ್ಯದಲ್ಲಿ ಕುಳ್ಳಿರಿಸಿ ಕೊಂಡು ದಾನವರು ಅವನನ್ನು ಕುರಿತು ಹೀಗೆಂದು ಹೇಳಿದರು :



'ಸುಯೋಧನ! ಭರತಕುಲಾವತಂಸ! ರಾಜೇಂದ್ರ! ನೀನು ಯಾವಾಗಲೂ ಶೂರರಿಂದಲೂ ಮಹಾತ್ಮರಿಂದಲೂ ಪರಿವೃತನಾಗಿರುವೆ.

ಹೀಗಿರುವಾಗ ನೀನೇಕೆ ಇಂತಹ ದುಸ್ಸಾಹಸಕಾರ್ಯದಲ್ಲಿ ತೊಡಗಿರುವೆ? ಪ್ರಾಯೋಪವೇಶಮಾಡಿ ಪ್ರಾಣತೊರೆಯಬೇಕಾದ ಕಾರಣವಾದರೂ ಏನು? ಹಿರಿಯರು ಹೇಳುವ ಈ ಮಾತನ್ನು ನೀನು ಕೇಳಿಯೇ ಇಲ್ಲವೇ? ಸುಯೋಧನ!

**ಆತ್ಮತ್ಯಾಗೀ ಹ್ಯಧೋ ಯಾತಿ ವಾಚ್ಯತಾಂ ಚಾಯಶಸ್ಕರೀಮ್ ।**
**ನ ಹಿ ಕಾರ್ಯವಿರುದ್ಧೇಷು ಬಹುಪಾಪೇಷು ಕರ್ಮಸು ।**
**ಮೂಲಘಾತಿಷು ಸಜ್ಜನ್ತೇ ಬುದ್ಧಿಮನ್ತೋ ಭವದ್ವಿಧಾಃ ॥೬॥**

ಆತ್ಮಹತ್ಯೆಮಾಡಿಕೊಳ್ಳುವವನು ನರಕಕ್ಕೆ ಹೋಗುತ್ತಾನೆ. ಮೇಲಾಗಿ ಅಂತಹವನನ್ನು ಯಾರೂ ಶ್ಲಾಘನೆಮಾಡುವುದಿಲ್ಲ. ಕುತ್ಸಿತವಾದ ಅಯಶಸ್ಕರವಾದ ಲೋಕಾಪವಾದಕ್ಕೆ ಅವನು ಗುರಿಯಾಗುತ್ತಾನೆ. ಅಂತಹವನನ್ನು ಜನರು ಜೀವಿತದ ದುಃಖಗಳನ್ನೆದುರಿಸಲಾರದ 'ಹೇಡಿ' ಎನ್ನುತ್ತಾರೆ. ಅದರಲ್ಲಿಯೂ ನಿನ್ನಂತಹ ಬುದ್ಧಿವಂತರಾದ ಮನುಷ್ಯರು ಮಾಡಬೇಕಾದ ಕಾರ್ಯಕ್ಕೆ ತೀರಾ ವಿರುದ್ಧವೆನಿಸಿದ, ಪಾಪಭೂಯಿಷ್ಠವಾದ ಮತ್ತು ಮೂಲತತ್ತ್ವಕ್ಕೇ ಅಥವಾ ಮುಖ್ಯಸಂಕಲ್ಪಕ್ಕೇ ತೀರಾ ವಿರುದ್ಧವೆನಿಸಿದ, ಮೂಲವನ್ನೇ ನಾಶಪಡಿಸುವ ಇಂತಹ ಕಾರ್ಯಗಳಲ್ಲಿ ಖಂಡಿತವಾಗಿಯೂ ಪ್ರವರ್ತಿಸಬಾರದು. ನೀನೀಗ ಕೈಗೊಂಡಿರುವ ಪ್ರಾಯೋಪವೇಶಕ್ರಿಯೆಯು ನಿಶ್ಚಯವಾಗಿಯೂ ಧರ್ಮಾರ್ಥಗಳಿಗೂ ಸುಖಕ್ಕೂ ವಿನಾಶಕಾರಿಯಾದುದು. ಯಶಸ್ಸು, ಪ್ರತಾಪ ಮತ್ತು ಪರಾಕ್ರಮಗಳ ವಿನಾಶಕಾರಿಯೂ ಮೇಲಾಗಿ ಶತ್ರುಗಳಿಗೆ ಅತ್ಯಂತ ಸಂತೋಷದಾಯಕವೂ ಆಗಿದೆ. ಇಂತಹ ಕ್ರಿಯೆಯನ್ನು ಸಾಕುಮಾಡು. ಪ್ರಾಯೋಪವೇಶದಿಂದ ವಿಮುಖನಾಗು. ಪ್ರಭುವೇ! ನಿನ್ನೀ ಶರೀರವು ಸಾಧಾರಣವಾದುದಲ್ಲ. ದಿವ್ಯವಾದುದು. ನಿನ್ನ ಜನ್ಮರಹಸ್ಯವನ್ನು ತಿಳಿದಮೇಲಾದರೂ ಧೈರ್ಯವನ್ನು ತಾಳುವವನಾಗು. ಹಿಂದೆ ನಾವು ಮಹೇಶ್ವರನನ್ನು ಕುರಿತು ತಪಸ್ಸುಮಾಡಲಾಗಿ, ನಮ್ಮ ತಪಸ್ಸಿಗೆ ಮೆಚ್ಚಿದ ಮಹೇಶ್ವರನು ನಿನ್ನನ್ನು ನಮಗೆ ದಯಪಾಲಿಸಿದನು. ನಿನ್ನ ಸೊಂಟದಿಂದ ಮೇಲಕ್ಕಿರುವ ಭಾಗವು ವಜ್ರಸಮೂಹದಿಂದಲೇ ನಿರ್ಮಿತವಾಗಿದೆ. ಆದುದರಿಂದ ನಿನ್ನ ಶಿರಸ್ಸಿನಿಂದ ಸೊಂಟದವರೆಗಿರುವ ಭಾಗವನ್ನು

ಯಾವ ಅಸ್ತ್ರ-ಶಸ್ತ್ರಗಳಿಂದಲೂ ಭೇದಿಸಲು ಯಾರಿಂದಲೂ ಸಾಧ್ಯವಿಲ್ಲ. ರೂಪ-ಸೌಂದರ್ಯಗಳಿಂದ ಕೂಡಿರುವ ಮತ್ತು ಸ್ತ್ರೀಯರ ಮನಮೋಹಕ ವಾದ ನಿನ್ನ ಅಧೋಭಾಗವು ಬಹುಕೋಮಲವಾದುದು. ಸಾಕ್ಷಾತ್ ಉಮೆಯೇ ಈ ನಿನ್ನ ಕೆಳಭಾಗವನ್ನು ಕುಸುಮಗಳಿಂದಲೇ ನಿರ್ಮಿಸಿರುವಳು. ಆದುದರಿಂದ ನಿನ್ನೀ ದಿವ್ಯಶರೀರವು ಸಾಕ್ಷಾತ್ ಉಮಾ-ಶಂಕರರಿಂದಲೇ ನಿರ್ಮಿತವಾಗಿರುವುದು.

ಆದುದರಿಂದ ನೀನು ದಿವ್ಯಪುರುಷನೇ ಹೊರತು ಸಾಮಾನ್ಯಮಾನವ ನಲ್ಲ. ದಿವ್ಯಾಸ್ತ್ರಗಳನ್ನು ತಿಳಿದಿರುವ, ಪರಾಕ್ರಮಿಗಳಾದ ಭಗದತ್ತನೇ ಮೊದಲಾದ ಕ್ಷತ್ರಿಯವೀರರು ನಿನ್ನ ಪಕ್ಷದಲ್ಲಿದ್ದು ನಿನ್ನ ಶತ್ರುಗಳನ್ನು ಸದೆಬಡಿಯುತ್ತಾರೆ. ಆದುದರಿಂದ ನಿನಗಾಗಿರುವ ಕಿಂಚಿದವಮಾನಕ್ಕಾಗಿ ವಿಷಾದಪಡುವ ಮತ್ತು ಪ್ರಾಯೋಪವೇಶಮಾಡುವ ಕಾರಣವಿಲ್ಲ. ಇನ್ನು ಮುಂದೆಯಾದರೂ ನೀನು ಕಳೆದುಹೋದುದಕ್ಕಾಗಿ ವಿಷಾದಪಡಬೇಡ. ನಿನಗೆ ಶತ್ರುಗಳಿಂದ ಸ್ವಲ್ಪವಾದರೂ ಭಯವಿರಲು ಕಾರಣವೇ ಇಲ್ಲ.

ನಿನಗೆ ಸಹಾಯಮಾಡುವ ಸಲುವಾಗಿಯೇ ಭೂಮಿಯಲ್ಲಿ ಅನೇಕ ದಾನವರು ಅವತರಿಸಿದ್ದಾರೆ. ಇತರ ದಾನವರೂ ಸಹ ಸಮಯಗಳಲ್ಲಿ ಭೀಷ್ಮ, ದ್ರೋಣ, ಕೃಪ ಮತ್ತು ಅಶ್ವತ್ಥಾಮರಲ್ಲಿ ಆವಿಷ್ಟರಾಗಿ ನಿನಗೆ ನೆರವು ನೀಡುತ್ತಾರೆ. ದೈತ್ಯರಿಂದ ವಿಮೋಹಿತರಾದ ಅವರು ದಯೆ ಎಂಬುದನ್ನು ಸಂಪೂರ್ಣವಾಗಿ ಮರೆತು ಶತ್ರುಗಳೊಡನೆ ಯುದ್ಧಮಾಡುತ್ತಾರೆ. ದಾನವರು ತಮ್ಮ ಸೂಕ್ಷ್ಮರೂಪಗಳಿಂದ ಕುರುವೀರರ ಹೃದಯಗಳನ್ನು ಆವರಿಸಿ ಕುಳಿತರೆಂದರೆ, ಅವರು ಕರುಣೆ ಎಂಬುದನ್ನು ಬಹುದೂರದಲ್ಲಿರಿಸಿ ಕಠಿನಹೃದಯರಾಗಿ ತಮ್ಮೆದುರಿಗೆ ಯಾರೇ ಬಂದರೂ ನಿಷ್ಕರುಣೆಯಿಂದ ವಧೆಮಾಡುತ್ತಾರೆ. ತಮ್ಮೆದುರಿನಲ್ಲಿ ನಿಲ್ಲುವವರು ತಮ್ಮ ಮಕ್ಕಳಾದರೂ ಸರಿಯೇ ; ಸಹೋದರರಾದರೂ ಸರಿಯೇ ; ತಂದೆಯಾದರೂ ಸರಿಯೇ ; ಗೆಳೆಯರಾದರೂ ಸರಿಯೇ ; ಶಿಷ್ಯನಾದರೂ ಸರಿಯೇ ; ಬಂಧುವಾದರೂ ಸರಿಯೇ ; ಬಾಲಕನಾದರೂ ಸರಿಯೇ ; ವೃದ್ಧನಾದರೂ ಸರಿಯೇ–ಯಾವ ವಿಧವಾದ ಅನುಕಂಪವನ್ನೂ ತೋರದೇ ದೈತ್ಯಾಭಿಭೂತರಾದ ಕುರುವೀರರು ಎದುರಾಳಿಗಳನ್ನು ಧ್ವಂಸಮಾಡಿಬಿಡುತ್ತಾರೆ. ದೈತ್ಯರಿಂದ ಆವಿಷ್ಟರಾದ

ಅವರಿಗೆ ಕಾರ್ಯಾಕಾರ್ಯಗಳ ವಿವೇಚನೆಯೇ ಇರುವುದಿಲ್ಲ. ಸ್ನೇಹವೆಂಬುದಕ್ಕೆ ಅವರ ಹೃದಯದಲ್ಲಿ ಸ್ಥಳವೇ ಇರುವುದಿಲ್ಲ. ಅವರ ಮನಸ್ಸು ಕಲುಷಿತವಾಗಿರುತ್ತದೆ. ತಮ್ಮೆದುರಾಳಿಯನ್ನು ಯಾವ ವಿವೇಚನೆಯೂ ಇಲ್ಲದೆ ಕೊಲ್ಲುವುದರಲ್ಲಿಯೇ ಅವರಿಗೆ ಸಂತೃಪ್ತಿಯುಂಟಾಗುತ್ತದೆ. "ನ ಮೇ ಜೀವನ್ವಿಮೋಕ್ಷ್ಯಸೇ" 'ನೀನಿಂದು ಜೀವಂತನಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ'-ಎಂಬುದಾಗಿ ಪರಸ್ಪರವಾಗಿ ಕೂಗಾಡುತ್ತಿರುತ್ತಾರೆ. ಪರಸ್ಪರವಾಗಿ ಶಸ್ತ್ರಾಸ್ತ್ರಗಳ ಪ್ರಹಾರಮಾಡುತ್ತಾ ಬಹುಜನಕ್ಷಯಕ್ಕೆ ಆ ವೀರರು ಕಾರಣರಾಗುವರು.

ಮಹಾತ್ಮರಾದ ಪಂಚಪಾಂಡವರು ಕೌರವರೊಡನೆ ಯುದ್ಧಮಾಡುವರು. ಮಹಾಬಲಿಷ್ಠರಾದ ಅವರು ದೈವದ ಸಹಾಯವನ್ನೂ ಪಡೆದು ದೈತ್ಯಾಭಿಭೂತರಾದ ಕುರುವೀರರನ್ನು ಧ್ವಂಸಮಾಡುವರು. ಈಗ ಕ್ಷತ್ರಿಯರಾಗಿ ಹುಟ್ಟಿರುವ ಅನೇಕ ದೈತ್ಯ-ರಾಕ್ಷಸರು ನಿನ್ನ ಪಕ್ಷಕ್ಕೆ ಸೇರಿ ಗದೆ, ಮುಸಲಾಯುಧ, ಶೂಲ-ಇವೇ ಮುಂತಾದ ಶ್ರೇಷ್ಠವಾದ ಆಯುಧಗಳನ್ನು ಧರಿಸಿದವರಾಗಿ ಪಾಂಡವರೊಡನೆ ಯುದ್ಧಮಾಡುವರು. ನಿನ್ನ ಮನಸ್ಸಿನಲ್ಲಿರುವ ಇನ್ನೊಂದು ಭಯವೂ ನಮಗೆ ತಿಳಿಯದೇ ಇಲ್ಲ. ಅರ್ಜುನನ ಪರಾಕ್ರಮದ ವಿಷಯವಾಗಿ ನೀನು ಬಹಳ ಭೀತನಾಗಿರುವೆ. ಅವನನ್ನು ಸಂಹರಿಸಲೂ ಸಹ ನಾವೀಗಲೇ ಒಂದು ಉಪಾಯವನ್ನು ಮಾಡಿಬಿಟ್ಟಿದ್ದೇವೆ. ಹಿಂದೆ ಶ್ರೀಕೃಷ್ಣನಿಂದ ಹತನಾದ ನರಕಾಸುರನ ಆತ್ಮವೀಗ ಕರ್ಣನಲ್ಲಿ ಆವಿರ್ಭೂತವಾಗಿದೆ. ಹಿಂದಿನ ಜನ್ಮದಲ್ಲಿ ಕೇಶವನ ಮೇಲೆ ತನಗಿದ್ದ ದ್ವೇಷವನ್ನು ಸ್ಮರಿಸಿ ಕರ್ಣನು ಕೃಷ್ಣಾರ್ಜುನರೊಡನೆ ಯುದ್ಧಮಾಡುವನು. ಶತ್ರುಗಳೊಡನೆ ಮಾಡುವ ಯುದ್ಧದಲ್ಲಿ ವಿಜಯಗಳಿಸುವುದರಲ್ಲಿ ಬಹುಸಮರ್ಥನಾದ ಕರ್ಣನು ಮುಂದಿನ ಯುದ್ಧದಲ್ಲಿ ನಿಶ್ಚಯವಾಗಿಯೂ ಪಾರ್ಥನನ್ನು ಸೋಲಿಸುವನು. ಮಹಾರಥನಾದ, ಶತ್ರುಗಳನ್ನು ಪ್ರಹರಿಸುವುದರಲ್ಲಿ ಅಗ್ರಗಣ್ಯನೆಂದು ಹೆಸರುಪಡೆದಿರುವ ಕರ್ಣನು ನಿನ್ನ ಸಕಲಶತ್ರುಗಳನ್ನೂ ವಿನಾಶಗೊಳಿಸುತ್ತಾನೆ. ವಜ್ರಪಾಣಿಯಾದ ಇಂದ್ರನು ಈ ರಹಸ್ಯವನ್ನು ತಿಳಿದು ತನ್ನ ಮಗನಾದ ಅರ್ಜುನನನ್ನು ರಕ್ಷಿಸಲೋಸುಗ ವೇಷಾಂತರವನ್ನು ಧರಿಸಿದವನಾಗಿ ಕರ್ಣನ ಕರ್ಣಕುಂಡಲಗಳನ್ನೂ ಮತ್ತು ವಜ್ರಕವಚವನ್ನೂ

ಬೇಡಿ ದಾನವಾಗಿ ಪಡೆಯುತ್ತಾನೆ. ಈ ಕಾರಣದಿಂದಲೇ ನಾವೂ ಸಹ ಸಂಶಪ್ತಕರೆಂಬ ನೂರಾರು-ಸಾವಿರಾರು ದೈತ್ಯ-ರಾಕ್ಷಸಯೋಧರನ್ನು ಸಿದ್ಧಪಡಿಸಿದ್ದೇವೆ. ಸುವಿಖ್ಯಾತರಾದ ಆ ಸಂಶಪ್ತಕರು ವೀರನಾದ ಅರ್ಜುನನನ್ನು ಖಂಡಿತವಾಗಿಯೂ ಸಂಹರಿಸುತ್ತಾರೆ. ಕರ್ಣನು ಮಾಡದೇ ಇರಬಹುದಾದ ಕಾರ್ಯವನ್ನು ಸಂಶಪ್ತಕರು ಮಾಡಿ ಮುಗಿಸುತ್ತಾರೆ. ಆದುದರಿಂದ ನೀನು ಖಂಡಿತವಾಗಿಯೂ ವಿಷಾದಿಸುವ ಕಾರಣವಿಲ್ಲ. ನಿನ್ನ ದುಃಖವನ್ನು ದೂರ ಮಾಡು. ಶತ್ರುರಹಿತವಾದ ಅಖಂಡಸಾಮ್ರಾಜ್ಯವನ್ನೂ ನೀನು ಉಪಭುಂಜಿಸುವವನಾಗು. ನಿನ್ನ ಹೃದಯದಲ್ಲಿ ವಿಷಾದಕ್ಕೆ ಎಡೆಮಾಡಿಕೊಡಬೇಡ. ಪ್ರಾಯೋಪವೇಶವ್ರತವು ಧೀರನಾದ ನಿನಗೆ ಉಚಿತವಲ್ಲ. ಒಂದು ವೇಳೆ ಈ ಪ್ರಾಯೋಪವೇಶವ್ರತದಿಂದ ನೀನು ಪ್ರಾಣತೊರೆದೆಯಾದರೆ ನಮ್ಮ ಪಕ್ಷವು ಪೂರ್ಣವಾಗಿ ಬಲಹೀನವಾಗುತ್ತದೆ. ಹಾಗೆಂದಿಗೂ ಮಾಡಬೇಡ. ನೀನಿನ್ನು ನಿನ್ನ ಪೂರ್ವಸ್ಥಾನಕ್ಕೆ ತೆರಳಬಹುದು. ನಿನ್ನ ಮನಸ್ಸು ಪ್ರಾಯೋಪವೇಶ ವ್ರತದಿಂದ ವಿಮುಖವಾಗಲಿ. ದೇವತೆಗಳಿಗೆ ಪಾಂಡವರು ಹೇಗೆ ಆಶ್ರಯಭೂತರಾಗಿರುವರೋ-ಅದೇ ರೀತಿಯಲ್ಲಿ ದೈತ್ಯರಾದ ನಮಗೆ ನೀನು ಆಶ್ರಯಭೂತನಾಗಿರುವೆ. ನಿನ್ನ ಮೂಲಕವಾಗಿಯೇ ನಾವು ದೇವತೆಗಳ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕಾಗಿದೆ."

ಜನಮೇಜಯ! ಹೀಗೆಂಬುದಾಗಿ ಹೇಳುತ್ತಾ ದೈತ್ಯರು ದುರ್ಯೋಧನನನ್ನು ಸಂತೈಸಿ, ಗಾಢಾಲಿಂಗನವನ್ನು ಮಾಡಿಕೊಂಡರು. ತಮ್ಮ ಪ್ರೀತಿಯ ಮಗನೋಪಾದಿಯಲ್ಲಿ ರಾಜಕುಂಜರನಾದ ದುರ್ಯೋಧನನ ತಲೆಯನ್ನು ಬಾರಿ-ಬಾರಿಗೂ ಸವರುತ್ತಾ ಆಶ್ವಸಿಸಿದರು. ಅನೇಕಾನೇಕ ಪ್ರಿಯೋಕ್ತಿಗಳನ್ನು ಹೇಳಿ ದುರ್ಯೋಧನನ ಬುದ್ಧಿಯನ್ನು ಸ್ತಿಮಿತಕ್ಕೆ ತಂದು "ಜಯಮವಾಪ್ನುಹಿ" 'ನೀನು ಜಯಶಾಲಿಯಾಗು'-ಎಂಬ ಉತ್ತೇಜಕವಾದ ಕಡೆಯ ಮಾತನ್ನು ಹೇಳಿ ದುರ್ಯೋಧನನನ್ನು ಬೀಳ್ಕೊಟ್ಟರು. ದೈತ್ಯರು ದುರ್ಯೋಧನನಿಗೆ ಪ್ರಯಾಣಮಾಡಲು ಅನುಮತಿಯನ್ನಿತ್ತೊಡನೆಯೇ ಹಿಂದೆ ಅವನನ್ನು ಅಲ್ಲಿಗೆ ಕರೆತಂದಿದ್ದ ಕೃತ್ಯೆಯೇ ಪುನಃ ಬಂದು ಅವನನ್ನೆತ್ತಿಕೊಂಡು ಯಥಾಪೂರ್ವಸ್ಥಳಕ್ಕೆ (ಅವನು ಪ್ರಾಯೋಪವೇಶವ್ರತಕ್ಕೆ ಸಂಕಲ್ಪಿಸಿ ಕುಳಿತಿದ್ದ ಸ್ಥಳಕ್ಕೆ) ಕರೆತಂದು ಬಿಟ್ಟಿತು. ಹೊರಡಲು ದುರ್ಯೋಧನ

ನಿಂದ ಅನುಮತಿಯನ್ನು ಪಡೆದು ಕ್ಷಣಮಾತ್ರದಲ್ಲಿ ಆ ಕೃತ್ಯೆಯು ಅದೃಶ್ಯ ವಾಯಿತು. ಕೃತ್ಯೆಯು ಅದೃಶ್ಯವಾದೊಡನೆಯೇ ಎಚ್ಚೆತ್ತು ಕುಳಿತ ದುರ್ಯೋಧನನು ಆ ಹಿಂದೆ ನಡೆದುದೆಲ್ಲವನ್ನೂ ಕೇವಲ ಕನಸೆಂದು ಭಾವಿಸಿದನು. ಕೆಲವು ನಿಮಿಷಗಳು ಕಳೆದನಂತರ ನಡೆದುದೆಲ್ಲವೂ ಕನಸಲ್ಲವೆಂದು ನಿಶ್ಚಯ ವಾಯಿತು. "ವಿಜೇಷ್ಯಾಮಿ ರಣೇ ಪಾಣ್ಡೂನ್–ಯುದ್ಧದಲ್ಲಿ ಪಾಂಡವರನ್ನು ನಾನು ನಿಶ್ಚಯವಾಗಿಯೂ ಗೆಲ್ಲುತ್ತೇನೆ"–ಎಂಬ ಆಶಾಭಾವನೆಯು ಅವನ ಮನಸ್ಸಿನಲ್ಲಿ ತಾನೇ ತಾನಾಗಿ ಮೂಡಿಬಂದಿತು. ಕರ್ಣ ಮತ್ತು ಸಂಶಪ್ತಕರು ಪಾರ್ಥನನ್ನು ಸಂಹರಿಸಲು ಸಮರ್ಥರೆಂಬುದು ದುರ್ಯೋಧನನಿಗೆ ದೃಢ ವಾಯಿತು. ಈ ರೀತಿಯಾಗಿ ದುರ್ಮತಿಯಾದ ದುರ್ಯೋಧನನ ಮನಸ್ಸಿನಲ್ಲಿ ಪಾಂಡವರನ್ನು ಜಯಿಸುವೆನೆಂಬ ಆಶಾಭಾವನೆಯು ಪುನಃ ಅಂಕುರಿಸಿತು. ದೈತ್ಯರು ದುರ್ಯೋಧನನೊಡನೆ ಹೇಳಿದಂತೆ ನರಕಾಸುರನ ಆತ್ಮವು ಕರ್ಣನಲ್ಲಿ ಆವಿರ್ಭವಿಸಿತ್ತಾದ್ದರಿಂದ ಅರ್ಜುನನನ್ನು ಕೊಲ್ಲಬೇಕೆಂಬ ದೃಢನಿಶ್ಚಯವು ಕರ್ಣನ ಮನಸ್ಸಿನಲ್ಲಿಯೂ ಉಂಟಾಯಿತು.

ಸಂಶಪ್ತಕರೂ ಸಹ ರಾಕ್ಷಸರಾದುದರಿಂದ ರಜೋಗುಣ-ತಮೋಗುಣ ಗಳಿಂದ ಕೂಡಿದವರಾಗಿ ಅರ್ಜುನನ ವಧೆಯಲ್ಲಿಯೇ ಆಸಕ್ತಚಿತ್ತರಾದರು. ಅದೇ ರೀತಿಯಲ್ಲಿ ಭೀಷ್ಮ-ದ್ರೋಣ-ಕೃಪರೂ ಸಹ ರಾಕ್ಷಸಾವಿಷ್ಟರಾಗಿದ್ದುದ ರಿಂದ ಪಾಂಡವರ ವಿಷಯದಲ್ಲಿ ತಮಗಿರಬೇಕಾಗಿದ್ದ ದಯೆ, ಅನುತಾಪ, ಕರುಣೆ, ಪ್ರೀತಿ–ಇವುಗಳಿಂದ ವಿಹೀನರಾದರು. ಆದರೆ ದುರ್ಯೋಧನನು ಮಾತ್ರ ಈ ವೃತ್ತಾಂತವನ್ನು ಯಾರೊಡನೆಯೂ ಹೇಳಲಿಲ್ಲ.

ರಾತ್ರಿಯು ಕಳೆದುಹೋಗಲಾಗಿ ಸೂರ್ಯನ ಮಗನಾದ ಕರ್ಣನು ತಮ್ಮ ರಾಜನನ್ನು ಪ್ರಾಯೋಪವೇಶವ್ರತದಿಂದ ವಿಮುಖನನ್ನಾಗಿ ಮಾಡಬೇಕೆಂಬ ಆಶಯದಿಂದ ಪುನಃ ತನ್ನೆರಡು ಕೈಗಳನ್ನೂ ಜೋಡಿಸಿ ನಸುನಗುತ್ತಾ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ನ ಮೃತೋ ಜಯತೇ ಶತ್ರೂಞ್ಜೀವನ್ಭದ್ರಾಣಿ ಪಶ್ಯತಿ ।**
**ಮೃತಸ್ಯ ಭದ್ರಾಣಿ ಕುತಃ ಕೌರವೇಯ ಕುತೋ ಜಯಃ ॥೬॥**

"ಸತ್ತವನೆಂದಿಗೂ ಶತ್ರುಗಳನ್ನು ಜಯಿಸಲಾರನು. ಜೀವಿಸಿದ್ದರೆ

ಮಾತ್ರ ಅವನು ಮಂಗಳಗಳನ್ನು ಕಾಣಬಹುದಾಗಿದೆ. ಸತ್ತುಹೋದವನಿಗೆ ಮಂಗಳಗಳೆಂಬುದೆಲ್ಲಿ? ಅಥವಾ ವಿಜಯವನ್ನು ಗಳಿಸಲು ಹೇಗೆ ತಾನೇ ಸಾಧ್ಯ ವಾದೀತು? ದುರ್ಯೋಧನ! (ಆದುದರಿಂದ ನೀನು ಪ್ರಾಯೋಪವೇಶದ ಮೂಲಕವಾಗಿ ಸತ್ತುಹೋಗುವುದು ಖಂಡಿತವಾಗಿಯೂ ಅನುಚಿತವೇ ಸರಿ.)"

ಕರ್ಣನು ಮುಂದುವರಿದು ಹೇಳಿದನು : "ದುರ್ಯೋಧನ! ದುಃಖ ಪಡುವುದಕ್ಕಾಗಲೀ, ಭಯಪಡುವುದಕ್ಕಾಗಲೀ ಅಥವಾ ಸಾಯುವುದಕ್ಕಾಗಲೀ ಇದು ಸಮಯವಲ್ಲ"–ಹೀಗೆಂದು ಹೇಳುತ್ತಾ ಕರ್ಣನು ಕೆಳಗೆ ಕುಳಿತು ದುರ್ಯೋಧನನನ್ನು ಬಾಚಿ ತಬ್ಬಿಕೊಂಡು ಪುನಃ ಹೇಳತೊಡಗಿದನು :

"ಮೇಲೇಳು, ಮಹಾರಾಜ! ನೀನಿಲ್ಲೇಕೆ ಕುಳಿತಿರುವೆ? ನೀನೇಕಿಷ್ಟು ದುಃಖಿಸುತ್ತಿರುವೆ? ಶತ್ರುವಿಧ್ವಂಸಕನೇ! ನಿನ್ನ ಭುಜಬಲ-ಪರಾಕ್ರಮಗಳಿಂದ ನೀನು ನಿನ್ನ ಶತ್ರುಗಳಿಗೆ ಪರಿತಾಪವನ್ನುಂಟುಮಾಡಿಯೂ ಸಹ ಸಾಯಲೇಕಿಚ್ಛಿಸುವೆ? ಅಥವಾ ಅರ್ಜುನನ ಅತುಲಪರಾಕ್ರಮವನ್ನು ಪ್ರತ್ಯಕ್ಷವಾಗಿ ನೋಡಿದನಂತರ ಈ ಭಯವೇನಾದರೂ ನಿನ್ನ ಹೃದಯ ವನ್ನಾವರಿಸಿತೇ? ಇದ್ದರೂ ಇರಬಹುದು. ಪ್ರತಿಜ್ಞೆಮಾಡಿ ಹೇಳುತ್ತೇನೆ, ದುರ್ಯೋಧನ! ನಾನು ಸತ್ಯವಾಗಿಯೂ ಯುದ್ಧದಲ್ಲಿ ಅರ್ಜುನನನ್ನು ಕೊಲ್ಲುತ್ತೇನೆ.

**ಗತೇ ತ್ರಯೋದಶೇ ವರ್ಷೇ ಸತ್ಯೇನಾಯುಧಮಾಲಭೇ ।**
**ಆನಯಿಷ್ಯಾಮ್ಯಹಂ ಪಾರ್ಥಾನ್ವಶಂ ತವ ಜನಾಧಿಪ ॥೪೩॥**

ಈ ಆಯುಧವನ್ನು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ ; ಕೇಳು ದುರ್ಯೋಧನ! ಹದಿಮೂರು ವರ್ಷಗಳು ಕಳೆದು ಪಾಂಡವರು ತಮ್ಮ ರಾಜ್ಯವನ್ನಪೇಕ್ಷಿಸಿ ಪುನಃ ಬಂದರೆಂದರೆ ಅವರನ್ನು ಸಮರದಲ್ಲಿ ಜಯಿಸಿ ನಿನ್ನ ವಶವರ್ತಿಗಳನ್ನಾಗಿ ಮಾಡುತ್ತೇನೆ. ಇದು ಸತ್ಯ."

ಕರ್ಣನ ಉತ್ತೇಜಕವಾದ ಮಾತುಗಳನ್ನು ಕೇಳಿ, ರಾತ್ರಿಯಲ್ಲಿ ದೈತ್ಯರು ಹೇಳಿದುದನ್ನೂ ಸ್ಮರಿಸಿದವನಾಗಿ, ತನ್ನ ಅನುಜರ ಪ್ರಾರ್ಥನೆಯನ್ನೂ ಮನ್ನಿಸಿ ದುರ್ಯೋಧನನು ಪ್ರಾಯೋಪವೇಶವ್ರತದಿಂದ ವಿಮುಖನಾದನು. ರಾತ್ರಿ ಯಲ್ಲಿ ದೈತ್ಯರು ಹೇಳಿದ ಮಾತುಗಳನ್ನೇ ಪದೇ-ಪದೇ ಸ್ಮರಣೆಗೆ ತಂದು

ಕೊಳ್ಳುತ್ತಾ ದುರ್ಯೋಧನನು ಪಾಂಡವರನ್ನು ಜಯಿಸಿಯೇ ತೀರಬೇಕೆಂದು ದೃಢವಾಗಿ ನಿಶ್ಚಯಿಸಿದನು. ಬಳಿಕ ಗಜಾಶ್ವ-ರಥ-ಪದಾತಿಗಳಿಂದೊಡಗೂಡಿದ ಚತುರಂಗಬಲಸೈನ್ಯವನ್ನು ಸಜ್ಜುಗೊಳಿಸಿದನು. ಶ್ವೇತಛತ್ರಗಳಿಂದಲೂ, ಚಾಮರಗಳಿಂದಲೂ ಕೂಡಿದ್ದ ಗಜಾಶ್ವ-ರಥ-ಪದಾತಿಸೈನ್ಯವು ವರ್ಷಾಕಾಲವು ಮುಗಿದು ಶರತ್ಕಾಲವು ಪ್ರಾರಂಭವಾದಾಗ ಮೋಡಗಳಿಲ್ಲದ ಆಕಾಶ ದೋಪಾದಿಯಲ್ಲಿ ಪ್ರಕಾಶಿಸುತ್ತಾ ಗಂಗಾಪ್ರವಾಹದೋಪಾದಿಯಲ್ಲಿ ಹಸ್ತಿನಾ ಪಟ್ಟಣಕ್ಕೆ ಅಭಿಮುಖವಾಗಿ ಹೊರಟಿತು.

ಚಕ್ರವರ್ತಿಯೊಬ್ಬನನ್ನು ಜಯಕಾರಗಳಿಂದಲೂ, ಸ್ವಸ್ತಿವಾಚನ ಗಳಿಂದಲೂ ಗೌರವಿಸುವಂತೆಯೇ–ಬ್ರಾಹ್ಮಣಪ್ರಮುಖರು ದುರ್ಯೋಧನ ನನ್ನು ಸ್ವಸ್ತಿವಾಚನಗಳಿಂದ ಗೌರವಿಸಿದರು. ಸ್ವಾಗತಿಸಲು ನೆರೆದಿರುವ ಸಾವಿ ರಾರು ಜನರು ತಮ್ಮ ಕೈಗಳನ್ನು ಜೋಡಿಸಿ ದುರ್ಯೋಧನನನ್ನು ಸ್ತೋತ್ರ ಮಾಡುತ್ತಿದ್ದರು. ಸಕಲಜನರಿಂದಲೂ ಪುರಸ್ಕೃತನಾದ ಕಾಂತಿಯುಕ್ತನಾದ ದುರ್ಯೋಧನನು ಕರ್ಣ, ಶಕುನಿ–ಮುಂತಾದವರಿಂದೊಡಗೂಡಿ ಅಗ್ರಭಾಗ ದಲ್ಲಿದ್ದನು. ಅವರ ಹಿಂಬದಿಯಲ್ಲಿ ದುಶ್ಶಾಸನಪ್ರಮುಖರಾದ ಅನುಜರೂ ಭೂರಿಶ್ರವ-ಸೋಮದತ್ತರೂ ಬರುತ್ತಿದ್ದರು. ಮಹಾಪರಾಕ್ರಮಿಯಾದ ಬಾಹ್ಲೀಕರಾಜನೂ ಅವರನ್ನು ಅನುಸರಿಸಿದನು. ಈ ರೀತಿಯಲ್ಲಿ ಮುಂದೆ ಹೋಗುತ್ತಿದ್ದ ರಾಜಶ್ರೇಷ್ಠನಾದ ದುರ್ಯೋಧನನನ್ನು ಕೌರವಶ್ರೇಷ್ಠರು ನಾನಾವಿಧವಾದ ಆಕಾರಗಳಿದ್ದ ರಥಗಳಲ್ಲಿಯೂ, ಕುದುರೆಗಳ ಮತ್ತು ಆನೆಗಳ ಮೇಲೂ ಕುಳಿತು ಹಿಂಬಾಲಿಸಿದರು. ಈ ರೀತಿಯಲ್ಲಿ ಹೊರಟ ಆ ಸೈನ್ಯಪ್ರವಾಹವು ಅತ್ಯಲ್ಪಕಾಲದಲ್ಲಿಯೇ ಹಸ್ತಿನಾಪಟ್ಟಣವನ್ನು ಪ್ರವೇಶಿಸಿತು.”

೨೫೨ನೆಯ ಅಧ್ಯಾಯವು ಮುಗಿಯಿತು.

೨೫೩ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

# ಭೀಷ್ಮನು ಕರ್ಣನನ್ನು ನಿಂದಿಸಿದುದು : ಪಾಂಡವರೊಡನೆ ಸಂಧಿಮಾಡಿಕೊಳ್ಳಲು ಭೀಷ್ಮನು ಸಲಹೆನೀಡಿದುದು : ಕರ್ಣನು ಗಡುಸಿನ ಮಾತನಾಡಿ ದಿಗ್ವಿಜಯಕ್ಕೆ ಹೊರಟುದು

ಜನಮೇಜಯರಾಜನು ವೈಶಂಪಾಯನರನ್ನು ಪ್ರಶ್ನಿಸಿದನು :

"ಬ್ರಾಹ್ಮಣೋತ್ತಮರೇ! ಮಹಾತ್ಮರಾದ ಪಾಂಡವರು ಅರಣ್ಯದಲ್ಲಿರುತ್ತಿರಲಾಗಿ ಧನುರ್ಧರರಲ್ಲಿ ಶ್ರೇಷ್ಠರಾದ ಧೃತರಾಷ್ಟ್ರನ ಮಕ್ಕಳೇನು ಮಾಡುತ್ತಿದ್ದರು? (ಪಾಂಡವರಿಗೆ ಪುನಃ ಪುನಃ ತೊಂದರೆಕೊಡಲು ಸಮಾಲೋಚನೆ ನಡೆಸುತ್ತಿದ್ದರೆ?) ಸೂರ್ಯನ ಮಗನಾದ ಕರ್ಣ, ಶಕುನಿ, ಭೀಷ್ಮ, ದ್ರೋಣ ಮತ್ತು ಕೃಪರು ದುರ್ಯೋಧನನಿಗೆ ಯಾವ ರೀತಿಯಲ್ಲಿ ಸಲಹೆ ನೀಡುತ್ತಿದ್ದರು? ಇವೆಲ್ಲವನ್ನೂ ನನಗೆ ವಿಶದವಾಗಿ ಹೇಳಿರಿ."

"ಜನಮೇಜಯ! ನಾನು ಹಿಂದೆಯೇ ಹೇಳಿದಂತೆ ದುರ್ಯೋಧನನ ಮತ್ತು ಅವನ ಪರಿವಾರದವರ ಬಂಧವಿಮೋಚನೆಯನ್ನು ಮಾಡಿಸಿ ಪಾಂಡವರು ತಮ್ಮ ಪಾಡಿಗೆ ತಾವು ಹೊರಟುಹೋದರು. ಪಾಂಡವರಿಂದ ವಿಮುಕ್ತಿ ಹೊಂದಿದ ದುರ್ಯೋಧನನು ಹಸ್ತಿನೆಗೆ ಬಂದನಂತರ ಭೀಷ್ಮನೊಮ್ಮೆ ಅವನನ್ನು ಸಂಧಿಸಿ ಹೀಗೆಂದು ಹೇಳಿದನು :

"ಮಗು! ಹಿಂದೆ ನೀನು ಘೋಷಯಾತ್ರೆಗೆ ಹೊರಟಾಗಲೇ ಪಾಂಡವರಿರುವೆಡೆಗೆ ಹೋಗುವುದು ಉಚಿತವಲ್ಲವೆಂದು ನಾನು ಹೇಳಿದ್ದೆನು. ನನ್ನ ಮಾತನ್ನು ನಿರ್ಲಕ್ಷಿಸಿ ನೀನು ಹೊರಟುಹೋದೆ. ಅದಕ್ಕೆ ಪ್ರತಿಫಲವಾಗಿ ನೀನು ಗಂಧರ್ವರಿಂದ ಬಲಾತ್ಕಾರದಿಂದ ಬಂಧಿತನಾದೆ. ಪರಮಶತ್ರುಗಳೆಂದು ನೀನು ಭಾವಿಸಿರುವ ಧರ್ಮಾತ್ಮರಾದ ಪಾಂಡವರೇ ನಿನ್ನ ಬಂಧವಿಮೋಚನೆಯನ್ನು ಮಾಡಿದರು. ಇದರಿಂದಲೂ ನೀನು ನಾಚಿದಂತೆ ಕಾಣುವುದಿಲ್ಲ. ನೀನು ಮಾಡಿದ ಕುತ್ಸಿತಕಾರ್ಯಕ್ಕಾಗಿ ನಿನಗೆ ಪಶ್ಚಾತ್ತಾಪವೂ ಉಂಟಾಗಿರುವಂತೆ ಕಾಣುವುದಿಲ್ಲ. ನೀನು ಸೈನ್ಯಸಮೇತನಾಗಿ ರಣಾಂಗಣದಲ್ಲಿದ್ದಾಗ ಗಂಧರ್ವರ ನಿಶಿತಾಸ್ತ್ರಗಳಿಗೆ ಭಯಪಟ್ಟು ನಿನ್ನ ಗೆಳೆಯನಾದ ಕರ್ಣನು ರಣರಂಗದಿಂದಲೇ ಪಲಾಯನಮಾಡಿದನು. ನೀನು ಬಂಧಿತನಾಗಿದ್ದ ಸಮಯದಲ್ಲಿ ಮಹಾತ್ಮರಾದ

ಪಾಂಡವರು ಗಂಧರ್ವರೊಡನೆ ಯುದ್ಧಮಾಡುತ್ತಿದ್ದಾಗ ತೋರಿದ ಪರಾಕ್ರಮವನ್ನೂ ನೀನು ಪ್ರತ್ಯಕ್ಷನಾಗಿ ನೋಡಿರುವೆ. ಸೂತಪುತ್ರನಾದ ಕರ್ಣನ ಪರಾಕ್ರಮವೆಷ್ಟೆಂಬುದು ಅಂದು ನಿನಗೆ ಪ್ರತ್ಯಕ್ಷನಿದರ್ಶನಕ್ಕೆ ಬಂದಂತಾಯಿತು. ಇದರಿಂದಾಗಿ ಧನುರ್ವಿದ್ಯೆಯಲ್ಲಿ, ಶೌರ್ಯದಲ್ಲಿ, ಧರ್ಮಾಚರಣೆಯಲ್ಲಿ ಈ



ಕರ್ಣನು ಮಹಾತ್ಮರಾದ ಪಾಂಡವರಿಗೆ ನಾಲ್ಕನೆಯ ಒಂದಂಶಕ್ಕೂ ಸಾಟಿಯಾಗಲಾರನೆಂಬ ವಿಷಯವನ್ನು ನೀನೇ ನಿಶ್ಚಯಿಸಿಬಹುದಾಗಿದೆ. ಧರ್ಮವತ್ಸಲನೇ! ಈ ಕಾರಣದಿಂದ ಮಹಾತ್ಮರಾದ ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ನಿನಗೂ ಮತ್ತು ನಮ್ಮ ವಂಶಕ್ಕೂ ಶ್ರೇಯಸ್ಕರವೆಂದು ನಾನು ಭಾವಿಸುತ್ತೇನೆ.”

ಜನಮೇಜಯ! ಭೀಷ್ಮನು ಹೇಳಿದ ಮಾತುಗಳನ್ನು ಕೇಳಿದನಂತರ ದುರ್ಯೋಧನನು ಕ್ಷಣಕಾಲ ಗಹಗಹಿಸಿ ನಗುತ್ತಿದ್ದು ಭೀಷ್ಮನೊಡನೆ ಯಾವುದೊಂದು ಮಾತನ್ನೂ ಆಡದೆ ಶಕುನಿಯೊಡನೆ ಹೊರಟೇಹೋದನು. ಶಕುನಿಯೊಡನೆ ದುರ್ಯೋಧನನು ಹೊರಟುಹೋದೊಡನೆಯೇ ಕರ್ಣ-ದುಃಶಾಸನಾದಿಗಳೂ ಅವನನ್ನೇ ಅನುಸರಿಸಿದರು. ಭೀಷ್ಮನೊಬ್ಬನೇ ಉಳಿದುಕೊಂಡನು. ತನ್ನ ಸಲಹೆಗೆ ಸಿಕ್ಕಿದ ಪುರಸ್ಕಾರವನ್ನು ಕಂಡು ಭೀಷ್ಮನು ನಾಚಿ ತಲೆತಗ್ಗಿಸಿದನು. ಕ್ಷಣಕಾಲ ಅಧೋಮುಖನಾಗಿ ಕುಳಿತಿದ್ದು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಆಸನದಿಂದ ಮೇಲೆದ್ದು ಮುಂದಿನ ಆಗು-ಹೋಗುಗಳನ್ನು ಯೋಚಿಸುತ್ತಾ ತನ್ನ ಮನೆಯ ಕಡೆಗೆ ಮೆಲ್ಲ-ಮೆಲ್ಲನೆ ನಡೆದನು.

ಪಿತಾಮಹನಾದ ಭೀಷ್ಮನು ಹೊರಟುಹೋದನೆಂದು ತಿಳಿದೊಡನೆಯೇ ದುರ್ಯೋಧನನು ತನ್ನ ಸಂಗಡಿಗರೊಡನೆ ಸಭಾಮಂಟಪಕ್ಕೆ ಆಗಮಿಸಿ ಅವರೊಡನೆ ಮಂತ್ರಾಲೋಚನೆಯಲ್ಲಿ ಮಗ್ನನಾದನು.

"ನಮಗೇನಾದರೂ ಶ್ರೇಯಸ್ಸು ಉಂಟಾದೀತೆ? ಶ್ರೇಯಸ್ಸುಂಟಾಗಬೇಕಾದರೆ ಏನು ಮಾಡಬೇಕು? ಶ್ರೇಯಸ್ಸಿಗೆ ಕಾರಣವಾಗಬಹುದಾದ ಯಾವ ಕಾರ್ಯವನ್ನು ನಾವು ಮಾಡದೇ ಉಳಿಸಿಕೊಂಡಿರುತ್ತೇವೆ? ಏನು ಮಾಡಿದರೆ ಒಳ್ಳೆಯದು?–ಇವಿಷ್ಟೂ ವಿಷಯಗಳನ್ನೂ ನಾವಿಂದು ಕೂಲಂಕುಷವಾಗಿ ಚರ್ಚಿಸಬೇಕಾಗಿದೆ"–ಎಂದು ದುರ್ಯೋಧನನು ತನ್ನ ಮನಸ್ಸಿನ ಇಂಗಿತವನ್ನು ತನ್ನ ಗೆಳೆಯರ ಮುಂದಿಟ್ಟನು. ಕರ್ಣನು ದುರ್ಯೋಧನನನ್ನು ಸಮಾಧಾನಗೊಳಿಸುತ್ತಾ ಹೇಳಿದನು :

"ದುರ್ಯೋಧನ! ನಾನು ಹೇಳಲಿರುವ ಈ ಮಾತುಗಳನ್ನು ನಿನ್ನ ಮನಸ್ಸಿಗೆ ತಂದುಕೊಂಡು ಪರಿಶೀಲಿಸು. ಭೀಷ್ಮನು ಯಾವಾಗಲೂ ನಮ್ಮನ್ನು ನಿಂದಿಸುತ್ತಿರುತ್ತಾನೆ ಮತ್ತು ಪಾಂಡವರನ್ನು ಹೊಗಳುತ್ತಲೂ ಇರುತ್ತಾನೆ. ನಿನ್ನನ್ನು ಯಾವಾಗಲೂ ಭೀಷ್ಮನು ದ್ವೇಷಿಸುವುದರಿಂದ ನಿನ್ನ ಗೆಳೆಯನಾದ ನನ್ನನ್ನೂ ಅವನು ದ್ವೇಷಿಸುತ್ತಾನೆ. ನಿನ್ನ ಮುಂದೆ ಯಾವಾಗಲೂ ಅವನು ನನ್ನನ್ನು ನಿಂದಿಸುತ್ತಲೇ ಇರುತ್ತಾನೆ. ನನ್ನ ಪರಾಕ್ರಮವನ್ನು ಅಲ್ಲಗಳೆ

ಯುತ್ತಲೇ ಇರುತ್ತಾನೆ. ನನ್ನನ್ನು ನಿಂದಿಸುವುದನ್ನೂ ನಾನು ಅಷ್ಟಾಗಿ ಮನಸ್ಸಿಗೆ ತಂದುಕೊಳ್ಳುವುದಿಲ್ಲ. ಆದರೆ ನಿನ್ನ ಸಮಕ್ಷಮದಲ್ಲಿಯೇ ನಿನ್ನನ್ನು ನಿಂದಿಸುವುದನ್ನೂ ಮತ್ತು ಪಾಂಡವರನ್ನು ಬಾರಿ-ಬಾರಿಗೂ ಹೊಗಳು ವುದನ್ನೂ ನಾನು ಸಹಿಸಲಾರೆನು. ಕುರುಕುಲಾಧಮನಾದ ಭೀಷ್ಮನಿಗೆ ನಾನಿಂದು ನನ್ನ ಪರಾಕ್ರಮವೆಷ್ಟೆಂಬುದನ್ನು ತೋರಲಿಚ್ಛಿಸಿದ್ದೇನೆ. ಆದುದ ರಿಂದ ನೀನೀಗಲೇ ನನಗೆ ಬೇಕಾಗಬಹುದಾದ ಭೃತ್ಯ-ಬಲ-ವಾಹನಗಳನ್ನೂ ನೀಡಿ ಅನುಮತಿಯನ್ನು ದಯಪಾಲಿಸು. ಶೈಲ-ವನ-ಕಾನನಗಳಿಂದ ಆವೃತ ವಾಗಿರುವ ಈ ಅಖಂಡಭೂಮಂಡಲವನ್ನೇ ನಾನು ನಿನಗಾಗಿ ಜಯಿಸಿಕೊಡು ತ್ತೇನೆ. ಈ ಹಿಂದೆ ಯುಧಿಷ್ಠಿರನು ರಾಜಸೂಯಯಾಗವನ್ನು ಮಾಡಿದಾಗ ಈ ಭೂಮಂಡಲವು ಅತುಲಪರಾಕ್ರಮಿಗಳಾದ ನಾಲ್ವರು ಪಾಂಡವರಿಂದ (ಭೀಮಾರ್ಜುನ-ನಕುಲ-ಸಹದೇವರಿಂದ) ಜಯಿಸಲ್ಪಟ್ಟಿದ್ದಿತು. ಇಂದು ನಾನೊಬ್ಬನೇ ಏಕಾಕಿಯಾಗಿ ಈ ಭೂಮಂಡಲವನ್ನು ನಿನಗೆ ಗೆದ್ದುಕೊಡು ತ್ತೇನೆ. ಕುರುಕುಲಾಧಮನಾದ, ದುರ್ಬುದ್ಧಿಯವನಾದ ಭೀಷ್ಮನು ಇಂದಾ ದರೂ ನನ್ನ ಪರಾಕ್ರಮವೆಷ್ಟೆಂಬುದನ್ನು ಅರಿತುಕೊಳ್ಳಲಿ. ನಿಂದೆಗೆ ಯೋಗ್ಯ ರಲ್ಲದವರನ್ನು ನಿಂದಿಸುವುದೂ ನಿಂದೆಗೆ ಯೋಗ್ಯರಾದವರನ್ನು ಶ್ಲಾಘಿಸು ವುದೂ ಅವನಿಗೆ ಹುಟ್ಟುಗುಣವಾಗಿಬಿಟ್ಟಿದೆ. ಇಂದು ಅವನು ನನ್ನ ಭುಜಬಲ-ಪರಾಕ್ರಮಗಳನ್ನು ವೀಕ್ಷಿಸಿ ತಾನು ಮಾಡಿದ ಅಪರಾಧಕ್ಕಾಗಿ ತನ್ನನ್ನು ತಾನೇ ಹಳಿದುಕೊಳ್ಳಲಿ. ಮಹಾರಾಜ! ನನಗೆ ಒಡನೆಯೇ ಅನುಮತಿಯನ್ನು ನೀಡು. ನೀನು ವಿಜಯಿಯಾಗುವುದು ನಿಶ್ಚಯ. ಅಖಂಡಸಾಮ್ರಾಜ್ಯಕ್ಕೆ ಚಕ್ರವರ್ತಿಯಾಗುವೆ. ನಾನು ಹಿಡಿದಿರುವ ಈ ಆಯುಧವನ್ನು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ. ನಾನು ಸತ್ಯವಾಗಿಯೂ ನಿನಗೆ ಭೂಮಂಡಲವನ್ನು ಗೆದ್ದುಕೊಡುತ್ತೇನೆ.”

ಜನಮೇಜಯ! ಕರ್ಣನ ಮಾತುಗಳನ್ನು ಕೇಳಿದ ಕೂಡಲೇ ದುರ್ಯೋಧನನಿಗುಂಟಾದ ಆನಂದಕ್ಕೆ ಪಾರವೇ ಇಲ್ಲವಾಯಿತು. ಕರ್ಣನ ವಿಷಯದಲ್ಲಿ ಹೆಚ್ಚು ಪ್ರೀತಿಯುಂಟಾಯಿತು. ಹಿರಿ ಹಿಗ್ಗಿ ಹೇಳತೊಡಗಿದನು.

**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ಮೇ ತ್ವಂ ಮಹಾಬಲಃ ।**
**ಹಿತೇಷು ವರ್ತಸೇ ನಿತ್ಯಂ ಸಫಲಂ ಜನ್ಮ ಚಾದ್ಯ ಮೇ ॥೨೫॥**

"ಧನ್ಯನಾಗಿದ್ದೇನೆ. ಅನುಗೃಹೀತನಾಗಿದ್ದೇನೆ. ಯಾವನ ಹಿತದಲ್ಲಿಯೇ ಮಹಾಬಲಶಾಲಿಯಾದ ನೀನು ಅನುದಿನವೂ ಆಸಕ್ತಿವಹಿಸಿರುವೆಯೋ ಅಂತಹ ನಾನು ನಿಶ್ಚಯವಾಗಿಯೂ ಧನ್ಯನೇ ಸರಿ. ನನ್ನ ಜನ್ಮವೂ ಇಂದು ಸಫಲವಾಗಿದೆ.

ನನ್ನ ಸಕಲಶತ್ರುಗಳ ದಮನಕ್ಕೆ ಯಾವ ಸಮಯವು ಅನುಕೂಲ ವಾಗಿರುವುದೆಂದು ಭಾವಿಸುವೆಯೋ–ಅದೇ ಸಮಯದಲ್ಲಿ ನೀನು ವಿಜಯ ಯಾತ್ರೆಗೆ ಹೊರಡುವವನಾಗು. ನಿನಗೆ ಮಂಗಳವಾಗಲಿ. ನಿನಗೇನು ಬೇಕೆಂಬುದನ್ನು ಒಡನೆಯೇ ಆಜ್ಞಾಪಿಸು. ಕ್ಷಣಮಾತ್ರದಲ್ಲಿ ಸಕಲವನ್ನೂ ಸಿದ್ಧಮಾಡಿಕೊಡುವೆನು."

ಜನಮೇಜಯ! ದುರ್ಯೋಧನನು ಹೀಗೆಂದು ಹೇಳಿದೊಡನೆಯೇ ಕರ್ಣನು ವಿಜಯಯಾತ್ರೆಗೆ ಬೇಕಾಗಬಹುದಾದ ರಥ-ತುರಗ-ಗಜಸೇನೆ ಗಳೆಲ್ಲವನ್ನೂ ಸಜ್ಜುಗೊಳಿಸುವಂತೆ ಆಜ್ಞಾಪಿಸಬೇಕೆಂದು ದುರ್ಯೋಧನನನ್ನು ಪ್ರಾರ್ಥಿಸಿದನು. ಶುಭನಕ್ಷತ್ರ, ಶುಭಯೋಗ, ಶುಭಕರಣ, ಶುಭದಿನ, ಶುಭತಿಥಿ, ಶುಭಮುಹೂರ್ತದಲ್ಲಿ ಶುಭಜಲದಿಂದ ಮಂಗಳಸ್ನಾನಮಾಡಿ, ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಸ್ವೀಕರಿಸಿದವನಾಗಿ, ಸಕಲರಿಂದಲೂ ಶ್ಲಾಘಿತನಾಗಿ ತನ್ನ ರಥಘೋಷದಿಂದ ಚರಾಚರಾತ್ಮವಾದ ಮೂರುಲೋಕ ಗಳನ್ನೂ ಪ್ರತಿಧ್ವನಿಸುತ್ತಾ ಕರ್ಣನು ವಿಜಯಾತ್ರೆಗೆ ಹೊರಟನು."

೨೫೩ನೆಯ ಅಧ್ಯಾಯವು ಮುಗಿಯಿತು.

೨೫೪ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಕರ್ಣನು ಅಖಂಡಭೂಮಂಡಲವನ್ನೂ ದುರ್ಯೋಧನನಿಗಾಗಿ ಜಯಿಸಿಕೊಟ್ಟುದು

ಜನಮೇಜಯ! ಮಹಾಧನುಸ್ಸನ್ನು ಧರಿಸಿದ್ದ ಕರ್ಣನು ಚತುರಂಗಬಲ ಸಮೇತನಾಗಿ ಶುಭದಿನದಲ್ಲಿ ಹಸ್ತಿನಾಪಟ್ಟಣದಿಂದ ಹೊರಟವನಾಗಿ ಬಹು ಸುಂದರವಾಗಿದ್ದ ದ್ರುಪದನ ರಾಜಧಾನಿಯನ್ನು ಮುತ್ತಿದನು. ದ್ರುಪದನಿಗೂ ಕರ್ಣನಿಗೂ ಘೋರವಾದ ಯುದ್ಧವಾಯಿತು. ಕಡೆಗೆ ದ್ರುಪದನೇ ಸೋಲನ್ನು

ಒಪ್ಪಿಕೊಳ್ಳಬೇಕಾಯಿತು. ಸುವರ್ಣನಾಣ್ಯಗಳನ್ನೂ, ಬೆಳ್ಳಿಯನಾಣ್ಯಗಳನ್ನೂ ನಾನಾ ವಿಧವಾದ ವಜ್ರ-ವೈಢೂರ್ಯಾದಿಗಳನ್ನೂ ಕಪ್ಪವಾಗಿ ದ್ರುಪದನು ಕರ್ಣನಿಗೆ ಕೊಟ್ಟು ಕಳುಹಿಸಿದನು. ದ್ರುಪದನನ್ನು ದುರ್ಯೋಧನನ ಆಶ್ರಿತರಾಜನನ್ನಾಗಿ ಮಾಡಿದ ನಂತರ ದ್ರುಪದನ ಆಶ್ರಿತರಾಜರೆಲ್ಲರನ್ನೂ ಗೆದ್ದು ಅವರಿಂದಲೂ ಕರ್ಣನು ಕಪ್ಪ-ಕಾಣಿಕೆಗಳನ್ನು ಪಡೆದನು. ಅನಂತರದಲ್ಲಿ ಉತ್ತರ ದಿಕ್ಕಿಗೆ ಪ್ರಯಾಣಮಾಡಿದ ಕರ್ಣನು ಆ ದಿಕ್ಕಿನಲ್ಲಿದ್ದವರೆಲ್ಲರನ್ನೂ ಜಯಿಸಿ ಆ ದಿಕ್ಕಿನಲ್ಲಿ ಪ್ರಮುಖರಾಜನೆನಿಸಿದ್ದ ಭಗದತ್ತನನ್ನೂ ಸೋಲಿಸಿ ಹಿಮವತ್ಪರ್ವತದ ಕಡೆಗೆ ಧಾವಿಸಿದನು. ಹಿಮವತ್ಪರ್ವತದ ತಪ್ಪಲಲ್ಲಿದ್ದ ರಾಜ್ಯಗಳೆಲ್ಲವನ್ನೂ ಒಂದಾದ ಮೇಲೆ ಮತ್ತೊಂದರಂತೆ ಮುತ್ತಿ ಅಲ್ಲಿಯ ರಾಜರೆಲ್ಲರನ್ನೂ ಗೆದ್ದು ಅವರುಗಳಿಂದಲೂ ಹೇರಳವಾದ ಕಪ್ಪ-ಕಾಣಿಕೆಗಳನ್ನು ದುರ್ಯೋಧನನ ಸಲುವಾಗಿ ಪಡೆದನು. ಮುಂದೆ ನಡೆದು ನೇಪಾಳವೇ ಮೊದಲಾದ ರಾಜ್ಯಗಳನ್ನು ಗೆದ್ದುಕೊಂಡು ಅನಂತರದಲ್ಲಿ ಹಿಮವತ್ಪರ್ವತದ ತಪ್ಪಲಿನಿಂದ ಕೆಳಗಿಳಿದು ಪೂರ್ವಾಭಿಮುಖವಾಗಿ ಪ್ರಯಾಣಮಾಡಿ ಪೂರ್ವದಿಕ್ಕಿನಲ್ಲಿದ್ದ ಅಂಗ, ವಂಗ, ಕಳಿಂಗ, ಶುಂಡಿಕ, ಮಿಥಿಲ, ಮಗಧ, ಕರ್ಕಖಂಡ, ಆವಶೀರ, ಯೋಧ್ಯ, ಅಹಿಕ್ಷತ್ರ–ಮುಂತಾದ ರಾಜ್ಯಗಳನ್ನು ಮುತ್ತಿ ಅಲ್ಲಿಯ ರಾಜರೆಲ್ಲರನ್ನೂ ಸೋಲಿಸಿ ಅವರಿಂದ ಯಥೇಚ್ಛವಾದ ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸಿಕೊಂಡು ಮಹಾರಥನಾದ ಕರ್ಣನು ವತ್ಸಭೂಮಿಗೆ ಪ್ರಯಾಣ ಮಾಡಿದನು. ವತ್ಸಭೂಮಿಯ ರಾಜನನ್ನೂ ಸೋಲಿಸಿ ಮುಂದೆ ಪ್ರಯಾಣ ಮಾಡಿ ಕೇವಲಾ, ಮೃತ್ತಿಕಾವತೀ, ಮೋಹನ, ಪತ್ತನ, ತ್ರಿಪುರೀ, ಕೋಸಲಾ– ಇವೇ ಮುಂತಾದ ರಾಜ್ಯಗಳೆಲ್ಲವನ್ನೂ ಗೆದ್ದು ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸಿಕೊಂಡು ಕರ್ಣನು ದಕ್ಷಿಣದಿಕ್ಕಿನ ಕಡೆಗೆ ಪ್ರಯಾಣಮಾಡಿದನು. ಅಲ್ಲಿಯೂ ಸಹ ಅನೇಕರಾಜರನ್ನು ಗೆದ್ದು ದಾಕ್ಷಿಣಾತ್ಯರಾಜರಲ್ಲಿ ಮುಖ್ಯನಾಗಿದ್ದ ರುಕ್ಮಿಯ ರಾಜ್ಯಕ್ಕೆ ಮುತ್ತಿಗೆ ಹಾಕಿದನು. ರುಕ್ಮಿಗೂ-ಕರ್ಣನಿಗೂ ಭಯಂಕರವಾದ ಯುದ್ಧವು ಅನೇಕದಿನಗಳವರೆಗೆ ನಡೆಯಿತು. ಕಟ್ಟಕಡೆಗೆ ರುಕ್ಮಿಯು ಕರ್ಣನನ್ನು ಕುರಿತು ಹೀಗೆಂದು ಹೇಳಿದನು :

"ಕರ್ಣ! ನಾನು ನಿನ್ನ ಶಕ್ತಿಗೂ ಮತ್ತು ಪರಾಕ್ರಮಕ್ಕೂ ಮೆಚ್ಚಿದ್ದೇನೆ. ನಾನು ಯುದ್ಧವನ್ನು ಮುಂದುವರಿಸಿ ನಿನ್ನ ದಿಗ್ವಿಜಯಕ್ಕೆ ತಡೆ

ಮಾಡಲು ಹೋಗುವುದಿಲ್ಲ. ಕ್ಷತ್ರಿಯವೀರನ ಕರ್ತವ್ಯದಂತೆ ನಾನು ನಿನ್ನನ್ನು ಪ್ರತಿಭಟಿಸಿದೆನು. ನೀನು ಅಪೇಕ್ಷಿಸುವಷ್ಟು ಸುವರ್ಣವನ್ನು ಸಂತೋಷ ದಿಂದಲೇ ಅರ್ಪಿಸುವೆನು." ಹೀಗೆಂದು ಹೇಳಿದ ರುಕ್ಮಿರಾಜನೊಡನೆ ಕರ್ಣನು ಮೈತ್ರಿಯನ್ನು ಮಾಡಿಕೊಂಡು, ಅವನನ್ನೂ ಕರೆದುಕೊಂಡು ಪಾಂಡ್ಯದೇಶ ವನ್ನೂ ಮತ್ತು ಶೈಲದೇಶವನ್ನೂ ಮುತ್ತಿ ಅಲ್ಲಿಯ ರಾಜರನ್ನೂ ಸೋಲಿಸಿ ಅವರುಗಳಿಂದ ಕಪ್ಪ-ಕಾಣಿಕೆಗಳನ್ನು ಯಥೇಚ್ಛವಾಗಿ ಪಡೆದನು. ಅಲ್ಲಿಂದ ಮುಂದೆ ಕೇರಳದೇಶಕ್ಕೆ ಹೋಗಿ ಅಲ್ಲಿಯ ರಾಜನಾದ ನೀಲನೆಂಬ ಮಹೀಪತಿ ಯನ್ನೂ ಸೋಲಿಸಿ, ಅಲ್ಲಿಂದಲೂ ಮುಂದಕ್ಕೆ ಪ್ರಯಾಣಮಾಡಿ ವೇಣುದಾರಿ ರಾಜನ ಮಗನನ್ನೂ ಮತ್ತು ಆ ರಾಜ್ಯದ ಸುತ್ತಲೂ ಇದ್ದ ಇತರ ಸಣ್ಣ-ಪುಟ್ಟ ರಾಜ್ಯಗಳನ್ನೂ ಗೆದ್ದು ದಕ್ಷಿಣದ ರಾಜ್ಯಗಳೆಲ್ಲವನ್ನೂ ದುರ್ಯೋಧನನ ಆಧಿ ಪತ್ಯಕ್ಕೆ ಸೇರಿಸಿಬಿಟ್ಟನು.

ಅಲ್ಲಿಂದ ಮುಂದೆ ಶಿಶುಪಾಲನ ರಾಜ್ಯಕ್ಕೆ ಹೋಗಿ ಅಲ್ಲಿ ಅದೇ ಸಮಯ ದಲ್ಲಿ ರಾಜ್ಯವಾಳುತ್ತಿದ್ದ ಶಿಶುಪಾಲನ ಮಗನನ್ನು ಯುದ್ಧದಲ್ಲಿ ಸೋಲಿಸಿ ಅವನಿಂದಲೂ ಕಪ್ಪ-ಕಾಣಿಕೆಗಳನ್ನು ಪಡೆದು ಆ ರಾಜ್ಯದ ಸುತ್ತಲೂ ಇದ್ದ ಸಣ್ಣ-ಪುಟ್ಟ ದೇಶಗಳೆಲ್ಲವನ್ನೂ ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಅನಂತರದಲ್ಲಿ ಅವಂತೀದೇಶದ ರಾಜರನ್ನು ಸಾಮೋಪಾಯದಿಂದಲೇ ವಶ ಪಡಿಸಿಕೊಂಡು, ಯಾದವರನ್ನೂ ಕೂಡಿಕೊಂಡು ಮುಂದೆ ಹೊರಟು ಪಶ್ಚಿಮ ದೇಶಗಳೆಲ್ಲವನ್ನೂ ಒಂದಾದ ಮೇಲೆ ಮತ್ತೊಂದರಂತೆ ಸ್ವಾಧೀನಪಡಿಸಿ ಕೊಂಡನು. ಪಶ್ಚಿಮದಲ್ಲಿದ್ದ ಯವನರನ್ನೂ, ಬರ್ಬರರನ್ನೂ ಸೋಲಿಸಿ ಅವರ ರಾಜ್ಯಗಳನ್ನೂ ದುರ್ಯೋಧನನ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡನು.

ಈ ರೀತಿಯಾಗಿ ಕರ್ಣನು ಪೂರ್ವ-ಪಶ್ಚಿಮ-ದಕ್ಷಿಣೋತ್ತರಗಳಲ್ಲಿದ್ದ ಪಾಳೆಯಗಾರರನ್ನೂ ಜಯಿಸಿ ಅವರನ್ನೂ ದುರ್ಯೋಧನನಿಗೆ ಆಶ್ರಿತರಾಜ ರನ್ನಾಗಿ ಮಾಡಿದನು. ಭದ್ರರು, ರೋಹಿತಕರು, ಆಗ್ರೇಯರು, ಮಾಲವರು– ಇವರೇ ಮುಂತಾದ ಅನೇಕ ಮ್ಲೇಚ್ಛರನ್ನೂ ಕರ್ಣನು ಜಯಿಸಿ ಯಥೇಚ್ಛವಾದ ಕಪ್ಪ-ಕಾಣಿಕೆಗಳನ್ನು ಪಡೆದನು.

ಶಶಕರೆಂಬುವರನ್ನೂ, ಯವನರನ್ನೂ, ನಗ್ನಜಿತ್ಪ್ರಮುಖರಾದ ಅನೇಕಾ ನೇಕ ಮಹಾರಥರನ್ನೂ ಕರ್ಣನು ಸೋಲಿಸಿದನು. ಕರ್ಣನು ಈ ರೀತಿಯಾಗಿ

ಅಖಂಡಭೂಮಂಡಲವನ್ನೇ ಏಕಾಕಿಯಾಗಿ ಗೆದ್ದು ಹಸ್ತಿನಾಪುರಕ್ಕೆ ಹಿಂದಿರುಗಿದನು.

ಕರ್ಣನು ದಿಗ್ವಿಜಯಮಾಡಿ ಹಸ್ತಿನಾಪಟ್ಟಣಕ್ಕೆ ಸೈನ್ಯಸಮೇತನಾಗಿ ಬರುತ್ತಿರುವನೆಂದು ತಿಳಿದೊಡನೆಯೇ ಆನಂದಭರಿತನಾದ ದುರ್ಯೋಧನನು ತನ್ನ ತಂದೆಯಿಂದಲೂ, ಅನುಜರಿಂದಲೂ ಮತ್ತು ಬಂಧು-ಮಿತ್ರರಿಂದಲೂ ಒಡಗೂಡಿದವನಾಗಿ ಹೆಬ್ಬಾಗಿಲಿನಲ್ಲಿ ಕರ್ಣನಿಗೆ ಅದ್ಭುತವಾದ ಸ್ವಾಗತವಿತ್ತನು. ಕರ್ಣನ ಗುಣಗಾನಮಾಡುತ್ತಾ ದುರ್ಯೋಧನನು ಕರ್ಣನನ್ನು ಕುರಿತು ಹೀಗೆಂದು ಹೇಳಿದನು :

"ಕರ್ಣ! ಅಖಂಡಭೂಮಂಡಲವನ್ನೇ ನನಗಾಗಿ ಜಯಿಸಿ, ಎಲ್ಲ ರಾಜರಿಂದಲೂ ಕಪ್ಪ-ಕಾಣಿಕೆಗಳನ್ನು ಪಡೆದು ಬಂದಿರುವ ನಿನಗೆ ಸ್ವಾಗತವು. ಭೀಷ್ಮನಾಗಲೀ, ದ್ರೋಣರಾಗಲೀ, ಕೃಪರಾಗಲೀ, ಬಾಹ್ಲೀಕನಾಗಲೀ ನನಗೆ ಅತ್ಯಂತಪ್ರಿಯವಾದ ಯಾವುದನ್ನು ಸಾಧಿಸಿಕೊಡಲಿಲ್ಲವೋ ಅದನ್ನಿಂದು ನೀನು ಸಾಧಿಸಿಕೊಟ್ಟಿರುವೆ. ಮಹಾಸಾಮ್ರಾಜ್ಯವನ್ನು ನೀನಿಂದು ನಿನ್ನ ಅತುಲ ಭುಜಬಲ-ಪರಾಕ್ರಮಗಳಿಂದ ಜಯಿಸಿಕೊಟ್ಟಿರುವೆ. ನಿನಗೆ ಮಂಗಳವಾಗಲಿ. ಹೆಚ್ಚು ಮಾತನಾಡಿ ಪ್ರಯೋಜನವೇನು, ಕರ್ಣ! ನಾನು ಹೇಳುವ ಈ ಮಾತುಗಳನ್ನು ಕೇಳು :

**ಸನಾಥೋಽಸ್ಮಿ ಮಹಾಬಾಹೋ ತ್ವಯಾ ನಾಥೇನ ಸತ್ತಮ ।**
**ನ ಹಿ ತೇ ಪಾಣ್ಡವಾಃ ಸರ್ವೇ ಕಲಾಮರ್ಹನ್ತಿ ಷೋಡಶೀಮ್ ॥**

ನೀನಿಂದು ನನಗೂ ನಾಥನಾಗಿರುವೆ. ನಿನ್ನಿಂದ ನಾನು ಸನಾಥನಾಗಿರುತ್ತೇನೆ. ನೀನು ನನಗೆ ಆಶ್ರಯಭೂತನಾಗಿರುವೆ. ಎಲ್ಲ ಪಾಂಡವರೂ ಮತ್ತು ಈ ಪ್ರಪಂಚದಲ್ಲಿರುವ ಸಕಲ ರಾಜರೂ ನಿನಗಿರುವ ಪರಾಕ್ರಮದಲ್ಲಿ ಹದಿನಾರನೆಯ ಒಂದು ಭಾಗಕ್ಕೆ ಸಾಟಿಯಾಗಲಾರರು. ಇಲ್ಲಿ ನೋಡು, ಕರ್ಣ! ವಿಜಯಯಾತ್ರೆಮಾಡಿ ಬಂದು ದೇವೇಂದ್ರನು ಅದಿತಿಯನ್ನು ನೋಡಲು ಹೋಗುವಂತೆ–ದಿಗ್ವಿಜಯಯಾತ್ರೆಯನ್ನು ಯಶಸ್ವಿಯಾಗಿ ಮುಗಿಸಿಕೊಂಡು ಬಂದಿರುವ ನೀನು ನನ್ನ ತಂದೆಯಾದ ಧೃತರಾಷ್ಟ್ರಮಹಾರಾಜ, ತಾಯಿಯಾದ ಗಾಂಧಾರೀ ಇಬ್ಬರನ್ನೂ ಸಂದರ್ಶಿಸು. (ಅವರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆಯುವವನಾಗು.)"

ಜನಮೇಜಯ! ದುರ್ಯೋಧನನು ಈ ರೀತಿಯಲ್ಲಿ ಭೀಷ್ಮ-ದ್ರೋಣಾದಿ ಮಹಾವೀರರೆಲ್ಲರನ್ನೂ ಮೂದಲಿಸಿ ಕರ್ಣನನ್ನು ಶ್ಲಾಘಿಸಿದುದು ಹಸ್ತಿನಾಪಟ್ಟಣದಲ್ಲಿದ್ದ ಕೆಲವರಿಗೆ ಸಹಿಸದಾಯಿತು. "ಅಯ್ಯೋ! ಈ ದುರ್ಯೋಧನನು ಅವಿವೇಕಿಯಂತೆ ಮಾತನಾಡುತ್ತಿರುವನಲ್ಲಾ! ಭೀಷ್ಮ-ದ್ರೋಣರನ್ನು ಈ ಪರಿಯಾಗಿ ತೆಗಳಬಹುದೇ?"–ಎಂದು ಉದ್ಗಾರಮಾಡಿದರು. ಮತ್ತೆ ಕೆಲವರು ದುರ್ಯೋಧನನಂತೆ ತಾವೂ ಸಹ ಕರ್ಣನನ್ನು ಮುಕ್ತಕಂಠದಿಂದ ಹೊಗಳಿದರು. ಮತ್ತೆ ಕೆಲವರು ಹೊಗಳಲೂ ಹೋಗಲಿಲ್ಲ; ತೆಗಳಲೂ ಹೋಗಲಿಲ್ಲ. ಜನಮೇಜಯ! ಈ ರೀತಿಯಾಗಿ ಕರ್ಣನು ಅತ್ಯಲ್ಪಕಾಲದಲ್ಲಿ ಪರ್ವತಗಳಿಂದಲೂ-ಅರಣ್ಯಗಳಿಂದಲೂ ಪರಿವೃತವಾದ, ಸಮುದ್ರಾಂತವಾದ, ಹಳ್ಳ-ತಿಟ್ಟುಗಳಿಂದಲೂ ಗಿರಿ-ದುರ್ಗಗಳಿಂದಲೂ ಕೂಡಿರುವ, ಪಟ್ಟಣ-ನಗರ-ದ್ವೀಪಗಳಿಂದ ಅಲಂಕೃತವಾಗಿರುವ ಈ ಅಖಂಡಭೂಮಂಡಲವನ್ನೂ ಗೆದ್ದು ಅಕ್ಷಯವಾದ ಅಷ್ಟೈಶ್ವರ್ಯವನ್ನೂ ಸಂಗ್ರಹಿಸಿಕೊಂಡು ದುರ್ಯೋಧನನ ಸಮೀಪಕ್ಕೆ ಆಗಮಿಸಿದನು.

ಅರಮನೆಯೊಳಗೆ ಪ್ರವೇಶಮಾಡುತ್ತಲೇ ಕರ್ಣನು ಗಾಂಧಾರಿಯೊಡನಿದ್ದ ಧೃತರಾಷ್ಟ್ರನ ಪಾದಗಳನ್ನು ಮುಟ್ಟಿ, ಮಗನಾದವನು ತಂದೆಗೆ ನಮಸ್ಕರಿಸುವಂತೆಯೇ ರಾಜನಿಗೆ ನಮಸ್ಕರಿಸಿದನು. ಧೃತರಾಷ್ಟ್ರನೂ ಸಹ ಮಗನನ್ನು ಬಾಚಿ ತಬ್ಬಿಕೊಳ್ಳುವಂತೆಯೇ ವಿಜಯಿಯಾಗಿ ಆಗಮಿಸಿದ ಕರ್ಣನ ಭುಜಗಳನ್ನು ಹಿಡಿದು ಮೇಲೆತ್ತಿ ಬಾಚಿತಬ್ಬಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಸಾಂತ್ವವಚನಗಳನ್ನಾಡಿ ಬೀಳ್ಕೊಟ್ಟನು. ಕರ್ಣನ ಆ ವಿಜಯದಿಂದಾಗಿ ಪಾಂಡವರು ಸಮರದಲ್ಲಿ ಪರಾಜಿತರಾದರೆಂದೇ ಶಕುನಿ-ದುರ್ಯೋಧನರು ಭಾವಿಸಿಬಿಟ್ಟರು. ಕರ್ಣನ ವಿಜಯವು ದುರ್ಯೋಧನನ ಮನಸ್ಸಿನಲ್ಲಿ ಕರ್ಣನ ಪರಾಕ್ರಮದ ವಿಷಯವಾಗಿ ಅಚಲವಾದ ವಿಶ್ವಾಸವನ್ನು ಮೂಡಿಸಿತು.

೨೫೪ನೆಯ ಅಧ್ಯಾಯವು ಮುಗಿಯಿತು.

೨೫೫ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ಕರ್ಣನ ಮತ್ತು ಪುರೋಹಿತರ ಸಲಹೆಯಂತೆ ದುರ್ಯೋಧನನು ವೈಷ್ಣವಯಾಗವನ್ನು ಮಾಡಲು ಉಪಕ್ರಮಿಸಿದುದು

ಜನಮೇಜಯ! ಸಂತುಷ್ಟಮನಸ್ಕರಾದ ಕರ್ಣ-ದುರ್ಯೋಧನರಿಬ್ಬರೂ ಏಕಾಂತಗೃಹದಲ್ಲಿ ಕುಳಿತು ಮಾತನಾಡುತ್ತಿದ್ದರು. ಸಕಲರಾಜರನ್ನೂ ಜಯಿಸಿ ನಗರಿಗೆ ಆಗಮಿಸಿದ್ದ, ಶತ್ರುರಾಜರನ್ನು ವಿಧ್ವಂಸಮಾಡುವ ಸಾಮರ್ಥ್ಯವುಳ್ಳ ಸೂತಪುತ್ರನು ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ದುರ್ಯೋಧನ! ನಾನು ಹೇಳುವ ಈ ಮಾತುಗಳನ್ನು ನಿನ್ನ ಮನಸ್ಸಿಗೆ ತೆಗೆದುಕೊಂಡು ನಾನು ಹೇಳಿದಂತೆಯೇ ಆಚರಿಸುವುದು ನಿನಗೆ ಯುಕ್ತವಾಗಿದೆ. ಈ ನಿನ್ನ ಸಾಮ್ರಾಜ್ಯವೀಗ ನಿಃಸಪತ್ನವಾದ ಸಾಮ್ರಾಜ್ಯವಾಗಿದೆ. ನಿನಗೀಗ ಶತ್ರುಗಳೆಂಬುವವರೇ ಇಲ್ಲ. ಇಂತಹ ರಾಜ್ಯವನ್ನು ನೀನು ಹತಶತ್ರುವಾದ ಪುರಂದರನಂತೆಯೇ (ಇಂದ್ರ) ಪರಿಪಾಲಿಸುವವನಾಗು."

ಜನಮೇಜಯ! ಕರ್ಣನ ಮಾತನ್ನು ಕೇಳಿ ಸಂತುಷ್ಟನಾದ ದುರ್ಯೋಧನನು ಕರ್ಣನನ್ನು ಕುರಿತು ಹೇಳಿದನು :

**ನ ಕಿಂಚಿದ್ದುರ್ಲಭಂ ತಸ್ಯ ಯಸ್ಯ ತ್ವಂ ಪುರುಷರ್ಷಭ ।**
**ಸಹಾಯಶ್ಚಾನುರಕ್ತಶ್ಚ ಮದರ್ಥಂ ಚ ಸಮುದ್ಯತಃ ॥೪॥**

"ಕರ್ಣ! ನೀನು ಯಾರಿಗೆ ಸಹಾಯಕನಾಗಿರುವೆಯೋ ಮತ್ತು ಯಾರ ವಿಷಯದಲ್ಲಿ ಅನುರಕ್ತನಾಗಿರುವೆಯೋ–ಅಂತಹವನಿಗೆ ಈ ವಿಶ್ವದಲ್ಲಿಯೇ ದುರ್ಲಭವಾದುದು ಯಾವುದೂ ಇಲ್ಲ. ಮೇಲಾಗಿ ನೀನಿಂದು ನನ್ನ ಅಭ್ಯುದಯದಲ್ಲಿಯೇ ಕೃತಸಂಕಲ್ಪನಾಗಿರುವೆ. ಈಗ ನನ್ನದೊಂದು ಅಭಿಲಾಷೆಯಿದೆ. ಅದನ್ನು ನಿನ್ನೊಡನೆ ಯಥಾವತ್ತಾಗಿ ಹೇಳುವೆನು ಕೇಳು, ಕರ್ಣ! ಅಂದು ಪಾಂಡುಪುತ್ರನು ಮಾಡಿದ ರಾಜಸೂಯಯಾಗವನ್ನು ನೋಡಿದ ನನಗೆ ಆ ಮಹಾಯಾಗವನ್ನು ನಾನೂ ಒಮ್ಮೆ ಮಾಡಬೇಕೆಂಬ

ಆಶಯವು ಬಹಳ ದಿನಗಳಿಂದಿದೆ. ಈ ನನ್ನ ಆಶಯವನ್ನು ನೀನು ಪೂರ್ಣ ಮಾಡಿಕೊಡಲಾರೆಯಾ?"

ಅದಕ್ಕುತ್ತರವಾಗಿ ಕರ್ಣನು ಹೇಳಿದನು : "ದುರ್ಯೋಧನ! ರಾಜಸೂಯಯಾಗಮಾಡಲು ವಿಶ್ವದ ರಾಜರೆಲ್ಲರನ್ನೂ ಜಯಿಸಬೇಕಾದುದು ಮೊದಲನೆಯ ಕರ್ತವ್ಯ. ಇದನ್ನು ನಾನಾಗಲೇ ಮಾಡಿ ಮುಗಿಸಿಬಿಟ್ಟಿದ್ದೇನೆ. ವಿಶ್ವದ ರಾಜರೆಲ್ಲರೂ ಇಂದು ನಿನ್ನ ಆಶ್ರಿತರಾಗಿರುತ್ತಾರೆ. ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನೂ ಸಂಗ್ರಹಿಸಿ ನಿನಗಾಗಿ ತಂದಿರುತ್ತೇನೆ. ಆದುದರಿಂದ ನೀನೀಗಲೇ ತಜ್ಞರಾದ ಬ್ರಾಹ್ಮಣರನ್ನು ಕರೆಯಿಸಿ, ರಾಜಸೂಯಯಾಗಕ್ಕೆ ಬೇಕಾಗಬಹುದಾದ ಸಂಭಾರಗಳನ್ನು ಸಂಗ್ರಹಿಸುವವನಾಗು. ವೇದವಿದರಾದ ಬ್ರಾಹ್ಮಣರು ಈ ನಿನ್ನ ಯಜ್ಞದಲ್ಲಿ ಆರ್ತ್ವಿಜ್ಯವನ್ನು ವಹಿಸಿ ಯಥಾಶಾಸ್ತ್ರವಾಗಿ ತಮ್ಮ ತಮ್ಮ ಕರ್ತವ್ಯಗಳನ್ನು ಪರಿಪಾಲಿಸಲಿ. ಅನ್ನ-ಪಾನಸಮೃದ್ಧವಾದ, ಬಹುಗುಣಯುಕ್ತವಾದ ಆ ಮಹಾಯಜ್ಞವು ಈಗಲೇ ಪ್ರಾರಂಭಿಸಲ್ಪಡಲಿ. ನಿನ್ನ ಇಚ್ಛೆಯಂತೆ ನೀನೇ ಆ ಮಹಾಯಾಗಕ್ಕೆ ಯಜಮಾನನಾಗು."

ಜನಮೇಜಯ! ಕರ್ಣನು ಹೀಗೆಂದು ಆಶ್ವಾಸನೆಯನ್ನಿತ್ತ ಕೂಡಲೇ ದುರ್ಯೋಧನನು ಆನಂದಭರಿತನಾಗಿ ಪುರೋಹಿತರನ್ನು ಕರೆಯಿಸಿ ಅವರನ್ನು ಕುರಿತು ಹೀಗೆಂದು ಹೇಳಿದನು :

"ಬ್ರಾಹ್ಮಣೋತ್ತಮರೇ! ನೀವು ನನ್ನ ಸಲುವಾಗಿ ಬಹುದಕ್ಷಿಣಾಕವಾದ ಸುಪ್ರಸಿದ್ಧವಾದ ರಾಜಸೂಯಯಾಗವನ್ನು ಯಥಾಶಾಸ್ತ್ರವಾಗಿ ಮಾಡಲು ಬೇಕಾಗುವ ಸಂಭಾರಗಳನ್ನು ಸಿದ್ಧಪಡಿಸಿರಿ." ಹೀಗೆಂದು ಪ್ರಾರ್ಥಿಸಿದ ಸುಯೋಧನನನ್ನು ಕುರಿತು ಪುರೋಹಿತರು ಈ ರೀತಿ ಹೇಳಿದರು :

"ಮಹಾರಾಜ! ರಾಜಸೂಯಯಾಗವನ್ನು ಮಾಡಿರುವ ಯುಧಿಷ್ಠಿರನು ಜೀವಿಸಿರುವಾಗ ನಿಮ್ಮ ವಂಶದಲ್ಲಿ ಮತ್ತಾರೂ ಆ ಮಹಾಯಾಗವನ್ನು ಮಾಡುವ ಸಾಧ್ಯತೆಯಿಲ್ಲ. ಹಾಗೆ ಮಾಡುವುದಾದರೆ ಶಾಸ್ತ್ರಕ್ಕೆ ವಿರುದ್ಧವಾಗಿ ವರ್ತಿಸಿದಂತಾಗುತ್ತದೆ. ಮೇಲಾಗಿ ದೀರ್ಘಾಯುವಾದ ಧೃತರಾಷ್ಟ್ರನೂ ಜೀವಂತನಾಗಿರುತ್ತಾನೆ. ಈ ಕಾರಣದಿಂದಲೂ ನೀನು ಆ ಮಹಾಯಾಗ

ವನ್ನು ಮಾಡುವ ಸಾಧ್ಯತೆಯಿಲ್ಲ. ಆದರೆ ಇದರಿಂದ ನೀನು ನಿರಾಶನಾಗ ಬೇಕಾದ ಕಾರಣವಿಲ್ಲ. ರಾಜಸೂಯಮಹಾಯಾಗಕ್ಕೆ ಸಮಾನವಾದ ಮತ್ತೊಂದು ಮಹಾಯಾಗವಿರುವುದು. ಆ ಯಾಗವನ್ನು ನೀನು ಮಾಡು. ನಾವು ಆ ಯಾಗದ ವಿಷಯವಾಗಿ ಹೇಳುವ ಈ ಮಾತುಗಳನ್ನು ಏಕಾಗ್ರತೆ ಯಿಂದ ಕೇಳುವವನಾಗು.

ಆ ಯಾಗವನ್ನು ಮಾಡಬೇಕಾದರೂ ರಾಜಸೂಯದಂತೆಯೇ ಯಾಗ ಮಾಡುವ ಮೊದಲು ಪೃಥ್ವಿಯ ರಾಜರೆಲ್ಲರನ್ನೂ ಜಯಿಸಬೇಕೆಂಬ ಶಾಸ್ತ್ರ ನಿಯಮವಿರುತ್ತದೆ. ನೀನಾಗಲೇ ಎಲ್ಲ ರಾಜರನ್ನೂ ನಿನ್ನ ಆಶ್ರಿತರಾಜರನ್ನಾಗಿ ಮಾಡಿಕೊಂಡುಬಿಟ್ಟಿರುವೆ. ಅವರು ನಿನಗೆ ಯಾಗಕ್ಕಾಗಿ ಯಥೇಚ್ಛವಾದ ಕಪ್ಪ-ಕಾಣಿಕೆಗಳನ್ನೂ ಕಳುಹಿಸಿಕೊಡಲಿ. ಅವರು ಗಟ್ಟಿಯ ರೂಪದಲ್ಲಿ ಮತ್ತು ನಾಣ್ಯದ ರೂಪದಲ್ಲಿ ಕಳುಹಿಸುವ ಸುವರ್ಣವನ್ನು ಒಟ್ಟಾಗಿ ಕರಗಿಸಿ ಅದರಿಂದ ಯಜ್ಞಭೂಮಿಯನ್ನು ಉಳುವ ಸಲುವಾಗಿ ಒಂದು ನೇಗಿಲನ್ನು ಸಿದ್ಧಪಡಿಸು. ಅನಂತರದಲ್ಲಿ ಸುವರ್ಣಮಯವಾದ ಆ ನೇಗಿಲಿನಿಂದ ಭೂಮಿಯನ್ನು ಉತ್ತು ಸಿದ್ಧಗೊಳಿಸಿ, ಯಜ್ಞಮಂಟಪವನ್ನು ಯಥಾವಿಧಿಯಾಗಿ ಸಿದ್ಧಪಡಿಸು. ಆ ಯಜ್ಞಮಂಟಪದಲ್ಲಿ ಯಥಾಶಾಸ್ತ್ರವಾಗಿ ನಿರ್ವಿಘ್ನವಾಗಿ ಯಜ್ಞವು ಆರಂಭಿಸಲ್ಪಡಲಿ. ಸುಸಂಸ್ಕೃತವಾದ ಅನ್ನ-ಪಾನಗಳು ಸಿದ್ಧವಾಗಲಿ. ಸತ್ಪುರುಷರಿಂದ ಮಾಡಲು ಯೋಗ್ಯವಾದ ಆ ಮಹಾಯಾಗಕ್ಕೆ ವೈಷ್ಣವಯಾಗವೆಂದು ಹೆಸರು. ಪುರಾತನನಾದ ಮಹಾವಿಷ್ಣುವಿನ ಹೊರತಾಗಿ ಆ ಮಹಾಯಜ್ಞವನ್ನು ಇದುವರೆಗೂ ಯಾರೊಬ್ಬರೂ ಮಾಡಿರುವುದಿಲ್ಲ. ನಿಶ್ಚಯವಾಗಿಯೂ ವೈಷ್ಣವಯಾಗವು ರಾಜಸೂಯಯಾಗದೊಡನೆ ಸ್ಪರ್ಧಿಸುತ್ತದೆ. ನೀನು ವೈಷ್ಣವಮಹಾಯಾಗವನ್ನು ಮಾಡುವುದು ನಮಗೂ ಸೂಕ್ತವಾಗಿ ಕಾಣುತ್ತದೆ. ಆ ಯಾಗವನ್ನು ಮಾಡುವುದರಿಂದ ನಿನಗೂ ಸಹ ಶ್ರೇಯಸ್ಸುಂಟಾಗುತ್ತದೆ. ಮೇಲಾಗಿ ಯಾಗವು ನಿರ್ವಿಘ್ನವಾಗಿ ನಡೆಯುವುದೆಂಬ ಭರವಸೆಯೂ ನಮಗಿದೆ. ಇದರಿಂದಾಗಿ ನಿನ್ನ ಆಶಯವೂ ಸಹ ಪೂರ್ಣವಾದಂತಾಗುತ್ತದೆ."

ಜನಮೇಜಯ! ಪುರೋಹಿತರು ದುರ್ಯೋಧನನಿಗೆ ಹೀಗೆಂದು

ಹೇಳಲಾಗಿ ದುರ್ಯೋಧನನು ಕರ್ಣನನ್ನೂ, ತನ್ನ ಅನುಜರನ್ನೂ ಮತ್ತು ಶಕುನಿಯನ್ನೂ ಕುರಿತೂ ಹೀಗೆಂದು ಹೇಳಿದನು :

"ಕರ್ಣಪ್ರಮುಖರೇ! ದ್ವಿಜಸತ್ತಮರು ಹೇಳಿದ ಮಾತುಗಳು ನನಗೆ ಒಪ್ಪಿಗೆಯಾಗಿವೆ. ಅವರು ಯಥಾರ್ಥವಾದ, ಶಾಸ್ತ್ರವಿಹಿತವಾದ, ಶ್ರೇಯಸ್ಕರವಾದ ಮಾತುಗಳನ್ನೇ ಆಡಿರುತ್ತಾರೆ. ನಮ್ಮ ಪುರೋಹಿತರು ಹೇಳಿದ ಮಾತುಗಳು ನಿಮಗೂ ಒಪ್ಪಿಗೆಯಾಗಿದ್ದರೆ ಕೂಡಲೇ ತಿಳಿಸಿರಿ."

ದುರ್ಯೋಧನನು ಹೀಗೆಂದು ಹೇಳಿದೊಡನೆಯೇ ಅವರೆಲ್ಲರೂ ಏಕ ಕಂಠದಿಂದ **'ತಥಾಸ್ತು'** ಎಂದರು. ಅನಂತರದಲ್ಲಿ ದುರ್ಯೋಧನನು ಒಬ್ಬೊಬ್ಬರಿಗೂ ಯಜ್ಞಕ್ಕೆ ಸಂಬಂಧಿಸಿದ ಒಂದೊಂದು ಕಾರ್ಯವನ್ನು ವಹಿಸಿದನು. ಪುರೋಹಿತರ ನಿರ್ದೇಶಾನುಸಾರವಾಗಿ ಸುವರ್ಣಮಯವಾದ ನೇಗಿಲನ್ನು ಮಾಡಲು ಶಿಲ್ಪಿಗಳಿಗೆ ಆಜ್ಞಾಪಿಸಿದನು.

ಜನಮೇಜಯ! ಯಥೋಕ್ತವಾಗಿ ಯಥಾಕ್ರಮವಾಗಿ ಯಜ್ಞ ಕಾರ್ಯಗಳೆಲ್ಲವೂ ಪ್ರಾರಂಭವಾದುವು."

೨೫೫ನೆಯ ಅಧ್ಯಾಯವು ಮುಗಿಯಿತು.

೨೫೬ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ವೈಷ್ಣವಯಜ್ಞದ ಆರಂಭ ಮತ್ತು ಪರಿಸಮಾಪ್ತಿ

ವೈಶಂಪಾಯನರು ವೈಷ್ಣವಯಾಗದ ವೈಖರಿಯನ್ನು ಜನಮೇಜಯನಿಗೆ ಹೇಳಲುಪಕ್ರಮಿಸಿದರು :

"ಜನಮೇಜಯ! ಶಿಲ್ಪಿಗಳು, ಅಮಾತ್ಯಶ್ರೇಷ್ಠರು, ಮಹಾಪ್ರಾಜ್ಞನಾದ ವಿದುರ–ಇವರೆಲ್ಲರೂ ದುರ್ಯೋಧನನ ಬಳಿಗೆ ಬಂದು ವೈಷ್ಣವಯಜ್ಞಕ್ಕಾಗಿ ಸಕಲಸಂಭಾರಗಳೂ ಸಿದ್ಧವಾಗಿವೆಯೆಂದೂ ಯಜ್ಞವನ್ನು ಉಪಕ್ರಮಿಸ ಬೇಕಾದ ಕಾಲವೂ ಸನ್ನಿಹಿತವಾಯಿತೆಂದೂ ಹೇಳಿದರು. ಮಹಾಮೌಲ್ಯವಾದ ಸುವರ್ಣಮಯವಾದ ನೇಗಿಲು ಸಿದ್ಧವಾಗಿಯೆಂಬುದನ್ನೂ ದುರ್ಯೋಧನ ನಿಗೆ ನಿವೇದಿಸಿದರು. ಅಮಾತ್ಯಶ್ರೇಷ್ಠರ ಮಾತುಗಳನ್ನು ಕೇಳಿ ದುರ್ಯೋಧ ನನು ಮಹಾಯಾಗವನ್ನು ಪ್ರಾರಂಭಿಸಲು ಆಜ್ಞೆನೀಡಿದನು. ಅನಂತರದಲ್ಲಿ

ಮಂತ್ರಪೂತವಾದ ಮತ್ತು ಅನ್ನ-ಪಾನಗಳಿಂದ ಸಮೃದ್ಧವಾದ ವೈಷ್ಣವಯಜ್ಞದ ಅಂಕುರಾರ್ಪಣವು ಶುಭಮುಹೂರ್ತದಲ್ಲಾಯಿತು. ಗಾಂಧಾರಿಯ ಪುತ್ರನಾದ ದುರ್ಯೋಧನನು ಯಥಾಶಾಸ್ತ್ರವಾಗಿ ಯಥಾಕ್ರಮವಾಗಿ ಯಜ್ಞಕ್ಕೆ ದೀಕ್ಷಿತನಾದನು. ದುರ್ಯೋಧನನು ಯಾಗದೀಕ್ಷೆಯನ್ನು ಕೈಗೊಳ್ಳಲಾಗಿ ಧೃತ ರಾಷ್ಟ್ರನೂ, ಧರ್ಮಾತ್ಮನಾದ ವಿದುರನೂ, ಭೀಷ್ಮ-ದ್ರೋಣ-ಕೃಪ-ಕರ್ಣರೂ ಮತ್ತು ಗಾಂಧಾರಿಯೂ ಅಮಿತಾನಂದವನ್ನು ಹೊಂದಿದರು. ರಾಜನಾದ ದುರ್ಯೋಧನನು ತನ್ನ ಚಕ್ರಾಧಿಪತ್ಯದಲ್ಲಿದ್ದ ರಾಜರನ್ನೂ ಮತ್ತು ಬ್ರಾಹ್ಮಣ ಶ್ರೇಷ್ಠರನ್ನೂ ಆಹ್ವಾನಿಸುವ ಸಲುವಾಗಿ ಶೀಘ್ರಗಾಮಿಗಳಾದ ದೂತರನ್ನು ಕಳುಹಿಸಿಕೊಟ್ಟನು.

ಶೀಘ್ರಗಾಮಿಗಳಾದ ವಾಹನಗಳಲ್ಲಿ ಕುಳಿತು ತಮಗೆ ನಿರ್ದೇಶಿತವಾದ ದಿಕ್ಕುಗಳ ಕಡೆಗೆ ದೂತರು ಪ್ರಯಾಣಹೊರಟರು. ಈ ರೀತಿಯಲ್ಲಿ ದುರ್ಯೋಧನನ ಆಜ್ಞಾನುಸಾರವಾಗಿ ಒಂದೊಂದು ದಿಕ್ಕಿಗೂ ಅನೇಕ ದೂತರು ಪ್ರಯಾಣಹೊರಡುತ್ತಿದ್ದಾಗ, ಒಬ್ಬ ದೂತನನ್ನು ಕರೆದು ದುಃಶಾಸನನು ಹೀಗೆಂದು ಹೇಳಿದನು :

**ಗಚ್ಛ ದ್ವೈತವನಂ ಶೀಘ್ರಂ ಪಾಣ್ಡವಾನ್ಪಾಪಪೂರುಷಾನ್ ।**
**ನಿಮನ್ತ್ರಯ ಯಥಾನ್ಯಾಯಂ ವಿಪ್ರಾಂಸ್ತಸ್ಮಿನ್ವನೇ ತದಾ ॥೮॥**

"ನೀನು ಈ ಕೂಡಲೇ ದ್ವೈತವನಕ್ಕೆ ಪ್ರಯಾಣಮಾಡು. ದ್ವೈತವನ ದಲ್ಲಿರುವ ಪಾಪಪುರುಷರಾದ ಪಾಂಡವರನ್ನೂ ಮತ್ತು ಅವರೊಡನಿರುವ ವಿಪ್ರಶ್ರೇಷ್ಠರನ್ನೂ ಯಥಾಯೋಗ್ಯವಾಗಿ ಈ ಮಹಾಯಾಗಕ್ಕೆ ಆಮಂತ್ರಿಸು."

ದುಃಶಾಸನನ ಆಜ್ಞಾನುಸಾರವಾಗಿ ದೂತನು ದ್ವೈತವನದಲ್ಲಿದ್ದ ಪಾಂಡ ವರ ಆಶ್ರಮಕ್ಕೆ ಹೋಗಿ ಅವರನ್ನು ಸಂಧಿಸಿ ಕೈಜೋಡಿಸಿ ನಿಂತು ಹೀಗೆಂದು ಹೇಳಿದನು :

"ಪಾಂಡುಪುತ್ರರೇ! ನಿಮಗೆ ಮಂಗಳವಾಗಲಿ. ನಮ್ಮ ರಾಜನಾದ ದುರ್ಯೋಧನನು ತನ್ನ ಬಾಹುಬಲ-ಪರಾಕ್ರಮಗಳಿಂದ ಹೇರಳವಾದ ಐಶ್ವರ್ಯವನ್ನು ಸಂಪಾದಿಸಿ ವೈಷ್ಣವವೆಂಬ ಮಹಾಯಾಗವನ್ನು ಮಾಡಲುಪ

ಕ್ರಮಿಸಿದ್ದಾನೆ. ಬ್ರಾಹ್ಮಣರೂ ಮತ್ತು ರಾಜಾಧಿರಾಜರೂ ನಾನಾದೇಶಗಳಿಂದ ಸಾಲುಸಾಲಾಗಿ ಆ ಮಹಾಯಜ್ಞವನ್ನು ನೋಡಲು ನಮ್ಮ ರಾಜನ ಆಮಂತ್ರಣವನ್ನು ಸ್ವೀಕರಿಸಿ ಆಗಮಿಸುತ್ತಿದ್ದಾರೆ.

ನಿಮ್ಮನ್ನೂ ಸಹ ಆ ಮಹಾಯಾಗಕ್ಕೆ ಆಮಂತ್ರಿಸುವ ಸಲುವಾಗಿ ಮಹಾತ್ಮನಾದ ಕೌರವರಾಜನಿಂದ ನಾನು ತಮ್ಮ ಬಳಿಗೆ ಕಳುಹಿಸಲ್ಪಟ್ಟಿದ್ದೇನೆ. ಧೃತರಾಷ್ಟ್ರನ ಮಗನಾದ ದುರ್ಯೋಧನನು ನಿಮ್ಮನ್ನೂ ಮಹಾಯಾಗಕ್ಕೆ ಆಗಮಿಸಲು ಆಹ್ವಾನಿಸಿದ್ದಾನೆ. ಆದುದರಿಂದ ನೀವೂ ಸಹ ರಾಜನ ಮನೋಭಿಲಾಷೆಯಂತೆ ನಡೆಸಲ್ಪಡುತ್ತಿರುವ ಆ ಮಹಾವೈಷ್ಣವಯಾಗಕ್ಕೆ ಆಗಮಿಸಿ, ಮಹಾಯಾಗವನ್ನು ಸಂದರ್ಶಿಸುವುದು ಸಾಧುವಾಗಿದೆ."

ರಾಜದೂತನು ಹೇಳಿದ ಮಾತುಗಳನ್ನು ಕೇಳಿ ನೃಪಶಾರ್ದೂಲನಾದ ಯುಧಿಷ್ಠಿರನು ಹೀಗೆಂದು ಉತ್ತರಿಸಿದನು : "ನಮ್ಮ ಪೂರ್ವಜರ ಕೀರ್ತಿಯನ್ನು ಹೆಚ್ಚಿಸುವ ಸಲುವಾಗಿ ದುರ್ಯೋಧನನು ಒಳ್ಳೆಯ ಅದೃಷ್ಟದ ಕಾರಣದಿಂದ ಕೀರ್ತಿದಾಯಕವಾದ ವೈಷ್ಣವಮಹಾಯಾಗವನ್ನು ಉಪಕ್ರಮಿಸಿರುತ್ತಾನೆ. ನಾವು ಸಹ ಆ ಮಹಾಯಾಗದ ಸಂದರ್ಶನಾರ್ಥವಾಗಿ ಬಂದೇಬಿಡುತ್ತಿದ್ದೆವು. ಆದರೆ ಈ ಸಮಯದಲ್ಲಿ ಮಾತ್ರ ನಾವು ಅಲ್ಲಿಗೆ ಬರಲು ಸಾಧ್ಯವಾಗುವುದಿಲ್ಲ. ಹದಿಮೂರು ವರ್ಷಗಳ ಪರ್ಯಂತವಾಗಿ ನಾವು ಹಸ್ತಿನಾಪಟ್ಟಣಕ್ಕೆ ಆಗಮಿಸುವಂತಿಲ್ಲ. ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ನಾವು, ಸಭಾಮಧ್ಯದಲ್ಲಿ ಮಾಡಿರುವ ಪ್ರತಿಜ್ಞಾನುಸಾರವಾಗಿ, ಮುಗಿಸಿಯೇ ತೀರಬೇಕಾಗಿದೆ."

ಜನಮೇಜಯ! ಯುಧಿಷ್ಠಿರನು ತನ್ನ ಸತ್ತ್ವಸ್ವಭಾವಕ್ಕನುಗುಣವಾದ ಮಾತುಗಳನ್ನು ಹೇಳಿ ಮುಗಿಸಿದನಂತರ ಭೀಮನು ರಾಜದೂತನನ್ನು ಕುರಿತು ಹೀಗೆಂದು ಹೇಳಿದನು :

**ತದಾ ತು ನೃಪತಿರ್ಗನ್ತಾ ಧರ್ಮರಾಜೋ ಯುಧಿಷ್ಠಿರಃ ।**
**ಅಸ್ತ್ರಶಸ್ತ್ರಪ್ರದೀಪ್ತೇಽಗ್ನೌ ಯದಾ ತಂ ಪಾತಯಿಷ್ಯತಿ ॥೧೬॥**

"ಎಲೈ ದೂತನೇ! ನಾನೀ ವಿಷಯವನ್ನು ಬಹುಸ್ಪಷ್ಟವಾಗಿ ಹೇಳುತ್ತೇನೆ, ಕೇಳು. ಅಸ್ತ್ರ-ಶಸ್ತ್ರಗಳಿಂದ ಪ್ರದೀಪ್ತವಾದ ಮಹಾಗ್ನಿಯಲ್ಲಿ ಆ

ದುಷ್ಟ ದುರ್ಯೋಧನನನ್ನು ಹೋಮಮಾಡುವ ಕಾಲಕ್ಕೆ ಸರಿಯಾಗಿ ಧರ್ಮ ರಾಜನಾದ, ನರಪತಿಯಾದ ಈ ನಮ್ಮಣ್ಣ ಯುಧಿಷ್ಠಿರನು ಅಲ್ಲಿಗೆ ಆಗಮಿಸು ತ್ತಾನೆ. ಈ ವಿಷಯವನ್ನೇ ನೀನು ದುರ್ಯೋಧನನೊಡನೆಯೂ ಹೇಳಬೇಕು.



**ವರ್ಷಾತ್ತ್ರಯೋದಶಾದೂರ್ಧ್ವಂ ರಣಸತ್ರೇ ನರಾಧಿಪಃ ।**
**ಯದಾ ಕ್ರೋಧಹವಿರ್ಮೋಕ್ತಾ ಧಾರ್ತರಾಷ್ಟ್ರೇಷು ಪಾಣ್ಡವಃ ।**
**ಆಗನ್ತಾಹಂ ತದಾಸ್ಮೀತಿ ವಾಚ್ಯಸ್ತೇ ಸ ಸುಯೋಧನಃ ॥೧೭॥**

ಹದಿಮೂರು ವರ್ಷಗಳು ಕಳೆದ ನಂತರ ಯುದ್ಧವೆಂಬ ಮಹಾಯಾಗ ದಲ್ಲಿ ನರಾಧಿಪನಾದ ನಮ್ಮಣ್ಣನು ಯಾವಾಗ ಕೋಪವೆಂಬ ಹವಿಸ್ಸನ್ನು ಧೃತ ರಾಷ್ಟ್ರನ ಮಕ್ಕಳ ಮೇಲೆ ಸುರಿದು, ಅವರುಗಳನ್ನು ಆಹುತಿಕೊಡುವನೋ,

ಆಗ ನಾನೂ ಹಸ್ತಿನಾಪಟ್ಟಣಕ್ಕೆ ಬರುತ್ತೇನೆ. ಇದೇ ಮಾತುಗಳನ್ನೇ ನೀನು ಸ್ಪಷ್ಟವಾಗಿ ಸುಯೋಧನನಿಗೆ ತಿಳಿಸಬೇಕು.”

ಜನಮೇಜಯ! ಉಳಿದ ಅರ್ಜುನ-ನಕುಲ-ಸಹದೇವರು ಅಪ್ರಿಯ ವಾದ ಯಾವ ಮಾತನ್ನೂ ಹೇಳಲಿಲ್ಲ. ಭೀಮನ ಮಾತುಗಳನ್ನು ಕೇಳಿದ ನಂತರ ರಾಜದೂತನು ದುರ್ಯೋಧನನ ಬಳಿಗೆ ಬಂದು ಯುಧಿಷ್ಠಿರನಾಡಿದುದನ್ನೂ ಅನಂತರ ಭೀಮನು ಹೇಳಿದುದನ್ನೂ ಯಥಾವತ್ತಾಗಿ ತಿಳಿಯಪಡಿಸಿದನು.

ಹಸ್ತಿನಾಪಟ್ಟಣಕ್ಕೆ ಅನೇಕಾನೇಕರಾಜರೂ, ಜನನಾಯಕರೂ, ಬ್ರಾಹ್ಮಣಶ್ರೇಷ್ಠರೂ ತಂಡ-ತಂಡವಾಗಿ ಆಗಮಿಸಿದರು. ಆಗಮಿಸಿದ ಅತಿಥಿ ಗಳೆಲ್ಲರನ್ನೂ ರಾಜಪರಿವಾರದವರು ಯಥಾವಿಧಿಯಾಗಿ, ಯಥಾಕ್ರಮವಾಗಿ ಸತ್ಕರಿಸಿದರು. ಆಗಮಿಸಿದ್ದ ರಾಜ-ಮಹಾರಾಜರೂ, ಬ್ರಾಹ್ಮಣರೂ ಮತ್ತು ಜನನಾಯಕರೂ ಅನುಪಮವಾದ ಆ ಸತ್ಕಾರದಿಂದ ಪರಮಪ್ರೀತರಾದರು.

ತನ್ನ ಮಗನು ಮಾಡಿದ ಸಂತೋಷದಾಯಕವಾದ ಆ ಮಹಾಯಾಗ ದಿಂದ ಧೃತರಾಷ್ಟ್ರನಿಗುಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಸಕಲಕೌರವ ರಿಂದಲೂ ಸುತ್ತುವರಿಯಲ್ಪಟ್ಟು ಸಿಂಹಾಸನಾರೂಢನಾಗಿದ್ದ ಧೃತರಾಷ್ಟ್ರನು ವಿದುರನನ್ನು ಕರೆದು ಹೀಗೆಂದು ಹೇಳಿದನು :

“ವಿದುರ! ನೀನು ಈ ಕೂಡಲೇ ಯಜ್ಞಮಂಟಪದಲ್ಲಿರುವವರೆಲ್ಲರಿಗೂ ಶುಚಿ-ರುಚಿಯಾದ ಭೋಜನವನ್ನು ಏರ್ಪಡಿಸಿ ಅವರೆಲ್ಲರೂ ಭೋಜನದಿಂದ ಸಂತುಷ್ಟರಾಗುವಂತೆ ಮಾಡು.”

ಧೃತರಾಷ್ಟ್ರನ ಮಾತುಗಳನ್ನು ಕೇಳಿ ಧರ್ಮಾತ್ಮನಾದ ವಿದುರನು ಊಟದ ಮೇಲ್ವಿಚಾರಣೆಯೆಲ್ಲವನ್ನೂ ತಾನೇ ವಹಿಸಿಕೊಂಡು ಒಂದೊಂದು ವರ್ಣದವರಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಭೋಜನಶಾಲೆಗಳನ್ನು ಏರ್ಪಡಿಸಿ, ಪ್ರತಿಯೊಬ್ಬರನ್ನೂ ಭಕ್ಷ್ಯಾನ್ನ-ಪಾನಾದಿಗಳಿಂದಲೂ, ಸುಗಂಧಯುಕ್ತವಾದ ಪುಷ್ಪಮಾಲಿಕೆಗಳಿಂದಲೂ, ಅನರ್ಘವಾದ ವಸ್ತ್ರಾಭರಣಗಳಿಂದಲೂ ಸಂತೃಪ್ತಿಗೊಳಿಸಿದನು. ವಿದುರನು ಅವರೆಲ್ಲರಿಗೂ ಪ್ರತ್ಯೇಕ-ಪ್ರತ್ಯೇಕವಾಗಿ

ಬಿಡಾರಗಳನ್ನು ಮಾಡಿಕೊಟ್ಟು ಅವರು ಅಲ್ಲಿ ತಂಗಿದ್ದಷ್ಟು ಕಾಲವೂ ಅವರನ್ನು ಊಟ-ಉಪಚಾರಗಳಿಂದ ಸತ್ಕರಿಸಿದನು. ರಾಜಶ್ರೇಷ್ಠನಾದ ದುರ್ಯೋಧನನು ಯಾಗದ ಅವಭೃಥಸ್ನಾನವಾಗಿ ಸಾವಿರಾರು ಮಂದಿ ರಾಜ-ಮಹಾರಾಜರೂ ಮತ್ತು ಬ್ರಾಹ್ಮಣೋತ್ತಮರೂ ತಮ್ಮ ತಮ್ಮ ಊರುಗಳಿಗೆ ಪ್ರಯಾಣಹೊರಟಾಗ ಅವರೆಲ್ಲರಿಗೂ ಧನ-ಕನಕ-ವಸ್ತು-ವಾಹನಗಳನ್ನು ಬಹುಮಾನರೂಪದಲ್ಲಿ ಕೊಟ್ಟು ಪುರಸ್ಕರಿಸಿ ಅವರನ್ನು ಅವರವರ ದೇಶಗಳಿಗೆ ಬೀಳ್ಕೊಟ್ಟನು.

ಯಜ್ಞದ ಅವಭೃಥಸ್ನಾನವಾಗಿ ರಾಜರೆಲ್ಲರೂ ತಮ್ಮ ತಮ್ಮ ದೇಶಗಳಿಗೆ ಪ್ರಯಾಣಮಾಡಿದನಂತರ ಸಹೋದರರಿಂದಲೂ, ಕರ್ಣ-ಶಕುನಿ-ದುಃಶಾಸನರಿಂದಲೂ ಪರಿವೃತನಾದ ದುರ್ಯೋಧನನು ಸಕಲವೈಭವದೊಡನೆ ಯಜ್ಞಮಂಟಪದಿಂದ ಹಸ್ತಿನಾಪಟ್ಟಣಕ್ಕೆ ಹಿಂದಿರುಗಿದನು.

ದೀ೫೬ನೆಯ ಅಧ್ಯಾಯವು ಮುಗಿಯಿತು.

೨೫೭ನೆಯ ಅಧ್ಯಾಯ ಘೋಷಯಾತ್ರಾಪರ್ವ (ಮುಂದುವರಿದಿದೆ.)

## ದುರ್ಯೋಧನನು ಮಾಡಿದ ಯಜ್ಞದ ವಿಷಯದಲ್ಲಿ ಜನಾಭಿಪ್ರಾಯ : ಕರ್ಣನು ಅರ್ಜುನನನ್ನು ವಧಿಸಲು ಪ್ರತಿಜ್ಞೆ ಮಾಡಿದುದು : ಯುಧಿಷ್ಠಿರನ ಚಿಂತೆ : ದುರ್ಯೋಧನನ ರಾಜ್ಯಭಾರದ ವರ್ಣನೆ

ಜನಮೇಜಯ! ಅವಭೃಥಸ್ನಾನವನ್ನು ಮುಗಿಸಿಕೊಂಡು ಹಸ್ತಿನಾಪಟ್ಟಣಕ್ಕೆ ಬಂಧು-ಮಿತ್ರಸಮೇತನಾಗಿ ಆಗಮಿಸುತ್ತಿದ್ದ ದುರ್ಯೋಧನನಿಗೆ ವಂದಿ-ಮಾಗಧರು ಉಚ್ಚಸ್ವರದಿಂದ ಪರಾಕು ಹೇಳುತ್ತಿದ್ದರು. ಅವರ ಜಯಕಾರಗಳ ಧ್ವನಿಯನ್ನನುಸರಿಸಿ ನಾಗರಿಕರು ಕೂಡ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುವಂತೆ ಜಯಕಾರ ಮಾಡುತ್ತಿದ್ದರು. ಮಂದ-ಮಂದವಾಗಿ ಮದಗಜದಂತೆ ಆಗಮಿಸುತ್ತಿದ್ದ ಮಹಾಧನುರ್ಧಾರಿಯಾದ ದುರ್ಯೋಧನನ ಮೇಲೆ ಪಟ್ಟಣಿಗರು ಬತ್ತದರಳನ್ನು (ಲಾಜವನ್ನು ) ಸುರಿದು ಗಂಧ-ಪುಷ್ಪಾದಿಗಳನ್ನಿತ್ತು ಗೌರವಿಸಿ ದುರ್ಯೋಧನನನ್ನು ಕುರಿತು ಹೇಳಿದರು:

"ಮಹಾರಾಜ! ಒಳ್ಳೆಯ ಅದೃಷ್ಟವಿಶೇಷದಿಂದಲೇ ನೀನುಪಕ್ರಮಿಸಿದ ಈ ಮಹಾವೈಷ್ಣವಯಾಗವು ಯಾವ ವಿಘ್ನವೂ ಇಲ್ಲದೇ ವೈಭವದಿಂದ ಪೂರ್ಣವಾಯಿತು."

ಪಟ್ಟಣಿಗರ ಆ ಮಾತುಗಳನ್ನು ಕೇಳಿ ದುರ್ಯೋಧನನು ಮುಗುಳ್ನಗೆಯ ಮೂಲಕ ತನ್ನ ಸಂತೋಷವನ್ನು ಸೂಚಿಸುವುದರಲ್ಲಿದ್ದಾಗ, ಅಪ್ರಿಯವಾದರೂ ಸತ್ಯಾಂಶವನ್ನು ಹೇಳಬಯಸಿದ ಮತ್ತೆ ಕೆಲವು ಪಟ್ಟಣಿಗರು ರಾಜನನ್ನು ಕುರಿತು ಹೀಗೆಂದು ಹೇಳಿದರು : "ಮಹಾರಾಜ! ಯಜ್ಞವು ನಿರ್ವಿಘ್ನವಾಗಿ ನಡೆಯಿತು. ಇದರಿಂದ ನಾವೆಲ್ಲರೂ ಹರ್ಷಿಸಲೇಬೇಕಾಗಿದೆ. ಆದರೆ ನೀನಿಂದು ಮಾಡಿದ ಮಹಾಯಾಗವನ್ನು ಯುಧಿಷ್ಠಿರನು ಮಾಡಿದ ರಾಜಸೂಯಯಾಗಕ್ಕೆ ಯಾವ ರೀತಿಯಲ್ಲಿಯೂ ಹೋಲಿಸುವ ಸಾಧ್ಯತೆಯಿಲ್ಲ. ಅವನು ಮಾಡಿದ ಮಹಾಯಾಗದ ಹದಿನಾರನೆಯ ಒಂದಂಶಕ್ಕೂ ಸಹ ನಿನ್ನ ಯಾಗವು ಸಾಟಿಯಾಗಲಾರದು."

ಹೀಗೆ ಹೇಳಿದ ಪುರಜನರಿಗೆ–ತಾವು ಹೀಗೆ ಹೇಳಿದುದರ ಪರಿಣಾಮವೇನಾಗಬಹುದೆಂಬ–ವಿವೇಚನೆಯೂ ಇರಲಿಲ್ಲ. ಜನಮೇಜಯ! ಅವರ ಕರ್ಣಕಠೋರವಾದ ಮಾತುಗಳನ್ನು ಕೇಳಿ ದುರ್ಯೋಧನನ ಮುಖವು ವಿವರ್ಣವಾಗುವುದರೊಳಗಾಗಿ ದುರ್ಯೋಧನನ ಹಲವಾರು ಮಿತ್ರರು ಮುಂದೆ ಬಂದು ಹೇಳಿದರು : "ಮಹಾರಾಜ! ನಮ್ಮ ಅಭಿಪ್ರಾಯದಲ್ಲಿ ನೀನು ಮಾಡಿದ ಈ ಯಾಗವು ಇದುವರೆಗೆ ನಡೆದ ಎಲ್ಲ ಯಾಗಗಳನ್ನೂ ಮೀರಿಸಿದೆ. ಯಾವ ಯಾಗವೂ ಇದುವರೆಗೆ ಇಷ್ಟು ಅದ್ಭುತವಾಗಿ ನಡೆದಿರಲೇ ಇಲ್ಲ. ನೀನು ಮಾಡಿದ ಯಾಗವನ್ನೇ ಹಿಂದೆ–ಯಯಾತಿ, ನಹುಷ, ಮಾಂಧಾತ, ಭರತರೂ ಸಹ ಮಾಡಿ ಪೂತಾತ್ಮರಾಗಿ ಸ್ವರ್ಗವನ್ನು ಪಡೆದಿರುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ."

ತನ್ನ ಮಿತ್ರರು ಹೇಳಿದ ಪ್ರಿಯೋಕ್ತಿಗಳನ್ನು ಕೇಳಿ ನಿಶ್ಚಯವಾಗಿಯೂ ದುರ್ಯೋಧನನ ಮುಖಕಮಲವು ಅರಳಿತು. ಇಂತಹ ಅನೇಕ ಪ್ರಿಯೋಕ್ತಿಗಳಿಂದ ಪರಮಪ್ರೀತನಾದ ದುರ್ಯೋಧನನು ಪರಿವಾರಸಮೇತನಾಗಿ ಹಸ್ತಿನಾಪಟ್ಟಣವನ್ನೂ ಅನಂತರ ತನ್ನ ದಿವ್ಯವಾದ ಅರಮನೆಯನ್ನೂ ಪ್ರವೇಶಿಸಿದನು. ಅರಮನೆಗೆ ಪ್ರವೇಶಿಸಿದನಂತರ ಮಾತಾ-ಪಿತೃಗಳಾದ

ಗಾಂಧಾರೀ-ಧೃತರಾಷ್ಟ್ರರನ್ನು ಯಥಾವಿಧಿಯಾಗಿ ಪೂಜಿಸಿ ಸತ್ಕರಿಸಿ ಅವರ ನಿರ್ದೇಶನದಂತೆ ಭೀಷ್ಮ-ದ್ರೋಣ-ಕೃಪ-ವಿದುರರನ್ನೂ ಸಹ ಪೂಜಿಸಿ ಸತ್ಕರಿಸಿದನು. ಮಹಾಯಾಗವನ್ನು ಯಶಸ್ವಿಯಾಗಿ ಮುಗಿಸಿಕೊಂಡು ಬಂದ ತಮ್ಮ ಅಣ್ಣನನ್ನು ದುಃಶಾಸನಪ್ರಮುಖರಾದ ಕೌರವರಾಜಕುಮಾರರೆಲ್ಲರೂ ಯಥಾಯೋಗ್ಯವಾಗಿ ನಮಿಸಿ ಸತ್ಕರಿಸಿದರು.

ಅನಂತರದಲ್ಲಿ ದುರ್ಯೋಧನನು ಉಚ್ಚವಾದ ಸಿಂಹಾಸನದಲ್ಲಿ ತನ್ನ ಬಂಧು-ಮಿತ್ರರಿಂದ ಪರಿವೃತನಾಗಿ ಕುಳಿತುಕೊಂಡನು. ಆ ಸಮಯದಲ್ಲಿ ಕರ್ಣನು ತಾನು ಕುಳಿತುಕೊಂಡಿದ್ದ ಆಸನದಿಂದ ಮೇಲೆದ್ದು ಹೀಗೆಂದು ಹೇಳಿದನು :

"ದುರ್ಯೋಧನ! ಅದೃಷ್ಟವಶಾತ್ ಈ ವೈಷ್ಣವಮಹಾಯಾಗವು ಯಾವ ವಿಧವಾದ ವಿಘ್ನವೂ ಇಲ್ಲದೇ ಮಂಗಳಕರವಾಗಿ ಮುಗಿಯಿತು. ಆದರೆ ಇಷ್ಟರಿಂದಲೇ ನಾನು ತೃಪ್ತನಾಗಿಲ್ಲ. ನೀನು ಸಮರದಲ್ಲಿ ಪಾಂಡುವಿನ ಮಕ್ಕಳನ್ನು ಸಂಹರಿಸಬೇಕು. ಅನಂತರ ರಾಜಸೂಯಮಹಾಯಾಗವನ್ನೇ ನೀನು ಯಥಾವಿಧಿಯಾಗಿ ಮಾಡಿ ಮುಗಿಸಬೇಕು. ತದನಂತರದಲ್ಲಿ ನಾನು ನಿನ್ನನ್ನು ಪುನಃ ಇತೋಪ್ಯತಿಶಯವಾಗಿ ಗೌರವಿಸುವೆನು."

ಕರ್ಣನ ಮಾತುಗಳನ್ನು ಕೇಳಿ ದುರ್ಯೋಧನನಿಗೆ ಅಮಿತಾನಂದವಾಯಿತು. ಅಂತೆಯೇ ಕರ್ಣನಿಗೆ ಪ್ರತ್ಯುತ್ತರವಿತ್ತನು : "ವಯಸ್ಯ, ಕರ್ಣ! ನೀನು ನಿಜವಾದ ಮಾತನ್ನೇ ಹೇಳಿದೆ. ದುರಾತ್ಮರಾದ ಪಾಂಡವರು ಹತರಾದ ನಂತರವೇ ನನಗೆ ರಾಜಸೂಯಮಹಾಯಾಗವನ್ನು ಮಾಡಲು ಅಧಿಕಾರವು ಪ್ರಾಪ್ತವಾಗುವುದರಿಂದ ಸಕಲಸಂಭ್ರಮಗಳಿಂದಲೂ ಆ ಮಹಾಯಾಗವನ್ನೂ ಮಾಡಿ ಮುಗಿಸಿದನಂತರವೇ ನಾನು ನಿನ್ನಿಂದ ಗೌರವಿಸಲ್ಪಡಲು ಅರ್ಹನಾಗುತ್ತೇನೆ" ಹೀಗೆಂದು ಹೇಳಿ ದುರ್ಯೋಧನನು ಕರ್ಣನನ್ನು ಬಾಚಿ ತಬ್ಬಿಕೊಂಡನು. ತಾನು ಹಿಂದೆ ನೋಡಿದ್ದ ರಾಜಸೂಯಯಾಗವನ್ನು ದುರ್ಯೋಧನನು ಪುನಃ ಪುನಃ ಜ್ಞಾಪಿಸಿಕೊಂಡನು.

ದುರ್ಯೋಧನನು ತನ್ನನ್ನು ಸುತ್ತುವರಿದು ಕುಳಿತಿದ್ದ ತನ್ನ ಅನುಜರನ್ನು ಸಂಬೋಧಿಸಿ ಹೇಳಿದನು : "ಕೌರವಸತ್ತಮರೇ! ನಾನು ಯಾವಾಗ ಆ ದುರಾತ್ಮರಾದ ಪಾಂಡವರನ್ನು ನಿಗ್ರಹಿಸಿ ಅಪಾರವಾದ ಧನರಾಶಿಯ

ವ್ಯಯದಿಂದ ಮಾತ್ರವೇ ಪೂರೈಸಲು ಸಾಧ್ಯವಾಗುವ, ಸರ್ವಕ್ರತುಗಳಿಗೂ ಶ್ರೇಷ್ಠವಾದ ರಾಜಸೂಯಯಾಗವನ್ನು ಮಾಡಿಯೇನು?"

ದುರ್ಯೋಧನನ ಉದ್ವೇಗಪೂರ್ಣವಾದ ಮಾತುಗಳನ್ನು ಕೇಳಿ ಕರ್ಣನು ದುರ್ಯೋಧನನನ್ನು ಸಮಾಧಾನಗೊಳಿಸುತ್ತಾ ಹೇಳಿದನು :

"ಮಹಾರಾಜ! ಪಾಂಡವರ ಸಂಹಾರವು ಎಂದು ನಡೆಯುವುದೋ ಎಂದು ತವಕಿಸಬೇಡ. ಪಾಂಡವರಲ್ಲಿ ವೀರಾಗ್ರಣಿಯಾದ, ನನ್ನ ಕಡುಹಗೆಯಾದ ಅರ್ಜುನನನ್ನು ಸಂಹಾರಮಾಡುವವರೆಗೂ ನಾನು ನನ್ನ ಕಾಲುಗಳನ್ನು ಬೇರೆಯವರಿಂದ ತೊಳೆಸಿಕೊಳ್ಳುವುದಿಲ್ಲ. ಮಾಂಸವನ್ನು ಭಕ್ಷಿಸುವುದಿಲ್ಲ ಮತ್ತು ಸುರಾಪಾನವನ್ನು ಮಾಡುವುದಿಲ್ಲ. ಮತ್ತೂ ಒಂದು ಪ್ರತಿಜ್ಞೆಯನ್ನು ಮಾಡುವೆನು, ಕೇಳು :

**ನಾಸ್ತೀತಿ ನೈವ ವಕ್ಷ್ಯಾಮಿ ಯಾಚಿತೋ ಯೇನ ಕೇನಚಿತ್ ।**

ಯಾರು ಬಂದು ಏನನ್ನೇ ಕೇಳಿದರೂ 'ನಾಸ್ತಿ'–'ಇಲ್ಲ' ಎಂಬುದಾಗಿ ಖಂಡಿತವಾಗಿಯೂ ಹೇಳುವುದಿಲ್ಲ."

ಕರ್ಣನು ಹೀಗೆಂದು ಪ್ರತಿಜ್ಞೆಮಾಡಿದೊಡನೆಯೇ ಕೌರವರೆಲ್ಲರೂ 'ಭಲೇ ಕರ್ಣ! ಜಯ ಜಯ ಕರ್ಣ!' ಮುಂತಾಗಿ ಜಯಘೋಷ ಮಾಡಿದರು.

ದುರ್ಯೋಧನನು ಪಾಂಡವರಾಗಲೇ ಪರಾಜಿತರಾಗಿಹೋದರೆಂದೇ ಭಾವಿಸಿಬಿಟ್ಟನು. ಅನಂತರದಲ್ಲಿ ಕುಬೇರನು ಚೈತ್ರರಥವನವನ್ನು ಪ್ರವೇಶಿಸುವಂತೆ–ಶ್ರೀಮಂತನಾದ ದುರ್ಯೋಧನನು ತನ್ನ ಅನುಜರನ್ನೂ ಮತ್ತು ಗೆಳೆಯರನ್ನೂ ವಿಸರ್ಜಿಸಿ ಅವರಿಗೆ ಹೊರಡಲು ಅನುಮತಿಯನ್ನು ನೀಡಿ ಅಂತಃಪುರವನ್ನು ಪ್ರವೇಶಿಸಿದನು. ರಾಜನು ನಿರ್ಗಮಿಸಿದನಂತರದಲ್ಲಿ ಸಭಾಮಂಟಪದಲ್ಲಿದ್ದ ರಾಜಪುತ್ರರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಅತ್ತಲಾಗಿ ಪಾಂಡವರು ದುರ್ಯೋಧನನು ವಿಶ್ವದ ರಾಜರೆಲ್ಲರನ್ನೂ ಗೆದ್ದು ವೈಷ್ಣವಯಾಗವನ್ನು ಮಾಡಲು ಉಪಕ್ರಮಿಸಿದ್ದಾನೆಂಬ ವಾರ್ತೆಯನ್ನು ದೂತಮುಖೇನ ಕೇಳಿದನಂತರ ಚಿಂತಾಪರವಶರಾದರು. ವಿಶ್ವದ ರಾಜರೆಲ್ಲರೂ ದುರ್ಯೋಧನನ ಸಾಮಂತರಾದರೆ ಮುಂದೆ ತಾವು ದುರ್ಯೋಧನನನ್ನು ಜಯಿಸುವುದು ಹೇಗೆಂಬುದೇ ಪಾಂಡವರ ಚಿಂತೆಗೆ ಕಾರಣವಾಗಿತ್ತು.

ಅವರಿಗೆ ಸುಖವು ಸ್ವಪ್ನದಲ್ಲಿಯೂ ದುರ್ಲಭವೆನಿಸಿತು. ವೈಷ್ಣವ ಮಹಾಯಾಗವು ಕಳೆದನಂತರ ಕರ್ಣನು ಸಭಾಮಧ್ಯದಲ್ಲಿ ನಿಂತು ಅರ್ಜುನ ನನ್ನು ವಧೆಮಾಡುವುದಾಗಿ ಮಾಡಿದ ಪ್ರತಿಜ್ಞೆಯೂ ಸಹ ಗುಪ್ತಚಾರರ ಮುಖೇನ ಪಾಂಡವರಿಗೆ ವಿದಿತವಾಯಿತು. ಆ ವಿಷಯವನ್ನು ಕೇಳಿದ ಮೇಲಂತೂ ಧರ್ಮರಾಜನ ಮನಸ್ಸು ಮತ್ತಷ್ಟು ಉದ್ವಿಗ್ನವಾಯಿತು. ಕರ್ಣನು ಅದ್ಭುತಪರಾಕ್ರಮಿಯೆಂಬುದು ಧರ್ಮಜನಿಗೆ ತಿಳಿದಿತ್ತು. ಅದಕ್ಕಿಂತಲೂ ಮಿಗಿಲಾಗಿ ಕರ್ಣನು ವಜ್ರಕವಚವನ್ನೇ ತೊಟ್ಟು ಹುಟ್ಟಿರುವನೆಂಬ ವಿಷಯವೂ ಧರ್ಮರಾಜನಿಗೆ ತಿಳಿದಿತ್ತು.

ತಾವು ಇದುವರೆಗೂ ಅನುಭವಿಸಿದ ಕಷ್ಟಗಳು, ಮುಂದೆಯೂ ಅನು ಭವಿಸಬೇಕಾದ ಕಷ್ಟಪರಂಪರೆಗಳು–ಇವುಗಳೆಲ್ಲವನ್ನೂ ಪುನಃ ಪುನಃ ಧರ್ಮ ರಾಜನು ಸ್ಮರಿಸುತ್ತಲೇ ಇದ್ದನು. ಅವನ ಮನಸ್ಸಿಗೆ ಲೇಶವಾದರೂ ಶಾಂತಿ ಯಿರಲಿಲ್ಲ. ಕಟ್ಟಕಡೆಗೆ ಸರ್ಪಗಳಿಂದಲೂ ನಾನಾವಿಧವಾದ ಮೃಗಗಳಿಂದಲೂ ಪರಿವೃತವಾಗಿದ್ದ ಆ ದ್ವೈತವನದಲ್ಲಿರುವುದೇ ಧರ್ಮಜನಿಗೆ ಬೇಡವಾಯಿತು. ದ್ವೈತವನವನ್ನು ಬಿಟ್ಟು ಬೇರೆ ಕಡೆಗೆ ಹೊರಟುಹೋಗಬೇಕೆಂದು ಯುಧಿ ಷ್ಠಿರನು ನಿಶ್ಚಯಿಸಿದನು.

ಇತ್ತಲಾಗಿ ದುರ್ಯೋಧನನು ಪರಾಕ್ರಮಿಗಳಾದ ಅನುಜರಿಂದಲೂ, ಭೀಷ್ಮ-ದ್ರೋಣ-ಕೃಪರಿಂದಲೂ, ಯುದ್ಧಕ್ಕೆ ಅಲಂಕಾರಪ್ರಾಯನೆನಿಸಿದ್ದ ಕರ್ಣ ನಿಂದಲೂ ಕೂಡಿದವನಾಗಿ ಸುವ್ಯವಸ್ಥಿತವಾಗಿ ರಾಜ್ಯಭಾರಮಾಡುತ್ತಿದ್ದನು. ತನ್ನ ಸಾಮಂತರಾಜರನ್ನೂ ಗೌರವಿಸುತ್ತಾ ಅವರ ಮತ್ತು ಅವರ ರಾಜ್ಯಗಳ ಯೋಗ-ಕ್ಷೇಮಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರುತ್ತಿದ್ದನು. ಕೇವಲ ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸುವುದೇ ಅವನ ಧ್ಯೇಯವಾಗಿರಲಿಲ್ಲ. ತನ್ನ ಚಕ್ರಾಧಿಪತ್ಯದಲ್ಲಿ ಪ್ರತಿಯೊಂದು ಪ್ರಾಂತವೂ ಸುಭಿಕ್ಷವಾಗಿರಬೇಕೆಂಬುದೂ, ಪ್ರಜೆಗಳೆಲ್ಲರೂ ತಮ್ಮ ತಮ್ಮ ವರ್ಣಾಶ್ರಮಗಳಿಗೆ ಯೋಗ್ಯವಾದ ಕಾರ್ಯ ಗಳನ್ನು ಮಾಡುತ್ತಾ ನಿತ್ಯತುಷ್ಟರಾಗಿರಬೇಕೆಂಬುದೂ ದುರ್ಯೋಧನನ ಆಶಯವಾಗಿದ್ದಿತು. ಬಹುದಕ್ಷಿಣಾಕವಾದ ಅಗ್ನಿಷ್ಟೋಮ-ವಾಜಪೇಯಾದಿ ಯಾಗಗಳನ್ನು ಮಾಡುತ್ತಾ ಶ್ರೇಷ್ಠರಾದ ಬ್ರಾಹ್ಮಣರಿಗೆ ಅಪಾರವಾದ ದಕ್ಷಿಣೆ ಯನ್ನು ಕೊಟ್ಟು ಅವರನ್ನು ಪದೇ ಪದೇ ಗೌರವಿಸುತ್ತಲೂ ಇದ್ದನು.

ತನ್ನ ಅನುಜರ ಮತ್ತು ಬಂಧುಗಳ ಯೋಗ-ಕ್ಷೇಮಗಳನ್ನೂ ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದನು. 'ದತ್ತಭುಕ್ತಫಲಂ ಧನಮ್' ಯಥೇಚ್ಛವಾಗಿ ಸತ್ಪಾತ್ರರಿಗೆ ದಾನಮಾಡುವುದು ಮತ್ತು ಮನಸ್ತೃಪ್ತಿ ಯಾಗುವಂತೆ ಸುಖೋಪಭೋಗಗಳನ್ನು ಪಡೆಯುವುದು–ಈ ಎರಡೇ ಧನಸಂಗ್ರಹಣದ ಮುಖ್ಯವಾದ ಎರಡು ಫಲಗಳೆಂದು ದುರ್ಯೋಧನನು ದೃಢವಾಗಿ ನಿಶ್ಚಯಿಸಿ ಅದರಂತೆ ತನ್ನ ರಾಜ್ಯಾಡಳಿತವನ್ನು ವಿಚಕ್ಷಣತೆಯಿಂದ ನಡೆಸುತ್ತಿದ್ದನು."

೨೫೭ನೆಯ ಅಧ್ಯಾಯವು ಮುಗಿಯಿತು.

೨೫೮ನೆಯ ಅಧ್ಯಾಯ — ಮೃಗಸ್ವಪ್ನೋದ್ಭವಪರ್ವ

## ಪಾಂಡವರು ಕಾಮ್ಯಕವನಕ್ಕೆ ಪ್ರಯಾಣಮಾಡಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸಿದನು :

"ಮಹರ್ಷಿಗಳೇ! ದುರ್ಯೋಧನನನ್ನು ಗಂಧರ್ವರ ಸೆರೆಯಿಂದ ಪಾಂಡವರು ವಿಮೋಚನೆಗೊಳಿಸಿದನಂತರ ದ್ವೈತವನದಲ್ಲವರು ಮುಂದೇನು ಮಾಡಿದರು? ಈ ವಿಷಯವನ್ನು ವಿಶದವಾಗಿ ನನಗೆ ಹೇಳಿರಿ."

"ಮಹಾರಾಜ! ದ್ವೈತವನದಲ್ಲಿ ವಾಸಿಸುತ್ತಿದ್ದಾಗ ಯುಧಿಷ್ಠಿರನು ಒಂದಾನೊಂದು ರಾತ್ರಿ ಆಶ್ರಮದಲ್ಲಿ ಮಲಗಿ ನಿದ್ರಿಸುತ್ತಿದ್ದನು. ಕೆಲವು ಜಿಂಕೆ ಗಳು ಕಣ್ಣುಗಳಲ್ಲಿ ನೀರು ಸುರಿಸುತ್ತಾ ಗದ್ಗದಸ್ವರದಿಂದ ಕೂಡಿದುವುಗಳಾಗಿ ಯುಧಿಷ್ಠಿರನ ಕನಸಿನಲ್ಲಿ ಕಾಣಿಸಿಕೊಂಡುವು. ಗಡ-ಗಡನೆ ನಡುಗುತ್ತಿದ್ದ, ಮುಂದಿನೆರಡು ಕಾಲುಗಳನ್ನು ಮೇಲೆತ್ತಿ ಜೋಡಿಸಿ ನಮಸ್ಕರಿಸುತ್ತಿದ್ದ ಆ ಮೃಗಗಳನ್ನು ನೋಡಿ ಯುಧಿಷ್ಠಿರನು ಮರುಕಪಟ್ಟವನಾಗಿ ಅವುಗಳನ್ನು ಪ್ರಶ್ನಿಸಿದನು :

'ಮೃಗಶ್ರೇಷ್ಠರೇ! ನೀವು ಹೇಳಬೇಕೆಂದಿರುವ ವಿಷಯವನ್ನು ನಿರ್ಭಯವಾಗಿ ಹೇಳಿರಿ. ನೀವುಗಳಾರು? ನಿಮ್ಮ ಇಚ್ಛೆಯೇನು? ಎಲ್ಲವನ್ನೂ ವಿಶದವಾಗಿ ಹೇಳಿರಿ.'

ಯುಧಿಷ್ಠಿರನ ಮಾತುಗಳನ್ನು ಕೇಳಿ ರಾಜಕುಮಾರರಿಗೆ ಆಹಾರ

ವಾಗದೇ ಉಳಿದಿದ್ದ ಆ ಜಿಂಕೆಗಳು ರಾಜನನ್ನು ಕುರಿತು ಹೇಳಿದುವು : “ನೀವು ಆಹಾರಕ್ಕಾಗಿ ಬೇಟೆಯಾಡುವಾಗ ನಿಮ್ಮ ಬಾಣಗಳ ಆಘಾತಕ್ಕೆ ಸಿಕ್ಕದೇ ತಪ್ಪಿಸಿ ಕೊಂಡಿರುವ ಬಡಪಾಯಿ ಜಿಂಕೆಗಳೇ ನಾವು. ಆದರೆ ಮುಂದಿನ ಕೆಲವೇ ದಿನಗಳಲ್ಲಿ ನಾವೂ ಸಹ ನಿಮ್ಮ ಆಹಾರವಾಗಿ ಪರಿವರ್ತನೆಹೊಂದುವುದು ನಿಶ್ಚಯ. ಆದಕಾರಣದಿಂದ ನೀವು ಈಗಲೇ ಮುಂದಿನ ಅರಣ್ಯಕ್ಕೆ ಪ್ರಯಾಣ ಮಾಡಬೇಕೆಂದು ನಿನ್ನನ್ನು ಪ್ರಾರ್ಥಿಸುವ ಸಲುವಾಗಿ ನಾವಿಲ್ಲಿಗೆ ಬಂದಿರುತ್ತೇವೆ. ದಯಮಾಡಿ ನಿನ್ನ ಆಶ್ರಮವನ್ನು ಕೂಡಲೇ ಬದಲಾಯಿಸು.

ಮಹಾರಾಜ! ನಿನ್ನ ಅನುಜರೆಲ್ಲರೂ ಮಹಾಶೂರರು. ಅಸ್ತ್ರವಿದ್ಯಾ ನಿಪುಣರು. ನಮ್ಮ ಉಚ್ಛ್ವಾಸ-ನಿಃಶ್ವಾಸಗಳ ಶಬ್ದವನ್ನು ಕೇಳಿಯೇ ನಮಗೆ ಗುರಿಯಿಟ್ಟು ಹೊಡೆಯಬಲ್ಲ ಸಮರ್ಥರವರು. ಇದರಿಂದಾಗಿ ಇಂದು ದ್ವೈತ ವನದಲ್ಲಿ ನಮ್ಮ ವಂಶವೇ ಅಳಿದುಹೋಗುತ್ತಾ ಬಂದಿದೆ. ಅಲ್ಪಸಂಖ್ಯಾತರಾಗಿ ಉಳಿದಿರುವ ನಾವಿಂದು ನಮ್ಮ ವಂಶಕ್ಕೆ ಬೀಜಪ್ರಾಯರಾಗಿರುತ್ತೇವೆ. ನಿನ್ನ ಅನುಗ್ರಹಮಾತ್ರದಿಂದಲೇ ನಮ್ಮ ವಂಶವು ಪುನಃ ಹಿಂದಿನಂತೆ ಅಭಿವೃದ್ಧಿ ಹೊಂದಬೇಕಾಗಿದೆ.”

ಜಿಂಕೆಗಳ ಮಾತುಗಳನ್ನು ಕೇಳಿ ಯುಧಿಷ್ಠಿರನಿಗೆ ಬಹಳ ಪರಿತಾಪ ವಾಯಿತು. ಬೀಜರೂಪವಾಗಿ ಉಳಿದಿದ್ದ ಆ ಜಿಂಕೆಗಳು ಗಡ-ಗಡನೆ ನಡುಗು ತ್ತಿದ್ದುವು. ಸಕಲಪ್ರಾಣಿಗಳ ಯೋಗ-ಕ್ಷೇಮಗಳಲ್ಲಿಯೂ ವಿಶೇಷವಾದ ಆಸಕ್ತಿ ಯನ್ನು ಹೊಂದಿದ್ದ ಯುಧಿಷ್ಠಿರನು ‘ ‘ತಥಾಸ್ತು’–ನೀವು ಹೇಳಿದಂತೆಯೇ ನಾನು ಮಾಡುತ್ತೇನೆ. (ನನ್ನ ಆಶ್ರಮವನ್ನು ಇಲ್ಲಿಂದ ಬದಲಾಯಿಸುತ್ತೇನೆ.)’ ಎಂದು ಅಭಯವಚನವನ್ನಿತ್ತು ಅವುಗಳನ್ನು ಬೀಳ್ಕೊಟ್ಟನು.

ನಿದ್ದೆಯು ಕಳೆಯಿತು. ಆದರೆ ಕನಸಿನ ವಿಷಯವು ಮಾತ್ರ ಯುಧಿಷ್ಠಿರನ ಮನಸ್ಸಿನಲ್ಲಿ ಮೂರ್ತಿಮತ್ತಾಗಿ ನೆಲೆಸಿಬಿಟ್ಟಿದ್ದಿತು. ಪ್ರಾತಃಕ್ರಿಯೆಗಳು ಮುಗಿದನಂತರ ತನ್ನ ತಮ್ಮಂದಿರ ಮಧ್ಯದಲ್ಲಿ ಕುಳಿತು ತನಗಾದ ಕನಸಿನ ವಿಷಯವನ್ನು ಯಥಾವತ್ತಾಗಿ ಅನುಜರೊಡನೆ ಹೇಳಿದನು :

“ಸಹೋದರರೇ! ಅಳಿದುಳಿದಿರುವ ಜಿಂಕೆಗಳು ನಿನ್ನೆ ರಾತ್ರಿ ಕನಸಿನಲ್ಲಿ ಬಂದು ಕಂಬನಿಗರೆಯುತ್ತಾ ನನ್ನನ್ನು ಕುರಿತು ಹೀಗೆಂದು ಹೇಳಿದುವು :

'ತನ್ತುಭೂತಾಃ ಸ್ಮ ಭದ್ರಂ ತೇ ದಯಾ ನಃ ಕ್ರಿಯತಾಮ್' ನಾವು ನಮ್ಮ ವಂಶದ ತಂತುಭೂತರಾಗಿದ್ದೇವೆ. ನಮ್ಮ ಮೇಲೆ ದಯೆತೋರು. ನಿನಗೆ ಮಂಗಳವಾಗಲಿ."

ಸೋದರರೇ! ಅವುಗಳು ಹೇಳಿದ ಮಾತು ಸತ್ಯ. ನಾವು ಈ ಅರಣ್ಯ ಪ್ರಾಣಿಗಳ ವಿಷಯದಲ್ಲಿ ಈಗಲಾದರೂ ಕರುಣೆತೋರಲೇಬೇಕಾಗಿದೆ. ನಾವು ಇಲ್ಲಿಗೆ ಬಂದು ಒಂದು ವರ್ಷ ಎಂಟು ತಿಂಗಳುಗಳು ಕಳೆದುಹೋದುವು. ಅಂದಿನಿಂದಲೂ ನಾವು ಈ ಮೃಗಗಳಿಂದಲೇ ಜೀವನನಡೆಸುತ್ತಿದ್ದೇವೆ. ಆದುದರಿಂದ ನಾವೀಗಲೇ ದ್ವೈತವನದಿಂದ ಪ್ರಯಾಣಮಾಡೋಣ. ಅನೇಕಾನೇಕ ವನ್ಯಮೃಗಗಳಿಂದಲೂ–ಸುಂದರವಾದ ಲತಾವೃಕ್ಷಗಳಿಂದಲೂ ಸಮೃದ್ಧವಾಗಿರುವ ಕಾಮ್ಯಕವನಕ್ಕೆ ಪ್ರಯಾಣಮಾಡೋಣ. ಆ ಅರಣ್ಯವು ಮರುಭೂಮಿಯ ಪಕ್ಕದಲ್ಲಿರುವ ತೃಣಬಿಂದುಸರೋವರದ ದಂಡೆಯಲ್ಲಿದೆ. ಅರಣ್ಯವಾಸದಲ್ಲಿ ಉಳಿದಿರುವ ದಿನಗಳನ್ನು ಅಲ್ಲಿಯೇ ನಾವು ಕಳೆಯೋಣ.

ಯುಧಿಷ್ಠಿರನ ಆ ಮಾತಿಗೆ ಎಲ್ಲರೂ ಒಪ್ಪಿದರು. ಧರ್ಮಕೋವಿದರಾದ ಪಾಂಡವರು ಬ್ರಾಹ್ಮಣಸಮೇತರಾಗಿಯೂ, ಇಂದ್ರಸೇನನೇ ಮೊದಲಾದ ಸೇವಕರಿಂದೊಡಗೂಡಿಯೂ ಬೇರೆಯೆಡೆಗೆ ಪ್ರಯಾಣಮಾಡಿದರು. ಜನರು ಪ್ರಯಾಣಮಾಡಿದ್ದ ಜಾಡಿನಲ್ಲಿಯೇ ಪ್ರಯಾಣಮಾಡುತ್ತಾ ತೃಣ-ಜಲ ಸಮೃದ್ಧವಾಗಿದ್ದ, ತಪಸ್ವಿಗಳಿಂದ ನಿಬಿಡವಾಗಿದ್ದ, ಪುಣ್ಯತಮವಾದ ಕಾಮ್ಯಕ ವನವನ್ನು ಸಂದರ್ಶಿಸಿದರು. ಪುಣ್ಯಪುರುಷರು ಸ್ವರ್ಗವನ್ನು ಪ್ರವೇಶಿಸುವಂತೆ– ಪಾಂಡುರಾಜಕುಮಾರರು ಬ್ರಾಹ್ಮಣರಿಂದ ಪರಿವೃತರಾಗಿ ಪುಣ್ಯತಮವಾದ ಕಾಮ್ಯಕವನವನ್ನು ಪ್ರವೇಶಿಸಿದರು."

೨೫೮ನೆಯ ಅಧ್ಯಾಯವು ಮುಗಿಯಿತು.

೨೫೯ನೆಯ ಅಧ್ಯಾಯ ವ್ರೀಹಿದ್ರೌಣಿಕಪರ್ವ

## ಯುಧಿಷ್ಠಿರನ ಚಿಂತೆ : ವ್ಯಾಸರು ಪಾಂಡವರ ಸಮೀಪಕ್ಕೆ ಬಂದುದು : ದಾನದ ಮಹತ್ತ್ವಪ್ರತಿಪಾದನೆ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ಅರಣ್ಯದಲ್ಲಿ ವಾಸಮಾಡುತ್ತಿದ್ದ ಪಾಂಡವರಿಗೆ ಹನ್ನೊಂದು ವರ್ಷಗಳು ಬಹಳ ಕಷ್ಟದಿಂದ ಕಳೆದುಹೋದುವು. ಆ ರಾಜ ಕುಮಾರರು ಸುಖಪಡಲು ಯೋಗ್ಯರಾದವರೇ ಹೊರತು ದುಃಖಪಡಲು ಯೋಗ್ಯರಾದವರಲ್ಲ. ಕಾಲದ ವೈಪರೀತ್ಯದಿಂದಾಗಿ ಅವರು ಮಹಾದುಃಖವನ್ನು ಅನುಭವಿಸಿಯೇ ತೀರಬೇಕಾಯಿತು. ದುಃಖದಿಂದ ದೂರವಾಗುವ ಕಾಲವು ಸಮೀಪಿಸುತ್ತಿದೆಯೆಂಬ ಆಸೆಯಿಂದ ಪಾಂಡವರು ಉಳಿದ ಕಾಲವನ್ನು ಹೇಗೋ ಕಳೆಯುತ್ತಿದ್ದರು. ರಾಜಕುಮಾರರಾದ ಅವರು ಕೇವಲ ಗೆಡ್ಡೆ-ಗೆಣಸುಗಳನ್ನು ತಿಂದು ಜೀವಿಸಿರಬೇಕಾಗಿದ್ದಿತು. ಯುಧಿಷ್ಠಿರನಿಗೆ ಶಾರೀರಕವಾದ ಕಷ್ಟಕ್ಕಿಂತಲೂ ಮಾನಸಿಕವಾದ ಕಷ್ಟವು ಬಹಳವಾಗಿತ್ತು. ತನ್ನ ಅನುಜರು ಅಂತಹ ದಾರುಣವಾದ ಕಷ್ಟಕ್ಕೆ ಸಿಕ್ಕಿರುವುದನ್ನು ನೆನೆದನೆಂದರೆ ಯುಧಿಷ್ಠಿರನ ಕರುಳು ಕೊಯ್ದಂತಾಗುತ್ತಿತ್ತು. ಮೇಲಾಗಿ ಅವರು ಇಂತಹ ಕಷ್ಟದಲ್ಲಿ ಸಿಲುಕಿದ್ದು ತನ್ನೊಬ್ಬನ ತಪ್ಪಿನಿಂದಲೇ ; ತಾನೊಬ್ಬನಾಡಿದ ಪಗಡೆಯಾಟದ ಪರಿಣಾಮವಾಗಿ ದ್ರೌಪದೀಸಮೇತರಾದ ತನ್ನ ಅನುಜರು ಸಹಿಸಲಸಾಧ್ಯವಾದ ಕಷ್ಟದಲ್ಲಿ ಬಿದ್ದಿದ್ದಾರೆ.

ಈ ವಿಷಯವನ್ನೇ ಪದೇ-ಪದೇ ಯೋಚಿಸುತ್ತಿದ್ದ ಯುಧಿಷ್ಠಿರನಿಗೆ ರಾತ್ರಿಯಲ್ಲಿ ನಿದ್ರೆಯೇ ಬರುತ್ತಿರಲಿಲ್ಲ. ಎದೆಯಲ್ಲಿ ಶಲ್ಯಗಳು ಚುಚ್ಚಿಕೊಂಡಿದ್ದರೆ ಉಂಟಾಗುವಷ್ಟು ಸಂಕಟವನ್ನು ಯುಧಿಷ್ಠಿರನು ಹಿಂದೆ ತಾನು ಮಾಡಿದ ಕಾರ್ಯವನ್ನು (ದ್ಯೂತವನ್ನು) ನೆನೆದಾಗಲೆಲ್ಲಾ ಅನುಭವಿಸುತ್ತಿದ್ದನು. ಕರ್ಣನು ದುರ್ಯೋಧನನ ಸಮ್ಮುಖದಲ್ಲಿ ಮಾಡಿದ ಪ್ರತಿಜ್ಞೆಯನ್ನು ನೆನೆದೊಡನೆಯೇ ಯುಧಿಷ್ಠಿರನು ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ಕೋಪವೆಂಬ ವಿಷವನ್ನು ಹೃದಯದಲ್ಲಿಯೇ ಅಡಗಿಸಿಕೊಂಡಿದ್ದನು. ಭೀಮಾದಿಗಳು ಧರ್ಮರಾಜನನ್ನು ನೋಡಿ, ತಮ್ಮ ದುಃಖವನ್ನು ಸಹಿಸಿಕೊಂಡು ಕಾಲವನ್ನು ನಿರೀಕ್ಷಿಸುತ್ತಿದ್ದರು. ಉತ್ಸಾಹ, ಕೋಪ ಮತ್ತು ಕ್ರಿಯೆಗಳಿಂದ ಹೊಸ ಮೈಯನ್ನು ಹೊಂದಿದವರಂತಿದ್ದರು.

ಕೆಲವು ದಿನಗಳು ಕಳೆದನಂತರ ಸತ್ಯವತಿಯ ಪುತ್ರರಾದ, ಮಹಾಯೋಗಿಗಳಾದ ವ್ಯಾಸಮುನಿಗಳು ಪಾಂಡವರನ್ನು ನೋಡುವ ಸಲುವಾಗಿ ಕಾಮ್ಯಕ

ವನಕ್ಕೆ ಆಗಮಿಸಿದರು. ಆಶ್ರಮದಲ್ಲಿದ್ದ ಯುಧಿಷ್ಠಿರನು ವ್ಯಾಸರು ಆಗಮಿಸುತ್ತಿರುವುದನ್ನು ಕಂಡು, ಒಡನೆಯೇ ಮೇಲೆದ್ದು ಮುಂದಕ್ಕೆ ನಾಲ್ಕಡಿಗಳನ್ನಿಟ್ಟು ಮಹರ್ಷಿಗಳನ್ನು ಗೌರವದಿಂದ ಸ್ವಾಗತಿಸಿದನು. ಆಗಮಿಸಿದ ಮಹರ್ಷಿಗಳಿಗೆ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿ ಸುಖಾಸನದಲ್ಲಿ ಕುಳ್ಳಿರಿಸಿದನು.



ಮಹರ್ಷಿಗಳ ಅನುಮತಿಯನ್ನು ಪಡೆದು ಜಿತೇಂದ್ರಿಯನಾದ ಯುಧಿಷ್ಠಿರನು, ವ್ಯಾಸರು ಏನು ಹೇಳಲಿರುವರೋ–ಎಂಬ ಕುತೂಹಲದಿಂದ ಮಹರ್ಷಿಗಳ ಸಮೀಪದಲ್ಲಿ ತನ್ನ ಅನುಜರೊಡನೆ ಕುಳಿತನು. ವ್ಯಾಸರು ತಮ್ಮ ಮೊಮ್ಮಕ್ಕಳ ಸ್ಥಿತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು. ಅರಣ್ಯದಲ್ಲಿನ ಗೆಡ್ಡೆ-ಗೆಣಸುಗಳನ್ನು ತಿಂದುಕೊಂಡು ಎಲ್ಲರೂ ಕೃಶರಾಗಿರುವುದನ್ನು ನೋಡಿ ವ್ಯಾಸರ ಮನಸ್ಸು ಕರಗಿಹೋಯಿತು. ಅನುಕಂಪದಿಂದುಂಟಾದ

ಗದ್ಗದಸ್ವರದಿಂದ ಮಹರ್ಷಿಗಳು ಪಾಂಡವರನ್ನು ಕುರಿತು ಹೀಗೆಂದು ಹೇಳಿದರು:

“ಧರ್ಮಾತ್ಮರಲ್ಲಿ ಶ್ರೇಷ್ಠನಾದ, ಮಹಾಬಾಹುವಾದ ಯುಧಿಷ್ಠಿರನೇ!

**ನಾತಪ್ತತಪಸೋ ಲೋಕೇ ಪ್ರಾಪ್ನುವನ್ತಿ ಮಹಾಸುಖಮ್ ।**
**ಸುಖದುಃಖೇ ಹಿ ಪುರುಷಃ ಪರ್ಯಾಯೇಣೋಪಸೇವತೇ ॥೧೩॥**

ಈ ಲೋಕದಲ್ಲಿ ಯಾರು ತಪಃ-ಸ್ವಾಧ್ಯಾಯ-ವ್ರತಾದಿಗಳನ್ನು ಮಾಡುವುದಿಲ್ಲವೋ ಅವರಿಗೆ ಉತ್ತಮವಾದ ಸುಖವೆಂದಿಗೂ ಲಭಿಸುವುದಿಲ್ಲ. ಸುಖವನ್ನೇ ಆಗಲೀ–ದುಃಖವನ್ನೇ ಆಗಲೀ ಮಾನವನು ಪರ್ಯಾಯವಾಗಿ ಅನುಭವಿಸುತ್ತಾನೆ. (ಒಮ್ಮೆ ಸುಖ ಮತ್ತೊಮ್ಮೆ ದುಃಖ ಹೀಗೆ ಅನುಭವಿಸುತ್ತಾನೆ.)

**ನ ಹ್ಯನನ್ತಂ ಸುಖಂ ಕಶ್ಚಿತ್ಪ್ರಾಪ್ನೋತಿ ಪುರುಷರ್ಷಭ ।**
**ಪ್ರಜ್ಞಾವಾಂಸ್ತ್ವೇವ ಪುರುಷಃ ಸಂಯುಕ್ತಃ ಪರಯಾ ಧಿಯಾ ।**
**ಉದಯಾಸ್ತಮನಜ್ಞೋ ಹಿ ನ ಹೃಷ್ಯತಿ ನ ಶೋಚತಿ ॥೧೪॥**

ಪುರುಷಶ್ರೇಷ್ಠನೇ! ಈ ಪ್ರಪಂಚದಲ್ಲಿ ಅನಂತವಾದ ಸುಖವನ್ನು ಯಾರೂ ಪಡೆಯಲಾರರು. ಪ್ರಜ್ಞಾವಂತನಾದ ಪುರುಷನು ಮಾತ್ರವೇ ಸೃಷ್ಟಿ-ಸ್ಥಿತಿ-ಲಯಗಳಿಗೆ ಅಧಿಷ್ಠಾನರೂಪನಾದ ಪರಮಾತ್ಮನ ಸ್ವರೂಪವನ್ನು ತಿಳಿದು (ಏಳು-ಬೀಳುಗಳ ಸ್ವಭಾವವನ್ನು ತಿಳಿದು) ಸುಖಬಂದ ಕಾಲದಲ್ಲಿ ಹೆಚ್ಚು ಸಂತೋಷಿಸುವುದಿಲ್ಲ ; ದುಃಖಬಂದಾಗ ಶೋಕಿಸುವುದೂ ಇಲ್ಲ.

**ಸುಖಮಾಪತಿತಂ ಸೇವೇದ್ದುಃಖಮಾಪತಿತಂ ವಹೇತ್ ।**
**ಕಾಲಪ್ರಾಪ್ತಮುಪಾಸೀತ ಸಸ್ಯಾನಾಮಿವ ಕರ್ಷಕಃ ॥೧೫॥**

ಸುಖವು ತಾನಾಗಿಯೇ ಪ್ರಾಪ್ತವಾದಾಗ ಸಂತೋಷದಿಂದ ಅನುಭವಿಸಬೇಕು ; ದುಃಖವು ಪ್ರಾಪ್ತವಾದಾಗ ಅದನ್ನು ಧೈರ್ಯದಿಂದ ಸಹಿಸಿಕೊಳ್ಳಬೇಕು. ಯಾವ ಯಾವ ಕಾಲಗಳಲ್ಲಿ ಏನೇನು ಪ್ರಾಪ್ತವಾದರೂ ಅದನ್ನು ಸ್ಥಿರಮನಸ್ಸಿನಿಂದ ಅನುಭವಿಸುತ್ತಾ ಜೀವನವನ್ನು ನಡೆಸಬೇಕು. ರೈತನೊಬ್ಬನು ಉತ್ತು-ಬಿತ್ತಿ ಬೇಸಾಯಮಾಡಿ ಕಷ್ಟಪಟ್ಟು ದುಡಿದು ಹಲವಾರುದಿನಗಳ ನಂತರ ಪ್ರಾಪ್ತವಾಗುವ ಬೆಳೆಗಾಗಿ ಕಾಯುತ್ತಿರುತ್ತಾನಲ್ಲವೇ? ಬೆಳೆಯು ಪೂರ್ಣವಾಗಿ ಬರಬಹುದು ; ಅರ್ಧಭಾಗ ಬರಬಹುದು ಅಥವಾ ಕಾಲಾನು

ಗುಣವಾಗಿ ಬೆಳೆಯು ಸಂಪೂರ್ಣವಾಗಿ ನಾಶವಾಗಲೂಬಹುದು. ಅದಕ್ಕಾಗಿ ಅವನು ಹೆಚ್ಚು ಕೊರಗದೇ ಮರಳಿ ಪ್ರಯತ್ನವನ್ನು ಮಾಡುತ್ತಲೇ ಇರುತ್ತಾನೆ.

**ತಪಸೋ ಹಿ ಪರಂ ನಾಸ್ತಿ ತಪಸಾ ವಿನ್ದತೇ ಮಹತ್ ।**
**ನಾಸಾಧ್ಯಂ ತಪಸಃ ಕಿಂಚಿದಿತಿ ಬುದ್ಧ್ಯಸ್ವ ಭಾರತ ॥೧೬॥**

ಭಾರತ! ತಪಸ್ಸಿಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ತಪಸ್ಸಿನಿಂದ ಪರಮಪದವನ್ನೇ ಹೊಂದಬಹುದು. ತಪಸ್ಸಿನಿಂದ ಸಾಧಿಸಲಾಗದ ಕಾರ್ಯವೇ ಇಲ್ಲವೆಂಬುದನ್ನು ಮನಗಾಣುವವನಾಗು ಯುಧಿಷ್ಠಿರ!

**ಸತ್ಯಮಾರ್ಜವಮಕ್ರೋಧಃ ಸಂವಿಭಾಗೋ ದಮಃ ಶಮಃ ।**
**ಅನಸೂಯಾವಿಹಿಂಸಾ ಚ ಶೌಚಮಿನ್ದ್ರಿಯಸಂಯಮಃ ।**
**ಪಾವನಾನಿ ಮಹಾರಾಜ ನರಾಣಾಂ ಪುಣ್ಯಕರ್ಮಣಾಮ್ ॥೧೭॥**

ಸತ್ಯ, ನಿಷ್ಕಾಪಟ್ಯ, ಎಂತಹ ಸಂದರ್ಭದಲ್ಲಿಯೂ ಕೋಪಮಾಡಿ ಕೊಳ್ಳದೇ ತಾಳ್ಮೆಯಿಂದಿರುವುದು, ತಮ್ಮದಾದ ಧನವನ್ನು ಬೇರೆಯವರೊಡನೆ ಹಂಚಿಕೊಳ್ಳುವುದು, ಜಿತೇಂದ್ರಿಯತ್ವ, ಶಾಂತಿ, ಅಸೂಯಾರಾಹಿತ್ಯ, ಯಾರೊಬ್ಬರನ್ನೂ ಹಿಂಸಿಸದಿರುವುದು, ಅಂತಶ್ಶುದ್ಧಿ-ಬಹಿಶ್ಶುದ್ಧಿಗಳು, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು–ಇವುಗಳೆಲ್ಲವೂ ಪುಣ್ಯ ಕರ್ಮಿಗಳಾದ ಮಾನವರಿಗೆ ಪರಮಪಾವನವಾದ ಗುಣಗಳಾಗಿರುತ್ತವೆ.

**ಅಧರ್ಮರುಚಯೋ ಮೂಢಾಸ್ತಿರ್ಯಗ್ಗತಿಪರಾಯಣಾಃ ।**
**ಕೃಚ್ಛ್ರಾಂ ಯೋನಿಮನುಪ್ರಾಪ್ತಾ ನ ಸುಖಂ ವಿನ್ದತೇ ಜನಾಃ ॥೧೮॥**

ನಾನು ಮೇಲೆ ಹೇಳಿದ ಪಾವನಕ್ರಿಯೆಗಳು ಮೂಢರಾದವರಿಗೆ ರುಚಿ ಸುವುದಿಲ್ಲ. ಅವರಿಗೆ ಅಧರ್ಮಕ್ರಿಯೆಗಳೇ ರುಚಿಸುತ್ತವೆ. ಅವರು ಯಾವಾ ಗಲೂ ದುರ್ಮಾರ್ಗದಲ್ಲಿಯೇ ನಡೆಯಲು ಆಸಕ್ತರಾಗಿರುತ್ತಾರೆ. ಧರ್ಮಾ ಧರ್ಮಗಳ ವಿವೇಚನೆಯೇ ಇಲ್ಲದ ಅವರು, ತಾವು ಮಾಡುವ ದುಷ್ಕರ್ಮ ಗಳ ಫಲವಾಗಿ ಜನ್ಮಾಂತರದಲ್ಲಿ ಪಶು-ಪಕ್ಷಿಗಳೇ ಮೊದಲಾದ ತಿರ್ಯ ಗ್ಯೋನಿಗಳಲ್ಲಿ ಜನ್ಮತಾಳುತ್ತಾರೆ. ಅವರಿಗೆ ನಿಜವಾದ ಸುಖವೆಂಬುದು ಜನ್ಮ-ಜನ್ಮಾಂತರಗಳಲ್ಲಿಯೂ ದುರ್ಲಭವೇ ಸರಿ. ದುಷ್ಕರ್ಮಗಳನ್ನು ಮಾಡುವ ವರು ತಾವು ಮಾಡಿದ ದುಷ್ಕರ್ಮದ ಫಲವು ತಮ್ಮ ಬೆನ್ನಹಿಂದೆಯೇ ಇರು ತ್ತದೆಂಬುದನ್ನು ಒಮ್ಮೆಯಾದರೂ ಯೋಚಿಸಹೋಗುವುದಿಲ್ಲ.

**ಇಹ ಯತ್ಕ್ರಿಯತೇ ಕರ್ಮ ತತ್ಪರತ್ರೋಪಯುಜ್ಯತೇ ।**
**ತಸ್ಮಾಚ್ಛರೀರಂ ಯುಞ್ಜೀತ ತಪಸಾ ನಿಯಮೇನ ಚ ॥೨೦॥**

ಈ ಜನ್ಮದಲ್ಲಿ ನಾವು ಯಾವ ಕಾರ್ಯಮಾಡಿದರೂ ಅದು ಆ ಕರ್ಮದ ಫಲವನ್ನು ನಮಗೆ ಮುಂದಿನ ಜನ್ಮದಲ್ಲಿ ಕೊಟ್ಟೇತೀರುತ್ತದೆ. ಆದುದರಿಂದ ಈ ಶರೀರವನ್ನು ತಪಸ್ಸಿನೊಡನೆಯೂ–ನಿಯಮಾದಿಗಳೊಡನೆಯೂ ಯೋಜಿಸಬೇಕು.

**ಯಥಾಶಕ್ತಿ ಪ್ರಯಚ್ಛೇತ ಸಮ್ಪೂಜ್ಯಾಭಿಪ್ರಣಮ್ಯ ಚ ।**
**ಕಾಲೇ ಪ್ರಾಪ್ತೇ ಚ ಹೃಷ್ಟಾತ್ಮಾ ರಾಜನ್ವಿಗತಮತ್ಸರಃ ॥೨೧॥**

ಯಾರ ಮೇಲೆಯೂ ಮಾತ್ಸರ್ಯವನ್ನಿಟ್ಟುಕೊಳ್ಳದೆ, ಸರ್ವದಾ ಸಂತುಷ್ಟಹೃದಯನಾಗಿದ್ದುಕೊಂಡು, ಯೋಗ್ಯವಾದ ಕಾಲಗಳಲ್ಲಿ ವಿಪ್ರಶ್ರೇಷ್ಠರನ್ನು ಪೂಜಿಸಿ ನಮಸ್ಕರಿಸಿ ಯಥಾಶಕ್ತಿ ದಾನಮಾಡಬೇಕು.

ಯುಧಿಷ್ಠಿರ! ನಾನು ಮೇಲೆ ಹೇಳಿದ ಸತ್ಯ, ಅಕ್ರೋಧ–ಇತ್ಯಾದಿ ವ್ರತಗಳಲ್ಲಿ ಒಂದೊಂದೂ ವಿಶೇಷವಾದ ಫಲಗಳನ್ನು ನೀಡುತ್ತದೆ.

**ಸತ್ಯವಾದೀ ಲಭೇತಾಯುರನಾಯಾಸಮಥಾರ್ಜವಮ್ ।**
**ಅಕ್ರೋಧನೋಽನಸೂಯಶ್ಚ ನಿರ್ವೃತಿಂ ಲಭತೇ ಪರಾಮ್ ॥೨೨॥**

ಸತ್ಯವಾದಿಯು ಕ್ಲೇಶವಿಲ್ಲದಿರುವಿಕೆಯನ್ನೂ, ಋಜುತ್ವವನ್ನೂ, ದೀರ್ಘಾಯುಷ್ಯವನ್ನೂ ಪಡೆಯುತ್ತಾನೆ. ಕೋಪವನ್ನು ಗೆದ್ದವನು ಮತ್ತು ಅಸೂಯಾರಹಿತನಾದವನು ಪರಮಶ್ರೇಷ್ಠವಾದ ಮೋಕ್ಷಸುಖವನ್ನೇ ಪಡೆಯುತ್ತಾನೆ.

**ದಾನ್ತಃ ಶಮಪರಃ ಶಶ್ವತ್ಪರಿಕ್ಲೇಶಂ ನ ವಿನ್ದತಿ ।**
**ನ ಚ ತಪ್ಯತಿ ದಾನ್ತಾತ್ಮಾ ದೃಷ್ಟ್ವಾ ಪರಗತಾಂ ಶ್ರಿಯಮ್ ॥೨೩॥**

ಇಂದ್ರಿಯಗಳನ್ನು ಜಯಿಸಿರುವವನು ಮತ್ತು ಸರ್ವದಾ ಶಾಂತಸ್ವಭಾವದಿಂದಿರುವವನು ಯಾವ ವಿಧವಾದ ಕ್ಲೇಶವನ್ನೂ ಹೊಂದುವುದಿಲ್ಲ. ಇಂದ್ರಿಯಗಳನ್ನು ನಿಗ್ರಹಿಸಿರುವವನು ಇತರರಲ್ಲಿರುವ ಐಶ್ವರ್ಯವನ್ನು ನೋಡಿ ಖಂಡಿತವಾಗಿಯೂ ಪರಿತಪಿಸುವುದಿಲ್ಲ.

**ಸಂವಿಭಕ್ತಾ ಚ ದಾತಾ ಚ ಭೋಗವಾನ್ಸುಖವಾನ್ನರಃ ।**
**ಭವತ್ಯಹಿಂಸಕಶ್ಚೈವ ಪರಮಾರೋಗ್ಯಮಶ್ನುತೇ ॥೨೪॥**

ಅನ್ನದಾನಮಾಡುವವನೂ, ಧನವನ್ನು ಸತ್ಪಾತ್ರನಲ್ಲಿ ದಾನಮಾಡುವವನೂ–ಇಹದಲ್ಲಿ ಸಕಲವಾದ ಸುಖೋಪಭೋಗಗಳನ್ನೂ ಅನುಭವಿಸುತ್ತಾ ಸುಖಿಯಾಗಿರುತ್ತಾನೆ. ಅಹಿಂಸಾವ್ರತವನ್ನಾಚರಿಸುವವನು ಆರೋಗ್ಯವಂತನಾಗಿ ಬಾಳುತ್ತಾನೆ.

**ಮಾನ್ಯಮಾನಯಿತಾ ಜನ್ಮ ಕುಲೇ ಮಹತಿ ವಿನ್ದತಿ ।**
**ವ್ಯಸನೈರ್ನ ತು ಸಂಯೋಗಂ ಪ್ರಾಪ್ನೋತಿ ವಿಜಿತೇನ್ದ್ರಿಯಃ ॥೨೫॥**

**ಶುಭಾನುಶಯಬುದ್ಧಿರ್ಹಿ ಸಂಯುಕ್ತಃ ಕಾಲಧರ್ಮಣಾ ।**
**ಪ್ರಾದುರ್ಭವತಿ ತದ್ಯೋಗಾತ್ಕಲ್ಯಾಣಮತಿರೇವ ಸಃ ॥೨೬॥**

ಸಮ್ಮಾನಾರ್ಹರನ್ನು ಸಮ್ಮಾನಿಸುವವನು ಸದ್ವಂಶದಲ್ಲಿ ಜನ್ಮತಾಳುತ್ತಾನೆ. ಜಿತೇಂದ್ರಿಯನಾದವನನ್ನು ಯಾವ ವಿಧವಾದ ವ್ಯಸನಗಳೂ ಸ್ಪರ್ಶಿಸಲಾರವು. ಸತ್ಕಾರ್ಯಗಳಲ್ಲಿಯೇ ನಿಯತವಾದ ಬುದ್ಧಿಯುಳ್ಳವನು ಮರಣಾನಂತರದಲ್ಲಿ ತನ್ನ ಕರ್ಮದ ಫಲವನ್ನನುಭವಿಸಲು ಪುನಃ ಜನ್ಮತಾಳುತ್ತಾನೆ. ಆ ಜನ್ಮದಲ್ಲಿಯೂ ಸಹ ಅವನ ಬುದ್ಧಿಯು ಕಲ್ಯಾಣಮಯಿಯಾಗಿರುವುದು. (ಸತ್ಕರ್ಮಗಳಲ್ಲಿಯೇ ನಿರತವಾಗಿರುವುದು.)"

ವ್ಯಾಸಮಹರ್ಷಿಗಳು ಹೇಳಿದ ಮಾತುಗಳನ್ನು ಕೇಳಿದನಂತರ ಧಾರ್ಮಿಕ ಪ್ರಸಂಗಗಳಲ್ಲಿಯೇ ನಿಯತವಾದ ಬುದ್ಧಿಯುಳ್ಳ ಯುಧಿಷ್ಠಿರನು ಮಹರ್ಷಿಗಳನ್ನು ಪ್ರಶ್ನಿಸಿದನು :

"ಭಗವನ್! ಮಹಾಮುನೇ! ದಾನಧರ್ಮ-ತಪೋಧರ್ಮ ಇವುಗಳಲ್ಲಿ ಶ್ರೇಷ್ಠವಾದುದು ಯಾವುದು? ಆಮುಷ್ಮಿಕಪ್ರಯೋಜನವು ಯಾವುದರಿಂದ ಲಭ್ಯವಾಗುತ್ತದೆ? ಈ ಎರಡರಲ್ಲಿ ಕ್ಲಿಷ್ಟತರವಾದ ಧರ್ಮವು ಯಾವುದು? ಎಂಬುದನ್ನು ಹೇಳಿರಿ. ಇವುಗಳೆರಡರ ರಹಸ್ಯವನ್ನೂ ವಿಶದವಾಗಿ ತಿಳಿದುಕೊಳ್ಳುವ ಆಶಯದಿಂದಿರುತ್ತೇನೆ."

ವ್ಯಾಸರು ಉತ್ತರಿಸುತ್ತಾರೆ :

**ದಾನಾನ್ನ ದುಷ್ಕರಂ ತಾತ ಪೃಥಿವ್ಯಾಮಸ್ತಿ ಕಿಂಚನ ।**
**ಅರ್ಥೇ ಚ ಮಹತೀ ತೃಷ್ಣಾ ಸ ಚ ದುಃಖೇನ ಲಭ್ಯತೇ ॥೨೭॥**

(ಕೃಚ್ಛ್ರ-ಚಾಂದ್ರಾಯಣಾದಿಗಳ ಮೂಲಕವಾದ ಶರೀರಕ್ಲೇಶಕರ

ವಾದ ತಪಸ್ಸಿಗಿಂತಲೂ ದಾನವೇ ಪರಮಾರ್ಥಸಾಧನೆಗೆ ಬಹಳ ಸುಲಭವಾದುದೆಂದು ಸಾಮಾನ್ಯಮನುಷ್ಯರ ಮನಸ್ಸಿಗೆ ಸ್ಫುರಣೆಯಾಗುತ್ತದೆ. ಆದರಿಲ್ಲಿ ವ್ಯಾಸರು ದಾನಕೊಡುವುದರಲ್ಲಿರುವ ಕ್ಲೇಶವನ್ನು ಸುಸ್ಪಷ್ಟವಾಗಿ ಹೇಳುತ್ತಾರೆ. ಲಕ್ಷಾಂತರ ರೂಪಾಯಿಗಳಿದ್ದೂ ಸಹ ಒಂದು ಚಿಕ್ಕಾಸನ್ನೂ ದಾನ ಮಾಡದ ಜನರು ಅನೇಕರಿದ್ದಾರೆ. ಅದಕ್ಕೆ ಕಾರಣವನ್ನು ನಾವು ಈ ವ್ಯಾಸೋಕ್ತಿಯಿಂದ ತಿಳಿದುಕೊಳ್ಳಬಹುದಾಗಿದೆ. ಬೃಹದಾರಣ್ಯಕೋಪನಿಷತ್ತಿನ ೫ನೇ ಅಧ್ಯಾಯದ ದ್ವಿತೀಯಬ್ರಾಹ್ಮಣದಲ್ಲಿ ಹೀಗೆ ಹೇಳಿದೆ :

ಪ್ರಜಾಪತಿಯ ಬಳಿಯಲ್ಲಿ, ಅವನ ಮಕ್ಕಳಾದ–ದೇವತೆಗಳು, ಮನುಷ್ಯರು ಮತ್ತು ರಾಕ್ಷಸರು ಬ್ರಹ್ಮಚರ್ಯವಾಸಮಾಡಿದರು. ಬ್ರಹ್ಮಚರ್ಯವಾಸಾಂತ್ಯದಲ್ಲಿ ತಮಗೇನಾದರೂ ಉಪದೇಶಮಾಡಬೇಕೆಂದು ಕೇಳಿಕೊಂಡರು. ಪ್ರಜಾಪತಿಯು ಮೂವರಿಗೂ 'ದ' ಎಂಬ ಒಂದಕ್ಷರವನ್ನೇ ಉಪದೇಶಿಸಿದನು. ಅದನ್ನು ದೇವತೆಗಳು 'ದಾಮ್ಯತ'–(ಇಂದ್ರಿಯ) 'ದಮನಮಾಡಬೇಕು' ಎಂದು ಅರ್ಥೈಸಿಕೊಂಡರು. ಮನುಷ್ಯರು 'ದತ್ತ'–'ದಾನಮಾಡು' ಎಂದು ಅರ್ಥಮಾಡಿಕೊಂಡರು. ದಾನವರು 'ದಯಧ್ವಂ'–(ಭೂತಾದಿಗಳಲ್ಲಿ) 'ದಯೆ ತೋರಬೇಕು' ಎಂದು ಅರ್ಥಮಾಡಿಕೊಂಡರು. ಎಂದರೆ ದೇವತೆಗಳು ಸ್ವಭಾವತಃ ಭೋಗಿಗಳು–ಇಂದ್ರಿಯದಮನವೇ ಅವರಿಗೆ ನಿಜವಾದ ತಪಸ್ಸು ; ದಾನವರು ಸ್ವಭಾವತಃ ಕ್ರೂರಿಗಳು–ದಯಾವಂತರಾಗಿರುವುದೇ ಅವರಿಗೆ ತಪಸ್ಸು ; ಮನುಷ್ಯರು ಸ್ವಭಾವತಃ ಲೋಭಿಗಳು–ದಾನಮಾಡುವುದೇ ಅವರಿಗೆ ನಿಜವಾದ ತಪಸ್ಸು. ವ್ಯಾಸರು ಇದನ್ನೇ ಸ್ಪಷ್ಟಪಡಿಸುತ್ತಾರೆ.

"ಮಗು, ಯುಧಿಷ್ಠಿರ! ದಾನಮಾಡುವುದಕ್ಕಿಂತಲೂ ಹೆಚ್ಚು ದುಷ್ಕರ (ಮಾಡಲು ಕಷ್ಟಸಾಧ್ಯ ) ವಾದುದು ಪೃಥ್ವಿಯಲ್ಲಿ ಮತ್ತೊಂದಿಲ್ಲ. ಪ್ರಪಂಚದ ಜನರೆಲ್ಲರೂ ಅರ್ಥಾರ್ಥಿಗಳಾಗಿಯೇ ಇರುತ್ತಾರೆ. ಹಣಕ್ಕಾಗಿ ಹಾತೊರೆಯುತ್ತಾರೆ. ಆ ಹಣವಾದರೋ ಬಹಳ ಕ್ಲೇಶದಿಂದ ಪ್ರಾಪ್ತವಾಗುತ್ತದೆ. (ಇಂತಹ ಹಣವನ್ನು ಕೊಡುವುದು ದುಸ್ಸಾಧ್ಯವಲ್ಲವೇ?)

**ಪರಿತ್ಯಜ್ಯ ಪ್ರಿಯಾನ್ಪ್ರಾಣಾನ್ಧನಾರ್ಥಂ ಹಿ ಮಹಾಮತೇ ।**
**ಪ್ರವಿಶನ್ತಿ ನರಾ ವೀರಾಃ ಸಮುದ್ರಮಟವೀಂ ತಥಾ ॥೨೯॥**

ಹಣಕ್ಕಾಗಿ ಜನರು ಪಡಬಾರದ ಕಷ್ಟಪಡುತ್ತಾರೆ. ತಮ್ಮ ಪ್ರಾಣಗಳ

ನ್ನಾದರೂ ಒತ್ತೆಯಿಟ್ಟು ಜನರು ಹಣಸಂಪಾದಿಸಲು ಹೋಗುತ್ತಾರೆ. ಐಶ್ವರ್ಯಪ್ರಾಪ್ತಿಗಾಗಿ ಧೈರ್ಯಶಾಲಿಗಳು ಮುತ್ತು-ರತ್ನಗಳ ಆಸೆಯಿಂದ ಸಮುದ್ರದೊಳಗೆ ಮುಳುಗುತ್ತಾರೆ. ಐಶ್ವರ್ಯವು ಸಿಕ್ಕುವುದೆಂದರೆ ದುಷ್ಟ ಮೃಗಗಳಿಂದ ನಿಬಿಡವಾದ ಘೋರಾರಣ್ಯವನ್ನೂ ಪ್ರವೇಶಿಸುತ್ತಾರೆ.

**ಕೃಷಿಗೋರಕ್ಷ್ಯಮಿತ್ಯೇಕೇ ಪ್ರತಿಪದ್ಯನ್ತಿ ಮಾನವಾಃ ।**
**ಪುರುಷಾಃ ಪ್ರೇಷ್ಯತಾಮೇಕೇ ನಿರ್ಗಚ್ಛನ್ತಿ ಧನಾರ್ಥಿನಃ ॥೩೦॥**

ಅರ್ಥಪ್ರಾಪ್ತಿಗಾಗಿ ಮಾನವರು ಕೃಷಿ-ಗೋರಕ್ಷಣೆಗಳನ್ನೂ ಮಾಡುತ್ತಾರೆ. ಮತ್ತೆ ಕೆಲವರು ಧನಾರ್ಜನೆಗಾಗಿ ದಾಸ್ಯವೃತ್ತಿಯನ್ನೂ ಅವಲಂಬಿಸುತ್ತಾರೆ. ಹೀಗೆ ಹಲವು ಬಗೆಯಲ್ಲಿ ಬಹಳ ಕಷ್ಟದಿಂದ ಅರ್ಜಿಸಿದ ಧನವನ್ನು ಕೈಯೆತ್ತಿಕೊಡಲು (ದಾನಮಾಡಲು) ಬಹಳ ಕಷ್ಟವಾಗುತ್ತದೆ.

ಆದುದರಿಂದ, ಯುಧಿಷ್ಠಿರ! "**ನ ದುಷ್ಕರತರಂ ದಾನಾತ್ತಸ್ಮಾದ್ದಾನಂ ಮತಂ ಮಮ**" ದಾನಕೊಡುವುದಕ್ಕಿಂತಲೂ ದುಷ್ಕರವಾದುದು ಮತ್ತೊಂದು ಇರಲಾರದು. ಆದುದರಿಂದ ದಾನಧರ್ಮ-ತಪೋಧರ್ಮಗಳಲ್ಲಿ, ದಾನಧರ್ಮವೇ ಪ್ರಶಸ್ತವಾದುದೆಂದು ನನ್ನ ಅಭಿಪ್ರಾಯವಾಗಿದೆ.

ಆದರೆ ದಾನಕೊಡುವಾಗಲೂ ಸಂಪೂರ್ಣವಾಗಿ ವಿವೇಚಿಸಿ ದಾನಕೊಡಬೇಕು.

**ವಿಶೇಷಸ್ತ್ವತ್ರ ವಿಜ್ಞೇಯೋ ನ್ಯಾಯೇನೋಪಾರ್ಜಿತಂ ಧನಮ್ ।**
**ಪಾತ್ರೇ ಕಾಲೇ ಚ ದೇಶೇ ಚ ಸಾಧುಭ್ಯಃ ಪ್ರತಿಪಾದಯೇತ್ ॥೩೨॥**

ನ್ಯಾಯರೀತಿಯಲ್ಲಿ ಧರ್ಮಮೂಲವಾಗಿ ಅರ್ಜಿಸಿದ ಧನವನ್ನು ಕಾಲ-ದೇಶಗಳನ್ನು ವಿವೇಚಿಸಿ ಸಾಧು-ಸಂತರಿಗೆ (ಯೋಗ್ಯರಿಗೆ) ದಾನಮಾಡಬೇಕು.

(ಹಲವಾರು ಜನರು ಅನ್ಯಾಯದಿಂದ ಅರ್ಜಿಸಿದ ಹಣದಲ್ಲಿ ಕಿಂಚಿತ್ತನ್ನು ದಾನಮಾಡಿದರೆ ಅಥವಾ ದೇವರ ಹುಂಡಿಗೆ ಹಾಕಿಬಿಟ್ಟರೆ ತಾವು ದೋಷದಿಂದ ವಿಮುಕ್ತರಾಗುತ್ತೇವೆಂಬ ಭ್ರಾಂತಿಯನ್ನು ಹೊಂದಿರುತ್ತಾರೆ. ಅಂತಹವರ ವಿಷಯವಾಗಿಯೇ ವ್ಯಾಸರು ಈ ಮುಂದಿನ ಶ್ಲೋಕವನ್ನು ಹೇಳಿರುವಂತಿದೆ.)

**ಅನ್ಯಾಯಾತ್ಸಮುಪಾತ್ತೇನ ದಾನಧರ್ಮೋ ಧನೇನ ಯಃ ।**
**ಕ್ರಿಯತೇ ನ ಸ ಕರ್ತಾರಂ ತ್ರಾಯತೇ ಮಹತೋ ಭಯಾತ್ ॥೩೩॥**

ಅನ್ಯಾಯದಿಂದ ಅರ್ಜಿಸಿದ ಹಣವನ್ನು ದಾನವಾಗಿ ಕೊಟ್ಟಿದ್ದೇ ಆದರೆ ಅಂತಹ ದಾನವು ದಾನಿಯನ್ನು (ನರಕಪ್ರಾಪ್ತಿಯೆಂಬ) ಮಹಾಭಯದಿಂದ ಖಂಡಿತವಾಗಿಯೂ ರಕ್ಷಿಸುವುದಿಲ್ಲ.

ಹೇರಳವಾದ ಹಣವನ್ನು ದಾನಕೊಟ್ಟರೆ ಮಾತ್ರ ಫಲವೆಂದು ಭಾವಿಸಬೇಡ, ಯುಧಿಷ್ಠಿರ! ಅವನ ಆದಾಯವನ್ನು ಅನುಸರಿಸಿ ಎಷ್ಟಾದರೂ ದಾನಮಾಡಬಹುದು.

**ಪಾತ್ರೇ ದಾನಂ ಸ್ವಲ್ಪಮಪಿ ಕಾಲೇ ದತ್ತಂ ಯುಧಿಷ್ಠಿರ ।**
**ಮನಸಾ ಹಿ ವಿಶುದ್ಧೇನ ಪ್ರೇತ್ಯಾನನ್ತಫಲಂ ಸ್ಮೃತಮ್ ॥೩೪॥**

ಪರಿಶುದ್ಧನಾಗಿ ಯೋಗ್ಯಕಾಲದಲ್ಲಿ ಸತ್ಪಾತ್ರನಿಗೆ ಸ್ವಲ್ಪವೇ ದಾನಮಾಡಿದರೂ ಸಹ ಆ ದಾನಿಯು ಅನಂತವಾದ ಫಲವನ್ನು ಪಡೆಯುವನೆಂದು ಹೇಳಲ್ಪಟ್ಟಿದೆ.

ಇದಕ್ಕೆ ಉದಾಹರಣೆಯಾಗಿ ಮುದ್ಗಲಮಹರ್ಷಿಯ ಕಥೆಯನ್ನೇ ತೆಗೆದುಕೊಳ್ಳಬಹುದು. ಕೇವಲ ದ್ರೋಣ (ಬಳ್ಳ ) ಪರಿಮಿತವಾದ ಬತ್ತವನ್ನು (ಅದರಿಂದ ಮಾಡಿದ ಅನ್ನವನ್ನು ) ದಾನವಾಗಿ ಕೊಟ್ಟು ಅವನು ಮಹಾಫಲವನ್ನು ಪಡೆದನು, ಯುಧಿಷ್ಠಿರ!"

ಎರ್೫ನೆಯ ಅಧ್ಯಾಯವು ಮುಗಿಯಿತು.

೨೬೦ನೆಯ ಅಧ್ಯಾಯ ವ್ರೀಹಿದ್ರೌಣಿಕಪರ್ವ (ಮುಂದುವರಿದಿದೆ.)

## ದುರ್ವಾಸಮಹರ್ಷಿಯು ಮುದ್ಗಲನ ದಾನಧರ್ಮದ ಸತ್ತ್ವವನ್ನು ಪರೀಕ್ಷಿಸಿದುದು : ಮುದ್ಗಲನು ದೇವದೂತನನ್ನು ಪ್ರಶ್ನಿಸಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ವ್ಯಾಸರ ಮಾತುಗಳನ್ನು ಕೇಳಿ ಉತ್ಸುಕನಾದ ಯುಧಿಷ್ಠಿರನು ಮಹರ್ಷಿಗಳನ್ನು ಪ್ರಶ್ನಿಸಿದನು :

"ಭಗವನ್! ಮುದ್ಗಲಮಹರ್ಷಿಯು ದ್ರೋಣ*ಪರಿಮಿತವಾದ ಧಾನ್ಯವನ್ನು ದಾನಮಾಡಿದ ಕಾರಣವೇನು? ಯಾರಿಗೆ ದಾನಮಾಡಿದನು ಮತ್ತು ಯಾವ ವಿಧಿಯನ್ನನುಸರಿಸಿ ದಾನಮಾಡಿದನು? ಈ ವಿಷಯಗಳನ್ನು

* ದ್ರೋಣ ಶಬ್ದಕ್ಕೆ ನಾಲ್ಕು ಕೊಳಗ (೪ ಸೇರು) ಎಂಬ ಅರ್ಥವೂ ಉಂಟು.

ವಿವರವಾಗಿ ಹೇಳಿರಿ. ಸದ್ಧರ್ಮಚಾರಿಯಾದ ಮುದ್ಗಲಮಹರ್ಷಿಯ ಒಳ್ಳೆಯ ಕ್ರಿಯೆಯಿಂದ ಧರ್ಮಕ್ಕೆ ಸಾಕ್ಷಿಭೂತನಾದ ಪರಮೇಶ್ವರನೇ ಸಂತುಷ್ಟನಾದ ನೆಂದ ಮೇಲೆ ನಿಶ್ಚಯವಾಗಿಯೂ ಮಹರ್ಷಿಯ ಜನ್ಮವು ಸಾಫಲ್ಯಹೊಂದಿ ತೆಂದೇ ಭಾವಿಸುತ್ತೇನೆ."

"ಮಗು! ಯುಧಿಷ್ಠಿರ! ಕುರುಕ್ಷೇತ್ರದಲ್ಲಿ ಜಿತೇಂದ್ರಿಯನಾದ ಧರ್ಮಾತ್ಮನಾದ, ಅಸೂಯಾರಹಿತನಾದ, ಸತ್ಯನಿಷ್ಠನಾದ ಮುದ್ಗಲನೆಂಬ ಮಹರ್ಷಿಯಿದ್ದನು. ಅವನು ಶಿಲೋಂಛವೃತ್ತಿಗಳಿಂದ* ಜೀವಿಸುತ್ತಿದ್ದನು.

ಹೀಗೆ ಜೀವಿಸುವುದಕ್ಕೆ ಕಪೋತವೃತ್ತಿಯೆಂದೂ ಕರೆಯುತ್ತಾರೆ. ಬಹುದುಷ್ಕರವಾದ ಕಪೋತವೃತ್ತಿಯಿಂದ ಮುದ್ಗಲನು ಜೀವನನಡೆಸುತ್ತಿರು ವಾಗಲೂ ಅವನು ಅತಿಥಿಸತ್ಕಾರದಲ್ಲಿ ಸರ್ವದಾ ನಿರತನಾಗಿರುತ್ತಿದ್ದನು. **'ಇಷ್ಟೀ ಕೃತಂ'** ಎಂಬ ಹೆಸರಿನ ಯಾಗವನ್ನೂ ಸಹ ಮಾಡುತ್ತಿದ್ದನು. ಒಂದೊಂದು ಪಕ್ಷದಲ್ಲಿ ಸಂಗ್ರಹಿಸಿದ ಧಾನ್ಯದಿಂದ ಹುಣ್ಣಿಮೆ-ಅಮಾವಾಸ್ಯೆ ಗಳಲ್ಲಿ ಇಷ್ಟಿಗಳನ್ನು ಮಾಡಿ ಅತಿಥಿಸತ್ಕಾರಮಾಡುತ್ತಾ ತಾನೂ ಸಹ ಪಕ್ವಾಹಾರನಾಗಿ ಹದಿನೈದು ದಿನಗಳಿಗೊಮ್ಮೆ ಊಟಮಾಡುತ್ತಾ ಜೀವಿಸು ತ್ತಿದ್ದನು. ಕಪೋತಪಕ್ಷಿಯಂತೆ ಹೊಲ-ಗದ್ದೆಗಳಿಗೆ ಹೋಗಿ ಧಾನ್ಯಸಂಗ್ರಹ ಮಾಡುತ್ತಿದ್ದನು. ಇದೇ ರೀತಿಯಲ್ಲಿ ಮುದ್ಗಲಮಹರ್ಷಿಯು ದರ್ಶ-ಪೂರ್ಣ ಮಾಸಾದಿ ಕ್ರತುಗಳನ್ನೂ ಮಾಡುತ್ತಾ ಯಾರೊಬ್ಬರ ವಿಷಯದಲ್ಲಿಯೂ ಮಾತ್ಸರ್ಯವಿಲ್ಲದವನಾಗಿ, ಪರಿಶುದ್ಧಾಂತರಂಗನಾಗಿ, ದೇವತೆಗಳನ್ನೂ-ಅತಿಥಿಗಳನ್ನೂ ಅನುದಿನವೂ ಪೂಜಿಸಿ ಸತ್ಕರಿಸಿದನಂತರ ಉಳಿದುದನ್ನು ಪತ್ನೀ-ಪುತ್ರರೊಡನೆ ಉಪಭುಂಜಿಸುತ್ತಾ ಕಾಲಕಳೆಯುತ್ತಿದ್ದನು.

ಯುಧಿಷ್ಠಿರ! ಪ್ರತಿಯೊಂದು ಪರ್ವದಲ್ಲಿಯೂ ಸಾಕ್ಷಾತ್ ಶಚೀಪತಿಯೇ ದೇವತೆಗಳೊಡನೆ ಬಂದು ಮುದ್ಗಲಮಹರ್ಷಿಯು ಕೊಡುತ್ತಿದ್ದ ಹವಿರ್ಭಾಗವನ್ನು ಅವನ ಸಮ್ಮುಖದಲ್ಲಿಯೇ ಉಪಭುಂಜಿಸುತ್ತಿದ್ದನು.

ಮುನಿವೃತ್ತಿಯಿಂದ ಸಮನ್ವಿತನಾಗಿದ್ದ ಆ ಮುದ್ಗಲಮಹರ್ಷಿಯು

---

* ಹೊಲ-ಗದ್ದೆಗಳಲ್ಲಿ ಪೈರುಗಳನ್ನು ಕೊಯ್ದು ರೈತರು ಒಯ್ದನಂತರ ಅಲ್ಲಿ ಬಿದ್ದಿರಬಹುದಾದ ಹಕ್ಕಲನ್ನು (ಕಾಳುಗಳು) ಆಯ್ದುಕೊಂಡು ಅದರಿಂದಲೇ ಜೀವನ ನಡೆಸುವುದಕ್ಕೆ ಶಿಲ ಮತ್ತು ಉಂಛವೃತ್ತಿಗಳೆಂದು ಹೆಸರು.

ಪರ್ವಕಾಲಗಳಲ್ಲಿ ಇಷ್ಟಿಯನ್ನು ಮಾಡಿ, ದೇವತೆಗಳಿಗೆ ಹವಿರ್ಭಾಗಗಳನ್ನಿತ್ತು, ಸಂತುಷ್ಟಾಂತರಂಗನಾಗಿ ಅತಿಥಿಗಳಿಗೆ ಭೋಜನಮಾಡಿಸುತ್ತಿದ್ದನು. ಕಟ್ಟಕಡೆಯಲ್ಲಿ ಒಂದು ಅಗುಳು ಉಳಿಯುವವರೆಗೂ ಅತಿಥಿಗಳನ್ನು ಸತ್ಕರಿಸುತ್ತಿದ್ದನು. ಮತ್ತೊಂದು ಆಶ್ಚರ್ಯವೇನೆಂದರೆ :

**ವ್ರೀಹಿದ್ರೋಣಸ್ಯ ತದಸ್ಯ ದದತೋಽನ್ನಂ ಮಹಾತ್ಮನಃ ।**
**ಶಿಷ್ಟಂ ಮಾತ್ಸರ್ಯಹೀನಸ್ಯ ವರ್ಧತೇಽತಿಥಿದರ್ಶನಾತ್ ॥೯॥**

ಮಾತ್ಸರ್ಯಹೀನನಾದ ಅವನ ಮನೆಗೆ ಭೋಜನಾನಂತರವೂ ಯಾರಾದರೂ ಅತಿಥಿಗಳು ಬಂದರೆಂದರೆ ಮರುಕ್ಷಣದಲ್ಲಿಯೇ ಆ ಅಗುಳನ್ನವು ಅತಿಥಿಗಳಿಗೆ ಬೇಕಾಗುವಷ್ಟು ವೃದ್ಧಿಹೊಂದಿ ಆ ಪಾತ್ರೆಯಲ್ಲಿ ಸಿದ್ಧವಾಗುತ್ತಿದ್ದಿತು. ಮುದ್ಗಲಮುನಿಯ ತ್ಯಾಗಬುದ್ಧಿಯಿಂದಲೂ, ಹೃದಯವೈಶಾಲ್ಯದಿಂದಲೂ ಅತಿಥಿಗಳು ಊಟಮಾಡಿ ಉಳಿದಿದ್ದ ಅಗುಳನ್ನವೇ ವೃದ್ಧಿಹೊಂದುತ್ತಿದ್ದಿತು. ಇದರಿಂದಾಗಿ ಮುದ್ಗಲನು ಅನುದಿನವೂ ಮನನಶೀಲರಾದ ನೂರಾರು ಬ್ರಾಹ್ಮಣರಿಗೆ ಬಹುಸಂತೋಷದಿಂದ ಭೋಜನಮಾಡಿಸುತ್ತಿದ್ದನು.

ವ್ರತನಿಷ್ಠನಾದ, ಧರ್ಮಿಷ್ಠನಾದ ಮುದ್ಗಲನ ಮಹಿಮೆಯು ಸರ್ವತ್ರ ಶ್ರುತವಾಯಿತು. ದಿಗಂಬರನಾದ, ಮಹರ್ಷಿಯಾದ ದುರ್ವಾಸನಿಗೂ ಆ ವಾರ್ತೆಯು ತಿಳಿಯಿತು. ಅಸ್ತವ್ಯಸ್ತವೇಷವನ್ನು ಧರಿಸಿದವನಾಗಿ, ಹುಚ್ಚನಂತೆ ತೋರಿಸಿಕೊಳ್ಳುತ್ತಾ, ತಲೆಯನ್ನೂ ಕೆದರಿಕೊಂಡು ದುರ್ವಾಸನು ಮುದ್ಗಲನ ಆಶ್ರಮಕ್ಕೆ ಆಗಮಿಸಿದನು. ಆಶ್ರಮಕ್ಕೆ ಬಂದೊಡನೆಯೇ ಮುದ್ಗಲಮಹರ್ಷಿಯನ್ನು ಕುರಿತು ಹೇಳಿದನು :

**ಅನ್ನಾರ್ಥಿನಮನುಪ್ರಾಪ್ತಂ ವಿದ್ಧಿ ಮಾಂ ದ್ವಿಜಸತ್ತಮ ॥೧೩॥**

"ಬ್ರಾಹ್ಮಣೋತ್ತಮ! ಊಟಮಾಡುವುದಕ್ಕಾಗಿಯೇ ನಾನಿಲ್ಲಿಗೆ ಬಂದಿರುತ್ತೇನೆ."

ಒಡನೆಯೇ ಮುದ್ಗಲನು ಮೇಲೆದ್ದು ಮಹರ್ಷಿಯನ್ನು ಸ್ವಾಗತಿಸಿ, ಪಾದ್ಯಾಚಮನೀಯಗಳನ್ನೂ-ಅರ್ಘ್ಯವನ್ನೂ ಕೊಟ್ಟು ಸತ್ಕರಿಸಿ, ಪೀಠದಲ್ಲಿ ಕುಳ್ಳಿರಿಸಿದನು. ಹಸಿದು ಬಂದಿದ್ದ ಮತ್ತು ಹುಚ್ಚನಂತೆ ಕಾಣುತ್ತಿದ್ದ ದುರ್ವಾಸಮಹರ್ಷಿಗೆ ವ್ರತನಿಷ್ಠನಾದ ಮುದ್ಗಲನು ಬಹುಶ್ರದ್ಧೆಯಿಂದ ಭೋಜನವನ್ನು ಸಿದ್ಧಪಡಿಸಿದನು. ಹಸಿದಿದ್ದ ಮತ್ತು ಹುಚ್ಚನಂತಿದ್ದ

ದುರ್ವಾಸಮಹರ್ಷಿಯು ಮುದ್ಗಲನಿತ್ತ ಅನ್ನವೆಲ್ಲವನ್ನೂ ತಿಂದು ಮುಗಿಸಿಬಿಟ್ಟನು. ಮುದ್ಗಲನು ಮಹರ್ಷಿಗಿನ್ನೂ ತೃಪ್ತಿಯಾಗಿಲ್ಲವೆಂದು ಭಾವಿಸಿ ಪುನಃ ಬಡಿಸಿದನು. ದುರ್ವಾಸಮಹರ್ಷಿಯು ಅದರಲ್ಲಿ ಸ್ವಲ್ಪಭಾಗವನ್ನೂ ಮಿಗಿಸದೇ ತಿಂದು ಉಚ್ಛಿಷ್ಟಾನ್ನವನ್ನು ಮೈಗೆ ಪೂಸಿಕೊಂಡು ಹೊರಟುಹೋದನು.



(ಪಾತ್ರೆಯಲ್ಲಿ ಒಂದಗುಳೂ ನಿಲ್ಲದಂತೆ ದುರ್ವಾಸನು ತಿಂದು ಹೋಗಿದ್ದುದರಿಂದ ಅಗುಳನ್ನಕ್ಕೆ ಅಭಿವೃದ್ಧಿಹೊಂದುವ ಅವಕಾಶವಿರಲಿಲ್ಲ.) ಇದರಿಂದಾಗಿ ದುರ್ವಾಸನು ಹೊರಟುಹೋದನಂತರ ಮುದ್ಗಲನು ಭೋಜನ ಮಾಡಲು ಆಹಾರವಿಲ್ಲದಾಯಿತು. ಮುದ್ಗಲನು ಮುಂದಿನಪಕ್ಷದಲ್ಲಿ ಉಂಛ ವೃತ್ತಿಯಿಂದ ಧಾನ್ಯವನ್ನು ಸಂಗ್ರಹಿಸಿ ಮಾಸದ ಇನ್ನೊಂದು ಪಕ್ಷದಲ್ಲಿ ಯಥಾ

ಪೂರ್ವವಾಗಿ 'ಇಷ್ಟೀಕೃತಂ' ಎಂಬ ಹೆಸರಿನ ಯಾಗಮಾಡಿದನು. ಆಗಲೂ ಸಹ ದುರ್ವಾಸನು ಬಂದು ಮುದ್ಗಲನು ಸಂಗ್ರಹಿಸಿದ್ದ ಆಹಾರವೆಲ್ಲವನ್ನೂ ತಾನೊಬ್ಬನೇ ಮುಗಿಸಿ ಉಚ್ಛಿಷ್ಟವನ್ನೂ ಮೈಗೆ ಪೂಸಿಕೊಂಡು ಒಂದಗುಳನ್ನವೂ ಇಲ್ಲದಂತೆ ಮಾಡಿ ಹೊರಟುಹೋದನು.

ಆಹಾರವಿಲ್ಲದೆಯೇ ಮುದ್ಗಲನು ಪುನಃ ಉಂಛವೃತ್ತಿಯಿಂದ ಧಾನ್ಯವನ್ನು ಸಂಗ್ರಹಿಸಿದನು. ಪುನಃ ದುರ್ವಾಸನು ಬಂದು ಎಲ್ಲವನ್ನೂ ತಿಂದು ತೇಗಿ ಹೊರಟುಹೋದನು. ಮುದ್ಗಲನ ಪತ್ನೀ-ಸುತರಿಗೂ ಸಹ ಪುನಃ ಆಹಾರವಿಲ್ಲ. ಆದರೆ ಹಸಿವು ಮುದ್ಗಲನ ಮನಸ್ಸಿನ ಸ್ಥಿರತೆಯನ್ನು ಚಂಚಲಗೊಳಿಸಲು ಸಮರ್ಥವಾಗಲಿಲ್ಲ. ಕೋಪವೆಂಬುದು ಅವನ ಹತ್ತಿರವೂ ಸುಳಿಯಲಿಲ್ಲ. ಮಾತ್ಸರ್ಯವಾಗಲೀ, ಮಾನಾಪಮಾನಗಳ ಭ್ರಾಂತಿಯಾಗಲೀ, ಯಾವ ವಿಧವಾದ ಉದ್ವೇಗವಾಗಲೀ ಮುದ್ಗಲನ ಮನಸ್ಸನ್ನು ಪ್ರವೇಶಿಸಲಿಲ್ಲ. ಕೇವಲ ಮುದ್ಗಲನ ಮನಸ್ಸು ಮಾತ್ರವಲ್ಲ ; ಅವನ ಪತ್ನೀ-ಪುತ್ರರ ಮನಸ್ಸೂ ಸಹ ಅದೇ ಸ್ಥಿತಿಯಲ್ಲಿದ್ದು ಪ್ರಶಾಂತವಾಗಿದ್ದಿತು. ಆದರೆ ದುರ್ವಾಸನಿಗೆ ಮಾತ್ರ ಮುದ್ಗಲನ ಮನಸ್ಸಿನಲ್ಲಿ ಕೋಪವನ್ನು ಹುಟ್ಟಿಸುವುದೇ ಉದ್ದೇಶವಾಗಿದ್ದಿತು. ಒಂದು ಬಾರಿಯಲ್ಲ ; ಎರಡು ಬಾರಿಯಲ್ಲ ; ಆರು ಬಾರಿ ಯಥಾಪೂರ್ವರೀತಿಯಲ್ಲಿ ಮುದ್ಗಲನು ಉಂಛವೃತ್ತಿಯಿಂದ ತಂದಿದ್ದ ಧಾನ್ಯವೆಲ್ಲವನ್ನೂ ಒಂದೇ ಬಾರಿಗೆ ತಿಂದು ಮುಗಿಸಿ ಹೊರಟುಹೋದನು. ಅವನ ಆ ಕ್ರಿಯೆಯಿಂದ ಮುದ್ಗಲನ ಹೃದಯವು ಒಮ್ಮೆಯಾದರೂ ಉದ್ವಿಗ್ನವಾಗಲಿಲ್ಲ. ಮುಖದಲ್ಲಿಯೂ ಸಹ ಒಂದು ಕ್ಷಣಮಾತ್ರವೂ ಅಸಮಾಧಾನಸೂಚಕವಾದ ಲಕ್ಷಣವು ದುರ್ವಾಸನಿಗೆ ಕಂಡುಬರಲಿಲ್ಲ. ಶುದ್ಧಸತ್ತ್ವನಾದ ಮುದ್ಗಲಮುನಿಯಲ್ಲಿ ಶುದ್ಧವಾದ ಮತ್ತು ಬಹುನಿರ್ಮಲವಾದ ಅಂತರಂಗವಿರುವುದನ್ನು ದುರ್ವಾಸನು ಕಂಡುಕೊಂಡನು. ತನ್ನ ಪರೀಕ್ಷೆಯಿನ್ನು ಸಾಕೆಂದು ನಿರ್ಧರಿಸಿದ ದುರ್ವಾಸನು ಮುದ್ಗಲಮಹರ್ಷಿಯನ್ನು ಕುರಿತು ಹೇಳಿದನು :

**ತ್ವತ್ಸಮೋ ನಾಸ್ತಿ ಲೋಕೇऽಸ್ಮಿನ್ದಾತಾ ಮಾತ್ಸರ್ಯವರ್ಜಿತಃ ॥**

"ಮಾತ್ಸರ್ಯದಿಂದ ವಿಹೀನನಾಗಿ ದಾನಮಾಡುವ ಮಹಾನುಭಾವನು ಈ ಪ್ರಪಂಚದಲ್ಲಿ ನಿನ್ನನ್ನು ಬಿಟ್ಟು ಮತ್ತಾರೂ ಇರುವುದಿಲ್ಲ. ಮಹರ್ಷೇ!

**ಕ್ಷುದ್ಧರ್ಮಸಂಜ್ಞಾಂ ಪ್ರಣುದತ್ಯಾದತ್ತೇ ಧೈರ್ಯಮೇವ ಚ ।**
**ರಸಾನುಸಾರಿಣೀ ಜಿಹ್ವಾ ಕರ್ಷತ್ಯೇವ ರಸಾನ್ಪ್ರತಿ ॥೨೪॥**

ಹಸಿವೆಂಬುದು ಬಹಳ ಘೋರವಾದುದು. ಹಸಿವೆಂಬುದು ಧರ್ಮವೆಂಬುದನ್ನೇ ಬಹುದೂರಮಾಡಿಬಿಡುತ್ತದೆ. ಹಸಿದಿರುವವನಿಗೆ ಧರ್ಮಾಧರ್ಮಗಳ ವಿವೇಚನೆಯು ಸ್ವಲ್ಪವಾದರೂ ಇರುವುದಿಲ್ಲ. ಸಹನೆಯಂತೂ (ಧೈರ್ಯವಂತೂ) ಇರಲು ಸಾಧ್ಯವೇ ಇಲ್ಲ. ನಾಲಿಗೆಯು ಯಾವಾಗಲೂ ರಸಾನುವರ್ತಿಯಾಗಿರುತ್ತದೆ. ತನ್ನ ಪ್ರಭಾವದಿಂದಾಗಿ ನಾಲಿಗೆಯು ಮಾನವನನ್ನು ಷಡ್ರಸಗಳೆಡೆಗೆ ಆಕರ್ಷಿಸುತ್ತದೆ.

**ಆಹಾರಪ್ರಭವಾಃ ಪ್ರಾಣಾ ಮನೋ ದುರ್ನಿಗ್ರಹಂ ಚಲಮ್ ।**
**ಮನಸಶ್ಚೇನ್ದ್ರಿಯಾಣಾಂ ಚಾಪ್ಯೈಕಾಗ್ರ್ಯಂ ನಿಶ್ಚಿತಂ ತಪಃ ॥೨೫॥**

ಪ್ರಾಣಗಳು ಯಾವಾಗಲೂ ಆಹಾರವನ್ನೇ ಅವಲಂಬಿಸಿರುತ್ತವೆ. ಮನುಷ್ಯನು ಅನ್ನಗತಪ್ರಾಣನು. ಮನಸ್ಸು ನಿಗ್ರಹಿಸಲು ಅಶಕ್ಯವಾದುದು ಮತ್ತು ಅತಿಚಂಚಲವಾದುದು. ಚಿತ್ತೈಕಾಗ್ರತೆ ಮತ್ತು ಇಂದ್ರಿಯನಿಗ್ರಹ– ಇವುಗಳು ತಪಸ್ಸಿಗೆ ಮುಖ್ಯಸಾಧನಗಳು ಅಥವಾ ಇವುಗಳು ನಿಶ್ಚಯವಾಗಿಯೂ ತಪಸ್ಸೇ ಆಗಿರುತ್ತವೆ.

**ಶ್ರಮೇಣೋಪಾರ್ಜಿತಂ ತ್ಯಕ್ತುಂ ದುಃಖಂ ಶುದ್ಧೇನ ಚೇತಸಾ ।**
**ತತ್ಸರ್ವಂ ಭವತಾ ಸಾಧೋ ಯಥಾವದುಪಪಾದಿತಮ್ ॥೨೬॥**

ಬಹಳ ಕಷ್ಟಪಟ್ಟು ಸಂಪಾದಿಸಿದುದನ್ನು ಪರಿಶುದ್ಧಾಂತರಂಗದಿಂದ ತ್ಯಾಗಮಾಡುವುದು ಬಹುದುಷ್ಕರವಾದುದು. ಆದರೆ ನೀನು ಇವುಗಳೆಲ್ಲವನ್ನೂ ಸಾಧಿಸಿರುವೆ. ನಿನಗೆ ಹಸಿವಿದ್ದರೂ ಅದರಿಂದುಂಟಾಗಬೇಕಾಗಿದ್ದ ವೈಕಲ್ಯವು ನಿನ್ನ ಮನಸ್ಸಿನಲ್ಲುಂಟಾಗಲಿಲ್ಲ. ಹಸಿವು ಯಾವ ವಿಧವಾದ ಪ್ರಭಾವವನ್ನೂ ನಿನ್ನ ಮೇಲೆ ಬೀರಲು ಅಸಮರ್ಥವಾಗಿದೆ. ನಿನ್ನ ನಾಲಿಗೆಯೂ ಸಹ ನಿನಗೆ ಅಧೀನವಾಗಿ ತನ್ನ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ.

ಗದ್ದೆಯಲ್ಲಿ ಬೆಳೆಯನ್ನು ಕೊಯ್ದನಂತರ ಉದುರಿದ ಕಾಳುಗಳನ್ನು ಬಹುಕಷ್ಟದಿಂದ ಆರಿಸಿಕೊಂಡು ಬಂದು ಅದಷ್ಟನ್ನೂ ಲೇಶಮಾತ್ರವೂ ಮನೋವೈಕಲ್ಯವಿಲ್ಲದೇ ದಾನಮಾಡಿರುವೆ. ಹೀಗೆ ಮಾಡಲು ಈ ಪೃಥ್ವಿಯಲ್ಲಿ ಯಾರೊಬ್ಬರಿಂದಲೂ ಸಾಧ್ಯವಾಗದು. ನೀನು ಮಾಡಿದ ಅತಿಥಿ

ಸತ್ಕಾರದಿಂದ ಪ್ರೀತನಾಗಿದ್ದೇನೆ ಮತ್ತು ನಿನ್ನಂತಹ ಶುದ್ಧಾತ್ಮರ ಸಹವಾಸವು ಲಭಿಸಿದ್ದರಿಂದ ಅನುಗೃಹೀತನೂ ಆಗಿದ್ದೇನೆ.

**ಇನ್ದ್ರಿಯಾಭಿಜಯೋ ಧೈರ್ಯಂ ಸಂವಿಭಾಗೋ ದಮಃ ಶಮಃ ।**
**ದಯಾ ಸತ್ಯಂ ಚ ಧರ್ಮಶ್ಚ ತ್ವಯಿ ಸರ್ವಂ ಪ್ರತಿಷ್ಠಿತಮ್ ॥೨೮॥**

ಜಿತೇಂದ್ರಿಯತೆ, ಧೈರ್ಯ, ಕ್ಷಮೆ, ಮನೋನಿಗ್ರಹ, ಶಾಂತಿ, ದಯೆ, ಸತ್ಯ ಮತ್ತು ಧರ್ಮ–ಇವು ನಿನ್ನಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ. ನಿನ್ನ ಸತ್ಕರ್ಮಗಳಿಂದಾಗಿ ನೀನಾಗಲೇ ಅನೇಕಲೋಕಗಳನ್ನು ಜಯಿಸಿಬಿಟ್ಟಿರುವೆ. ನಿನಗೆ ಪರಮಪದಸ್ಥಾನವು ಸ್ವಯಂಸಿದ್ಧವಾಗಿದೆ. ನೀನು ಮಾಡಿರುವ ಮಹಾದಾನವನ್ನು ಸ್ವರ್ಗವಾಸಿಗಳಾದ ದೇವತೆಗಳೂ ಸಹ ಮುಕ್ತಕಂಠದಿಂದ ಶ್ಲಾಘನೆಮಾಡುತ್ತಿದ್ದಾರೆ. ಸುಚರಿತವ್ರತನೇ! ನಿನ್ನ ಈ ಮಹಾದಾನದ ಫಲವಾಗಿ ನೀನು ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಬಹುದಾಗಿದೆ.”

ಯುಧಿಷ್ಠಿರ! ದುರ್ವಾಸನು ಮುದ್ಗಲನನ್ನು ಕುರಿತು ಹೀಗೆ ಹೇಳುತ್ತಿರುವ ಸಮಯಕ್ಕೆ ಸರಿಯಾಗಿ ದೇವದೂತನೊಬ್ಬನು ವಿಮಾನದಲ್ಲಿ ಕುಳಿತು ಮುದ್ಗಲಮಹರ್ಷಿಯ ಸಮೀಪಕ್ಕೆ ಆಗಮಿಸಿದನು. ಆ ವಿಮಾನವನ್ನು ಹಂಸ-ಸಾರಸಪಕ್ಷಿಗಳು ಹೊತ್ತಿದ್ದುವು. ಕಿಣಿ-ಕಿಣಿ ಶಬ್ದಮಾಡುವ ಗಂಟೆಗಳ ಮಾಲೆಗಳು ಆ ವಿಮಾನದ ಸುತ್ತಲೂ ಇದ್ದುವು.

ಈ ವಿಮಾನವು ಇಚ್ಛೆಬಂದಲ್ಲಿಗೆ ಹೋಗುವ ಸಾಮರ್ಥ್ಯವನ್ನು ಪಡೆದಿತ್ತು ಮತ್ತು ಚಿತ್ರ-ವಿಚಿತ್ರವಾದ ಬಣ್ಣಗಳಿಂದ ಅಲಂಕೃತವಾಗಿದ್ದಿತು. ವಿಮಾನವು ಸುಗಂಧಯುಕ್ತವಾಗಿದ್ದು ಸುತ್ತಲೂ ಬೀಸುತ್ತಿದ್ದ ಗಾಳಿಯನ್ನು ಸುಗಂಧಮಯವನ್ನಾಗಿ ಪರಿವರ್ತಿಸಿದ್ದಿತು. ಅಂತಹ ವಿಮಾನವನ್ನು ಮಹರ್ಷಿಯ ಬಳಿಗೆ ತಂದಿದ್ದ ದೇವದೂತನು ಮುದ್ಗಲನನ್ನು ಕುರಿತು ಹೇಳಿದನು :

“ಮಹರ್ಷೇ! ಈ ವಿಮಾನವನ್ನು ಆರೋಹಣಮಾಡು. ನೀನು ಮಾಡಿರುವ ಸತ್ಕರ್ಮಗಳ ಫಲವಾಗಿ ಈ ವಿಮಾನವು ಸಿದ್ಧವಾಗಿ ಬಂದಿದೆ. ನೀನು ಈ ವಿಮಾನದಲ್ಲಿ ಕುಳಿತು ಉತ್ತಮಲೋಕಗಳಿಗೆ ತೆರಳಬಹುದಾಗಿದೆ.”

ದೇವದೂತನ ಮಾತುಗಳನ್ನು ಕೇಳಿ ಮುದ್ಗಲನು ಅವನನ್ನು ಪ್ರಶ್ನಿಸಿದನು : “ನೀನು ಹೇಳಿದ ಆ ಸ್ವರ್ಗನಿವಾಸಿಗಳ ಗುಣಕಥನವನ್ನು ಮಾಡುವವ

ನಾಗು. ಅಲ್ಲಿ ವಾಸಮಾಡುವವರ ಕಲ್ಯಾಣಗುಣಗಳೇನು? ಅವರು ಮಾಡುವ ತಪಸ್ಸು ಯಾವುದು? ಅವರ ತಪಸ್ಸಿನ ಉದ್ದೇಶವೇನು ಮತ್ತು ಆ ನಿಮ್ಮ ಸ್ವರ್ಗದಲ್ಲಿ ಯಾವ ವಿಧವಾದ ಸುಖವು ಲಭ್ಯವಾಗುತ್ತದೆ? ಅಲ್ಲಿ ಯಾವ ವಿಧವಾದ ದೋಷಗಳೂ ಇಲ್ಲವೇ? ಒಂದು ವೇಳೆ ಇರುವುದಾದರೆ ಅದನ್ನೂ ಸಹ ನನಗೆ ಸ್ಪಷ್ಟವಾಗಿ ಹೇಳು.



ನಾನು ನಿನ್ನನ್ನು ನನ್ನ ಮಿತ್ರನೆಂದೇ ಭಾವಿಸಿ ಈ ಪ್ರಶ್ನೆಗಳನ್ನು ಕೇಳುತ್ತಿದ್ದೇನೆ. ಸತ್ಪುರುಷರೊಡನೆ ಮಿತ್ರತ್ವವು ಕೇವಲ ಏಳು ಹೆಜ್ಜೆಗಳಷ್ಟು ದೂರ ಜೊತೆಯಲ್ಲಿ ಹೋಗುವುದರಿಂದಲೇ ಪ್ರಾಪ್ತವಾಗುವುದೆಂದು ಸತ್ಕುಲ ಪ್ರಸೂತರಾದ ಸಂತರು ಹೇಳುತ್ತಾರೆ. ನೀನು ಈ ವಿಷಯವನ್ನು ಸ್ವಲ್ಪವೂ ಮರೆಮಾಚದೇ ಹೇಳು ಮತ್ತು ಈ ಸಂದರ್ಭದಲ್ಲಿ ನಾನು ಹೇಗೆ ನಡೆದು

ಕೊಂಡರೆ ನನಗೆ ಶಾಶ್ವತವಾದ ಪರಮಸುಖವು ಸಿಕ್ಕುವುದೆಂಬುದನ್ನೂ ಹೇಳು. ನೀನು ಈ ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿದ ನಂತರವೇ ನಾನು ಏನು ಮಾಡಬೇಕೆಂಬುದನ್ನು ನಿರ್ಧರಿಸುತ್ತೇನೆ."

೨೬೦ನೆಯ ಅಧ್ಯಾಯವು ಮುಗಿಯಿತು.

೨೬೧ನೆಯ ಅಧ್ಯಾಯ ವ್ರೀಹಿದ್ರೌಣಿಕಪರ್ವ (ಮುಂದುವರಿದಿದೆ.)

## ದೇವದೂತನಿಂದ ಸ್ವರ್ಗಲೋಕದಲ್ಲಿನ ಗುಣ-ದೋಷಗಳನ್ನೂ ಮತ್ತು ದೋಷರಹಿತವಾದ ವಿಷ್ಣುಧಾಮದ ವಿವರಣೆಯನ್ನೂ ಕೇಳಿ ಮುದ್ಗಲನು ದೇವದೂತನನ್ನು ಹಿಂದಕ್ಕೆ ಕಳುಹಿಸಿದುದು : ವ್ಯಾಸರು ಯುಧಿಷ್ಠಿರನನ್ನು ಸಮಾಧಾನಪಡಿಸಿ ತಮ್ಮ ಆಶ್ರಮಕ್ಕೆ ಹಿಂದಿರುಗಿದುದು

ದೇವದೂತನು ಹೇಳಿದನು :

"ಬ್ರಾಹ್ಮಣೋತ್ತಮ! ನಿನ್ನ ಬುದ್ಧಿಯು ಬಹುಶ್ಲಾಘ್ಯವಾಗಿದೆ. ಸ್ವರ್ಗಸುಖವೇ ಉತ್ತಮವಾದುದೆಂದು ಮಾನವರು ಭಾವಿಸುತ್ತಾರೆ ಮತ್ತು ಸ್ವರ್ಗಪ್ರಾಪ್ತಿಯನ್ನೇ ಪರಮಧ್ಯೇಯಸಾಧನೆಯೆಂದೂ ತಿಳಿಯುತ್ತಾರೆ. ಹೀಗಿರುವಾಗ ನೀನು ಸ್ವರ್ಗದ ವಿಷಯವಾಗಿ ಏನೂ ತಿಳಿಯದವನಂತೆ ವಿಮರ್ಶೆ ಮಾಡುತ್ತಿರುವೆ.

'ಸ್ವಃ' ಎಂಬ ಸಂಜ್ಞೆಯಿಂದ ಕೂಡಿರುವ ಸ್ವರ್ಗಲೋಕ ಅಥವಾ ಸುಖಮಯಲೋಕವು ಮೇಲ್ಭಾಗದಲ್ಲಿರುವುದು. ಆ ಲೋಕವು ಮೇಲ್ಮುಖವಾಗಿ ಹೋಗುವುದರಿಂದಲೇ ಹೊಂದಲ್ಪಡತಕ್ಕದ್ದು ಮತ್ತು ಬ್ರಹ್ಮಮಾರ್ಗವೂ ಅದೇ ಆಗಿರುವುದು. ಆದುದರಿಂದಲೇ ಈ ಲೋಕದಲ್ಲಿ ದೇವಯಾನವು ಸಂಚರಿಸುತ್ತಿರುತ್ತದೆ. ಆ ಲೋಕಕ್ಕೆ ಎಲ್ಲರೂ ಹೋಗಲಾರರು.

**ನಾತಪ್ತತಪಸಃ ಪುಂಸೋ ನಾಮಹಾಯಜ್ಞಯಾಜಿನಃ ।**
**ನಾನೃತಾ ನಾಸ್ತಿಕಾಶ್ಚೈವ ತತ್ರ ಗಚ್ಛನ್ತಿ ಮುದ್ಗಲ ॥೩॥**

ತಪಸ್ಸುಮಾಡದ ಮಾನವರು, ಮಹಾಯಜ್ಞಗಳನ್ನು ಮಾಡದವರು,

ಸುಳ್ಳುಹೇಳುವವರು ಮತ್ತು ನಾಸ್ತಿಕರು–ಆ ಲೋಕಕ್ಕೆ ಖಂಡಿತವಾಗಿಯೂ ಹೋಗಲಾರರು.

**ಧರ್ಮಾತ್ಮಾನೋ ಜಿತಾತ್ಮಾನಃ ಶಾನ್ತಾ ದಾನ್ತಾ ವಿಮತ್ಸರಾಃ ।**
**ದಾನಧರ್ಮರತಾ ಮರ್ತ್ಯಾಃ ಶೂರಾಶ್ಚಾಹವಲಕ್ಷಣಾಃ ॥೪॥**

**ತತ್ರ ಗಚ್ಛನ್ತಿ ಧರ್ಮಾಗ್ರ್ಯಂ ಕೃತ್ವಾ ಶಮದಮಾತ್ಮಕಮ್ ।**
**ಲೋಕಾನ್ಪುಣ್ಯಕೃತಾಂ ಬ್ರಹ್ಮನ್ಸದ್ಭಿರಾಚರಿತಾನ್ನೃಭಿಃ ॥೫॥**

ಧರ್ಮಾತ್ಮರಾದವರು, ಜಿತಾತ್ಮರಾದವರು, ಶಾಂತಮನಸ್ಕರು, ಜಿತೇಂದ್ರಿಯರು, ಅಸೂಯಾರಹಿತರು, ದಾನ-ಧರ್ಮಪರರು, ಶೂರರು, ಯುದ್ಧದಲ್ಲಿ ಶತ್ರುವಿಗೆ ಬೆನ್ನುತೋರಿಸದೇ ಹೋರಾಡಿ ಪ್ರಾಣತೊರೆಯುವವರು–ಇವರೆಲ್ಲರೂ ನಾನು ಹೇಳಿದ ಆ ಸ್ವರ್ಗಲೋಕಕ್ಕೆ ಹೋಗುತ್ತಾರೆ. ಶಮ-ದಮಾದಿಗಳಿಂದ ಮಾತ್ರವೇ ಸಾಧ್ಯವಾಗುವ ಶ್ರೇಷ್ಠಧರ್ಮವೆನಿಸಿದ ಯೋಗಮಾರ್ಗವನ್ನವಲಂಬಿಸಿದವರೂ ಸಹ ಆ ಲೋಕಕ್ಕೆ ಹೋಗಲು ಸಮರ್ಥರಾಗುತ್ತಾರೆ. ಕೇವಲ ಪುಣ್ಯಪ್ರಭಾವದಿಂದಲೇ ಆ ಲೋಕಗಳು ಲಭಿಸತಕ್ಕುವುಗಳು. ಆದುದರಿಂದ ಆ ಲೋಕದಲ್ಲಿ ಇರುವವರೆಲ್ಲರೂ ಸತ್ಪುರುಷರೇ ಆಗಿರುತ್ತಾರೆ.

ದೇವತೆಗಳು, ಸಾಧ್ಯರು, ವಿಶ್ವೇದೇವತೆಗಳು, ಮಹರ್ಷಿಗಳು, ಯಾಮರು, ಧಾಮರು (ಗಣವಿಶೇಷಗಳು), ಗಂಧರ್ವಾಪ್ಸರೆಯರು–ಇವರೆಲ್ಲರಿಗೂ ಮೇಲ್ಭಾಗದಲ್ಲಿ ಪ್ರತ್ಯೇಕ-ಪ್ರತ್ಯೇಕವಾದ ಲೋಕಗಳಿವೆ. ಅವುಗಳೆಲ್ಲವೂ ತೇಜೋಮಯವಾಗಿಯೂ–ಬಹುಪ್ರಕಾಶಮಾನವಾಗಿಯೂ ಇವೆ. ಶುಭಾವಹಗಳಾಗಿವೆ. ಈ ಲೋಕಗಳಲ್ಲಿರುವವರಿಗೆ ಅಪೇಕ್ಷ್ಯವಾದ ಸಕಲವಸ್ತುಗಳೂ ಆ ಲೋಕಗಳಲ್ಲಿ ಲಭ್ಯವಾಗುತ್ತವೆ. ಅಲ್ಲಿಯೇ ಮೂವತ್ತುಮೂರು ಸಾವಿರಯೋಜನ ವಿಸ್ತೀರ್ಣವುಳ್ಳ, ಪ್ರಕಾಶಮಾನವಾದ, ಸುವರ್ಣಮಯವಾದ ಮೇರುಪರ್ವತವೂ ಇರುವುದು. ಆ ಪರ್ವತದಲ್ಲಿ ಪುಣ್ಯಕರ್ಮಿಗಳಿಗೆ ಮಾತ್ರವೇ ವಿಹರಿಸಲು ಯೋಗ್ಯವಾದ, ಪುಣ್ಯತಮವಾದ, ನಯನಮನೋಹರವಾದ, ದಿವ್ಯವಾದ ನಂದನವೇ ಮೊದಲಾದ ಉದ್ಯಾನವನಗಳಿವೆ.

ಮುದ್ಗಲ! ಆ ಲೋಕಗಳಲ್ಲಿರುವವರಿಗೆ ಹಸಿವು-ಬಾಯಾರಿಕೆಗಳಿರುವುದಿಲ್ಲ. ಬಳಲಿಕೆಯಿರುವುದಿಲ್ಲ. ಶೀತೋಷ್ಣಗಳ ವೈಪರೀತ್ಯವಿಲ್ಲ. ಯಾವ

ವಿಧವಾದ ಅಶುಭವಾತಾವರಣವೂ ಆ ಲೋಕಗಳಲ್ಲಿರುವುದಿಲ್ಲ. ಅಲ್ಲಿರುವ ಸೌಧಗಳೂ, ಶ್ರೇಣಿಗಳೂ, ಉದ್ಯಾನವನಗಳೂ ಮನೋಜ್ಞವಾಗಿರುತ್ತವೆ. ವಾತಾವರಣವು ಯಾವಾಗಲೂ ಸುವಾಸಿತವಾಗಿರುತ್ತದೆ. ಅಲ್ಲಿರುವ ಎಲ್ಲ ವಸ್ತುಗಳೂ ಸ್ಪರ್ಶಮಾತ್ರದಿಂದಲೇ ಸುಖದಾಯಕಗಳಾಗಿರುತ್ತವೆ. ಅಲ್ಲಿ ಆಗುವ ಶಬ್ದವೂ ಸಹ ಕಿವಿಗಳಿಗೂ ಮನಸ್ಸಿಗೂ ಆಪ್ಯಾಯನವನ್ನುಂಟು ಮಾಡುತ್ತದೆ. ಅಲ್ಲಿ ಯಾವ ವಿಧವಾದ ಶೋಕವೂ ಇಲ್ಲ. ಅಲ್ಲಿರುವವರಿಗೆ ಮುಪ್ಪೆಂಬುದೇ ಇಲ್ಲ. ಆಯಾಸವಿಲ್ಲ. ಯಾವ ಕಾರಣದಿಂದಲೂ ಪಶ್ಚಾತ್ತಾಪಪಡುವ ಕಾರಣವೂ ಅಲ್ಲಿ ಉದ್ಭವಿಸುವುದಿಲ್ಲ. ತಾನು ಮಾಡಿದ ಸತ್ಕರ್ಮದ ಫಲವಾಗಿ ಪ್ರಾಪ್ತವಾಗುವ ಸ್ವರ್ಗಲೋಕದ ಸುಖ-ಸೌಲಭ್ಯಗಳು ಈ ರೀತಿಯಾಗಿರುತ್ತವೆ, ಮುದ್ಗಲ! ತಾವು ಮಾಡಿದ ಸುಕೃತದ ಫಲದಿಂದ ಮಾತ್ರವೇ ಪುರುಷರು ಆ ಲೋಕಗಳಿಗೆ ಹೋಗಲು ಸಮರ್ಥರಾಗುತ್ತಾರೆ. ಅಲ್ಲಿರುವವರ ಶರೀರಗಳೆಲ್ಲವೂ ತೇಜೋರೂಪವಾಗಿರುತ್ತವೆ. ಆ ಶರೀರಗಳು ಸ್ವಯಂಕೃತವಾದ ಸತ್ಕರ್ಮಫಲಗಳಿಂದ ಪ್ರಾಪ್ತವಾಗುವುವೇ ಹೊರತು ಮಾತಾ-ಪಿತೃಗಳ ರಜೋವೀರ್ಯಗಳಿಂದ ಉತ್ಪನ್ನವಾಗುವುದಿಲ್ಲ.

**ನ ಸಂಸ್ವೇದೋ ನ ದೌರ್ಗನ್ಧ್ಯಂ ಪುರೀಷಂ ಮೂತ್ರಮೇವ ಚ ।**
**ತೇಷಾಂ ನ ಚ ರಜೋ ವಸ್ತ್ರಂ ಬಾಧತೇ ತತ್ರ ವೈ ಮುನೇ ॥೧೪॥**

ಅಲ್ಲಿರುವವರಿಗೆ ಬೆವರಿರುವುದಿಲ್ಲ. ಶರೀರಗಳಲ್ಲಿ ದುರ್ವಾಸನೆಯಿರುವುದಿಲ್ಲ. ಮೂತ್ರ-ಪುರೀಷೋತ್ಸರ್ಜನೆಗಳ ಬಾಧೆಗಳಿಲ್ಲ. ಅಲ್ಲಿರುವವರ ವಸ್ತ್ರಗಳು ಎಂದೆಂದಿಗೂ ಮಾಲಿನ್ಯವನ್ನು ಹೊಂದುವುದಿಲ್ಲ. ಅರ್ಥಾತ್ ಆ ಲೋಕದಲ್ಲಿ ಧೂಳೆಂಬುದೇ ಇಲ್ಲ.

**ನ ಮ್ಲಾಯನ್ತಿ ಸ್ರಜಸ್ತೇಷಾಂ ದಿವ್ಯಗನ್ಧಾ ಮನೋರಮಾಃ ।**
**ಸಂಯುಜ್ಯನ್ತೇ ವಿಮಾನೈಶ್ಚ ಬ್ರಹ್ಮನ್ನೇವಂವಿಧೈಶ್ಚ ತೇ ॥೧೫॥**

ಅವರು ಶೃಂಗಾರಾರ್ಥವಾಗಿ ಧರಿಸಿಕೊಳ್ಳುವ ದೇವಸುಮಮಾಲೆಗಳು ಸರ್ವದಾ ಸುಗಂಧಿಗಳಾಗಿರುವುವಲ್ಲದೇ ಯಾವಾಗಲೂ ಬಾಡಿಹೋಗುವುದಿಲ್ಲ. ನಾನೀಗ ನಿನ್ನ ಬಳಿಗೆ ತಂದಿರುವ ಇಂತಹ ವಿಮಾನಗಳಲ್ಲಿಯೇ ಅವರು ಸಂಚರಿಸುತ್ತಿರುತ್ತಾರೆ.

**ಈರ್ಷ್ಯಾಶೋಕಕ್ಲಮಾಪೇತಾ ಮೋಹಮಾತ್ಸರ್ಯವರ್ಜಿತಾಃ ।**
**ಸುಖಂ ಸ್ವರ್ಗಜಿತಸ್ತತ್ರ ವರ್ತಯನ್ತೇ ಮಹಾಮುನೇ ॥೧೬॥**

ಸ್ವರ್ಗವನ್ನು ಜಯಿಸಿರುವವರು (ಸ್ವರ್ಗಪ್ರಾಪ್ತಿಫಲದಾಯಕವಾದ ಸತ್ಕರ್ಮಗಳನ್ನು ಮಾಡಿರುವವರು) ಈರ್ಷ್ಯಾರಹಿತರಾಗಿ, ಶೋಕರಹಿತರಾಗಿ, ಶ್ರಮರಹಿತರಾಗಿ, ಮೋಹ-ಮದ-ಮಾತ್ಸರ್ಯವರ್ಜಿತರಾಗಿ, ಪರಮ ಸುಖದಿಂದ ಅಲ್ಲಿ ವಾಸಮಾಡುತ್ತಿರುತ್ತಾರೆ. ನಾನಿದುವರೆಗೆ ಹೇಳಿದುದೆಲ್ಲವೂ ಸ್ವರ್ಗಲೋಕದ ವಿಷಯವಾಯಿತು. ಅದರ ಮೇಲೆ ಅದಕ್ಕಿಂತಲೂ ಹೆಚ್ಚಿನ ದಿವ್ಯಗುಣಗಣಗಳುಳ್ಳ ಇನ್ನೂ ಅನೇಕಲೋಕಗಳೂ ಇವೆ. ಬ್ರಹ್ಮಲೋಕದ ಮುಂಭಾಗದಲ್ಲಿರುವ (ಕೆಳಭಾಗದಲ್ಲಿರುವ) ಆ ಲೋಕಗಳೆಲ್ಲವೂ ತೇಜೋಮಯವಾಗಿಯೂ ಶುಭಾವಹವಾಗಿಯೂ ಇರುತ್ತವೆ. ತಮ್ಮ ತಮ್ಮ ಸುಕರ್ಮಗಳಿಂದ  ಪೂತರಾದ ಮಹರ್ಷಿಗಳು ಆ ದಿವ್ಯಲೋಕಗಳಿಗೆ ಹೋಗಲು ಸಮರ್ಥರಾಗುತ್ತಾರೆ. ದೇವತೆಗಳಿಗೂ ಆರಾಧ್ಯರಾದ ಋಭುಗಳೆಂಬುವರು ಅಲ್ಲಿ ವಾಸವಾಗಿರುತ್ತಾರೆ. ನಾನು ಹಿಂದೆಯೇ ಹೇಳಿದಂತೆ ಆ ಲೋಕಗಳು ತೇಜೋಮಯವಾದುವುಗಳು ಮತ್ತು ಅತ್ಯಂತಶ್ರೇಷ್ಠವಾದುವುಗಳು. ಆ ಲೋಕಗಳನ್ನು ಸ್ವರ್ಗಲೋಕದ ದೇವತೆಗಳು ಸರ್ವಕಾಲದಲ್ಲಿಯೂ ಪೂಜಿಸುತ್ತಿರುತ್ತಾರೆ.

ಆ ಲೋಕಗಳಲ್ಲಿ ಕೆಲವು ಸ್ವಯಂಪ್ರಭೆಯಿಂದ ಪ್ರಕಾಶಿಸುತ್ತಿರುತ್ತವೆ. ಮತ್ತೆ ಕೆಲವು ಸರ್ವಕಾಮನೆಗಳನ್ನೂ  ಕೊಡುವ ಸಾಮರ್ಥ್ಯವನ್ನು ಪಡೆದಿರುತ್ತವೆ. ಅಲ್ಲಿ ವಾಸಿಸುವ ಋಭುಗಳು ಸ್ತ್ರೀಸಂಬಂಧವಾದ ಕಷ್ಟಗಳನ್ನು ಅನುಭವಿಸಬೇಕಾಗಿಲ್ಲ. ಲೋಕದ ಐಶ್ವರ್ಯವಾಗಲೀ, ತತ್ಸಂಬಂಧವಾದ ಮಾತ್ಸರ್ಯವಾಗಲೀ ಅವರಿಗಿರುವುದಿಲ್ಲ. ದೇವತೆಗಳಂತೆ ಅವರು ಯಜ್ಞದ ಆಹುತಿಯನ್ನು ಸ್ವೀಕರಿಸುವುದಿಲ್ಲ. ದೇವತೆಗಳಿಗೆ ಸರ್ವಶ್ರೇಷ್ಠವೆನಿಸಿದ ಅಮೃತವನ್ನೂ ಸಹ ಅವರು ಪಾನಮಾಡುವುದಿಲ್ಲ. ಋಭುಗಳೇನೋ ಜಾಜ್ವಲ್ಯಮಾನವಾದ ಶರೀರವನ್ನು ಧರಿಸಿರುತ್ತಾರೆ. ಆದರೆ ಅವರ ಆಕಾರವು ಹೀಗೆಯೇ ಇರುವುದೆಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ದೇವತೆಗಳಿಗೂ ದೇವತೆಗಳಾದ ಮತ್ತು ಸನಾತನರಾದ ಆ ಋಭುಗಳು ಸುಖಕಾಮರಲ್ಲ. ಅವರು ತೇಜೋರೂಪರು. ಅಶಾಶ್ವತವಾದ ಸುಖದಲ್ಲಿ ಅವರಿಗೆ

ಆಸಕ್ತಿಯೂ ಇಲ್ಲ. ಕಲ್ಪಾಂತರಗಳಲ್ಲಿಯೂ ಸಹ ಅವರು ಯಾವ ವಿಧವಾದ ವ್ಯತ್ಯಾಸವನ್ನೂ ಹೊಂದುವುದಿಲ್ಲ.

**ಜರಾ ಮೃತ್ಯುಃ ಕುತಸ್ತೇಷಾಂ ಹರ್ಷಃ ಪ್ರೀತಿಃ ಸುಖಂ ನ ಚ ।**
**ನ ದುಃಖಂ ನ ಸುಖಂ ಚಾಪಿ ರಾಗದ್ವೇಷೌ ಕುತೋ ಮುನೇ ॥೨೩॥**

ಅವರಿಗೆ ಹರ್ಷ-ಪ್ರೀತಿ-ಸುಖಗಳೂ ಇಲ್ಲ. ಹೀಗಿರುವಾಗ ಅವರಿಗೆ ಮುಪ್ಪು-ಸಾವುಗಳು ಹೇಗೆ ಪ್ರಾಪ್ತವಾಗುವುವು? ಸುಖ-ದುಃಖಗಳೆರಡೂ ಇಲ್ಲವೆಂದಮೇಲೆ ರಾಗ-ದ್ವೇಷಗಳಾದರೂ ಅವರಲ್ಲಿರಲು ಹೇಗೆ ತಾನೇ ಸಾಧ್ಯವಾಗುತ್ತದೆ?

ಋಭುಗಳ ಇಂತಹ ಒಂದು ಸ್ಥಿತಿಯನ್ನು ದೇವತೆಗಳು ಕೂಡ ಆಶಿಸುತ್ತಾರೆ. ಅದರ ಪ್ರಾಪ್ತಿಗಾಗಿಯೇ ಸತತಪ್ರಯತ್ನವನ್ನೂ ಮಾಡುತ್ತಾರೆ. ಪರಮಶ್ರೇಷ್ಠವಾದ ಆ ಸಿದ್ಧಿಯು (ಋಭುತ್ವವನ್ನು ಪಡೆಯುವುದು ಅಥವಾ ಋಭುಗಳಾಗುವುದು) ಬಹುಕಷ್ಟದಿಂದ ಮಾತ್ರವೇ ಸಾಧ್ಯವಾಗುವುದು. ಋಭುಫಲೇಚ್ಛುಗಳಿಗೆ ಆ ಸಿದ್ಧಿಯನ್ನು ಪಡೆಯುವ ಸಾಧ್ಯತೆಯೇ ಇಲ್ಲ. ಮುದ್ಗಲ! ಆ ಲೋಕಗಳಲ್ಲಿ ಮೂವತ್ತುಮೂರು ದೇವತೆಗಳಿದ್ದಾರೆ. ಸತ್ಪುರುಷರಾದವರು ಶ್ರೇಷ್ಠವಾದ ನಿಯಮಾನುಷ್ಠಾನಗಳಿಂದಲೂ ಮತ್ತು ವಿಧಿಪೂರ್ವಕವಾಗಿ ದಾನಮಾಡುವುದರಿಂದಲೂ ಆ ದೇವತೆಗಳ ಲೋಕಗಳನ್ನು ಪಡೆಯಲು ಸಮರ್ಥರಾಗುತ್ತಾರೆ. ನೀನು ಮಾಡಿದ ವಿಧಿಪೂರ್ವಕವಾದ ಅನ್ನದಾನದಿಂದ ಆ ಪವಿತ್ರಲೋಕಗಳನ್ನೂ ನೀನು ಜಯಿಸಿರುವೆ. ತಪಶ್ಚರಣೆಯಿಂದಾಗಿ ನೀನು ಉತ್ಕೃಷ್ಟವಾದ ತೇಜಸ್ಸಿನಿಂದ ಬೆಳಗುತ್ತಿರುವೆ. ನೀನು ಮಾಡಿದ ಸತ್ಕರ್ಮಗಳಿಂದ ಪ್ರಾಪ್ತವಾಗಿರುವ ಉತ್ತಮಲೋಕಗಳನ್ನು (ಲೋಕಗಳಲ್ಲಿರುವ ಸುಖವನ್ನು ) ಅನುಭವಿಸುವವನಾಗು. ಸ್ವರ್ಗದ ಸುಖವು ಈ ವಿಧವಾಗಿರುತ್ತದೆ. ಅಲ್ಲಿಯೂ ಸಹ ನಾನು ಹೇಳಿದಂತೆ ಮೇಲು-ಮೇಲಕ್ಕೆ ಉತ್ತಮಲೋಕಗಳೂ ಇವೆ. ಅವೆಲ್ಲವನ್ನೂ ನಿನಗೆ ವಿವರಿಸಿ ಹೇಳಿದ್ದೇನೆ. ಇದುವರೆವಿಗೂ ನಿನಗೆ ನಾನು ಸುಖದ ವಿಷಯವನ್ನು ಮಾತ್ರವೇ ಹೇಳಿದಂತಾಯಿತು. ನಿನ್ನ ಆಶಯದಂತೆ ಅಲ್ಲಿರುವ ದೋಷವನ್ನೂ ಹೇಳುತ್ತೇನೆ. ಕೇಳು, ಮುದ್ಗಲ!

**ಕೃತಸ್ಯ ಕರ್ಮಣಸ್ತತ್ರ ಭುಜ್ಯತೇ ಯತ್ಫಲಂ ದಿವಿ ।**
**ನ ಚಾನ್ಯತ್ಕ್ರಿಯತೇ ಕರ್ಮ ಮೂಲಚ್ಛೇದೇನ ಭುಜ್ಯತೇ ॥೨೮॥**

ಮಾನವನು ಈ ಪ್ರಪಂಚದಲ್ಲಿ ಮಾಡಿದ ಸತ್ಕರ್ಮದ ಫಲವನ್ನು ಸ್ವರ್ಗಾದಿಲೋಕಗಳಲ್ಲಿ ಅನುಭವಿಸುತ್ತಾನೆ. ಆದರೆ ಸ್ವರ್ಗದ ಸುಖವನ್ನನು ಭವಿಸುತ್ತಿರುವವನಿಗೆ ಅಲ್ಲಿ ಫಲದಾಯಕವಾದ ಬೇರಾವ ಕರ್ಮವನ್ನೂ ಮಾಡುವ ಸಾಧ್ಯತೆಯಿಲ್ಲ. (ಕುಡಿಕೆಯಲ್ಲಿ ಹಣವಿಟ್ಟುಕೊಂಡು ಖರ್ಚು ಮಾಡುವವನು ಕುಡಿಕೆಯ ಹಣ ಮುಗಿಯುವ ಪರ್ಯಂತವಾಗಿ ಅರ್ಥ ಮೂಲವಾದ ಸುಖವನ್ನು ಅನುಭವಿಸಲು ಸಾಧ್ಯವಾಗುವಂತೆ) ಭೂಮಿಯಲ್ಲಿ ಮಾನವನು ತಾನು ಮಾಡಿದ ಸತ್ಕರ್ಮದ ಫಲವನ್ನು ಆ ಕರ್ಮದ ಫಲವು ಮುಗಿಯುವ ಪರ್ಯಂತವಾಗಿ ಸ್ವರ್ಗಲೋಕದಲ್ಲಿ ಅನುಭವಿಸುತ್ತಿರುತ್ತಾನೆ. ಭೂಮಿಯಲ್ಲಿ ಆರ್ಜಿಸಿದ ಫಲವನ್ನು ಸ್ವರ್ಗದಲ್ಲಿ ವೆಚ್ಚಮಾಡಬೇಕೇ ಹೊರತು ಸ್ವರ್ಗದಲ್ಲಿ ಸುಕೃತ ಮತ್ತು ದುಷ್ಕೃತಗಳ ಫಲದ ಆರ್ಜನೆಗೆ ಅವಕಾಶವಿಲ್ಲ. ಮೇಲಿನವು ಕೇವಲ ಫಲಾನುಭವಾರ್ಥಗಳಾದ ಲೋಕಗಳಾಗಿರುತ್ತವೆ.

**ಸೋಽತ್ರ ದೋಷೋ ಮಮ ಮತಸ್ತಸ್ಯಾಂತೇ ಪತನಂ ಚ ಯತ್ ।**
**ಸುಖವ್ಯಾಪ್ತಮನಸ್ಕಾನಾಂ ಪತನಂ ಯಚ್ಚ ಮುದ್ಗಲ ॥೨೯॥**

ಮಾಡಿದ ಕರ್ಮಫಲವು ಮುಗಿದನಂತರ ಪುನಃ ಕರ್ಮಮಾಡಲು ಸ್ವರ್ಗದಿಂದ ಭೂಮಿಗೆ ಬೀಳಬೇಕಾಗಿರುವುದೊಂದೇ ಸ್ವರ್ಗಲೋಕವಾಸದ ದೋಷವಾಗಿರುತ್ತದೆ. ಸ್ವರ್ಗದಲ್ಲಿರುವವರೆಗೆ ಅವರ ಮನಸ್ಸು ಯಾವಾಗಲೂ ಸುಖದ ಲೋಲುಪತೆಯಲ್ಲಿಯೇ ತಲ್ಲೀನವಾಗಿಹೋಗಿರುತ್ತದೆ. ತಮ್ಮ ಕರ್ಮ ಫಲವು ಎಂದಿಗೆ ಮುಗಿಯುತ್ತದೆ?–ಎಂಬ ವಿವೇಚನೆಯು ಅವರಿಗಿರುವು ದಿಲ್ಲ.

**ಅಸಂತೋಷಃ ಪರೀತಾಪೋ ದೃಷ್ಟ್ವಾ ದೀಪ್ತತಲಾಃ ಶ್ರಿಯಃ ।**
**ಯದ್ಭವತ್ಯವರೇ ಸ್ಥಾನೇ ಸ್ಥಿತಾನಾಂ ತತ್ಸುದುಷ್ಕರಮ್ ॥೩೦॥**

ಭೂಲೋಕದಲ್ಲಿ ಮೃತ್ಯುವಿನ ಪ್ರಾಪ್ತಿಕಾಲವನ್ನು ತಿಳಿಯದಿರುವ ಮಾನವರಂತೆ–ಸ್ವರ್ಗವಾಸಿಗಳು ತಮ್ಮ ಪತನದ ಅರಿವನ್ನು ಕಿಂಚಿನ್ಮಾತ್ರವೂ ತಿಳಿದಿರುವುದಿಲ್ಲ. ಕರ್ಮಫಲವು ಮುಗಿದೊಡನೆಯೇ ಅವರು ಸ್ವರ್ಗದಿಂದ ಚ್ಯುತರಾಗಿಬಿಡುತ್ತಾರೆ. ಅಂತಹ ಸುಖಮಯವಾತಾವರಣವನ್ನು ಪರಿತ್ಯಜಿಸು ವುದು ಬಹಳ ಕಷ್ಟವೇ ಸರಿ. ಪರಮಶ್ರೇಷ್ಠವಾದ ಸ್ಥಾನದಲ್ಲಿದ್ದು ಅಲ್ಲಿ

ಸಕಲಸುಖೋಪಭೋಗಗಳನ್ನೂ ಅನುಭವಿಸುತ್ತಾ ಇರುವವನು ಕೆಳಗೆ ಬಿದ್ದ ನೆಂದರೆ (ಭೂಮಿಯಲ್ಲಿ ಪುನಃ ಜನ್ಮತಾಳಬೇಕೆಂದರೆ) ಅಸಂತೋಷ-ಪರಿತಾಪ ಗಳುಂಟಾಗುವುದು ಸಹಜವಾಗಿಯೇ ಇದೆ. ಅಂತಹ ಪತನವನ್ನು ಸಹಿಸಿ ಕೊಳ್ಳುವುದು ದುಷ್ಕರವಾದುದು. (ಹೀಗೂ ಅರ್ಥಮಾಡಬಹುದಾಗಿದೆ : ಸ್ವರ್ಗವಾಸಿಗಳು ಸಂಪತ್ತಿನಿಂದ ಕೂಡಿರುವವರು ನಿಜ. ಆದರೆ ಅಲ್ಲಿಯೂ ಕೆಳ ಗಿನ ಅಧಿಕಾರಸ್ಥಾನದಲ್ಲಿರುವವರು ತಮಗಿಂತಲೂ ಹೆಚ್ಚು ಐಶ್ವರ್ಯಸಂಪನ್ನ ರಾದವರನ್ನು ಕಂಡು ಅತೃಪ್ತಿಹೊಂದುತ್ತಾರೆ ಮತ್ತು ಸಂತಾಪಪಡುತ್ತಾರೆ. ಈ ಅತೃಪ್ತಿ, ಪರಿತಾಪಗಳನ್ನು ಸಹಿಸಿಕೊಳ್ಳುವುದು ಅವರಿಗೆ ತುಂಬಾ ಕಷ್ಟ.)

**ಸಂಜ್ಞಾಮೋಹಶ್ಚ ಪತತಾಂ ರಜಸಾ ಚ ಪ್ರಧರ್ಷಣಮ್ ।**
**ಪ್ರಮ್ಲಾನೇಷು ಚ ಮಾಲ್ಯೇಷು ತತಃ ಪಿಪತಿಷೋರ್ಭಯಮ್ ॥**

ಸ್ವರ್ಗದಿಂದ ಬೀಳುವಾಗ ಅವರು ಪ್ರಜ್ಞಾಹೀನರಾಗುತ್ತಾರೆ ; ಅವರು ಧರಿಸಿರುವ ದೇವಮಾಲೆಗಳು ಬಾಡಿಹೋಗುತ್ತವೆ ; ಧೂಳಿನಿಂದ ಅವರ ಶರೀರವು ಮುಚ್ಚಿಹೋಗುತ್ತದೆ ; ಅವರ ಹೃದಯವು ಭಯಗ್ರಸ್ತವಾಗುತ್ತದೆ. ಈ ಒಂದು ಮಹತ್ತರವಾದ ದಾರುಣದೋಷವು ಬ್ರಹ್ಮಲೋಕದ ಪರ್ಯಂತ ವಾಗಿ ಸಕಲಲೋಕಗಳಲ್ಲಿಯೂ ಇರುವುದು, ಮುದ್ಗಲ! ಸ್ವರ್ಗಲೋಕದಲ್ಲಿ ಸತ್ಕರ್ಮಫಲವನ್ನು ಅನುಭವಿಸುತ್ತಿರುವ ಪುಣ್ಯಾತ್ಮರಿಗೆ ಸಾವಿರಾರು ಉತ್ತಮ ಗುಣಗಳಿರುತ್ತವೆ. ಇದೂ ಮತ್ತೊಂದು ಉತ್ತಮವಾದ ಗುಣ. ಸತ್ಕರ್ಮಗಳ ಫಲವನ್ನು ಸ್ವರ್ಗದಲ್ಲನುಭವಿಸಿ ಫಲವು ಮುಗಿದನಂತರ ಭೂಮಿಗೆ ಚ್ಯುತ ರಾಗುವವರು ಮನುಷ್ಯಯೋನಿಯಲ್ಲಿಯೇ ಜನ್ಮತಾಳುತ್ತಾರೆ ಮತ್ತು ಇಲ್ಲಿಯೂ ಸಹ ಅವರು ಸುಖವಾಗಿರುತ್ತಾರೆ. ಮಾನವನು ದುಷ್ಕರ್ಮಿಯಾದರೆ ಅವನು ದುಷ್ಕರ್ಮದ ಫಲವಾಗಿ ನರಕದಲ್ಲಿ ಅದರ ಫಲವನ್ನನುಭವಿಸಿ ಅನಂತರ ಪ್ರಾಣಿಗಳ ಯೋನಿಗಳಲ್ಲಿ ಜನ್ಮತಾಳುತ್ತಾನೆ.

**ಇಹ ಯತ್ಕ್ರಿಯತೇ ಕರ್ಮ ತತ್ಪರತ್ರೋಪಭುಜ್ಯತೇ ।**
**ಕರ್ಮಭೂಮಿರಿಯಂ ಬ್ರಹ್ಮನ್ಫಲಭೂಮಿರಸೌ ಮತಾ ॥೩೫॥**

ಈ ಲೋಕದಲ್ಲಿ ಯಾವ ದುಷ್ಕರ್ಮ ಅಥವಾ ಸತ್ಕರ್ಮಗಳನ್ನು ಮಾಡು ವನೋ ಅದರ ಫಲವನ್ನು ಬೇರೆಯ ಲೋಕದಲ್ಲಿ ಅನುಭವಿಸುತ್ತಾನೆ. ಆದುದ

ರಿಂದಲೇ ಈ ಭೂಲೋಕವು ಕರ್ಮಭೂಮಿಯೆಂದೂ–ಮೇಲಿನ ಲೋಕಗಳು ಫಲಭೂಮಿಗಳೆಂದೂ ಹೇಳಲ್ಪಟ್ಟಿವೆ."

ಮುದ್ಗಲನು ಕೇಳುತ್ತಾನೆ : "ಸ್ವರ್ಗವಾಸದಲ್ಲಿರುವ ಮಹಾದೋಷವನ್ನೇ ನೀನು ಹೇಳಿರುತ್ತೀಯೆ. ಯಾವ ವಿಧವಾದ ದೋಷವೂ ಇಲ್ಲದಿರುವ ಬೇರೆಯ ಲೋಕಗಳೇನಾದರೂ ಇರುವುದಾದರೆ ಅವುಗಳ ವಿಷಯವನ್ನೂ ಹೇಳು, ದೇವದೂತ!"

"ಬ್ರಾಹ್ಮಣೋತ್ತಮ! ಬ್ರಹ್ಮಲೋಕಕ್ಕಿಂತಲೂ ಮೇಲ್ಭಾಗದಲ್ಲಿ ಶುದ್ಧವೂ, ಸನಾತನವೂ, ಜ್ಯೋತಿಃಸ್ವರೂಪವೂ ಆದ ವಿಷ್ಣುಪದವಿರುತ್ತದೆ. ಅದೇ ಪರಮಪದ. ಸರ್ವದಾ ಪ್ರಕಾಶಮಾನವಾಗಿರುವ ಆ ಸ್ಥಾನವನ್ನು ಪರಬ್ರಹ್ಮಸ್ಥಾನವೆಂದೂ ಕರೆಯುತ್ತಾರೆ.

**ನ ತತ್ರ ವಿಪ್ರ ಗಚ್ಛನ್ತಿ ಪುರುಷಾ ವಿಷಯಾತ್ಮಕಾಃ ।**
**ದಮ್ಭಲೋಭಮಹಾಕ್ರೋಧಮೋಹದ್ರೋಹೈರಭಿದ್ರುತಾಃ ॥೩೮॥**

ಆ ಪರಮಪದಸ್ಥಾನಕ್ಕೆ ಇಂದ್ರಿಯಚಾಪಲ್ಯವುಳ್ಳವರು ಖಂಡಿತವಾಗಿಯೂ ಹೋಗಲಾರರು. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯವುಳ್ಳವರಿಗೆ ಅಲ್ಲಿ ಸ್ಥಾನವೇ ಇಲ್ಲ.

**ನಿರ್ಮಮಾ ನಿರಹಙ್ಕಾರಾ ನಿರ್ದ್ವನ್ದ್ವಾಃ ಸಂಯತೇನ್ದ್ರಿಯಾಃ ।**
**ಧ್ಯಾನಯೋಗಪರಾಶ್ಚೈವ ತತ್ರ ಗಚ್ಛನ್ತಿ ಮಾನವಾಃ ॥೩೯॥**

'ಆಶೆ' ಎಂಬುದನ್ನು ಸಂಪೂರ್ಣವಾಗಿ ತೊರೆದವರೂ, ಅಹಂಕಾರರಹಿತರೂ, ಶೀತೋಷ್ಣ-ಸುಖ-ದುಃಖಗಳಲ್ಲಿ ಯಾವ ವಿಧವಾದ ವ್ಯತ್ಯಾಸವನ್ನೂ ಕಾಣದವರೂ, ಜಿತೇಂದ್ರಿಯರೂ, ಧ್ಯಾನಾಸಕ್ತರೂ, ಯೋಗಾಭ್ಯಾಸರತರೂ ಅತಿಪ್ರಯಾಸದಿಂದ–ಶಾಶ್ವತವಾದ, ಸನಾತನವಾದ, ವಿಷ್ಣುವಿನ ಪರಮಪದವನ್ನು ಹೊಂದಲು ಸಮರ್ಥರಾಗುತ್ತಾರೆ.

ಮುದ್ಗಲ! ನಿನ್ನ ಮೇಲಿನ ಅನುಕಂಪದಿಂದಾಗಿ ನೀನು ಕೇಳಿದ ಪ್ರಶ್ನೆಗಳೆಲ್ಲಕ್ಕೂ ವಿವರವಾಗಿ ಉತ್ತರಿಸಿದ್ದೇನೆ. ಇನ್ನು ಮೇಲಾದರೂ ನಾವು ಈ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಪ್ರಯಾಣಮಾಡಬಹುದಲ್ಲವೇ?"

ಯುಧಿಷ್ಠಿರ! ದೇವದೂತನ ಮಾತುಗಳನ್ನು ಕೇಳಿ ಮುದ್ಗಲನು ತನ್ನೊಳಗೆ ತಾನೇ ಸ್ವಲ್ಪ ಹೊತ್ತು ಯೋಚಿಸಿದನು. ವಿಷಯಗಳೆಲ್ಲವನ್ನೂ

ಸಂಪೂರ್ಣವಾಗಿ ಮಥಿಸಿ ಒಂದು ನಿರ್ಧಾರಕ್ಕೆ ಬಂದವನಾಗಿ ಮುದ್ಗಲನು ದೇವದೂತನನ್ನು ಕುರಿತು ಹೇಳಿದನು :

**ದೇವದೂತ ನಮಸ್ತೇಽಸ್ತು ಗಚ್ಛ ತಾತ ಯಥಾಸುಖಮ್ ।**
**ಮಹಾದೋಷೇಣ ಮೇ ಕಾರ್ಯಂ ನ ಸ್ವರ್ಗೇಣ ಸುಖೇನ ವಾ ॥**

"ದೇವದೂತ! ನಿನಗೆ ನನ್ನ ನಮಸ್ಕಾರವಿರಲಿ. ನೀನು ಸುಖದಿಂದ ಹೋಗಿ ಬಾ. ನನಗೆ ಸ್ವರ್ಗವೂ ಬೇಕಾಗಿಲ್ಲ ; ಸ್ವರ್ಗಸುಖವೂ ಬೇಕಾಗಿಲ್ಲ. ಅಂತಹ ಮಹಾದೋಷಯುಕ್ತವಾದ ಸ್ವರ್ಗವನ್ನು ಕಟ್ಟಿಕೊಂಡು ನಾನೇನು ಮಾಡಲಿ?

ಸತ್ಕರ್ಮಫಲವು ಮುಗಿದೊಡನೆಯೇ ಸ್ವರ್ಗದಿಂದ ಪತನವಾಗುತ್ತದೆ. ಅದು ಮಹಾದುಃಖಕರವಾದುದು. ಅದರಿಂದ ಉಂಟಾಗುವ ಪರಿತಾಪ ವಂತೂ ಬಹುದಾರುಣವಾದುದು (ಸಹಿಸಲಶಕ್ಯವಾದುದು.) ಇಂದು ತಮ್ಮ ಪುಣ್ಯಾಧಿಕ್ಯದಿಂದ ಸ್ವರ್ಗಕ್ಕೆ ಹೋದವರೂ ಕೂಡ ಪುಣ್ಯಫಲವು ಮುಗಿದೊಡ ನೆಯೇ ಪುನಃ ಇಲ್ಲಿಯೇ ಜನ್ಮತಾಳುತ್ತಾರೆ. ಪುಣ್ಯಫಲವು ಮುಗಿದಮೇಲೆ ಪುನಃ ಇದೇ ಲೋಕಕ್ಕೆ ಬರುವುದಂತೂ ನಿಶ್ಚಯವಾಗಿರುವಾಗ ಸ್ವರ್ಗಕ್ಕಾದರೂ ಏಕೆ ಹೋಗಬೇಕು? ಆದುದರಿಂದ ನಾನು ಸ್ವರ್ಗವನ್ನು ಖಂಡಿತವಾಗಿಯೂ ಆಶಿಸುವುದಿಲ್ಲ.

ಯಾವ ಪರಮಪದಸ್ಥಾನಕ್ಕೆ ಹೋಗುವುದರಿಂದ ಮಾನವರು ದುಃಖಿ ಸುವುದಿಲ್ಲವೋ, ಸಂಕಟಪಡುವುದಿಲ್ಲವೋ ಉದ್ವಿಗ್ನರಾಗುವುದಿಲ್ಲವೋ, ಚಲಿ ಸುವುದಿಲ್ಲವೋ–ಅಂತಹ ಶಾಶ್ವತವಾದ ಸ್ಥಾನವನ್ನು ಮಾತ್ರವೇ ನಾನು ಹುಡುಕುತ್ತೇನೆ."

ದೇವದೂತನಿಗೆ ಇಷ್ಟು ಮಾತುಗಳನ್ನು ಹೇಳಿದ ನಂತರ ಮುದ್ಗಲನು ಅವನನ್ನು ಕಳುಹಿಸಿಕೊಟ್ಟು ಪರಮಪದದ ಪ್ರಾಪ್ತಿಗಾಗಿ ಶ್ರಮಿಸತೊಡಗಿದನು. ಶಿಲೋಂಛವೃತ್ತಿಗಳನ್ನೇ ಮುಂದುವರಿಸಿದನು. ಅದರಲ್ಲಿಯೇ ಅವನಿಗೆ ಸಂಪೂರ್ಣವಾಗಿ ತೃಪ್ತಿಯಿದ್ದಿತು. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳು ಪರಾಜಯಗೊಂಡು ಓಡಿದುವು. ಮಹಾತ್ಮನಾದ ಮುದ್ಗಲ ಮಹರ್ಷಿಗೆ ಶೀತೋಷ್ಣ-ಸುಖ-ದುಃಖಗಳಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ. ನಿಂದಾ-ಸ್ತುತಿಗಳೆರಡೂ ಅವನಿಗೆ ಸಮಾನವಾದುವು. ನಿಂದೆಮಾಡುವವ

ರನ್ನು ದ್ವೇಷಿಸುತ್ತಲೂ ಇರಲಿಲ್ಲ. ಸ್ತುತಿಮಾಡುವವರನ್ನು ಪ್ರೀತಿಸುತ್ತಲೂ ಇರಲಿಲ್ಲ. ಮಣ್ಣಿನ ಮುದ್ದೆಗೂ, ಕಲ್ಲಿಗೂ, ಚಿನ್ನದ ಗಟ್ಟಿಗೂ ಅವನಿಗೆ ವ್ಯತ್ಯಾಸವೇ ಕಾಣಲಿಲ್ಲ. ಮನಸ್ಸನ್ನು ಯಾವಾಗಲೂ ಯಾವ ಕಾರಣ ದಿಂದಲೂ ಉದ್ವೇಗಗೊಳ್ಳಲು ಬಿಡುತ್ತಿರಲಿಲ್ಲ. ಅವನ ಮನಸ್ಸು ಯಾವಾ ಗಲೂ ಕನ್ನಡಿಯಂತೆ ನಿರ್ಮಲವಾಗಿದ್ದಿತು. ಶುದ್ಧವಾದ ಜ್ಞಾನಯೋಗದ ರಹಸ್ಯವನ್ನು ತಿಳಿದುಕೊಂಡು ಬ್ರಹ್ಮವಸ್ತುವಿನಲ್ಲಿಯೇ ಮನಸ್ಸನ್ನು ಲೀನ ಗೊಳಿಸಿ ಧ್ಯಾನಾಸಕ್ತನಾಗಿರುತ್ತಿದ್ದನು. ಸತತವಾದ ಧ್ಯಾನದಿಂದಾಗಿ ಅಂಗುಷ್ಠ ಮಾತ್ರನಾದ ಪರಮಪುರುಷನ ದಿವ್ಯಸ್ವರೂಪವು ಅವನ ಬುದ್ಧಿಗೆ ಸ್ಫುರಿಸ ತೊಡಗಿತು. ಮುಂದೆ ಕೆಲವು ದಿನಗಳಲ್ಲಿಯೇ ಮುದ್ಗಲನು ನಿರ್ವಾಣಲಕ್ಷಣ ವಾದ, ಶಾಶ್ವತವಾದ ಮತ್ತು ಶ್ರೇಷ್ಠವಾದ ಸಿದ್ಧಿಯನ್ನು ಪಡೆದನು. ಮುದ್ಗಲಮಹರ್ಷಿಗೆ ಆತ್ಮಸಾಕ್ಷಾತ್ಕಾರವಾಯಿತು. ಆದುದರಿಂದ ಯುಧಿ ಷ್ಠಿರ! ಈಗ ನಿನಗೆ ಪ್ರಾಪ್ತವಾಗಿರುವ ಕ್ಲೇಶಕ್ಕಾಗಿ ಚಿಂತಿಸಬೇಡ. ಸಂಪ ತ್ಸಮೃದ್ಧವಾದ ರಾಜ್ಯದಿಂದ ಪರಿಭ್ರಷ್ಟನಾಗಿದ್ದರೂ ನಿನ್ನ ತಪಸ್ಸಿನ ಬಲ ದಿಂದಲೇ ಮುಂದೆ ನೀನದನ್ನು ಪಡೆಯಬಹುದಾಗಿದೆ.

ಚಕ್ರವು ಸುತ್ತುತ್ತಿರುವಾಗ ಅದರ ಒಂದು ಭಾಗವು ಮೇಲೂ ಮತ್ತೊಂದು ಭಾಗವು ಕೆಳಗೂ ಇದ್ದು, ಮರುಕ್ಷಣದಲ್ಲಿಯೇ ಕೆಳಭಾಗವು ಮೇಲಕ್ಕೂ ಮೇಲಿನ ಭಾಗವು ಕೆಳಕ್ಕೂ ಬರುವಂತೆ–ಸುಖದ ನಂತರ ದುಃಖವೂ ದುಃಖದ ನಂತರ ಸುಖವೂ ಮಾನವನಿಗೆ ಪರ್ಯಾಯವಾಗಿ ಬಂದು ಹೋಗುತ್ತಿರುತ್ತವೆ. (ಆದುದರಿಂದ ಸುಖ-ದುಃಖಗಳ ವಿಷಯವಾಗಿ ಹಿಗ್ಗಲೂಬಾರದು ; ಕುಗ್ಗಲೂಬಾರದು.)

ಯುಧಿಷ್ಠಿರ! ಹದಿಮೂರು ವರ್ಷಗಳು ಕಳೆದೊಡನೆಯೇ ನೀನು ನಿನ್ನ ಪಿತೃ-ಪಿತಾಮಹರಿಂದ ಪಾಲಿತವಾದ ನಿನ್ನ ರಾಜ್ಯವನ್ನು ಖಂಡಿತವಾಗಿಯೂ ಪಡೆಯುವೆ. ಆದುದರಿಂದ ನಿನ್ನ ಹೃದಯದಲ್ಲುಂಟಾಗಿರುವ ಚಿಂತೆಯನ್ನು ದೂರಮಾಡು."

ಜನಮೇಜಯ! ಭಗವಾನ್ ವ್ಯಾಸರು ಧರ್ಮಜನಿಗೆ ಈ ರೀತಿ ಹೇಳಿ ತಪಶ್ಚರಣೆಗಾಗಿ ತಮ್ಮ ಆಶ್ರಮಕ್ಕೆ ತೆರಳಿದರು.

೨೬೧ನೆಯ ಅಧ್ಯಾಯವು ಮುಗಿಯಿತು.

## ತನ್ನ ಸತ್ಕಾರದಿಂದ ಸಂತುಷ್ಟರಾದ ದುರ್ವಾಸರನ್ನು ಶಿಷ್ಯರೊಡನೆ ಯುಧಿಷ್ಠಿರನ ಆಶ್ರಮಕ್ಕೆ ಹೋಗಬೇಕೆಂದು ದುರ್ಯೋಧನನು ಕೇಳಿಕೊಂಡುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸಿದನು :

"ಮಹರ್ಷಿಗಳೇ! ನಮ್ಮ ತಾತಂದಿರು, ಸೂರ್ಯನು ಅನುಗ್ರಹಿಸಿ ಕೊಟ್ಟಿದ್ದ ಅಕ್ಷಯಪಾತ್ರೆಯಿಂದ ಯಥೇಚ್ಛವಾಗಿ ಆಹಾರವನ್ನು ಪಡೆದು ದ್ರೌಪದಿಯು ಭೋಜನಮಾಡುವವರೆಗೂ ಆಶ್ರಮದಲ್ಲಿದ್ದ ಬ್ರಾಹ್ಮಣರಿಗೂ ಅನ್ನಾರ್ಥವಾಗಿಯೇ ಆಶ್ರಮಕ್ಕೆ ಆಗಮಿಸುತ್ತಿದ್ದ ಇತರರಿಗೂ ಭೋಜನ ಮಾಡಿಸುತ್ತಿದ್ದರು. ಅಲ್ಲದೇ ವಿರಾಮಕಾಲದಲ್ಲಿ ಋಷಿಗಳಿಂದ ಹೇಳಲ್ಪಡುತ್ತಿದ್ದ ನಾನಾವಿಧವಾದ ಕಥಾಪ್ರವಚನಗಳನ್ನೂ ಕೇಳಿ ಸಂತೋಷಿಸುತ್ತಿದ್ದರು. ಆದರೆ ಅದೇ ಸಮಯದಲ್ಲಿ ದುರ್ಮತಿಗಳಾದ ಕರ್ಣ-ಶಕುನಿಗಳ ಸಲಹೆಯಂತೆ ನಡೆಯುತ್ತಿದ್ದ ದುರಾತ್ಮರಾದ, ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳೇನು ಮಾಡುತ್ತಿದ್ದರು? ಪಾಂಡವರ ವನವಾಸವು ಮುಗಿಯುವುದರಲ್ಲಿದ್ದುದರಿಂದ ಯಾವುದಾದರೊಂದು ರೀತಿಯಲ್ಲಿ ಅವರಿಗೆ ಕಿರುಕುಳವನ್ನು ಕೊಡುವುದೇ ದುರ್ಯೋಧನಾದಿಗಳ ಸ್ವಭಾವವಾಗಿದ್ದಿತು. ಆದುದರಿಂದ ಅವರೇನು ಮಾಡುತ್ತಿದ್ದರೆಂಬುದನ್ನು ದಯಮಾಡಿ ತಿಳಿಸಿರಿ."

"ಜನಮೇಜಯ! ಅರಣ್ಯದಲ್ಲಿ ನಡೆಯುತ್ತಿದ್ದ ಪ್ರತಿಯೊಂದು ವಿಷಯವೂ ದುರ್ಯೋಧನಾದಿಗಳಿಗೆ ಚಾರರ ಮೂಲಕವಾಗಿ ತಿಳಿಯುತ್ತಿದ್ದಿತು. ನಗರದಲ್ಲಿರುವಂತೆಯೇ ಬಹುಸಂತೋಷದಿಂದ ಪಾಂಡವರು ಅರಣ್ಯದಲ್ಲಿಯೂ ಕಾಲಯಾಪನೆಮಾಡುತ್ತಿರುವರೆಂಬ ವಿಷಯವು ದುರ್ಯೋಧನನಿಗೆ ಚಾರರ ಮೂಲಕವಾಗಿ ತಿಳಿಯಿತು. ಆ ವಾರ್ತೆಯು ಅವನಿಗೆ ಸಹ್ಯವಾಗಲಿಲ್ಲ. ಕರ್ಣ-ದುಃಶಾಸನರೊಡನೆ ಸಮಾಲೋಚನೆ ಮಾಡಿದನು. ಪಾಂಡವರಿಗೆ ತೊಂದರೆ ಕೊಡಲು ಒಬ್ಬೊಬ್ಬರೂ ಒಂದೊಂದು ಸಲಹೆಯನ್ನು ಕೊಟ್ಟರು. ಎಲ್ಲ ಸಲಹೆಗಳನ್ನೂ ದುರ್ಯೋಧನ-ಶಕುನಿ-ದುಃಶಾಸನ-ಕರ್ಣರು ವಿಶದ

ವಾಗಿ ಪರಿಶೀಲಿಸುತ್ತಿದ್ದರು. ಆ ವೇಳೆಗೆ ಸರಿಯಾಗಿ ಧರ್ಮಾತ್ಮರಾದ, ಸುಪ್ರಸಿದ್ಧರಾದ ದುರ್ವಾಸರು ಹತ್ತುಸಾವಿರ ಶಿಷ್ಯರ ಸಮೇತರಾಗಿ ತಮ್ಮ ಸ್ವಂತ ಇಚ್ಛೆಯಿಂದ ಹಸ್ತಿನಾಪಟ್ಟಣಕ್ಕೆ ಆಗಮಿಸಿದರು. ಮಹಾಕೋಪಿಷ್ಠರಾದ ದುರ್ವಾಸರು ತನ್ನ ರಾಜಧಾನಿಗೆ ಬಂದಿರುವುದನ್ನು ತಿಳಿದೊಡನೆಯೇ ದುರ್ಯೋಧನನು ಮಂತ್ರಾಲೋಚನೆಯನ್ನು ಅಷ್ಟಕ್ಕೇ ನಿಲ್ಲಿಸಿ, ತನ್ನ ಅನುಜರ ಸಮೇತನಾಗಿ ಅರಮನೆಯಿಂದ ಹೊರಹೊರಟು, ಮಹರ್ಷಿಗಳನ್ನು ಸಮೀಪಿಸಿ ಬಹು ವಿನೀತನಾಗಿ ದೈನ್ಯಭಾವದಿಂದ ದುರ್ವಾಸಮಹರ್ಷಿಗಳಿಗೆ ನಮಸ್ಕರಿಸಿ ಸ್ವಾಗತಿಸಿದನು. ಅರಮನೆಯೊಳಕ್ಕೆ ಪ್ರವೇಶಿಸಿದ ಮಹರ್ಷಿಗಳಿಗೆ ದುರ್ಯೋಧನನೇ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಆಸನದಲ್ಲಿ ಕುಳ್ಳಿರಿಸಿ ಸೇವಕರಿಗಿಂತಲೂ ಹೆಚ್ಚಾಗಿ ಅವರನ್ನು ಉಪಚರಿಸತೊಡಗಿದನು. ದುರ್ಯೋಧನನ ಅನುಜರು ಅವರ ಹತ್ತುಸಾವಿರ ಶಿಷ್ಯರನ್ನೂ ಬಹುನಮ್ರತೆಯಿಂದ ಸತ್ಕರಿಸುತ್ತಿದ್ದರು. ದುರ್ವಾಸರು ನಾಲ್ಕಾರು ದಿನಗಳು ದುರ್ಯೋಧನನ ಅರಮನೆಯಲ್ಲಿಯೇ ಇದ್ದುಬಿಟ್ಟರು. ದುರ್ಯೋಧನನು ಮಹರ್ಷಿಗಳ ಸ್ವಭಾವವನ್ನು ಚೆನ್ನಾಗಿ ತಿಳಿದಿದ್ದುದರಿಂದ ಹಗಲು-ರಾತ್ರಿಗಳೆನ್ನದೇ ಮಹರ್ಷಿಗಳನ್ನು ಉಪಚರಿಸುವುದರಲ್ಲಿ ನಿರತನಾಗಿರುತ್ತಿದ್ದನು. ಮಹರ್ಷಿಗಳಾದರೋ ಅನಿಶ್ಚಿತ ಸಮಯದಲ್ಲಿ ದುರ್ಯೋಧನನನ್ನು ಕುರಿತು–'ನನಗೆ ಬಹಳ ಹಸಿವಾಗಿದೆ, ದುರ್ಯೋಧನ! ಭೋಜನಕ್ಕೆ ಸಿದ್ಧಗೊಳಿಸು'–ಎಂದು ಹೇಳುತ್ತಿದ್ದರು. ದುರ್ಯೋಧನನು ವಿನೀತನಾಗಿ ಭೋಜನಕ್ಕೆ ಸಿದ್ಧಗೊಳಿಸಿದೊಡನೆಯೇ ಮಹರ್ಷಿಗಳು ಸ್ನಾನಮಾಡಲು ಹೋಗಿ ಬಹಳ ಹೊತ್ತಾದನಂತರ ಆಗಮಿಸಿ, 'ನನಗಿಂದು ಊಟ ಬೇಡ ; ನನಗೆ ಹಸಿವಿಲ್ಲ'–ಎಂದು ಹೇಳಿ ಮಾಯವಾಗಿಬಿಡುತ್ತಿದ್ದರು. ಸಿದ್ಧಪಡಿಸಿದ್ದ ಭೋಜನವು ವ್ಯರ್ಥವಾಗಿ ಹೋಗುತ್ತಿತ್ತು. ಆದರೂ ಸಹ ದುರ್ಯೋಧನನು ತಾಳ್ಮೆಯನ್ನು ಕಳೆದುಕೊಳ್ಳಲಿಲ್ಲ. ಮಹರ್ಷಿಗಳೆಲ್ಲಿ ಶಾಪ ಕೊಟ್ಟುಬಿಡುವರೋ?–ಎಂಬ ಭಯವು ದುರ್ಯೋಧನನ ಮನಸ್ಸಿನಲ್ಲಿದ್ದಿತು.

ಮಹರ್ಷಿಗಳಿನ್ನು ಭೋಜನಮಾಡುವುದಿಲ್ಲವೆಂದು ಭಾವಿಸಿ ಭೋಜನ ಸಾಮಗ್ರಿಗಳನ್ನು ಹೊರಕ್ಕೆ ಹಾಕಿದ ಮರುಕ್ಷಣದಲ್ಲಿಯೇ ದುರ್ವಾಸರು ಆಗಮಿಸಿ–'ಬೇಗ ನನಗೆ ಊಟ ಹಾಕು, ಬಹಳ ಹಸಿವಾಗಿದೆ'–ಎನ್ನುವರು.

ಅರ್ಧರಾತ್ರಿಯಲ್ಲೆದ್ದು ದುರ್ಯೋಧನನನ್ನೆಬ್ಬಿಸಿ ಊಟಬೇಕೆಂದು ಕೇಳುವರು. ಆ ಸಮಯದಲ್ಲಿ ಯಥಾಪೂರ್ವಕವಾಗಿ ಮೃಷ್ಟಾನ್ನವನ್ನು ಸಿದ್ಧಮಾಡಿದರೆ ಮಾಡಿದ ಅಡುಗೆಯನ್ನು ನಿಂದಿಸುತ್ತಿದ್ದರೇ ಹೊರತು ಊಟಮಾಡುತ್ತಿರಲಿಲ್ಲ. ಇಷ್ಟೊಂದು ಕಿರುಕುಳಕೊಟ್ಟರೂ ದುರ್ಯೋಧನನ ಮುಖದಲ್ಲಿ ಸ್ವಲ್ಪವಾದರೂ ವಿಕಾರವುಂಟಾಗಲಿಲ್ಲ. ಅವನು ಒಮ್ಮೆಯಾದರೂ ಕೋಪಮಾಡಿಕೊಳ್ಳಲಿಲ್ಲ.

ಅದರಿಂದಾಗಿ ದುರ್ವಾಸಮಹರ್ಷಿಗಳು ಸುಪ್ರೀತರಾದರು. ದುರ್ಧರ್ಷರಾದ ದುರ್ವಾಸರು ದುರ್ಯೋಧನನನ್ನು ಕುರಿತು ಹೇಳಿದರು :

**ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ ।**
**ಮಯಿ ಪ್ರೀತೇ ತು ಯದ್ಧರ್ಮ್ಯಂ ನಾಲಭ್ಯಂ ವಿದ್ಯತೇ ತವ ॥೧೬॥**

"ದುರ್ಯೋಧನ! ನಿನ್ನ ಮನಸ್ಸಿನಲ್ಲಿ ನನ್ನಿಂದ ಯಾವ ವರವನ್ನು ಪಡೆಯಬೇಕೆಂಬ ಆಶಯವಿದೆಯೋ ಅದನ್ನು ಕೇಳಿಕೋ. ನಿನಗೆ ಮಂಗಳವಾಗಲಿ. ನಾನು ಪ್ರೀತನಾಗಿರಲಾಗಿ ಧರ್ಮದ ಚೌಕಟ್ಟಿನಲ್ಲಿರುವ ಯಾವ ವರವನ್ನೇ ನೀನು ಅಪೇಕ್ಷಿಸಿದರೂ ನಿನಗದು ಲಭ್ಯವಾಗದೇ ಇರಲಾರದು. (ಲಭಿಸಿಯೇ ಲಭಿಸುತ್ತದೆ.)"

ಜನಮೇಜಯ! ಭಾವಿತಾತ್ಮರಾದ ದುರ್ವಾಸಮಹರ್ಷಿಗಳ ಆ ಮಾತುಗಳನ್ನು ಕೇಳಿದೊಡನೆಯೇ ತಾನು ಪುನರ್ಜನ್ಮವನ್ನು ಪಡೆದೆನೆಂದೇ ದುರ್ಯೋಧನನು ಭಾವಿಸಿದನು. ಈ ಮೊದಲೇ ದುರ್ಯೋಧನನು ಕರ್ಣ-ದುಃಶಾಸನರೊಡನೆ ಸಮಾಲೋಚಿಸಿ ದುರ್ವಾಸಮಹರ್ಷಿಗಳು ಸುಪ್ರೀತರಾಗಿ ವರಕೊಡಲು ಇಚ್ಛಿಸಿದರೆ ಯಾವ ವರವನ್ನು ಕೇಳಬೇಕೆಂಬುದನ್ನು ನಿಶ್ಚಯಮಾಡಿದ್ದನು. ದುರ್ಮತಿಯಾದ ದುರ್ಯೋಧನನು ದುರ್ವಾಸರ ವರಪ್ರದಾನದ ಇಚ್ಛೆಯನ್ನು ಕೇಳಿ ಪುಲಕಿತನಾಗಿ ಬದ್ಧಾಂಜಲಿಯಾಗಿ ನಿಂತು ಪೂರ್ವನಿಶ್ಚಿತವಾಗಿದ್ದ ಈ ವರವನ್ನು ಕೇಳಿದನು :

**ಶಿಷ್ಯೈಃ ಸಹ ಮಮ ಬ್ರಹ್ಮನ್ಯಥಾ ಜಾತೋಽತಿಥಿರ್ಭವಾನ್ ।**
**ಅಸ್ಮತ್ಕುಲೇ ಮಹಾರಾಜೋ ಜ್ಯೇಷ್ಠಃ ಶ್ರೇಷ್ಠೋ ಯುಧಿಷ್ಠಿರಃ ॥೧೯॥**

**ವನೇ ವಸತಿ ಧರ್ಮಾತ್ಮಾ ಭ್ರಾತೃಭಿಃ ಪರಿವಾರಿತಃ ।**
**ಗುಣವಾಞ್ಶೀಲಸಂಪನ್ನಸ್ತಸ್ಯ ತ್ವಮತಿಥಿರ್ಭವ ॥೨೦॥**

**ಯದಾ ಚ ರಾಜಪುತ್ರೀ ಸಾ ಸುಕುಮಾರೀ ಯಶಸ್ವಿನೀ ।**
**ಭೋಜಯಿತ್ವಾ ದ್ವಿಜಾನ್ಸರ್ವಾನ್ಪತೀಂಶ್ಚ ವರವರ್ಣಿನೀ ॥೨೧॥**

**ವಿಶ್ರಾನ್ತಾ ಚ ಸ್ವಯಂ ಭುಕ್ತ್ವಾ ಸುಖಾಸೀನಾ ಭವೇದ್ಯದಾ ।**
**ತದಾ ತ್ವಂ ತತ್ರ ಗಚ್ಛೇಥಾ ಯದ್ಯನುಗ್ರಾಹ್ಯತಾ ಮಯಿ ॥೨೨॥**

ದುರ್ಯೋಧನನು ದುರ್ವಾಸರಿಂದ ಏನು ಬೇಕಾದರೂ ವರಕೇಳ ಬಹುದಾಗಿತ್ತು. ಆದರೆ ಪಾಂಡವರಿಗೆ ಕಿರುಕುಳಕೊಡುವುದೊಂದೇ ಅವನ ಹೆಬ್ಬಯಕೆಯಾಗಿದ್ದುದರಿಂದ ದುರ್ಮತಿಯಾದ ಅವನು ಮಹರ್ಷಿಗಳನ್ನು ಕುರಿತು ಹೀಗೆಂದು ಹೇಳಿದನು :

"ಬ್ರಾಹ್ಮಣೋತ್ತಮರೇ! ದಶಸಹಸ್ರಶಿಷ್ಯರೊಡನೆ ನೀವು ಅತಿಥಿಗಳಾಗಿ ನಮ್ಮ ಅರಮನೆಗೆ ಆಗಮಿಸಿದ್ದೀರಿ. ನಮ್ಮ ಕುಲದಲ್ಲೆಲ್ಲಾ ಜ್ಯೇಷ್ಠನಾದವನು ಮತ್ತು ಶ್ರೇಷ್ಠನಾದವನು ಯುಧಿಷ್ಠಿರ. ನಿಜವಾಗಿ ಅವನು ಮಹಾರಾಜನೂ ಆಗಿರುತ್ತಾನೆ. ಈಗ ಅವನು ತನ್ನ ಅನುಜರಿಂದ ಕೂಡಿ ಅರಣ್ಯದಲ್ಲಿ ವಾಸಮಾಡುತ್ತಿದ್ದಾನೆ. ಅವನು ಗುಣವಂತ ; ಶೀಲವಂತ ; ಅತಿಥಿಗಳನ್ನು ದೇವರೆಂದೇ ಭಾವಿಸಿ ಪೂಜಿಸುವವನು. ಇಲ್ಲಿ ನನ್ನ ಆತಿಥ್ಯವನ್ನು ಸ್ವೀಕರಿಸಿ ಸುಪ್ರೀತರಾದಂತೆಯೇ ಅಲ್ಲಿಗೂ ಹೋಗಿ ಅವನು ಕೊಡುವ ಆತಿಥ್ಯವನ್ನೂ ನೀವು ಸ್ವೀಕರಿಸಬೇಕು. ನೀವು ಯಾವಾಗ ಅಲ್ಲಿಗೆ ಹೋಗಬೇಕೆಂಬುದನ್ನೂ ಹೇಳುತ್ತೇನೆ. ಸುಕುಮಾರಿಯಾದ, ಯಶಸ್ವಿನಿಯಾದ, ವರವರ್ಣಿನಿಯಾದ, ರಾಜಪುತ್ರಿಯಾದ ದ್ರೌಪದಿಯು ಸಕಲಬ್ರಾಹ್ಮಣರಿಗೂ ಭೋಜನಮಾಡಿಸಿ, ತನ್ನ ಪತಿಗಳಿಗೂ ಉಣಬಡಿಸಿ, ತಾನೂ ಊಟಮಾಡಿ ಹಾಯಾಗಿ ವಿಶ್ರಾಂತಿಸುಖವನ್ನು ಅನುಭವಿಸುತ್ತಿರಬೇಕು. ಅಂತಹ ಸಮಯದಲ್ಲಿ ನೀವು ನಿಮ್ಮ ಶಿಷ್ಯರೊಡನೆ ಯುಧಿಷ್ಠಿರನ ಆಶ್ರಮಕ್ಕೆ ಅತಿಥಿಗಳಾಗಿ ಹೋಗಬೇಕು.

ಮಹರ್ಷಿಗಳೇ! ನೀವು ನಿಶ್ಚಯವಾಗಿಯೂ ನನ್ನ ಸೇವೆಯಿಂದ ಸುಪ್ರೀತರಾಗಿದ್ದರೆ ಈ ವರವನ್ನು ದಯಪಾಲಿಸು."

ದುರ್ಯೋಧನನು ಇಂತಹ ಕ್ಷುದ್ರವಾದ ವರವನ್ನು ಕೇಳಿದೊಡನೆಯೇ

ದುರ್ವಾಸಮಹರ್ಷಿಗಳು ಮರುಮಾತನಾಡದೇ **'ಕರಿಷ್ಯೇ ತ್ವತ್ಪ್ರೀತ್ಯಾ'** 'ನಿನ್ನ ಮೇಲೆ ಪ್ರೀತಿಯಿರುವ ಕಾರಣದಿಂದ ನಾನು ಈ ಕಾರ್ಯವನ್ನು ನೀನು ಹೇಳಿದಂತೆಯೇ ಮಾಡುತ್ತೇನೆ'–ಎಂಬುದಾಗಿ ದುರ್ಯೋಧನನಿಗೆ ಹೇಳಿ ಶಿಷ್ಯರೊಡನೆ ಹೊರಟುಹೋದರು. ದುರ್ಯೋಧನನೂ ಕೂಡ ತಾನು ಕೃತಾರ್ಥನಾದೆನೆಂದೇ ಭಾವಿಸಿ ಸಂತೋಷದಿಂದ ಸುದೀರ್ಘವಾಗಿ ನಿಟ್ಟುಸಿರುಬಿಟ್ಟನು.

(ದುರ್ಯೋಧನನ ಯೋಜನೆಯೇನೋ ಅತ್ಯಮೋಘವಾದುದು. ದ್ರೌಪದಿಯು ಊಟಮಾಡಿದ ನಂತರ ಅಕ್ಷಯಪಾತ್ರೆಯಲ್ಲಿ ಅನ್ನವು ಸಿಕ್ಕುವುದಿಲ್ಲವೆಂಬ ರಹಸ್ಯವು ದುರ್ಯೋಧನನಿಗೆ ತಿಳಿದಿತ್ತು. ಅಂತಹ ಸಂದರ್ಭದಲ್ಲಿ ಹತ್ತುಸಾವಿರದೊಂದು ಜನರು ಅತಿಥಿಗಳಾಗಿ ನುಗ್ಗಿಬಿಟ್ಟರೆ ತಾಳ್ಮೆಗೆ ಹೆಸರಾಂತ ಯುಧಿಷ್ಠಿರನೂ ಕೂಡ ಧೃತಿಗೆಡಬೇಕಾಗುವುದು. ಹತ್ತುಸಾವಿರ ಮಂದಿಯನ್ನು ಕಾಡಿನಲ್ಲಿರುವ ಪಾಂಡವರು ಅಕ್ಷಯಪಾತ್ರೆಯ ಆಶ್ರಯವಿಲ್ಲದೇ ಉಪಚರಿಸುವ ಸಾಧ್ಯತೆಯೇ ಇಲ್ಲ. ಇದರಿಂದಾಗಿ ಪಾಂಡವರು ಮಹರ್ಷಿಗಳ ಕೋಪ-ಶಾಪಗಳಿಗೆ ಗುರಿಯಾಗಬೇಕಾಗುವುದು. ದುರ್ಯೋಧನನದು ಮಾನವಸಹಜವಾದ ಯೋಜನೆ. ಪಾಂಡವರನ್ನು ನಿರ್ಮೂಲನ ಗೊಳಿಸುವುದಕ್ಕಾಗಿ ಇಂತಹುದೇ ಅನೇಕಯೋಜನೆಗಳನ್ನು ಮಾಡಿ ದುರ್ಯೋಧನನು ವಿಫಲನಾಗಿದ್ದನು. ಆದರೂ ಸಹ ಅವನಿಗೆ ವಿವೇಕವು ಮಾತ್ರ ಬರಲಿಲ್ಲ.) ತನ್ನ ಪ್ರಸಕ್ತಸಂದರ್ಭದ ಯೋಜನೆಯು ಇದುವರೆಗೂ ಕಾರ್ಯಗತವಾಯಿತಾದ್ದರಿಂದ ದುರ್ಯೋಧನನು ಒಡನೆಯೇ ಕರ್ಣನ ಸಮೀಪಕ್ಕೆ ಹೋಗಿ ಅವನ ಕೈಕುಲುಕಿ ತನಗಾದ ಅಮಿತಾನಂದವನ್ನು ಅವನಿಗೂ ಹಂಚಿಕೊಟ್ಟನು. ಕರ್ಣನೂ ಸಹ ತನ್ನ ಸಲಹೆಯು ಕಾರ್ಯರೂಪಕ್ಕೆ ಬಂದುದಕ್ಕಾಗಿ ಬಹಳ ಸಂತೋಷಿಸಿ ಅನುಜರ ಸಮೂಹದಲ್ಲಿದ್ದ ದುರ್ಯೋಧನನನ್ನು ಕುರಿತು ಹೇಳಿದನು :

**ದಿಷ್ಟ್ಯಾ ಕಾಮಃ ಸುಸಂವೃತ್ತೋ ದಿಷ್ಟ್ಯಾ ಕೌರವ ವರ್ಧಸೇ ।**
**ದಿಷ್ಟ್ಯಾ ತೇ ಶತ್ರವೋ ಮಗ್ನಾ ದುಸ್ತರೇ ವ್ಯಸನಾರ್ಣವೇ ॥೨೬॥**

ಅದೃಷ್ಟವಶಾತ್ ನಿನ್ನ ಆಶಯವಿಂದು ಪೂರ್ಣವಾಯಿತು. ನೀನು

ದಿನ-ದಿನಕ್ಕೂ ಅಭಿವೃದ್ಧಿಹೊಂದುವೆಯೆಂಬುದಕ್ಕೆ ಈ ಪ್ರಸಂಗವೇ ಒಂದು ನಿದರ್ಶನವಾಗಿದೆ. ಆದುದರಿಂದ ಅದೃಷ್ಟದ ಕಾರಣದಿಂದಲೇ ನೀನು ಅಭಿವೃದ್ಧಿಹೊಂದುವೆ. ನಿನಗೆ ಶತ್ರುಗಳಾಗಿರುವವರು ವ್ಯಸನಾರ್ಣವದಲ್ಲಿ ಮುಳುಗಿ ಹೋಗುತ್ತಾರೆ.

ದುರ್ವಾಸರ ಕ್ರೋಧಾಗ್ನಿಯಲ್ಲಿ ಪಾಂಡುನಂದನರು ಬಿದ್ದು ಬೆಂದು ಹೋಗುತ್ತಾರೆ. ಅವರು ತಾವು ಮಾಡಿದ ಪಾಪಗಳಿಂದಲೇ ಅತಿದುಸ್ತರವಾದ ಅಂಧಕಾರದಲ್ಲಿ ಮುಳುಗಿಹೋಗುತ್ತಾರೆ.”

ಜನಮೇಜಯ! ಇವೇ ಮುಂತಾಗಿ ಮಾತನಾಡಿಕೊಂಡು, ದುಷ್ಟ ಚಿಂತನೆಯಲ್ಲಿಯೇ ಸರ್ವದಾ ನಿರತರಾಗಿದ್ದ ದುರ್ಯೋಧನಾದಿಗಳು ಸಂತುಷ್ಟರಾಗಿ ನಗುತ್ತಾ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು.

೨೬೨ನೆಯ ಅಧ್ಯಾಯವು ಮುಗಿಯಿತು.

೨೬೩ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ದುರ್ವಾಸರು ಅಸಮಯದಲ್ಲಿ ಯುಧಿಷ್ಠಿರನಿದ್ದ ಆಶ್ರಮಕ್ಕೆ ಶಿಷ್ಯರೊಡನೆ ತೆರಳಿದುದು : ದ್ರೌಪದಿಯ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಕೃಷ್ಣನ ಆವಿರ್ಭಾವ : ಶ್ರೀಕೃಷ್ಣನು ದುರ್ವಾಸರ ಭಯದಿಂದ ಪಾಂಡವರನ್ನು ವಿಮುಕ್ತಿಗೊಳಿಸಿದುದು : ಪಾಂಡವರನ್ನು ಆಶ್ವಸಿಸಿ ದ್ವಾರಾವತಿಗೆ ಶ್ರೀಕೃಷ್ಣನು ಪ್ರಯಾಣಮಾಡಿದುದು

“ಜನಮೇಜಯ! ಒಂದಾನೊಂದು ದಿನ ದುರ್ವಾಸಮಹರ್ಷಿಗಳು ಪಾಂಡವರು ಭೋಜನಮಾಡಿ ಸುಖಾಸೀನರಾಗಿ ಕುಳಿತಿರುವುದನ್ನೂ, ದ್ರೌಪದಿಯೂ ಸಹ ತನ್ನ ಭೋಜನವನ್ನು ಮುಗಿಸಿ ವಿಶ್ರಾಂತಿಯನ್ನು ಪಡೆಯುತ್ತಿರುವುದನ್ನೂ ತಿಳಿದುಕೊಂಡವರಾಗಿ ಹತ್ತುಸಾವಿರ ಶಿಷ್ಯರಿಂದ ಸಮೇತರಾಗಿ ಕಾಮ್ಯಕವನದಲ್ಲಿದ್ದ ಯುಧಿಷ್ಠಿರನ ಆಶ್ರಮಕ್ಕೆ ಆಗಮಿಸಿದರು. ಮಹಾತಪಸ್ವಿಗಳಾದ ದುರ್ವಾಸಮಹರ್ಷಿಗಳು ಶಿಷ್ಯರೊಡನೆ ಆಗಮಿಸುತ್ತಿರುವುದನ್ನು ಶ್ರೀಮಂತನಾದ, ಅಚ್ಯುತನಾದ ಯುಧಿಷ್ಠಿರನು

ಕಂಡು ಸಹೋದರರಿಂದೊಡಗೂಡಿ ಆಶ್ರಮದಿಂದ ನಾಲ್ಕಾರು ಹೆಜ್ಜೆಗಳು ಮುಂದೆ ಬಂದು ಕೈಜೋಡಿಸಿ ವಿನೀತನಾಗಿ ಮಹರ್ಷಿಗಳನ್ನೂ ಅವರ ಶಿಷ್ಯರನ್ನೂ ಆದರದಿಂದ ಸ್ವಾಗತಿಸಿದನು. ಮಹರ್ಷಿಗಳನ್ನು ಆಶ್ರಮದೊಳಕ್ಕೆ ಕರೆದೊಯ್ದು ಅರ್ಘ್ಯ-ಪಾದ್ಯಾದಿಗಳನ್ನಿತ್ತು ಗೌರವಿಸಿ ಆಸನದಲ್ಲಿ ಕುಳ್ಳಿರಿಸಿ ಬದ್ಧಾಂಜಲಿಪುಟನಾಗಿ ಪ್ರಾರ್ಥಿಸಿದನು :



"ಮಹರ್ಷಿಗಳೇ! ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಶೀಘ್ರವಾಗಿ ನಮ್ಮ ಆತಿಥ್ಯವನ್ನು ಸ್ವೀಕರಿಸಲು ಶಿಷ್ಯಸಮೇತರಾಗಿ ಆಗಮಿಸಿರಿ." ಮಹರ್ಷಿಗಳು 'ತಥಾಸ್ತು' ಎಂದು ಯುಧಿಷ್ಠಿರನಿಗೆ ಹೇಳಿ 'ತಮಗೂ ತಮ್ಮ ಪರಿ

ವಾರಕ್ಕೂ ಅವೇಳೆಯಲ್ಲಿ ಆಶ್ರಮವಾಸಿಯಾದ ಯುಧಿಷ್ಠಿರನು ಹೇಗೆ ಭೋಜನಮಾಡಿಸುವನು?' ಎಂದು ಕೂಡ ಆಲೋಚಿಸದೇ, ಸ್ನಾನಾಹ್ನಿಕಾದಿಗಳನ್ನು ಮಾಡಲು ಸ್ವಲ್ಪದೂರದಲ್ಲಿದ್ದ ನದಿಯ ಸಮೀಪಕ್ಕೆ ತೆರಳಿದರು. ದುರ್ವಾಸರೊಡನೆ ಅವರ ಹತ್ತುಸಾವಿರ ಶಿಷ್ಯರೂ ಸಹ ಸ್ನಾನಕ್ಕಾಗಿ ನದಿಗೆ ತೆರಳಿ, ಅಲ್ಲಿ ಸ್ನಾನಾದಿಗಳನ್ನು ಮಾಡತೊಡಗಿದರು.

(ಮನೆಗೆ ಯಾರಾದರೂ ಬಂದರೆಂದರೆ ಮನೆಯೊಡತಿಯ ಜವಾಬ್ದಾರಿಯು ಬಹಳ ಹೆಚ್ಚಿನದು. ಬಂದವರನ್ನು ಯಥೋಚಿತವಾಗಿ ಸತ್ಕರಿಸಿ ಯಜಮಾನನ ಮಾನವುಳಿಸುವವಳೇ ಸಾಧ್ವಿಯಾದ ಗೃಹಿಣಿ. ಆ ವೇಳೆಯಲ್ಲಿ ಮನೆಯಲ್ಲಿ ಯಾವುದಾದರೂ ಪದಾರ್ಥಗಳಿಲ್ಲದಿದ್ದರೆ ನೆರೆಮನೆಯಿಂದಾದರೂ ತಂದು ಅಂದಿನ ಕಾರ್ಯವನ್ನು ನಿರ್ವಹಿಸುತ್ತಾಳೆ. ಇದು ನಮ್ಮ ಸಮಾಜದ ವೈಶಿಷ್ಟ್ಯ.)

ದುರ್ವಾಸರು ಆಶ್ರಮಕ್ಕೆ ಆಗಮಿಸಿದೊಡನೆಯೇ ಯುಧಿಷ್ಠಿರನಿಗಿಂತಲೂ ಹೆಚ್ಚಾಗಿ ದ್ರೌಪದಿಯು ಪೇಚಿನಲ್ಲಿ ಸಿಕ್ಕಿಕೊಂಡಳು. ಪತಿವ್ರತೆಯಾದ, ಸ್ತ್ರೀರತ್ನಳಾದ ದ್ರೌಪದಿಗೆ ಋಷಿಗಳೂ ಮತ್ತು ಶಿಷ್ಯರೂ ತಮ್ಮ ಆಶ್ರಮಕ್ಕೆ ಆಗಮಿಸಿದುದಕ್ಕಾಗಿ ಬೇಸರವಾಗಲಿಲ್ಲ. ಅಷ್ಟುಮಂದಿಗೆ ಅವೇಳೆಯಲ್ಲಿ ಅನ್ನಾಹಾರಗಳನ್ನು ಹೇಗೆ ಒದಗಿಸಬೇಕೆಂಬ ವಿಷಯವಾಗಿ ಚಿಂತೆಹುಟ್ಟಿತು. ಎಷ್ಟೇ ಯೋಚಿಸಿದರೂ ತನ್ನಿಂದ ಅಷ್ಟುಮಂದಿಗೆ ಅನ್ನವನ್ನು ಸಿದ್ಧಗೊಳಿಸುವ ಸಾಧ್ಯತೆಯು ಕಂಡುಬರಲಿಲ್ಲ. ಮೇಲಾಗಿ ಅವರೆಲ್ಲರೂ ಇನ್ನು ಸ್ವಲ್ಪಹೊತ್ತಿನಲ್ಲಿಯೇ ಭೋಜನಕ್ಕಾಗಿ ಬಂದುಬಿಡುತ್ತಾರೆ. ಇಂತಹ ಸಂದಿಗ್ಧಸಮಯದಲ್ಲಿ ಶ್ರೀಕೃಷ್ಣನೊಬ್ಬನೇ ತನಗೆ ಶರಣ್ಯನೆಂದು ನಿರ್ಧರಿಸಿ, ಕಾಲ್ತೊಳೆದು ಪದ್ಮಾಸನದಲ್ಲಿ ಕುಳಿತು ದ್ರೌಪದಿಯು ಮಹಾಮಹಿಮನಾದ, ಭಕ್ತಪರಾಧೀನನಾದ, ಕಂಸನಿಷೂದನನಾದ ಶ್ರೀಕೃಷ್ಣನನ್ನು ಮನಸ್ಸಿನಲ್ಲಿಯೇ ಧ್ಯಾನಮಾಡತೊಡಗಿದಳು :

**ಕೃಷ್ಣ ಕೃಷ್ಣ ಮಹಾಬಾಹೋ ದೇವಕೀನನ್ದನಾವ್ಯಯ ।**
**ವಾಸುದೇವ ಜಗನ್ನಾಥ ಪ್ರಣತಾರ್ತಿವಿನಾಶನ ॥೯॥**

**ವಿಶ್ವಾತ್ಮನ್ವಿಶ್ವಜನಕ ವಿಶ್ವಹರ್ತಃ ಪ್ರಭೋಽವ್ಯಯ ।**
**ಪ್ರಪನ್ನಪಾಲ ಗೋಪಾಲ ಪ್ರಜಾಪಾಲ ಪರಾತ್ಪರ ॥೧೦॥**

ಆಕೂತೀನಾಂ ಚ ಚಿತ್ತಾನಾಂ ಪ್ರವರ್ತಕ ನತಾಸ್ಮಿ ತೇ ।
ವರೇಣ್ಯ ವರದಾನನ್ತ ಅಗತೀನಾಂ ಗತಿರ್ಭವ ॥೧೧॥

ಪುರಾಣಪುರುಷ ಪ್ರಾಣಮನೋವೃತ್ತ್ಯಾದ್ಯಗೋಚರ ।
ಸರ್ವಾಧ್ಯಕ್ಷ ಪರಾಧ್ಯಕ್ಷ ತ್ವಾಮಹಂ ಶರಣಂ ಗತಾ ॥೧೨॥

ಪಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ ।
ನೀಲೋತ್ಪಲದಲಶ್ಯಾಮ ಪದ್ಮಗರ್ಭಾರುಣೇಕ್ಷಣ ॥೧೩॥

ಪೀತಾಮ್ಬರಪರೀಧಾನ ಲಸತ್ಕೌಸ್ತುಭಭೂಷಣ ।
ತ್ವಮಾದಿರನ್ತೋ ಭೂತಾನಾಂ ತ್ವಮೇವ ಚ ಪರಾಯಣಮ್ ।
ಪರಾತ್ಪರತರಂ ಜ್ಯೋತಿರ್ವಿಶ್ವಾತ್ಮಾ ಸರ್ವತೋಮುಖಃ ॥೧೪॥

ತ್ವಾಮೇವಾಹುಃ ಪರಂ ಬೀಜಂ ನಿಧಾನಂ ಸರ್ವಸಮ್ಪದಾಮ್ ।
ತ್ವಯಾ ನಾಥೇನ ದೇವೇಶ ಸರ್ವಾಪದ್ಭ್ಯೋ ಭಯಂ ನ ಹಿ ॥೧೫॥

ದುಶ್ಶಾಸನಾದಹಂ ಪೂರ್ವಂ ಸಭಾಯಾಂ ಮೋಚಿತಾ ಯಥಾ ।
ತಥೈವ ಸಂಕಟಾದಸ್ಮಾನ್ಮಾಮುದ್ಧರ್ತುಮಿಹಾರ್ಹಸಿ ॥೧೬॥

“ಕೃಷ್ಣ! ಕೃಷ್ಣ! ಮಹಾಬಾಹೋ! ದೇವಕೀನಂದನ! ಅವ್ಯಯ! ವಾಸುದೇವ! ಜಗನ್ನಾಥ! ನಮಿಸುವವರ ಕಷ್ಟಗಳೆಲ್ಲವನ್ನೂ ನಿಮಿಷಾರ್ಧದಲ್ಲಿಯೇ ತೊಲಗಿಸುವ ಮಹಾನುಭಾವನೇ! ಸಕಲವಿಶ್ವವನ್ನೂ ಆತ್ಮದಲ್ಲಡಗಿಸಿಕೊಂಡಿರುವವನೇ! ಸಕಲಜಗತ್ತಿಗೂ ತಂದೆಯಾಗಿರುವವನೇ! ಸಕಲ ಭುವನಗಳ ವಿನಾಶಕರನೇ! ಪ್ರಭುವೇ! ನಾಶರಹಿತನೇ! ನತಜನಪಾಲಕನೇ! ಗೋಪಾಲನೇ! ಪ್ರಜೆಗಳ ಪಾಲಕನೇ! ಪರಾತ್ಪರನೇ! ಮನೋಬುದ್ಧಿಗಳ ಪ್ರವರ್ತಕನೇ! ನಾನು ನಿನಗೆ ನಮಸ್ಕರಿಸುತ್ತೇನೆ (ಶರಣಾಗತಳಾಗಿದ್ದೇನೆ). ವರೇಣ್ಯನೇ! ವರದನೇ! ಅನಂತನೇ! ದಿಕ್ಕಿಲ್ಲದವರಿಗೆ ಶರಣ್ಯನಾಗು. ಪುರಾಣಪುರುಷನೇ! ಪ್ರಾಣ-ಮನೋವೃತ್ತಿಗಳಿಗೆ ಅಗೋಚರನಾದವನೇ! ಸರ್ವಾಧ್ಯಕ್ಷನೇ! ಪರಾಧ್ಯಕ್ಷನೇ! ನಾನು ನಿನಗೆ ಶರಣಾಗತಳಾಗಿದ್ದೇನೆ. ಶರಣಾಗತವತ್ಸಲನೇ! ದೇವನೇ! ನನ್ನನ್ನು ಕೃಪೆಯಿಂದ ಕಾಪಾಡು. ನೀಲಕಮಲದಳದಂತೆ ಶ್ಯಾಮಲವರ್ಣವುಳ್ಳವನೇ! ಕಮಲಪುಷ್ಪದ ರೇಣುವಿನಂತೆ ನಸುಗೆಂಪಾದ ಕಣ್ಣುಗಳುಳ್ಳವನೇ! ಪೀತಾಂಬರವನ್ನು ಧರಿಸಿರುವವನೇ!

ಥಳ-ಥಳಿಸುತ್ತಿರುವ ಕೌಸ್ತುಭಮಣಿಯನ್ನು ಎದೆಯಲ್ಲಿ ಧರಿಸಿರುವವನೇ! ಸಕಲಪ್ರಾಣಿಗಳಿಗೂ ಆದಿ ಮತ್ತು ಅಂತ್ಯಗಳೆರಡೂ ನೀನೇ ಆಗಿರುತ್ತೀಯೆ. ಸಕಲಪ್ರಾಣಿಗಳಿಗೂ ಪ್ರಾಪ್ಯಸ್ಥಾನವೂ ನೀನೇ ಆಗಿರುತ್ತೀಯೇ. ಪರಾತ್ಪರನೂ, ವಿಶ್ವಾತ್ಮನೂ, ಸರ್ವತೋಮುಖನೂ ನೀನೇ ಆಗಿರುತ್ತೀಯೇ. ಸಕಲವಿಶ್ವಗಳಿಗೂ ನಿನ್ನನ್ನೇ ಬೀಜರೂಪನೆಂದೂ ಸಂಪತ್ತಿನ ನಿಧಿಯೆಂದೂ ಹೇಳುತ್ತಾರೆ. ಜ್ಯೋತೀರೂಪನೂ ನೀನೇ. ನೀನು ನಾಥನಾಗಿರುವುದರಿಂದ ಸರ್ವವಿಧವಾದ ಆಪತ್ತುಗಳಿಂದಲೂ ಭಯವಿರುವುದಿಲ್ಲ. ನಾನು ಈ ಮೊದಲು ನಿನ್ನ ದಯೆಯಿಂದಲೇ ರಾಜಸಭೆಯಲ್ಲಿ ದುಃಶಾಸನನಿಂದ ಬಿಡುಗಡೆ ಮಾಡಲ್ಪಟ್ಟೆನು. ಅದೇ ರೀತಿಯಲ್ಲಿ ಈಗಲೂ ಸಹ ದಯಾಮಯನಾದ ನೀನು ಈಗ ಪ್ರಾಪ್ತವಾಗಿರುವ ಸಂಕಟದಿಂದ ನನ್ನನ್ನು ಉದ್ಧರಿಸಲು ಸಮರ್ಥನಾಗಿರುತ್ತೀಯೆ."

ಅನನ್ಯಶರಣೆಯಾದ, ಪರಮಭಕ್ತಳಾದ ಪರಮಸಾಧ್ವಿಯಾದ, ಪತಿವ್ರತೆಯಾದ ದ್ರೌಪದಿಯ ಆ ಕೂಗು ಒಡನೆಯೇ ದ್ವಾರವತಿಯಲ್ಲಿ ರುಕ್ಮಿಣಿಯೊಡನೆ ಪವಡಿಸಿದ್ದ ಕೃಷ್ಣನಿಗೆ ಕೇಳಿಸಿತು. ದೇವದೇವನಾದ, ಜಗತ್ಪತಿಯಾದ, ಭಕ್ತವತ್ಸಲನಾದ ಶ್ರೀಕೃಷ್ಣನು, ಅನನ್ಯಚಿತ್ತಳಾದ ಕೃಷ್ಣೆಯ ಸಂಕಟವೇನೆಂಬುದನ್ನು ತಿಳಿದವನಾಗಿ ಪಕ್ಕದಲ್ಲಿ ಮಲಗಿದ್ದ ರುಕ್ಮಿಣಿಗೂ ಒಂದು ಮಾತನ್ನೂ ಹೇಳದೇ ಅವಳನ್ನಲ್ಲಿಯೇ ಬಿಟ್ಟು ಅವಸರದಿಂದ ಯುಧಿಷ್ಠಿರನ ಆಶ್ರಮಕ್ಕೆ ಆಗಮಿಸಿದನು.

ಯಾರಿಂದಲೂ ತಿಳಿಯಲಸಾಧ್ಯವಾದ ಗತಿಯುಳ್ಳ ಸಕಲಪ್ರಾಣಿಗಳಿಗೂ ಈಶ್ವರನಾದ ಶ್ರೀಕೃಷ್ಣನು ದ್ರೌಪದಿಯು ಇನ್ನೂ ಧ್ಯಾನಾಸಕ್ತಳಾಗಿ ಕುಳಿತಿದ್ದಂತೆಯೇ ಅವಳ ಮುಂದೆ ಬಂದು ನಿಂತನು. ಹೃತ್ಕಮಲದಲ್ಲಿ ವಿರಾಜಿಸುತ್ತಿದ್ದ ಕೃಷ್ಣಮೂರ್ತಿಯನ್ನು ಪ್ರತ್ಯಕ್ಷವಾಗಿ ಕಂಡ ದ್ರೌಪದಿಯ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದುವು. ಒಡನೆಯೇ ಮೇಲೆದ್ದು ಶ್ರೀಕೃಷ್ಣನ ದಿವ್ಯಪಾದಗಳಿಗೆ ನಮಸ್ಕರಿಸಿ ಪರಂಧಾಮನಿಗೆ ಆಸನವನ್ನಿತ್ತು ಉಪಚರಿಸಿದಳು. ದುರ್ವಾಸಮಹರ್ಷಿಗಳು ಹತ್ತುಸಾವಿರ ಶಿಷ್ಯರಿಂದ ಕೂಡಿದವರಾಗಿ ಆಗಮಿಸಿರುವ ವಿಷಯವನ್ನು ದೇವದೇವನಲ್ಲಿ ನಿವೇದಿಸಿಕೊಂಡಳು. ಪರಂಧಾಮನಾದ ಶ್ರೀಕೃಷ್ಣನು ಆತುರದಿಂದ ದ್ರೌಪದಿಯನ್ನು ಕೇಳಿದನು :

**ಕ್ಷುಧಿತೋಽಸ್ಮಿ ಭೃಶಾತುರಃ ।**
**ಶೀಘ್ರಂ ಭೋಜಯ ಮಾಂ ಕೃಷ್ಣೇ ಪಶ್ಚಾತ್ಸರ್ವಂ ಕರಿಷ್ಯತಿ ॥**

"ಕೃಷ್ಣೇ! ನಾನು ಹಸಿವಿನಿಂದ ಬಳಲಿದ್ದೇನೆ. ಹೆಚ್ಚು ಆಯಾಸ ಗೊಂಡಿದ್ದೇನೆ. ಆದುದರಿಂದ ಮೊದಲು ನನಗೆ ಊಟಹಾಕಿಬಿಡು. ಮುಂದೆ ಮಾಡಬೇಕಾದುದೆಲ್ಲವನ್ನೂ ಅನಂತರ ಮಾಡುವೆಯಂತೆ." (ಪರಮಾತ್ಮನಾದ ಶ್ರೀಕೃಷ್ಣನು ತನ್ನ ಪರಮಭಕ್ತಳಾದ ದ್ರೌಪದಿಯು ಧ್ಯಾನಮಾಡಿದ ಮಾತ್ರದಿಂದಲೇ ರುಕ್ಮಿಣಿಯನ್ನು ಬದಿಗೊತ್ತಿ ಬಂದಿರುವುದು ನಿಜ. ಮಹಾ ಯೋಗಿಯಾದ ಶ್ರೀಕೃಷ್ಣನಿಗೆ ಹಸಿವು-ಬಾಯಾರಿಕೆ-ಆಯಾಸಗಳಿಲ್ಲದಿದ್ದರೂ ಹಸಿವಾಗಿದೆಯೆಂದು ಹೇಳುತ್ತಿದ್ದಾನೆ. ಆ ಸಮಯದಲ್ಲಿ ಸಾಧ್ವಿಯಾದ ದ್ರೌಪದಿಯು ಏನು ಮಾಡಬೇಕು? ಸೂರ್ಯದತ್ತವಾದ ಅಕ್ಷಯಪಾತ್ರೆಯು ಬರಿದಾಗಿದೆ.) ಪರಂಧಾಮನ ಮಾತುಗಳನ್ನು ಕೇಳಿ ಲಜ್ಜಾನ್ವಿತೆಯಾದ ದ್ರೌಪದಿಯು ಹೀಗೆಂದು ಹೇಳಿದಳು :

**ಸ್ಥಾಲ್ಯಾಂ ಭಾಸ್ಕರದತ್ತಾಯಾಮನ್ನಂ ಮದ್ಭೋಜನಾವಧಿ ।**
**ಭುಕ್ತವತ್ಯಸ್ಮ್ಯಹಂ ದೇವ ತಸ್ಮಾದನ್ನಂ ನ ವಿದ್ಯತೇ ॥೨೨॥**

"ಪ್ರಭೋ! ಭಾಸ್ಕರದತ್ತವಾದ ಅಕ್ಷಯಪಾತ್ರೆಯಲ್ಲಿ ಅನ್ನವು ನನ್ನ ಭೋಜನಪರ್ಯಂತವಾಗಿ ಮಾತ್ರವೇ ಇರುತ್ತದೆ. ನಾನೀಗ ಊಟಮಾಡಿ ಬಿಟ್ಟಿದ್ದೇನೆ. ಆದುದರಿಂದ ಈಗ ಅನ್ನವಿಲ್ಲ."

ಆದರೆ ಕೃಷ್ಣನು ಅಷ್ಟಕ್ಕೇ ಬಿಡಲಿಲ್ಲ. ಕಮಲಲೋಚನನಾದ ಶ್ರೀಕೃಷ್ಣನು ಹೇಳಿದನು :

**ಕೃಷ್ಣೇ ನ ನರ್ಮಕಾಲೋಽಯಂ ಕ್ಷುಚ್ಛ್ರಮೇಣಾತುರೇ ಮಯಿ ।**
**ಶೀಘ್ರಂ ಗಚ್ಛ ಮಮ ಸ್ಥಾಲೀಮಾನೀಯ ತ್ವಂ ಪ್ರದರ್ಶಯ ॥೨೩॥**

"ಕೃಷ್ಣೇ! ನಾನೀಗ ಹಸಿವಿನಿಂದ ಬಳಲಿ ಬೆಂಡಾಗಿಹೋಗಿದ್ದೇನೆ. ಪರಿ ಹಾಸಕ್ಕಿದು ಕಾಲವಲ್ಲ, ತಂಗಿ! ಒಡನೆಯೇ ಹೋಗಿ ಅಕ್ಷಯಪಾತ್ರೆಯನ್ನು ತಂದು ನನಗೆ ತೋರಿಸು."

ಯದುಕುಲಾವತಂಸನಾದ ಶ್ರೀಕೃಷ್ಣನು ಬಹುವಾಗಿ ನಿರ್ಬಂಧಮಾಡಿ

ದ್ರೌಪದಿಯಿಂದ ಅಕ್ಷಯಪಾತ್ರೆಯನ್ನು ತರಿಸಿಕೊಂಡನು. ಆ ಅಕ್ಷಯಪಾತ್ರೆಯ ಕಂಠದಲ್ಲಿ ಪಲ್ಯದ ಒಂದು ಚೂರು ಮಾತ್ರ ಅಂಟಿಕೊಂಡಿದ್ದಿತು. ಅದನ್ನೇ ಪಾತ್ರೆಯಿಂದ ತೆಗೆದುಕೊಂಡು ಭಕ್ಷಿಸಿ ಕೃಷ್ಣೆಯನ್ನು ಕುರಿತು ಹೇಳಿದನು :

ಅನೇನ ಹರಿರೀಶ್ವರಃ ।
ವಿಶ್ವಾತ್ಮಾ ಪ್ರೀಯತಾಂ ದೇವಸ್ತುಷ್ಟಶ್ಚಾಸ್ತ್ವಿತಿ ಯಜ್ಞಭುಕ್ ॥



"ಹಸಿವಿನ ಸಮಯದಲ್ಲಿ ಈ ಪಲ್ಯದ ಚೂರನ್ನಾದರೂ ಕೊಟ್ಟೆಯಲ್ಲವೇ? ದ್ರೌಪದಿ! ಇದರಿಂದ ಈಶ್ವರನೂ, ವಿಶ್ವಾತ್ಮನೂ, ಯಜ್ಞಭೋಕ್ತನೂ, ದೇವನೂ ಆದ ಶ್ರೀಹರಿಯು ಸುಪ್ರೀತನಾಗಲಿ."

ಅನಂತರ ಹತ್ತಿರದಲ್ಲಿಯೇ ಇದ್ದ ಸಹದೇವನನ್ನು ಕುರಿತು ಭಕ್ತರ ಕ್ಲೇಶವಿನಾಶಕನಾದ ಶ್ರೀಕೃಷ್ಣನು ಹೀಗೆಂದು ಹೇಳಿದನು : 'ಸಹದೇವ! ಋಷಿಗಳೆಲ್ಲರನ್ನೂ ಭೋಜನಕ್ಕೆ ಕೂಡಲೇ ಕರೆದುಕೊಂಡು ಬಾ.'

ಕೃಷ್ಣನ ಆಜ್ಞಾನುಸಾರವಾಗಿ ದುರ್ವಾಸರನ್ನೂ, ಋಷಿಗಳನ್ನೂ ಭೋಜನಾರ್ಥವಾಗಿ ಆಹ್ವಾನಿಸಲು ಸಹದೇವನು ನದಿಯ ಬಳಿಗೆ ಹೊರಟನು.

ಇತ್ತಲಾಗಿ ನದಿಗೆ ಸ್ನಾನಕ್ಕಾಗಿ ತೆರಳಿದ್ದ ದುರ್ವಾಸರೂ ಮತ್ತು ಅವರ ಹತ್ತುಸಾವಿರ ಮಂದಿ ಶಿಷ್ಯರೂ ಅಘಮರ್ಷಣಸೂಕ್ತವನ್ನು ಜಪಿಸುತ್ತಾ ಸ್ನಾನಮಾಡಲು ನದಿಗಿಳಿದರು. ನದಿಯಲ್ಲೊಮ್ಮೆ ಮುಳುಗಿ ಎದ್ದೊಡನೆಯೇ ಅವರಿಗೆ ಹೊಟ್ಟೆಯು ತುಂಬಿರುವಂತೆ ತೋರಿತು. ಕಂಠಪೂರ್ತಿಯಾಗಿ ಆಹಾರವನ್ನು ತಿಂದು-ತೇಗುವಂತೆ ಪ್ರತಿಯೊಬ್ಬರೂ ತೇಗತೊಡಗಿದರು. ನೀರಿನಿಂದ ಮೇಲೆ ಬಂದು ಮೈಯ್ಯೊರಸಿಕೊಳ್ಳುತ್ತಿದ್ದಾಗ ಪ್ರತಿಯೊಬ್ಬರೂ ಮತ್ತೊಬ್ಬರ ಮುಖವನ್ನು ನೋಡತೊಡಗಿದರು. ಹತ್ತುಸಾವಿರ ಶಿಷ್ಯರೂ ಮಿತಿಮೀರಿ ಭೋಜನಮಾಡುವುದರಿಂದುಂಟಾಗುವ ಆಯಾಸವನ್ನು ಅನುಭವಿಸುತ್ತಿದ್ದರು. ಅನಂತರ ಎಲ್ಲರೂ ದುರ್ವಾಸರ ಬಳಿಗೆ ಹೋಗಿ ತಮ್ಮ ಸ್ಥಿತಿಯನ್ನು ಹೇಳಿಕೊಂಡರು :

"ಮಹರ್ಷಿಗಳೇ! ಯುಧಿಷ್ಠಿರಮಹಾರಾಜನಿಗೆ ಅಕಾಲದಲ್ಲಿ ನಮ್ಮೆಲ್ಲರಿಗೂ ಆಹಾರವನ್ನು ಸಿದ್ಧಗೊಳಿಸುವಂತೆ ಹೇಳಿ ಸ್ನಾನಕ್ಕಾಗಿ ನದಿಗೆ ಆಗಮಿಸಿದೆವು. ಆದರೆ ಈಗ ನಮಗೆ ಒಂದಗುಳನ್ನವನ್ನಾದರೂ ಊಟಮಾಡಲು ಸಾಧ್ಯವೇ ಇಲ್ಲವಾಗಿದೆ. ಕಂಠಪೂರ್ತಿಯಾಗಿ ನಮ್ಮ ಹೊಟ್ಟೆಯು ತುಂಬಿಹೋಗಿದೆ. ಅನಾವಶ್ಯಕವಾಗಿ ನಮಗೋಸ್ಕರ ಅಡಿಗೆಯು ಸಿದ್ಧವಾಗಿಹೋಗಿದೆ. ಸಿದ್ಧಪಡಿಸಿದ ಅಡಿಗೆಯೆಲ್ಲವೂ ವ್ಯರ್ಥವಾಗಿ ಹೋಗುವುದು. ಇಂತಹ ಸಂದರ್ಭದಲ್ಲಿ ನಾವೇನು ಮಾಡಬೇಕೆಂಬುದನ್ನಾದರೂ ದಯಮಾಡಿ ಹೇಳಿರಿ."

"ಯುಧಿಷ್ಠಿರನು ಸಿದ್ಧಗೊಳಿಸಿದ ಅಡಿಗೆಯನ್ನು ವ್ಯರ್ಥಮಾಡಿರುವುದರಿಂದ ನಾವು ರಾಜರ್ಷಿಗೆ ತಪ್ಪುಮಾಡಿದಂತಾಗಿದೆ. ನಾವು ಮಾಡಿದ ಈ ಅಪರಾಧಕ್ಕಾಗಿ ಧರ್ಮಾತ್ಮರಾದ ಪಾಂಡವರು ಕುಪಿತರಾಗಿ ತಮ್ಮ ಕ್ರೂರ ದೃಷ್ಟಿಗಳಿಂದಲೇ ನಮ್ಮನ್ನು ಸುಟ್ಟುಬಿಟ್ಟಾರು!

**ಸ಼್ೃತ್ವಾನುಭಾವಂ ರಾಜರ್ಷೇರಂಬರೀಷಸ್ಯ ಧೀಮತಃ I**
**ಬಿಭೇಮಿ ಸುತರಾಂ ವಿಪ್ರಾಃ ಹರಿಪಾದಾಶ್ರಯಾಜ್ಜನಾತ್ ||೩೩||**

ರಾಜರ್ಷಿಯಾದ ಅಂಬರೀಷನ ಪ್ರಭಾವವನ್ನು ಸ್ಮರಿಸಿ (ಅವನೊಡನೆ ನನಗಾದ ಅನುಭವವನ್ನು ಸ್ಮರಿಸಿ) ಶ್ರೀಹರಿಯ ಪಾದಗಳನ್ನು ಆಶ್ರಯವಾಗಿ



ಪಡೆದಿರುವ ಹರಿಭಕ್ತರ ವಿಷಯದಲ್ಲಿ ನಾನು ಭಯಪಡುತ್ತೇನೆ. ಪಾಂಡವರಾದರೋ ಮಹಾತ್ಮರು ; ಧರ್ಮಪರಾಯಣರು ; ಶೂರರು ; ಶಸ್ತ್ರ-ಶಾಸ್ತ್ರಗಳೆರಡರಲ್ಲಿಯೂ ನಿಪುಣರು ; ವ್ರತನಿಷ್ಠರು ; ತಪೋಧನರು ; ಸದಾಚಾರನಿರತರು ; ಮೇಲಾಗಿ ವಾಸುದೇವನ ಪರಮಭಕ್ತರು. ಅವರೇನಾದರೂ ಕೋಪಿಸಿಕೊಂಡಿದ್ದೇ ಆದರೆ ನಮ್ಮೆಲ್ಲರನ್ನೂ ಕ್ಷಣಮಾತ್ರದಲ್ಲಿ–ಹತ್ತಿಯ ರಾಶಿ

ಯನ್ನು ಬೆಂಕಿಯು ಸುಲಭವಾಗಿ ಸುಟ್ಟುಹಾಕುವಂತೆ–ಸುಟ್ಟುಹಾಕಬಲ್ಲರು. ಆದುದರಿಂದ ನೀವುಗಳು ಅವರ ಕಣ್ಣಿಗೇ ಬೀಳದಂತೆ ಶೀಘ್ರವಾಗಿ ಪಲಾಯನ ಮಾಡಿಬಿಡಿರಿ."

ಜನಮೇಜಯ! ಗುರುಗಳಾದ ದುರ್ವಾಸಮಹರ್ಷಿಗಳು ಹೀಗೆ ಹೇಳಿದ್ದೇ ತಡ, ಹತ್ತುಸಾವಿರ ಮಂದಿ ಶಿಷ್ಯರೂ, ಪಾಂಡವರು ತಮ್ಮನ್ನು ಬೆನ್ನಟ್ಟಿ ಬಂದುಬಿಟ್ಟಾರೆಂಬ ಭಯದಿಂದ ದಿಕ್ಕಾಪಾಲಾಗಿ ಓಡಿಬಿಟ್ಟರು. ಆ ವೇಳೆಗೆ ಸರಿಯಾಗಿ ಸಹದೇವನು ದೇವನದಿಯ ಬಳಿಗೆ ಬಂದನು. ಒಬ್ಬ ಋಷಿಯಾದರೂ ಅಲ್ಲಿರಲಿಲ್ಲ. ನದಿಯ ಸುತ್ತಮುತ್ತಲ ಕಾಡಿನಲ್ಲಿ ಹುಡುಕಾಡಿದನು. ಯಾರೊಬ್ಬರ ಸುಳಿವು ಕೂಡ ಸಿಕ್ಕಲಿಲ್ಲ. ಅಲ್ಲಿದ್ದ ತಪಸ್ವಿಗಳು ದುರ್ವಾಸಶಿಷ್ಯರು ಓಡಿಹೋದರೆಂಬ ವಾರ್ತೆಯನ್ನು ತಿಳಿಸಿದರು.

ಆ ವಾರ್ತೆಯನ್ನು ತಿಳಿದು ಸಹದೇವನು ಆಶ್ರಮಕ್ಕೆ ಹಿಂದಿರುಗಿ ಯುಧಿಷ್ಠಿರನಿಗೆ ಎಲ್ಲ ವಿಷಯಗಳನ್ನೂ ತಿಳಿಯಪಡಿಸಿದನು. ದುರ್ವಾಸರೂ ಮತ್ತು ಶಿಷ್ಯರೂ ಬಂದರೂ ಬರಬಹುದೆಂದು ಸ್ವಲ್ಪಹೊತ್ತಿನವರೆಗೆ ಪಾಂಡವರು ನಿರೀಕ್ಷಿಸುತ್ತಿದ್ದರು. ಅನಂತರದಲ್ಲಿ ನಿಟ್ಟುಸಿರುಬಿಡುತ್ತಾ ಪಾಂಡವರು ಚಿಂತಿಸತೊಡಗಿದರು. "ಅಯ್ಯೋ! ಅರ್ಧರಾತ್ರಿಯಲ್ಲಿ ಇದ್ದಕ್ಕಿದ್ದಂತೆಯೇ ಬಂದು ಈ ಮಹರ್ಷಿಗಳು ನಮ್ಮನ್ನು ಮೋಸಗೊಳಿಸಿರುವರು. ದೈವಕಲ್ಪಿತವಾದ ಈ ತೊಂದರೆಯಿಂದ ನಾವು ಹೇಗೆ ಪಾರಾದೆವು?" (ಯುಧಿಷ್ಠಿರನಿಗೆ ಹಿಂದೆ ನಡೆದ ವಿಷಯವೊಂದೂ ತಿಳಿಯದು. ಸಹದೇವನೂ ಸಹ ಋಷಿಗಳು ನದಿಯ ಸಮೀಪದಲ್ಲಿಲ್ಲದಿರುವ ವಿಷಯವನ್ನು ತಿಳಿಸಿದನೇ ಹೊರತು ಕೃಷ್ಣನು ಆಗಮಿಸಿರುವ ಪ್ರಸ್ತಾಪವನ್ನೇ ಎತ್ತಿರಲಿಲ್ಲ.) ಪಾಂಡವರು ಯೋಚನಾಮಗ್ನರಾಗಿರುವುದನ್ನೂ ಮತ್ತು ಅದೇ ಕಾರಣದಿಂದ ಪದೇ-ಪದೇ ನಿಟ್ಟುಸಿರುಬಿಡುತ್ತಿರುವುದನ್ನೂ ಗಮನಿಸಿದ ಶ್ರೀಮಂತನಾದ ಶ್ರೀಕೃಷ್ಣನು ಪಾಂಡವರ ಸಮ್ಮುಖಕ್ಕೆ ಆಗಮಿಸಿ ಅವರನ್ನು ಕುರಿತು ಹೇಳಿದನು : "ಪಾಂಡವರೇ! ಪರಮಕೋಪಿಷ್ಠರಾದ ದುರ್ವಾಸರಿಂದ ನಿಮಗೆ ವಿಪತ್ತು ಒದಗಿದೆಯೆಂಬ ವಿಷಯವು ನನಗೆ ದ್ರೌಪದಿಯ ಮೂಲಕವಾಗಿ ತಿಳಿಯಿತು. ಈ ವಿಪತ್ತಿನಿಂದ ಪಾರುಮಾಡಲು ನನ್ನನ್ನು ಅಂಗಲಾಚಿ ಬೇಡಿದಳು. ಒಡನೆಯೇ ನಾನಿಲ್ಲಿಗೆ ಬೇಗನೆ ಬಂದೆನು. ದುರ್ವಾಸಮಹರ್ಷಿಗಳಿಂದ ನಿಮಗೆ

ಸ್ವಲ್ಪವಾದರೂ ಭಯವಿಲ್ಲ. ಅವರಿಗಾಗಿ ನೀವಿನ್ನು ಭಯಪಡಬೇಕಾದ ಕಾರಣವಿಲ್ಲ. ನಿಮ್ಮ ತೇಜಸ್ಸಿಗೆ-ತಪಸ್ಸಿಗೆ ಹೆದರಿ ಅವರು ಶಿಷ್ಯಸಮೇತರಾಗಿ ಪಲಾಯನಮಾಡಿಬಿಟ್ಟಿದ್ದಾರೆ.

**ಧರ್ಮನಿತ್ಯಾಸ್ತು ಯೇ ಕೇಚಿನ್ನ ತೇ ಸೀದನ್ತಿ ಕರ್ಹಿಚಿತ್ ।**

ಯಾರು ಸರ್ವಕಾಲದಲ್ಲಿಯೂ ಧರ್ಮಪರಾಯಣರಾಗಿರುತ್ತಾರೆಯೋ ಅವರು ಯಾವಾಗಲೂ ಯಾವ ಕಾರಣದಿಂದಲೂ ನಾಶಹೊಂದುವುದಿಲ್ಲ. ಯುಧಿಷ್ಠಿರ! ನಾನಿನ್ನು ನಿಮ್ಮ ಅನುಮತಿಯನ್ನು ಪಡೆದು ದ್ವಾರವತಿಗೆ ಪ್ರಯಾಣಮಾಡುತ್ತೇನೆ. ನಿಮ್ಮೆಲ್ಲರಿಗೂ ಮಂಗಳವಾಗಲಿ.”

ಶ್ರೀಕೇಶವನು ಹೇಳಿದ ಮಾತುಗಳನ್ನು ಕೇಳಿ ಪಾಂಡವರು ನಿಶ್ಚಿಂತ ರಾದರು. ದುರ್ವಾಸಮಹರ್ಷಿಗಳ ಆಗಮನದಿಂದ ಉಂಟಾಗಲಿದ್ದ ಸಂಕಟ ವನ್ನು ನಿವಾರಣೆಮಾಡಿಕೊಂಡು ದ್ರೌಪದೀಸಮೇತರಾದ ಪಾಂಡವರು ಶ್ರೀಕೃಷ್ಣನನ್ನು ಕೊಂಡಾಡಿದರು :

**ತ್ವಯಾ ನಾಥೇನ ಗೋವಿನ್ದ ದುಸ್ತರಾಮಾಪದಂ ವಿಭೋ ।**
**ತೀರ್ಣಾಃ ಪ್ಲವಮಿವಾಸಾದ್ಯ ಮಜ್ಜಮಾನಾ ಮಹಾರ್ಣವೇ ।**
**ಸ್ವಸ್ತಿ ಸಾಧಯ ಭದ್ರಂ ತೇ ಇತ್ಯಾಜ್ಞಾತೋ ಯಯೌ ಪುರೀಮ್ ॥**

“ಗೋವಿಂದ! ಸಮುದ್ರದಲ್ಲಿ ಮುಳುಗಿಹೋಗುತ್ತಿರುವವರು ನೌಕೆ ಯೊಂದನ್ನು ಆಕಸ್ಮಿಕವಾಗಿ ಹೊಂದಿ ಪಾರಾಗುವಂತೆ–ನಮ್ಮೆಲ್ಲರಿಗೂ ನಾಥನಾದ ನಿನ್ನಿಂದ ನಾವಿಂದು ಅತ್ಯಂತದುಸ್ತರವಾದ ಈ ಮಹಾವಿಪತ್ತಿನಿಂದ ಪಾರಾದೆವು.

ಮಹಾನುಭಾವ! ನಿನ್ನ ದಯೆಯು ನಮ್ಮ ಮೇಲೆ ಅಚಲವಾಗಿರಲಿ. ನೀನಿನ್ನು ಹೋಗಿಬಾ. ನಿನಗೆ ಮಂಗಳವಾಗಲಿ.”

ಹೀಗೆಂದು ಹೇಳಿದ ಪಾಂಡವರ ಅನುಮತಿಯನ್ನು ಪಡೆದು ಶ್ರೀಕೃಷ್ಣನು ದ್ವಾರಕೆಗೆ ಹಿಂದಿರುಗಿದನು. ಪಾಂಡವರೂ ಸಹ ದ್ರೌಪದಿಯೊಡನೆ ಕಾಮ್ಯಕ ವನದಲ್ಲಿ ವಿಹರಿಸುತ್ತಾ ಸುಖದಿಂದ ಕಾಲಕಳೆಯುತ್ತಿದ್ದರು.

ನೀನು ಕೇಳಿದ ಪ್ರಶ್ನೆಗೆ ಉತ್ತರಿಸಿದೆನಲ್ಲವೇ? ಜನಮೇಜಯ!

ಪಾಂಡವರಿಗೆ ತೊಂದರೆಕೊಡಲು ಅಥವಾ ಅವರನ್ನು ನಿರ್ಮೂಲಗೊಳಿಸಲು ದುರ್ಯೋಧನನು ಎಷ್ಟಷ್ಟೇ ಉಪಾಯಾಂತರಗಳನ್ನು ಯೋಚಿಸಿ ಕಾರ್ಯಮಾಡಿದರೂ ಅವನ ಕಾರ್ಯಗಳೆಲ್ಲವೂ ಧರ್ಮಾತ್ಮರಾದ ಕೇಶವ ಶರಣ್ಯರಾದ ಪಾಂಡವರಲ್ಲಿ ವ್ಯರ್ಥವಾಗಿಯೇ ಹೋಗುತ್ತಿದ್ದುವು.

೨೬೩ನೆಯ ಅಧ್ಯಾಯವು ಮುಗಿಯಿತು.

೨೬೪ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ಜಯದ್ರಥನು ದ್ರೌಪದಿಯನ್ನು ನೋಡಿ ವಿಮೋಹಿತನಾದುದು : ಕೋಟಿಕಾಸ್ಯನನ್ನು ದ್ರೌಪದಿಯ ಬಳಿಗೆ ಕಳುಹಿಸಿದುದು

ಜನಮೇಜಯ! ಬಹುಮೃಗಗಳಿಂದ ವ್ಯಾಪ್ತವಾಗಿದ್ದ ಕಾಮ್ಯಕವನದಲ್ಲಿ ಪಾಂಡವರು ಯಥೇಚ್ಛವಾಗಿ ಬೇಟೆಯಾಡುತ್ತಾ ವಿಹರಿಸುತ್ತಿದ್ದರು. ಸುಂದರ ವಾದ ವನೋಪವನಗಳಲ್ಲಿ ಸಂಚರಿಸುತ್ತಾ, ಘಮಘಮಿಸುವ ಅರಳಿದ ವನಸುಮಗಳುಳ್ಳ ಗಿಡ-ಬಳ್ಳಿಗಳನ್ನು ನೋಡಿ ಆನಂದಿಸುತ್ತಾ, ಭೂಲೋಕದ ಇಂದ್ರರೋಪಾದಿಯಲ್ಲಿ ಆ ಕಾಮ್ಯಕವನದಲ್ಲಿ ಸ್ವಲ್ಪಕಾಲದವರೆಗೆ ಸುಖದಿಂದ ಕಾಲಕಳೆಯುತ್ತಿದ್ದರು.

ಒಂದಾನೊಂದು ದಿವಸ ಮಹಾಪರಾಕ್ರಮಿಗಳಾದ ಪಾಂಡವರು ಭೋಜನಕ್ಕಾಗಿ ಮೃಗಗಳನ್ನು ಬೇಟೆಯಾಡಿ ತರುವ ಸಲುವಾಗಿ ನಾಲ್ಕು ದಿಕ್ಕು ಗಳಿಗೂ ಹೊರಟುಹೋಗಿದ್ದರು. ಹೊರಡುವಾಗ ಆಶ್ರಮದಲ್ಲಿ ದ್ರೌಪದಿ ಯೊಬ್ಬಳೇ ಇದ್ದಳು. ಮಹಾತೇಜಸ್ವಿಗಳಾದ ತೃಣಬಿಂದುಮಹರ್ಷಿಗಳ ಮತ್ತು ಪುರೋಹಿತರಾದ ಧೌಮ್ಯರ ಅಪ್ಪಣೆಪಡೆದು (ಅವರಿಗೆ ಆಶ್ರಮದ ರಕ್ಷಣೆಯನ್ನು ಗಮನಿಸುವಂತೆ ತಿಳಿಸಿ) ಪಾಂಡವರು ಬೇಟೆಗಾಗಿ ಹೋಗಿದ್ದರು.

ಅದೇ ಸಮಯದಲ್ಲಿ ಸಿಂಧುದೇಶದ ರಾಜನಾದ ಜಯದ್ರಥನು ವಿವಾ ಹದ ಸಲುವಾಗಿ ದಿವ್ಯವಾದ ಉಡುಗೆಯನ್ನು ಉಟ್ಟುಕೊಂಡು ಮತ್ತು ಅನೇಕ ರಾಜಕುಮಾರರಿಂದ ಪರಿವೃತನಾಗಿ ಕಾಮ್ಯಕವನದ ಮೂಲಕವಾಗಿಯೇ ಶಾಲ್ವರಾಜನ ರಾಜಧಾನಿಗೆ ಪ್ರಯಾಣಮಾಡುತ್ತಿದ್ದು, ಸ್ವಲ್ಪಕಾಲ ವಿಶ್ರಮಿಸಿ ಕೊಳ್ಳುವ ಸಲುವಾಗಿ ಆ ವನದಲ್ಲಿಯೇ ತಂಗಿದ್ದನು. ಅವನು ತನ್ನ ಗೆಳೆಯ

ರೊಡನೆ ಬಿಡಾರದಿಂದ ಹೊರಟು ಅಲ್ಲಲ್ಲಿ ಸಂಚರಿಸುತ್ತಿದ್ದಾಗ ಆಕಸ್ಮಿಕವಾಗಿ ಪಾಂಡವರ ಪ್ರಿಯಭಾರ್ಯೆಯಾದ, ಯಶಸ್ವಿನಿಯಾದ, ಸರ್ವಾಂಗಸುಂದರಿಯಾದ ದ್ರೌಪದಿಯನ್ನು ನೋಡಿದನು. ಅವಳು ತನ್ನ ಆಶ್ರಮದ ಬಾಗಿಲಿನ ಸಮೀಪದಲ್ಲಿ ನಿಂತಿದ್ದಳು. ಅವಳ ರೂಪು ಅನ್ಯಾದೃಶವಾಗಿತ್ತು. ಮಿಂಚು ಕಾರ್ಮೋಡವನ್ನು ಬೆಳಗುವಂತೆ–ದ್ರೌಪದಿಯು ಆ ವನಪ್ರದೇಶವನ್ನು ಪ್ರಕಾಶಗೊಳಿಸುತ್ತಿದ್ದಳು.

ಆ ಸಮಯದಲ್ಲಿ ಅವಳನ್ನು ನೋಡಿದ ಜಯದ್ರಥನ ಪರಿವಾರದವರು 'ಇವಳೇನು ಅಪ್ಸರೆಯೋ, ದೇವಕನ್ಯೆಯೋ, ದೇವತೆಗಳಿಂದ ಸೃಷ್ಟಳಾದ ಮಾಯಾದೇವಿಯೋ?'–ಎಂದು ಯೋಚಿಸುತ್ತಾ ಅವಳನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಾ ಕೈಮುಗಿದುಕೊಂಡು ಅವಳ ಮುಂದೆಯೇ ನಿಂತುಬಿಟ್ಟರು. ಸಿಂಧುದೇಶದ ರಾಜನಾದ, ವೃದ್ಧಕ್ಷತ್ರನ ಮಗನಾದ ಜಯದ್ರಥನ ಅವಸ್ಥೆಯೂ ಅದೇ ಆಯಿತು. ಏಕಾಕಿನಿಯಾಗಿ ನಿಂತಿದ್ದ ದ್ರೌಪದಿಯ ಅನುಪಮವಾದ ನಿರ್ದುಷ್ಟವಾದ ಸೌಂದರ್ಯವನ್ನು ಕಂಡು ಜಯದ್ರಥನು ಬೆರಗಾಗಿ ಹೋದನು. ತತ್ಪರಿಣಾಮವಾಗಿ ಮರುಕ್ಷಣದಲ್ಲಿಯೇ ಅವನ ಮನಸ್ಸು ದುಷ್ಟಚಿಂತನೆಗೊಳಗಾಯಿತು. ಕಾಮಾಭಿಭೂತನಾದ ಜಯದ್ರಥನು ತನ್ನೊಡನೆ ವಿಹಾರಕ್ಕಾಗಿ ಆಗಮಿಸಿದ್ದ ಕೋಟಿಕಾಸ್ಯನೆಂಬ ರಾಜಕುಮಾರನನ್ನು ಕರೆದು ಹೇಳಿದನು : 'ವಯಸ್ಯ! ಈ ಸುಂದರಿಯು ಯಾರಾಗಿರಬಹುದು? ಇವಳು ಮಾನವಸ್ತ್ರೀಯೋ ಅಥವಾ ದೇವಸ್ತ್ರೀಯೋ–ಎಂದು ನನಗೆ ಭ್ರಾಂತಿಯಾಗಿದೆ. ಏಕೆಂದರೆ ಮಾನವರಲ್ಲಿ ಇದುವರೆಗೆ ನಾನಿಂತಹ ಚೆಲುವೆಯನ್ನು ನೋಡಿಯೇ ಇಲ್ಲ. ಅತಿಚೆಲುವೆಯಾದ ಇವಳು ನನಗೆ ಸಿಕ್ಕಿಬಿಟ್ಟರೆ ನನಗೆ ವಿವಾಹದ ಅಗತ್ಯವೇ ಇಲ್ಲ. ನಾನು ಇವಳನ್ನೇ ಕರೆದುಕೊಂಡು ನನ್ನ ದೇಶಕ್ಕೆ ಹಿಂದಿರುಗುತ್ತೇನೆ. ಆದುದರಿಂದ ನೀನೀಗಲೇ ಅವಳ ಸಮೀಪಕ್ಕೆ ಹೋಗಿ–ಅವಳಾರು? ಎಲ್ಲಿಂದ ಬಂದಳು? ಸುಕುಮಾರಿಯಾದ ಅವಳು ಮುಳ್ಳು-ಕಲ್ಲುಗಳಿಂದ ನಿಬಿಡವಾದ ಈ ಅರಣ್ಯಕ್ಕೇಕೆ ಬಂದಿರುವಳು?–ಎಂಬುದೆಲ್ಲವನ್ನೂ ವಿಚಾರಿಸು. ಲೋಕಸುಂದರಿಯಾದ, ತನುಮಧ್ಯಮೆಯಾದ, ಶುಭ್ರವಾದ ದಂತಪಂಕ್ತಿಗಳುಳ್ಳ, ಕಮಲದಳಗಳಂತೆ ವಿಶಾಲವಾದ ಕಣ್ಣುಗಳಿಂದ ಕೂಡಿರುವ, ವರಾರೋಹೆಯಾದ, ಸೌಂದರ್ಯಕ್ಕೆ ಖನೀಭೂತಳಾಗಿರುವ ಇವಳೇನಾದರೂ ನನ್ನವಳಾ

ದರೆ ನಾನು ನಿಶ್ಚಯವಾಗಿಯೂ ಕೃತಾರ್ಥನಾಗುತ್ತೇನೆ. ನನ್ನ ಜನ್ಮವೇ ಸಾರ್ಥಕಹೊಂದಿತೆಂದು ಭಾವಿಸುತ್ತೇನೆ.

ಆದುದರಿಂದ ಕೋಟಿಕ! ನೀನೀಗಲೇ ಹೋಗಿ ಅವಳಿಲ್ಲಿಗೆ ಬಂದಿರುವ ಕಾರಣವನ್ನೂ ಮತ್ತು–ಅವಳಿಗೆ ಪತಿಯಿರುವನೇ? ಒಂದು ವೇಳೆ ಇದ್ದರೆ ಅವನಾರು?–ಎಂಬುದನ್ನೂ ಸಹ ತಿಳಿದುಕೊಂಡುಬಾ.' ಹೀಗೆಂದು ಜಯದ್ರಥನಿಂದ ಆಜ್ಞಪ್ತನಾದ ಕುಂಡಲಮಂಡಿತನಾದ ಕೋಟಿಕಾಸ್ಯನು ರಥದಿಂದಿಳಿದು–ಗುಳ್ಳೇನರಿಯೊಂದು ವ್ಯಾಘ್ರಿಯ ಬಳಿಗೆ ಹೋಗುವಂತೆ–ದ್ರೌಪದಿಯ ಸಮೀಪಕ್ಕೆ ತೆರಳಿ ಆಕೆಯನ್ನು ಪ್ರಶ್ನಿಸತೊಡಗಿದನು.

ವಿ೬೪ನೆಯ ಅಧ್ಯಾಯವು ಮುಗಿಯಿತು.

೨೬೫ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ಕೋಟಿಕಾಸ್ಯನು ದ್ರೌಪದಿಗೆ ಜಯದ್ರಥನ ಪರಿಚಯವನ್ನು ಮಾಡಿಕೊಟ್ಟುದು

ಕೋಟಿಕನು ಕಿಲ-ಕಿಲನೆ ನಗುತ್ತಾ, ಹಲ್ಲುಕಿರಿಯುತ್ತಾ ದ್ರೌಪದಿಯನ್ನು ಪ್ರಶ್ನಿಸಿದನು : "ವರವರ್ಣಿನಿ! ಕದಂಬವೃಕ್ಷದ ಕೊಂಬೆಯನ್ನು ಆಸರೆಯನ್ನಾಗಿ ಹಿಡಿದು ಶರೀರವನ್ನು ಮಿಂಚಿನಂತೆ ಬಳುಕಿಸುತ್ತಾ, ಆಶ್ರಮದ ಸಮೀಪದಲ್ಲಿ ನಿಂತಿರುವ ನೀನು ಯಾರು? ಉಜ್ಜ್ವಲತೇಜಸ್ವಿನಿಯಾದ ನೀನು ರಾತ್ರಿಯ ವೇಳೆಯಲ್ಲಿ ಮಾರುತನ ಸಹಾಯದಿಂದ ದೇದೀಪ್ಯಮಾನವಾದ ಯಜ್ಞೇಶ್ವರನ ಜ್ವಾಲೆಯಂತೆ ಪ್ರಕಾಶಿಸುತ್ತಿರುವೆ. ಮೇಲಾಗಿ ನೀನು ವರ್ಣಿಸಲಸದಳವಾದ ರೂಪವನ್ನೂ ಹೊಂದಿರುವೆ. ಆದರೆ ಕೋಮಲಾಂಗಿ! ನಿನಗೆ ಈ ಭಯಂಕರಾರಣ್ಯದಲ್ಲಿ ಏಕಾಕಿನಿಯಾಗಿರಲು ಭಯವಾಗುತ್ತಿಲ್ಲವೇ?

ನಿನ್ನ ಅನುಪಮಸೌಂದರ್ಯವನ್ನೂ ಮತ್ತು ನೀನು ಏಕಾಕಿನಿಯಾಗಿ ನಿರ್ಭಯದಿಂದ ಈ ಘೋರಾರಣ್ಯದಲ್ಲಿ ನಿಂತಿರುವುದನ್ನೂ ನೋಡಿದರೆ ನಿನ್ನನ್ನು ಮಾನವಿಯೆಂದು ನಾನು ಭಾವಿಸುವುದಿಲ್ಲ. ದೇವತೆಯೋ, ಯಕ್ಷಿಯೋ, ದಾನವಿಯೋ, ಅಪ್ಸರೆಯೋ ಅಥವಾ ದೈತ್ಯನೊಬ್ಬನ ಭಾರ್ಯೆಯೋ, ನಾಗಕನ್ಯೆಯೋ, ರಾಕ್ಷಸಿಯೋ, ವರುಣನ ಹೆಂಡತಿಯೋ,

ಅಥವಾ ಯಮ-ಸೋಮ-ಕುಬೇರರಲ್ಲಿ ಯಾರೊಬ್ಬರ ಭಾರ್ಯೆಯೋ ಇರಬಹುದೆಂದು ಭಾವಿಸುತ್ತೇನೆ. ಅವರಲ್ಲಿ ಯಾರಾದರೂ ಆಗಿದ್ದು ಈಗ ಮಾನವಿಯ ರೂಪವನ್ನು ಧರಿಸಿ ಈ ಆರಣ್ಯದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿರಬಹುದಲ್ಲವೇ?

ಕೋಮಲಾಂಗಿ! ನೀನೇನಾದರೂ ಬ್ರಹ್ಮಲೋಕದಿಂದ ಆಗಮಿಸಿರುವ ಸರಸ್ವತಿಯೋ? ಕಶ್ಯಪನ ಆಶ್ರಮದಿಂದ ಆಗಮಿಸಿರುವ ಅದಿತಿಯೋ? ರುದ್ರಲೋಕದಿಂದ ಆಗಮಿಸಿರುವ ಪಾರ್ವತಿಯೋ? ವಿಷ್ಣುಲೋಕದಿಂದ ಆಗಮಿಸಿರುವ ಸಾಕ್ಷಾತ್ ಲಕ್ಷ್ಮೀದೇವಿಯೋ? ಅಥವಾ ಇಂದ್ರಲೋಕದಿಂದ ಆಗಮಿಸಿರುವ ಶಚೀದೇವಿಯೋ? ಇವರುಗಳಲ್ಲಿ ನೀನು ಯಾರಾಗಿರುವೆ? ನಿನ್ನ ಅನುಪಮವಾದ ಸೌಂದರ್ಯವನ್ನೂ, ಯಜ್ಞೇಶ್ವರನಂತೆಯೇ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿರುವ ತೇಜಸ್ಸನ್ನೂ ನೋಡಿದರೆ ನೀನು ಮಾನವಿಯಲ್ಲವೆಂದು ನಾವು ಭಾವಿಸಿದ್ದೇವೆ. ಮಾನವಿಯ ರೂಪವನ್ನು ಧರಿಸಿ ನಿಂತಿರುವ ದೇವವನಿತೆಯೇ ನೀನಾಗಿರಬೇಕು. ನಾನಿಷ್ಟು ಮಾತನಾಡಿದರೂ–'ನೀವು ಯಾರು?'–ಎಂದೂ ನೀನು ಪ್ರಶ್ನಿಸಲಿಲ್ಲ. ನಾವೂ ಇಲ್ಲಿ ನಿನಗೆ ಯಾರು ರಕ್ಷಕರಾಗಿದ್ದಾರೆಂಬುದನ್ನೂ ತಿಳಿದವರಾಗಿಲ್ಲ. ಭದ್ರೇ! ನಾವು ನಿನಗೆ ಸಂಪೂರ್ಣ ಮರ್ಯಾದೆಕೊಟ್ಟು ಕೇಳುತ್ತೇವೆ. ನಿನ್ನ ಜನ್ಮಸ್ಥಳವಾವುದು? ನೀನು ಯಾರ ಮಗಳು? ನಿನ್ನ ಒಡೆಯನಾರು? ನಿನಗೆ ಬಂಧುಗಳಾರಾದರೂ ಇದ್ದಾರೆಯೇ? ಒಂದು ವೇಳೆ ಇರುವುದಾದರೆ ಅವರಾರೆಂಬುದನ್ನೂ ತಿಳಿಸು. ನಿನ್ನ ಪತಿಯು ಯಾರು? ಮತ್ತು ಯಾವ ಕುಲಕ್ಕೆ ಸೇರಿದವನು? ಕಡೆಯದಾಗಿ ನೀನಿಲ್ಲಿ ಏನು ಮಾಡುತ್ತಿರುವೆ? ಇವುಗಳೆಲ್ಲವನ್ನೂ ವಿಶದವಾಗಿ ಹೇಳು. ನನ್ನ ಪ್ರಶ್ನೆಗಳಿಗೆ ಉತ್ತರಿಸುವ ಮೊದಲೇ ನಾನಾರೆಂಬುದನ್ನೂ ಹೇಳಿಬಿಡುತ್ತೇನೆ. ನಾನು ಸುರಥನೆಂಬ ರಾಜನ ಮಗ. ನನ್ನನ್ನು ಕೋಟಿಕಾಸ್ಯನೆಂದು ಕರೆಯುತ್ತಾರೆ.

ಸುವರ್ಣರಥದಲ್ಲಿ ಕುಳಿತು, ಯಜ್ಞವೇದಿಕೆಯಲ್ಲಿರುವ ಯಜ್ಞೇಶ್ವರನಂತೆಯೇ ಜಾಜ್ವಲ್ಯಮಾನನಾಗಿ ಪ್ರಕಾಶಿಸುತ್ತಿರುವ, ಕಮಲದಳಗಳಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿರುವ ಆ ರಾಜಕುಮಾರನು ತ್ರಿಗರ್ತರ ಅಧಿಪತಿಯಾದ ಕ್ಷೇಮಂಕರನೆಂಬುವನು. ಅವನ ಹಿಂಬದಿಯಲ್ಲಿ ಹೂಮಾಲೆ

ಯಿಂದ ಶರೀರವನ್ನು ಸಿಂಗರಿಸಿಕೊಂಡು ನಿನ್ನನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿರುವವನು ಸುಪ್ರಸಿದ್ಧನಾದ ಕುಲಿಂದನ ಮಗನು. ಅವನು ವಿಶಾಲ ನೇತ್ರನು. ಧನುರ್ವಿದ್ಯಾಪ್ರವೀಣನು. ಅವನು ಯಾವಾಗಲೂ ಪರ್ವತದ ತಪ್ಪಲಿನಲ್ಲಿಯೇ ವಾಸಮಾಡುತ್ತಿರುತ್ತಾನೆ. ಅಲ್ಲಿ ಕಾಣುತ್ತಿರುವ ಸರೋವರದ ಅಂಚಿನಲ್ಲಿರುವ, ಶತ್ರುವಿನಾಶಕನಾದ, ಶ್ಯಾಮಲವರ್ಣದಿಂದ ಕೂಡಿದ, ಸುಂದರನಾದ ಯುವಕನು–ಸುಬಲನ ಮಗನು. ಅವನು ಇಕ್ಷ್ವಾಕುವಂಶದ ರಾಜಕುಮಾರ. ನೀನೇನಾದರೂ ಈ ಹಿಂದೆ ಮಹಾವೀರನಾದ ಸೌವೀರಾಧಿಪತಿಯ ಹೆಸರನ್ನು ಕೇಳಿರುವೆಯಾ? ಅವನೇ ಇಂದು ನಿನ್ನ ಸಮ್ಮುಖದಲ್ಲಿದ್ದಾನೆ. ಅಂತಹ ಸುಪ್ರಸಿದ್ಧನಾದ ಜಯದ್ರಥನೇ ಅವನು. ಅವನನ್ನು ಈಗ ಆರು ಸಾವಿರ ರಥಿಕರು ಹಿಂಬಾಲಿಸುತ್ತಿದ್ದಾರೆ ; ಹಾಗೆಯೇ ಗಜಾಶ್ವ-ಪದಾತಿಸೈನ್ಯಗಳೂ ಅವನ ಹಿಂದೆ ಹೋಗುತ್ತಿವೆ. ಅಂಗಾರಕ, ಕುಂಜರ, ಗುಪ್ತಕ, ಶತ್ರುಂಜಯ, ಸಂಜಯ, ಸುಪ್ರವೃದ್ಧ, ಭಯಂಕರ, ಭ್ರಮರ, ರವಿ, ಶೂರ, ಪ್ರತಾಪ ಮತ್ತು ಕುಹನರೆಂಬ ಹನ್ನೆರಡು ಮಂದಿ ರಾಜಕುಮಾರರು ಅವನ ಹಿಂದೆ ಹೋಗುತ್ತಿದ್ದಾರೆ. ಅವರೆಲ್ಲರೂ ಯಜ್ಞದಲ್ಲಿ ಪ್ರಜ್ವಲಿಸುವ ಯಜ್ಞೇಶ್ವರರಂತೆ ಕೆಂಪಾದ ಕುದುರೆಗಳುಳ್ಳ ರಥಗಳಲ್ಲಿ ಕುಳಿತು ಹೋಗುತ್ತಿದ್ದಾರೆ. ಅವರೆಲ್ಲರೂ ಸೌವೀರ ರಾಜಕುಮಾರರು. ಯುವಕರಾದ ಮತ್ತು ಬಲಿಷ್ಠರಾದ ಅವರು ಜಯದ್ರಥಮಹಾರಾಜನನ್ನು ಅನುಸರಿಸಿ ಪ್ರಯಾಣ ಮಾಡುತ್ತಿದ್ದಾರೆ. ಉದಾರಸತ್ತ್ವರಾದ ಬಲಾಹಕ, ಅನೀಕ ಮತ್ತು ವಿದಾರಣನೇ ಮೊದಲಾದ ಜಯದ್ರಥನ ಇತರ ಸಹೋದರರೂ ಅವನನ್ನು ಅನುಸರಿಸುತ್ತಿದ್ದಾರೆ.

ಇಂತಹ ಶೂರಾಧಿಶೂರರಿಂದ ಪರಿವೃತನಾಗಿರುವ ಜಯದ್ರಥನು ದೇವತೆಗಳಿಂದ ಪರಿವೃತನಾದ ಸಾಕ್ಷಾತ್ ಶಚೀಪತಿಯಂತೆಯೇ ಪ್ರಕಾಶಿಸುತ್ತಿದ್ದಾನೆ. ನೀನು ಕೇಳದಿದ್ದರೂ ನಾವಾರೆಂಬುದನ್ನು ನಿನಗೆ ಸಂಪೂರ್ಣವಾಗಿ ತಿಳಿಸಿಬಿಟ್ಟಿದ್ದೇನೆ. ನಮ್ಮ ವಂಶಾವಳಿಯನ್ನು ಕೇಳಿದ ಮೇಲಾದರೂ ನೀನು ಯಾರ ಮಗಳೆಂಬುದನ್ನೂ ಮತ್ತು ಯಾರ ಭಾರ್ಯೆಯೆಂಬುದನ್ನೂ ಹೇಳುವವಳಾಗು.”

೨೬೫ನೆಯ ಅಧ್ಯಾಯವು ಮುಗಿಯಿತು.

## ದ್ರೌಪದಿಯು ಕೋಟಿಕಾಸ್ಯನಿಗೆ ತನ್ನ ಮತ್ತು ಪಾಂಡವರ ಪರಿಚಯಮಾಡಿಕೊಟ್ಟುದು

ಜನಮೇಜಯ! ಶಿಬಿವಂಶಪ್ರದೀಪನಾದ ಕೋಟಿಕನು ದ್ರೌಪದಿಯನ್ನು ಈ ರೀತಿ ಕೇಳಲಾಗಿ ರಾಜಕುಮಾರಿಯಾದ ದ್ರೌಪದಿಯು ಕೋಟಿಕನ ಕಡೆಗೊಮ್ಮೆ ಕಣ್ಣನ್ನು ಹೊರಳಿಸಿ, ತಾನು ಅವಲಂಬಿಸಿದ್ದ ಕದಂಬವೃಕ್ಷದ ರೆಂಬೆಯನ್ನು ಬಿಟ್ಟು ಮುಂದಕ್ಕೆ ಸರಿದು, ಸೀರೆಯ ಸೆರಗನ್ನು ಸರಿಮಾಡಿ ಕೊಂಡು ಕೋಟಿಕನನ್ನು ಕುರಿತು ಹೇಳಿದಳು : "ನರೇಂದ್ರಪುತ್ರ! ನನ್ನಂತಹ ವಳು ನಿನ್ನೊಡನೆ ನೇರವಾಗಿ ಮಾತನಾಡಕೂಡದೆಂಬ ಧರ್ಮರಹಸ್ಯವನ್ನು ನಾನು ತಿಳಿದುಕೊಂಡಿರುತ್ತೇನೆ. ಆದರೆ ಈ ಸಮಯದಲ್ಲಿ ನಿನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿಕಳುಹಿಸಲು ಇಲ್ಲಿ ನನ್ನ ಕಡೆಯ ಪುರುಷನಾಗಲೀ, ಸ್ತ್ರೀಯಾಗಲೀ ಇಲ್ಲದೇ ಇರುವುದರಿಂದ ನಾನೇ ನಿನಗೆ ನೇರವಾಗಿ ಉತ್ತರಿಸಬೇಕಾಗಿದೆ.

ಸ್ವಧರ್ಮನಿರತಳಾಗಿರುವ ಮತ್ತು ಸ್ತ್ರೀಧರ್ಮವನ್ನು ಸಂಪೂರ್ಣವಾಗಿ ತಿಳಿದಿರುವ ನಾನು ಏಕಾಕಿನಿಯಾಗಿ–ಏಕಾಂಗಿಯಾಗಿರುವ ನಿನ್ನೊಡನೆ ಹೇಗೆ ತಾನೇ ಮಾತನಾಡಲಿ? ಆದರೆ ನೀನು ಸುರಥನ ಮಗನೆಂಬುದೂ ಮತ್ತು ನಿನ್ನ ಹೆಸರು ಕೋಟಿಕನೆಂದೂ ನಿನ್ನಿಂದಲೇ ನನಗೆ ತಿಳಿಯಿತು. ಆದುದರಿಂದಲೇ ನಿನ್ನೊಡನೆ ನಾನು ನನ್ನ ಬಂಧುಗಳ ವಿಷಯವನ್ನೂ ನಮ್ಮ ಸುಪ್ರಸಿದ್ಧವಾದ ಕುಲವಾವುದೆಂಬುದನ್ನೂ ಸಹ ಹೇಳುತ್ತೇನೆ.

ಶೈಬ್ಯ! ನಾನು ಸುಪ್ರಸಿದ್ಧನಾದ ದ್ರುಪದಮಹಾರಾಜನ ಮಗಳು. ನನ್ನನ್ನು ದ್ರೌಪದಿಯೆಂದೂ, ಕೃಷ್ಣೆಯೆಂದೂ ಕರೆಯುತ್ತಾರೆ. ನನಗೆ ಐದು ಮಂದಿ ಪತಿಗಳು. ಈ ವಿಷಯವನ್ನು ಪಾಂಡವರು ಖಾಂಡವಪ್ರಸ್ಥದಲ್ಲಿದ್ದಾಗ ನೀನು ಕೇಳಿದ್ದಿರಬಹುದು. ಯುಧಿಷ್ಠಿರ, ಭೀಮ, ಅರ್ಜುನ, ನಕುಲ-ಸಹದೇವ–ಈ ಐವರೇ ಸುಪ್ರಸಿದ್ಧರಾದ ರಾಜಕುಮಾರರು. ಅವರಿಂದು ನನ್ನನ್ನು ಆಶ್ರಮದಲ್ಲಿಯೇ ಬಿಟ್ಟು ಬೇಟೆಗಾಗಿ ಒಬ್ಬೊಬ್ಬರು ಒಂದೊಂದು ದಿಕ್ಕನ್ನು ಹಂಚಿಕೊಂಡು ಅರಣ್ಯಕ್ಕೆ ಹೋಗಿರುತ್ತಾರೆ. ರಾಜಾಧಿರಾಜನಾದ

ಯುಧಿಷ್ಠಿರನು ಪೂರ್ವದಿಕ್ಕಿಗೂ, ಭೀಮಸೇನನು ದಕ್ಷಿಣದಿಕ್ಕಿಗೂ, ಅರ್ಜುನನು ಪಶ್ಚಿಮದಿಕ್ಕಿಗೂ, ನಕುಲ-ಸಹದೇವರು ಉತ್ತರದಿಕ್ಕಿಗೂ ಹೋಗಿರುತ್ತಾರೆ. ಅವರು ಆಶ್ರಮಕ್ಕೆ ಹಿಂದಿರುಗುವ ಕಾಲವು ಸನ್ನಿಹಿತವಾಗಿದೆಯೆಂದು ಭಾವಿಸಿದ್ದೇನೆ. ಆದುದರಿಂದ ನೀವೆಲ್ಲರೂ ಈಗಲೇ ರಥಗಳಿಂದಿಳಿದು ಆಶ್ರಮಕ್ಕೆ ಆಗಮಿಸಿ, ನನ್ನ ಪತಿಗಳಿಂದ ಸಮ್ಮಾನಿತರಾಗಿ, ಯಥಾಯೋಗ್ಯವಾದ ಸತ್ಕಾರವನ್ನೂ ಸ್ವೀಕರಿಸಿ ಮುಂದೆ ಪ್ರಯಾಣಮಾಡಬಹುದಾಗಿದೆ. ಮಹಾತ್ಮನಾದ ಧರ್ಮಜನಿಗೆ ಅತಿಥಿಗಳು ಬಹುಪ್ರಿಯರು. ನಿಮ್ಮನ್ನು ನೋಡಿದರೆ ಅವನು ಬಹಳ ಸಂತುಷ್ಟನಾಗುತ್ತಾನೆ"–ಹೀಗೆಂಬುದಾಗಿ ಚಂದ್ರಮುಖಿಯಾದ ದ್ರೌಪದಿಯು ಕೋಟಿಕಾಸ್ಯನಿಗೆ ಹೇಳಿ ಅವರೆಲ್ಲರ ಸತ್ಕಾರಕ್ಕೆ ಏನೇನು ಸಿದ್ಧಮಾಡಬೇಕೆಂಬುದನ್ನು ಯೋಚಿಸುತ್ತಾ ತನ್ನ ವಿಶಾಲವಾದ ಪರ್ಣಕುಟೀರವನ್ನು ಪ್ರವೇಶಿಸಿದಳು.

೨೬೬ನೆಯ ಅಧ್ಯಾಯವು ಮುಗಿಯಿತು.

೨೬೭ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ಜಯದ್ರಥ-ದ್ರೌಪದಿಯರ ಸಂವಾದ

ಜನಮೇಜಯ! ಇತ್ತಲಾಗಿ ಕೋಟಿಕಾಸ್ಯನು ಕಾತುರತೆಯಿಂದ ಕಾಯುತ್ತಿದ್ದ ರಾಜಕುಮಾರರ ಸಮೀಪಕ್ಕೆ ಹೋಗಿ ತನಗೂ ಮತ್ತು ದ್ರೌಪದಿಗೂ ನಡೆದ ಸಂಭಾಷಣೆಯನ್ನು ಯಥಾವತ್ತಾಗಿ ತಿಳಿಸಿದನು. ಕೋಟಿಕಾಸ್ಯನ ಮಾತನ್ನು ಕೇಳಿ ಜಯದ್ರಥನು ಪುಲಕಿತನಾಗಿ ಅವನನ್ನು ಕುರಿತು ಹೇಳಿದನು :

"ಕೋಟಿಕ! ದೂರದಲ್ಲಿ ಆಕೆಯು ನಿನ್ನೊಡನೆ ಮಾತನಾಡುತ್ತಿರುವಾಗಲೇ ನನ್ನ ಹೃದಯವು ಸ್ತ್ರೀರತ್ನಳಾದ ಆ ದ್ರೌಪದಿಯಲ್ಲಿಯೇ ಲೀನವಾಗಿ ಹೋಯಿತು. ಹೀಗಿರುವಾಗ ಅವಳೊಡನೆ ಮಾತನಾಡುವುದನ್ನು ನಿಲ್ಲಿಸಿ ಹಿಂದಿರುಗಲು ನಿನಗೆ ಹೇಗೆ ತಾನೇ ಸಾಧ್ಯವಾಯಿತು? ನಾನೇನೋ ನನ್ನ ಹೃದಯದ ಕಾತುರತೆಯನ್ನು ಸ್ಪಷ್ಟವಾಗಿಯೇ ಹೇಳಿಬಿಡುತ್ತೇನೆ, ಕೇಳು :

**ಏತಾಂ ದೃಷ್ಟ್ವಾ ಸ್ತ್ರಿಯೋ ಮೇಽನ್ಯಾ ಯಥಾ ಶಾಖಾಮೃಗಸ್ತ್ರಿಯಃ ।**
**ಪ್ರತಿಭಾನ್ತಿ ಮಹಾಬಾಹೋ ಸತ್ಯಮೇತದ್ಬ್ರವೀಮಿ ತೇ ॥೪॥**

ಇವಳನ್ನೂ, ಇವಳ ಅನುಪಮಸೌಂದರ್ಯವನ್ನೂ ನೋಡಿದನಂತರ ನನಗೆ ಇತರ ಸ್ತ್ರೀಯರು ಹೆಣ್ಣುಕಪಿಗಳಂತೆಯೇ ಕಾಣುತ್ತಾರೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ. ಕೇವಲ ದರ್ಶನಮಾತ್ರದಿಂದಲೇ ನನ್ನ ಮನಸ್ಸನ್ನು ಅವಳು ಅಪಹರಿಸಿಬಿಟ್ಟಿದ್ದಾಳೆ. ನಿಜವಾಗಿಯೂ ಹೇಳು ಕೋಟಿಕ! ಅವಳು ನಿಶ್ಚಯವಾಗಿಯೂ ಮಾನವಸ್ತ್ರೀಯೇ?"

"ಇದರಲ್ಲಿ ಸಂಶಯವೇಕೆ ಮಹಾರಾಜ! ಅವಳು ನಿಶ್ಚಯವಾಗಿಯೂ ಮಾನವಿಯು. ಸುಪ್ರಸಿದ್ಧನಾದ ದ್ರುಪದನ ಮಗಳು; ದ್ರೌಪದೀ ಎಂದು ಹೆಸರು. ಪಂಚಪಾಂಡವರಿಗೂ ಅನುರೂಪಳಾದ ಸತಿಯಾಗಿರುವಳು. ಐವರು ಪಾಂಡವರಿಗೂ ಬಹುಪ್ರಿಯಳೂ ಆಗಿರುವಳು. ಈಗ ಅವರಾರೂ ಆಶ್ರಮದಲ್ಲಿಲ್ಲ. ಆದುದರಿಂದ ನೀನು ಇದೇ ಸಮಯದಲ್ಲಿ ಅವಳನ್ನು ಕರೆದು ಕೊಂಡು ಸೌವೀರದೇಶಕ್ಕೆ ಪ್ರಯಾಣಮಾಡು."

ಜನಮೇಜಯ! ಕೋಟಿಕನ ಮಾತುಗಳನ್ನು ಕೇಳಿ ಸಿಂಧು-ಸೌವೀರ ದೇಶಗಳ ಅಧಿಪತಿಯಾದ ಜಯದ್ರಥನು, ತನ್ನ ಸಂಗಡಿಗರಿಗೆ ತಾನು ದ್ರೌಪದಿಯನ್ನು ನೋಡಿಬರುವೆನೆಂದು ಹೇಳಿ ಆರು ಜನ ಆಪ್ತರೊಡನೆ–ತೋಳವೊಂದು ಸಿಂಹದ ಗುಹೆಯನ್ನು ಹೋಗುವಂತೆ–ಪುಣ್ಯತಮವಾದ ಯುಧಿಷ್ಠಿರನ ಆಶ್ರಮವನ್ನು ಪ್ರವೇಶಿಸಿದನು.

ಆಶ್ರಮದಲ್ಲಿ ಏಕಾಕಿನಿಯಾಗಿದ್ದ ದ್ರೌಪದಿಯನ್ನು ನೋಡಿದೊಡನೆಯೇ ಪುನಃ ಪುಲಕಿತನಾಗಿ ಜಯದ್ರಥನು ಅವಳನ್ನು ಪ್ರಶ್ನಿಸಿದನು :

"ವರಾರೋಹೇ! ಕುಶಲಿನಿಯಾಗಿರುವೆಯಾ? ನಿನ್ನ ಪತಿಗಳು ಕುಶಲಿಗಳಾಗಿರುವರೇ? ಮತ್ತು ನೀನು ಯಾರನ್ನು ಸರ್ವದಾ ಕುಶಲಿಗಳಾಗಿರ ಬೇಕೆಂದು ಅಪೇಕ್ಷಿಸುವೆಯೋ ಅವರೆಲ್ಲರೂ ಕುಶಲಿಗಳಾಗಿರುವರೇ?"

"ಕುರುಕುಲಾವತಂಸನಾದ ಯುಧಿಷ್ಠಿರ, ಅವನ ಅನುಜರು ಮತ್ತು ನೀನು ಪ್ರಶ್ನಿಸಿದ ನನ್ನ ಇತರ ಪರಿವಾರದವರು–ಎಲ್ಲರೂ ಕುಶಲಿಗಳಾಗಿರು ತ್ತಾರೆ. ನಾನೂ ಕುಶಲಿನಿಯಾಗಿದ್ದೇನೆ. ನೀನು ಕುಶಲಿಯಾಗಿರುವೆಯಾ? ನಿನ್ನ ರಾಷ್ಟ್ರ-ಕೋಶ-ಬಲಗಳು ಸೌಖ್ಯದಿಂದಿರುವುವೇ? ನಿನಗೆ ಸೇರಿರುವ ಶಿಬಿ-ಸಿಂಧು-ಸೌವೀರಾದಿ ರಾಜ್ಯಗಳನ್ನು ಧರ್ಮದಿಂದ ಆಳುತ್ತಿರುವೆಯಲ್ಲವೇ?

ಮಹಾರಾಜ! ಈ ಪಾದ್ಯವನ್ನು ಸ್ವೀಕರಿಸು. ಈ ನೀರಿನಿಂದ ಕಾಲು ತೊಳೆದುಕೊಂಡು ಈ ಆಸನದಲ್ಲಿ ಉಪವಿಷ್ಟನಾಗು. ನಿನ್ನ ಪರಿವಾರಕ್ಕೆ ಆಹಾರಾರ್ಥವಾಗಿ ನಾನು ಐವತ್ತು ಮೃಗಗಳನ್ನು ಕಳುಹಿಸಿಕೊಡುತ್ತೇನೆ. ಇಷ್ಟು ಮಾತ್ರವಲ್ಲದೇ ಕುಂತೀಪುತ್ರನಾದ ಯುಧಿಷ್ಠಿರನು ನಿನಗೂ ನಿನ್ನ ಪರಿವಾರಕ್ಕೂ ಐಣೇಯು-ಪೃಷತ-ನ್ಯಂಕು-ಹರಿಣ-ಶರಭ-ಋಕ್ಷ-ರುರು-ಶಂಬರ-ಗವಯ-ವರಾಹ-ಮಹಿಷ–ಇವುಗಳೇ ಮೊದಲಾದ ಅರಣ್ಯದಲ್ಲಿ ಸಿಕ್ಕುವ ನಾನಾಮೃಗವಿಶೇಷಗಳನ್ನೂ ಸಮರ್ಪಿಸುತ್ತಾನೆ. ಅವುಗಳೆಲ್ಲವನ್ನೂ ಸ್ವೀಕರಿಸಿ ಉಪಭುಂಜಿಸಿದನಂತರ ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದು ಮುಂದೆ ಪ್ರಯಾಣಮಾಡಬಹುದಾಗಿದೆ."

"ದ್ರೌಪದಿ! ನಾನು ಕುಶಲಿಯಾಗಿದ್ದೇನೆ. ನನ್ನ ದೇಶಗಳೂ ಸೌಖ್ಯ ದಿಂದಿರುತ್ತವೆ. ನನ್ನ ಪರಿವಾರದವರೂ ಕುಶಲಿಗಳಾಗಿರುತ್ತಾರೆ. ನೀನು ನಮ್ಮ ಪ್ರಾತರ್ಭೋಜನಕ್ಕೆ ಸಿದ್ಧಪಡಿಸುತ್ತೇನೆಂದು ಹೇಳಿದ್ದೇ ಸಾಕಾಗಿದೆ. ನಿನ್ನೀ ಮಾತಿನಿಂದಲೇ ಪ್ರಾತರ್ಭೋಜನವನ್ನು ಮಾಡಿದಷ್ಟೇ ತೃಪ್ತಿಯನ್ನು ಹೊಂದಿದ್ದೇವೆ. ನಾನು ನಿನ್ನ ಆಶ್ರಮಕ್ಕೆ ಬರಲು ಒಂದು ಮಹತ್ತರವಾದ ಕಾರಣವಿದೆ. ಕಾಲವು ಮೀರಿಹೋಗುವುದರೊಳಗಾಗಿ ಆ ವಿಷಯವನ್ನು ನಿನ್ನೊಡನೆ ಹೇಳಲಿಚ್ಛಿಸುತ್ತೇನೆ."

ದ್ರೌಪದಿಯು, ಜಯದ್ರಥನು ಏನು ಹೇಳಲಿರುವನೆಂಬುದನ್ನು ಕಾತುರತೆಯಿಂದ ನಿರೀಕ್ಷಿಸುತ್ತಾ ನಿಂತಳು. ಮೋಹಪರವಶನಾಗಿ ಲಜ್ಜೆ ಯೆಂಬುದನ್ನೇ ಸಂಪೂರ್ಣವಾಗಿ ತ್ಯಜಿಸಿದ್ದ ಜಯದ್ರಥನು ದ್ರೌಪದಿಯನ್ನು ಕುರಿತು ಹೇಳತೊಡಗಿದನು : "ಏಹಿ ಮೇ ರಥಮಾರೋಹ–ಕೋಮ ಲಾಂಗಿ! ಕೂಡಲೇ ಈ ಆಶ್ರಮದಿಂದ ಹೊರಟು ಬಾ. ನನ್ನ ರಥವನ್ನು ಹತ್ತಿ ಕುಳಿತುಕೋ. ನನ್ನನ್ನು ಸೇರಿ ಸುಖವಾಗಿ ಬಾಳು. ನಿನ್ನಂತಹ ತ್ರಿಲೋಕಸುಂದರಿಯು ದುರದೃಷ್ಟಶಾಲಿಗಳಾದ ಪಾಂಡವರೊಡನಿರುವುದು ಖಂಡಿತವಾಗಿಯೂ ಯೋಗ್ಯವಲ್ಲ. ಅವರಿಂದು ದಟ್ಟದರಿದ್ರರಾಗಿರುತ್ತಾರೆ. ರಾಜ್ಯ-ಕೋಶಗಳೆಲ್ಲವನ್ನೂ ಕಳೆದುಕೊಂಡಿರುತ್ತಾರೆ. ಕೇವಲ ಕೃಪಣರಾಗಿರು ತ್ತಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಮೃತಪ್ರಾಯರಾಗಿದ್ದಾರೆ. ಅವರಲ್ಲೀಗ ಯಾವ ಸತ್ತ್ವವೂ ಉಳಿದಿಲ್ಲ. ನಿರಂತರವಾಗಿ ಅರಣ್ಯವಾಸಿ

ಗಳಾದ ಇಂತಹ ನಿನ್ನ ಪತಿಗಳನ್ನು ಅನುಸರಿಸುತ್ತಾ ಹೋಗುವುದೂ ಮತ್ತು ಅವರ ಕಷ್ಟಗಳಲ್ಲಿ ಸಹಭಾಗಿನಿಯಾಗುವುದೂ ನಿನ್ನಂತಹ ರೂಪವತಿಗೆ ಸರ್ವಥಾ ಯೋಗ್ಯವಲ್ಲ.

**ನೈವ ಪ್ರಾಜ್ಞಾ ಗತಶ್ರೀಕಂ ಭರ್ತಾರಮುಪಯುಞ್ಜತೇ ।**

ಕುಶಲಮತಿಯಾದವಳು ಸಂಪತ್ತಿನಿಂದ ವಿಹೀನನಾದ ಪತಿಯನ್ನು ಖಂಡಿತವಾಗಿಯೂ ಸೇವಿಸುವುದಿಲ್ಲ.

**ಯುಞ್ಜಾನಮನುಯುಞ್ಜೀತ ನ ಶ್ರಿಯಃ ಸಂಕ್ಷಯೇ ವಸೇತ್ ॥**

ಪತಿಯು ಸಂಪತ್ತಿನಿಂದ ಯುಕ್ತನಾಗಿರುವಾಗ ಅವನನ್ನನುಸರಿಸಿ ಹೋಗುವುದೂ ಅವನ ಸೇವೆಯನ್ನು ಮಾಡುವುದೂ ಯುಕ್ತವಾಗಿಯೇ ಇದೆ. ಆದರೆ ಪತಿಯ ಸಂಪತ್ತು ಲುಪ್ತವಾಗಿ ಹೋದನಂತರ ಅವನ ಜೊತೆಯಲ್ಲಿ ಕುಶಲಮತಿಯಾದ ಪತ್ನಿಯು ಇರಲಾಗದು. ನಿನ್ನ ಐವರು ಪತಿಗಳೂ ಇಂದು ಸಂಪತ್ತಿನಿಂದ ವಿಹೀನರಾಗಿದ್ದಾರೆ. ರಾಜ್ಯ-ಕೋಶಾದಿಗಳನ್ನು ಸಂಪೂರ್ಣವಾಗಿ ಕಳೆದುಕೊಂಡಿರುತ್ತಾರೆ. ಅವರು ಪುನಃ ರಾಜ್ಯವನ್ನು ಗಳಿಸಿಕೊಳ್ಳುವ ಸಂಭವವೂ ಇಲ್ಲ. ನಿರಂತರವಾದ ಅರಣ್ಯವಾಸವೇ ಅವರಿಗೆ ಗತಿ. ಆದುದರಿಂದ ನೀನು ಅವರ ವಿಷಯದಲ್ಲಿ ಯಾವ ವಿಧವಾದ ಗೌರವವನ್ನೂ ಇಡುವ ಕಾರಣವಿಲ್ಲ ಮತ್ತು ಅವರ ಕಷ್ಟದಲ್ಲಿ ಭಾಗಿನಿಯಾಗಿರಬೇಕಾದ ಆವಶ್ಯಕತೆಯೂ ಇಲ್ಲ. ಆದುದರಿಂದ ನೀನು ಪಾಂಡುಪುತ್ರರ ವಿಷಯದಲ್ಲಿ ಇಟ್ಟಿರುವ ಪತಿಭಕ್ತಿಯನ್ನಿನ್ನು ಸಾಕುಮಾಡು. ಅವರ ಜೊತೆಯಲ್ಲಿ ನೀನು ಅನುಭವಿಸುತ್ತಿರುವ ಕಾಯಕ್ಲೇಶವನ್ನೂ ನಿವಾರಣೆಮಾಡಿಕೋ. ಅವರನ್ನೀಗಲೇ ಪರಿತ್ಯಜಿಸಿ ನನ್ನ ಭಾರ್ಯೆಯಾಗು. ಸಿಂಧು-ಸೌವೀರರಾಷ್ಟ್ರಗಳಿಗೆ ಚಕ್ರವರ್ತಿನಿಯಾಗಿ ನಿನ್ನ ಮುಂದಿನ ಜೀವನವನ್ನಾದರೂ ಸುಖಮಯವನ್ನಾಗಿ ಮಾಡಿಕೊ.”

ಜನಮೇಜಯ! ಜಯದ್ರಥನ ಕರ್ಣಕಠೋರವಾದ, ಹೃದಯಕಂಪಿಯಾದ ಮಾತುಗಳನ್ನು ಕೇಳಿದೊಡನೆಯೇ ದ್ರೌಪದಿಯ ಮುಖವು ಕೆಂಪಾಯಿತು. ಹುಬ್ಬುಗಳು ಗಂಟಿಕ್ಕಿದುವು. ಅಲ್ಲಿ ಕ್ಷಣಮಾತ್ರವೂ ನಿಲ್ಲದೇ ಆಶ್ರಮದೊಳಭಾಗದಲ್ಲಿ ಸರಿದು ನಿಂತಳು.

ಜಯದ್ರಥನಾಡಿದ ಮಾತುಗಳೆಲ್ಲವನ್ನೂ ಸಂಪೂರ್ಣವಾಗಿ ಖಂಡಿಸುತ್ತಾ ಅವನನ್ನು ಕುರಿತು ಹೇಳಿದಳು : “ಸೈಂಧವ! ಪುನಃ ಇಂತಹ ದುರ್ವಚನ

ಗಳನ್ನಾಡಿಯೇ! ಎಚ್ಚರದಿಂದಿರು. ರಾಜಪದವಿಯಲ್ಲಿರುವ ನಿನಗೆ ಇಂತಹ ಹೇಯವಾದ ಮಾತುಗಳನ್ನಾಡಲು ನಾಚಿಕೆಯೂ ಆಗುವುದಿಲ್ಲವೇ?"

ದ್ರೌಪದಿಯು ಮರುಕ್ಷಣದಲ್ಲಿಯೇ ಯೋಚಿಸಿದಳು, "ಜಯದ್ರಥನ ವಿಷಯದಲ್ಲೀಗ ಸಿಂಹಿಣಿಯಂತೆ ವರ್ತಿಸಿದರೆ ಪ್ರಯೋಜನವಾಗದು. ನನ್ನ ಪತಿಗಳು ಬರುವವರೆಗೂ ಇವನನ್ನು ಉಪಾಯಾಂತರದಿಂದ (ಮಾತಿಗೆ ಮಾತನ್ನು ಜೋಡಿಸುತ್ತಾ) ನಿಂತಲ್ಲಿಯೇ ನಿಂತಿರುವಂತೆ ಮಾಡಬೇಕು." ಹೀಗೆಂದು ನಿರ್ಧರಿಸಿದವಳಾಗಿ ಜಯದ್ರಥನನ್ನು ಕುರಿತು ನೀತಿಯುಕ್ತವಾದ ಮಾತುಗಳನ್ನಾಡಲು ಉಪಕ್ರಮಿಸಿದಳು.

ಲ೬೭ನೆಯ ಅಧ್ಯಾಯವು ಮುಗಿಯಿತು.

೨೬೮ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ಜಯದ್ರಥನು ದ್ರೌಪದಿಯನ್ನು ಅಪಹರಿಸಿಕೊಂಡು ಹೋದುದು

ಜನಮೇಜಯ! ಜಯದ್ರಥನನ್ನು ಮೋಸಗೊಳಿಸುವ ಸಲುವಾಗಿ ಅವನೊಡನೆ ಮಾತನಾಡಬೇಕೆಂಬುದು ದ್ರೌಪದಿಯ ಇಚ್ಛೆಯಾದರೂ ಅವನ ಮಾತಿನಿಂದ ತನಗಾದ ಕೋಪವನ್ನು ಕಡಿಮೆಮಾಡಿಕೊಳ್ಳಲು ಅವಳಿಗೆ ಸಾಧ್ಯವಾಗಲಿಲ್ಲ. ಅವಳ ಮುಖವು ಕೋಪದಿಂದ ಕೆಂಪೇರಿದ್ದಿತು. ಕಣ್ಣು ಗಳು ಕೆಂಡದಂತೆ ಕೆಂಪಾಗಿ ಹೊಳೆಯುತ್ತಿದ್ದುವು. ಹುಬ್ಬುಗಳು ಗಂಟಿಕ್ಕಿದ್ದುವು. ಜಯದ್ರಥನನ್ನು ನುಂಗಿಬಿಡುವವಳಂತೆ ಕಟುವಾಗಿ ಹೇಳತೊಡಗಿದಳು :

"ಛೀ ನಿನಗೆ ಸ್ವಲ್ಪವಾದರೂ ನಾಚಿಕೆಯಾಗುವುದಿಲ್ಲವೇ? ನೀನು ಯಾರ ವಿಷಯದಲ್ಲಿ ಇಂತಹ ನಿಂದನೆಯ ಮಾತುಗಳನ್ನಾಡುತ್ತಿರುವೆ ಯೆಂಬುದನ್ನಾದರೂ ಮನಸ್ಸಿಗೆ ತಂದುಕೊಂಡಿರುವೆಯಾ? ಸೈಂಧವ!

ನನ್ನ ಐವರು ಪತಿಗಳಲ್ಲಿ ಒಬ್ಬೊಬ್ಬರೂ ಮಹಾಶೂರರು. ಮಹಾ ವೀರರು ; ಮಹಾರಥರು ; ಯಶಸ್ವಿಗಳು ; ತೀಕ್ಷ್ಣವಿಷವುಳ್ಳ ಸರ್ಪಗಳಂತಿರು ವವರು ; ಇಂದ್ರನಿಗೆ ಸಮಾನರಾದವರು ; ಸ್ವಕರ್ಮಗಳಲ್ಲಿ ನಿರತರಾಗಿರು ವವರು ; ಧರ್ಮಾತ್ಮರು ; ಯಕ್ಷ-ರಾಕ್ಷಸರನ್ನಾದರೂ ಎದುರಿಸಿ ನಿಲ್ಲುವ ಸಾಮರ್ಥ್ಯವುಳ್ಳವರು. ಇಂತಹವರನ್ನು ನೀನು ನಿಂದಿಸುತ್ತಿರುವೆಯಲ್ಲವೇ?

ನಿನಗೆ ಹಿರಿಯರಾಡಿರುವ ನೀತಿಯ ಮಾತುಗಳಾವುವೂ ಸ್ಮರಣೆಯಲ್ಲಿಯೇ ಇಲ್ಲವೆಂದು ತೋರುತ್ತದೆ. ನಿನಗೆ ನಾಚಿಕೆಯಾಗುವುದಿಲ್ಲವೇ?

**ನ ಕಿಂಚಿದೀಡ್ಯಂ ಪ್ರವದನ್ತಿ ಪಾಪಂ**
**ವನೇಚರಂ ವಾ ಗೃಹಮೇಧಿನಂ ವಾ ।**
**ತಪಸ್ವಿನಂ ಸಮ್ಪರಿಪೂರ್ಣವಿದ್ಯಂ**
**ಭಷನ್ತಿ ಹ್ಯೇವಂ ಶ್ವನರಾಃ ಸುವೀರ ॥೩॥**

ತಪಸ್ವಿಯನ್ನೂ, ವಿದ್ಯಾಪೂರ್ಣನನ್ನೂ–ಅಂತಹವನು ಊರಿನಲ್ಲಿಯೇ ಇರಲಿ ; ಕಾಡಿನಲ್ಲಿಯೇ ಇರಲಿ–ಸತ್ಪುರುಷರಾದವರು ನಿಂದಿಸಹೋಗುವುದಿಲ್ಲ. ತುಚ್ಛರೂ ಶುನಕಸಮಾನರೂ ಆದ ನಿನ್ನಂತಹವರು ಮಾತ್ರವೇ ಹೀಗೆ ಬೊಗಳುವರು. ನೀನೀಗ ಸ್ವಯಂಕೃತಾಪರಾಧದಿಂದ ಪ್ರಪಾತಕ್ಕೆ ಬೀಳಲಿದ್ದೀಯೆ. ಇಂತಹ ಸಮಯದಲ್ಲಿ ನಿನಗೆ ಹಸ್ತಾವಲಂಬನವನ್ನಿತ್ತು ಸಂರಕ್ಷಿಸುವ ಯಾವ ಕ್ಷತ್ರಿಯವೀರರನ್ನೂ ನಾನು ಕಾಣೆನು. ಇಲ್ಲಿರುವ ಕ್ಷತ್ರಿಯರಾರೂ ನಿನ್ನನ್ನು ಉದ್ಧರಿಸಲಾರರೆಂದೇ ನಾನು ಭಾವಿಸಿದ್ದೇನೆ. ಯುಧಿಷ್ಠಿರನನ್ನೂ ಜಯಿಸುವೆನೆನ್ನುವ ನಿನ್ನ ಆಶಯವನ್ನು ಕಂಡು ನಾನು ನಗಬೇಕಾಗಿದೆ. ಮದೋದಕವನ್ನು ಸುರಿಸುತ್ತಾ ಹಿಮವತ್ಪರ್ವತದ ತಪ್ಪಲಿನಲ್ಲಿ ಹೆಣ್ಣಾನೆಗಳ ಗುಂಪಿನಲ್ಲಿ ವಿಹರಿಸುತ್ತಿರುವ ಪರ್ವತೋಪಮವಾದ ಮದ್ದಾನೆಯೊಂದನ್ನು ಕೋಲಿನ ಬಲದಿಂದ ಬೇರ್ಪಡಿಸಲು ಯತ್ನಿಸುವ ಹುಚ್ಚು ಮನುಷ್ಯನಂತೆ–ನೀನು ಯುಧಿಷ್ಠಿರನನ್ನು ನಿನ್ನ ಅತ್ಯಲ್ಪಬಲದಿಂದ ಸೋಲಿಸಲು ಇಚ್ಛಿಸಿರುವೆ.

ನಿನ್ನದು ಹುಡುಗಬುದ್ಧಿಯೆಂದು ಹೇಳದೇ ವಿಧಿಯಿಲ್ಲ, ಸೈಂಧವ! ಮಲಗಿ ನಿದ್ರಿಸುತ್ತಿರುವ ಮಹಾಬಲಶಾಲಿಯಾದ ಸಿಂಹದ ಗುಹೆಯೊಳಗೆ ಹೊಕ್ಕು ಅದನ್ನು ಕಾಲಿನಿಂದ ಒದೆದು ಅದರ ಮುಖದಿಂದ ರೆಪ್ಪೆಯ ಕೂದಲನ್ನು ಕೀಳಲು ಹೊರಟವನ ಕ್ರಿಯೆಯಂತಿದೆ ನಿನ್ನೀ ದುಷ್ಟಚರ್ಯೆ. ಅದು ಎಚ್ಚರಗೊಂಡರೆ ಪರಿಣಾಮವೇನಾಗುವುದೆಂಬುದನ್ನು ನೀನು ತಿಳಿದಿಲ್ಲವೆಂದು ತೋರುತ್ತದೆ. ಕುಪಿತನಾದ ಭೀಮನನ್ನೇನಾದರೂ ಈ ಸಮಯದಲ್ಲಿ ಕಂಡೆಯಾದರೆ ಬೇರೆ ಮಾರ್ಗವಿಲ್ಲದೇ ಪಲಾಯನಮಾಡಬೇಕಾಗುವುದು. ಕೋಪಗೊಂಡ ಜಿಷ್ಣುವಿನೊಡನೆ ಸೆಣೆಸಾಡುವ ಆಶಯವುಳ್ಳ ನೀನು–ಪರ್ವತದ ಗುಹೆ

ಯಲ್ಲಿ ಮಲಗಿರುವ, ಮಹಾಬಲಶಾಲಿಯಾದ, ಭಯಂಕರವಾದ, ಸಿಂಹವೊಂದನ್ನು ಕಾಲಿನ ತುದಿಯಿಂದ ಪ್ರಹರಿಸಲು ಹೊರಟಿರುವೆಯೆಂದು ನನಗೆ ಭಾಸವಾಗುತ್ತಿದೆ. ಎರಡು ಕೃಷ್ಣಸರ್ಪಗಳನ್ನು ಅವುಗಳ ಬಾಲಗಳ ಮೇಲೆ ಏಕಕಾಲದಲ್ಲಿ ಕಾಲಿಟ್ಟು ಕೆಣಕುವಂತೆ–ನೀನು ನಿನ್ನ ಬಾಲಿಶಬುದ್ಧಿಯಿಂದ ನಕುಲ-ಸಹದೇವರೊಡನೆ ಸೆಣೆಸಾಡಲು ಹೊರಟಿರುವೆ.

**ಯಥಾ ಚ ವೇಣುಃ ಕದಲೀ ನಲೋ ವಾ**
**ಫಲನ್ತ್ಯಭಾವಾಯ ನ ಭೂತಯೇಽತ್ಮನಃ ।**
**ತಥೈವ ಮಾಂ ತೈಃ ಪರಿರಕ್ಷ್ಯಮಾಣಾ-**
**ಮಾದಾಸ್ಯಸೇ ಕರ್ಕಟಕೀವ ಗರ್ಭಮ್ ॥೯॥**

ಬಿದಿರು, ಬಾಳೆ–ಮುಂತಾದುವುಗಳು ಫಲಿಸುವುದು ಸ್ವವಿನಾಶಕ್ಕೇ ಹೊರತು ಫಲಿತವಾದನಂತರ ಅವುಗಳು ಊರ್ಜಿತವಾಗುವುದಿಲ್ಲ. ಏಡಿಯೂ ಗರ್ಭಧಾರಣೆಮಾಡುವುದು ಸ್ವವಿನಾಶಕ್ಕಾಗಿಯೇ ಸರಿ. ಅದರಂತೆಯೇ ನನ್ನನ್ನು ಹೊಂದಲು ಬಯಸುವ ನಿನ್ನ ಯತ್ನವೂ ಕೂಡ ನಿನ್ನ ವಿನಾಶಕ್ಕೆಂದೇ ಭಾವಿಸಬೇಕಾಗಿದೆ.

ಮಹಾ-ಮಹಾವೀರರುಗಳಿಂದ ಸಂರಕ್ಷಿತಳಾದ ನನ್ನನ್ನು ಕರೆದೊಯ್ಯಲು ಅಪೇಕ್ಷಿಸುವ ನೀನೂ ಸಹ ಗರ್ಭಧಾರಣೆಯಿಂದ ಏಡಿಯು ಎಷ್ಟು ಪ್ರಯೋಜನ ಪಡೆಯುವುದೋ ಅದೇ ರೀತಿಯಲ್ಲಿ ಪ್ರಯೋಜನವನ್ನು ಪಡೆಯುವೆ. ಅರ್ಥಾತ್ ನನ್ನನ್ನು ಅಪೇಕ್ಷಿಸುವುದರಿಂದ ನಿನ್ನ ಸರ್ವನಾಶವಾಗುವುದೇ ಹೊರತು ನನ್ನನ್ನು ಖಂಡಿತವಾಗಿಯೂ ಪಡೆಯಲಾರೆ. ಆದುದರಿಂದ ಇಂತಹ ದುಃಸಾಹಸದಿಂದ ವಿಮುಖನಾಗು, ಸೈಂಧವ!”

“ಕೃಷ್ಣೇ! ನನಗೆಲ್ಲವೂ ತಿಳಿದಿರುವುದು. ನಿನ್ನ ಪತಿಗಳ ಪೌರುಷದ ಪರಾಕಾಷ್ಠೆಯು ಎಷ್ಟೆಂಬುದನ್ನೂ ನಾನು ಚೆನ್ನಾಗಿ ಬಲ್ಲೆನು. ಆದರೆ ನಿನ್ನ ಪತಿಗಳಿಗಿರುವ ಪರಾಕ್ರಮವು ಅನನ್ಯಸದೃಶವಾದುದೆಂಬ ಭ್ರಾಂತಿಯಿಂದ ನಮ್ಮನ್ನು ಹೆದರಿಸಲು ಯತ್ನಿಸಬೇಡ. ನಾವೂ ಸಹ ಕ್ಷತ್ರಿಯರಿಗಿರಬೇಕಾದ ಕೃಷಿ - ವಾಣಿಜ್ಯ - ದುರ್ಗ - ಸೇತು-ಕುಂಜರಬಂಧನ-ಕರಾದಾನ-ಶೂನ್ಯಗಳ ಪ್ರಕ್ರಿಯೆ–ಮುಂತಾದ ಹದಿನೇಳು ವಿಧವಾದ ರಾಜತಂತ್ರಗಳನ್ನು ತಿಳಿದವರಾಗಿ

ದ್ದೇವೆ. ಶೌರ್ಯ, ತೇಜಸ್ಸು, ಧೃತಿ, ದಾಕ್ಷಿಣ್ಯ, ದಾನ ಮತ್ತು ಐಶ್ವರ್ಯಗಳೆಂಬ ಆರು ಶ್ರೇಷ್ಠಗುಣಗಳು ನಮ್ಮಲ್ಲಿಯೂ ಇವೆ. ಸಂಧಿ-ವಿಗ್ರಹ-ಯಾನ- ಆಸನಾದಿ ರಾಜನೀತಿಯ ವಿಷಯಗಳೂ ನಮಗೆ ತಿಳಿದಿವೆ. ಆದುದರಿಂದಲೇ ನಾವು ಪಾಂಡವರನ್ನು ಬಹಳ ಕೀಳಾಗಿ ನೋಡುತ್ತೇವೆ. ಅವರು ನಮಗೆ ಸಮಾನರೆಂದು ಎಂದೂ ಭಾವಿಸುವುದಿಲ್ಲ. ಆದುದರಿಂದ ನೀನು ಈ ಕೂಡಲೇ ಈ ಪಟ್ಟದಾನೆಯನ್ನಾಗಲೀ, ರಥವನ್ನಾಗಲೀ ಹತ್ತಿ ಕುಳಿತುಕೊ. ಕೇವಲ ನಿನ್ನ ಮಾತುಗಳಿಂದಲೇ ನೀನು ನಮ್ಮನ್ನು ಖಂಡಿತವಾಗಿಯೂ ಪರಾಜಿತರನ್ನಾಗಿ ಮಾಡಲಾರೆ. ಅಥವಾ ದುರಹಂಕಾರದ ಮಾತುಗಳನ್ನಾಡದೇ ಸೌವೀರರಾಜನ ಕ್ಷಮೆಯನ್ನಾದರೂ ಯಾಚಿಸು."

"ಸೌವೀರರಾಜನು ಮಹಾಬಲಿಷ್ಠಳಾದ ನನ್ನನ್ನು ದುರ್ಬಲೆಯೆಂದೇ ಭಾವಿಸಿರುವಂತಿದೆ. ನನ್ನನ್ನು ನಿಗ್ರಹಿಸಲು ಅಥವಾ ಪರಾಜಯಗೊಳಿಸಲು ಯತ್ನಿಸಿದವರೆಲ್ಲರೂ ವಿಫಲರಾಗಿ ಹೋದರು. ಇಂತಹ ಶಕ್ತಿಯಿರುವುದ ರಿಂದಲೇ ಸೌವೀರರಾಜನಾದ ನಿನ್ನನ್ನು ಕೃಪಣನೆಂದು ಹೇಳಬಲ್ಲೆನು. ಯಾರ ರಕ್ಷಣೆಗೆ ಕೃಷ್ಣಾರ್ಜುನರಿಬ್ಬರೂ ಪಣತೊಟ್ಟು ಒಂದೇ ರಥದಲ್ಲಿ ಕುಳಿತು ಧಾವಿಸಿ ಬರುವರೋ–ಅಂತಹವಳನ್ನು ಅಪಹರಿಸಲು ಪುರಂದರನಿಂದಲೂ ಸಹ ಸಾಧ್ಯವಾಗಲಾರದು. ಹೀಗಿರುವಲ್ಲಿ ಕೃಪಣನಾದ ಮನುಷ್ಯಮಾತ್ರನಾದ ನಿನಗೆ ಏನು ತಾನೇ ಮಾಡಲು ಶಕ್ಯವಿದೆ? ನನ್ನನ್ನು ರಕ್ಷಿಸುವ ಸಲುವಾಗಿ ಕಿರೀ ಟಿಯು ಕೈಯಲ್ಲಿ ಧನುಸ್ಸನ್ನು ಹಿಡಿದು ರಥದಲ್ಲಿ ಕುಳಿತು ನಿನ್ನ ಮೇಲೆ ದಾಳಿ ಮಾಡಿ–ಬೇಸಿಗೆಯ ಕಾಲದಲ್ಲಿ ಅಗ್ನಿಯು ಹುಲ್ಲುಮೆದೆಯನ್ನು ಧ್ವಂಸಮಾಡಿ ಬಿಡುವಂತೆ–ಕ್ಷಣಾರ್ಧದಲ್ಲಿ ನಿನ್ನ ಅಪಾರಸೈನ್ಯವನ್ನೂ ಧ್ವಂಸಮಾಡಿಬಿಡುತ್ತಾನೆ. ನಾನು ಆಪತ್ತಿನಲ್ಲಿರುವುದನ್ನು ತಿಳಿದೊಡನೆಯೇ ಜನಾರ್ದನನು ಅಂಧಕ-ವೃಷ್ಣಿರಾಜಕುಮಾರರೊಡನೆ ರಥದಲ್ಲಿ ಕುಳಿತು ಧಾವಿಸಿ ಬರುತ್ತಾನೆ. ಹಾಗೆಯೇ ಕೇಕಯರೂ ನನ್ನನ್ನು ರಕ್ಷಿಸಲು ಮುನ್ನುಗ್ಗುತ್ತಾರೆ. ಯಾವಾಗ ಅರ್ಜುನನು ತನ್ನ ಗಾಂಡೀವಧನುಸ್ಸನ್ನು ಸೆಳೆದು, ನಿಶಿತವಾದ ಬಾಣಗಳನ್ನು ಪತಂಗದ ಹುಳುಗಳೋಪಾದಿಯಲ್ಲಿ ಶತಸಹಸ್ರಸಂಖ್ಯೆಯಲ್ಲಿ ಅನುಸ್ಯೂತವಾಗಿ ನಿನ್ನ ಅನುಯಾಯಿಗಳ ಮೇಲೆ ಪ್ರಯೋಗಿಸುವನೋ–ಆಗ ನೀನು ನಿನ್ನ ದುರ್ಬುದ್ಧಿ ಯನ್ನು ನಿಂದಿಸುವೆ. ಅರ್ಜುನನು ತನ್ನ ಗಾಂಡೀವಧನುಸ್ಸನ್ನು ಕೈಯಲ್ಲಿ

ಹಿಡಿದು, ಶಂಖಧ್ವನಿಮಾಡಿ, ಶಿಂಜಿನಿಯನ್ನು ವೇಗವಾಗಿ ಸೆಳೆದು ನಿನ್ನ ಎದೆಗೆ ಗುರಿಯಿಟ್ಟು ಪುನಃ-ಪುನಃ ಬಾಣಗಳನ್ನು ಹೊಡೆಯುತ್ತಿದ್ದರೆ ನಿನ್ನ ಆಗಿನ ಮನಸ್ಸಿನ ಸ್ಥಿತಿಯು ಏನಾಗಬಹುದೆಂಬುದನ್ನು ಈಗಲೇ ಸ್ವಲ್ಪ ಯೋಚಿಸು. ಭೀಮನು ಗದಾಪಾಣಿಯಾಗಿ ನಿನ್ನ ಮೇಲೇರಿ ಬಂದಾಗ, ಕುಪಿತರಾದ ಮಾದ್ರೀಸುತರು ಧನುಷ್ಪಾಣಿಗಳಾಗಿ ನಿಂತು ನಿನ್ನನ್ನು ಅವ್ಯಾಹತವಾಗಿ ಶಸ್ತ್ರಗಳಿಂದ ಘಾಸಿಪಡಿಸುತ್ತಿರುವಾಗ, ನೀನು ನಿನ್ನ ದುಷ್ಕಾರ್ಯದಿಂದ ಪ್ರಾಪ್ತವಾಗುವ ಸಂಕಟವನ್ನು ಅನುಭವಿಸುವೆ ಮತ್ತು ಆ ಸಂಕಟವು ನಿನಗೆ ಮರಣ ಪರ್ಯಂತವಾಗಿಯೂ ಇರುತ್ತದೆ. ನಾನು ನನ್ನ ಪತಿಗಳ ವಿಷಯದಲ್ಲಿ ಮನಸಾ-ವಾಚಾ-ಕಾಯೇನ-ಕರ್ಮಣಾ ಕಿಂಚಿತ್ತಾದರೂ ಅಪರಾಧವನ್ನೆಸಗಿದ ವಳಲ್ಲ. ನನ್ನ ಪತಿಗಳನ್ನು ದೇವರೆಂದೇ ಭಾವಿಸಿ ಸದಾ ಅವರ ಅಭ್ಯುದಯ ದಲ್ಲಿಯೇ ಆಸಕ್ತಳಾಗಿರುವವಳು ನಾನು. ಈ ಕಾರಣದಿಂದಲೇ ಮುಂದಾಗುವ ವಿಷಯಗಳೆಲ್ಲವೂ ನನ್ನ ಕಣ್ಣಿಗೆ ಸ್ಪಷ್ಟವಾಗಿ ಗೋಚರಿಸುತ್ತಿವೆ. ನನ್ನ ಪತಿಗಳು ನಿನ್ನನ್ನು ಪರಾಜಯಗೊಳಿಸಿ ಸೆಳೆದೆಳೆಯುತ್ತಿರುವುದನ್ನು ಸ್ಪಷ್ಟವಾಗಿ ಕಾಣುತ್ತಿ ದ್ದೇನೆ. ಮುಂದಾಗುವ ದೃಶ್ಯವನ್ನು ಇಂದೇ ಕಂಡು ಸಂತೋಷಿಸುತ್ತಲೂ ಇದ್ದೇನೆ. ಸೈಂಧವ! ನೀನೀಗಲೇ ನನ್ನನ್ನು ಅಪಹರಿಸಿಕೊಂಡೇ ಹೋಗಲು ನಿಶ್ಚಯಿಸಿಬಿಟ್ಟಿರುವೆ. ಇದರಿಂದ ನಾನು ಸ್ವಲ್ಪವೂ ಭೀತಳಾಗಿಲ್ಲ. ಕುರುಕುಲಾ ವತಂಸರಾದ, ವೀರರಾದ ನನ್ನ ಪತಿಗಳು–ನೀನು ನನ್ನನ್ನು ಸೆಳೆದೊಯ್ಯುತ್ತಿ ರುವ ಸುಳಿವನ್ನು ತಿಳಿದೊಡನೆಯೇ ಕ್ಷಣಮಾತ್ರದಲ್ಲಿ ನಿನ್ನನ್ನು ಧ್ವಂಸಮಾಡಿ ನನ್ನನ್ನು ಪುನಃ ಕಾಮ್ಯಕವನಕ್ಕೆ ಕರೆತರುತ್ತಾರೆ."

ಜನಮೇಜಯ! ಪತಿವ್ರತೆಯಾದ ದ್ರೌಪದಿಯು ಹೇಳಿದುದೆಲ್ಲವೂ ನಿಜ. ದುಷ್ಟನಾದ ಜಯದ್ರಥನು ಅವಳನ್ನು ಬಲಾತ್ಕಾರದಿಂದಲಾದರೂ ಅಪಹರಿಸಿ ಕೊಂಡು ಹೋಗಬೇಕೆಂದೇ ನಿರ್ಧರಿಸಿಬಿಟ್ಟಿದ್ದನು. ಸೈಂಧವನು ತನ್ನವರೊಡನೆ ದ್ರೌಪದಿಯನ್ನು ಸೆಳೆದುಕೊಂಡು ಹೋಗಲು ಮುಂದೆ-ಮುಂದೆ ಬರುತ್ತಿರುವು ದನ್ನು ಕಂಡು ದ್ರೌಪದಿಯು ಹಿಂದು-ಹಿಂದಕ್ಕೆ ಸರಿಯುತ್ತಾ ಹೇಳಿದಳು : 'ಮೂಢ! ನಿಮ್ಮ ಅಪವಿತ್ರವಾದ ಕೈಗಳಿಂದ ನನ್ನನ್ನು ಮುಟ್ಟಿ ಅಪವಿತ್ರಗೊಳಿ ಸಬೇಡಿ' ಹೀಗೆಂದು ಹೇಳಿ ಪುರೋಹಿತರಾದ ಧೌಮ್ಯರ ಹೆಸರು ಹಿಡಿದು

ಗಟ್ಟಿಯಾಗಿ ಕೂಗಿಕೊಂಡಳು. ಅಷ್ಟರಲ್ಲಿಯೇ ಸೈಂಧವನು ದ್ರೌಪದಿಯ ಸೆರಗನ್ನು ಹಿಡಿದೆಳೆದನು. ಒಡನೆಯೇ ದ್ರೌಪದಿಯು ತನ್ನ ಶಕ್ತಿಯೆಲ್ಲವನ್ನೂ ಕ್ರೋಢೀಕರಿಸಿ ಜಯದ್ರಥನನ್ನು ನೂಕಿಬಿಟ್ಟಳು. ಅವಳು ನೂಕಿದ ರಭಸಕ್ಕೆ ಜಯದ್ರಥನು–ಬುಡವನ್ನು (ಬೇರನ್ನು) ಕತ್ತರಿಸಿದ ವೃಕ್ಷದೋಪಾದಿಯಲ್ಲಿ



ಭೂಮಿಯ ಮೇಲೆ ದೊಪ್ಪನೆಬಿದ್ದನು. ಒಡನೆಯೇ ಮೇಲೆದ್ದು ದ್ರೌಪದಿಯನ್ನು ಹಿಡಿದೆಳೆಯತೊಡಗಿದನು. ಅಬಲೆಯಾದ ದ್ರೌಪದಿಗೆ ದುಷ್ಟನಾದ ಜಯದ್ರಥನೊಡನೆ ಹೆಚ್ಚು ಕಾಲ ಸೆಣೆಸಲು ಸಾಧ್ಯವಾಗಲಿಲ್ಲ. ಮೇಲಿಂದ ಮೇಲೆ ಏದುಸಿರು ಬರುತ್ತಿದ್ದಿತು. ಕಟ್ಟಕಡೆಗೆ ವಿಧಿಯಿಲ್ಲದೇ ಧೌಮ್ಯರ ಪಾದಸ್ಪರ್ಶಮಾಡಿ ನಮಸ್ಕರಿಸಿ ಜಯದ್ರಥನ ರಥವನ್ನು ಹತ್ತಿ ಕುಳಿತಳು. ದ್ರೌಪದಿಯ ಅಂತಹ ದಾರುಣಸ್ಥಿತಿಯನ್ನು ಕಂಡು ಧೌಮ್ಯರು ಜಯದ್ರಥ

ನನ್ನು ಕುರಿತು ಹೇಳಿದರು : “ಜಯದ್ರಥ! ಈ ಸಾಧ್ವಿಯನ್ನು ಬಲಾತ್ಕಾರದಿಂದ ಸೆಳೆದೊಯ್ಯುವುದು ಕ್ಷತ್ರಿಯನಾದ ನಿನಗೆ ಖಂಡಿತವಾಗಿಯೂ ಯೋಗ್ಯವಲ್ಲ. ಕ್ಷತ್ರಿಯವೀರರು ಅನುಸರಿಸುತ್ತಿದ್ದ ಪುರಾತನವಾದ ಧರ್ಮಮಾರ್ಗವನ್ನು ನೀನೂ ಅನುಸರಿಸು. ಮಹಾರಥರಾದ ಇವಳ ಪತಿಗಳನ್ನು ಯುದ್ಧದಲ್ಲಿ ಸೋಲಿಸದೇ ನೀನಿವಳನ್ನು ಬಲಾತ್ಕಾರದಿಂದ ಒಯ್ಯಲಾರೆ. ಅವರಿಲ್ಲದ ವೇಳೆಯಲ್ಲಿ ಹೇಡಿಯಂತೆ ಈಕೆಯನ್ನು ಅಪಹರಿಸಿಕೊಂಡು ಹೋಗುವುದು ನಿನಗೆ ಖಂಡಿತವಾಗಿಯೂ ಯುಕ್ತವಲ್ಲ. ಆದರೆ ಈ ಸಮಯದಲ್ಲಿ ನೀನು ನನ್ನ ಮಾತುಗಳನ್ನು ಕೇಳುವುದಿಲ್ಲವೆಂಬುದೂ ನಿಶ್ಚಯ. ನಿನ್ನ ಈ ಅಕೃತ್ಯಕ್ಕೆ ತಕ್ಕುದಾದ ಫಲವನ್ನು–ಯುಧಿಷ್ಠಿರಾದಿಗಳು ಆಯುಧಪಾಣಿಗಳಾಗಿ ಬಂದು ನಿನ್ನ ಮುಂದೆ ನಿಂತಾಗ ಪಡೆಯುವುದರಲ್ಲಿ ಸಂಶಯವಿಲ್ಲ.”

ಜನಮೇಜಯ! ಧೌಮ್ಯಮಹರ್ಷಿಗಳು ಸೈಂಧವನಿಗೆ ಹೀಗೆಂದು ಹೇಳಿ ದ್ರೌಪದಿಗೆ ಬೆಂಗಾವಲಾಗಿರಲು ಜಯದ್ರಥನ ಸೈನ್ಯದ ಜೊತೆಯಲ್ಲಿಯೇ ತಾವೂ ಹೊರಟುಬಿಟ್ಟರು.

೨೬೮ನೆಯ ಅಧ್ಯಾಯವು ಮುಗಿಯಿತು.

೨೬೯ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ಪಾಂಡವರು ಆಶ್ರಮಕ್ಕೆ ಹಿಂದಿರುಗಿದುದು : ದ್ರೌಪದಿಯನ್ನಪಹರಿಸಿದ ಜಯದ್ರಥನನ್ನು ಬೆನ್ನಟ್ಟಿ ಹೋದುದು

ಜನಮೇಜಯ! ಇತ್ತಲಾಗಿ ನಾಲ್ಕು ದಿಕ್ಕುಗಳಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಬೇಟೆಗಾಗಿ ತೆರಳಿದ್ದ ಪಾಂಡವರು ಅಸಂಖ್ಯಾತವಾದ ಜಿಂಕೆಗಳನ್ನೂ, ಹಂದಿಗಳನ್ನೂ, ಕಾಡೆಮ್ಮೆಗಳನ್ನೂ ಬೇಟೆಯಾಡಿ ಒಟ್ಟಾಗಿ ಸೇರಿದರು. ಆ ಸಮಯದಲ್ಲಿ ಅವರ ಸುತ್ತಲೂ ಓಡಾಡುತ್ತಿದ್ದ ಜಿಂಕೆಗಳೂ, ದುಷ್ಟಮೃಗಗಳೂ, ಪಕ್ಷಿಗಳೂ ಘೋರವಾಗಿ ಶಬ್ದಮಾಡುತ್ತಿದ್ದುವು. ಅದನ್ನು ಗಮನಿಸಿದ ಯುಧಿಷ್ಠಿರನು ತನ್ನ ಅನುಜರಿಗೆ ಹೀಗೆಂದು ಹೇಳಿದನು : “ಇಲ್ಲಿ ನಾವು ಕಾಣುತ್ತಿರುವ ಮೃಗ-ಪಕ್ಷಿಗಳು ಸೂರ್ಯನುದಯಿಸುವ ಪೂರ್ವದಿಕ್ಕಿಗೆ ಮುಖಮಾಡಿ ಘೋರಧ್ವನಿಮಾಡುತ್ತಿವೆ. ಇವುಗಳು ಉದ್ವೇಗವನ್ನೂ ಆಯಾಸವನ್ನೂ ವ್ಯಕ್ತಪಡಿಸುತ್ತಿವೆ. ಇವುಗಳ ಈ ಚರ್ಯೆಯನ್ನೂ, ಇವುಗಳು

ಮಾಡುತ್ತಿರುವ ಘೋರನಿನಾದವನ್ನೂ ನೋಡಿದರೆ ಈ ಅರಣ್ಯವು ಶತ್ರುಗಳ ಆಕ್ರಮಣಕ್ಕೆ ಒಳಪಟ್ಟಂತೆ ಕಾಣುತ್ತಿದೆ. ಆದುದರಿಂದ ನಾವಿನ್ನು ಬೇಟೆಯನ್ನು ನಿಲ್ಲಿಸಿ ಒಡನೆಯೇ ಆಶ್ರಮಕ್ಕೆ ತೆರಳೋಣ. ನಮಗಿನ್ನು ಮೃಗಗಳ ಬೆನ್ನಟ್ಟಿ ಹೋಗಬೇಕಾದ ಅವಸರವಿಲ್ಲ. ನನ್ನ ಹೃದಯವು ಇದ್ದಕ್ಕಿದ್ದಂತೆಯೇ ಬಡಿದು ಕೊಳ್ಳಲು ಆರಂಭಿಸಿದೆ. ಮನಸ್ಸು ಪರಿತಪಿಸುತ್ತಿದೆ. ಬುದ್ಧಿಯು ವಿಮೋಹ ಗೊಳ್ಳುತ್ತಿದೆ. ಆತ್ಮವು ನನ್ನ ಶರೀರದಿಂದ ಹಾರಿಹೋಗಿಬಿಡುವುದೋ ಎಂಬ ಭ್ರಾಂತಿಯಾಗುತ್ತಿದೆ. (ಮೇಲುಸಿರು ಬರುತ್ತಿದೆ.) ಗರುಡನಿಂದ ಸರ್ಪಗಳೆಲ್ಲವೂ ಅಪಹೃತವಾಗಲಾಗಿ, ಶೂನ್ಯವಾದ ಪ್ರಕ್ಷುಬ್ಧವಾದ ಸರೋವರದಂತೆಯೂ–ಅರಾಜಕತೆಯ ಕಾರಣದಿಂದ ಶೋಭಾಹೀನಳಾದ ರಾಜ್ಯಲಕ್ಷ್ಮಿಯುಳ್ಳ (ಶತ್ರುಗಳು ಲೂಟಿಮಾಡಿದ ಐಶ್ವರ್ಯವುಳ್ಳ) ಸಾಮ್ರಾಜ್ಯದಂತೆಯೂ–ವೀರರಿಂದ ಬರಿದುಮಾಡಲ್ಪಟ್ಟ ಮದ್ಯದ ಕುಂಭದಂತೆಯೂ– ಈ ಕಾಮ್ಯಕವನವು ನನಗಿಂದು ಶೂನ್ಯವಾಗಿ ಕಾಣುತ್ತಿದೆ."

ಜನಮೇಜಯ! ಯುಧಷ್ಠಿರನು ಹೀಗೆಂದು ಹೇಳಿದೊಡನೆಯೇ ಪಂಚಪಾಂಡವರೂ ವಾಯುವೇಗವನ್ನೂ ಮೀರಿಸುವ ಗತಿಯುಳ್ಳ, ಸಿಂಧೂ ದೇಶದ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ದಿವ್ಯರಥಗಳಲ್ಲಿ ಕುಳಿತು ಆಶ್ರಮಕ್ಕೆ ಬಹುಶೀಘ್ರವಾಗಿ ಆಗಮಿಸಿದರು. ಮಾರ್ಗದಲ್ಲಿ ಬರುತ್ತಿರುವಾಗ ಅವರ ವಾಮಪಾರ್ಶ್ವದಲ್ಲಿ ಗುಳ್ಳೇನರಿಯೊಂದು ಗಟ್ಟಿಯಾಗಿ ಕಿರುಚಿಕೊಳ್ಳುತ್ತಿತ್ತು. ಅದನ್ನು ಗಮನಿಸಿದ ಯುಧಿಷ್ಠಿರನು ಭೀಮಾರ್ಜುನರನ್ನು ಕುರಿತು ಹೇಳಿದನು:

"ಭೀಮಸೇನ! ನಮ್ಮ ಎಡಗಡೆಯಲ್ಲಿ ವಿಕಾರವಾಗಿ ಅರುಚುತ್ತಿರುವ ಗುಳ್ಳೇನರಿಯು ಪ್ರಾಣಿವರ್ಗದಲ್ಲಿಯೇ ಬಹಳ ಕೀಳುಮಟ್ಟದ ಪ್ರಾಣಿಯಾಗಿರುತ್ತದೆ. ಇದು ನಮ್ಮ ರಥಕ್ಕೆ ಅಭಿಮುಖವಾಗಿ ಎಡಭಾಗದಲ್ಲಿ ನಿಂತು ಧ್ವನಿಮಾಡುತ್ತಿರುವುದನ್ನು ನೋಡಿದರೆ ಪಾಪಿಷ್ಠರಾದ ಕುರುರಾಜಕುಮಾರರು ನಮ್ಮನ್ನು ನಿರ್ಲಕ್ಷಿಸಿ ತಮ್ಮ ಕುಟಿಲೋಪಾಯಗಳಿಂದ ನಮ್ಮನ್ನು ಬಾಧೆಪಡಿಸಲು ಪ್ರಾರಂಭಿಸಿಬಿಟ್ಟಿದ್ದಾರೆಂದು ಬಹುಸ್ಪಷ್ಟವಾಗಿ ಕಾಣುತ್ತಿದೆ."

ಜನಮೇಜಯ! ಇದೇ ಮುಂತಾಗಿ ಮಾತನಾಡಿಕೊಂಡು ಪಾಂಡವರು

ತಮ್ಮ ಬೇಟೆಯನ್ನು ಮುಗಿಸಿ ಆಶ್ರಮದ ಬಳಿಗೆ ಬಂದು ರಥದಿಂದಿಳಿದರು. ಆಶ್ರಮದ ಹೊರಭಾಗದಲ್ಲಿ ದ್ರೌಪದಿಯ ಪ್ರಿಯಸಖಿಯಾದ ಧಾತ್ರೇಯಿಯು ಬಿಕ್ಕಿ-ಬಿಕ್ಕಿ ಅಳುತ್ತಿರುವುದನ್ನು ಕಂಡರು. ಒಡನೆಯೇ ಸಾರಥಿಯಾದ ಇಂದ್ರಸೇನನು ರಥದಿಂದಿಳಿದು ಉದ್ವಿಗ್ನನಾಗಿ ಅವಳ ಸಮೀಪಕ್ಕೆ ಹೋಗಿ ಅಳುತ್ತಿದ್ದ ಧಾತ್ರೇಯಿಯನ್ನು ಪ್ರಶ್ನಿಸಿದನು : "ಧಾತ್ರೇಯಿ! ನೆಲದ ಮೇಲೆ ಬಿದ್ದುಕೊಂಡು ಹೀಗೇಕೆ ಬಿಕ್ಕಿ-ಬಿಕ್ಕಿ ಅಳುತ್ತಿರುವೆ? ನಿನ್ನ ಮುಖ



ವೇಕೆ ಇಷ್ಟು ಕಾಂತಿಹೀನವಾಗಿದೆ? ಮುಖವು ಬಾಡಿಹೋಗಿದೆ. ಬಹುದೀನ ಳಂತೆ ಕಾಣುತ್ತಿರುವೆ. ಪಂಚಪಾಂಡವರಿಗೂ ಎರಡನೆಯ ಪ್ರಾಣರೂಪಳಾದ ಅನುಪಮಸುಂದರಿಯಾದ ದ್ರೌಪದಿಯನ್ನು ಕ್ರೂರಿಗಳಾದ ಯಾರೊಬ್ಬರೂ ತೊಂದರೆಪಡಿಸಿಲ್ಲ ತಾನೇ? ಧರ್ಮರಾಜನು ದ್ರೌಪದಿಯ ವಿಷಯದಲ್ಲಿ

ಎಷ್ಟೊಂದು ತಪಿಸುತ್ತಿರುವನೆಂದರೆ ದ್ರೌಪದಿಯು ಪಾತಾಳಕ್ಕೆ ಹೋಗಿದ್ದರೂ–ಸ್ವರ್ಗಕ್ಕೇ ಹೋಗಿದ್ದರೂ–ಸಮುದ್ರದ ತಳಭಾಗದಲ್ಲಿ ಕಾರಣಾಂತರದಿಂದ ಸೇರಿಕೊಂಡಿದ್ದರೂ ತನ್ನ ಅನುಜರೊಡನೆ ನಿಮಿಷಮಾತ್ರದಲ್ಲಿ ಅಲ್ಲಿಗವನು ಧಾವಿಸುವನು.

ಈ ನನ್ನ ಒಡೆಯರು ಪರಾಜಯವೆಂಬುದನ್ನೇ ಅರಿಯದವರಾಗಿರುತ್ತಾರೆ. ಎಂತಹ ಕ್ಲೇಶವನ್ನಾದರೂ ಸಹಿಸಿಕೊಳ್ಳುವ ಸಾಮರ್ಥ್ಯವು ಇವರಿಗಿರುವುದು. ಪಾಂಡವರ ಶತ್ರುವೆಂದು ಹೇಳಿಸಿಕೊಂಡವನು ಎಂದಾದರೊಂದು ದಿನ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಪಾಂಡವರ ಶತ್ರುಗಳಿಗೆ ಖಂಡಿತವಾಗಿಯೂ ಉಳಿಗಾಲವಿಲ್ಲ. ಇಂತಹವರ ಪ್ರಾಣಸಮಳಾದ ಇಷ್ಟತಮೆಯಾದ ಪತ್ನಿಯನ್ನು–ಅನರ್ಘವಾದ ರತ್ನವನ್ನು ಅಪಹರಿಸುವ ರೀತಿಯಲ್ಲಿ ಯಾವ ಮೂಢನು ಅಪಹರಿಸಿಕೊಂಡು ಹೋಗಿರುತ್ತಾನೆ? ಅವಳನ್ನು ಅಪಹರಿಸಿದವನಿಗೆ ಪಾಂಡವರು ಅವಳ ರಕ್ಷಕರೆಂದಾಗಲೀ ಮತ್ತು ಅವಳು ಪಾಂಡವರ ಹೃದಯಮೂರ್ತಿಯೆಂದಾಗಲೀ ತಿಳಿದಿಲ್ಲವೆಂದು ತೋರುತ್ತದೆ. ಇಂದಿವರ ನಿಶಿತವಾದ ಬಾಣಗಳು ರಭಸದಿಂದ ಅಪಹಾರಕನ ಹೃದಯವನ್ನು ಭೇದಿಸಿಕೊಂಡು ಭೂಮಿಯೊಳಗೆ ಹೋಗಿ ಸೇರಿಕೊಳ್ಳುತ್ತವೆ. ನೀನಿನ್ನು ಅಳುವುದನ್ನು ನಿಲ್ಲಿಸು, ಧಾತ್ರೇಯಿ! ನಿನ್ನ ಒಡತಿಯಾದ ಕೃಷ್ಣೆಯು ಇಂದೇ ಆಶ್ರಮಕ್ಕೆ ಹಿಂದಿರುಗುತ್ತಾಳೆ. ಈ ಕುಂತೀಪುತ್ರರು ಈಗಲೇ ಅವಳ ಅಪಹಾರಕನ ಬೆನ್ನಟ್ಟಿ ಹೋಗಿ ಅವನನ್ನು ಸಂಹರಿಸಿ ದ್ರೌಪದಿಯನ್ನು ಆಶ್ರಮಕ್ಕೆ ಕರೆತರುತ್ತಾರೆ."

ಜನಮೇಜಯ! ಇಂದ್ರಸೇನನು ಧಾತ್ರೇಯಿಗೆ ಈ ರೀತಿ ಹೇಳಿದ ನಂತರ ಧಾತ್ರೇಯಿಯು ತನ್ನ ಕಣ್ಣೀರನ್ನು ಸೆರಗಿನಿಂದ ಒರೆಸಿಕೊಳ್ಳುತ್ತಾ ಸಾರಥಿಯಾದ ಇಂದ್ರಸೇನನನ್ನು ಕುರಿತು ಹೇಳಿದಳು :

"ಇಂದ್ರಸೇನ! ಇಂದ್ರನಿಗೆ ಸಮಾನರಾದ ಐವರು ಪಾರ್ಥರನ್ನೂ ನಿರ್ಲಕ್ಷಿಸಿ ಜಯದ್ರಥನು ಬಲಾತ್ಕಾರದಿಂದ ದ್ರೌಪದಿಯನ್ನು ಕರೆದುಕೊಂಡು ಹೋದನು. ಆದರೆ ಅವನಿನ್ನೂ ಹೆಚ್ಚು ದೂರ ಹೋಗಿರಲಾರನು. ಅವನ ರಥಚಕ್ರಗಳ ಚಿಹ್ನೆಗಳು ಇನ್ನೂ ಅಳಿಸಿಹೋಗದೇ ಈ ಮಾರ್ಗದಲ್ಲಿ ಸ್ಪಷ್ಟವಾಗಿ ಕಾಣುತ್ತಿವೆ. ರಥವು ಸುಗಮವಾಗಿ ಸಾಗಿಹೋಗಲು ಅಡ್ಡಲಾಗಿದ್ದ

ವೃಕ್ಷಗಳನ್ನು ದಾರಿಯುದ್ದಕ್ಕೂ ಮುರಿದುಹಾಕಿದ್ದಾರೆ. ಹಾಗೆ ಮುರಿದು ಬಿದ್ದಿರುವ ಕೊಂಬೆಗಳಿನ್ನೂ ಬಾಡಿರುವುದಿಲ್ಲ. ಆದುದರಿಂದ ನಿಮ್ಮ ರಥಗಳನ್ನು ಕೂಡಲೇ ಆ ಕಡೆಗೆ ತಿರುಗಿಸಿ ಪ್ರಯಾಣಮಾಡಿರಿ. ಇಂದ್ರನಿಗೆ ಸಮಾನವಾದ ಶಕ್ತಿ-ಸಾಮರ್ಥ್ಯಗಳನ್ನು ಹೊಂದಿರುವ ನೀವು ಈ ಕೂಡಲೇ ದಿವ್ಯವಾದ ಧನುಸ್ಸುಗಳನ್ನೂ, ಬತ್ತಳಿಕೆಗಳನ್ನೂ, ಕವಚಗಳನ್ನೂ ಧರಿಸಿದವರಾಗಿ ರಥದಲ್ಲಿ ಕುಳಿತು ಶೀಘ್ರವಾಗಿ ಪ್ರಯಾಣಮಾಡಿರಿ. ಕಾಲವು ಮೀರಿಬಿಟ್ಟರೆ ಜಯದ್ರಥನು ದ್ರೌಪದಿಯನ್ನು ನಾನಾರೀತಿಯಾಗಿ ಬೆದರಿಸಿ ತನ್ನ ವಶಳಾಗುವಂತೆ ಮಾಡಲು ಪ್ರಯತ್ನಿಸಬಹುದು. ಶಕ್ತಿಹೀನಳಾದ ದ್ರೌಪದಿಯು ಅವನ ಬಲಾತ್ಕಾರಕ್ಕೆ ಮಣಿಯುವಂತಾಗಲೂಬಹುದು. ಹಾಗೇನಾದರೂ ಆದರೆ ಮಂತ್ರಪೂತವಾದ ಹವಿಸ್ಸನ್ನು ಬೂದಿಯ ಮೇಲೆ ಹೋಮಮಾಡಿದಂತಾಗುತ್ತದೆ. ಆದುದರಿಂದ ನೀವೀಗಲೇ ಶೀಘ್ರವಾಗಿ ಪ್ರಯಾಣಮಾಡಿರಿ. ಜಯದ್ರಥನು ದ್ರೌಪದಿಯ ಮೇಲೆ ಕೈಮಾಡಲು ಖಂಡಿತವಾಗಿಯೂ ಅವಕಾಶವನ್ನು ಕೊಡಬಾರದು. ಕಾಲ ಮೀರಿದಲ್ಲಿ ತುಷಾಗ್ನಿಯಲ್ಲಿ ಹೋಮಮಾಡಿದ ಮಂತ್ರಪೂತವಾದ ಆಜ್ಯದಂತೆಯೂ–ಶ್ಮಶಾನದಲ್ಲಿ ಹಾಕಿದ ಪುಷ್ಪಮಾಲಿಕೆಯಂತೆಯೂ–ಆಗಿಬಿಡುತ್ತದೆ. ಪುರೋಹಿತರ ಅಲಕ್ಷ್ಯದಿಂದಾಗಿ ದಿವ್ಯವಾದ ಸೋಮರಸವನ್ನು ನಾಯಿಯು ಚಪ್ಪರಿಸಿದಂತಾಗಿಬಿಟ್ಟೀತು! ಶೃಗಾಲವೊಂದು ಅರಣ್ಯದಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಾ ನಯನಮನೋಹರವಾದ ಕಮಲವಿರುವ ಕೊಳವನ್ನು ಕದಡಿಹಾಕಿದಂತಾಗಕೂಡದು. ಸುಕೋಮಲವಾದ ಮೂಗಿನಿಂದಲೂ ಕಮಲದಳಗಳಂತೆ ವಿಶಾಲವಾಗಿರುವ ನೇತ್ರಗಳಿಂದಲೂ ಕೂಡಿರುವ, ಚಂದ್ರನಿಗೆ ಸಮಾನವಾದ ಮುಖಕಾಂತಿಯನ್ನು ಹೊಂದಿರುವ ಪಾಂಡವರ ಪತ್ನಿಯ ಮುಖವನ್ನು–ಶುನಕವೊಂದು ಯಜ್ಞದ ಪುರೋಡಾಶವನ್ನು ನೆಕ್ಕಿಬಿಡುವಂತೆ ಅಧಮರಾರಾದರೂ ಸ್ಪರ್ಶಿಸಿಯಾರು! ಅದೇ ದಾರಿಯನ್ನು ಹಿಡಿದು ಪ್ರಯಾಣಮಾಡಿರಿ. ಕಾಲವು ಮಿಂಚಿಹೋಗದಂತೆ ಎಚ್ಚರವಹಿಸಿರಿ. ಆದಷ್ಟು ಶೀಘ್ರವಾಗಿ ಸೈಂಧವನನ್ನು ತಡೆಗಟ್ಟಿರಿ."

ಧಾತ್ರೇಯಿಯು ಸ್ವಲ್ಪ ಮೀರಿ ಮಾತನಾಡುತ್ತಿರುವಳೆಂದು ಯುಧಿಷ್ಠಿರನಿಗನಿಸಿತು. ಪತಿವ್ರತೆಯಾದ, ಅಗ್ನಿಕನ್ಯೆಯಾದ ದ್ರೌಪದಿಯ ವಿಷಯದಲ್ಲಿ ಎಳ್ಳಷ್ಟಾದರೂ ಅಪನಂಬಿಕೆಯು ಪಾಂಡವರಿಗೆ ಯಾವಾಗಲೂ ಇರಲಿಲ್ಲ.

ಒಂದು ವೇಳೆ ಸೈಂಧವನು ಬಲಾತ್ಕರಿಸಿದರೆ ಅವಳು ಪ್ರಾಣವನ್ನಾದರೂ ತೊರೆಯತಕ್ಕವಳೇ ಹೊರತು ಅವನಿಗೆ ವಶಳಾಗತಕ್ಕವಲ್ಲ. ಮೇಲಾಗಿ ಅವಳು ಕೃಷ್ಣನ ನೆಚ್ಚಿನ ಭಕ್ತೆ. ಅಂತಹ ಸಂದರ್ಭದಲ್ಲಿ ಕೃಷ್ಣನೂ ದ್ರೌಪದಿಯನ್ನು ಖಂಡಿತವಾಗಿಯೂ ಕೈಬಿಡಲಾರನು.

ಯುಧಿಷ್ಠಿರನು ಚೇಟಿಯನ್ನು ಕುರಿತು ಸ್ವಲ್ಪ ಗಡುಸಾಗಿಯೇ ಹೇಳಿದನು: "ನೀನಿನ್ನು ಆಶ್ರಮದೊಳಗೆ ಹೋಗು, ಧಾತ್ರೇಯಿ! ನಿನ್ನ ನಾಲಿಗೆಯನ್ನು ಬಿಗಿಹಿಡಿದುಕೊ. ಇಂತಹ ಕಠಿನವಾದ ಮಾತುಗಳನ್ನು ಮಾತ್ರ ಪುನಃ ಆಡಬೇಡ.

**ರಾಜಾನೋ ವಾ ಯದಿ ವಾ ರಾಜಪುತ್ರಾಃ ।**
**ಬಲೇನ ಮತ್ತಾ ವಞ್ಚನಾಂ ಪ್ರಾಪ್ನುವನ್ತಿ ॥೨೩॥**

ರಾಜರಾಗಲೀ, ರಾಜಕುಮಾರರಾಗಲೀ–ಅಧಿಕಾರದ ದರ್ಪವು ಬಂದಿತೆಂದರೆ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಅದರಿಂದ ಕೆಟ್ಟ ಪರಿಣಾಮವನ್ನು ಅನುಭವಿಸುವುದು ಸ್ವಾಭಾವಿಕವಾಗಿಯೇ ಇದೆ."

ಜನಮೇಜಯ! ಹೀಗೆಂದು ಧಾತ್ರೇಯಿಯೊಡನೆ ಹೇಳಿದನಂತರ ಐವರೂ ಅವಳು ಸೂಚಿಸಿದ ಹಾದಿಯನ್ನೇ ಹಿಡಿದು ಹೊರಟರು. ಮಾರ್ಗದಲ್ಲಿ ಐವರೂ–ವಿಷಸರ್ಪವು ದೀರ್ಘವಾಗಿ ನಿಟ್ಟುಸಿರುಬಿಡುವಂತೆ–ನಿಟ್ಟುಸಿರುಬಿಡುತ್ತಾ ತಮ್ಮ ಕೈಗಳಲ್ಲಿದ್ದ ಮಹಾಧನುಸ್ಸುಗಳ ಶಿಂಜಿನಿಗಳನ್ನು ಸೆಳೆದು ಟಂಕಾರಧ್ವನಿಮಾಡುತ್ತಾ ಹೋಗುತ್ತಿದ್ದರು. ಸ್ವಲ್ಪದೂರ ಪ್ರಯಾಣಮಾಡಿದನಂತರ ಜಯದ್ರಥನ ಅಶ್ವಸೇನೆಯ ಸಂಘಟ್ಟನೆಯಿಂದ ಉದ್ಭೂತವಾದ ಧೂಳಿನ ರಾಶಿಯು ಅನತಿದೂರದಲ್ಲಿ ಪಾಂಡವರಿಗೆ ಕಾಣಿಸಿತು. ಇನ್ನೂ ಸ್ವಲ್ಪ ಮುಂದೆ ಹೋದನಂತರ ಧೌಮ್ಯರು ಜಯದ್ರಥನ ಸೈನ್ಯದ ಮಧ್ಯದಲ್ಲಿ ನಿಂತು ಭೀಮನ ಕಡೆಗೆ ಮುಖತಿರುಗಿಸಿ ಶೀಘ್ರವಾಗಿ ಬರುವಂತೆ ಕೂಗಿಕೊಳ್ಳುತ್ತಿರುವುದನ್ನೂ ಕಂಡರು. ಒಡನೆಯೇ ಪಾಂಡವರು ಧೌಮ್ಯರಿಗೆ ಹಿಂದಿರುಗುವಂತೆ ಹೇಳಿ, ಬಹುಕುಪಿತರಾಗಿ–ಗಿಡಗಗಳು ಮಾಂಸದ ತುಂಡಿನ ಕಡೆಗೆ ನುಗ್ಗಿಹೋಗುವಂತೆ–ಶತ್ರುಸೈನ್ಯದ ಮೇಲೆ ಬಿದ್ದರು.

ದ್ರೌಪದಿಗೆ ಜಯದ್ರಥನು ಮಾಡಿದ ಅಪಮಾನವನ್ನು ನೆನೆದಂತೆಲ್ಲಾ ಪಾಂಡವರ ಕೋಪವು ವೃದ್ಧಿಹೊಂದುತ್ತಿದ್ದಿತು. ರಥದಲ್ಲಿ ಕುಳಿತಿದ್ದ ಜಯದ್ರಥ

ನನ್ನೇ ಪ್ರತ್ಯಕ್ಷವಾಗಿ ಕಂಡಾಗ ಮತ್ತು ಅದೇ ರಥದಲ್ಲಿಯೇ ದ್ರೌಪದಿಯಿದ್ದು ದನ್ನೂ ನೋಡಿದಾಗ ಅವರ ಕೋಪವು ಮಿತಿಮೀರಿತು. ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರು ಜಯದ್ರಥನ ರಥವನ್ನು ನಾಲ್ಕು ದಿಕ್ಕು ಗಳಿಂದಲೂ ಆಕ್ರಮಿಸಿ ನಿಂತು–'ಪಾಪಿಷ್ಠನೇ! ನಿಲ್ಲು-ನಿಲ್ಲು'–ಎಂದು ಹೇಳುತ್ತಾ ಸಿಂಹನಾದಮಾಡಿದರು. ಅವರನ್ನು ಕಂಡೊಡನೆಯೇ ಜಯದ್ರಥನಿಗೆ ಮುಂದೆ ಯಾವ ಮಾರ್ಗದಿಂದ ಪ್ರಯಾಣಮಾಡಬೇಕೆಂಬುದರ ಅರಿವೇ ಇಲ್ಲವಾಯಿತು. ಶತ್ರುಗಳಿಗೆ ದಿಗ್ಭ್ರಮೆಯಾಯಿತು.

೨೬೯ನೆಯ ಅಧ್ಯಾಯವು ಮುಗಿಯಿತು.

೨೭೦ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ದ್ರೌಪದಿಯು ಜಯದ್ರಥನ ಮುಂದೆ ಪಾಂಡವರ ಪರಾಕ್ರಮವನ್ನು ವರ್ಣನೆಮಾಡಿದುದು

ಜನಮೇಜಯ! ಯುಧಿಷ್ಠಿರ-ಭೀಮಾದಿಗಳು ಸೈಂಧವನನ್ನೂ ಅವನ ಸೇನೆಯನ್ನೂ ಆಕ್ರಮಿಸಲಾಗಿ ಅಲ್ಲಿದ್ದ ಶತ್ರುರಾಜರು ಘೋರಗರ್ಜನೆ ಮಾಡಿ ದರು. ಪಾಂಡವರೈವರ ರಥಧ್ವಜಗಳನ್ನೂ ನೋಡಿದನಂತರ ದುರಾತ್ಮನಾದ ಜಯದ್ರಥನಿಗೆ ಭಯವುಂಟಾಯಿತು. ಕಳೆಗುಂದಿದ ಸೈಂಧವನು ತನ್ನ ರಥ ದಲ್ಲಿಯೇ ಕುಳಿತಿದ್ದ ಕಾಂತಿಮತಿಯಾದ ದ್ರೌಪದಿಯನ್ನು ಕೇಳಿದನು : "ಕೃಷ್ಣೇ! ನಮಗೆದುರಾಗಿ ರಥಗಳಲ್ಲಿ ಕುಳಿತು ಬರುತ್ತಿರುವ ಆ ಐವರೂ ನಿನ್ನ ಪತಿಗಳಿರಬಹುದೆಂದು ಭಾವಿಸುತ್ತೇನೆ. ಆ ಐವರಲ್ಲಿ ಯಾರು ಯಾರು ಯಾವ ಯಾವ ರಥದಲ್ಲಿ ಕುಳಿತಿರುವರೆಂಬುದನ್ನು ವಿವರಿಸಿ ಹೇಳು. ನಿನಗೆ ಅವರ ಲಕ್ಷಣಗಳೆಲ್ಲವೂ ಚೆನ್ನಾಗಿ ತಿಳಿದಿರುವುದು. ಅವರ ರೂಪ-ಲಕ್ಷಣ-ಪರಾಕ್ರಮಗಳನ್ನೂ ಸಹ ವಿಶದವಾಗಿ ಹೇಳು."

"ಸೈಂಧವ! ಈಗ ಅವರ ವಿಷಯವನ್ನು ತಿಳಿದುಕೊಂಡು ನೀನೇನು ಮಾಡುವೆ? ದೀರ್ಘಾಯುಷ್ಯಕ್ಕೆ ಕಂಟಕಕರವಾದ ಘೋರಕರ್ಮವನ್ನು ಮಾಡಿಬಿಟ್ಟಿರುವೆ. ನನ್ನ ಪತಿಗಳು ಬಂದಾಯಿತು. ಈ ಅಸಂಖ್ಯಾತಸೈನ್ಯದಲ್ಲಿ ಒಬ್ಬನು ಉಳಿಯುವುದೂ ಸಂಶಯವೇ ಸರಿ. ಆದರೂ ಮರಣೋನ್ಮುಖ

ನಾಗಿರುವವನು ತನ್ನ ಆಶಯವನ್ನೇನಾದರೂ ವ್ಯಕ್ತಪಡಿಸಿದರೆ ಆಗ ಅವನ ಆಶೆಯನ್ನು ಸರ್ವಪ್ರಯತ್ನದಿಂದಲೂ ಪೂರೈಸಿಕೊಡಬೇಕೆಂಬುದೂ ಒಂದು ಧರ್ಮ. ಈ ಕಾರಣದಿಂದ ನಾನು ನೀನೀಗ ಕೇಳಿದುದಕ್ಕೆ ಸಮಂಜಸವಾದ ಉತ್ತರವನ್ನೇ ಕೊಡುತ್ತೇನೆ. ಮೇಲಾಗಿ ಧರ್ಮಾತ್ಮನಾದ ಯುಧಿಷ್ಠಿರನು ತನ್ನ ಅನುಜರೊಡನೆ ಬಂದಿರುವುದನ್ನು ಕಂಡನಂತರ ನನಗೆ ನಿನ್ನ ದೆಸೆಯಿಂದ ಕಿಂಚಿತ್ತಾದರೂ ಭಯವೆಂಬುದೂ ಇಲ್ಲ ; ವ್ಯಥೆಯೂ ಇಲ್ಲ. ಆದುದರಿಂದ ನಾನು ಹೇಳಲಿರುವ ನನ್ನ ಪತಿಗಳ ರೂಪ-ಗುಣ-ಲಕ್ಷಣಗಳನ್ನು ಕೇಳು :

**ಯಸ್ಯ ಧ್ವಜಾಗ್ರೇ ನದತೋ ಮೃದಙ್ಗೌ**
**ನನ್ದೋಪನನ್ದೌ ಮಧುರೌ ಯುಕ್ತರೂಪೌ ।**
**ಏತಂ ಸ್ವಧರ್ಮಾರ್ಥವಿನಿಶ್ಚಯಜ್ಞಂ**
**ಸದಾ ಜನಾಃ ಕೃತ್ಯವನ್ತೋಽನುಯಾನ್ತಿ ॥೬॥**

**ಯ ಏಷ ಜಾಮ್ಬೂನದಶುದ್ಧಗೌರಃ**
**ಪ್ರಚಣ್ಡಘೋಣಸ್ತನುರಾಯತಾಕ್ಷಃ ।**
**ಏತಂ ಕುರುಶ್ರೇಷ್ಠತಮಂ ವದನ್ತಿ**
**ಯುಧಿಷ್ಠಿರಂ ಧರ್ಮಸುತಂ ಪತಿಂ ಮೇ ॥೭॥**

**ಅಪ್ಯೇಷ ಶತ್ರೋಃ ಶರಣಾಗತಸ್ಯ**
**ದದ್ಯಾತ್ಪ್ರಾಣಾನ್ಧರ್ಮಚಾರೀ ನೃವೀರಃ ।**
**ಪರೇಹ್ಯೇನಂ ಮೂಢ ಜವೇನ ಭೂತಯೇ**
**ತ್ವಮಾತ್ಮನಃ ಪ್ರಾಞ್ಜಲಿರ್ನ್ಯಸ್ತಶಸ್ತ್ರಃ ॥೮॥**

ನೋಡು, ಸೈಂಧವ! ಅಲ್ಲಿ ಕಾಣುವ ರಥದ ಧ್ವಜಾಗ್ರದಲ್ಲಿ ಮನೋಹರವಾದ ನಂದೋಪನಂದಗಳೆಂಬ ಎರಡು ಮೃದಂಗಗಳು ಸುಮಧುರವಾಗಿ ಶಬ್ದಮಾಡುತ್ತಿವೆ. ಆ ರಥದಲ್ಲಿ ಕುಳಿತಿರುವವನೇ ಯುಧಿಷ್ಠಿರ. ಅವನು ತಾನು ಮಾಡುವ ಸರ್ವಕಾರ್ಯಗಳನ್ನೂ ಧರ್ಮದ ಹಿನ್ನೆಲೆಯಲ್ಲೇ ಮಾಡುತ್ತಾನೆ. ಅಥವಾ ಅವನು ಮಾಡುವ ಪ್ರತಿಯೊಂದು ಕ್ರಿಯೆಯೂ ಧರ್ಮಸಮ್ಮತವಾಗಿಯೇ ಇರುತ್ತದೆ.

ಅವನಿಗೆ ಧರ್ಮದ ನಿಶ್ಚಯಜ್ಞಾನವಿದೆ. ಆದುದರಿಂದ ವೇದವಿಹಿತ

ಕರ್ಮಾಚರಣೆಯುಳ್ಳವರು ಯಾವಾಗಲೂ ಅವನ ಜೊತೆಯಲ್ಲಿಯೇ ಇರುತ್ತಾರೆ. ಅನೇಕಾನೇಕ ಋಷಿ-ಮಹರ್ಷಿಗಳೂ ಅವನಿಂದ ಧರ್ಮಸೂಕ್ಷ್ಮವನ್ನು ತಿಳಿಯಲು ಅಥವಾ ಅವನಿಗೆ ತಿಳಿಯಹೇಳಲು ಪದೇ ಪದೇ ಆಶ್ರಮಕ್ಕೆ ಬರುತ್ತಲೇ ಇರುತ್ತಾರೆ. ಅವನದು ಅಪರಂಜಿಯ ಬಣ್ಣ; ಸ್ವಲ್ಪ ನೀಳವಾದ ಮೂಗು; ವಿಶಾಲವಾದ ಕಣ್ಣುಗಳು ; ಕೃಶವಾದ ದೇಹ. ಅವನು ಕುರುರಾಜಪುತ್ರರಲ್ಲಿ ಶ್ರೇಷ್ಠತಮನಾದವನು. ಧರ್ಮಪುತ್ರನಾದ ಅವನನ್ನು ಯುಧಿಷ್ಠಿರನೆಂದೂ ಕರೆಯುವರು. ಶರಣಾಗತನಾಗಿ ಬಂದವನು ಶತ್ರುವಾದರೂ ಸಹ ಧರ್ಮಚಾರಿಯಾದ, ನೃಪಶ್ರೇಷ್ಠನಾದ ಧರ್ಮರಾಜನು ಪ್ರಾಣಭಿಕ್ಷೆಯನ್ನು ಕೊಟ್ಟುಬಿಡುತ್ತಾನೆ. ಶತ್ರುವಾಗಿ ತನಗೆಷ್ಟೇ ಅಪಕಾರವನ್ನು ಮಾಡಿದ್ದರೂ ಕ್ಷಣಮಾತ್ರದಲ್ಲಿ ಮರೆತು ದಯೆತೋರುತ್ತಾನೆ. ಮೂಢ! ಈಗಲೂ ನಿನಗೇನಾದರೂ ಪ್ರಾಣವುಳಿಸಿಕೊಳ್ಳುವ ಆಶಯವಿರುವುದಾದರೆ ಈ ಕೂಡಲೇ ನಿನ್ನ ಆಯುಧವನ್ನು ಕೆಳಗಿಟ್ಟು ಓಡಿಹೋಗಿ ಕೈಜೋಡಿಸಿ ನನ್ನ ಪತಿಯಿಂದ ದಯಾಭಿಕ್ಷೆಯನ್ನು ಯಾಚಿಸು.

ಅಥಾಪ್ಯೇನಂ ಪಶ್ಯಸಿ ಯಂ ರಥಸ್ಥಂ
ಮಹಾಭುಜಂ ಸಾಲಮಿವ ಪ್ರವೃದ್ಧಮ್ ।
ಸಂದಷ್ಟೌಷ್ಠಂ ಭ್ರುಕುಟೀಸಂಹತಭ್ರುವಂ
ವೃಕೋದರೋ ನಾಮ ಪತಿರ್ಮಮೈಷಃ ॥೯॥

ಆಜಾನೇಯಾ ಬಲಿನಃ ಸಾಧು ದಾನ್ತಾ
ಮಹಾಬಲಾಃ ಶೂರಮುದಾವಹನ್ತಿ ।
ಏತಸ್ಯ ಕರ್ಮಾಣ್ಯತಿಮಾನುಷಾಣಿ
ಭೀಮೇತಿ ಶಬ್ದೋಽಸ್ಯ ಗತಃ ಪೃಥಿವ್ಯಾಮ್ ॥೧೦॥

ನಾಸ್ಯಾಪರಾದ್ಧಾಃ ಶೇಷಮವಾಪ್ನುವನ್ತಿ
ನಾಯಂ ವೈರಂ ವಿಸ್ಮರತೇ ಕದಾಚಿತ್ ।
ವೈರಸ್ಯಾನ್ತಂ ಸಂವಿಧಾಯೋಪಯಾತಿ
ಪಶ್ಚಾಚ್ಛಾನ್ತಿಂ ನ ಚ ಗಚ್ಛತ್ಯತೀವ ॥೧೧॥

ಯುಧಿಷ್ಠಿರನ ರಥದ ಪಕ್ಕದ ರಥದಲ್ಲಿ ಕುಳಿತಿರುವ, ದೀರ್ಘಬಾಹುವಾದ, ಶಾಲವೃಕ್ಷದಂತೆ ಎತ್ತರವಾದ ಶರೀರದಿಂದ ಕೂಡಿರುವ, ಬಾರಿ-

ಬಾರಿಗೂ ತುಟಿಯನ್ನು ಕಚ್ಚುತ್ತಿರುವ, ಕೋಪಾವೇಶದಿಂದ ಹುಬ್ಬುಗಂಟಿಕ್ಕಿ ಹುಬ್ಬುಗಳೆರಡನ್ನೂ ಒಗ್ಗೂಡಿಸಿರುವ ನನ್ನ ಪತಿಯಾದ ವೃಕೋದರನನ್ನು ನೋಡು. ಆಜಾನೇಯಗಳಾದ (ಒಳ್ಳೆಯ ಜಾತಿಯ), ಬಹುಬಲಿಷ್ಠವಾದ, ವಾಯುವೇಗಗತಿಯುಳ್ಳ ಕುದುರೆಗಳು ಅವನ ರಥಕ್ಕೆ ಕಟ್ಟಲ್ಪಟ್ಟಿವೆ. ಅವನು ಮಾಡುವ ಕಾರ್ಯಗಳೆಲ್ಲವೂ ಅತಿಮಾನುಷವಾದುವುಗಳು. (ಮನುಷ್ಯಶಕ್ತಿಗೆ ಮೀರಿದುವುಗಳು.)

ಆದುದರಿಂದಲೇ ಅವನು ಪ್ರಪಂಚದಲ್ಲಿ ಭೀಮನೆಂದು ಕರೆಯಲ್ಪಟ್ಟಿದ್ದಾನೆ. ಅವನಿಗೆ ಅಪರಾಧವನ್ನೆಸಗಿದವರಾರೂ ಜೀವದಿಂದುಳಿಯಲಾರರು. ಇತರರು ಮಾಡಿದ ಅಪಕಾರವನ್ನೂ, ಕೊಟ್ಟ ಉಪಟಳವನ್ನೂ ಭೀಮನು ಎಂದಿಗೂ ಮರೆಯತಕ್ಕವನಲ್ಲ. ಅವನಿಗೆ ವೈರದ ಅಂತ್ಯವೆಂಬುದೇ ಇಲ್ಲ. ಮರಣಪರ್ಯಂತವಾಗಿ ಮಾತ್ರವೇ ವೈರವಿರತಕ್ಕದ್ದೆಂದೂ–ಶತ್ರುವು ಮರಣವನ್ನು ಹೊಂದಿದನಂತರ ವೈರವನ್ನು ಸಾಧಿಸಬಾರದೆಂದೂ ಹಿರಿಯರು ಹೇಳುತ್ತಾರೆ. ಆದರೆ ಭೀಮನು ಹಾಗಲ್ಲ. ವೈರಿಯ ವಿನಾಶಮಾಡಿಯೇ ಇವನ ಹೃದಯದ ಕೋಪವು ಶಾಂತವಾಗುತ್ತದೆ. ಆದರೂ ಶತ್ರುವು ಮಾಡಿದ ಅಪಕಾರವನ್ನೂ, ಕೊಟ್ಟ ಪೀಡೆಯನ್ನೂ ಪದೇ ಪದೇ ಸ್ಮರಿಸುತ್ತಲೇ ಇರುವ ಅವನಿಗೆ ಪೂರ್ಣವಾಗಿ ಮನಶ್ಶಾಂತಿಯೆಂಬುದೇ ಇಲ್ಲ.

ಧನುರ್ಧರಾಗ್ರ್ಯೋ ಧೃತಿಮಾನ್ಯಶಸ್ವೀ
ಜಿತೇನ್ದ್ರಿಯೋ ವೃದ್ಧಸೇವೀ ನೃವೀರಃ ।
ಭ್ರಾತಾ ಚ ಶಿಷ್ಯಶ್ಚ ಯುಧಿಷ್ಠಿರಸ್ಯ
ಧನಂಜಯೋ ನಾಮ ಪತಿರ್ಮಮೈಷಃ ॥೧೨॥

ಯೋ ವೈ ನ ಕಾಮಾನ್ನ ಭಯಾನ್ನ ಲೋಭಾ-
ತ್ತ್ಯಜೇದ್ಧರ್ಮಂ ನ ನೃಶಂಸಂ ಚ ಕುರ್ಯಾತ್ ।
ಸ ಏಷ ವೈಶ್ವಾನರತುಲ್ಯತೇಜಾಃ
ಕುನ್ತೀಸುತಃ ಶತ್ರುಸಹಃ ಪ್ರಮಾಥೀ ॥೧೩॥

ಭೀಮಸೇನನ ರಥದ ಬದಿಯ ಮತ್ತೊಂದು ರಥದಲ್ಲಿ ಕುಳಿತಿರುವವನ ಪರಿಚಯಮಾಡಿಕೊಡುತ್ತೇನೆ. ಅವನು ಧನುರ್ಧರರಲ್ಲಿ ಪರಮಶ್ರೇಷ್ಠ

ನಾದವನು. ಮಹಾಬುದ್ಧಿಶಾಲೀ. ಯಶೋವಂತ. ಜಿತೇಂದ್ರಿಯ. ವೃದ್ಧರ ಅಥವಾ ಹಿರಿಯರ ಸೇವೆಯಲ್ಲಿ ಹೆಚ್ಚಿನ ಆಸಕ್ತಿಯುಳ್ಳವನು. ಇವನನ್ನು ನರನೆಂದೂ, ನರವೀರನೆಂದೂ ಕರೆಯುತ್ತಾರೆ. ಇವನು ಯುಧಿಷ್ಠಿರನಿಗೆ ನೆಚ್ಚಿನ ತಮ್ಮನೂ ಮತ್ತು ಪ್ರಿಯನಾದ ಶಿಷ್ಯನೂ ಆಗಿರುತ್ತಾನೆ. ನನ್ನ ಮೂರನೆಯ ಪತಿಯಾದ ಸುಪ್ರಸಿದ್ಧನಾದ ಧನಂಜಯನೇ ಇವನಾಗಿರುತ್ತಾನೆ. ಇವನು ಸದ್ಗುಣಗಳಿಗೆ ಸಮುದ್ರಪ್ರಾಯನು.

ಕಾಮ-ಲೋಭ-ಭಯಗಳ ಕಾರಣದಿಂದಾಗಿ ಇವನು ಧರ್ಮವನ್ನು ಬಿಡತಕ್ಕವನಲ್ಲ. ಎಂತಹ ಆಪತ್ಕಾಲದಲ್ಲಿಯೂ ಕ್ರೂರಕರ್ಮವನ್ನು (ದಯಾರಹಿತವಾದ ಕಾರ್ಯವನ್ನು) ಮಾಡತಕ್ಕವನಲ್ಲ. ವೈಶ್ವಾನರನಿಗೆ (ಅಗ್ನಿಗೆ) ಸಮಾನವಾದ ತೇಜಸ್ಸಿನಿಂದ ಕೂಡಿರುವ, ಅಜೇಯನಾದ, ಶತ್ರುಗಳನ್ನು ತಡೆದು ನಾಶಪಡಿಸುವ ಸಾಮರ್ಥ್ಯವುಳ್ಳ ಇವನೇ ಕುಂತೀಪುತ್ರನಾದ ಅರ್ಜುನನು.

ಯಃ ಸರ್ವಧರ್ಮಾರ್ಥವಿನಿಶ್ಚಯಜ್ಞೋ
ಭಯಾರ್ತಾನಾಂ ಭಯಹರ್ತಾ ಮನೀಷೀ ।
ಯಸ್ಯೋತ್ತಮಂ ರೂಪಮಾಹುಃ ಪೃಥಿವ್ಯಾಂ
ಯಂ ಪಾಣ್ಡವಾಃ ಪರಿರಕ್ಷನ್ತಿ ಸರ್ವೇ ॥೧೪॥

ಪ್ರಾಣೈರ್ಗರೀಯಾಂಸಮನುವ್ರತಂ ವೈ
ಸ ಏಷ ವೀರೋ ನಕುಲಃ ಪತಿರ್ಮೇ ।

ಅರ್ಜುನನ ರಥದ ಪಕ್ಕದ ರಥದಲ್ಲಿ ಕುಳಿತಿರುವವನೇ ನಕುಲನು. ಇವನು ಸರ್ವಧರ್ಮಾರ್ಥಗಳ ರಹಸ್ಯವನ್ನು ಬಹಳ ಚೆನ್ನಾಗಿ ತಿಳಿದಿರತಕ್ಕವನು. ಭಯಾರ್ತರಾದವರಿಗೆ ಭಯವನ್ನು ಹೋಗಲಾಡಿಸಿ ರಕ್ಷಣೆಯನ್ನು ನೀಡತಕ್ಕವನು. ಸ್ಥಿರಮನಸ್ಕನು. ಮಹಾರೂಪವಂತನು. ಇವನಿಗೆ ಸಮಾನರಾದ ಸುರೂಪವಂತರು ಈ ಪೃಥ್ವಿಯಲ್ಲಿಯೇ ಬೇರೊಬ್ಬರಿಲ್ಲವೆಂದು ಹೇಳುತ್ತಾರೆ. ಇವನನ್ನು ಉಳಿದ ಪಾಂಡವಕುಮಾರರು ಬಹಳ ಎಚ್ಚರಿಕೆಯಿಂದ ಸಂರಕ್ಷಿಸುತ್ತಾರೆ. ಇವನನ್ನು ಅವರು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಭಾವಿಸಿದ್ದಾರೆ. ಇವನೂ ಸಹ ಧರ್ಮಜನ ವಿಷಯದಲ್ಲಿ ಹೆಚ್ಚು ಅನುರಕ್ತನಾಗಿರುತ್ತಾನೆ. ಇವನೇ ನನ್ನ ನಾಲ್ಕನೆಯ ಪತಿ ನಕುಲನು.

ಯಃ ಖಡ್ಗಯೋಧೀ ಲಘುಚಿತ್ರಹಸ್ತೋ
ಮಹಾಂಶ್ಚ ಧೀಮಾನ್ಸಹದೇವೋऽದ್ವಿತೀಯಃ ॥೧೫॥

ಯಸ್ಯಾದ್ಯ ಕರ್ಮ ದ್ರಕ್ಷ್ಯಸೇ ಮೂಢಸತ್ತ್ವ
ಶತಕ್ರತೋರ್ವಾ ದೈತ್ಯಸೇನಾಸು ಸಂಖ್ಯೇ ।
ಶೂರಃ ಕೃತಾಸ್ತ್ರೋ ಮತಿಮಾನ್ಮನಸ್ವೀ
ಪ್ರಿಯಙ್ಕರೋ ಧರ್ಮಸುತಸ್ಯ ರಾಜ್ಞಃ ॥೧೬॥

ಯ ಏಷ ಚನ್ದ್ರಾರ್ಕಸಮಾನತೇಜಾ
ಜಘನ್ಯಜಃ ಪಾಣ್ಡವಾನಾಂ ಪ್ರಿಯಶ್ಚ ।
ಬುದ್ಧ್ಯಾ ಸಮೋ ಯಸ್ಯ ನರೋ ನ ವಿದ್ಯತೇ
ವಕ್ತಾ ತಥಾ ಸತ್ಸು ವಿನಿಶ್ಚಯಜ್ಞಃ ॥೧೭॥

ಸ ಏಷ ಶೂರೋ ನಿತ್ಯಮಮರ್ಷಣಶ್ಚ
ಧೀಮಾನ್ಪ್ರಾಜ್ಞಃ ಸಹದೇವಃ ಪತಿರ್ಮೇ ।
ತ್ಯಜೇತ್ಪ್ರಾಣಾನ್ಪ್ರವಿಶೇದ್ಧವ್ಯವಾಹಂ
ನ ತ್ವೇವೈಷ ವ್ಯಾಹರೇದ್ಧರ್ಮಬಾಹ್ಯಮ್ ।
ಸದಾ ಮನಸ್ವೀ ಕ್ಷತ್ರಧರ್ಮೇ ರತಶ್ಚ
ಕುನ್ತ್ಯಾಃ ಪ್ರಾಣೈರಿಷ್ಟತಮೋ ನೃವೀರಃ ॥೧೮॥

ನಕುಲನ ಪಕ್ಕದಲ್ಲಿಯೇ ಖಡ್ಗಯೋಧಿಯೂ, ಹಸ್ತಲಾಘವವುಳ್ಳವನೂ, ಮೇಧಾವಿಯೂ, ಅದ್ವಿತೀಯವೀರನೂ ಆದ ಸಹದೇವನಿದ್ದಾನೆ. ದೇವೇಂದ್ರನು ತನ್ನ ವಜ್ರಾಯುಧದಿಂದ ಯುದ್ಧದಲ್ಲಿ ದೈತ್ಯರ ಸೈನ್ಯಕೋಟಿಯನ್ನು ನಿರ್ಮೂಲಮಾಡುತ್ತಿದ್ದಂತೆ–ನಿನ್ನ ಸೈನ್ಯದೊಳಗೆ ನುಗ್ಗಿ ಈ ಅಪಾರಸೈನ್ಯವನ್ನೂ ಕ್ಷಣಮಾತ್ರದಲ್ಲಿ ನಿರ್ಮೂಲಮಾಡುವ ಇವನ ಸಾಮರ್ಥ್ಯವನ್ನು ಮುಂದಿನ ಒಂದೆರಡು ಕ್ಷಣಗಳಲ್ಲಿಯೇ ಕಾಣಲಿರುವೆ ಸೈಂಧವ! ಇವನೇ ನನ್ನ ಐದನೆಯ ಪತಿಯಾದ ಸಹದೇವನು. ಇವನು ಮಹಾಶೂರನು. ಅಸ್ತ್ರವಿದ್ಯಾಪಾರಂಗತನು. ಮಹಾಬುದ್ಧಿವಂತನು. ಜಿತೇಂದ್ರಿಯನು. ಹಿರಿಯಣ್ಣನಾದ ಧರ್ಮರಾಜನಿಗೆ ಪ್ರಿಯವಾದ ಕಾರ್ಯ

ವನ್ನು ಮಾಡುವುದರಲ್ಲಿಯೇ ಇವನಿಗೆ ಹೆಚ್ಚಿನ ಆಸಕ್ತಿ. ಚಂದ್ರ-ಸೂರ್ಯರಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಇವನು ಪಾಂಡವರಲ್ಲಿ ಕಡೆಯವನು. ಈ ಕಾರಣದಿಂದಲೇ ಇವನು ಉಳಿದ ಪಾಂಡುಪುತ್ರರಿಗೆ ಬಹುಪ್ರಿಯನಾಗಿರುತ್ತಾನೆ. ಇವನಿಗೆ ಸಮರಾದ ಬುದ್ಧಿವಂತರೇ ಇಲ್ಲವೆಂದೂ ಹೇಳುತ್ತಾರೆ. ಸತ್ಪುರುಷರ ಸಭೆಯಲ್ಲಿ ಧರ್ಮಜಿಜ್ಞಾಸೆಯು ನಡೆಯುವಾಗ ಧರ್ಮಸೂಕ್ಷ್ಮವನ್ನರಿತ ಇವನು ತನ್ನ ನಿಶ್ಚಿತಾಭಿಪ್ರಾಯವನ್ನು ಸ್ಪಷ್ಟವಾಗಿ ಸರ್ವಸಮ್ಮತವಾಗಿ ಹೇಳುತ್ತಾನೆ. ಇವನ ಮಾತನ್ನು ಮಹರ್ಷಿಗಳೂ ಸಹ ಗೌರವಿಸುತ್ತಾರೆ. ಇವನು ಮಹಾಶೂರನು, ಸ್ವಲ್ಪ ಮುಂಗೋಪಿ, ಪ್ರಾಜ್ಞನು. ಪ್ರಾಣವನ್ನಾದರೂ ಬಿಟ್ಟಾನು ; ಅಗ್ನಿಯಲ್ಲಾದರೂ ಪ್ರವೇಶಿಸಿಯಾನು ; ಆದರೆ ಧರ್ಮವಿರುದ್ಧವಾದ ವಿಷಯವನ್ನೆಂದಿಗೂ ಹೇಳುವುದಿಲ್ಲ. ಯಾವಾಗಲೂ ಸ್ಥಿರಬುದ್ಧಿಯಿರುವವನು. ಕ್ಷತ್ರಿಯಧರ್ಮದಲ್ಲಿ ನಿರತನು. ಕುಂತಿಗೆ ತನ್ನ ಪ್ರಾಣಕ್ಕಿಂತಲೂ ಬಹುಪ್ರಿಯವಾದ ಪುತ್ರನು. (ಇವನೂ ಸಹ ನಿನ್ನ ಅಪಾರಸೈನ್ಯವನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡುವ ಸಾಮರ್ಥ್ಯವನ್ನು ಹೊಂದಿರುತ್ತಾನೆ.)

ಒಬ್ಬೊಬ್ಬರಲ್ಲಿಯೂ ಇಷ್ಟೊಂದು ಶೌರ್ಯ-ಪರಾಕ್ರಮಗಳಿರುವಾಗ ಐವರೂ ಒಟ್ಟಾಗಿ ಯುದ್ಧಮಾಡಲು ನಿಂತರೆ ನಿನ್ನ ಸೈನ್ಯದ ಪರಿಣಾಮವೇನಾಗುವುದೆಂಬುದನ್ನು ಹೇಳುವ ಕಾರಣವಿಲ್ಲ. ಸಮುದ್ರಮಧ್ಯದಲ್ಲಿ ಪ್ರಯಾಣ ಮಾಡುತ್ತಿರುವ ಮುತ್ತು-ರತ್ನಗಳಿಂದ ತುಂಬಿದ ಹಡಗೊಂದು ಸಮುದ್ರದೊಳಗಿರುವ ದೊಡ್ಡ ಮೊಸಳೆಯಿಂದ ವಿಧ್ವಂಸಿತವಾಗುವಂತೆ–ನಿನ್ನ ಅಪಾರವಾದ ಸೈನ್ಯಸಮೂಹವು ಈ ಐವರು ಪಾಂಡುಕುಮಾರರಿಂದ ಕ್ಷಣಮಾತ್ರದಲ್ಲಿ ಧ್ವಂಸಿತವಾಗುವುದನ್ನು ಮುಂದಿನ ಒಂದೆರಡು ಕ್ಷಣದಲ್ಲಿಯೇ ನೀನು ಕಾಣಲಿರುವೆ, ಸೈಂಧವ!

ನಿನ್ನ ಕೊನೆಯ ಅಪೇಕ್ಷೆಯಂತೆ ನನ್ನ ಪತಿಗಳ ರೂಪ-ಲಕ್ಷಣ-ಶಕ್ತಿ ಸಾಮರ್ಥ್ಯಗಳೆಲ್ಲವನ್ನೂ ವಿವರಿಸಿ ಹೇಳಿರುತ್ತೇನೆ. ಇಂತಹ ಶೂರರನ್ನು ನೀನಿಂದು ನಿರ್ಲಕ್ಷಿಸಿ ಇವರಿಗೆ ಅವಮಾನವೆಸಗಿರುವೆ. ಅದೃಷ್ಟವಶಾತ್ ನೀನೇನಾದರೂ ಇವರೊಡನೆ ಯುದ್ಧಮಾಡಿ ಅನಂತರವೂ ಜೀವಸಹಿತ

ಉಳಿದಲ್ಲಿ ನಿನಗೆ ಬದುಕಿರುವಾಗಲೇ ಪುನರ್ಜನ್ಮವು ಪ್ರಾಪ್ತವಾಯಿತೆಂದೇ ಭಾವಿಸಬೇಕಾಗುವುದು.”

ಜನಮೇಜಯ! ಇತ್ತಲಾಗಿ ಇಂದ್ರಸಮಾನರಾದ ಪಾಂಡವರು ಕೋಪಾವಿಷ್ಟರಾಗಿ ಮುನ್ನುಗ್ಗುತ್ತಿದ್ದಾಗ ಬೆದರಿ-ಬೆದರಿ ಕೈಜೋಡಿಸಿ ನಿಂತು ಪ್ರಾಣಭಿಕ್ಷೆಯನ್ನು ಬೇಡುತ್ತಿದ್ದ ಸೈನಿಕರನ್ನು ಬಿಟ್ಟು, ರಥದಲ್ಲಿ ಕುಳಿತು ಯುದ್ಧಕ್ಕೆ ಸಜ್ಜಾಗುತ್ತಿದ್ದ ಕ್ಷತ್ರಿಯವೀರರ ಮೇಲೆ ರಣರಂಗವೇ ಕತ್ತಲಾಗುವ ರೀತಿಯಲ್ಲಿ ಬಾಣಗಳ ವರ್ಷವನ್ನು ಕರೆದರು.

೨೭೦ನೆಯ ಅಧ್ಯಾಯವು ಮುಗಿಯಿತು.

೨೭೧ನೆಯ ಅಧ್ಯಾಯ ದ್ರೌಪದೀಹರಣಪರ್ವ (ಮುಂದುವರಿದಿದೆ.)

## ಪಾಂಡವರು ಜಯದ್ರಥನ ಸೈನ್ಯವನ್ನು ಧ್ವಂಸಗೊಳಿಸಿದುದು : ಜಯದ್ರಥನ ಪಲಾಯನ : ಯುಧಿಷ್ಠಿರನು ನಕುಲ-ಸಹದೇವ-ದ್ರೌಪದಿಯರೊಡನೆ ಆಶ್ರಮಕ್ಕೆ ಹಿಂದಿರುಗಿದುದು : ಭೀಮಾರ್ಜುನರು ಜಯದ್ರಥನನ್ನು ಬೆನ್ನಟ್ಟಿ ಹೋದುದು

ಜನಮೇಜಯ! ಇತ್ತಲಾಗಿ ಸೈಂಧವನು ತನ್ನ ಸುತ್ತಲೂ ಇದ್ದ ರಾಜಕುಮಾರರನ್ನು ಸಂಬೋಧಿಸಿ **‘ಸಂತಿಷ್ಠತ’**–ಸ್ಥಿರತೆಯಿಂದ ನಿಲ್ಲಿರಿ ; **‘ಪ್ರಹರತ’**–ಎದುರಾಳಿಯನ್ನು ಪ್ರಹರಿಸಿ ; ‘ವಿಪರಿಧಾವತ’–ಮುಂದೆ ಮುಂದೆ ಹೋಗಿರಿ–ಎಂಬುದಾಗಿ ಆಜ್ಞೆಮಾಡಿದನು. ಯುಧಿಷ್ಠಿರಾದಿಗಳು ಬಾಣಗಳ ಮಳೆಯನ್ನೇ ಕರೆಯುತ್ತಿರುವುದನ್ನು ನೋಡಿ ಸೈಂಧವನ ಸೈನ್ಯದಲ್ಲಿ ಘೋರವಾದ ಕೋಲಾಹಲವುಂಟಾಯಿತು. ವ್ಯಾಘ್ರಗಳಂತೆ ಭಯಂಕರವಾಗಿ ಕಾಣುತ್ತಿದ್ದ ಆ ಪುರುಷವ್ಯಾಘ್ರರನ್ನು ನೋಡಿ, ಶಿಬಿ-ಸೌವೀರ-ಸಿಂಧುದೇಶಗಳ ರಾಜಕುಮಾರರಿಗೆ ವಿಷಾದವುಂಟಾಯಿತು.

ಭೀಮಸೇನನು ಸುವರ್ಣದ ಚಿತ್ರಗಳಿಂದ ಚಿತ್ರಿತವಾಗಿದ್ದ ಉಕ್ಕಿನ ಗದೆಯನ್ನು ಕೈಯಲ್ಲಿ ಹಿಡಿದು, ವಿಧಿಪರವಶನಾಗಿದ್ದ ಸೈಂಧವನ ಕಡೆಗೆ ನುಗ್ಗಿದನು. ಸೈಂಧವನ ಪಕ್ಕದಲ್ಲಿದ್ದ ಕೋಟಿಕನು ತನ್ನೊಡನಿದ್ದ ರಥಿಕರಿಂದ ಕೂಡಿದವನಾಗಿ ಮುನ್ನುಗ್ಗಿಹೋಗಿ ಭೀಮನನ್ನು ಸುತ್ತುವರಿದು ನಿಂತು

ತಾತ್ಕಾಲಿಕವಾಗಿ ಭೀಮ-ಸೈಂಧವರನ್ನು ಪ್ರತ್ಯೇಕಿಸಿದನು. ಭೀಮನನ್ನು ಸುತ್ತು ವರಿದಿದ್ದ ರಥಿಕರು ನಾಲ್ಕು ಕಡೆಗಳಿಂದಲೂ ಶಕ್ತಿ, ಭರ್ಜಿ, ಬಾಣ, ಗದೆ, ತ್ರಿಶೂಲಾದಿ ಆಯುಧಗಳಿಂದ ಏಕಕಾಲದಲ್ಲಿ ಭೀಮನನ್ನು ಪ್ರಹರಿಸುತ್ತಿದ್ದರು. ಆದರೆ ಪರ್ವತದಂತೆ ಅಚಲನಾಗಿ ನಿಂತಿದ್ದ ಭೀಮಸೇನನು ಅನುಸ್ಯೂತವಾದ ಆ ಪ್ರಹಾರದಿಂದ ಸ್ವಲ್ಪವಾದರೂ ಹಿಂಜರಿಯಲಿಲ್ಲ. ಅದಕ್ಕೆ ಬದಲಾಗಿ ಭೀಮ ಸೇನನು ತನ್ನ ಗದೆಯಿಂದ ಒಂದು ದೊಡ್ಡ ಆನೆಯನ್ನೂ ಮತ್ತು ಅದರ ಮಾವ ಟಿಗನನ್ನೂ, ಹದಿನಾಲ್ಕು ಪದಾತಿಗಳನ್ನೂ ಯಮಲೋಕಕ್ಕೆ ಕಳುಹಿಸಿದನು.

ಅರ್ಜುನನೂ ಸಹ ಸೈಂಧವನನ್ನು ಸೆರೆಹಿಡಿಯುವ ಆಶಯದಿಂದ ತನ್ನ ನಿಶಿತವಾದ ಬಾಣಗಳ ಪ್ರಹಾರದಿಂದ ಪರ್ವತಪ್ರದೇಶದ ಐನೂರು ಮಂದಿ ರಥಿಕರನ್ನು ಆ ರಣಾಂಗಣದಲ್ಲಿ ಸಂಹರಿಸಿದನು. ಯುಧಿಷ್ಠಿರನೂ ಸಹ ರೆಪ್ಪೆ ಹೊಡೆಯುವಷ್ಟು ವೇಳೆಯಲ್ಲಿ ಒಂದು ನೂರು ಮಂದಿ ಉತ್ತಮ ಯೋಧ ರನ್ನು ಸಂಹರಿಸಿದನು. ನಕುಲನು ಕೈಯಲ್ಲಿ ಕತ್ತಿಯನ್ನು ಝಳಪಿಸುತ್ತಾ ರಥ ದಿಂದ ಕೆಳಕ್ಕೆ ಹಾರಿ ಸೈಂಧವನ ಸೈನ್ಯದೊಳಗೆ ನುಗ್ಗಿ–ಕೃಷಿಕನು ಭೂಮಿಯಲ್ಲಿ ಬೀಜವನ್ನು ಬಿತ್ತುವಂತೆ–ನೂರಾರು ಸೈನಿಕರ ರುಂಡಗಳನ್ನು ಭೂಮಿಯ ಮೇಲೆ ಉರುಳಿಸಿದನು. ಸಹದೇವನೂ ಸಹ ತನ್ನ ರಥದಲ್ಲಿ ಕುಳಿತು ಗಜಸೈನ್ಯದ ಮೇಲೆ ನುಗ್ಗಿಹೋಗಿ ತನ್ನ ನಿಶಿತವಾದ ಬಾಣಗಳಿಂದ ಅನೇಕಾನೇಕ ಯೋಧರನ್ನು ಹೊಡೆದುರುಳಿಸಿದನು. ಆಘಾತವಾದ ಸಮಯದಲ್ಲಿ ವೃಕ್ಷಗಳ ದೆಸೆಯಿಂದ ಪಕ್ಷಿಗಳು (ನವಿಲುಗಳು) ತೊಪ-ತೊಪನೆ ಕೆಳಗುರುಳುವಂತೆ– ಆನೆಗಳ ಮೇಲಿನಿಂದ ಸೈಂಧವಯೋಧರು ಹತರಾಗಿ ಕೆಳಗುರುಳಿದರು. ಗದಾ ಯುದ್ಧದಲ್ಲಿ ಚತುರನಾದ ತ್ರಿಗರ್ತಾಧಿಪತಿಯು ಧನುಷ್ಪಾಣಿಯಾದ ಯುಧಿ ಷ್ಠಿರನಿಗೆದುರಾಗಿ ಬಂದು ನಿಂತು ಅವನ ನಾಲ್ಕು ಕುದುರೆಗಳನ್ನೂ ಕ್ಷಣಮಾತ್ರ ದಲ್ಲಿ ತನ್ನ ಗದೆಯಿಂದ ಸಂಹರಿಸಿಬಿಟ್ಟನು. ತನ್ನ ಶತ್ರುವು ಅಷ್ಟು ಸಮೀಪಕ್ಕೆ ಬಂದಿರುವುದನ್ನು ಕಂಡು ಯುಧಿಷ್ಠಿರನು ಅರ್ಧಚಂದ್ರವೆಂಬ ಬಾಣವನ್ನು ತೆಗೆದು ತ್ರಿಗರ್ತಾಧಿಪತಿಯ ವಕ್ಷಸ್ಥಳಕ್ಕೆ ಗುರಿಯಿಟ್ಟು ಹೊಡೆದನು. ಹೃದಯಕ್ಕೆ ತಗುಲಿದ ಆಘಾತದಿಂದಾಗಿ ತ್ರಿಗರ್ತರ ಅಧಿಪತಿಯು ಬಾಯಿಂದ ರಕ್ತವನ್ನು ಕಾರುತ್ತಾ ಬೇರುಗಳನ್ನು ಕತ್ತರಿಸಿದ ವೃಕ್ಷದೋಪಾದಿಯಲ್ಲಿ ನೆಲದ ಮೇಲೆ ಬಿದ್ದನು.

ರಥದ ಕುದುರೆಗಳು ಸತ್ತುಹೋಗಲಾಗಿ ಯುಧಿಷ್ಠಿರನು ಸಾರಥಿಯಾದ ಇಂದ್ರಸೇನನೊಡನೆ ರಥದಿಂದಿಳಿದು ಪಕ್ಕದಲ್ಲಿದ್ದ ಸಹದೇವನ ರಥಕ್ಕೆ ಹತ್ತಿ ಕುಳಿತನು. ಕ್ಷೇಮಂಕರ-ಮಹಾಮುಖರೆಂಬ ಇಬ್ಬರು ರಾಜಕುಮಾರರು ನಕುಲನನ್ನು ಇತರ ಪಾಂಡವರಿಂದ ಪ್ರತ್ಯೇಕಗೊಳಿಸಿ, ಅವನ ಮೇಲೆ ಅವ್ಯಾಹತವಾಗಿ ಬಾಣಪ್ರಯೋಗವನ್ನು ಮಾಡತೊಡಗಿದರು. ಮಳೆಗಾಲದ ಮೋಡಗಳಂತೆ ಆ ಇಬ್ಬರೂ ತನ್ನೊಬ್ಬನ ಮೇಲೆಯೇ ಬಾಣಗಳ ಮತ್ತು ತೋಮರಗಳ ಮಳೆಗರೆಯುತ್ತಿದ್ದರೂ ಅಸ್ತ್ರವಿಶಾರದನಾದ ನಕುಲನು ತನ್ನ ಕೈಚಳಕದಿಂದ ತನ್ನೆದುರಾಗಿ ಬರುತ್ತಿದ್ದ ಎಲ್ಲ ಬಾಣಗಳನ್ನೂ ಕತ್ತರಿಸಿ ವಿಪಾಠವೆಂಬ ಎರಡು ಅಮೋಘವಾದ ಬಾಣಗಳಿಂದ ಕ್ಷೇಮಂಕರ-ಮಹಾಮುಖರನ್ನು ಸಂಹರಿಸಿದನು.

ಗಜನಯನದಲ್ಲಿ ಬಹುಚತುರನಾದ ಸುರಥನೆಂಬ ಮತ್ತೊಬ್ಬ ತ್ರಿಗರ್ತ ರಾಜನು ಆನೆಯ ಮೇಲೆ ಕುಳಿತು ನಕುಲನಿಗೆದುರಾಗಿ ಬಂದು ನಿಂತನು. ಸುರಥನ ನಿಯಂತ್ರಣದಂತೆ ಅವನ ಆನೆಯು ನಕುಲನ ರಥದ ನೊಗವನ್ನೇ ಸೊಂಡಿಲಿನಿಂದ ಹಿಡಿದು ಎಳೆಯತೊಡಗಿತು. ಸ್ಥಿರಮನಸ್ಕನಾದ ನಕುಲನು ಸ್ವಲ್ಪವೂ ಭಯಗೊಳ್ಳದೇ ಸಮಯವನ್ನು ನೋಡಿ ರಥದಿಂದ ಕೆಳಕ್ಕೆ ಹಾರಿ ಎಡಗೈಯ್ಯಲ್ಲಿ ಗುರಾಣಿಯನ್ನು ಹಿಡಿದು ಬಲಗೈಯಲ್ಲಿ ಕತ್ತಿಯನ್ನು ಝಳಪಿಸುತ್ತಾ ಪರ್ವತದಂತೆ ಅಚಲನಾಗಿ ಯುದ್ಧಸನ್ನದ್ಧನಾಗಿ ನಿಂತನು. ಸುರಥನು ಕುಪಿತನಾಗಿ ಕೆಳಗೆ ನಿಂತಿದ್ದ ನಕುಲನನ್ನು ಸಂಹರಿಸಿಬಿಡಬೇಕೆಂಬ ಏಕೋದ್ದೇಶದಿಂದ ಆನೆಯನ್ನು ನಕುಲನ ಮೇಲೆ ರಭಸದಿಂದ ನುಗ್ಗುವಂತೆ ಪ್ರಚೋದಿಸಿದನು. ಆನೆಯು ಸೊಂಡಿಲನ್ನು ಮೇಲಕ್ಕೆತ್ತಿಕೊಂಡು ನಕುಲನನ್ನು ಅಪ್ಪಳಿಸುವ ಸಲುವಾಗಿ ಮುನ್ನುಗ್ಗಿತು. ಆನೆಯು ಹತ್ತಿರಕ್ಕೆ ಬರುತ್ತಲೇ ಅಚಲನಾಗಿ ನಿಂತಿದ್ದ ನಕುಲನು ಅದರ ಸೊಂಡಿಲನ್ನು ಮಾತ್ರವಲ್ಲದೇ ದಂತಗಳನ್ನೂ ಸಹ ಕತ್ತರಿಸಿಬಿಟ್ಟನು. ಗೆಜ್ಜೆಗಳಿಂದ ಅಲಂಕೃತವಾಗಿದ್ದ ಆ ಆನೆಯು ಘೀಳಿಡುತ್ತಾ ಸುರಥನನ್ನು ಕೆಳಗುರುಳಿಸಿ ಅವನ ಮೇಲೆ ತಾನೂ ಸಹ ತಲೆಕೆಳಗಾಗಿ ಬಿದ್ದುಬಿಟ್ಟಿತು. ಆನೆ ಮತ್ತು ಸುರಥರಿಬ್ಬರೂ ಯಮಾಲಯಕ್ಕೆ ಏಕಕಾಲದಲ್ಲಿ ತೆರಳಿದರು.

ಈ ರೀತಿಯಲ್ಲಿ ಅತ್ಯದ್ಭುತವಾಗಿ ಪರಾಕ್ರಮವನ್ನು ತೋರಿದ ನಕುಲನು

ಪಕ್ಕದಲ್ಲಿದ್ದ ಭೀಮಸೇನನ ರಥದಲ್ಲಿ ಕುಳಿತು, ಅಲ್ಲಿ ಸ್ವಲ್ಪಕಾಲ ವಿಶ್ರಾಂತಿ ಪಡೆದನು. ಭೀಮಸೇನನ ಮೇಲೆ ಕೋಟಿಕನು ಬಾಣಗಳ ಮಳೆಗರೆಯುತ್ತಾ ಯುದ್ಧವನ್ನುಪಕ್ರಮಿಸಿದನು. ಭೀಮಸೇನನು ತನ್ನ ಕೈಚಳಕದಿಂದ ಕೋಟಿಕನ ರಥವನ್ನು ನಡೆಸುತ್ತಿದ್ದ ಸೂತನ ತಲೆಯನ್ನು ಕ್ಷಣಮಾತ್ರದಲ್ಲಿ ನಿಶಿತವಾದ 'ಕ್ಷುರ' ಎಂಬ ಬಾಣದಿಂದ ಕತ್ತರಿಸಿಬಿಟ್ಟನು. ಕಡಿವಾಣಗಳು ಸಡಿಲಿದ ಕುದುರೆ ಗಳು ದಿಕ್ಕಾಪಾಲಾಗಿ ಓಡಲು ಪ್ರಾರಂಭಮಾಡಿದಾಗಲೇ ದೀರ್ಘಬಾಹುವಾದ ಭೀಮನು ತನ್ನ ರಥದ ಸಾರಥಿಯ ಕತ್ತನ್ನು ಕತ್ತರಿಸಿಬಿಟ್ಟಿರುವನೆಂಬ ಅರಿವು ಕೋಟಿಕನಿಗುಂಟಾಯಿತು. ಸಾರಥಿಯನ್ನು ಕಳೆದುಕೊಂಡು ಕೋಟಿಕನು ಹಿಮ್ಮೆಟ್ಟುತ್ತಿರಲಾಗಿ ಯೋಧಾಗ್ರಣಿಯಾದ ಭೀಮನು ಒಡನೆಯೇ ಅವನಿಗೆದು ರಾಗಿ ಹೋಗಿ ಮುಷ್ಟಿಯುಕ್ತವಾದ ಪ್ರಾಸಾಯುಧದಿಂದ ಅವನನ್ನು ಬಲವಾಗಿ ಪ್ರಹರಿಸಿ ಕೊಂದುಬಿಟ್ಟನು. ಮಹಾವೀರನಾದ ಅರ್ಜುನನೂ ಸಹ ನಿಶಿತವಾದ ಭಲ್ಲಾಯುಧಗಳಿಂದ ಹನ್ನೆರಡು ಮಂದಿ ಸೌವೀರರಾಜಕುಮಾರರ ಧನುಸ್ಸುಗಳನ್ನು ಕತ್ತರಿಸಿ ಅನಂತರ ಅವರೆಲ್ಲರ ತಲೆಗಳನ್ನೂ ಕತ್ತರಿಸಿದನು.

ಅತಿರಥನಾದ ಅರ್ಜುನನು ಆ ಮಹಾಯುದ್ಧದಲ್ಲಿ ತಾನು ಬಿಡುತ್ತಿದ್ದ ಅನುಸ್ಯೂತವಾದ ಬಾಣಗಳಿಗೆ ಸಿಕ್ಕಿದ ಅನೇಕಾನೇಕ ಶಿಬಿಸೈನಿಕರನ್ನೂ, ಇಕ್ಷ್ವಾಕುಮುಖ್ಯರನ್ನೂ, ತ್ರಿಗರ್ತ-ಸೈಂಧವರನ್ನೂ ಧ್ವಂಸಮಾಡಿದನು. ಸವ್ಯ ಸಾಚಿಯ ಬಾಣಗಳಿಗೆ ಸಿಕ್ಕಿ ಅನೇಕಾನೇಕ ಗಜ-ರಥಗಳೂ ನುಚ್ಚುನೂರಾ ದುವು. ಕೆಲವೆಡೆಯಲ್ಲಿ ರುಂಡವಿಲ್ಲದ ಮುಂಡಗಳೂ–ಮತ್ತೆ ಕೆಲವೆಡೆಯಲ್ಲಿ ಮುಂಡವಿಲ್ಲದ ರುಂಡಗಳೂ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ನಾಯಿ, ಗೃಧ್ರ, ರಣಹದ್ದು, ಕಂಕ, ಕಾಕೋಲ, ಗೋಮಾಯು, ಕಾಗೆ–ಇವೇ ಮುಂತಾದ ಪ್ರಾಣಿ-ಪಕ್ಷಿಗಳು ಸತ್ತುಬಿದ್ದಿದ್ದ ಯೋಧರ ರಕ್ತವನ್ನು ಸ್ವೇಚ್ಛೆಯಾಗಿ ಕುಡಿದು ಮಾಂಸವನ್ನು ಕಂಠಪೂರ್ತಿಯಾಗಿ ತಿಂದು ತೃಪ್ತಿಹೊಂದಿದುವು. ಜಯದ್ರಥನು ತನ್ನ ಸೈನಿಕರೆಲ್ಲರೂ ಹತರಾಗುತ್ತಿರುವುದನ್ನು ಕಂಡು ಬಹುಭೀತನಾಗಿ ತನ್ನ ಪ್ರಾಣವನ್ನಾದರೂ ಉಳಿಸಿಕೊಳ್ಳಲು ದ್ರೌಪದಿಯನ್ನು ಅಲ್ಲಿಯೇ ಬಿಟ್ಟು ಓಡಿ ಹೋಗಬೇಕೆಂದು ನಿರ್ಧರಿಸಿದನು. ಸರ್ವತ್ರ ಗದ್ದಲವಾಗುತ್ತಿರ್ದಾಗ, ಸೈನಿಕರು ಪ್ರಾಣತೊರೆಯುತ್ತಾ ಘೋರಶಬ್ದಮಾಡುತ್ತಿದ್ದಾಗ ಪಾಂಡವರ ದೃಷ್ಟಿ ಯೆಲ್ಲವೂ ಸೈನಿಕರೊಡನೆ ಯುದ್ಧಮಾಡುವುದರಲ್ಲಿಯೇ ಕೇಂದ್ರೀಕೃತವಾಗಿ

ದ್ದಾಗ–ಸೈಂಧವನು ಮೆಲ್ಲನೆ ದ್ರೌಪದಿಯನ್ನು ರಥದಿಂದಿಳಿಸಿ ತಾನು ಆಗಮಿಸಿದ್ದ ಕಾಡಿನ ಮಾರ್ಗವನ್ನು ಹಿಡಿದು ಪಲಾಯನಮಾಡಿದನು. ಧೌಮ್ಯ-ದ್ರೌಪದಿಯರು ಸಹದೇವನ ರಥದ ಬಳಿಗೆ ಬಂದರು. ಸಹದೇವನ ರಥದಲ್ಲಿದ್ದ ಯುಧಿಷ್ಠಿರನು, ದ್ರೌಪದಿಯು ಧೌಮ್ಯರೊಡನೆ ತನ್ನ ರಥಕ್ಕೆದುರಾಗಿ ಬಂದುದನ್ನು ನೋಡಿ, ರಥವನ್ನು ನಿಲ್ಲಿಸಲು ಹೇಳಿ, ದ್ರೌಪದಿಯನ್ನು ರಥದಲ್ಲಿ ಕುಳ್ಳಿರಿಸಿಕೊಳ್ಳುವಂತೆ ಸಹದೇವನಿಗೆ ಹೇಳಲು, ಸಹದೇವನು ಅವರಿಬ್ಬರನ್ನೂ ರಥಕ್ಕೆ ಹತ್ತಿಸಿಕೊಂಡನು.

ಸೈಂಧವನು ಓಡಿಹೋಗಲು ಅವನ ಅನೇಕ ಸೈನಿಕರೂ ಪಲಾಯನ ಮಾಡತೊಡಗಿದರು. ಕೋಪಾವಿಷ್ಟನಾದ ಭೀಮನು ಪಲಾಯನಮಾಡುತ್ತಿದ್ದವರನ್ನೂ ಸಹ ಬಿಡದೇ ಅವರನ್ನು ತಡೆಗಟ್ಟಿ ತನ್ನ ಬಾಣಗಳಿಂದ ಪ್ರಹರಿಸುತ್ತಿದ್ದನು. ಜಯದ್ರಥನು ಪಲಾಯನಮಾಡಿದನೆಂಬುದನ್ನರಿತು ಅರ್ಜುನನು ಭೀಮನನ್ನು ಕುರಿತು ಹೇಳಿದನು :

"ಅಣ್ಣ! ಇವರನ್ನೇಕೆ ವೃಥಾ ಸದೆಬಡಿಯುವೆ? ನಮ್ಮೆದುರಾಗಿ ಬಂದವರನ್ನು ಸದೆಬಡಿದಿದ್ದೇವೆ. ಅವರನ್ನು ಓಡಿಹೋಗಲು ಬಿಡು. ರಣದಿಂದ ವಿಮುಖರಾದವರನ್ನು ಸಂಹರಿಸುವುದು ನ್ಯಾಯವಲ್ಲ. ಮೇಲಾಗಿ ಈ ಸಮರಕ್ಕೆ ಮುಖ್ಯಕಾರಣನಾದ, ನಮಗೆ ಅಪಚಾರವನ್ನೆಸಗಿರುವ ಸೈಂಧವನಿಲ್ಲಿ ಕಾಣುತ್ತಿಲ್ಲ. ದುರಾಸದವಾದ ಕ್ಲೇಶವನ್ನು ಅವನಿಂದ ನಾವು ಅನುಭವಿಸಬೇಕಾಯಿತು. ಅವನನ್ನು ಮೊದಲು ಹುಡುಕು. ನಿನಗೆ ಮಂಗಳವಾಗಲಿ. ಈ ಬಡಪಾಯಿಯೋಧರಿಂದ ನಮಗೇನಾಗಬೇಕಾಗಿದೆ? ಇವರನ್ನು ನಾವೇಕೆ ವೃಥಾ ಕೊಲ್ಲೋಣ? ಭಯದಿಂದ ಓಡಿಹೋಗುತ್ತಿರುವ ಇವರನ್ನು ಕೊಲ್ಲುವುದರಿಂದ ನಮಗಾವ ಪ್ರಯೋಜನವೂ ಇಲ್ಲವೆಂದು ನಾನು ಭಾವಿಸುತ್ತೇನೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು, ಭೀಮಸೇನ?"

ಜನಮೇಜಯ! ಧೀಮಂತನಾದ ಅರ್ಜುನನ ಯುಕ್ತಿಯುಕ್ತವಾದ ಸಲಹೆಯನ್ನು ಅಂಗೀಕರಿಸಿದ ಭೀಮಸೇನನು ಸೋತ ಸೈನಿಕರ ಬೆನ್ನಟ್ಟಿ ಹೋಗುವುದನ್ನು ನಿಲ್ಲಿಸಿ, ಯುಧಿಷ್ಠಿರನ ಸಮೀಪಕ್ಕೆ ಬಂದು ಅವನನ್ನು ಕುರಿತು ಹೇಳಿದನು :

"ಅಗ್ರಜ! ಶತ್ರುಪಕ್ಷದ ಸಾವಿರಾರು ಸೈನಿಕರು ಪ್ರಾಣತೊರೆದರು. ಅಳಿದುಳಿದವರು ದಿಕ್ಕು-ದಿಕ್ಕಿಗೆ ಪಲಾಯನಮಾಡುತ್ತಿದ್ದಾರೆ. ನೀನೀಗ ದ್ರೌಪದಿಯನ್ನೂ, ನಕುಲ-ಸಹದೇವರನ್ನೂ, ಪೂಜ್ಯರಾದ ಧೌಮ್ಯರನ್ನೂ ಕರೆದುಕೊಂಡು ಆಶ್ರಮಕ್ಕೆ ಹಿಂದಿರುಗಿ, ದ್ರೌಪದಿಯನ್ನು ಸಾಂತ್ವವಚನಗಳಿಂದ ಸಮಾಧಾನಗೊಳಿಸು. ಆ ಮೂಢನಾದ ಸೈಂಧವನು ಬದುಕಿದ್ದರೆ ನನ್ನಿಂದ ತಪ್ಪಿಸಿಕೊಳ್ಳಲಾರನು. ಅವನೀಗ ಪಾತಾಳಲೋಕದಲ್ಲಿಯೇ ಆಶ್ರಯ ಪಡೆದಿರಲಿ ಅಥವಾ ದೇವಲೋಕಕ್ಕೆ ಹೋಗಿ ಅಲ್ಲಿರುವ ದೇವೇಂದ್ರನನ್ನೇ ತನ್ನ ಸಾರಥಿಯನ್ನಾಗಿ ನೇಮಿಸಿಕೊಂಡು ಅವನ ರಕ್ಷಣೆಯನ್ನಾದರೂ ಪಡೆಯಲಿ ; ನಾನವನನ್ನು ಜೀವಸಹಿತವಾಗಿ ಬಿಡತಕ್ಕವನಲ್ಲ. ನಾನವನನ್ನು ಬೆನ್ನಟ್ಟಿ ಹೋಗುತ್ತೇನೆ."

"ಮಹಾಬಾಹುವಾದ ಭೀಮಸೇನನೇ! ಸೈಂಧವನು ಯದ್ಯಪಿ ದುರಾತ್ಮನಾದರೂ ಅವನನ್ನು ಕೊಲ್ಲಲಾಗದು. ಅವನು ನಮ್ಮ ತಂಗಿಯಾದ ದುಃಶಲೆಯ ಗಂಡ. ನಮ್ಮ ದೊಡ್ಡಮ್ಮನಾದ ಗಾಂಧಾರೀದೇವಿಯ ಅಳಿಯ. ಅವರನ್ನಾದರೂ ಸ್ಮರಿಸಿ ನಾವಿವನನ್ನು ಪ್ರಾಣಸಹಿತವಾಗಿ ಬಿಟ್ಟುಬಿಡುವುದು ಯುಕ್ತವಾಗಿದೆ."

ಜನಮೇಜಯ! ಯುಧಿಷ್ಠಿರನ ಆ ಮಾತುಗಳು ದ್ರೌಪದಿಗೆ ಸಹ್ಯವಾಗಲಿಲ್ಲ. ಅತ್ಯಂತವ್ಯಾಕುಲಗೊಂಡವಳಾಗಿ, ಕೋಪಗೊಂಡವಳಾಗಿ ಮತ್ತು ನಾಚಿಕೆಗೊಂಡವಳಾಗಿ ಪ್ರಾಜ್ಞಳಾದ ದ್ರೌಪದಿಯು ಭೀಮಾರ್ಜುನರನ್ನು ಕುರಿತು ಹೀಗೆಂದು ಹೇಳಿದಳು :

**ಕರ್ತವ್ಯಂ ಚೇತ್ಪ್ರಿಯಂ ಮಹ್ಯಂ ವಧ್ಯಃ ಸ ಪುರುಷಾಧಮಃ ।**
**ಸೈನ್ಧವಾಪಸದಃ ಪಾಪೋ ದುರ್ಮತಿಃ ಕುಲಪಾಂಸನಃ ॥೪೫॥**

**ಭಾರ್ಯಾಭಿಹರ್ತಾ ವೈರೀ ಯೋ ಯಶ್ಚ ರಾಜ್ಯಹರೋ ರಿಪುಃ ।**
**ಯಾಚಮಾನೋಽಪಿ ಸಂಗ್ರಾಮೇ ನ ಮೋಕ್ತವ್ಯಃ ಕಥಂಚನ ॥೪೬॥**

"ನನಗೇನಾದರೂ ನೀವು ಪ್ರಿಯವಾದ ಕಾರ್ಯವನ್ನು ಮಾಡಲು ಇಚ್ಛಿಸುವಿರಾದರೆ ಕುಲಪಾಂಸನನಾದ, ದುರ್ಮತಿಯಾದ, ಪಾಪಿಷ್ಠನಾದ, ಪುರುಷಾಧಮನಾದ ಸೈಂಧವನು ನಿಮ್ಮಿಂದ ವಧ್ಯನಾಗಲೇಬೇಕು.

ಇತರರ ಭಾರ್ಯೆಯರನ್ನು ಅಪಹರಿಸಿಕೊಂಡು ಹೋಗತಕ್ಕ ಮತ್ತು ರಾಜ್ಯ-ಕೋಶಗಳನ್ನು ಮೋಸದಿಂದ ಅಪಹರಿಸುವ ಶತ್ರುವು ಯುದ್ಧದಲ್ಲಿ ಶರಣಾಗತನಾದರೂ ವಿಮೋಚಿಸಲ್ಪಡತಕ್ಕವನಲ್ಲ. ಅಂತಹ ಶತ್ರುವಿಗೆ ಮರಣ ದಂಡನೆಯೇ ಶಿಕ್ಷೆ. ಅಂತಹವನು ಕ್ಷಮೆಗೆ ಎಂದೂ ಅರ್ಹನಾಗುವುದಿಲ್ಲ."

ದ್ರೌಪದಿಯು ಕುಪಿತಳಾಗಿ ಹೀಗೆಂದು ಹೇಳಿದೊಡನೆಯೇ ಭೀಮಾರ್ಜುನರಿಬ್ಬರೂ ಮರುಮಾತನಾಡದೇ ಸೈಂಧವನನ್ನು ಬೆನ್ನಟ್ಟಿದರು.

ಯುಧಿಷ್ಠಿರನು ಕೃಷ್ಣೆಯನ್ನೂ, ಧೌಮ್ಯರನ್ನೂ ಮತ್ತು ನಕುಲ-ಸಹ ದೇವರನ್ನೂ ಕರೆದುಕೊಂಡು, ದರ್ಭಾಸನಗಳು ಅಸ್ತವ್ಯಸ್ತವಾಗಿ ಬಿದ್ದಿರುವ ಕೋಣೆಗಳುಳ್ಳ ಆಶ್ರಮಕ್ಕೆ ಹಿಂದಿರುಗಿದನು. ಅವನು ಆಶ್ರಮಕ್ಕೆ ಬರುವ ವೇಳೆಗೆ ಆಶ್ರಮದ ಒಳಭಾಗದಲ್ಲಿ ಮಾರ್ಕಂಡೇಯಮಹರ್ಷಿಗಳೂ ಮತ್ತು ಅವರ ಶಿಷ್ಯರೂ ಮತ್ತು ಇತರ ಬ್ರಾಹ್ಮಣರೂ ತುಂಬಿರುವುದನ್ನು ಯುಧಿಷ್ಠಿರನು ನೋಡಿದನು. ಮಾರ್ಕಂಡೇಯರೂ, ಅವರ ಶಿಷ್ಯರೂ ಮತ್ತು ಆಶ್ರಮದಲ್ಲಿದ್ದ ಬ್ರಾಹ್ಮಣರೂ ದ್ರೌಪದಿಯ ಅಪಹರಣವನ್ನು ಚಿಂತಿಸಿ ಬಹುವಾಗಿ ಕಳವಳಪಡುತ್ತಿದ್ದರು. ಆ ವೇಳೆಗೆ ಸರಿಯಾಗಿ ದ್ರೌಪದೀ ಮತ್ತು ನಕುಲ-ಸಹದೇವರೊಡನೆ ಯುಧಿಷ್ಠಿರನು ಆಗಮಿಸಿದನು. ಸಿಂಧು-ಸೌವೀರರಾಜರನ್ನು ಪರಾಜಯಗೊಳಿಸಿ ದ್ರೌಪದಿಯನ್ನು ಕರೆತಂದುದಕ್ಕಾಗಿ ಬ್ರಾಹ್ಮಣರೂ, ಮಹರ್ಷಿಗಳೂ ಆನಂದಪರವಶರಾದರು. ಯುಧಿಷ್ಠಿರನು ಮಹರ್ಷಿಗಳ ಸಮೀಪದಲ್ಲಿ ಕುಳಿತುಕೊಂಡನು. ದ್ರೌಪದೀ-ನಕುಲ-ಸಹದೇವರು ಆಶ್ರಮದ ಒಳಭಾಗವನ್ನು ಪ್ರವೇಶಿಸಿದರು.

ಅತ್ತಲಾಗಿ ಜಯದ್ರಥನನ್ನು ಬೆನ್ನಟ್ಟಿಹೊರಟ ಭೀಮಾರ್ಜುನರು ತಮ್ಮ ಶತ್ರುವು ಎರಡು ಕ್ರೋಶಗಳ ಅಂತರದಲ್ಲಿರುವನೆಂದು ತಿಳಿದು ತಮ್ಮ ರಥಾಶ್ವಗಳನ್ನು ಬಹುಶೀಘ್ರವಾಗಿ ಓಡುವಂತೆ ಪ್ರಚೋದಿಸಿದರು. ಧನುರ್ಧರರಲ್ಲಿ ಶ್ರೇಷ್ಠನಾದ, ದಿವ್ಯಾಸ್ತ್ರಸಂಪನ್ನನಾದ, ಎಂತಹ ಕಷ್ಟಕಾಲದಲ್ಲಿಯೂ ಧೃತಿಗೆಡದಿರುವ ಅರ್ಜುನನು ಬಾಣವನ್ನು ಹೆದೆಗೇರಿಸಿ ಮಂತ್ರಪುನಶ್ಚರಣ ಮಾಡಿ ಜಯದ್ರಥನು ಪ್ರಯಾಣಮಾಡಿದ್ದ ಮಾರ್ಗವನ್ನೇ ಗುರಿಯಾಗಿಟ್ಟು ಹೊಡೆದನು. ಆ ಸಮಯದಲ್ಲಿ ಜಯದ್ರಥನ ರಥವು ಒಂದು ಕ್ರೋಶಕ್ಕಿಂತಲೂ ಹೆಚ್ಚಿನ ಅಂತರದಲ್ಲಿದ್ದರೂ ಅರ್ಜುನನು ಬಿಟ್ಟ ದಿವ್ಯಾಸ್ತ್ರವು ರಥದ

ಕುದುರೆಗಳನ್ನು ನಿಮಿಷಮಾತ್ರದಲ್ಲಿ ಕೊಂದುಹಾಕಿತು. ಜನಮೇಜಯ! ನಿಶ್ಚಯವಾಗಿಯೂ ಅರ್ಜುನನ ಆ ಕಾರ್ಯವು ಪರಮಾದ್ಭುತವಾದುದು. ಸಿಂಧುರಾಜನು ಭ್ರಾಂತನಾದನು. ಧನಂಜಯನ ಪರಮಾದ್ಭುತವಾದ ಬಾಣ ಪ್ರಯೋಗ ಕೌಶಲವನ್ನು ನೋಡಿ ಅವನಿಗೆ ಮುಂದೇನು ಮಾಡಬೇಕೆಂಬುದೇ ತಿಳಿಯದಾಯಿತು. ಕ್ರೋಶಗಳ ಅಂತರದಲ್ಲಿದ್ದ ಕುದುರೆಗಳನ್ನೇ ಕೊಂದ ನಂತರ ತಾನು ಉಳಿಯುವ ಬಗೆ ಹೇಗೆ? ಆದರೂ ಸಹ ಮನುಷ್ಯನಿಗೆ ಪ್ರಾಣದ ಮೇಲೆ ಹೆಚ್ಚು ಪ್ರೀತಿ. ಹೇಗಾದರೂ ಮಾಡಿ ತನ್ನ ಅವಸಾನವನ್ನು ತಪ್ಪಿಸಿಕೊಳ್ಳಬೇಕೆಂದು ಚಡಪಡಿಸುತ್ತಾನೆ. ಅಂತೆಯೇ ಸೈಂಧವನೂ ಸಹ ಓಡಿಹೋಗಿಯಾದರೂ ತನ್ನ ಪ್ರಾಣವನ್ನುಳಿಸಿಕೊಳ್ಳಬೇಕೆಂದು ನಿಶ್ಚಯಿಸಿ ದವನಾಗಿ ಜಿಂಕೆಯೋಪಾದಿಯಲ್ಲಿ ಓಡತೊಡಗಿದನು.

ಆ ವೇಳೆಗಾಗಲೇ ಭೀಮಾರ್ಜುನರು ಸೈಂಧವನ ಸಮೀಪಕ್ಕೆ ಬಂದು ಬಿಟ್ಟಿದ್ದರು. ಸೈಂಧವನನ್ನು ಪಾರ್ಥನು ಬೆನ್ನಟ್ಟಿ ಹೋಗಿ, ಹಿಂದಿರುಗಿ ನೋಡದೇ ಓಡುತ್ತಿದ್ದ ಅವನನ್ನು ಕುರಿತು ಈ ಮಾತುಗಳನ್ನು ಹೇಳಿದನು : 'ಇಷ್ಟು ಅಲ್ಪಬಲವುಳ್ಳ ನೀನು ಸ್ತ್ರೀಯೊಬ್ಬಳನ್ನು ಬಲಾತ್ಕಾರವಾಗಿ ಸೆಳೆದೊಯ್ಯಲು ಹೇಗೆ ತಾನೇ ಪ್ರಯತ್ನಿಸಿದೆ? ಪ್ರತಿನಿವೃತ್ತನಾಗು. ನಿನ್ನಂತಹ ಸಾರ್ವಭೌಮನಿಗೆ ಪಲಾಯನಮಾಡುವುದು ಖಂಡಿತವಾಗಿಯೂ ಉಚಿತವಲ್ಲ. ನಿನ್ನ ಪಕ್ಷದವರೆಲ್ಲರನ್ನೂ ಶತ್ರುಗಳ ಮಧ್ಯದಲ್ಲಿ ಬಿಟ್ಟು ನೀನು ಮಾತ್ರ ಪ್ರಾಣವುಳಿಸಿಕೊಳ್ಳಲು ಪಲಾಯನಮಾಡಬಹುದೇ?'

ಜನಮೇಜಯ! ಪಾರ್ಥನು ಹೀಗೆಂದು ಹೇಳುತ್ತಾ ಕೂಗಿಕೊಂಡರೂ ಸಹ ಸೈಂಧವನು ಹಿಂದಿರುಗಿ ನೋಡಲೂ ಇಲ್ಲ. ಏನಾದರೂ ಮಾಡಿ ತಪ್ಪಿಸಿ ಕೊಳ್ಳಬೇಕೆಂಬ ಆಶಯದಿಂದ ಸೈಂಧವನು ಓಡುತ್ತಲೇ ಇದ್ದನು.

ಅನಂತರ ಭೀಮನು 'ತಿಷ್ಠ-ತಿಷ್ಠ' 'ನಿಲ್ಲು-ನಿಲ್ಲು' ಎಂದು ಹೇಳುತ್ತಾ ಸೈಂಧವನನ್ನು ಹಿಡಿಯಲು ವೇಗವಾಗಿ ಓಡಿದನು. ಭೀಮನೆಲ್ಲಿ ಸೈಂಧವನನ್ನು ಕೊಂದುಬಿಡುವನೋ ಎಂಬ ಭಯದಿಂದ ಅರ್ಜುನನು 'ಅವನನ್ನು ಕೊಂದುಬಿಡಬೇಡವಣ್ಣಾ!' ಎಂದು ಕಾರುಣ್ಯದಿಂದ ಹೇಳಿದನು.

೨೭೧ನೆಯ ಅಧ್ಯಾಯವು ಮುಗಿಯಿತು.

## ಭೀಮನು ಜಯದ್ರಥನನ್ನು ಬಂಧಿಸಿ ಧರ್ಮಜನ ಮುಂದೆ ಹಾಕಿದುದು : ಯುಧಿಷ್ಠಿರನ ಆಜ್ಞೆಯಂತೆ ಜಯದ್ರಥನ ಬಂಧವಿಮೋಚನೆ : ಜಯದ್ರಥನು ಭಗವಾನ್ ಶಂಕರನಿಂದ ವರಪಡೆದುದು : ಶಂಕರನು ಜಯದ್ರಥನಿಗೆ ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸಿದುದು

ಜನಮೇಜಯ! ಅಗೋಚರವಾದ, ಕ್ರೋಶದಷ್ಟು ಅಂತರವಿದ್ದ ಕುದುರೆಗಳನ್ನು ಪಾರ್ಥನು ತನ್ನ ಮಂತ್ರಪುರಸ್ಸರವಾದ ಬಾಣಪ್ರಯೋಗದಿಂದ ಸಂಹರಿಸಿದಾಗಲೇ ಜಯದ್ರಥನು ತನ್ನ ಅವಸಾನವೂ ಸಮೀಪಿಸಿತೆಂದು ಭಾವಿಸಬಹುದಾಗಿದ್ದಿತು. ಅಥವಾ ತಾನು ಈ ದುರಂತದಿಂದ ಪಾರಾಗುವ ಸಾಧ್ಯತೆಯಿಲ್ಲವೆಂಬುದನ್ನಾದರೂ ನಿರ್ಧರಿಸಿ ಶರಣಾಗತನಾಗಬಹುದಾಗಿದ್ದಿತು. ಆದರೆ ಮಾನವನ ಮನಸ್ಸು ಸಮಯದಲ್ಲಿ ಭ್ರಾಂತಿಗೊಳ್ಳುತ್ತದೆ. ಪ್ರತ್ಯಕ್ಷಾನುಭವಗಳೂ ಸಹ ಅವನಿಗೆ ಮನವರಿಕೆಯಾಗುವುದಿಲ್ಲ. ಸಮುದ್ರದಲ್ಲಿ ಬಿದ್ದು ಮುಳುಗಿ ಹೋಗುತ್ತಿರುವಾಗ ಹುಲ್ಲುಕಡ್ಡಿಯನ್ನಾದರೂ ಹಿಡಿದು ಪ್ರಾಣವುಳಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಾನೆ. ಅಂತೆಯೇ ಸೈಂಧವನೂ ಸಹ ತನ್ನ ಕುದುರೆಗಳು ಸತ್ತುಬಿದ್ದುದನ್ನು ನೋಡಿ ಬಹಳವಾಗಿ ದುಃಖಪಟ್ಟನು. ಆದರೂ ದುಃಖಪಟ್ಟುಕೊಂಡು ಕುಳಿತಿರಲು ಅವಕಾಶವಿರಲಿಲ್ಲ. ಹಿಂಬದಿಯಲ್ಲಿ ರಥಗಳ ಗಡ-ಗಡಾಶಬ್ದವು ಜೋರಾಗಿ ಕೇಳಿಬರುತ್ತಿತ್ತು. ಸೈಂಧವನು ಪ್ರಾಣವುಳಿಸಿಕೊಳ್ಳಬೇಕೆಂಬ ಆಶೆಯಿಂದ ಓಡಲು ಪ್ರಾರಂಭಿಸಿದನು. ಅರ್ಜುನನ ಮಾತನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. ಕುಪಿತನಾದ ಭೀಮಸೇನನು ಒಡನೆಯೇ ತನ್ನ ರಥದಿಂದಿಳಿದು ಸ್ವಲ್ಪದೂರ ರಭಸದಿಂದ ಓಡಿ ಸೈಂಧವನ ಜುಟ್ಟು ಹಿಡಿದು ನಿಲ್ಲಿಸಿದನು.

ಮರುಕ್ಷಣದಲ್ಲಿಯೇ ಅವನನ್ನು ತನ್ನೆರಡು ಕೈಗಳಿಂದಲೂ ಹಿಡಿದು ಮೇಲೆತ್ತಿ ದೊಪ್ಪನೆ ನೆಲದ ಮೇಲೆ ಕುಕ್ಕಿದನು. ಸೈಂಧವನೊಮ್ಮೆ ತಲೆಯನ್ನೆತ್ತುತ್ತಲೇ ಆ ತಲೆಯನ್ನೇ ಹಿಡಿದು ಭೀಮನು ಪುನಃ ನೆಲದ ಮೇಲೆ ಅಪ್ಪಳಿಸಿದನು. ಸೈಂಧವನು ಪ್ರಜ್ಞಾಹೀನನಾದನು. ಸ್ವಲ್ಪ ಹೊತ್ತು ಕಳೆಯುತ್ತಲೇ

ಚೇತರಿಸಿಕೊಂಡು ಮೇಲಕ್ಕೇಳಲು ಪ್ರಯತ್ನಿಸಿದನು. ಪಕ್ಕದಲ್ಲಿಯೇ ಇದ್ದ ಭೀಮಸೇನನು ಸೈಂಧವನ ತಲೆಯನ್ನು ಕಾಲಿನಿಂದ ಪ್ರಹರಿಸಿದನು. ಅವನ ಮೇಲೆ ಮಂಡಿಯೂರಿ ಭೀಮನು ತನ್ನ ಮೊಣಕೈಗಳಿಂದ ಬಲವಾಗಿ ಪ್ರಹರಿಸಿದನು. ಆ ಪೆಟ್ಟನ್ನು ತಾಳಲಾರದೇ ಜಯದ್ರಥನು ಪುನಃ ಪ್ರಜ್ಞಾಹೀನನಾದನು. ಸೈಂಧವನು ಪ್ರಜ್ಞಾಹೀನನಾಗಿದ್ದರೂ ಸಹ ಅವನ ಮೇಲೆ ಬೀಳಲು ನುಗ್ಗುತ್ತಿದ್ದ ಕುಪಿತನಾದ ಭೀಮಸೇನನನ್ನು ಅರ್ಜುನನು ತಡೆದು ಹೇಳಿದನು : 'ಅಣ್ಣಾ! ಧರ್ಮಜನ ಮಾತನ್ನು ಸ್ಮರಿಸಿಕೊ. ದುಃಶಲೆಯ ಕಾರಣದಿಂದಾದರೂ ಈ ದುರಾತ್ಮನನ್ನು ನಾವು ಪ್ರಾಣಸಹಿತವಾಗಿ ಬಿಟ್ಟುಬಿಡಬೇಕಾಗಿದೆ. ಈಗ ಮಾಡಿರುವ ಶಿಕ್ಷೆಯೇ ಸಾಕಾಗಿದೆ.'

"ಇಲ್ಲ, ಅರ್ಜುನ! ದುರಾಚಾರಿಯಾದ, ಪಾಪಿಷ್ಠನಾದ ಈ ಜಯದ್ರಥನು ಜೀವಿಸಿರಲು ಖಂಡಿತವಾಗಿಯೂ ಅರ್ಹನಲ್ಲ. ಸುಖೋಚಿತಳಾದ, ಸಾಧ್ವಿಯಾದ ದ್ರೌಪದಿಯನ್ನು ಈ ನರಾಧಮನು ಅಪಹರಿಸಿ ಕ್ಲೇಶಕ್ಕೊಳಪಡಿಸಿದನಲ್ಲವೇ? ನಾನು ತಾನೇ ಏನು ಮಾಡಲಿ? ನನ್ನಿಂದ ಏನು ತಾನೇ ಮಾಡಲು ಸಾಧ್ಯವಿದೆ? ಏಕೆಂದರೆ ನಮ್ಮ ರಾಜನು ಯಾವಾಗಲೂ ದಯಾಪರನು. ದಯೆತೋರುವುದರಲ್ಲಿ ಅವನಿಗೆ ಶತ್ರು-ಮಿತ್ರರೆಂಬ ಭೇದವೇ ಇಲ್ಲ. ನೀನಾದರೋ ಇನ್ನೂ ತಿಳಿವಳಿಕೆಯಿಲ್ಲದವನು. ಕೈಗೆ ಸಿಕ್ಕಿದಾಗ ಶತ್ರುವನ್ನು ನಿರ್ಮೂಲಮಾಡಿಬಿಡಬೇಕೆಂಬ ರಾಜನೀತಿಯನ್ನು ನೀನು ತಿಳಿದಿಲ್ಲ. ನಮ್ಮಣ್ಣನ ಬುದ್ಧಿಗೆ ಅನುರೂಪವಾದ ಬುದ್ಧಿಯಿರುವ ನೀನೂ ಸಹ ನನ್ನನ್ನು ತಡೆಯುತ್ತಿರುವೆ."

ಹೀಗೆಂದು ಹೇಳುತ್ತಾ ವೃಕೋದರನು ಅರ್ಧಚಂದ್ರಾಕೃತಿಯ ಬಾಣವನ್ನು ಬತ್ತಳಿಕೆಯಿಂದ ಹೊರತೆಗೆದು, ಅದರಿಂದ ಜಯದ್ರಥನ ಉದ್ದವಾದ ತಲೆಯ ಕೂದಲನ್ನು ಮನಸ್ಸಿಗೆ ತೋರಿದಂತೆ ಕತ್ತರಿಸಿದನು. ವಿಕಾರವಾಗಿ ಕಾಣಿಸುವಂತೆ ಐದು ಕಡೆಗಳಲ್ಲಿ ಅಲ್ಪ-ಸ್ವಲ್ಪ (ಅರ್ಧಂಬರ್ಧ) ಕತ್ತರಿಸಿದ ತಲೆಗೂದಲನ್ನು ಬಿಟ್ಟಿದ್ದನು. ಭೀಮನು ಹೀಗೆ ಮಾಡುತ್ತಿದ್ದರೂ ಜಯದ್ರಥನು ಯಾವ ವಿಧವಾದ ಪ್ರತಿಭಟನೆಯನ್ನೂ ವ್ಯಕ್ತಪಡಿಸಲಿಲ್ಲ ; ಸುಮ್ಮನಿದ್ದನು. (ಪ್ರಾಣವೆಂಬುದು ಎಲ್ಲಕ್ಕಿಂತಲೂ ಹೆಚ್ಚಿನದಲ್ಲವೇ?)

ಜಯದ್ರಥನ ತಲೆಯನ್ನು ವಿರೂಪಗೊಳಿಸಿ ಭೀಮಸೇನನು ಸೈಂಧವನನ್ನು ಕುರಿತು ಹೇಳಿದನು :

"ಮೂಢ! ನೀನು ಜೀವಿಸಿರಲು ಇಚ್ಛಿಸುವೆಯಾದರೆ ನಾನು ಹೇಳಲಿರುವ ನಿಬಂಧನೆಗೆ ನೀನು ಒಪ್ಪಲೇಬೇಕು. ಸಂಸತ್ತುಗಳಲ್ಲಿ ಮತ್ತು ಸಭೆಗಳಲ್ಲಿ–'ನಾನು ಪಾಂಡವರ ದಾಸನಾಗಿದ್ದೇನೆ'–ಎಂದು ನೀನು ಘೋಷಿಸಬೇಕು. ಹೀಗೆ ಹೇಳಲು ನೀನು ಒಪ್ಪಿದರೆ ಮಾತ್ರವೇ ನಾನು ನಿನ್ನನ್ನು ಪ್ರಾಣಸಹಿತವಾಗಿ ಬಿಡುತ್ತೇನೆ. ರಣಾಂಗಣದಲ್ಲಿ ಸೋತುಹೋದ ಶತ್ರುವಿನ ವಿಷಯದಲ್ಲಿ ವಿಧಿಸಲ್ಪಡುವ ಈ ವಿಧವಾದ ಕಟ್ಟಳೆಗಳು ಹಿಂದಿನಿಂದಲೂ ನಡೆದುಬಂದಿವೆ."

ರಣರಂಗಕ್ಕೆ ಶೋಭಾಯಮಾನನಾದ, ಪುರುಷವ್ಯಾಘ್ರನಾದ ಭೀಮಸೇನನ ಮಾತುಗಳನ್ನು ಕೇಳಿ, ಅತ್ತಲಿತ್ತ ಅವನಿಂದಲೇ ಎಳೆದಾಡಲ್ಪಡುತ್ತಿದ್ದ ಜಯದ್ರಥನು ಅನ್ಯಥಾ ವಿಧಿಯಿಲ್ಲದೇ–'ಏವಮಸ್ತು' 'ಹಾಗೆಯೇ ಆಗಲಿ'–ಎಂದು ಹೇಳಿ ಭೀಮನ ನಿಬಂಧನೆಗೆ ಒಪ್ಪಿದನು.

'ನಾನು ಪಾಂಡವರ ದಾಸನೆಂದು ಎಲ್ಲೆಡೆಗಳಲ್ಲಿಯೂ ಹೇಳುತ್ತೇನೆ' ಎಂಬ ಅರ್ಥವನ್ನು ಕೊಡುವ–'ಏವಮಸ್ತು'–ಎಂದು ಬಹುಕಷ್ಟದಿಂದ ಹೇಳಲು ಜಯದ್ರಥನಿಗೆ ಸಾಧ್ಯವಾಯಿತೇ ಹೊರತು ಎದ್ದು ಕುಳಿತುಕೊಳ್ಳಲು ಕೂಡ ಅವನಿಗೆ ಶಕ್ತಿಯಿರಲಿಲ್ಲ. ಬಲವಾದ ಆಘಾತದ ವೇದನೆಯನ್ನು ತಾಳಲಾರದೇ ನೆಲದ ಮೇಲೆ ಹೊರಳಾಡುತ್ತಿದ್ದನು. ಹಲವು ಕ್ಷಣಗಳು ಜ್ಞಾನಶೂನ್ಯನಾಗಿಯೇ ಬಿದ್ದಿದ್ದನು. ಶರೀರವೆಲ್ಲವೂ ಧೂಳಿನಿಂದ ಆಚ್ಛಾದಿತವಾಗಿದ್ದಿತು. ಬಳಿಕ ಭೀಮಸೇನನು ಅವನನ್ನು ಹಗ್ಗದಿಂದ ಬಿಗಿದು ಮೇಲೆತ್ತಿ ರಥದಲ್ಲಿ ಹಾಕಿದನು. ಅನಂತರ ಭೀಮಸೇನನು ರಥದಲ್ಲಿ ಕುಳಿತು ಅರ್ಜುನನೊಡನೆ ಆಶ್ರಮಕ್ಕೆ ತೆರಳಿದನು. ರಥವು ಆಶ್ರಮದ ಸಮೀಪವನ್ನು ತಲುಪಿದ ನಂತರ ಭೀಮನು ರಥದಿಂದಿಳಿದು ಅರ್ಜುನನ ಸಹಾಯದಿಂದ ಬಂಧಿತನಾಗಿದ್ದ ಸೈಂಧವನನ್ನೆತ್ತಿಕೊಂಡು ಬಂದು ಬ್ರಾಹ್ಮಣರ ಮಧ್ಯದಲ್ಲಿದ್ದ ಯುಧಿಷ್ಠಿರನಿಗೊಪ್ಪಿಸಿದನು. ಧರ್ಮಜನು ನಸುನಗುತ್ತಾ ಸೈಂಧವನ ಬಂಧನವನ್ನು ಬಿಚ್ಚುವಂತೆ ಭೀಮನಿಗೆ ಹೇಳಿದನು.

(ದ್ರೌಪದಿಯ ಆಶಯದಂತೆ ಭೀಮನು ಆ ಮೂಢನ ವಧೆಯನ್ನೇ ಮಾಡಬೇಕಾಗಿದ್ದಿತು. ಆದರೆ ಅರ್ಜುನನು ಅಡ್ಡಲಾಗಿ ಬಂದುದರಿಂದ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಬಂಧಿಸಿ ಆಶ್ರಮಕ್ಕೆ ಕರೆತಂದನಂತರವೂ ಜಯದ್ರಥನನ್ನು ಬಿಡುಗಡೆಮಾಡಿದರೆ ದ್ರೌಪದಿಯೆಲ್ಲಿ ಕೋಪಿಸಿಕೊಳ್ಳು ವಳೋ? ತನ್ನನ್ನೆಲ್ಲಿ ಹಳಿಯುವಳೋ?–ಎಂಬ ಭಯವು ಭೀಮನಿಗಿದ್ದಿತು.) ಸೈಂಧವನನ್ನು ಬಿಡುಗಡೆಮಾಡಲು ಹೇಳಿದ ಧರ್ಮಜನಿಗೆ ಭೀಮನು ಹೇಳಿದನು : "ಅಣ್ಣಾ! ಪಾಂಡವರಿಗೆ ದಾಸನಾಗಿರಲು ಈ ಮೂಢನು ಒಪ್ಪಿದ್ದಾನೆಂಬ ವಿಷಯವನ್ನು ಮೊದಲು ದ್ರೌಪದಿಗೆ ಹೇಳು. (ಅನಂತರದಲ್ಲಿ ಅವಳ ಅಭಿಪ್ರಾಯದಂತೆ ನಾವು ನಡೆದುಕೊಳ್ಳೋಣ.)" ರಾಜನು ಆ ವಿಷಯವಾಗಿ ದ್ರೌಪದಿಯ ಅಭಿಪ್ರಾಯವನ್ನು ಕೇಳಲು ಹೋಗಲಿಲ್ಲ. ನಗುನಗುತ್ತಲೇ ಭೀಮನಿಗೆ ಹೇಳಿದನು.

**ಮುಂಚೈನಮಧಮಾಚಾರಂ ಪ್ರಮಾಣಾ ಯದಿ ತೇ ವಯಮ್ ॥**

"ನಾವೇನಾದರೂ ನಿನಗೆ ಪ್ರಮಾಣಭೂತರಾಗಿದ್ದರೆ, ನಿನಗೆ ನಾವು ಗೌರವಸ್ಥಾನದಲ್ಲಿದ್ದರೆ ಅಥವಾ ನಮ್ಮ ಮಾತನ್ನು ನೀನು ಗೌರವಿಸುವೆ ಯಾದರೆ–ಅಧಮಾಚಾರನಾದ, ಅಧರ್ಮಪ್ರವೃತ್ತಿಯುಳ್ಳ ಈ ಜಯದ್ರಥ ನನ್ನು ಈ ಕೂಡಲೇ ಬಿಡುಗಡೆಮಾಡು."

ಜನಮೇಜಯ! ದ್ರೌಪದಿಯೂ ಸಹ ರಾಜನ ಮನಸ್ಸಿನಲ್ಲಿರುವುದನ್ನು ತಿಳಿದುಕೊಂಡವಳಾಗಿ ಅವನಿಗೆ ಅಸಮಾಧಾನವನ್ನುಂಟುಮಾಡಕೂಡದೆಂಬ ಭಾವನೆಯಿಂದ ಭೀಮನನ್ನು ಕುರಿತು ಹೇಳಿದಳು :

"ಭೀಮಸೇನ! ಈ ಧೂರ್ತನು ಧರ್ಮಜನಿಗೆ ಸೇವಕನಾಗಿರಲು ಒಪ್ಪಿ ದ್ದಾನೆ. ಮೇಲಾಗಿ ಇವನು ಮಾಡಿದ ಅಪರಾಧಕ್ಕಾಗಿ ಇವನ ಕೂದಲನ್ನು ಐದು ಕಡೆಗಳಲ್ಲಿ ಕತ್ತರಿಸಿ ನೀನಿವನ ಆಕಾರವನ್ನೂ ವಿಕೃತಗೊಳಿಸಿರುವೆ. ಈ ಅಧಮನಿಗೆ ಈಗ ಇಷ್ಟು ಶಿಕ್ಷೆಯೇ ಸಾಕಾಗಿದೆ. ಇವನನ್ನಿನ್ನು ಬಿಟ್ಟುಬಿಡು, ಭೀಮಸೇನ!"

ದ್ರೌಪದಿಯು ಹೀಗೆಂದು ಹೇಳಿದೊಡನೆಯೇ ಭೀಮಸೇನನು ಜಯದ್ರಥ ನಿಗೆ ಬಿಗಿದಿದ್ದ ಬಂಧನವನ್ನು ಬಿಚ್ಚಿದನು. ಬಂಧನದಿಂದ ಬಿಡುಗಡೆಹೊಂದಿದ ಜಯದ್ರಥನು ಮೇಲೆದ್ದು ತಲೆಯನ್ನು ಸರಿಯಾಗಿ ಮೇಲಕ್ಕೆತ್ತದೆ ಯುಧಿ

ಷ್ಠಿರನ ಬಳಿಗೆ ಬಂದು ಅವನಿಗೆ ನಮಸ್ಕರಿಸಿ ಅನಂತರ ಅವನ ಸುತ್ತಲೂ ಕುಳಿತಿದ್ದ ಮಾರ್ಕಂಡೇಯಾದಿ ಮಹರ್ಷಿಗಳಿಗೂ ನಮಸ್ಕರಿಸಿದನು. ಹೆಜ್ಜೆಯಿಡಲೂ ಚೈತನ್ಯವಿಲ್ಲದೇ ತತ್ತರಿಸುತ್ತಿದ್ದ ಸೈಂಧವನನ್ನು ಕಿರೀಟಿಯು ಆಸರೆ ಕೊಟ್ಟು ಹಿಡಿದುಕೊಂಡಿದ್ದನು. ಅಂತಹ ದಾರುಣಸ್ಥಿತಿಯಲ್ಲಿದ್ದ ಸೈಂಧವ ನನ್ನು ಕುರಿತು ದಯಾಮಯನಾದ ಯುಧಿಷ್ಠಿರನು ಹೇಳಿದನು : "ಸೈಂಧವ! ನೀನು ನಮಗೆ ದಾಸನಾಗಿರಬೇಕಾಗಿಲ್ಲ. ನಿನ್ನನ್ನೀಗ ಭೀಮನು ಬಂಧನದಿಂದ ವಿಮುಕ್ತನನ್ನಾಗಿ ಮಾಡಿದಂತೆ ನಾನು ನಿನ್ನನ್ನು ದಾಸ್ಯದಿಂದ ವಿಮುಕ್ತಿ ಮಾಡಿರುವೆನು. ಎಂದಿನಂತೆಯೇ ನೀನು ಸಿಂಧು-ಸೌವೀರರಾಷ್ಟ್ರಗಳಿಗೆ ನಿರಂಕುಶಪ್ರಭುವಾಗಿರುವೆ. ಆದರೆ ಹೀಗೆಂದಿಗೂ ಪುನಃ ಮಾಡಬೇಡ. ಸ್ತ್ರೀಕಾಮಿಯಾದ ನಿನಗೆ ಧಿಕ್ಕಾರವಿರಲಿ. ಏಕಾಕಿನಿಯಾಗಿದ್ದ ಸ್ತ್ರೀಯೊಬ್ಬಳನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಹೋಗಿ ನಿನ್ನವಳನ್ನಾಗಿ ಮಾಡಿಕೊಳ್ಳುವಷ್ಟು ಸಾಮರ್ಥ್ಯವಾದರೂ ನಿನಗಿರುವುದೇ? ನೀನು ಅಲ್ಪಬಲನು. ನಿನಗೆ ಯಾರೊಡನೆಯೂ ಸೆಣಸಾಡುವ ಶಕ್ತಿಯಿಲ್ಲ. ಹೀಗಿರುವಾಗ ನಿನ್ನಂತಹ ಪುರುಷಾಧಮನಲ್ಲದೇ ಬೇರೆ ಯಾವನು ತಾನೇ ಇಂತಹ ಹೀನಕಾರ್ಯವನ್ನು ಮಾಡಿಯಾನು?"

ಜನಮೇಜಯ! ಜಯದ್ರಥನು ಯುಧಿಷ್ಠಿರನ ಆ ಮಾತುಗಳನ್ನು ಕೇಳಿ ಮತ್ತಷ್ಟು ಲಜ್ಜಿತನಾದನು. ಮರುಮಾತನಾಡಲೂ ಅವನಿಗೆ ಸಾಧ್ಯವಾಗಲಿಲ್ಲ. ಅದನ್ನು ನೋಡಿ ಧರ್ಮರಾಜನು, ಜಯದ್ರಥನು ಸಂಪೂರ್ಣವಾಗಿ ಸತ್ತ್ವಹೀನನೇ ಆಗಿಬಿಟ್ಟಿರುವನೆಂದು ತಿಳಿದುಕೊಂಡು ದುಷ್ಕರ್ಮಿಯಾದ ಅವನ ವಿಷಯದಲ್ಲಿ ಸಂಪೂರ್ಣವಾಗಿ ದಯೆತೋರಿ ಈ ಮಾತುಗಳನ್ನು ಹೇಳಿದನು:

**ಧರ್ಮೇ ತೇ ವರ್ಧತಾಂ ಬುದ್ಧಿರ್ಮಾ ಚಾಧರ್ಮೇ ಮನಃ ಕೃಥಾಃ ।**
**ಸಾಶ್ವಃ ಸರಥಪಾದಾತಃ ಸ್ವಸ್ತಿ ಗಚ್ಛ ಜಯದ್ರಥ ॥೨೩॥**

"ಜಯದ್ರಥ! ನಿನ್ನ ಬುದ್ಧಿಯು ಧರ್ಮಕಾರ್ಯದಲ್ಲಿ ವೃದ್ಧಿಹೊಂದಲಿ. ಅಧರ್ಮದ ವಿಷಯಕ್ಕೆ ಎಂದೆಂದಿಗೂ ಮನಗೊಡಬೇಡ. ಅಶ್ವ-ಗಜ-ರಥ-ಪದಾತಿಸೈನ್ಯಗಳೊಡನೆ ನಿನ್ನ ರಾಜ್ಯಕ್ಕೆ ಹಿಂದಿರುಗುವವನಾಗು. ನಿನಗೆ ಮಂಗಳವಾಗಲಿ."

ಧರ್ಮರಾಜನು ಸೈಂಧವನಿಗೆ ಹೀಗೆಂದು ಹೇಳಲಾಗಿ, ಬಹುಲಜ್ಜಿತನಾದ ಸೈಂಧವನು ತಲೆತಗ್ಗಿಸಿ ಒಂದು ಮಾತನ್ನೂ ಆಡದೇ ಆಶ್ರಮವನ್ನು ಬಿಟ್ಟು ಗಂಗಾದ್ವಾರವನ್ನು ಸೇರಿ, ಅಲ್ಲಿಯೇ ಒಂದು ಆಶ್ರಮವನ್ನು ಮಾಡಿಕೊಂಡು, ವಿರೂಪಾಕ್ಷನಾದ ಉಮಾಪತಿಯಾದ ಪರಮೇಶ್ವರನೇ ತನಗೆ ಶರಣ್ಯನೆಂದು ನಿಶ್ಚಯಿಸಿದವನಾಗಿ, ಅನೇಕದಿನಗಳ ಪರ್ಯಂತವಾಗಿ ಪರಮೇಶ್ವರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು.

ಅವನ ಘೋರತಪಸ್ಸಿಗೆ ಪರಶಿವನು ಮೆಚ್ಚಿ ಅವನು ಸಮರ್ಪಿಸಿದ ಬಲಿಯನ್ನು ಪ್ರತ್ಯಕ್ಷವಾಗಿಯೇ ಬಂದು ಸ್ವೀಕರಿಸಿದನು. ಪರಮೇಶ್ವರನು ದಯಪಾಲಿಸಿದ ವರವನ್ನೂ ಅವನು ಹೇಳಿದ ಮಾತುಗಳನ್ನೂ ವಿವರವಾಗಿ ಹೇಳುವೆನು ಕೇಳು, ಜನಮೇಜಯ!

ಅನೇಕದಿನಗಳ ಪರ್ಯಂತವಾಗಿ ಘೋರತಪಸ್ಸುಮಾಡಿ ಶಿವನು ಪ್ರತ್ಯಕ್ಷನಾದ ಮೇಲೆ ಜಯದ್ರಥನು ಕೇಳಿದ ವರವಿದು :

**ಸಮಸ್ತಾನ್ಸರಥಾನ್ಪಞ್ಚ ಜಯೇಯಂ ಯುಧಿ ಪಾಣ್ಡವಾನ್ ॥**

"ರಥಗಳಲ್ಲಿ ಕುಳಿತು ಯುದ್ಧಕ್ಕೆ ಬರುವ ಐವರು ಪಾಂಡವರನ್ನೂ ನಾನು ಜಯಿಸಬೇಕು. (ಜಯಿಸುವ ಸಾಮರ್ಥ್ಯವನ್ನು ನನಗೆ ನೀನು ದಯಪಾಲಿಸಬೇಕು.)"

ಪರಶಿವನು ಭಕ್ತನಿಗೆ ಬೇಕಾದ ವರಗಳನ್ನು ಕೊಡಲು ಬಂದಿದ್ದರೂ ಜಯದ್ರಥನು ಕೇಳಿದ ಆ ವರಕ್ಕೆ–'ನ' 'ಸಾಧ್ಯವಿಲ್ಲ'–ಎಂಬ ಉತ್ತರವನ್ನೇ ಕೊಡಬೇಕಾಯಿತು. ಪರಶಿವನು ಜಯದ್ರಥನನ್ನು ಕುರಿತು ಹೇಳಿದನು :

"ಜಯದ್ರಥ! ಪಾಂಡವರು ಅಜಯ್ಯರು. ಅವರನ್ನು ಜಯಿಸಲು ಯಾರಿಂದಲೂ ಸಾಧ್ಯವಿಲ್ಲ. ಜಯಿಸಲೇ ಸಾಧ್ಯವಿಲ್ಲವೆಂದಮೇಲೆ ಅವರನ್ನು ವಧೆಮಾಡುವ ಸಾಧ್ಯತೆಯಂತೂ ಇಲ್ಲವೇ ಇಲ್ಲ. ಅವರು ಅಜಯ್ಯರೂ–ಅವಧ್ಯರೂ ಆಗಿರುತ್ತಾರೆ. ಅಂತಹವರನ್ನು ನೀನು ಯುದ್ಧದಲ್ಲಿ ಪರಾಜಯಗೊಳಿಸಬೇಕೆನ್ನುವ ಆಶಯವನ್ನು ಹೊಂದಿರುವೆ. ನೀನು ಮಾಡಿದ ಈ ಘೋರತಪಸ್ಸು ವ್ಯರ್ಥವಾಗಬಾರದು. ಅರ್ಜುನನೊಬ್ಬನನ್ನುಳಿದು ಉಳಿದ ನಾಲ್ವರು ಪಾಂಡವರನ್ನು ಯುದ್ಧದಲ್ಲಿ ನೀನು ಒಂದು ದಿನ ಮಾತ್ರ ತಡೆಹಿಡಿಯಲು ಸಮರ್ಥನಾಗುವೆ. ಮಹಾಬಾಹುವಾದ ಅರ್ಜುನನು ಸಾಮಾನ್ಯನಲ್ಲ.

ಜಯದ್ರಥ! ಸುರೇಶ್ವರನೇ ನರನೆಂಬ ಅಭಿದಾನದಿಂದ ಬದರಿಕಾಶ್ರಮದಲ್ಲಿ ತಪಸ್ಸುಮಾಡುತ್ತಿದ್ದನು. ಆ ನರನೇ ಅರ್ಜುನನು. ನರನಿಗೆ ನಾರಾಯಣನು ಸಹಾಯಕನು. ಈಗ ಕೃಷ್ಣರೂಪದಲ್ಲಿ ಸಹಾಯಕನಾಗಿದ್ದಾನೆ. ತ್ರಿಭುವನಗಳಲ್ಲಿ ಯಾರೊಬ್ಬರಿಂದಲೂ ಅವನು ಪರಾಜಿತನಾಗತಕ್ಕವನಲ್ಲ. ದೇವಾಧಿದೇವತೆಗಳು ಕೂಡ ಅವನನ್ನೆದುರಿಸಿ ನಿಲ್ಲಲಾರರು. ನಾನೂ ಸಹ ಅವನಿಗೆ ಪಾಶುಪತವೆಂಬ ಮಹಾಸ್ತ್ರವನ್ನು ಅನುಗ್ರಹಿಸಿದ್ದೇನೆ. ಅರ್ಜುನನು ಲೋಕಪಾಲರಿಂದಲೂ ವಜ್ರಾಯುಧವೇ ಮೊದಲಾದ ಮಹಾಸ್ತ್ರಗಳನ್ನು ಪಡೆದಿರುತ್ತಾನೆ. ಅವನನ್ನು ಮಾತ್ರ ನೀನು ಒಂದು ಕ್ಷಣವಾದರೂ ಎದುರಿಸಿ ನಿಲ್ಲಲಾರೆ. ಇದಕ್ಕೆ ಕಾರಣವನ್ನೂ ವಿವರವಾಗಿಯೇ ಹೇಳುತ್ತೇನೆ :

ದೇವದೇವನಾದ, ಅನಂತಾತ್ಮನಾದ, ಸುರಗುರುವಾದ, ಪ್ರಭುವಾದ, ಪ್ರಧಾನಪುರುಷನಾದ, ಅವ್ಯಕ್ತನಾದ, ವಿಶ್ವಾತ್ಮನಾದ ಮಹಾವಿಷ್ಣುವು ವಿಶ್ವವೆಂಬ ಮೂರ್ತಿಯ ರೂಪದಲ್ಲಿರುತ್ತಾನೆ. ಯುಗದ ಅಂತ್ಯಕಾಲದಲ್ಲಿ ಮಹಾವಿಷ್ಣುವೇ ಕಾಲಾಗ್ನಿಯ ರೂಪವನ್ನು ಧರಿಸಿ ಅನೇಕಾನೇಕಪರ್ವತಗಳಿಂದಲೂ, ಸಮುದ್ರಗಳಿಂದಲೂ, ದ್ವೀಪಗಳಿಂದಲೂ, ಬೆಟ್ಟ-ಗುಡ್ಡಗಳಿಂದಲೂ, ಕಾಡುಗಳಿಂದಲೂ ಕೂಡಿರುವ ಭೂಲೋಕವನ್ನು ದಹಿಸಿ ಅನಂತರ ನಾಗಲೋಕವನ್ನೂ ಹೊಕ್ಕು ಅಲ್ಲಿರುವವರನ್ನೆಲ್ಲಾ ಸಂಪೂರ್ಣವಾಗಿ ಭಸ್ಮಮಾಡಿಬಿಡುತ್ತಾನೆ. ತ್ರಿಜಗತ್ತುಗಳೂ ಸಂಪೂರ್ಣವಾಗಿ ಭಸ್ಮವಾಗಿ ಹೋದನಂತರ ನಾನಾ ವರ್ಣಗಳ ಕಾರ್ಮುಗಿಲುಗಳು, ಸಿಡಿಲು-ಗುಡುಗುಗಳಿಂದ ಕೂಡಿ ಗರ್ಜನೆ ಮಾಡುತ್ತಾ ಮಿಂಚಿನಿಂದ ಕೂಡಿ ಆಕಾಶದಲ್ಲಿ ಪ್ರಸರಿಸಿರುತ್ತವೆ. ಅನಂತರ ಆ ಮೋಡಗಳಿಂದ ಧಾರಾಕಾರವಾಗಿ ಮಳೆಸುರಿದು ತ್ರಿಜಗತ್ತುಗಳಲ್ಲಿಯೂ ಪ್ರಸರಿಸಿದ್ದ ಸಂವರ್ತಕಾಗ್ನಿಯು ಶಮನಗೊಳ್ಳುತ್ತದೆ. ಆ ಸಮಯದಲ್ಲಿ ಬೀಳುವ ಮಳೆಯ ಧಾರೆಗಳು ರಥದ ಅಚ್ಚಿನಷ್ಟು ಗಾತ್ರವಿರುತ್ತವೆ. ನಾಲ್ಕು ಸಾವಿರ ಯುಗಗಳ ಒಂದು ಆವರ್ತವಾದ ನಂತರ (ಬ್ರಹ್ಮನ ಒಂದು ದಿವಸವು ಕಳೆದನಂತರ) ಪ್ರಪಂಚವೆಲ್ಲವೂ ಜಲಮಯವಾಗಿರುತ್ತದೆ. ಪ್ರಪಂಚದಲ್ಲಿರುವ ಎಲ್ಲ ಚರಾಚರವಸ್ತುಗಳೂ ವಿನಾಶಹೊಂದುತ್ತವೆ. ಸೂರ್ಯ-ಚಂದ್ರ-ವಾಯು-ಗ್ರಹ-ನಕ್ಷತ್ರಗಳೊಂದೂ ಆ ಸಮಯದಲ್ಲಿರುವುದಿಲ್ಲ. ಅನಂತರದಲ್ಲಿ ಇಂದ್ರಿಯಗಳಿಗೆ ಅಗೋಚರನಾದ (ಅತೀಂದ್ರಿಯನಾದ) ಸಹಸ್ರಶಿರಸ್ಸು

ಗಳಿಂದಲೂ, ಸಹಸ್ರನೇತ್ರಗಳಿಂದಲೂ, ಸಹಸ್ರಪಾದಗಳಿಂದಲೂ ಕೂಡಿರುವ ನಾರಾಯಣನೆಂಬ ಮಹಾಪುರುಷನು ವಿಶ್ರಾಂತಿಪಡೆಯಲು ಇಚ್ಛಿಸುತ್ತಾನೆ. ಸಾವಿರ ಹೆಡೆಗಳಿಂದ ಕೂಡಿರುವ, ಹತ್ತುಸಾವಿರ ಸೂರ್ಯರಂತೆ ಮಹಾ ತೇಜಸ್ಸಿನಿಂದ ಪ್ರಕಾಶಮಾನವಾದ, ಕುಂದಪುಷ್ಪದಂತೆಯೂ–ಚಂದ್ರನಂತೆಯೂ–ಗೋಕ್ಷೀರದಂತೆಯೂ–ಮುತ್ತಿನಂತೆಯೂ–ಬಿಳಿಯ ಕಮಲದಂತೆಯೂ ನಯನಾಹ್ಲಾದಕರವಾದ ಬಿಳಿಯ ಛಾಯೆಯಿಂದ ಕೂಡಿರುವ ಸರ್ಪರಾಜನಾದ ಶೇಷನನ್ನೇ ನಾರಾಯಣನು ತನ್ನ ಹಾಸಿಗೆಯನ್ನಾಗಿ ಮಾಡಿಕೊಂಡು ಯೋಗನಿದ್ರೆಯಲ್ಲಿರುತ್ತಾನೆ. ಅಖಂಡಜಲಾಶಯದ ಮೇಲೆ ಶೇಷಶಾಯಿಯಾಗಿ ಮಲಗಿರುವ ನಾರಾಯಣನು ತಾನು ಯೋಗನಿದ್ರೆಯಲ್ಲಿರುವ ಕಾಲವನ್ನೇ ರಾತ್ರಿಯನ್ನಾಗಿ ಪರಿವರ್ತಿಸುತ್ತಾನೆ. ಯೋಗನಿದ್ರೆಯಿಂದ ಪ್ರಬುದ್ಧನಾದ ಕಾಲದಲ್ಲಿ ಶ್ರೀಮನ್ನಾರಾಯಣನು ಸರ್ವಶೂನ್ಯವಾಗಿರುವ ಲೋಕವನ್ನು ವೀಕ್ಷಿಸುತ್ತಾನೆ. ನಾರಾಯಣನ ವಿಷಯವಾಗಿ ಈ ಶ್ಲೋಕವನ್ನೂ ಸಹ ಉದಾಹರಿಸುತ್ತಾರೆ.

**ಆಪೋ ನಾರಾಸ್ತತ್ತನವ ಇತ್ಯಪಾಂ ನಾಮ ಶುಶ್ರುಮ ।**
**ಅಯನಂ ತೇನ ಚೈವಾಸ್ತೇ ತೇನ ನಾರಾಯಣಃ ಸ್ಮೃತಃ ॥೪೨॥**

ಜಲವೇ ನಾರಾಯಣನ ಶರೀರಗಳು. ಆದುದರಿಂದಲೇ ನೀರಿಗೆ ನಾರಾ ಎಂದೂ ಹೆಸರುಬಂದಿದೆ. ಈ 'ನಾರಾ' (ನೀರೇ) ಅವನಿಗೆ ವಿಶ್ರಾಂತಿ ಪಡೆಯುವ ಸ್ಥಾನವಾಯಿತು. ಆದುದರಿಂದ ಅವನಿಗೆ ನಾರಾಯಣನೆಂದು ಹೆಸರಾಯಿತು.

ಯೋಗನಿದ್ರೆಯಿಂದ ನಾರಾಯಣನು ಜಾಗ್ರತನಾದನಂತರ ಶೂನ್ಯವಾಗಿರುವ ಜಗತ್ತನ್ನು ನೋಡಿ ಪುನಃ ಅದನ್ನು ಯಥಾಪೂರ್ವವಾಗಿ ಸೃಷ್ಟಿಸುವ ಆಶಯದಿಂದ ಪ್ರಜೆಗಳ ಉತ್ಪತ್ತಿಗಾಗಿ ಸನಾತನನಾದ ಭಗವಂತನು ಧ್ಯಾನಾಸಕ್ತನಾದನು. ಅವನು ಧ್ಯಾನಮಾಡಿದ ಮರುಕ್ಷಣದಲ್ಲಿಯೇ ಅವನ ನಾಭಿಯಿಂದ ಕಮಲಪುಷ್ಪವು ಹುಟ್ಟಿತು. ಆ ಕಮಲಪುಷ್ಪದಿಂದ ಒಡನೆಯೇ ಚತುರ್ಮುಖಬ್ರಹ್ಮನು ಹುಟ್ಟಿದನು. ಲೋಕಪಿತಾಮಹನಾದ ಚತುರ್ಮುಖನು ನಾಭಿಕಮಲದಲ್ಲಿ ಕುಳಿತು ಸರ್ವತ್ರ ಶೂನ್ಯವಾಗಿದ್ದ ವಿಶ್ವವನ್ನು ನೋಡಿ ತನಗೆ ಸಮಾನರಾದ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ,

ಪುಲಹ, ಕ್ರತು, ವಸಿಷ್ಠ, ನಾರದ, ಭೃಗು–ಈ ಒಂಬತ್ತು ಮಹರ್ಷಿಗಳನ್ನು ತನ್ನ ಮನಸ್ಸಂಕಲ್ಪದಿಂದಲೇ ಸೃಷ್ಟಿಸಿದನು. ಅವರಿಗೆ ಬ್ರಹ್ಮಮಾನಸಪುತ್ರ ರೆಂದೇ ಹೆಸರು. ಆ ಒಂಬತ್ತು ಮಂದಿ ಬ್ರಹ್ಮಮಾನಸಪುತ್ರರು ಪಂಚಭೂತ ಗಳನ್ನೂ, ಸ್ಥಾವರ-ಜಂಗಮಗಳನ್ನೂ, ಯಕ್ಷ-ರಾಕ್ಷಸ-ಭೂತ-ಪಿಶಾಚೋ ರಗ-ಮನುಷ್ಯರನ್ನೂ ಸೃಷ್ಟಿಸಿದರು. ಪರಾತ್ಪರನಾದ ಪರಬ್ರಹ್ಮನಿಗೆ ಮೂರು ಅವಸ್ಥೆಗಳಿರುತ್ತವೆ.

**ಸೃಜ್ಯತೇ ಬ್ರಹ್ಮಮೂರ್ತಿಸ್ತು ರಕ್ಷತೇ ಪೌರುಷೀ ತನುಃ ।**
**ರೌದ್ರೀಭಾವೇನ ಶಮಯೇತ್ತಿಸ್ರೋಽವಸ್ಥಾಃ ಪ್ರಜಾಪತೇಃ ॥೪೭॥**

ಬ್ರಹ್ಮಮೂರ್ತಿಯಾಗಿ ಪ್ರಪಂಚವನ್ನು ಸೃಷ್ಟಿಸುತ್ತಾನೆ. ವಿಷ್ಣು ಮೂರ್ತಿಯಾಗಿ ಸೃಷ್ಟಿಸಿದ ಪ್ರಪಂಚವನ್ನು ಸಂರಕ್ಷಿಸುತ್ತಾನೆ. ರುದ್ರಮೂರ್ತಿ ಯಾಗಿ ಪ್ರಪಂಚವನ್ನು ಉಪಸಂಹಾರಮಾಡುತ್ತಾನೆ. ಈ ಪ್ರಕಾರವಾಗಿ ಪ್ರಜಾಪಾಲಕನಾದ ಭಗವಂತನಿಗೆ ಮೂರು ಅವಸ್ಥೆಗಳಿವೆ.

ಸೈಂಧವ! ಮುನಿಗಳಿಂದಲೂ ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರಿಂದಲೂ ಸ್ತೋತ್ರಮಾಡಲ್ಪಡುವ, ಮಹಾಮಹಿಮನಾದ, ಅದ್ಭುತ ಕಾರ್ಯಗಳನ್ನು ಮಾಡುವ ಶ್ರೀಮಹಾವಿಷ್ಣುವಿನ ಕಥೆಯನ್ನು ಕೇಳಿದೆಯಲ್ಲವೆ? ಆ ಮಹಾವಿಷ್ಣುವಿನ ಅದ್ಭುತಕಾರ್ಯಗಳನ್ನು ಹೇಳುವೆನು, ಕೇಳು :

ಮಹಾವಿಷ್ಣುವಿನ ನಾಭಿಕಮಲದಿಂದ ಉತ್ಪನ್ನನಾದ ಚತುರ್ಮುಖನು ಪ್ರಜೆಗಳನ್ನು ಸೃಷ್ಟಿಸಲು ಉಪಕ್ರಮಿಸಿದನು. ಆದರೆ ಆ ಪ್ರಜೆಗಳಿಗೆ ವಾಸಿಸಲು ಭೂಮಿಯಿರಬೇಕಲ್ಲವೇ? ಭೂಮಿಯೆಲ್ಲವೂ ನೀರಿನಲ್ಲಿ ಮುಳುಗಿಹೋಗಿ ದ್ದಿತು. ವಿಶ್ವವೆಲ್ಲವೂ ಜಲಮಯವಾಗಿದ್ದಿತು. ಮಳೆಗಾಲದ ರಾತ್ರಿಯಲ್ಲಿ ಮಿಂಚುಹುಳುವೊಂದು ಸರ್ವತ್ರ ಹಾರಾಡುವಂತೆ ಮಹಾವಿಷ್ಣುವು ಸರ್ವತ್ರ ವ್ಯಾಪಿಸಿದ್ದು ತಾನು ಚತುರ್ಮುಖಮೂರ್ತಿಯ ರೂಪದಿಂದ ಮಾಡಿದ ಸೃಷ್ಟಿ ಯನ್ನು ಭೂಮಿಯಲ್ಲಿ ಪ್ರತಿಷ್ಠಾಪಿಸಲು ಉದ್ದೇಶಿಸಿದನು. 'ಈ ಭೂಮಿ ಯನ್ನು ಮೇಲಕ್ಕೆತ್ತಬೇಕಾದರೆ ನಾನು ಯಾವ ಆಕಾರವನ್ನು ಧರಿಸಲಿ?'– ಎಂದು ಸ್ವಲ್ಪಕಾಲ ಮಹಾವಿಷ್ಣುವು ಅಂತರ್ಮುಖನಾಗಿ ತನ್ನಲ್ಲಿಯೇ ತಾನು ಚಿಂತಿಸುತ್ತಿದ್ದಾಗ ಜಲಕ್ರೀಡೆಯಲ್ಲಿ ಹೆಚ್ಚಿನ ಅಭಿರುಚಿಯಿರುವ ವರಾಹ ರೂಪವನ್ನು ಸ್ಮರಿಸಿದನು.

ಚತುರ್ವೇದಮಯವಾದ, ಯಜ್ಞರೂಪವಾದ ಮಹಾವರಾಹದ ರೂಪವನ್ನು ಮಹಾವಿಷ್ಣುವು ಧರಿಸಿದನು. ಆ ಮಹಾವರಾಹವು ಹತ್ತು ಯೋಜನಗಳಷ್ಟು ಅಗಲವಾಗಿಯೂ–ನೂರು ಯೋಜನಗಳಷ್ಟು ಉದ್ದವಾಗಿಯೂ ಇದ್ದಿತು. ಮಹಾಪರ್ವತದ ಶರೀರದಂತೆ ಆ ವರಾಹದ ಶರೀರವಿದ್ದಿತು. ಆ ವರಾಹಕ್ಕೆ ಉಜ್ವಲವಾಗಿ ಪ್ರಕಾಶಿಸುತ್ತಿದ್ದ ಕೋರೆದಾಡೆಗಳಿದ್ದುವು. ಮಹಾಮೇಘವು ಗರ್ಜಿಸುವಂತೆ–ಮಹಾವರಾಹವು ಗರ್ಜಿಸುತ್ತಿದ್ದಿತು. ನೀಲವಾದ ಕಾರ್ಮುಗಿಲಿನಂತೆ ಅದರ ಬಣ್ಣವಿದ್ದಿತು. ಇಂತಹ ಪರಮಾದ್ಭುತವಾದ ಯಜ್ಞವರಾಹದ ರೂಪವನ್ನು ಧರಿಸಿ ಪ್ರಭುವಾದ ಮಹಾವಿಷ್ಣುವು ಅಪಾರವಾದ ನೀರಿನೊಳಗೆ ಮುಳುಗಿ ಒಂದೇ ಒಂದು ಕೋರೆದಾಡೆಯಿಂದ ಅಲ್ಲಿದ್ದ ಭೂಮಿಯನ್ನೆತ್ತಿಕೊಂಡು ನೀರಿನಿಂದ ಮೇಲಕ್ಕೆ ಬಂದು ಭೂಮಿಯನ್ನು ಯಥಾಸ್ಥಾನದಲ್ಲಿ ಪ್ರತಿಷ್ಠಾಪಿಸಿದನು.

ಸೈಂಧವ! ಆ ಮಹಾಪುರುಷನ ಮತ್ತೊಂದು ಅವತಾರದ ಕಥೆಯನ್ನೂ ಹೇಳುತ್ತೇನೆ ; ಕೇಳುವವನಾಗು ; ಮತ್ತೊಮ್ಮೆ ಮಹಾಬಾಹುವಾದ ಮಹಾವಿಷ್ಣುವು ಅಪೂರ್ವವಾದ ಶರೀರವನ್ನು ಧಾರಣೆಮಾಡಿದನು. ಅವನ ಆ ಶರೀರದ ಅರ್ಧಭಾಗವು ಮಾನವರೂಪವನ್ನೂ ಉಳಿದರ್ಧಭಾಗವು ಸಿಂಹದ ರೂಪವನ್ನೂ ಹೊಂದಿದ್ದಿತು. ಇಂತಹ ಪರಮಾದ್ಭುತವಾದ ನರಸಿಂಹನ ರೂಪವನ್ನು ಧರಿಸಿದ ಮಹಾವಿಷ್ಣುವು ತನ್ನೆರಡು ಕೈಗಳನ್ನೂ ಮಸೆಯುತ್ತಾ ದೈತ್ಯೇಂದ್ರನಾದ, ದೇವತೆಗಳ ಶತ್ರುವಾದ ಹಿರಣ್ಯಕಶಿಪುವಿನ ಆಸ್ಥಾನಕ್ಕೆ ತೆರಳಿದನು. ದೈತ್ಯರಿಗೆಲ್ಲರಿಗೂ ಆದಿಪುರುಷನಾದ, ದೇವತೆಗಳ ಶತ್ರುವಾದ, ದಿತಿಯ ಮಗನಾದ ಹಿರಣ್ಯಕಶಿಪುವು ನರಸಿಂಹಮೂರ್ತಿಯನ್ನು ಕಂಡು ಕೋಪಾವಿಷ್ಟನಾಗಿ ಕಣ್ಣುಗಳನ್ನು ಕೆಂಪುಮಾಡಿ ಮೇಘದಂತೆ ಗರ್ಜನೆಮಾಡುತ್ತಾ, ತ್ರಿಶೂಲಾಯುಧವನ್ನು ಕೈಯಲ್ಲಿ ಹಿಡಿದು ನರಸಿಂಹಸ್ವಾಮಿಯ ಮೇಲೆ ನುಗ್ಗಿದನು. ಹಿರಣ್ಯಕಶಿಪುವು ನರಸಿಂಹಸ್ವಾಮಿಯನ್ನು ಸಮೀಪಿಸುವುದರಲ್ಲಿದ್ದಾಗಲೇ ದೇವದೇವನು ಛಂಗನೆ ಹಾರಿ ಹಿರಣ್ಯಕಶಿಪುವನ್ನು ಹಿಡಿದೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ಅವನ ಎದೆಯನ್ನು ತನ್ನ ಹರಿತವಾದ ಕೈಯುಗುರುಗಳಿಂದ ಎರಡು ಭಾಗವಾಗಿ ಸೀಳಿಬಿಟ್ಟನು. ಈ ರೀತಿಯಾಗಿ ಮಹಾವಿಷ್ಣುವು

ನೃಸಿಂಹಾವತಾರಮಾಡಿ ದೇವತೆಗಳಿಗೆ ಬಹುವಾಗಿ ಉಪದ್ರವಕೊಡುತ್ತಿದ್ದ ದೈತ್ಯೇಂದ್ರನಾದ ಹಿರಣ್ಯಕಶಿಪುವನ್ನು ಸಂಹರಿಸಿದನು.

ಪುನಃ ಪುಂಡರೀಕಾಕ್ಷನಾದ, ಪ್ರಭುವಾದ ಮಹಾವಿಷ್ಣುವು ಲೋಕ ಹಿತಕ್ಕಾಗಿ ಕಶ್ಯಪನ ಮಗನಾಗಿ ಅದಿತಿಯ ಗರ್ಭದಲ್ಲಿ ಒಂದು ಸಾವಿರ ವರ್ಷ ಗಳ ಪರ್ಯಂತವಾಗಿದ್ದು ಅನಂತರದಲ್ಲಿ ಹುಟ್ಟಿದನು. ನೀಲಮೇಘಸದೃಶ ನಾದ, ಫಳ-ಫಳಿಸುತ್ತಿದ್ದ ಕಣ್ಣುಗಳಿಂದ ಕೂಡಿದ್ದ, ಹ್ರಸ್ವಾಕಾರನಾಗಿದ್ದ, ದಂಡ-ಕಮಂಡಲುಗಳನ್ನು ಧರಿಸಿದ್ದ, ಶ್ರೀವತ್ಸವೆಂಬ ಮಚ್ಚೆಯನ್ನು ಎದೆಯಲ್ಲಿ ಧರಿಸಿದ್ದ, ಜಟೆಯನ್ನೂ ಯಜ್ಞೋಪವೀತವನ್ನೂ ಧರಿಸಿ ಬಾಲಬ್ರಹ್ಮ ಚಾರಿಯಂತೆ ಕಾಣುತ್ತಿದ್ದ ಭಗವಂತನಾದ ಶ್ರೀ ವಾಮನಮೂರ್ತಿಯು, ದೇವ ಪುರೋಹಿತನಾದ ಬೃಹಸ್ಪತಿಗೆ ಸಹಾಯಕನಾಗಿ (ಶಿಷ್ಯನಾಗಿ) ದಾನವೇಂದ್ರ ನಾದ ಬಲಿಚಕ್ರವರ್ತಿಯ ಯಜ್ಞಶಾಲೆಯನ್ನು ಪ್ರವೇಶಿಸಿದನು. ಕುಬ್ಜನಾಗಿದ್ದ, ನೋಡಲು ಬಹುಸುಂದರನಾಗಿದ್ದ, ಬಾಲಬ್ರಹ್ಮಚಾರಿಯಾದ ವಾಮನ ಮೂರ್ತಿಯನ್ನು ನೋಡಿ ಬಲಿಚಕ್ರವರ್ತಿಯು ಸಂತೋಷಭರಿತನಾಗಿ ವಾಮನನನ್ನು ಕುರಿತು ಹೇಳಿದನು :

"ಬ್ರಾಹ್ಮಣವಟುವೇ! ನಿನ್ನನ್ನು ಕಂಡು ನನಗೆ ಬಹಳ ಆನಂದವಾಗಿದೆ. ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿರುತ್ತೇನೆ. ನನ್ನಿಂದ ನಿನಗೇನಾಗ ಬೇಕಾಗಿದೆಯೆಂಬುದನ್ನು ಹೇಳು."

ಬಲಿಚಕ್ರವರ್ತಿಯ ಮಾತನ್ನು ಕೇಳಿದೊಡನೆಯೇ ವಾಮನ ಮೂರ್ತಿಯು ನಸುನಗುತ್ತಾ ಹೇಳಿದನು :

'ನಿನಗೆ ಮಂಗಳವಾಗಲಿ. **ಮೇದಿನೀಂ ದಾನವಪತೇ ದೇಹಿ ಮೇ ವಿಕ್ರಮತ್ರಯಮ್ ।** ದಾನವೇಶ್ವರನೇ! ನನಗೆ ಮೂರು ಹೆಜ್ಜೆಗಳ ಪರಿ ಮಾಣದಷ್ಟು ಭೂಮಿಯನ್ನು ಕೊಡು.'

ಬಲಿಚಕ್ರವರ್ತಿಯು ಪ್ರಸನ್ನಾತ್ಮನಾಗಿ ಮಹಾತೇಜಸ್ವಿಯಾಗಿದ್ದ, ವಿಪ್ರ ರೂಪಿಯಾಗಿದ್ದ ವಾಮನಮೂರ್ತಿಗೆ ಮೂರು ಹೆಜ್ಜೆಗಳಷ್ಟು ಪರಿಮಾಣದ ಭೂಮಿಯನ್ನು ದಾನವಾಗಿ ಕೊಡಲೊಪ್ಪಿದನು. ಭೂಮಿಯನ್ನು ಅಳೆದು ಕೊಳ್ಳಲು ಹೋದಾಗ ವಾಮನಮೂರ್ತಿಯು ತ್ರಿವಿಕ್ರಮನೆಂಬ ಪರಮಾದ್ಭುತ

ವಾದ ರೂಪವನ್ನು ಧರಿಸಿದವನಾಗಿ ಮೂರೇ ಹೆಜ್ಜೆಗಳಿಂದ ಬಲಿಚಕ್ರವರ್ತಿಯ ಅಧೀನದಲ್ಲಿದ್ದ ಸಕಲಭುವನಗಳನ್ನೂ ತನ್ನದನ್ನಾಗಿ ಮಾಡಿಕೊಂಡನು. ಸನಾತನನಾದ ಮಹಾವಿಷ್ಣುವು ಈ ರೀತಿಯಿಂದ ಪಡೆದ ಸಕಲಭುವನಗಳನ್ನೂ ಇಂದ್ರನಿಗೆ ಕೊಟ್ಟುಬಿಟ್ಟನು.

ಸೈಂಧವ! ನಿನಗೀಗ ಅದ್ಭುತವಾದ ವಾಮನಾವತಾರದ ಕಥೆಯನ್ನು ಹೇಳಿಯಾಯಿತು. ಮಹಾವಿಷ್ಣುವಿನಿಂದಲೇ ದೇವತೆಗಳೂ ಉದ್ಭೂತರಾದರು. ಈ ಜಗತ್ತೂ ಸಹ ಅವನಿಂದಲೇ ಉದ್ಭೂತವಾದುದರಿಂದ ಇದನ್ನು ವೈಷ್ಣವವೆಂದೂ, ವಿಷ್ಣುಮಯವಾದುದೆಂದೂ ಹೇಳುತ್ತಾರೆ.

ಸೈಂಧವ! ಆ ಮಹಾವಿಷ್ಣುವೇ ಇಂದು–

**ಅಸತಾಂ ನಿಗ್ರಹಾರ್ಥಾಯ ಧರ್ಮಸಂರಕ್ಷಣಾಯ ಚ ।**
**ಅವತೀರ್ಣೋ ಮನುಷ್ಯಾಣಾಮಜಾಯತ ಯದುಕ್ಷಯೇ ।**
**ಸ ಏವ ಭಗವಾನ್ವಿಷ್ಣುಃ ಕೃಷ್ಣೇತಿ ಪರಿಕೀರ್ತ್ಯತೇ ॥೭೨॥**

ದುಷ್ಟರ ನಿಗ್ರಹಾರ್ಥವಾಗಿಯೂ, ಧರ್ಮದ ಸಂರಕ್ಷಣಾರ್ಥವಾಗಿಯೂ ಮನುಷ್ಯನಾಗಿ ಯಾದವರ ವಂಶದಲ್ಲಿ ಅವತರಿಸಿದ್ದಾನೆ. ಪರಾತ್ಪರನಾದ ಆ ಮಹಾವಿಷ್ಣುವೇ ಇಲ್ಲಿ ಕೃಷ್ಣನೆಂದು ಕರೆಯಲ್ಪಡುತ್ತಿದ್ದಾನೆ. ಆದ್ಯಂತರಹಿತನಾದ, ಹುಟ್ಟು-ಸಾವುಗಳಿಲ್ಲದ, ಪ್ರಭುವಾದ, ಸಕಲಲೋಕಗಳಿಂದಲೂ ನಮಸ್ಕೃತನಾದ ಯಾವ ದೇವನನ್ನು ಮತ್ತು ಯಾವ ದೇವನು ಮಾಡಿದ ಅದ್ಭುತಕಾರ್ಯಗಳನ್ನು ವಿದ್ವಾಂಸರು ಗಾನಮಾಡುತ್ತಾರೆಯೋ–ಆ ಮಹಾಪುರುಷನೇ ಕೃಷ್ಣನಾಗಿರುತ್ತಾನೆ. ಶಂಖ-ಚಕ್ರ-ಗದಾಧರನಾದ, ಶ್ರೀವತ್ಸಧಾರಿಯಾದ, ಹಳದೀ ಬಣ್ಣದ ರೇಷ್ಮೆಯ ವಸ್ತ್ರವನ್ನು ಧರಿಸಿರುವ ಶ್ರೀಕೃಷ್ಣನನ್ನು ಜ್ಞಾನಿಗಳು ಅಪರಾಜಿತನೆಂದು ಹೇಳುತ್ತಾರೆ. ಅಸ್ತ್ರವಿದರಲ್ಲಿ ಪರಮಶ್ರೇಷ್ಠನೆನಿಸಿದ ಅರ್ಜುನನನ್ನು ಶ್ರೀಕೃಷ್ಣನು ಸರ್ವದಾ ಸಂರಕ್ಷಿಸುತ್ತಿರುತ್ತಾನೆ. ಪುಂಡರೀಕಾಕ್ಷನಾದ, ಶ್ರೀಮಂತನಾದ, ಅಮಿತಪರಾಕ್ರಮಿಯಾದ ಶ್ರೀಕೃಷ್ಣನು ಪಾರ್ಥನೊಡನೆ ಒಂದೇ ರಥದಲ್ಲಿ ಕುಳಿತು ಅವನಿಗೆ ಸಹಾಯಕನಾಗಿರುತ್ತಾನೆ. ಈ ಕಾರಣದಿಂದಲೇ ಪಾರ್ಥನು ದೇವತೆಗಳಿಂದಲೂ ಸಹ ಜಯಿಸಲು ಶಕ್ಯನಲ್ಲ.

ಹೀಗಿರುವಾಗ ಮನುಷ್ಯನಾದವನು ಯುದ್ಧದಲ್ಲಿ ಪಾರ್ಥನನ್ನು ಜಯಿಸುವ ಸಾಧ್ಯತೆಯಿರುವುದೇ? ಸೈಂಧವ! ಆದುದರಿಂದ ನೀನೆಂದಿಗೂ ಪಾರ್ಥನ ಗೊಡವೆಗೆ ಹೋಗಬೇಡ. ಅವನೊಬ್ಬನನ್ನು ಬಿಟ್ಟು ಉಳಿದ ನಾಲ್ವರನ್ನೂ ಮತ್ತು ಅವರ ಅಪಾರಸೈನ್ಯವನ್ನೂ ನೀನು ರಣರಂಗದಲ್ಲಿ ಒಂದು ದಿನ ಮಾತ್ರ ಜಯಿಸುವ ಸಾಮರ್ಥ್ಯವನ್ನು ನನ್ನ ಅನುಗ್ರಹದಿಂದ ಪಡೆಯುವೆ."

ಜನಮೇಜಯ! ಸರ್ವಪಾಪಹರನಾದ, ಉಮಾಪತಿಯಾದ, ಪಶುಪತಿಯಾದ, ದಕ್ಷಯಜ್ಞಧ್ವಂಸಕನಾದ, ತ್ರಿಪುರಸಂಹಾರಕನಾದ, ಭಗನೇತ್ರಾಪಹಾರಕನಾದ, ತ್ರ್ಯಂಬಕನಾದ ಹರನು ಸೈಂಧವನಿಗೆ ಹೀಗೆಂದು ಹೇಳಿ, ವಾಮರೂಪಿಗಳೂ, ಕುಬ್ಜರೂ, ವಿಕಟರೂ, ಭಯಂಕರವಾದ ಕಣ್ಣು-ಕಿವಿಗಳುಳ್ಳವರೂ, ಉದಾಯುಧರೂ ಆದ ಪ್ರಮಥರಿಂದ ಪರಿವೃತನಾಗಿ ಪಾರ್ವತಿಯೊಡನೆ ಅಂತರ್ಹಿತನಾದನು.

ಮೂಢನಾದ ಜಯದ್ರಥನಾದರೋ ತನಗೆ ಪ್ರಾಪ್ತವಾದ ವರದಿಂದಲೇ ಸಂತುಷ್ಟನಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಪಾಂಡವರು ಯಥಾಪೂರ್ವವಾಗಿ ಕಾಮ್ಯಕವನದಲ್ಲಿಯೇ ವಾಸಮಾಡುತ್ತಿದ್ದರು."

೨೭೨ನೆಯ ಅಧ್ಯಾಯವು ಮುಗಿಯಿತು.

೨೭೩ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ

## ಯುಧಿಷ್ಠಿರನು ತನ್ನ ದುರವಸ್ಥೆಯನ್ನು ಮಾರ್ಕಂಡೇಯರಿಗೆ ವಿವರಿಸಿ ಹೇಳಿದುದು

"ವೈಶಂಪಾಯನರೇ! ಪುರುಷವ್ಯಾಘ್ರರಾದ ನಮ್ಮ ಮುತ್ತಾತಂದಿರು ಜಯದ್ರಥನು ದ್ರೌಪದಿಯನ್ನು ಅಪಹರಣಮಾಡಿದ್ದರಿಂದ ಬಹುವಾದ ಕ್ಲೇಶವನ್ನನುಭವಿಸಿದರು. ದ್ರೌಪದಿಯ ಬಿಡುಗಡೆಯಂತೂ ಆಯಿತು. ಅನಂತರದಲ್ಲವರು ಕಾಮ್ಯಕವನದಲ್ಲೇನು ಮಾಡುತ್ತಿದ್ದರೆಂಬುದನ್ನು ಹೇಳಿರಿ. ಅವರ ಕಷ್ಟಗಳಿಗೆ ಅಂತ್ಯವೇ ಇಲ್ಲವೇ?"–ಎಂದು ಜನಮೇಜಯನು ಕೇಳಿದ ಪ್ರಶ್ನೆಗೆ ವೈಶಂಪಾಯನರು ಉತ್ತರಿಸಿದರು :

"ಜನಮೇಜಯ! ಜಯದ್ರಥನನ್ನೂ, ಅವನ ಅಪಾರಸೈನ್ಯವನ್ನೂ ಸೋಲಿಸಿಯಾಯಿತು. ದ್ರೌಪದಿಯ ಬಿಡುಗಡೆಯೂ ಆಯಿತು. ಜಯದ್ರಥನು ಮಾಡಿದ ಅಪರಾಧಕ್ಕೆ ಅನುಗುಣವಾದ ಶಿಕ್ಷೆಯೂ ಆಯಿತು. ಅನಂತರದಲ್ಲಿ ಧರ್ಮಾತ್ಮನಾದ ಯುಧಿಷ್ಠಿರನು ಯಥಾಪೂರ್ವವಾಗಿ ತನ್ನ ನಿತ್ಯಕರ್ಮಗಳೆಲ್ಲವನ್ನೂ ಮುಗಿಸಿಕೊಂಡು ವಿರಾಮಕಾಲದಲ್ಲಿ ಮಾತನಾಡುತ್ತಾ ಕುಳಿತನು. ಅಲ್ಲಿ ಕುಳಿತಿದ್ದ ಋಷಿಗಳೂ, ಬ್ರಾಹ್ಮಣರೂ ದ್ರೌಪದಿಯ ದುರದೃಷ್ಟವನ್ನು ಪ್ರಸ್ತಾಪಿಸಿ ನಿಟ್ಟುಸಿರುಬಿಡುತ್ತಿದ್ದರು. 'ಇಂತಹ ಸಾಧ್ವಿಗೆ ದುಷ್ಟ ಸೈಂಧವನು ಈ ವಿಧವಾದ ಕಷ್ಟವನ್ನು ಕೊಡಬಾರದಾಗಿತ್ತು'– ಎಂದು ಅವರು ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ಪಾಂಡುಪುತ್ರನಾದ ಯುಧಿಷ್ಠಿರನು ಮಾರ್ಕಂಡೇಯಮಹರ್ಷಿಗಳನ್ನು ಪ್ರಶ್ನಿಸಿದನು :

"ಭಗವನ್! ನೀವು ದೇವರ್ಷಿಗಳಲ್ಲಿ ವಿಖ್ಯಾತರಾದವರು. ಭೂತ-ಭವಿಷ್ಯದ್ವರ್ತಮಾನಗಳನ್ನೂ ತಿಳಿದವರು. ನನ್ನ ಹೃದಯದಲ್ಲಿ ಉದ್ಭೂತವಾಗಿರುವ ಸಂಶಯವನ್ನು ನಿಮ್ಮ ಮುಂದಿಡುತ್ತೇನೆ. ಆ ಸಂಶಯವನ್ನು ನಿವಾರಣೆಮಾಡಲು ನೀವು ಸಮರ್ಥರಾಗಿರುವಿರಿ. ಈ ನಮ್ಮ ಭಾರ್ಯೆಯು ದ್ರುಪದಮಹಾರಾಜನ ಮಗಳು. ಅಯೋನಿಜೆ. ಯಜ್ಞೇಶ್ವರನಿಂದ ಜನ್ಮ ಪಡೆದವಳು. ಅಗ್ನಿಕನ್ಯೆ. ಸರ್ವಲಕ್ಷಣಸಂಪನ್ನಳು. ಮಹಾತ್ಮನಾದ ಪಾಂಡು ಮಹಾರಾಜನ ಸೊಸೆ. ಇಂತಹವಳಿಂದು ಈ ವಿಧವಾದ ಕಷ್ಟ-ಕಾರ್ಪಣ್ಯಗಳಿಗೆ ಗುರಿಯಾಗಿರುತ್ತಾಳೆ. ಆದುದರಿಂದ ನಾನು ಈ ಸಿದ್ಧಾಂತಕ್ಕೆ ಬಂದಿರುತ್ತೇನೆ. ಕಾಲವೇ ಭಗವಂತ. ಅದೃಷ್ಟ-ದುರದೃಷ್ಟಗಳು ವಿಧಿನಿರ್ಮಿತವಾದುವುಗಳು. ವಿಧಿವಿಲಾಸದಿಂದ ಪ್ರಾಪ್ತವಾಗತಕ್ಕ ಪ್ರಾಣಿಗಳ ಕಷ್ಟ-ಸುಖಗಳು ಅಪರಿಹಾರ್ಯವಾದುವುಗಳು. ಹಣೆಯ ಬರಹದಂತೆ ಆಯಾಕಾಲಕ್ಕೆ ಪ್ರಾಪ್ತವಾಗುವ ಇಷ್ಟಾನಿಷ್ಟಗಳನ್ನು ಮಾನವನು ಅನುಭವಿಸಿಯೇ ತೀರಬೇಕು. ವಿಧಿಪ್ರಾಪ್ತವಾದ ಈ ಅನಿಷ್ಟಗಳು ಸತ್ಪುರುಷರಾಗಿರುವುದರಿಂದಾಗಲೀ, ಸತ್ಕುಲದಲ್ಲಿ ಹುಟ್ಟುವುದರಿಂದಾಗಲೀ ಪರಿಹಾರ್ಯವಾಗತಕ್ಕುವುಗಳಲ್ಲ. ಇವುಗಳನ್ನು ಅನುಭವಿಸಿಯೇ ತೀರಬೇಕು. ಹಾಗಲ್ಲದೇ ಒಂದು ವೇಳೆ ಸತ್ಕುಲಪ್ರಸೂತರಿಗೆ, ಧರ್ಮಾತ್ಮರಿಗೆ, ಸತ್ಯ-ಧರ್ಮಗಳಲ್ಲಿಯೇ ಸದಾನಿರತರಾಗಿರುವವರಿಗೆ ಯಾವ ವಿಧವಾದ ಅನಿಷ್ಟಗಳೂ ಪ್ರಾಪ್ತವಾಗಲಾರವು–

ಎನ್ನುವುದಾದರೆ ನಮ್ಮ ಪತ್ನಿಯಾದ ಈ ದ್ರೌಪದಿಯು ಧರ್ಮಜ್ಞಳೂ, ಧರ್ಮವಿಹಿತವಾದ ಕಾರ್ಯಗಳನ್ನೇ ಮಾಡತಕ್ಕವಳೂ ಆಗಿದ್ದರೂ ಏಕಿಂದು ಇಂತಹ ಕಷ್ಟದಲ್ಲಿ ಸಿಲುಕಿದಳು? ಸತ್ಪುರುಷನಾದವನೊಬ್ಬನು ಕಳ್ಳತನದ, ಅನೃತಭಾಷಣದ ಆಪಾದನೆಗೆ ಸಿಕ್ಕಿಬೀಳುವಂತೆ–ಸಾಧ್ವಿಯಾದ ಇವಳು ನಾನಾ ವಿಧವಾದ ಕಷ್ಟ-ಕೋಟಲೆಗಳಿಗೆ ಸಿಕ್ಕುತ್ತಿದ್ದಾಳೆ. ದ್ರೌಪದಿಯಾದರೋ ಲೇಶ ಮಾತ್ರವೂ ಪಾಪವನ್ನು ಮಾಡಿರುವುದಿಲ್ಲ. ನಿಂದ್ಯವಾದ ಯಾವ ಕಾರ್ಯ ವನ್ನೂ ಮಾಡಿರುವುದಿಲ್ಲ.

ಬ್ರಾಹ್ಮಣರ ವಿಷಯದಲ್ಲಿ ಇವಳು ಅಪಾರವಾದ ಭಕ್ತಿಯನ್ನಿಟ್ಟಿದ್ದಾಳೆ. ಅವರ ಸತ್ಕಾರದಲ್ಲಿಯೇ ಯಾವಾಗಲೂ ನಿರತಳಾಗಿರುತ್ತಾಳೆ. ಹೀಗಿದ್ದರೂ ಸಹ ಮೂಢನಾದ ಜಯದ್ರಥನು ಇವಳನ್ನು ಬಲಾತ್ಕಾರದಿಂದ ಅಪಹರಿಸಿ ಕೊಂಡು ಹೋಗಿದ್ದನು. ಅವನು ಮಾಡಿದ ಅಪರಾಧಕ್ಕಾಗಿ ಯುದ್ಧದಲ್ಲಿ ಅವನನ್ನು ಸೋಲಿಸಿದುದೇ ಅಲ್ಲದೇ–ಅವನ ತಲೆಯನ್ನೂ ವಿರೂಪಗೊಳಿಸಿ ಅವಮಾನಗೊಳಿಸಲಾಯಿತು. ಜಯದ್ರಥನ ಅಸಂಖ್ಯಾತಸೈನಿಕರನ್ನೂ ಧ್ವಂಸ ಮಾಡಿ ದ್ರೌಪದಿಯನ್ನು ಬಿಡುಗಡೆಮಾಡಿಕೊಂಡೂ ಬಂದೆವು. ಇದು ನಿಜ. ಆದರೆ ನಮ್ಮ ಹೆಂಡತಿಯನ್ನು ಬೇರೊಬ್ಬರು ಇಷ್ಟು ಧೈರ್ಯವಾಗಿ ಅಪಹರಿಸಿ ಕೊಂಡು ಹೋಗುವರೆಂಬುದನ್ನು ನಾವು ಕನಸು-ಮನಸಿನಲ್ಲಿಯೂ ಯೋಚಿ ಸಿರಲಿಲ್ಲ. ಮಹರ್ಷಿಗಳೇ! ನಿಶ್ಚಯವಾಗಿಯೂ ಈ ವನವಾಸವೂ ಮತ್ತು ಬೇಟೆಯಿಂದಲೇ ಜೀವಿಸುವ ಈ ಜೀವಿತವೂ ಬಹಳ ದುಃಖಕರವಾದುದು. ನಾವು ಈ ವನ್ಯಮೃಗಗಳ ಜೊತೆಯಲ್ಲಿಯೇ ಈ ಅರಣ್ಯದಲ್ಲಿ ಜೀವಿಸುತ್ತಿ ದ್ದೇವೆ. ನಮ್ಮ ಜೊತೆಯಲ್ಲಿರುವ ಈ ಪ್ರಾಣಿಗಳನ್ನೇ ನಾವು ಕೊಂದು ಜೀವಿಸ ಬೇಕಾಗಿದೆ. ಕಪಟಿಗಳಾದ ನಮ್ಮ ಜ್ಞಾತಿಗಳಿಂದ ನಾವು ಈ ಅರಣ್ಯವಾಸವನ್ನು ಅನುಭವಿಸುತ್ತಿದ್ದೇವೆ. ಮಹರ್ಷಿಗಳೇ! ನಿಶ್ಚಯವಾಗಿ ಹೇಳಿರಿ. ನನ ಗಿಂತಲೂ ದುರ್ಭಾಗ್ಯನು ಈ ಪೃಥ್ವಿಯಲ್ಲಿ ಬೇರೊಬ್ಬನಿದ್ದಾನೆಯೇ? ತ್ರಿಕಾಲ ಜ್ಞಾನಿಗಳಾದ ನೀವು ಈ ಹಿಂದೆ ನನ್ನಂತಹ ಅದೃಷ್ಟಹೀನನಿದ್ದುದನ್ನು ಕಂಡಿ ದ್ದೀರಾ ಅಥವಾ ಕೇಳಿದ್ದೀರಾ?"

೨೭೩ನೆಯ ಅಧ್ಯಾಯವು ಮುಗಿಯಿತು.

೨೭೪ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಶ್ರೀರಾಮನೇ ಮೊದಲಾದವರ ಜನ್ಮವೃತ್ತಾಂತ : ಕುಬೇರನ ಜನ್ಮ ಮತ್ತು ಐಶ್ವರ್ಯಪ್ರಾಪ್ತಿ

ಮಾರ್ಕಂಡೇಯರು ಹೇಳುತ್ತಾರೆ :

"ಭರತರ್ಷಭ! ತ್ರೇತಾಯುಗದಲ್ಲಿ ಶ್ರೀರಾಮನೂ ಸಹ ಅಮಿತವಾದ ಭಾರ್ಯಾಪಹರಣದುಃಖವನ್ನು ಸ್ವತಃ ತಾನೇ ಅನುಭವಿಸಿದನು. ದುರಾತ್ಮನಾದ, ಮಹಾಬಲಿಷ್ಠನಾದ, ರಾಕ್ಷಸೇಂದ್ರನಾದ ರಾವಣನು ಮೋಸದಿಂದಲೇ ಸೀತೆಯನ್ನು ಆಶ್ರಮದಿಂದ ಬಲಾತ್ಕಾರವಾಗಿ ಅಪಹರಿಸಿಕೊಂಡು ಹೋದನು. ತನಗೆದುರಾಗಿ ಬಂದ ಜಟಾಯುವನ್ನೂ ಆ ದುಷ್ಟನು ಸಂಹರಿಸಿದನು.

**ಪ್ರತ್ಯಾಜಹಾರ ತಾಂ ರಾಮಃ ಸುಗ್ರೀವಬಲಮಾಶ್ರಿತಃ ।**
**ಬದ್ಧ್ವಾ ಸೇತುಂ ಸಮುದ್ರಸ್ಯ ದಗ್ಧ್ವಾ ಲಙ್ಕಾಂ ಶಿತೈಃ ಶರೈಃ ॥೩॥**

ಹೀಗೆ ಅಪಹೃತಳಾದ ಸೀತೆಯನ್ನು ರಾಮನು–ಸುಗ್ರೀವನ ಸಹಾಯವನ್ನು ಪಡೆದು, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕೆಯನ್ನು ತನ್ನ ಮಹಾಸ್ತ್ರಗಳಿಂದ ಭಸ್ಮೀಭೂತವನ್ನಾಗಿ ಮಾಡಿ–ಕರೆತಂದನು."

ಈ ಮಾತನ್ನು ಕೇಳಿದೊಡನೆಯೇ ಯುಧಿಷ್ಠಿರನು ಕುತೂಹಲದಿಂದ ಕೇಳಿದನು :

"ಮಹರ್ಷಿಗಳೇ! ರಾಮನು ಶ್ರೇಷ್ಠವಾದ ಯಾವ ಕುಲದಲ್ಲಿ ಹುಟ್ಟಿದವನು? ಅವನ ವೀರ್ಯ-ಪರಾಕ್ರಮಗಳ ಪರಿಮಾಣವೇನು? ರಾವಣನು ಯಾರ ಮಗನು? ರಾಮನ ಪತ್ನಿಯಾದ ಸೀತೆಯನ್ನು ಎತ್ತಿಕೊಂಡು ಹೋಗಲು ಕಾರಣವಾದರೂ ಏನಿದ್ದಿತು? ರಾಮ-ರಾವಣರಿಗೆ ವೈಮನಸ್ಯವೇನಾದರೂ ಇದ್ದಿತೇ?–ಈ ಎಲ್ಲ ವಿಷಯಗಳನ್ನೂ ಸವಿಸ್ತರವಾಗಿ ಹೇಳಲು ನೀವು ಸಮರ್ಥರಾಗಿದ್ದೀರಿ. ಯಾವ ಕೆಲಸದಲ್ಲಿಯೂ ಕ್ಲೇಶವೆಂಬುದನ್ನೇ ಅರಿಯದ ಶ್ರೀರಾಮನ ಚರಿತೆಯನ್ನು ನಾನು ಕೇಳಲು ಇಚ್ಛಿಸಿದ್ದೇನೆ."

"ಭರತಕುಲಪ್ರದೀಪನೇ! ನಿನ್ನ ಅಪೇಕ್ಷೆಯಂತೆಯೇ ನಾನು ಶ್ರೀರಾಮನ ಪುಣ್ಯಕಥೆಯನ್ನು ಸವಿಸ್ತರವಾಗಿಯೇ ಹೇಳುತ್ತೇನೆ. ಶ್ರೀರಾಮನು

ಪತ್ನಿಯಾದ ಸೀತೆಯೊಡನೆ ವನವಾಸಕಾಲದಲ್ಲಿ ಎಂತೆಂತಹ ಕಷ್ಟಗಳನ್ನು ಅನುಭವಿಸಿದನೆಂಬುದನ್ನು ಹೇಳುತ್ತೇನೆ. ಸಾವಧಾನದಿಂದ ಕೇಳು :

**ಅಜೋ ನಾಮಾಭವದ್ರಾಜಾ ಮಹಾನಿಕ್ಷ್ವಾಕುವಂಶಜಃ ।**
**ತಸ್ಯ ಪುತ್ರೋ ದಶರಥಃ ಶಶ್ವತ್ಸ್ವಾಧ್ಯಾಯವಾಞ್ಛುಚಿಃ ॥೬॥**

ಇಕ್ಷ್ವಾಕುವಂಶದಲ್ಲಿ ಅಜನೆಂಬ ರಾಜನೊಬ್ಬನಿದ್ದನು. ಅವನ ಪುತ್ರನಾದ ದಶರಥನು ವೇದ-ವೇದಾಂಗಪಾರಂಗತನಾಗಿಯೂ, ನಿತ್ಯಶುದ್ಧನಾಗಿಯೂ ಇದ್ದನು. ಧರ್ಮಾರ್ಥಕೋವಿದರಾದ, ಮಹಾಬಲಿಷ್ಠರಾದ ರಾಮ-ಲಕ್ಷ್ಮಣ-ಭರತ-ಶತ್ರುಘ್ನರೇ ದಶರಥನ ಮಕ್ಕಳು. ದಶರಥನಿಗೆ ಮೂವರು ಮಹಿಷಿಯರು. ಮೊದಲನೆಯವಳಾದ ಕೌಸಲ್ಯಾದೇವಿಯಲ್ಲಿ ರಾಮನೂ, ಎರಡನೆಯವಳಾದ ಕೈಕೇಯಿಯಲ್ಲಿ ಭರತನೂ, ಮೂರನೆಯವಳಾದ ಸುಮಿತ್ರಾದೇವಿಯಲ್ಲಿ ಲಕ್ಷ್ಮಣ-ಶತ್ರುಘ್ನರೂ ಹುಟ್ಟಿದರು.

ಜನಕನೆಂಬುವನು ವಿದೇಹವೆಂಬ ದೇಶಕ್ಕೆ ರಾಜನಾಗಿದ್ದನು. ಅವನಿಗೆ 'ಸೀತಾ' ಎಂಬ ಹೆಸರಿನ ಕಡುಚೆಲುವೆಯಾದ ಮಗಳಿದ್ದಳು. ಲೋಕಾಭಿರಾಮನಾದ ಶ್ರೀರಾಮನಿಗೆ ಪಟ್ಟಮಹಿಷಿಯಾಗತಕ್ಕವಳೆಂಬ ಆಶಯದಿಂದ ದೇವಶಿಲ್ಪಿಯಾದ ತ್ವಷ್ಟ್ರುವೇ ಸೀತಾದೇವಿಯ ಆಕೃತಿಯನ್ನು ತಾನೇ ಸಿದ್ಧಗೊಳಿಸಿದ್ದನು–ಎಂದ ಮೇಲೆ ಅವಳ ರೂಪವನ್ನು ವರ್ಣಿಸುವ ಅವಶ್ಯಕತೆಯಿಲ್ಲ.

ಯುಧಿಷ್ಠಿರ! ನಾನೀಗ ನಿನಗೆ ಸೀತಾ-ರಾಮರ-ಜನ್ಮವೃತ್ತಾಂತವನ್ನು ಹೇಳಿದೆನಲ್ಲವೇ? ಮುಂದೆ ನಾನು ರಾವಣನ ಜನ್ಮವೃತ್ತಾಂತವನ್ನು ಹೇಳುತ್ತೇನೆ.

ಸರ್ವಲೋಕಪಿತಾಮಹನಾದ, ಪ್ರಜಾಪತಿಯಾದ, ಸ್ವಯಂಭುವಾದ, ಸರ್ವಲೋಕಗಳಿಗೂ ಪ್ರಭುವಾದ, ಸೃಷ್ಟಿಕರ್ತನಾದ, ಮಹಾತಪಸ್ವಿಯಾದ ಚತುರ್ಮುಖಬ್ರಹ್ಮನೇ ರಾವಣನ ಪ್ರಪಿತಾಮಹನು. ಪುಲಸ್ತ್ಯನೆಂಬುವನು ಬ್ರಹ್ಮನ ಮಾನಸಪುತ್ರನು. ಪುಲಸ್ತ್ಯನಿಗೆ ಗೋವಿನಲ್ಲಿ ವೈಶ್ರವಣನೆಂಬುವನು ಹುಟ್ಟಿದನು. ಆದರೆ ವೈಶ್ರವಣನು ತಂದೆಯಾದ ಪುಲಸ್ತ್ಯನೊಡನಿರದೇ ಪಿತಾಮಹನಾದ ಬ್ರಹ್ಮನ ಬಳಿಗೇ ಹೊರಟುಹೋದನು. ಅದರಿಂದ ಕುಪಿತನಾದ ಪುಲಸ್ತ್ಯನು ವೈಶ್ರವಣನನ್ನು ಬಾಧೆಪಡಿಸುವ ಸಲುವಾಗಿ ಯೋಗಬಲ

ದಿಂದ ದೇಹಾರ್ಧದಿಂದ 'ವಿಶ್ರವಸ'ನೆಂಬ ದೇಹಾಂತರವನ್ನು ಪಡೆದನು. ತಂದೆಯನ್ನು ಬಿಟ್ಟು ತನ್ನ ಬಳಿಗೆ ಬಂದ ವೈಶ್ರವಣನ ವಿಷಯದಲ್ಲಿ ಚತುರ್ಮುಖನು ಸುಪ್ರೀತನಾಗಿ ಅವನಿಗೆ ಅಮರತ್ವವನ್ನೂ, ಸಕಲೈಶ್ವರ್ಯಗಳ ಈಶತ್ವವನ್ನೂ, ಲೋಕಪಾಲಸ್ಥಾನವನ್ನೂ, ಈಶಾನನೊಡನೆ ಸಖ್ಯವನ್ನೂ, ನಲಕೂಬರನೆಂಬ ಹೆಸರಿನ ಪುತ್ರನನ್ನೂ ಸಹ ದಯಪಾಲಿಸಿ ರಕ್ಷೋಗಣಗಳಿಂದ ಪರಿವೃತವಾಗಿದ್ದ ಲಂಕಾರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದನು. ಇಚ್ಛೆಬಂದಲ್ಲಿಗೆ ಹೋಗಬಹುದಾಗಿದ್ದ ಪುಷ್ಪಕವೆಂಬ ವಿಮಾನವನ್ನೂ, ಯಕ್ಷರ ನಾಯಕತ್ವವನ್ನೂ ಮತ್ತು ರಾಜರಾಜನೆಂಬ ಅಭಿದಾನವನ್ನೂ ಚತುರ್ಮುಖಬ್ರಹ್ಮನು ವೈಶ್ರವಣನಿಗೆ ದಯಪಾಲಿಸಿದನು.

೨೭೪ನೆಯ ಅಧ್ಯಾಯವು ಮುಗಿಯಿತು.

೨೭೫ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾವಣ–ಕುಂಭಕರ್ಣ–ವಿಭೀಷಣ–ಖರ ಮತ್ತು ಶೂರ್ಪಣಖೆಯರ ಜನನ : ಅವರು ತಪಸ್ಸು ಮಾಡಿ ವರಪಡೆದುದು : ಕುಬೇರನು ರಾವಣನಿಗೆ ಶಾಪಕೊಟ್ಟುದು

ಯುಧಿಷ್ಠಿರ! ಕುಪಿತನಾದ ಪುಲಸ್ತ್ಯನ ಅರ್ಧದೇಹದಿಂದ ಹುಟ್ಟಿದ ವಿಶ್ರವಸನು ಕೋಪಾವಿಷ್ಟನಾಗಿ ಲಂಕಾಧಿಪತಿಯಾಗಿದ್ದ ವೈಶ್ರವಣನನ್ನು ಉಗ್ರ ದೃಷ್ಟಿಯಿಂದಲೇ ನೋಡುತ್ತಿದ್ದನು. ತನ್ನ ತಂದೆಯಾದ ಪುಲಸ್ತ್ಯನ ಮತ್ತೊಂದು ಅವತಾರವೇ ವಿಶ್ರವಸನ ಸ್ವರೂಪವೆಂಬುದನ್ನು ತಿಳಿದಿದ್ದ ರಾಕ್ಷಸಾಧಿಪತಿಯಾದ ಕುಬೇರನು–ಮಹಾಕುಪಿತನಾಗಿ ವಿಶ್ರವಸನ ದೇಹ ಧರಿಸಿ ತನ್ನ ಬಳಿಗೆ ಬಂದಿದ್ದ ತಂದೆಯನ್ನು ಶಾಂತಗೊಳಿಸಲು ಯಾವಾಗಲೂ ಪ್ರಯತ್ನಿಸುತ್ತಿದ್ದನು. ವಿಶ್ರವಸನನ್ನು ಸಂತೋಷಗೊಳಿಸುವ ಸಲುವಾಗಿಯೇ ನರವಾಹನನಾದ, ರಾಜಾಧಿರಾಜನಾದ ಕುಬೇರನು ಅವನನ್ನು ಉಪಚರಿಸಲು ಮೂವರು ರಾಕ್ಷಸಿಯರನ್ನು ನೇಮಿಸಿದನು. ಪುಷ್ಪೋತ್ಕಟಾ, ರಾಕಾ ಮತ್ತು ಮಾಲಿನೀ ಎಂಬ ಮೂವರು ರಾಕ್ಷಸಿಯರು ನೃತ್ಯ-ಗೀತಗಳಲ್ಲಿ ಕುಶಲೆಯ

ರಾಗಿದ್ದರಲ್ಲದೇ ಮಹಾತ್ಮನಾದ ವಿಶ್ರವಸಮಹರ್ಷಿಯನ್ನು ಬಹಳ ಜಾಗರೂಕತೆಯಿಂದ ಉಪಚರಿಸುತ್ತಿದ್ದರು. ರಾಜನ ಆಜ್ಞಾನುಸಾರವಾಗಿ ಆ ಮೂವರೂ ಮಹರ್ಷಿಯನ್ನು ಉಪಚರಿಸುತ್ತಿದ್ದರಾದರೂ ಅವರಿಗೆ ಮಹರ್ಷಿಯನ್ನು ಸಂತೋಷಗೊಳಿಸಿ ಅವನ ಅನುಗ್ರಹವನ್ನು ಪಡೆಯಬೇಕೆಂಬ ಸ್ವಾರ್ಥವೂ ಇದ್ದಿತು. ಆದುದರಿಂದ ಆ ಮೂವರೂ ಪರಸ್ಪರವಾಗಿ ಸ್ಪರ್ಧಿಸುತ್ತಿರುವವರಂತೆ ಮಹರ್ಷಿಯ ಸೇವೆಮಾಡುತ್ತಿದ್ದರು. ಮಹರ್ಷಿಗೆ ಮಾಡಿದ ಅವರ ಸೇವೆಯು ಫಲಿಸಿತು. ಮಹಾತ್ಮನಾದ ಭಗವಾನ್ ವಿಶ್ರವಸನು ಅವರ ಸೇವೆಯಿಂದ ಸಂತುಷ್ಟನಾಗಿ ಅವರಿಗೆ ವರವನ್ನು ದಯಪಾಲಿಸಿದನು. ಮಹರ್ಷಿಯು ಅವರವರ ಮನೋಗತವಾದ ಆಶಯದಂತೆ ಒಬ್ಬೊಬ್ಬರಿಗೂ ಲೋಕಪಾಲೋಪಮರಾದ ಪುತ್ರರನ್ನು ಅನುಗ್ರಹಿಸಿದನು.

ಬಲದಲ್ಲಿ ಅಪ್ರತಿಮರೆನಿಸಿದ ರಾಕ್ಷಸೇಶ್ವರರಾದ ರಾವಣ-ಕುಂಭಕರ್ಣರು ಪುಷ್ಪೋತ್ಕಟೆಯಲ್ಲಿ ಜನಿಸಿದರು. ಮಾಲಿನಿಯು ಸುಪುತ್ರನಾದ ವಿಭೀಷಣನಿಗೆ ಜನ್ಮವಿತ್ತಳು. ರಾಕಾ ಎಂಬುವಳಲ್ಲಿ ಖರ ಎಂಬ ರಾಕ್ಷಸನೂ–ಶೂರ್ಪಣಖಾ ಎಂಬ ರಾಕ್ಷಸಿಯೂ ಹುಟ್ಟಿದರು. ರೂಪದಲ್ಲಿ ಮಾಲಿನಿಯ ಪುತ್ರನಾದ ವಿಭೀಷಣನು ಉಳಿದ ನಾಲ್ವರನ್ನೂ ಮೀರಿಸಿದ್ದನು. ಅವನು ಸರ್ವಲಕ್ಷಣ ಸಂಪನ್ನನಾಗಿದ್ದನು. ಮಹಾಭಾಗನಾದ ವಿಭೀಷಣನು ಧರ್ಮದ ರಕ್ಷಣೆಯಲ್ಲಿಯೂ, ಧರ್ಮಕಾರ್ಯದಲ್ಲಿಯೂ ಸರ್ವದಾ ಆಸಕ್ತನಾಗಿರುತ್ತಿದ್ದನು. ದಶಗ್ರೀವನೇ ಎಲ್ಲರಿಗೂ ಹಿರಿಯನು. ಆ ರಾಕ್ಷಸಪುಂಗವನು ಉತ್ಸಾಹಶಾಲಿಯಾಗಿಯೂ, ಮಹಾವೀರ್ಯವಂತನಾಗಿಯೂ, ಮಹಾಸತ್ತ್ವವಂತನಾಗಿಯೂ, ಅತುಲಪರಾಕ್ರಮಿಯಾಗಿಯೂ ಇದ್ದನು. ಎರಡನೆಯವನಾದ ಕುಂಭಕರ್ಣನು ಎಲ್ಲರಿಗಿಂತಲೂ ಅಧಿಕಬಲಶಾಲಿಯಾಗಿದ್ದನು. ಯುದ್ಧದಲ್ಲಿ ಅವನನ್ನೆದುರಿಸಲು ಯಾರಿಗೂ ಸಾಧ್ಯವಿರಲಿಲ್ಲ. ರಣಾಂಗಣದಲ್ಲಿ ಅವನು ಭಯಂಕರನಾಗಿ ಕಾಣುತ್ತಿದ್ದನು. ಮಹಾಮಾಯಾವೀ. ಮಾಯಾಯುದ್ಧದಲ್ಲಿ ಬಹುಚತುರನಾಗಿದ್ದನು. ಖರನು ಧನುರ್ವಿದ್ಯೆಯಲ್ಲಿ ಬಹುಚತುರನಾಗಿದ್ದನು. ಅವನು ಬ್ರಹ್ಮದ್ವೇಷೀ. ಬ್ರಾಹ್ಮಣರನ್ನು ಕೊಂದು ಅವರ ರಕ್ತವನ್ನು ಕುಡಿದು ಮಾಂಸವನ್ನು ತಿನ್ನುವುದೇ ಅವನ ಕಾರ್ಯವಾಗಿತ್ತು. ಖರನಂತೆಯೇ ಅವನ ತಂಗಿಯಾದ, ಭಯಂಕರಾಕಾರಳಾದ ಶೂರ್ಪಣಖೆಯೂ

ಸಹ ಋಷಿ-ಮಹರ್ಷಿಗಳಿಗೆ ಉಪಟಳಕೊಡುವುದರಲ್ಲಿಯೇ ಸರ್ವದಾ ನಿರತಳಾಗಿರುತ್ತಿದ್ದಳು. ರಾವಣ-ಕುಂಭಕರ್ಣ-ವಿಭೀಷಣ-ಖರ ಇವರೆಲ್ಲರೂ ವೇದ-ವೇದಾಂಗಗಳನ್ನು ಅಧ್ಯಯನಮಾಡಿದ್ದರು. ಶೂರರಾಗಿದ್ದರು. ಮೊದಲು ಅವರೆಲ್ಲರೂ ಸದಾಚಾರ-ಸತ್ಕರ್ಮಗಳಲ್ಲಿಯೇ ನಿರತರಾಗಿರುತ್ತಿದ್ದು ತಮ್ಮ ತಂದೆಯಾದ ವಿಶ್ರವಸನೊಡನೆ ಗಂಧಮಾದನಪರ್ವತದಲ್ಲಿ ವಾಸಮಾಡುತ್ತಿದ್ದರು.

ಹೀಗೆಯೇ ಅವರು ಗಂಧಮಾದನಪರ್ವತದ ತಪ್ಪಲಿನಲ್ಲಿ ವಾಸಮಾಡುತ್ತಿದ್ದಾಗ ಒಮ್ಮೆ ನರವಾಹನನಾದ ಕುಬೇರನು ಸರ್ವಾಲಂಕಾರಭೂಷಿತನಾಗಿ ತಮ್ಮ ತಂದೆಯೊಡನೆ ಕುಳಿತಿರುವುದನ್ನು ರಾವಣಾದಿಗಳು ನೋಡಿದರು. ಕುಬೇರನ ವೈಭವವನ್ನು ಕಂಡು ಅವರಿಗೆ ಅಸೂಯೆಯು ಹುಟ್ಟಿತು. ಘೋರವಾದ ತಪಸ್ಸನ್ನು ಮಾಡಿ ತಾವೂ ಸಹ ಕುಬೇರನಿಗೆ ಸಾಟಿಯಾದ ವೈಭವವನ್ನು ಪಡೆಯಬೇಕೆಂದು ನಿಶ್ಚಯಿಸಿದವರಾಗಿ ಬಹಳ ಘೋರವಾದ ಮತ್ತು ಕಷ್ಟಸಾಧ್ಯವಾದ ತಪಸ್ಸನ್ನು ಮಾಡಿ ಬ್ರಹ್ಮನನ್ನು ತೃಪ್ತಿಗೊಳಿಸಿದರು.

ದಶಗ್ರೀವನು ಒಂದು ಸಹಸ್ರವರ್ಷಗಳ ಪರ್ಯಂತವಾಗಿ ಪಂಚಾಗ್ನಿಗಳ ಮಧ್ಯದಲ್ಲಿ ಏಕಪಾದದಲ್ಲಿ ನಿಂತು ವಾಯುವನ್ನು ಮಾತ್ರವೇ ಆಹಾರವನ್ನಾಗಿ ಸೇವಿಸುತ್ತಾ, ಏಕಾಗ್ರಚಿತ್ತನಾಗಿ ಬ್ರಹ್ಮನನ್ನು ಉದ್ದೇಶಿಸಿ ತಪಸ್ಸನ್ನು ಮಾಡಿದನು. ಕುಂಭಕರ್ಣನು ನಿಯತಾಹಾರನಾಗಿ, ನಿಯತವ್ರತನಾಗಿ, ತಲೆಕೆಳಗಾಗಿ ನಿಂತು, ಸಹಸ್ರವರ್ಷಗಳ ಕಾಲ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿದನು. ಧೀಮಂತನಾದ ವಿಭೀಷಣನು ಪರ್ಣಭಕ್ಷನಾಗಿ ಒಂದು ತರಗೆಲೆಯನ್ನು ಮಾತ್ರ ಆಹಾರವನ್ನಾಗಿ ಸೇವಿಸುತ್ತಾ, ಅದನ್ನೂ ತಿನ್ನದೇ ಸಮಯಗಳಲ್ಲಿ ಉಪವಾಸವನ್ನಾಚರಿಸುತ್ತಾ, ಮಹಾಮಂತ್ರಗಳನ್ನು ಜಪಿಸುತ್ತಾ ಒಂದು ಸಹಸ್ರವರ್ಷಗಳ ಕಾಲ ಬ್ರಹ್ಮನನ್ನು ಉಪಾಸನೆ ಮಾಡಿದನು. ಖರ ಮತ್ತು ಶೂರ್ಪಣಖೆಯರು ಹೀಗೆ ತಪಸ್ಸುಮಾಡುತ್ತಿದ್ದ ರಾವಣ-ಕುಂಭಕರ್ಣ-ವಿಭೀಷಣರ ಸೇವೆಯಲ್ಲಿಯೂ ಮತ್ತು ಅವರ ರಕ್ಷಣೆಯಲ್ಲಿಯೂ ನಿರತರಾಗಿರುತ್ತಿದ್ದು ಅದರಿಂದಲೇ ಸಂತುಷ್ಟಹೃದಯರಾಗಿದ್ದರು. ಒಂದು ಸಹಸ್ರವರ್ಷವು ಪೂರ್ಣವಾದನಂತರ ದಶಕಂಠನು ತನ್ನ ತಲೆಗಳನ್ನೇ ಕತ್ತರಿಸಿ ಬ್ರಹ್ಮನ ಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಹೋಮಮಾಡಿದನು. ದೃಢಮನಸ್ಕನಾದ ರಾವಣನ ಆ ಚರ್ಯೆಯನ್ನು ಕಂಡು ಲೋಕಪಿತಾಮಹ

ನಾದ ಚತುರ್ಮುಖನು ಸಂತುಷ್ಟನಾಗಿ ಪ್ರತ್ಯಕ್ಷನಾದನು. ತಪಸ್ಸು ಮಾಡುತ್ತಿದ್ದ ಆ ಮೂವರಿಗೂ ಚತುರ್ಮುಖನು ಪ್ರತ್ಯಕ್ಷನಾಗಿ ಘೋರವಾದ ತಪಸ್ಸಿನಿಂದ ವಿಮುಖರಾಗುವಂತೆ ಅವರನ್ನು ಸಂತೈಸುತ್ತಾ ಹೇಳಿದನು :

**ಪ್ರೀತೋಽಸ್ಮಿ ವೋ ನಿವರ್ತಧ್ವಂ ವರಾನ್ವೃಣುತ ಪುತ್ರಕಾ ।**
**ಯದ್ಯದಿಷ್ಟಮೃತೇ ತ್ವೇಕಮಮರತ್ವಂ ತಥಾಸ್ತು ತತ್ ॥೨೨॥**

"ಮಕ್ಕಳಿರಾ! ನಿಮ್ಮ ತಪಸ್ಸಿನಿಂದ ಸಂತುಷ್ಟನಾಗಿರುತ್ತೇನೆ. ನಿಮಗೆ ಇಷ್ಟವಾದ ವರಗಳನ್ನು ಕೇಳಿಕೊಳ್ಳಿರಿ. ಅಮರತ್ವವೊಂದನ್ನು ಬಿಟ್ಟು ಉಳಿದ ಯಾವುದೇ ವರವನ್ನು ಕೇಳಿದರೂ ಅನುಗ್ರಹಿಸುತ್ತೇನೆ.

ರಾವಣ! ನನ್ನಿಂದ ವರಪಡೆಯಬೇಕೆಂಬ ಏಕೈಕೋದ್ದೇಶದಿಂದ ನೀನು ನಿನ್ನ ತಲೆಗಳನ್ನೂ ಅಗ್ನಿಯಲ್ಲಿ ಹೋಮಮಾಡಿರುವೆ. ಇದರಿಂದ ನೀನು ಅಂಗವಿಕಲನಾಗುವುದಿಲ್ಲ. ನೀನಪೇಕ್ಷಿಸಿದಲ್ಲಿ ಶಿರಸ್ಸುಗಳು ಪುನಃ ಬಂದು ಸೇರಿಕೊಳ್ಳುತ್ತವೆ. ಮೇಲಾಗಿ ನೀನಪೇಕ್ಷಿಸುವ ರೂಪವನ್ನು ಧರಿಸಲೂ ನನ್ನ ಅನುಗ್ರಹದಿಂದ ನಿನಗೆ ಸಾಧ್ಯವಾಗುವುದು. ನಿನ್ನ ಅಪೇಕ್ಷೆಯಂತೆ ನೀನು ಯುದ್ಧದಲ್ಲಿ ನಿನ್ನ ಎದುರಾಗಿ ಬಂದ ಶತ್ರುಗಳನ್ನು ನಿರ್ಮೂಲನಮಾಡಿ ಜಯಗಳಿಸುವ ಸಾಮರ್ಥ್ಯವನ್ನೂ ನನ್ನ ಅನುಗ್ರಹದಿಂದಲೇ ಪಡೆಯುವೆ. ಈ ವಿಷಯದಲ್ಲಿ ನೀನು ಸಂಶಯಿಸುವ ಕಾರಣವಿಲ್ಲ."

"ಯಾರೊಡನೆಯೂ ನೀನು ಯುದ್ಧದಲ್ಲಿ ಪರಾಜಿತನಾಗುವುದಿಲ್ಲ" ಎಂದು ಹೇಳಿದ ಬ್ರಹ್ಮನು ಅಮರತ್ವವನ್ನು ಮಾತ್ರ ರಾವಣನಿಗೆ ದಯ ಪಾಲಿಸಲಿಲ್ಲ.

"ಹಾಗಾದರೆ ಯುದ್ಧದಲ್ಲಿ ನನಗೆ ಸಾವುಂಟೇ?"–ಎಂಬ ಸಂಶಯವು ರಾವಣನಿಗೆ ತಲೆದೋರಿರಬೇಕು. ಆ ಸಂಶಯದ ನಿವಾರಣೆಗಾಗಿ ರಾವಣನು ಬ್ರಹ್ಮನನ್ನು ಸ್ಪಷ್ಟವಾಗಿಯೇ ಕೇಳಿದನು :

**ಗನ್ಧರ್ವದೇವಾಸುರತೋ ಯಕ್ಷರಾಕ್ಷಸತಸ್ತಥಾ ।**
**ಸರ್ಪಕಿನ್ನರಭೂತೇಭ್ಯೋ ನ ಮೇ ಭೂಯಾತ್ಪರಾಭವಃ ॥೨೫॥**

"ಗಂಧರ್ವರಿಂದಾಗಲೀ, ದೇವತೆಗಳಿಂದಾಗಲೀ, ಅಸುರರಿಂದಾಗಲೀ, ಯಕ್ಷ-ರಾಕ್ಷಸರಿಂದಾಗಲೀ, ಸರ್ಪ-ಕಿನ್ನರರಿಂದಾಗಲೀ, ಇತರ ಭೂತಗಳಿಂದಾ ಗಲೀ ನನಗೆ ಯುದ್ಧದಲ್ಲಿ ಪರಾಜಯವುಂಟಾಗಬಾರದು."

ರಾವಣನ ಮಾತಿಗೆ ಬ್ರಹ್ಮನು ನಸುನಗುತ್ತಾ ಉತ್ತರಿಸಿದನು :

**ಯ ಏತೇ ಕೀರ್ತಿತಾಃ ಸರ್ವೇ ನ ತೇಭ್ಯೋಽಸ್ತಿ ಭಯಂ ತವ ।**
**ಋತೇ ಮನುಷ್ಯಾದ್ಭದ್ರಂ ತೇ ತಥಾ ತದ್ವಿಹಿತಂ ಮಯಾ ॥೨೬॥**

"ರಾವಣ! ನೀನು ಈಗ ಯಾರು ಯಾರಿಂದ ನಿನಗೆ ಯುದ್ಧದಲ್ಲಿ ಪರಾಜಯವುಂಟಾಗಕೂಡದೆಂದು ಕೇಳಿರುವೆಯೋ ಅವರಾರಿಂದಲೂ ನಿನಗೆ ಮೃತ್ಯುಭಯವಿಲ್ಲ. ಅವರೊಡನೆ ಮಾಡುವ ಯುದ್ಧಗಳಲ್ಲಿ ನೀನು ಖಂಡಿತ ವಾಗಿಯೂ ಜಯಗಳಿಸುವೆ. ಆದರೆ ಮನುಷ್ಯರ ವಿಷಯವಾಗಿ ನೀನು ಪ್ರಸ್ತಾಪವನ್ನೇ ಮಾಡಿರುವುದಿಲ್ಲ. ಆದುದರಿಂದ ನಿನಗೆ ಮಾನವನಿಂದ ಪರಾಜಯವುಂಟಾಗುತ್ತದೆ ಮತ್ತು ನನ್ನ ನಿಯಮವೂ ಸಹ ಇದೇ ಆಗಿರುತ್ತದೆ. ನಿನಗೆ ಮಂಗಳವಾಗಲಿ."

ಯುಧಿಷ್ಠಿರ! ಚತುರ್ಮುಖನು ರಾವಣನಿಗೆ ಮನುಷ್ಯರಿಂದ ಮಾತ್ರವೇ ನಿನಗೆ ಮೃತ್ಯುವಿದೆ–ಎಂದು ಹೇಳಿದೊಡನೆಯೇ ರಾವಣನು ಗಹ-ಗಹಿಸಿ ನಕ್ಕುಬಿಟ್ಟನು. ನರಭಕ್ಷಕನಾದ ರಾವಣನು ಮಾನವರನ್ನು ಬಹಳ ತುಚ್ಛವಾಗಿ ಕಾಣುತ್ತಿದ್ದನು. 'ಮಾನವರಿಂದ ಮೃತ್ಯುವುಂಟಾಗದಿರಲಿ' ಎಂದು ಕೇಳಿ ಕೊಳ್ಳುವುದೇ ತನ್ನ ಪರಾಕ್ರಮಕ್ಕೆ ಕಳಂಕವೆಂದು ಭಾವಿಸಿ ದುರ್ಬುದ್ಧಿಯಾದ ದಶಗ್ರೀವನು ಮಾನವರನ್ನು ಬಿಟ್ಟು ಉಳಿದವರಿಂದ ತನಗೆ ಮರಣವುಂಟಾಗ ಬಾರದೆಂದು ಬ್ರಹ್ಮನನ್ನು ಬೇಡಿದನು. ಬ್ರಹ್ಮನೇ ಸಾಕ್ಷಾತ್ತಾಗಿ ಮಾನವರನ್ನು ಬಿಟ್ಟು ಉಳಿದವರಿಂದ ನಿನಗೆ ಮೃತ್ಯುವು ಸಂಭವಿಸುವುದಿಲ್ಲವೆಂದು ಹೇಳಿ ದರೂ ಸಹ ದುರಭಿಮಾನಿಯಾದ ರಾವಣನು ಮಾನವರಿಂದ ತನಗೆ ಮರ ಣವು ಸಂಭವಿಸಬಹುದೆಂದು ಸ್ವಲ್ಪವಾದರೂ ಶಂಕಿಸಲಿಲ್ಲ. ಬ್ರಹ್ಮನ ವರ ದಿಂದಾಗಿ ತಾನು ಅಮರನಾದೆನೆಂದೇ ರಾವಣನು ಭಾವಿಸಿದ್ದಿರಬಹುದು. ಆದುದರಿಂದಲೇ ಬ್ರಹ್ಮನ ವರದಿಂದ ದಶಕಂಠನು ಬಹುಸಂತುಷ್ಟನಾದನು.

ಚತುರ್ಮುಖನು ದಶಗ್ರೀವನಿಗೆ ವರಪ್ರದಾನಮಾಡಿದನಂತರ ತಲೆಕೆಳ ಗಾಗಿ ನಿಂತು ಘೋರವಾದ ತಪಸ್ಸು ಮಾಡುತ್ತಿದ್ದ ಕುಂಭಕರ್ಣನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಹೇಳಿದನು : "ಕುಂಭಕರ್ಣ! ನಿನ್ನ ಘೋರ ವಾದ ತಪಸ್ಸಿಗೆ ಮೆಚ್ಚಿದ್ದೇನೆ. ಬೇಕಾದ ವರಗಳನ್ನು ಕೇಳು. ಕೊಡುವೆನು."

ಬ್ರಹ್ಮನು ವರಪ್ರದಾನಮಾಡುವ ಸಮಯಕ್ಕೆ ಸರಿಯಾಗಿ ಕುಂಭಕರ್ಣನ ಮನಸ್ಸು ತಮಸ್ಸಿನಿಂದ ಆವೃತವಾಯಿತು. ಅಂತೆಯೇ ಅವನು "ನನಗೆ ಮಹತ್ತರವಾದ ನಿದ್ರೆಯನ್ನು ದಯಪಾಲಿಸು"–ಎಂದು ಬ್ರಹ್ಮನನ್ನು ಪ್ರಾರ್ಥಿಸಿದನು. ಬ್ರಹ್ಮನು ಒಡನೆಯೇ 'ತಥಾಸ್ತು' ಎಂದು ಹೇಳಿ ವ್ರತಾನುಷ್ಠಾನಗಳಲ್ಲಿ ನಿರತನಾಗಿದ್ದ ವಿಭೀಷಣನ ಬಳಿಗೆ ಹೋಗಿ ಅವನನ್ನು ಕುರಿತು ಹೇಳಿದನು :

"ವತ್ಸ! ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ಬೇಕಾದ ವರಗಳನ್ನು ಕೇಳು ; ಕೊಡುವೆನು."

ಯುಧಿಷ್ಠಿರ! ವಿಭೀಷಣನು ಬದ್ಧಾಂಜಲಿಯಾಗಿ ನಿಂತು ಈ ವರಗಳನ್ನು ಕೇಳಿದನು :

**ಪರಮಾಪದ್ಗತಸ್ಯಾಪಿ ನಾಧರ್ಮೇ ಮೇ ಮತಿರ್ಭವೇತ್ ।**
**ಅಶಿಕ್ಷಿತಂ ಚ ಭಗವನ್ ಬ್ರಹ್ಮಾಸ್ತ್ರಂ ಪ್ರತಿಭಾತು ಮೇ ॥೩೦॥**

"ಎಂತಹ ಆಪತ್ಕಾಲವು ಪ್ರಾಪ್ತವಾದರೂ ನನ್ನ ಬುದ್ಧಿಯು ಅಧರ್ಮದಲ್ಲಿ ಪ್ರವರ್ತಿಸದಿರಲಿ. ಶಿಕ್ಷಣೋಪದೇಶಗಳಿಲ್ಲದೆಯೇ ಬ್ರಹ್ಮಾಸ್ತ್ರದ ಪ್ರಯೋಗೋಪಸಂಹಾರಗಳು ನನಗೆ ಸಿದ್ಧಿಸಲಿ."

ಯುಧಿಷ್ಠಿರ! ವಿಭೀಷಣನು ಪ್ರಾರ್ಥಿಸಿದ ವರದಿಂದ ಬ್ರಹ್ಮನಿಗೆ ಬಹಳ ಸಂತೋಷವಾಯಿತು. ನಸುನಗುತ್ತಾ ವಿಭೀಷಣನನ್ನು ಕುರಿತು ಚತುರ್ಮುಖನು ಹೇಳಿದನು : "ವತ್ಸ! ಯದ್ಯಪಿ ನೀನು ರಾಕ್ಷಸಕುಲದಲ್ಲಿ ಹುಟ್ಟಿದ್ದರೂ ನಿನ್ನ ಬುದ್ಧಿಯು ಧರ್ಮದಲ್ಲಿಯೇ ಲೀನವಾಗಿರಬೇಕೆಂಬ ನಿನ್ನ ಅಪೇಕ್ಷೆಯು ಶ್ಲಾಘನೀಯವಾಗಿದೆ. ಆದುದರಿಂದ, ಶತ್ರುವಿಧ್ವಂಸಕನೇ! ನಿನಗೆ ನಾನು ಅಮರತ್ವವನ್ನೇ ಅನುಗ್ರಹಿಸಿದ್ದೇನೆ"–ಎಂದು ಹೇಳಿ ಅದೃಶ್ಯನಾದನು.

ಧರ್ಮಜ! ಮುಂದೆ ರಾವಣ-ಕುಂಭಕರ್ಣ-ವಿಭೀಷಣರು ಯಥಾಯೋಗ್ಯವಾದ ಕಾರ್ಯಗಳಲ್ಲಿ ಆಸಕ್ತರಾದರು. ದಶಕಂಠನಾದ ರಾವಣನು ತನ್ನ ಹಿಂದಿನ ಅಭಿಲಾಷೆಯಂತೆ ದೈವದತ್ತವಾದ ವರದಿಂದ ಯುದ್ಧದಲ್ಲಿ ಕುಬೇರನನ್ನು ಪರಾಜಯಗೊಳಿಸಿ ಲಂಕಾಪಟ್ಟಣಕ್ಕೆ ಚಕ್ರವರ್ತಿಯಾದನು.

ರಾವಣನಿಂದ ಪರಾಜಿತನಾದ ಕುಬೇರನು ಲಂಕೆಯನ್ನು ಬಿಟ್ಟು ಕಿನ್ನರ-ಯಕ್ಷ-ಗಂಧರ್ವ-ರಾಕ್ಷಸರಿಂದ ಅನುಸೃತನಾಗಿ ಗಂಧಮಾದನಪರ್ವತಕ್ಕೆ ಹೋಗಿ ಅಲ್ಲಿ ನೆಲೆಸಿದನು. ತಾನು ಹಿಂದೊಮ್ಮೆ ನೋಡಿ ಅಸೂಯೆಪಟ್ಟಿದ್ದ ಪುಷ್ಪಕ ವಿಮಾನವನ್ನೂ ರಾವಣನು ಕುಬೇರನಿಂದ ಬಲಾತ್ಕಾರವಾಗಿ ಕಸಿದು ಕೊಂಡನು. ಆದರೆ ಅದರಲ್ಲಿ ಕುಳಿತು ಸುಖಪ್ರವಾಸಮಾಡುವ ಭಾಗ್ಯವು ಮಾತ್ರ ರಾವಣನಿಗೆ ಲಭ್ಯವಾಗಲಿಲ್ಲ. ತನಗೆ ಪರಮಪ್ರಿಯವಾಗಿದ್ದ ಪುಷ್ಪಕ ವಿಮಾನವನ್ನು ರಾವಣನು ಅಪಹರಿಸಿದೊಡನೆಯೇ ಕೋಪಾವಿಷ್ಟನಾದ ಕುಬೇರನು ರಾವಣನನ್ನು ಶಪಿಸಿದನು :

**ಶಶಾಪ ತಂ ವೈಶ್ರವಣೋ ನ ತ್ವಾಮೇತದ್ವಹಿಷ್ಯತಿ ।**
**ಯಸ್ತು ತ್ವಾಂ ಸಮರೇ ಹನ್ತಾ ತಮೇವೈತದ್ವಹಿಷ್ಯತಿ ॥೩೪॥**

"ಈ ಪುಷ್ಪಕವಿಮಾನವು ನಿನ್ನನ್ನು ಹತ್ತಗೊಡುವುದಿಲ್ಲ. ನೀನಿದರಲ್ಲಿ ಕುಳಿತು ಸುಖಪ್ರವಾಸಮಾಡುವ ಸಾಧ್ಯತೆಯಿಲ್ಲ. ಆದರೆ ನಿನ್ನನ್ನು ಯಾರು ಯುದ್ಧದಲ್ಲಿ ಸಂಹರಿಸುತ್ತಾನೆಯೋ ಅವನನ್ನು ಮಾತ್ರವೇ ಈ ಪುಷ್ಪಕ ವಿಮಾನವು ಧಾರಣೆಮಾಡಿಕೊಳ್ಳುತ್ತದೆ. ನಿನ್ನ ಸಂಹಾರಕನು ಮಾತ್ರವೇ ಈ ಪುಷ್ಪಕವಿಮಾನದಲ್ಲಿ ಕುಳಿತು ಸುಖಪ್ರವಾಸಮಾಡಲು ಅರ್ಹನಾಗುತ್ತಾನೆ. ನಿಮ್ಮಣ್ಣನಾದ ಮತ್ತು ನಿನಗೆ ಗುರುವಾದ ನನ್ನನ್ನು ನೀನು ಅವಮಾನ ಗೊಳಿಸಿರುವೆಯಾದುದರಿಂದ ನಿನ್ನ ಅವಸಾನವೂ ಸಹ ಬಹುಬೇಗ ಸನ್ನಿಹಿತ ವಾಗುವುದು"–ಹೀಗೆಂಬುದಾಗಿ ರಾವಣನಿಗೆ ಶಾಪಕೊಟ್ಟು ಕುಬೇರನು ಗಂಧ ಮಾದನಪರ್ವತಕ್ಕೆ ತೆರಳಿದನು. ಧರ್ಮಾತ್ಮನಾದ ಮತ್ತು ತೇಜಸ್ವಿಯಾದ ವಿಭೀಷಣನು ಹಿರಿಯರ ಮಾರ್ಗವನ್ನು ಸ್ಮರಿಸಿಕೊಳ್ಳುತ್ತಾ ಕುಬೇರನ ಹಿಂದೆಯೇ ಹೊರಟನು.

ಭಗವಂತನಾದ, ಧನೇಶ್ವರನಾದ ಕುಬೇರನು ತನ್ನ ಕಿರಿಯ ತಮ್ಮನಾದ ವಿಭೀಷಣನ ಸೌಜನ್ಯವನ್ನು ಕಂಡು ಸಂತುಷ್ಟನಾಗಿ ಅವನಿಗೆ ಯಕ್ಷ-ರಾಕ್ಷಸ ಸೈನ್ಯದ ನಾಯಕತ್ವವನ್ನು ವಹಿಸಿಕೊಟ್ಟನು. ಪುರುಷಾದರಾದ ರಾಕ್ಷಸರೂ ಮತ್ತು ಪಿಶಾಚರೂ ಒಟ್ಟಿಗೆ ಕೂಡಿ ಸಭೆಸೇರಿ ದಶಕಂಠಕನಾದ ರಾವಣನೇ ತಮಗೆ ರಾಜನಾಗಲು ಯೋಗ್ಯನೆಂದು ನಿರ್ಧರಿಸಿದವರಾಗಿ ಅವನಿಗೆ ರಾಕ್ಷಸ

ಸಾಮ್ರಾಜ್ಯದ ಪಟ್ಟಗಟ್ಟಿದರು. ಬ್ರಹ್ಮನಿಂದ ವರಪಡೆದಿದ್ದ ರಾವಣನಿಗೆ ಅಪಾರವಾದ ಬಲವಿತ್ತು. ಆಕಾಶದಲ್ಲಿಯೂ ಸಂಚರಿಸುವ ಶಕ್ತಿಯನ್ನು ರಾವಣನು ಪಡೆದಿದ್ದನು. ಆ ಎಲ್ಲ ಶಕ್ತಿಗಳಿಂದಲೂ ಕೂಡಿದ ರಾವಣನು ದೇವಲೋಕಕ್ಕೆ ಹೋಗಿ ದೇವತೆಗಳನ್ನು ಪರಾಜಯಗೊಳಿಸಿ ಅವರಲ್ಲಿದ್ದ ಅನರ್ಘ್ಯ ವಸ್ತುಗಳೆಲ್ಲವನ್ನೂ ಸುಲಿಗೆಮಾಡಿಕೊಂಡು ಬಂದನು. ಅಂತೆಯೇ ದೈತ್ಯರಾಜರ ಅಪಾರವಾದ ಐಶ್ವರ್ಯವನ್ನೂ ಸೂರೆಗೊಂಡನು.

ರಾವಯಾಮಾಸ ಲೋಕಾನ್ಯತ್ತಸ್ಮಾದ್ರಾವಣ ಉಚ್ಯತೇ ॥೪೦॥

ಅವನು ತನ್ನ ಎದುರಾಳಿಗಳೆಲ್ಲರನ್ನೂ ಬಹುವಾಗಿ ಹಿಂಸಿಸುತ್ತಿದ್ದುದರಿಂದ (ಗೋಳಾಡುವಂತೆ ಮಾಡುತ್ತಿದ್ದುದರಿಂದ) ಅವನಿಗೆ ರಾವಣನೆಂಬ ಅನ್ವರ್ಥನಾಮವೂ ಬಂದಿತು.

ತಾನಪೇಕ್ಷಿಸಿದಷ್ಟು ಬಲವನ್ನು ಪಡೆಯುವ ಸಾಮರ್ಥ್ಯವು ದಶಗ್ರೀವನಿಗಿದ್ದುದರಿಂದ ಅವನು ಮಹಾಬಲಿಷ್ಠರೆನಿಸಿದ ದೇವತೆಗಳನ್ನೂ ಭಯಪಡಿಸುತ್ತಿದ್ದನು.

೨೭೫ನೆಯ ಅಧ್ಯಾಯವು ಮುಗಿಯಿತು.

೨೭೬ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ರಾವಣನ ಅತ್ಯಾಚಾರದಿಂದ ಪಾರುಮಾಡಲು ಪ್ರಾರ್ಥಿಸಿದುದು : ಬ್ರಹ್ಮನ ಆಜ್ಞೆಯಂತೆ ದೇವತೆಗಳು ಕಪಿಗಳಲ್ಲಿಯೂ, ಕರಡಿಗಳಲ್ಲಿಯೂ ತಮ್ಮ ತಮ್ಮ ಅಂಶಗಳಿಂದ ಸಂತಾನಗಳನ್ನು ಪಡೆದುದು

ವೈಶಂಪಾಯನರು ಶ್ರೀರಾಮನ ಕಥೆಯನ್ನು ಮುಂದುವರಿಸಿ ಹೇಳುತ್ತಾರೆ:

“ಯುಧಿಷ್ಠಿರ! ರಾವಣನ ಉಪಟಳವು ದಿನ-ದಿನಕ್ಕೂ ಹೆಚ್ಚಾಯಿತು. ಅವನನ್ನು ಪ್ರತಿಭಟಿಸಲು ಮೂರು ಲೋಕಗಳಲ್ಲಿ ಯಾರೂ ಸಮರ್ಥರಾಗಿರಲಿಲ್ಲ. ಬ್ರಹ್ಮರ್ಷಿಗಳೂ, ಸಿದ್ಧರೂ, ದೇವರ್ಷಿಗಳೂ ಹವ್ಯವಾಹನನನ್ನು ಮುಂದೆಮಾಡಿಕೊಂಡು ಬ್ರಹ್ಮನ ಬಳಿಗೆ ತೆರಳಿದರು. ನಾಯಕತ್ವವನ್ನು ವಹಿಸಿದ್ದ ಅಗ್ನಿಯು ಬ್ರಹ್ಮನನ್ನು ಕುರಿತು ಹೇಳಿದನು :

"ಪ್ರಭುವೇ! ವಿಶ್ರವಸನ ಮಗನಾದ, ಮಹಾಬಲಿಷ್ಠನಾದ ದಶಗ್ರೀವನು ಇಂದು ಅವಧ್ಯನಾಗಿದ್ದಾನೆ. ನೀನು ಅವನಿಗಿತ್ತಿರುವ ವರಪ್ರದಾನದಿಂದಾಗಿ ಮೂರು ಲೋಕಗಳಲ್ಲಿ ಯಾರೂ ಅವನನ್ನೆದುರಿಸಿ ನಿಂತು ಯುದ್ಧಮಾಡಲು ಸಮರ್ಥರಾಗಿರುವುದಿಲ್ಲ. ಈ ಕಾರಣದಿಂದಲೇ ಅವನು ಪ್ರಪಂಚದಲ್ಲಿರುವ ಸಕಲಪ್ರಜೆಗಳನ್ನೂ ಹಿಂಸಿಸುವುದರಲ್ಲಿಯೇ ಸದಾ ಆಸಕ್ತನಾಗಿರುತ್ತಾನೆ. ಇಂತಹ ಸಮಯದಲ್ಲಿ ನೀನೇ ನಮ್ಮನ್ನು ರಕ್ಷಿಸಬೇಕಾಗಿದೆ. ನಿನ್ನನ್ನು ಬಿಟ್ಟರೆ ನಮಗೆ ಬೇರಾರೂ ರಕ್ಷಕರಿರುವುದಿಲ್ಲ."

"ಯಜ್ಞೇಶ್ವರ! ವರದ ಕಾರಣದಿಂದಾಗಿ ರಾವಣನು ದೇವತೆಗಳಿಂದಾಗಲೀ, ರಾಕ್ಷಸರಿಂದಾಗಲೀ ಯುದ್ಧದಲ್ಲಿ ಜಯಿಸಲ್ಪಡತಕ್ಕವನಲ್ಲ. ಅವನ ನಿಗ್ರಹವು ಯಾವ ರೀತಿಯಲ್ಲಾಗಬೇಕೆಂಬುದನ್ನು ನಾನು ಈಗಾಗಲೇ ನಿರ್ಧರಿಸಿಬಿಟ್ಟಿದ್ದೇನೆ. ನನ್ನ ಪ್ರಾರ್ಥನೆಯಿಂದಲೇ ಚತುರ್ಭುಜನಾದ ಮಹಾವಿಷ್ಣುವು ಪೃಥ್ವಿಯಲ್ಲಿ ಅವತರಿಸಿದ್ದಾನೆ. ಶತ್ರುಗಳನ್ನು ಪ್ರಹರಿಸುವವರಲ್ಲಿ ಶ್ರೇಷ್ಠನೆನಿಸಿದ ಮಹಾವಿಷ್ಣುವು ಈ ನಿಮ್ಮ ಕಾರ್ಯವನ್ನು ಮಾಡಿಕೊಡುತ್ತಾನೆ."

ಯುಧಿಷ್ಠಿರ! ಅಗ್ನಿಪ್ರಮುಖರಾದ ದೇವತೆಗಳಿಗೆ ಹೀಗೆಂದು ಹೇಳಿದ ನಂತರ ಚತುರ್ಮುಖನು ದೇವೇಂದ್ರನನ್ನು ಸಂಬೋಧಿಸಿ ಹೇಳಿದನು :

"ಮಹೇಂದ್ರ! ನೀನು ನಿನ್ನ ಅನುಯಾಯಿಗಳಾದ ಸಕಲದೇವತೆಗಳೊಡನೆ ಭೂಮಿಯಲ್ಲಿ ಅವತರಿಸು. ನೀವೆಲ್ಲರೂ ಕಪಿ, ಕರಡಿ ಮುಂತಾದ ಪ್ರಾಣಿಗಳಲ್ಲಿ–ಮಹಾಬಲಿಷ್ಠರಾದ, ಕಾಮರೂಪಿಗಳಾದ ಮಕ್ಕಳನ್ನು ವಿಷ್ಣುವಿಗೆ ಸಹಾಯಮಾಡುವ ಸಲುವಾಗಿ ಪಡೆಯಿರಿ."

ಪೃಥ್ವಿಯಲ್ಲಿ ತಾವು ಹೇಗೆ ಅವತರಿಸಬೇಕೆಂಬುದರ ವಿಷಯವಾಗಿ ದೇವತೆಗಳು ತಮ್ಮ-ತಮ್ಮಲ್ಲಿಯೇ ಆಲೋಚಿಸಿದರು. ದೇವತೆಗಳ ಸಮಕ್ಷದಲ್ಲಿಯೇ ಚತುರ್ಮುಖನು ದುಂದುಭಿ ಎಂಬ ಹೆಸರಿನ ಗಂಧರ್ವಿಯನ್ನು ಕರೆದು ರಾವಣನನ್ನು ಸಂಹರಿಸಲು ಅನುವಾಗುವ ಸಲುವಾಗಿ ಪೃಥ್ವಿಯಲ್ಲಿ ಅವತರಿಸುವಂತೆ ಆದೇಶವಿತ್ತನು. ಬ್ರಹ್ಮನ ಆದೇಶದಂತೆ ದುಂದುಭಿ ಎಂಬ ಗಂಧರ್ವಿಯು ಪೃಥ್ವಿಯಲ್ಲಿ ಕುಬ್ಜೆಯ ಆಕಾರವನ್ನು ಧರಿಸಿ ಜನ್ಮತಾಳಿ

ಮಂಥರೆಯೆಂಬ ಹೆಸರಿನಿಂದ ಪ್ರಸಿದ್ಧಳಾದಳು. ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ ದೇವತೆಗಳು ಪರಸ್ಪರವಾಗಿ ಸಮಾಲೋಚಿಸಿದ ನಂತರ ವಾನರಸ್ತ್ರೀಯರಲ್ಲಿ ಮತ್ತು ಹೆಣ್ಣು ಕರಡಿಗಳಲ್ಲಿ ತಮ-ತಮಗೆ ಅನುರೂಪವಾದ ಮಕ್ಕಳನ್ನು ಪಡೆದರು. ದೇವತೆಗಳ ವೀರ್ಯದಿಂದ ಹುಟ್ಟಿದ ಆ ಕಪಿಗಳೂ ಮತ್ತು ಕರಡಿಗಳೂ ದೇವತೆಗಳಷ್ಟೇ ಬಲವನ್ನೂ, ಪರಾಕ್ರಮವನ್ನೂ ಪಡೆದಿದ್ದುವು. ಪರ್ವತಗಳ ಶಿಖರಗಳನ್ನು ಕೆಳಗುರುಳಿಸುವ ಸಾಮರ್ಥ್ಯವು ಅವುಗಳಿಗಿದ್ದಿತು. ಪರ್ವತಗಳಲ್ಲಿದ್ದ ದೊಡ್ಡ ದೊಡ್ಡ ಬಂಡೆಗಳು ಮತ್ತು ಸಾಲ-ತಾಲ ವೃಕ್ಷಗಳೇ ಅವುಗಳಿಗೆ ಆಯುಧಗಳಾಗಿದ್ದುವು. ಅವುಗಳ ಶರೀರಗಳು ವಜ್ರದಂತೆ ದೃಢವಾಗಿದ್ದುವು ಮತ್ತು ಅವುಗಳಿಗೆ ಅಪಾರವಾದ ಬಲವಿದ್ದಿತು. ಸಕಲವಿಧವಾದ ಯುದ್ಧಗಳಲ್ಲಿಯೂ ಆ ಕಪಿನಾಯಕರು ನಿಷ್ಣಾತರಾಗಿದ್ದರು. ತಾವು ಅಪೇಕ್ಷಿಸಿದಷ್ಟು ಬಲವನ್ನು ಇಚ್ಛೆಬಂದಾಗ ಪಡೆದುಕೊಳ್ಳುವ ವಿಶೇಷಸಾಮರ್ಥ್ಯವು ಅವರಿಗಿದ್ದಿತು. ಒಬ್ಬೊಬ್ಬ ಕಪಿಮುಖ್ಯನಿಗೂ ಹತ್ತುಸಾವಿರ ಆನೆಗಳ ಬಲವಿದ್ದಿತು. ವೇಗದಲ್ಲಿಯೂ ಸಹ ಅವರು ವಾಯುಸಮಾನರಾಗಿದ್ದರು. ಕೆಲವು ಕಪಿನಾಯಕರು ಅರಣ್ಯಗಳಲ್ಲಿಯೂ ಮತ್ತೆ ಕೆಲವರು ಇಚ್ಛೆಬಂದಲ್ಲಿಯೂ ವಾಸಿಸುತ್ತಿದ್ದರು. ಈ ರೀತಿಯಾಗಿ ಮಹಾವಿಷ್ಣುವಿಗೆ ಸಹಾಯವಾಗಲು ವಾನರರನ್ನೂ, ಕರಡಿಗಳನ್ನೂ ಸೃಷ್ಟಿಸಿದ ನಂತರ ಲೋಕಭಾವನನಾದ ಪಿತಾಮಹನು ಮಂಥರೆಗೆ ಪೃಥ್ವಿಯಲ್ಲಿ ಅವಳು ಮಾಡಬೇಕಾಗಿದ್ದ ಕಾರ್ಯವನ್ನು ವಿವರಿಸಿ ಹೇಳಿದನು. ವಿಷಯಗ್ರಹಣದಲ್ಲಿ ಬಹುಚತುರೆಯಾದ ಮಂಥರೆಯು ಬ್ರಹ್ಮನು ಹೇಳಿದ ಸಕಲವಿಷಯಗಳನ್ನೂ ಕ್ಷಣಮಾತ್ರದಲ್ಲಿ ಗ್ರಹಿಸಿದವಳಾಗಿ, ಪೃಥ್ವಿಯ ನಾನಾದೇಶಗಳಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಾ, ತನ್ನ ಕುಶಲತೆಯಿಂದ ಒಬ್ಬರಿಗೊಬ್ಬರಿಗೆ ವಿರಸವನ್ನೂ ತಂದಿಡುತ್ತಾ ಕಾಲಕಳೆಯುತ್ತಿದ್ದಳು."

೨೭೬ನೆಯ ಅಧ್ಯಾಯವು ಮುಗಿಯಿತು.

೨೭೭ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಶ್ರೀರಾಮನ ಪಟ್ಟಾಭಿಷೇಕದ ಸಿದ್ಧತೆ : ಕೈಕೇಯಿಯ ಪ್ರಾರ್ಥನೆಯಂತೆ ರಾಮನು ಅರಣ್ಯವಾಸಕ್ಕೆ ತೆರಳಿದುದು : ಭರತನ ಚಿತ್ರಕೂಟ ಯಾತ್ರೆ : ರಾಮನು ಖರ-ದೂಷಣಾದಿ ರಾಕ್ಷಸರನ್ನು ಸಂಹರಿಸಿದುದು : ರಾವಣನು ಮಾರೀಚನ ಸಮೀಪಕ್ಕೆ ಹೋದುದು

ಜನಮೇಜಯ! ಯುಧಿಷ್ಠಿರನು ಮಾರ್ಕಂಡೇಯಮಹರ್ಷಿಗಳನ್ನು ಕೇಳುತ್ತಾನೆ :

“ಮಹರ್ಷಿಗಳೇ! ನೀವು ರಾವಣನ ಜನ್ಮವೃತ್ತಾಂತ, ಅವನು ಮಾಡಿದ ತಪಸ್ಸು ಮತ್ತು ಅವನು ಪಡೆದ ವರ, ಅವನ ನಿಗ್ರಹಕ್ಕಾಗಿ ಚತುರ್ಭುಜನಾದ ಮಹಾವಿಷ್ಣುವು ಪೃಥ್ವಿಯಲ್ಲಿ ಅವತರಿಸಿದುದು ಮತ್ತು ವಿಷ್ಣುವಿನ ನೆರವಿಗಾಗಿ ದೇವತೆಗಳು ವಾನರಸ್ತ್ರೀಯರಲ್ಲಿ ಬಲಿಷ್ಠರಾದ ಮಕ್ಕಳನ್ನು ಪಡೆದುದು–ಎಲ್ಲವನ್ನೂ ವಿವರವಾಗಿ ಹೇಳಿದಿರಿ. ರಾಮ-ಲಕ್ಷ್ಮಣ- ಸೀತೆಯರು ಅರಣ್ಯಕ್ಕೆ ಕಳುಹಿಸಲ್ಪಟ್ಟರೆಂದು ಕೇಳಿರುವೆನು. ಅದಕ್ಕೆ ಕಾರಣವೇನು? ರಾಜಕುಮಾರರಾದ ರಾಮ-ಲಕ್ಷ್ಮಣರು ರಾಜಕುಮಾರಿಯಾದ ಸೀತೆಯೊಡನೆ ಯಾವ ಕಾರಣಕ್ಕಾಗಿ ಅರಣ್ಯಕ್ಕೆ ಹೋದರು? ಎಲ್ಲ ವಿಷಯಗಳನ್ನೂ ವಿವರಿಸಿ ಹೇಳಿರಿ. ಅವರ ಅರಣ್ಯವಾಸದಲ್ಲಿ ಮಂಥರೆಯ ಪಾತ್ರವೇನಾದರೂ ಇದ್ದಿತೇ?”

“ದಶರಥಮಹಾರಾಜನು ಸರ್ವದಾ ಪ್ರಜೆಗಳ ಹಿತರಕ್ಷಣೆಯಲ್ಲಿಯೇ ಆಸಕ್ತನಾಗಿರುತ್ತಾ ಧರ್ಮನಿರತನಾಗಿಯೂ, ವೃದ್ಧಜನರ ಸೇವೆಮಾಡುತ್ತಲೂ ಇದ್ದನು. ಅವನಿಗೆ ಬಹಳ ವರ್ಷಗಳ ಮೇಲೆ ಮಕ್ಕಳಾದುವು. ಅದರಿಂದವನು ಬಹು ಸಂತುಷ್ಟನಾದನು. ಅವನ ಮಕ್ಕಳು ದಿನ-ದಿನಕ್ಕೂ ಹುಣ್ಣಿಮೆಯ ಚಂದ್ರನಂತೆ ಅಭಿವೃದ್ಧಿಹೊಂದುತ್ತಾ ವೇದ-ವೇದಾಂಗಗಳಲ್ಲಿಯೂ, ಧನುರ್ವಿದ್ಯೆಯಲ್ಲಿಯೂ ಪಾರಂಗತರಾದರು. ವೇದಗಳ ರಹಸ್ಯವೂ ಸಹ ಅವರಿಗೆ ಚೆನ್ನಾಗಿ ತಿಳಿದಿದ್ದಿತು. ಬ್ರಹ್ಮಚರ್ಯಾಶ್ರಮದಲ್ಲಿದ್ದ ದಶರಥನ ಪುತ್ರರು ವಿದ್ಯಾಭ್ಯಾಸವು ಮುಗಿದನಂತರ ಅನುರೂಪರಾದ ಕನ್ಯೆಯರನ್ನು ಮದುವೆಯಾಗಿ

ಗೃಹಸ್ಥಾಶ್ರಮವನ್ನು ಪರಿಗ್ರಹಿಸಿದರು. ಅದರಿಂದಾಗಿ ದಶರಥನಿಗೆ ಅಮಿತವಾದ ಆನಂದವುಂಟಾಯಿತು.

ದಶರಥನ ಮಕ್ಕಳಾದ ರಾಮ-ಲಕ್ಷ್ಮಣ-ಭರತ-ಶತ್ರುಘ್ನರಲ್ಲಿ ಹಿರಿಯ ಮಗನಾದ ಶ್ರೀರಾಮನು ತನ್ನ ಸ್ವಾಭಾವಿಕವಾದ ಸದ್ಗುಣಗಳಿಂದ ತಂದೆಗೆ ಪ್ರಿಯನಾದ ಪುತ್ರನಾಗಿದ್ದುದು ಮಾತ್ರವಲ್ಲದೇ–ಕೋಸಲದೇಶದ ಪ್ರಜೆಗಳಿಗೂ ಸಹ ಬಹುಪ್ರಿಯನಾಗಿದ್ದನು.

ಹೀಗೆಯೇ ಇರುತ್ತಿರಲಾಗಿ ಒಮ್ಮೆ ದಶರಥನು ತಾನು ವೃದ್ಧನಾದೆನೆಂಬುದನ್ನು ಮನಗಂಡವನಾಗಿ ಶ್ರೀರಾಮನಿಗೆ ಯೌವರಾಜ್ಯಪಟ್ಟಾಭಿಷೇಕವನ್ನು ಮಾಡುವ ವಿಷಯವಾಗಿ ಧರ್ಮಜ್ಞರಾದ ಮಂತ್ರಿ-ಪುರೋಹಿತರೊಡನೆ ಸಮಾಲೋಚನೆಮಾಡಿದನು. ಧರ್ಮಜ್ಞರಾದ, ಧೀಮಂತರಾದ ಮಂತ್ರಿ-ಪುರೋಹಿತರೂ ಸಹ ಶ್ರೀರಾಮನಿಗೆ ಯುವರಾಜಪದವಿಯನ್ನು ವಹಿಸಿಕೊಡಲು ಇದು ಸರಿಯಾದ ಸಮಯವಾಗಿದೆಯೆಂದು ತಮ್ಮ ಒಮ್ಮತ್ರದ ಸಲಹೆಯನ್ನು ರಾಜನಿಗೆ ನೀಡಿದರು. ತನ್ನ ಪ್ರಜೆಗಳೂ ಸಹ ತನ್ನಂತೆಯೇ ರಾಮನಿಗೆ ಪಟ್ಟಾಭಿಷೇಕವಾಗುವ ವಿಷಯದಲ್ಲಿ ಉತ್ಸುಕರಾಗಿರುವರೆಂಬುದನ್ನು ತಿಳಿದು ದಶರಥನ ಆನಂದಕ್ಕೆ ಪಾರವಿಲ್ಲದಾಯಿತು. ಒಡನೆಯೇ ದಶರಥನು ತನ್ನ ಅಂತಃಪುರಕ್ಕೆ ಬರುವಂತೆ ರಾಮನಿಗೆ ಹೇಳಿಕಳುಹಿಸಿದನು. ಲೋಹಿತಾಕ್ಷನಾದ, ಮಹಾಬಾಹುವಾದ, ಮದಿಸಿದ ಆನೆಯಂತೆ ಗಂಭೀರವಾದ ಗಮನವುಳ್ಳ, ನೀಳವಾದ ತೋಳುಗಳಿಂದ ಕೂಡಿದ್ದ, ವಿಶಾಲವಾದ ವಕ್ಷಸ್ಥಳದಿಂದ ಕೂಡಿದ್ದ, ಕಪ್ಪಾದ ಮುಂಗುರುಳುಗಳುಳ್ಳ ತಲೆಯಿಂದ ಕೂಡಿದ್ದ, ದಿವ್ಯವಾದ ಮುಖದ ಕಾಂತಿಯಿಂದ ಪ್ರಕಾಶಮಾನನಾಗಿದ್ದ, ವೀರನಾದ, ಯುದ್ಧದಲ್ಲಿ ಇಂದ್ರನನ್ನೂ ಮೀರಿಸುವ ಪರಾಕ್ರಮವನ್ನು ತೋರುವ, ಸರ್ವಧರ್ಮಗಳ ರಹಸ್ಯವನ್ನೂ ಸಂಪೂರ್ಣವಾಗಿ ತಿಳಿದಿದ್ದ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನೆನಿಸಿದ್ದ ಸರ್ವಪ್ರಜೆಗಳಿಂದಲೂ ಸನ್ಮಾನ್ಯನಾಗಿದ್ದ ಮತ್ತು ಎಲ್ಲ ಪ್ರಜೆಗಳ ವಿಷಯದಲ್ಲಿಯೂ ವಿಶೇಷವಾದ ಅನುರಾಗವನ್ನಿಟ್ಟುಕೊಂಡಿದ್ದ, ಸರ್ವವಿದ್ಯಾಪಾರಂಗತನಾದ, ಜಿತೇಂದ್ರಿಯನಾದ, ಶತ್ರುಗಳ ಕಣ್ಣುಗಳಿಗೂ ಆನಂದವನ್ನುಂಟುಮಾಡುವಂತಹ ಅನಿರ್ವಾಚ್ಯವಾದ ಸೌಂದರ್ಯದಿಂದ ಶೋಭಿಸುತ್ತಿದ್ದ , ದುಷ್ಟಶಿಕ್ಷಕನಾದ, ಶಿಷ್ಟಪರಿಪಾಲಕನಾದ, ಧೃತಿಮಂತ

ನಾದ, ದುರ್ಧರ್ಷನಾದ, ಸರ್ವತ್ರಜಯಶಾಲಿಯಾದ, ಸೋಲೆಂಬುದನ್ನೇ ಅರಿಯದ, ಸೌಶೀಲ್ಯಾದಿ ಗುಣಗಳಿಂದ ತನ್ನ ತಾಯಿಯಾದ ಕೌಸಲ್ಯಾದೇವಿಯ ಆನಂದವನ್ನು ಹೆಚ್ಚಿಸುತ್ತಿದ್ದ ಸುಪುತ್ರನಾದ ಶ್ರೀರಾಮನು ತನ್ನ ಸಮೀಪಕ್ಕೆ ಬರುತ್ತಲೇ ದಶರಥನು ಆನಂದಭರಿತನಾಗಿ ಮಗನನ್ನು ಬಿಗಿದಪ್ಪಿ ಅವನ ನೆತ್ತಿಯನ್ನು ಆಘ್ರಾಣಿಸಿ, ಅವನ ಕೈಹಿಡಿದು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು. ರಾಮನ ಗುಣಾತಿಶಯಗಳನ್ನು ಮನಸ್ಸಿನಲ್ಲಿಯೇ ಸ್ಮರಿಸಿಕೊಳ್ಳುತ್ತಿದ್ದ ರಾಜನಿಗೆ ಈ ಕೂಡಲೇ ರಾಮನಿಗೆ ಪಟ್ಟಾಭಿಷೇಕಮಾಡಿಬಿಡಬೇಕೆಂಬ ಮನಸ್ಸಾಗಿ ಪುರೋಹಿತರನ್ನು ಕುರಿತು ಹೇಳಿದನು :

**ಅದ್ಯ ಪುಷ್ಯೋ ನಿಶಿ ಬ್ರಹ್ಮನ್ಪುಣ್ಯಂ ಯೋಗಮುಪೈಷ್ಯತಿ ।**
**ಸಮ್ಭಾರಾಃ ಸಮ್ಭ್ರಿಯನ್ತಾಂ ಮೇ ರಾಮಶ್ಚೋಪನಿಮನ್ತ್ರ್ಯತಾಮ್ ॥**

"ಇಂದು ರಾತ್ರಿ ಪುಷ್ಯನಕ್ಷತ್ರವು ಪುಣ್ಯಯೋಗವನ್ನು ಹೊಂದುತ್ತದೆ. ಸುಯೋಗದಿಂದ ಕೂಡಿರುವ ಈ ಪುಷ್ಯನಕ್ಷತ್ರದಂದೇ ಶ್ರೀರಾಮನಿಗೆ ಪಟ್ಟಾಭಿಷೇಕಮಾಡಲು ಬಹುಪ್ರಶಸ್ತವಾಗಿದೆ. ಈ ನಕ್ಷತ್ರವು ನಾಳೆಯೂ ಇರುತ್ತದೆಯಾದುದರಿಂದ ನಾಳೆಯ ದಿನವೇ ರಾಮನ ಪಟ್ಟಾಭಿಷೇಕವನ್ನು ಮಾಡಬೇಕು. ಆದುದರಿಂದ ನೀವೀಗಲೇ ರಾಮನ ಪಟ್ಟಾಭಿಷೇಕಕ್ಕೆ ಬೇಕಾಗುವ ಸಂಭಾರಗಳನ್ನು ಸಿದ್ಧಗೊಳಿಸಿ ರಾಮನನ್ನು ಶುಭಮುಹೂರ್ತದಲ್ಲಿ ಆಹ್ವಾನಿಸಿರಿ."

ದಶರಥನ ಮಾತುಗಳನ್ನು ಕೇಳಿ ಪುರೋಹಿತರು 'ತಥಾಸ್ತು' ಎಂದು ಉತ್ತರಿಸಿ ಪಟ್ಟಾಭಿಷೇಕದ ಸಂಭಾರಗಳ ಆಹರಣಕ್ಕೆ ಹೊರಟುಹೋದರು.

ರಾಮನ ಪಟ್ಟಾಭಿಷೇಕವಾರ್ತೆಯನ್ನೂ ದಶರಥನು ಪುರೋಹಿತರೊಡನೆ ಹೇಳಿದ ಮಾತುಗಳನ್ನೂ ರಾಜನ ಸಮೀಪದಲ್ಲಿಯೇ ನಿಂತಿದ್ದ ಮಂಥರೆಯೂ ಕೇಳಿಸಿಕೊಂಡಳು.

ಯುಧಿಷ್ಠಿರ! ಅವಳು ಕೈಕೇಯಿಯ ದಾಸಿಯಾಗಿ ದಶರಥನ ಊಳಿಗದಲ್ಲಿ ಸೇರಿಕೊಂಡಿದ್ದಳು.

ಮರುಕ್ಷಣದಲ್ಲಿಯೇ ಮಂಥರೆಯು ಕೈಕೇಯಿಯ ಅಂತಃಪುರಕ್ಕೆ ಹೋಗಿ ಸಮಯೋಚಿತವಾದ ಈ ಮಾತುಗಳನ್ನು ತನ್ನ ಒಡತಿಯೊಡನೆ ಹೇಳಿದಳು :

“ದೇವಿ ನಿನಗೆ ಅತ್ಯಂತ ದೌರ್ಭಾಗ್ಯಕರವಾದ ನಿರೂಪವೊಂದನ್ನು ರಾಜನು ಈಗ ತಾನೇ ಹೊರಡಿಸಿದನು. ಅವನ ಆಜ್ಞೆಯು ಕಾರ್ಯಗತವಾಯಿತೆಂದರೆ ನೀನು ಬದುಕಿರುವುದಕ್ಕಿಂತಲೂ ಸತ್ತುಹೋಗುವುದೇ ಲೇಸು.

ನಿನ್ನನ್ನು ವಿಷಪೂರಿತವಾದ ಮತ್ತು ಕೋಪಗೊಂಡ ಸರ್ಪಗಳು ಕಚ್ಚಿಯಾದರೂ ಸಾಯಿಸಿಬಿಡಲೆಂದು ಆಶಿಸುತ್ತೇನೆ. ಮುಂದೆ ನೀನು ಬದುಕಿದ್ದೂ ಪ್ರಯೋಜನವಿಲ್ಲ. ರಾಜನ ಆಜ್ಞೆಯಿಂದಾಗಿ ನಿನ್ನ ಸವತಿಯಾದ ಕೌಸಲ್ಯಾದೇವಿಯು ಸೌಭಾಗ್ಯವತಿಯಾಗುತ್ತಾಳೆ. ಅವಳ ಮಗನು ಪಟ್ಟಾಭಿಷಿಕ್ತನಾಗುತ್ತಾನೆ. ನಿನ್ನ ಮಗನು ಈ ರಾಜ್ಯವನ್ನು ಪಡೆಯದಿದ್ದಮೇಲೆ ನಿನಗೆ ಸೌಭಾಗ್ಯವು ತಾನೇ ಎಲ್ಲಿಯದು?”

ಯುಧಿಷ್ಠಿರ! ಮಂಥರೆಯ ಮಾತನ್ನು ಕೇಳಿದ, ಕೃಶವಾದ ನಡುಭಾಗವುಳ್ಳ ಕೈಕೇಯಿಯು ಸರ್ವಾಲಂಕಾರಭೂಷಿತೆಯಾಗಿ ಏಕಾಂತದಲ್ಲಿ ತನ್ನ ಪತಿಯನ್ನು ಸಂಧಿಸಿದಳು. ಪ್ರಣಯದ ಕಾಮನೆಯಿಂದ ಬಂದಿರುವಳಂತೆ ನಟಿಸುತ್ತಾ ಕೈಕೇಯಿಯು ಮಂದಸ್ಮಿತೆಯಾಗಿ ರಾಜನನ್ನು ಕುರಿತು ಹೀಗೆಂದು ಹೇಳಿದಳು :

“ಮಹಾರಾಜ! ನೀನು ಯಾವಾಗಲೂ ಸತ್ಯನಿಷ್ಠನು. ಸತ್ಯಪ್ರತಿಜ್ಞನು. ಕೊಟ್ಟ ಭಾಷೆಯನ್ನು ಯಾವಾಗಲೂ ಇಲ್ಲವೆನ್ನುವವನಲ್ಲ. ಈ ಹಿಂದೆ ನೀನು ನನಗೊಂದು ಮಾತುಕೊಟ್ಟಿದ್ದೆ. ನಾನಪೇಕ್ಷಿಸಿದಾಗ ಆ ಮಾತನ್ನು ನಡೆಸಿಕೊಡುವಂತೆ ನೀನು ಅಭಿವಚನವನ್ನಿತ್ತಿದ್ದೆ. ನಾನು ಇದುವರೆವಿಗೂ ನನ್ನ ಅಭಿಲಾಷೆಯನ್ನು ವ್ಯಕ್ತಪಡಿಸದೆಯೇ ಇದ್ದುಬಿಟ್ಟೆನು. ಇಂದು ನೀನಿತ್ತ ಹಿಂದಿನ ಮಾತಿನಂತೆ ನನ್ನ ಮನೋಭಿಲಷಿತವನ್ನು ಪೂರೈಸಿ ಕೊಡಬೇಕು. ನಾನು ಈಗ ಹೇಳಲಿರುವ ಮಾತನ್ನು ನಡೆಸಿಕೊಟ್ಟು, ಕೊಟ್ಟ ಮಾತಿಗೆ ತಪ್ಪಿದನೆಂಬ ಆಪಾದನೆಯಿಂದಲೂ ಮತ್ತು ತತ್ಸಂಬಂಧವಾದ ಪಾಪದಿಂದಲೂ ವಿಮುಕ್ತನಾಗಬೇಕು.”

ಕಾಮಾಭಿಭೂತನಾದ ಮತ್ತು ಕೈಕೇಯಿಯ ಕಟಾಕ್ಷವೀಕ್ಷಣದಿಂದ ಬಂಧಿತನಾಗಿದ್ದ ರಾಜನು ಹೇಳಿದನು :

**ವರಂ ದದಾನಿ ತೇ ಹನ್ತ ತದ್ಗೃಹಾಣ ಯದಿಚ್ಛಸಿ ।**

**ಅವಧ್ಯೋ ವಧ್ಯತಾಂ ಕೋऽದ್ಯ ವಧ್ಯಃ ಕೋऽದ್ಯ ವಿಮುಚ್ಯತಾಮ್ ।**
**ಧನಂ ದದಾನಿ ಕಸ್ಯಾದ್ಯ ಹ್ರಿಯತಾಂ ಕಸ್ಯ ವಾ ಪುನಃ ॥೨೨॥**

**ಬ್ರಾಹ್ಮಣಸ್ವಾದಿಹಾನ್ಯತ್ರ ಯತ್ಕಿಂಚಿದ್ವಿತ್ತಮಸ್ತಿ ಮೇ ।**
**ಪೃಥಿವ್ಯಾಂ ರಾಜರಾಜೋऽಸ್ಮಿ ಚಾತುರ್ವರ್ಣ್ಯಸ್ಯ ರಕ್ಷಿತಾ ।**
**ಯಸ್ತೇऽಭಿಲಷಿತಃ ಕಾಮೋ ಬ್ರೂಹಿ ಕಲ್ಯಾಣಿ ಮಾ ಚಿರಮ್ ॥೨೩॥**

"ನಿನಗೆ ಬೇಕಾದ ವರವನ್ನು ಕೊಡುತ್ತೇನೆ, ಕೇಳು ದೇವಿ! ಸಂಕೋಚವಿಲ್ಲದೇ ಕೇಳು. ವಧೆಗೆ ಅನರ್ಹನಾದವನನ್ನು ವಧಿಸಬೇಕೇ? ಅಥವಾ ವಧೆಗೆ ಅರ್ಹನಾದವನನ್ನು ಬಿಟ್ಟುಬಿಡಬೇಕೆ? ಬೇಗ ಹೇಳು. ದರಿದ್ರನಾದ ಯಾವನಿಗಾದರೂ ಅಪಾರವಾದ ಐಶ್ವರ್ಯವನ್ನು ಕೊಡಬೇಕೇ? ಅಥವಾ ಅಪಾರವಾದ ಐಶ್ವರ್ಯವಿರುವವನೊಬ್ಬನನ್ನು ಸುಲಿಗೆಮಾಡಬೇಕೇ?"

(ಸ್ತ್ರೀವ್ಯಾಮೋಹದಿಂದ ಧರ್ಮಾಧರ್ಮವಿವೇಚನೆಯೇ ಇಲ್ಲದೇ ರಾಜನು ಈ ಮಾತುಗಳನ್ನು ಕೈಕೇಯಿಯೊಡನೆ ಹೇಳಿದರೂ ಬ್ರಾಹ್ಮಣರ ಸ್ವತ್ತಿನ ವಿಷಯದಲ್ಲಿ ಮಾತ್ರ ತನ್ನ ನಾಲಿಗೆಯನ್ನು ತಡೆಹಿಡಿಯಬೇಕಾಯಿತು.)

"ಬ್ರಾಹ್ಮಣರ ಆಸ್ತಿಯೊಂದನ್ನುಳಿದು ನನಗೆ ಈ ಪೃಥ್ವಿಯಲ್ಲಿ ಎಷ್ಟು ಐಶ್ವರ್ಯವಿದೆಯೋ ಆ ಐಶ್ವರ್ಯದಲ್ಲಿ ಯಾವುದನ್ನಾದರೂ ಕೇಳು. ಕೊಟ್ಟು ಬಿಡುತ್ತೇನೆ, ದೇವಿ! ನಿನಗೆ ತಿಳಿದಿರುವಂತೆ ನಾನು ಚಕ್ರವರ್ತಿಯಾಗಿದ್ದೇನೆ. ನಾಲ್ಕು ವರ್ಣದವರನ್ನೂ ಧರ್ಮದಿಂದ ಪರಿಪಾಲನೆಮಾಡುತ್ತಿದ್ದೇನೆ. ಸ್ವಲ್ಪವೂ ಸಾವಕಾಶಮಾಡದೇ ನಿನ್ನ ಮನಸ್ಸಿನ ಅಭಿಲಾಷೆಯನ್ನು ವ್ಯಕ್ತಪಡಿಸು. ನಿನಗೇನು ಬೇಕೆಂಬುದನ್ನು ಕೇಳು, ಕಲ್ಯಾಣಿ!"

ಕೈಕೇಯಿಯು ದಶರಥನ ಮಾತುಗಳನ್ನು ಕೇಳಿದಳು. ತಾನು ಕೊಟ್ಟ ಮಾತಿನಿಂದ ರಾಜನು ಪ್ರತಿನಿವೃತ್ತನಾಗದಂತೆ ಪುನಃ ಪುನಃ ರಾಜನಿಂದ 'ಕೇಳಿದ ವರವನ್ನು ಕೊಟ್ಟೇ ತೀರುವೆನು' ಎಂಬ ಶಪಥವನ್ನು ಪಡೆದಳು. ಮೇಲಾಗಿ ರಾಜನು ತನ್ನ ಮಾತನ್ನು ತಿರಸ್ಕರಿಸಲು ಸಾಧ್ಯವಿಲ್ಲವೆಂಬ ವಿಷಯವೂ ಕೈಕೇಯಿಗೆ ತಿಳಿದಿತ್ತು. ರಾಜನು ಕೈಕೇಯಿಯನ್ನು ಬಹುವಾಗಿ ಪ್ರೀತಿಸುತ್ತಿದ್ದನು. ಅವಳ ಸೌಂದರ್ಯಕ್ಕೆ ಮಾರುಹೋಗಿ ಅವಳ ದಾಸ

ನಾಗಿದ್ದನು. ಈ ಕಾರಣಗಳಿಂದ ಕೈಕೇಯಿಗೆ ತನ್ನ ಅಭಿಲಾಷೆಯು ಪೂರ್ಣ ಗೊಳ್ಳುವುದೆಂಬ ಭರವಸೆಯಿದ್ದಿತು. ಅಂತೆಯೇ ತನ್ನ ಮನೋಗತವಾಗಿದ್ದ ಅಭಿಲಾಷೆಯನ್ನು ರಾಜನ ಮುಂದಿಟ್ಟಳು :

**ಆಭಿಷೇಚನಿಕಂ ಯತ್ತೇ ರಾಮಾರ್ಥಮುಪಕಲ್ಪಿತಮ್ ।**
**ಭರತಸ್ತದವಾಪ್ನೋತು ವನಂ ಗಚ್ಛತು ರಾಘವಃ ॥೨೬॥**

"ರಾಮನ ಪಟ್ಟಾಭಿಷೇಕಾರ್ಥವಾಗಿ ಸಂಗ್ರಹಿಸಿರುವ ಈ ಸಂಭಾರ ಗಳಿಂದಲೇ ಭರತನ ಪಟ್ಟಾಭಿಷೇಕವು ನಡೆಯಲಿ. ರಾಮನು ಅರಣ್ಯಕ್ಕೆ ಹೊರಟುಹೋಗಲಿ."

ಇಂತಹ ಕರ್ಣಕಠೋರವಾದ ವರವನ್ನು ಕೈಕೇಯಿಯು ಕೇಳುವಳೆಂದು ರಾಜನು ಭಾವಿಸಿರಲಿಲ್ಲ. ಆ ವರವನ್ನು ಕೈಕೇಯಿಯು ಕೇಳಿದುದರಿಂದ ರಾಜ ನಿಗೆ ಬಹಳ ಸಂಕಟವಾಯಿತು. ಆದರೂ ಸಹ 'ಸಾಧ್ಯವಿಲ್ಲ' ಎಂದು ಹೇಳಲು ರಾಜನಿಗೆ ಸಾಧ್ಯವಾಗಲಿಲ್ಲ. ದುಃಖಾರ್ತನಾದ ಮಹಾರಾಜನು ಏನೊಂದನ್ನೂ ಹೇಳದೇ ಸುಮ್ಮನಿದ್ದುಬಿಟ್ಟನು.

ತನ್ನ ಚಿಕ್ಕತಾಯಿಯು ತಂದೆಯನ್ನು ವರಕೇಳಿದ ವಿಷಯವು ಧರ್ಮಾತ್ಮ ನಾದ ರಾಮನಿಗೂ ತಿಳಿಯಿತು. ದಶರಥನು ರಾಮನನ್ನು ಕರೆಯಿಸಿ ಕಾಡಿಗೆ ಹೋಗುವಂತೆ ಹೇಳದಿದ್ದರೂ ಸಹ ತಂದೆಯ ಮಾತನ್ನು ಉಳಿಸುವ ಸಲು ವಾಗಿ ರಾಮನು ತಾನಾಗಿಯೇ ಕಾಡಿಗೆ ಹೊರಟುಬಿಟ್ಟನು. ಅವನನ್ನನುಸರಿಸಿ ಧನುರ್ಧರನಾದ, ಕಾಂತಿಮಂತನಾದ ಲಕ್ಷ್ಮಣನೂ, ಜನಕನ ಮಗಳಾದ ಶ್ರೀರಾಮನ ಭಾರ್ಯೆಯಾದ ಸೀತಾದೇವಿಯೂ ಅರಣ್ಯಕ್ಕೆ ಹೊರಟರು.

ರಾಮನು ಅರಣ್ಯಕ್ಕೆ ಹೊರಟುಹೋಗಲಾಗಿ ಪುತ್ರವಿಯೋಗದುಃಖ ದಿಂದ ಪರಿತಪಿಸುತ್ತಿದ್ದ ದಶರಥನು ಕಾಲವಶನಾದನು.

ರಾಮನು ಅರಣ್ಯಕ್ಕೆ ಹೊರಟುಹೋದರೂ, ತನ್ನ ಪತಿಯು ಪರ ಲೋಕವನ್ನೈದಿದರೂ ಕೈಕೇಯಿಯ ಮನಸ್ಸು ವ್ಯಾಕುಲಗೊಳ್ಳಲಿಲ್ಲ. ತಾನು ಸಾಧಿಸಬೇಕೆಂದಿದ್ದ ಕಾರ್ಯದಲ್ಲಿ ಅವಳು ದೃಢಮನಸ್ಕಳಾಗಿದ್ದಳು. ಅಂತೆಯೇ ತನ್ನ ತಂದೆಯ ಮನೆಯಲ್ಲಿದ್ದ ಭರತನನ್ನು ಕೂಡಲೇ ಕರೆಯಿಸಿ ಅವನನ್ನು ಕುರಿತು ಹೇಳಿದಳು :

"ಮಗು ಭರತ! ರಾಜನು ಪರಂಧಾಮವನ್ನೈದಿದನು. ರಾಮ- ಲಕ್ಷ್ಮಣರು ಅರಣ್ಯಕ್ಕೆ ಹೊರಟುಹೋಗಿದ್ದಾರೆ. ಸಂಪತ್ಸಮೃದ್ಧವಾದ ಈ ಸಾಮ್ರಾಜ್ಯವನ್ನು ನೀನು ಪಡೆಯುವವನಾಗು. ಈ ಸಾಮ್ರಾಜ್ಯವಿಂದು ನಿಷ್ಕಂಟಕವಾಗಿಯೂ, ನಿರುಪದ್ರವವಾಗಿಯೂ ಇರುವುದು."

ಧರ್ಮಾತ್ಮನಾದ ಭರತನು ಕೈಕೇಯಿಯ ಮಾತನ್ನು ಕೇಳಿ ಕುಪಿತನಾಗಿ ಹೇಳಿದನು :

"ತಾಯೇ! ನೀನು ಬಹುಕ್ರೂರವಾದ ಕಾರ್ಯವನ್ನು ಮಾಡಿಬಿಟ್ಟಿರುವೆ. ಕೇವಲ ಧನದ ಆಸೆಯಿಂದಾಗಿ ಪತಿಯನ್ನೂ ಕೊಂದು, ಧರ್ಮಾತ್ಮನಾದ ರಾಮನನ್ನೂ ಕಾಡಿಗಟ್ಟಿರುವೆ. ಇದರಿಂದಾಗಿ ನೀನು ನಮ್ಮ ವಂಶವನ್ನೇ ಹಾಳುಮಾಡಿದೆಯಮ್ಮಾ!

ನಿಶ್ಚಯವಾಗಿಯೂ ನೀನು ಕುಲಘಾತಕಳೇ ಸರಿ. ನನ್ನ ಮೇಲೆ ಅಪಯಶಸ್ಸನ್ನು ಹೊರಿಸಿ ನೀನು ಈ ಕುತ್ಸಿತಕಾರ್ಯದ ಸಾಧನೆಯನ್ನು ಮಾಡಿದೆ"–ಹೀಗೆಂದು ಹೇಳುತ್ತಾ ಭರತನು ಬಿಕ್ಕಿ-ಬಿಕ್ಕಿ ಅತ್ತನು.

ರಾಮನನ್ನು ಕಾಡಿಗೆ ಕಳುಹಿಸಲು ತನ್ನ ತಾಯಿಯೇ ಪೂರ್ಣಕಾರಣಳೆಂದೂ, ಆ ದುಷ್ಕಾರ್ಯಕ್ಕೆ ತಾನು ಸ್ವಲ್ಪವಾದರೂ ಕಾರಣನಲ್ಲವೆಂದೂ ಅಮಾತ್ಯರ ಮತ್ತು ನಾಗರಿಕರ ಮುಂದೆ ಸ್ಪಷ್ಟವಾಗಿ ತಿಳಿಸಿ, ಭರತನು ಪಟ್ಟಣಿಗರನ್ನೂ ಜೊತೆಮಾಡಿಕೊಂಡು ರಾಮನಿರುವಲ್ಲಿಗೇ ಹೋಗಿ ಅವನನ್ನು ಪ್ರಾರ್ಥಿಸಿ ಪುನಃ ಅವನನ್ನು ಅಯೋಧ್ಯೆಗೆ ಕರೆತರಬೇಕೆಂದು ನಿಶ್ಚಯಿಸಿದನು. ಕ್ಷಣಮಾತ್ರದಲ್ಲಿ ಸರ್ವಸಿದ್ಧತೆಗಳೂ ಆದುವು.

ಬಹುದುಃಖಿತನಾದ ಭರತನು ಕೌಸಲ್ಯಾ, ಸುಮಿತ್ರಾ, ಕೈಕೇಯೀ–ಈ ಮೂವರನ್ನೂ ಯಾನಗಳಲ್ಲಿ ಕುಳ್ಳಿರಿಸಿಕೊಂಡು ಶತ್ರುಘ್ನಸಮೇತನಾಗಿ ಹೊರಟನು. ರಾಮನನ್ನು ಪಟ್ಟಣಕ್ಕೆ ಕರೆತರುವ ಸಲುವಾಗಿ ಭರತನ ಜೊತೆಯಲ್ಲಿ ವಸಿಷ್ಠ-ವಾಮದೇವಾದಿಗಳೂ, ಸಾವಿರಾರು ಮಂದಿ ಬ್ರಾಹ್ಮಣರೂ, ನಾಗರಿಕರೂ ಸಾಲು-ಸಾಲಾಗಿ ಭರತನ ರಥವನ್ನು ಹಿಂಬಾಲಿಸಿ ಹೊರಟರು.

ಧನುಷ್ಪಾಣಿಗಳಾಗಿಯೂ, ತಾಪಸವೇಷಧಾರಿಗಳಾಗಿಯೂ ಇದ್ದ ರಾಮ-ಲಕ್ಷ್ಮಣರನ್ನು ಭರತನು ಚಿತ್ರಕೂಟಪರ್ವತದಲ್ಲಿ ಸಂದರ್ಶಿಸಿದನು.

ತಂದೆಯ ಆಜ್ಞಾಪರಿಪಾಲನೆಗಾಗಿಯೇ ಅರಣ್ಯಕ್ಕೆ ಬಂದಿದ್ದ ರಾಮನು ಭರತನ ಪ್ರಾರ್ಥನೆಯನ್ನು ಅಂಗೀಕರಿಸಲಿಲ್ಲ. ಭರತನ ಪ್ರಾರ್ಥನೆಯಂತೆ ತನ್ನೆರಡು ಪಾದುಕೆಗಳನ್ನು ಭರತನಿಗೆ ಕೊಟ್ಟು ಕಳುಹಿಸಿದನು. ಭರತನು ನಂದಿಗ್ರಾಮಕ್ಕೆ ಹಿಂದಿರುಗಿಬಂದು, ಅಣ್ಣನ ಪಾದುಕೆಗಳನ್ನೇ ಸಿಂಹಾಸನದ ಮೇಲಿಟ್ಟು ಆ ದಿವ್ಯಪಾದುಕೆಗಳ ಆಜ್ಞಾಧಾರಕನಾಗಿ ರಾಜ್ಯವನ್ನು ಪರಿಪಾಲನೆ ಮಾಡುತ್ತಿದ್ದನು.

ಪುನಃ ಪುನಃ ಅಯೋಧ್ಯಾಪಟ್ಟಣದ ನಾಗರಿಕರು ತನ್ನ ಬಳಿಗೆ ಬಂದು ತನ್ನನ್ನು ಅಯೋಧ್ಯೆಗೆ ಹಿಂದಿರುಗುವಂತೆ ಬಲಾತ್ಕರಿಸುವರೆಂದು ಶಂಕಿಸಿದ ರಾಮನು ಚಿತ್ರಕೂಟಪರ್ವತದಿಂದ ಮುಂದಕ್ಕೆ ಪ್ರಯಾಣಮಾಡಿ, ಮಹಾ ರಣ್ಯವೊಂದನ್ನು ಪ್ರವೇಶಿಸಿ ಶರಭಂಗಾಶ್ರಮದ ಸಮೀಪಕ್ಕೆ ಬಂದನು. ಆಶ್ರಮದಲ್ಲಿದ್ದ ಮಹರ್ಷಿಗಳಾದ ಶರಭಂಗರನ್ನು ಸಂದರ್ಶಿಸಿ-ಸತ್ಕರಿಸಿ-ನಮ ಸ್ಕರಿಸಿ, ಆಶೀರ್ವಾದಗಳನ್ನು ಪಡೆದು ಅಲ್ಲಿಂದ ಮುಂದಕ್ಕೆ ಪ್ರಯಾಣಮಾಡಿ ದಂಡಕಾರಣ್ಯವನ್ನು ಸೇರಿ ಅಲ್ಲಿ ಬಹುರಮ್ಯವಾಗಿದ್ದ ಗೋದಾವರೀನದಿಯ ತೀರದ ಆಶ್ರಮದಲ್ಲಿ ವಾಸಮಾಡಿಕೊಂಡಿದ್ದನು.

ಅಲ್ಲಿ ವಾಸಮಾಡುತ್ತಿದ್ದಾಗ ಶ್ರೀರಾಮನು ಶೂರ್ಪಣಖೆಯ ಕಾರಣ ದಿಂದ ಖರನೆಂಬ ರಾಕ್ಷಸನೊಡನೆ ದ್ವೇಷಕಟ್ಟಿಕೊಂಡನು. ಧರ್ಮಾತ್ಮನಾದ ಶ್ರೀರಾಮನು ಅಲ್ಲಿದ್ದ ತಪಸ್ವಿಗಳ ರಕ್ಷಣಾರ್ಥವಾಗಿ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನೂ, ಖರ-ದೂಷಣರನ್ನೂ ಸಂಹರಿಸಿ ಆ ಧರ್ಮಾರಣ್ಯವನ್ನು ಕ್ಷೇಮಂಕರವನ್ನಾಗಿ ಮಾಡಿದನು. (ಅಪಾಯರಹಿತವನ್ನಾಗಿ ಮಾಡಿದನು.)

ಯುಧಿಷ್ಠಿರ! ಶೂರ್ಪಣಖೆಯ ಮೂಗು-ತುಟಿಗಳನ್ನು ಲಕ್ಷ್ಮಣನು ಕತ್ತರಿಸಿದುದರ ಫಲವಾಗಿ ಆ ಘೋರಯುದ್ಧವಾಯಿತು. ತನ್ನ ಅನುಯಾಯಿ ಗಳೆಲ್ಲರೂ ರಾಮನಿಂದ ಸಂಹೃತರಾದುದನ್ನು ಕಂಡು ಶೂರ್ಪಣಖೆಯು ಲಂಕೆಯಲ್ಲಿದ್ದ ತನ್ನಣ್ಣನ ಅರಮನೆಗೆ ಧಾವಿಸಿದಳು. ಅವಳ ದುಃಖವು ಅಪಾರವಾಗಿತ್ತು. ಮುಖದ ಮೇಲೆ ರಕ್ತವು ಹೆಪ್ಪುಗಟ್ಟಿದ್ದಿತು. ಬಿಕ್ಕಿ-ಬಿಕ್ಕಿ

ಅಳುತ್ತಾ ಶೂರ್ಪಣಖೆಯು ಅಣ್ಣನ ಕಾಲುಗಳ ಮೇಲೆ ಬಿದ್ದಳು. ಮೂಗು-ತುಟಿಗಳನ್ನು ಕಳೆದುಕೊಂಡು ವಿಕೃತಮುಖಳಾಗಿದ್ದ ತಂಗಿಯನ್ನು ನೋಡಿದೊಡನೆಯೇ ರಾವಣನು ಸಿಂಹಾಸನದಿಂದ ಮೇಲೆದ್ದು ಕೋಪಾವಿಷ್ಟನಾಗಿ ಕಟ-ಕಟನೆ ಹಲ್ಲುಕಡಿದನು. ಅಲ್ಲಿ ಉಪಸ್ಥಿತರಾಗಿದ್ದ ತನ್ನ ಮಂತ್ರಿಗಳನ್ನು ಕಳುಹಿಸಿಕೊಟ್ಟನಂತರ ತನ್ನ ತಂಗಿಯನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು ಸಂತೈಸುತ್ತಾ ಹೇಳಿದನು :

"ತಂಗಿ! ನಿನಗೆ ಮಂಗಳವಾಗಲಿ. ನಿನ್ನ ಅಣ್ಣನು ರಾವಣನೆಂಬುದನ್ನು ಗಣನೆಗೆ ತಂದುಕೊಳ್ಳದೇ ನನ್ನನ್ನೂ ಅವಮಾನಗೊಳಿಸಿ ನಿನ್ನ ಮುಖವನ್ನು ವಿಕಾರಗೊಳಿಸಿದ ಆ ದುರಾತ್ಮನಾರು? ಶೂಲವೊಂದನ್ನು ಹರಿತಗೊಳಿಸಿ ತನ್ನ ಶರೀರವನ್ನೇ ಆ ಶೂಲದಿಂದ ಚುಚ್ಚಿಕೊಳ್ಳುವ ಮೂಢನ ಕಾರ್ಯದಂತಿದೆ–ಅವನ ಈ ದುಷ್ಟಚರ್ಯೆ. ಹರಿತವಾದ ಶೂಲವನ್ನು ಮೈಗೆ ಚುಚ್ಚಿಕೊಂಡರೆ ಪರಿಣಾಮವೇನಾಗುವುದೆಂಬುದನ್ನು ಆ ದುಷ್ಟನು ಅರಿತಿಲ್ಲವೆಂದು ತೋರುತ್ತದೆ. ತಲೆದಿಂಬಿನಲ್ಲಿ ಅಗ್ನಿಯನ್ನಿಟ್ಟುಕೊಂಡು ನಿಶ್ಚಿಂತನಾಗಿ ಮಲಗಿರುವ ಮಂದಬುದ್ಧಿಯು ಅವನಾಗಿರಬೇಕು. ಅಂತಹವನೇ ಇಂತಹ ದುಃಸಾಹಸಕಾರ್ಯದಲ್ಲಿ ವಿವೇಚನೆಯಿಲ್ಲದೇ ತೊಡಗಬಲ್ಲನು. ವಿಷಸರ್ಪವೊಂದರ ಮೇಲೆ ಕಾಲಿಟ್ಟಂತಾಗಿದೆ ಆ ದುಷ್ಟನ ಈ ಚರ್ಯೆ. ಕೋಪಗೊಂಡ ಸಿಂಹವೊಂದರ ಬಾಯಲ್ಲಿರುವ ಕೋರೆದಾಡೆಗಳನ್ನು ಎಣಿಸಲು ಹೋದ ಮೂರ್ಖನಂತೆ ಅವನಿಂದು ನಿನ್ನನ್ನು ವಿಕಾರಗೊಳಿಸಿದ್ದಾನೆ. ಅವನಾರೆಂಬುದನ್ನು ಕೂಡಲೇ ಹೇಳು, ತಂಗಿ!"

ರಾತ್ರಿಯ ವೇಳೆಯಲ್ಲಿ ಕಾಡುಗಿಚ್ಚಿಗೆ ಆಹುತಿಯಾದ ವೃಕ್ಷದ ಎಲ್ಲ ಶಾಖೆಗಳಿಂದಲೂ ಯಜ್ಞೇಶ್ವರನ ಜ್ವಾಲೆಗಳು ಹೊರಸೂಸುವಂತೆ–ಕೋಪಾವಿಷ್ಟನಾಗಿದ್ದ ರಾವಣನ ಶರೀರದಿಂದ ಕೋಪಾಗ್ನಿಯ ಕಿಡಿಗಳು ಹೊರಹೊಮ್ಮುತ್ತಿದ್ದುವು.

ಅನಂತರದಲ್ಲಿ ಶೂರ್ಪಣಖೆಯು ರಾವಣನಿಗೆ ರಾಮನ ರೂಪ-ಲಕ್ಷಣಗಳನ್ನೂ ಮತ್ತು ಅವನ ಅತುಲಪರಾಕ್ರಮವನ್ನೂ ಹೇಳಿ, ಅವನಿಂದಲೇ ಹದಿನಾಲ್ಕು ಸಾವಿರ ರಾಕ್ಷಸರು ಮೃತರಾದ ವೃತ್ತಾಂತವನ್ನೂ ಅರುಹಿದಳು.

ವಿಧಿಪರವಶನಾಗಿದ್ದ ರಾವಣನು ತಾನು ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಿದವನಾಗಿ, ತಂಗಿಯಾದ ಶೂರ್ಪಣಖಿಯನ್ನು ಸಾಂತ್ವವಚನಗಳಿಂದ ಸಂತೈಸಿ, ರಾಜ್ಯನಿರ್ವಹಣೆಯ ಕಾರ್ಯವನ್ನು ತಾತ್ಕಾಲಿಕವಾಗಿ ತನ್ನ ಮಂತ್ರಿಗಳಿಗೆ ವಹಿಸಿಕೊಟ್ಟು ಆಕಾಶಮಾರ್ಗದಲ್ಲಿ ಹೊರಟನು. ತ್ರಿಕೂಟ ಪರ್ವತವನ್ನೂ ಮತ್ತು ಕಾಲಪರ್ವತವನ್ನೂ ದಾಟಿದ ರಾವಣೇಶ್ವರನು ಮಕರ-ತಿಮಿ-ತಿಮಿಂಗಿಲಗಳಿಗೆ ಆವಾಸಸ್ಥಾನವಾಗಿದ್ದ, ಗಂಭೀರವಾಗಿದ್ದ ಮಹೋದಧಿಯನ್ನು ಸಂದರ್ಶಿಸಿದನು. ಸಮುದ್ರವನ್ನೂ ಸಹ ಆಕಾಶ ಮಾರ್ಗದಿಂದಲೇ ದಾಟಿದವನಾಗಿ ತ್ರಿಶೂಲಪಾಣಿಯಾದ ಪರಮೇಶ್ವರನಿಗೆ ಬಹುಪ್ರಿಯವಾದ ಗೋಕರ್ಣಕ್ಷೇತ್ರವನ್ನು ಸೇರಿದನು. ಆ ಪವಿತ್ರಕ್ಷೇತ್ರದಲ್ಲಿಯೇ ರಾವಣನು ಹಿಂದೆ ತನ್ನ ಅಮಾತ್ಯನಾಗಿದ್ದ ಮಾರೀಚನನ್ನು ಸಂಧಿಸಿದನು. ರಾಮನ ಭಯದಿಂದಾಗಿ ಮಾರೀಚನು ತಾಪಸನ ವೇಷಧರಿಸಿ ತಾಪಸ ವೃತ್ತಿಯಿಂದಲೇ ಅಲ್ಲಿ ಕಾಲಕಳೆಯುತ್ತಿದ್ದನು."

೨೭೭ನೆಯ ಅಧ್ಯಾಯವು ಮುಗಿಯಿತು.

೨೭೮ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಮೃಗರೂಪಿಯಾದ ಮಾರೀಚನ ವಧೆ : ರಾವಣನಿಂದ ಸೀತೆಯ ಅಪಹರಣ

ಮಾರ್ಕಂಡೇಯರು ಮುಂದುವರಿದು ಹೇಳಿದರು :

"ಯುಧಿಷ್ಠಿರ! ರಾವಣನು ಆಕಾಶಮಾರ್ಗದಿಂದ ಸಮುದ್ರವನ್ನು ದಾಟಿ ಗೋಕರ್ಣಕ್ಷೇತ್ರಕ್ಕೆ ಆಗಮಿಸಿದುದನ್ನು ನೋಡಿ ತಾಪಸವೇಷಧಾರಿಯಾಗಿದ್ದ ಮಾರೀಚನು ಭ್ರಾಂತನಾದನು. ಆದರೂ ಸಹ ಆಗಮಿಸಿದ ರಾಜನನ್ನು ಆದರದಿಂದ ಸ್ವಾಗತಿಸಿ, ಪಾದ್ಯಾಚಮನೀಯಗಳನ್ನೂ ಕಂದ-ಮೂಲ-ಫಲಾಹಾರಗಳನ್ನೂ ಸಮರ್ಪಿಸಿ ಸತ್ಕರಿಸಿದನು. ವಾಕ್ಯಕೋವಿದನಾದ ರಾವಣನು ವಿಶ್ರಾಂತಿಯನ್ನು ಪಡೆಯುತ್ತಾ ಸುಖಾಸನದಲ್ಲಿ ಕುಳಿತಿರಲಾಗಿ, ವಾಕ್ಯವಿಶಾರದನಾದ ಮಾರೀಚನು ಅವನ ಸಮೀಪದಲ್ಲಿಯೇ ಕುಳಿತು ಮಾತನ್ನು ಬಲ್ಲ ರಾವಣನನ್ನೇ ಒಂದೆರಡು ಬಾರಿ ದಿಟ್ಟಿಸಿನೋಡುತ್ತಾ ಹೇಳಿದನು : 'ರಾವಣೇಶ್ವರ!

ಇಂದಿನ ನಿನ್ನ ಮುಖದ ಛಾಯೆಯನ್ನು ನೋಡಿದರೆ ತೇಜಃಪುಂಜಯುಕ್ತವಾಗಿರಬೇಕಾಗಿದ್ದ ಮುಖವು ಸ್ವಲ್ಪ ಕುಂದಿರುವಂತೆ ಕಾಣುತ್ತಿದೆ. ಲಂಕಾಪಟ್ಟಣದಲ್ಲಿ ಸರ್ವರೂ ಕ್ಷೇಮದಿಂದಿರುವರು ತಾನೇ? ನಿನ್ನ ಪ್ರಜೆಗಳು ಹಿಂದೆ ನಿನ್ನನ್ನು ಸೇವಿಸುತ್ತಿದ್ದಂತೆಯೇ ಇಂದೂ ಸಹ ಅಚಲವಾದ ರಾಜಭಕ್ತಿಯಿಂದ ಸೇವಿಸುತ್ತಿರುವರಲ್ಲವೇ? ಇಲ್ಲಿಗೆ ನೀನು ಆಗಮಿಸಿದ ಕಾರಣವಾದರೂ ಏನು ರಾಕ್ಷಸೇಶ್ವರ? ಯಾವ ಮಹಾಕಾರ್ಯವು ನಿನ್ನನ್ನು ಇಲ್ಲಿಗೆ ಆಗಮಿಸುವಂತೆ ಮಾಡಿತು? ನಿನ್ನ ಕಾರ್ಯವು ಎಂತಹ ದುಷ್ಕರವೇ ಆಗಿರಲಿ–ಆ ಮಹಾಕಾರ್ಯದ ಸಾಧನೆಯಾಯಿತೆಂದೇ ಭಾವಿಸಬಹುದಾಗಿದೆ. ನೀನಿಲ್ಲಿಗೆ ಆಗಮಿಸಿದ ಕಾರಣವನ್ನು ಬೇಗ ಹೇಳು, ರಾವಣ!'

ತಂಗಿಗಾದ ಅಪಮಾನವು ತನಗೇ ಆಯಿತೆಂದು ರಾವಣನು ಭಾವಿಸಿದ್ದನು. ಆದುದರಿಂದಲೇ ಅವನು ಬಹಳ ಕುಪಿತನಾಗಿಯೂ ಇದ್ದನು. ಮಾರೀಚನು ಕೇಳಿದ ಪ್ರಶ್ನೆಗೆ ರಾವಣನು ಉತ್ತರಿಸುತ್ತಾ ರಾಮ-ಲಕ್ಷ್ಮಣರು ಶೂರ್ಪಣಖೆಯ ಮುಖವನ್ನು ವಿಕಾರಗೊಳಿಸಿರುವುದನ್ನೂ ಮತ್ತು ಅದಕ್ಕೆ ಪ್ರತಿಯಾಗಿ ತಾನು ಮಾಡಲಿಚ್ಛಿಸಿರುವ ಕಾರ್ಯದ ಯೋಜನೆಯನ್ನೂ ಮಾರೀಚನ ಮುಂದೆ ಸಂಗ್ರಹಿಸಿ ಹೇಳಿದನು.

ರಾವಣನು ಹೇಳಿದ ದುಷ್ಟಯೋಜನೆಯನ್ನು ಕೇಳಿದ ಮಾರೀಚನು ಅವನನ್ನು ಕುರಿತು ಹೇಳಿದನು :

"ರಾಮನನ್ನು ಮಾತ್ರ ಕೆಣಕಲು ಹೋಗಬೇಡ, ರಾವಣೇಶ್ವರ! ಅವನ ಪರಾಕ್ರಮವೆಷ್ಟೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಮಹಾತ್ಮನಾದ ಆ ರಾಮನ ಬಾಣಗಳ ವೇಗವನ್ನು ಸಹಿಸಿಕೊಳ್ಳುವ ಸಾಮರ್ಥ್ಯವು ಯಾರಿಗೆ ತಾನೇ ಇರುವುದು? ನಾನಿಂದು ತಾಪಸವೇಷಧಾರಿಯಾಗಿ ತಾಪಸವೃತ್ತಿಯಲ್ಲಿಯೇ ಕಾಲಕಳೆಯುತ್ತಿರುವುದಕ್ಕೆ ಆ ಮಹಾಪ್ರಭುವೇ ಮುಖ್ಯ ಕಾರಣನು. ರಾವಣ! ರಾಮನೊಡನೆ ಸೆಣೆಸಹೋಗುವುದು ಸರ್ವವಿನಾಶದ ಮಾರ್ಗವನ್ನು ಹುಡುಕಿಕೊಂಡು ಹೋದಂತೆಯೇ ಸರಿ. ಯಾವ ದುರಾತ್ಮನು ನಿನಗೆ ಸರ್ವವಿನಾಶಕರವಾದ ಈ ಸಲಹೆಯನ್ನು ಕೊಟ್ಟನು? ಖಂಡಿತವಾಗಿಯೂ ನೀನು ರಾಮನನ್ನು ಕೆಣಕಲು ಹೋಗಬೇಡ."

ವಿಧಿಪ್ರೇರಣೆಯಿಂದಲೇ ಆಗಮಿಸಿರುವ ರಾವಣನಿಗೆ ಮಾರೀಚನ ಹಿತ ವಾಕ್ಯಗಳು ಪಥ್ಯವಾಗುವುವೇ? ಅವನ ಹಿತೋಕ್ತಿಗಳನ್ನು ಕೇಳುತ್ತಲೇ ರಾವಣನ ಕೋಪವು ಇಮ್ಮಡಿಯಾಯಿತು. ಮಾರೀಚನನ್ನು ಕಟುವಾಗಿ ನಿಂದಿಸುತ್ತಾ ಹೇಳಿದನು : "ಮಾರೀಚ! ನನ್ನ ಮಾತಿನಂತೆ ನೀನು ನಡೆಯಲೊಪ್ಪದಿದ್ದರೆ ನನ್ನ ಕೈಯಿಂದಲೇ ನಿನ್ನ ಮರಣವು ಸನ್ನಿಹಿತವಾದೀತು!"

ಮಾರೀಚನು ತನ್ನೊಳಗೆ ತಾನೇ ಕ್ಷಣಕಾಲ ಯೋಚಿಸಿದನು : "ಮರಣ ಕಾಲವಂತೂ ಸನ್ನಿಹಿತವಾಗಿರುವುದು ನಿಶ್ಚಯ. ಯಾರ ಕೈಯಿಂದ ಈ ದೇಹ ವನ್ನು ತೊರೆಯಬೇಕೆಂಬ ನಿರ್ಧಾರವೊಂದನ್ನು ಮಾತ್ರವೇ ನಾನು ಮಾಡ ಬೇಕಾಗಿದೆ. ನಾನೀಗ ಈ ರಾವಣನ ಮಾತನ್ನು ಕೇಳದಿದ್ದರೆ ಇವನೇ ನನ್ನನ್ನು ಕೊಂದುಹಾಕುವನು. ಇವನ ಮಾತನ್ನು ಕೇಳಿದರೆ ನಾನು ರಾಮನ ಕೈಯಿಂದ ಹತನಾಗುವೆನು. ಈ ಸಮಯದಲ್ಲಿ ನಾನು ಇವನು ಹೇಳಿದಂತೆಯೇ ಮಾಡುವುದು ಸೂಕ್ತವೆನಿಸುತ್ತದೆ. ರಾಜಾಜ್ಞೆಯನ್ನೂ ನಿರ್ವಹಿಸಿದಂತಾಗು ವುದು. 'ವಿಶಿಷ್ಟಾನ್ಮರಣಂ ವರಮ್' ಮಹಾತ್ಮರ ಕೈಯಿಂದ ಮರಣ ಹೊಂದುವುದೂ ಶ್ರೇಷ್ಠವೇ ಸರಿ." ಹೀಗೆ ಯೋಚಿಸಿದವನಾಗಿ ರಾವಣನನ್ನು ಕುರಿತು ಹೇಳಿದನು : "ರಾವಣೇಶ್ವರ! ನಾನು ನನ್ನ ಕೈಯಲ್ಲಾದ ಸಹಾಯವನ್ನು ಖಂಡಿತವಾಗಿಯೂ ಮಾಡುವೆನು."

ಮಾರೀಚನ ಮಾತನ್ನು ಕೇಳಿ ಸಂತುಷ್ಟನಾದ ರಾವಣನು ಹೇಳಿದನು : "ಮಾರೀಚ! ನೀನು ರತ್ನಮಯವಾದ ಶೃಂಗವುಳ್ಳ ಜಿಂಕೆಯಾಗು. ಆ ಮಾಯಾಮೃಗದ ಶರೀರದ ಕೂದಲುಗಳೂ ಸಹ ರತ್ನಮಯವಾಗಿರಲಿ. (ರತ್ನದಂತೆ ಥಳ-ಥಳಿಸಲಿ.) ಇಂತಹ ನಯನಮನೋಹರವಾದ ಹೇಮ ಮೃಗದ ರೂಪವನ್ನು ಧರಿಸಿ ಆಶ್ರಮದಲ್ಲಿರುವ ಸೀತೆಯ ಮುಂದೆ ನೀನು ನಲಿದಾಡಬೇಕು. ನಿನ್ನನ್ನು ನೋಡಿದೊಡನೆಯೇ ಸೀತೆಯು ವ್ಯಾಮೋಹಿತ ಳಾಗಿ ನಿನ್ನನ್ನು ಹಿಡಿದುತರುವಂತೆ ರಾಮನಿಗೆ ಹೇಳುವಳು. ಸೀತೆಯನ್ನು ತೃಪ್ತಿಗೊಳಿಸಲು ರಾಮನು ನಿನ್ನನ್ನನುಸರಿಸಿ ಆಶ್ರಮವನ್ನು ಬಿಟ್ಟುಹೋದ ನಂತರ ಸೀತೆಯು ನನ್ನ ವಶಳಾಗುವಳು. ಅವಳನ್ನು ಸೆಳೆದುಕೊಂಡು ನಾನು ಲಂಕೆಗೆ ಹೊರಟುಹೋಗುವೆನು. ಸೀತಾವಿಯೋಗದುಃಖದಿಂದ ದುರ್ಬುದ್ಧಿ

ಯಾದ ರಾಮನು ವಿನಾಶಹೊಂದುವನು. ಈ ನನ್ನ ಯೋಜನೆಯಿಂದಾಗಿ ನಾನು ರಾಮನನ್ನು ಎದುರಿಸುವ ಸಂಭವವೇ ಇರುವುದಿಲ್ಲ. ಅವನೊಡನೆ ಸೆಣೆಸುವ ಅವಶ್ಯಕತೆಯೂ ಇರುವುದಿಲ್ಲ. ಮಾರೀಚ! ಈ ನನ್ನ ಯೋಜನೆಗೆ ನೀನು ನೆರವು ನೀಡಬೇಕಾಗಿದೆ."

ರಾವಣನು ಮಾರೀಚನಿಗೆ ಹೀಗೆಂದು ಹೇಳಲಾಗಿ ಬಹುದುಃಖಿತನಾದ ಮಾರೀಚನು ಅನ್ಯಥಾ ವಿಧಿಯಿಲ್ಲದೇ ಅವನ ಮಾತಿಗೊಪ್ಪಿಕೊಂಡು, ಅವಸಾನಾನಂತರದಲ್ಲಾಗಬೇಕಾದ ಉದಕಕ್ರಿಯೆಗಳನ್ನು ಮೊದಲೇ ಮುಗಿಸಿ ಕೊಂಡವನಾಗಿ, ರಾವಣನನ್ನನುಸರಿಸಿ ರಾಮನ ಆಶ್ರಮದ ಕಡೆಗೆ ಹೊರ ಟನು. ಬಹಳ ಸುಲಭವಾಗಿ ಕಾರ್ಯಗಳನ್ನು ಮಾಡಿ ಮುಗಿಸುವ ಶ್ರೀರಾಮನ ಆಶ್ರಮವು ಸಮೀಪಿಸುತ್ತಲೇ ಮಾರೀಚನು ಹೇಮಮೃಗವಾಗಿಯೂ, ರಾವಣನು ಕಮಂಡಲು-ತ್ರಿದಂಡಗಳನ್ನು ಧರಿಸಿದ ಮತ್ತು ಮುಂಡಿತನಾದ ಸಂನ್ಯಾಸಿಯಾಗಿಯೂ ಪರಿವರ್ತನೆಯನ್ನು ಹೊಂದಿದರು.

ರತ್ನಮಯವಾದ ಜಿಂಕೆಯು ಆಶ್ರಮದ ಮುಂದೆ ನಲಿದಾಡತೊಡಗಿತು. ವಿಧಿಯ ಪ್ರೇರಣೆಯೋ ಎಂಬಂತೆ–ಆ ರತ್ನಮಯಹರಿಣವನ್ನು ನೋಡಿ ಸೀತೆಯು ಮೋಹಿತಳಾಗಿ ಅದನ್ನು ಹಿಡಿದು ತರಲು ರಾಮನನ್ನು ಕಳುಹಿಸಿ ಕೊಟ್ಟಳು. ರಾಮನೂ ಸಹ ಸೀತೆಗೆ ಪ್ರಿಯವನ್ನುಂಟುಮಾಡುವ ಏಕೈಕೋ ದ್ದೇಶದಿಂದ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು, ಸೀತೆಯ ರಕ್ಷಣಾಭಾರ ವನ್ನು ಲಕ್ಷ್ಮಣನಿಗೆ ವಹಿಸಿಕೊಟ್ಟು, ಜಿಂಕೆಯನ್ನು ಅನುಸರಿಸಿ ಹೊರಟನು.

ರುದ್ರದೇವನು ಹಿಂದೆ ಮೃಗಶಿರೋನಕ್ಷತ್ರದೇವತೆಯನ್ನು ಬೆನ್ನಟ್ಟಿ ಹೋದಂತೆ–ಶ್ರೀರಾಮನು ಧನುಷ್ಪಾಣಿಯಾಗಿ ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಡು ಕತ್ತಿ-ಗುರಾಣಿಗಳನ್ನು ಹಿಡಿದು ಹೇಮಮೃಗವನ್ನನುಸರಿಸಿ ಹೊರಟನು. ಆ ಮೃಗವು ಒಮ್ಮೆ ರಾಮನ ಹತ್ತಿರದಲ್ಲಿಯೇ ಕಾಣಿಸಿ ಕೊಳ್ಳುತ್ತಾ, ಮತ್ತೊಮ್ಮೆ ಬಹುದೂರದಲ್ಲಿರುವಂತೆ ಕಾಣಿಸಿಕೊಳ್ಳುತ್ತಾ ರಾಮನನ್ನು ಬಹಳ ದೂರದವರೆಗೂ ಸೆಳೆದುಕೊಂಡು ಹೋಯಿತು. (ಯದ್ಯಪಿ ರಾಮನು ಧನುಷ್ಪಾಣಿಯಾಗಿ ಹೊರಟಿದ್ದರೂ ಸಹ ಹೇಮ ಮಯವಾದ ಜಿಂಕೆಯನ್ನು ಸೀತೆಯ ವಿನೋದಕ್ಕಾಗಿ ಪ್ರಾಣಸಹಿತವಾಗಿಯೇ

ತಂದುಕೊಡಬೇಕೆಂಬುದು ಅವನ ಆಶಯವಾಗಿತ್ತು. ಸೀತೆಯೂ ಅದನ್ನೇ ಅಪೇಕ್ಷಿಸಿದ್ದಳು. ಮಾಯಾಮೃಗವು ಹತ್ತಿರದಲ್ಲಿ ಕಾಣಿಸಿಕೊಂಡೊಡನೆಯೇ ರಾಮನದನ್ನು ಹಿಡಿದುಕೊಳ್ಳಲು ಹೋಗುತ್ತಿದ್ದನು. ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಆ ಮಾಯಾಮೃಗವು ಬಹುದೂರದಲ್ಲಿರುವಂತೆ ರಾಮನಿಗೆ ಗೋಚರಿಸುತ್ತಿದ್ದಿತು.) ಅದರ ವಿಚಿತ್ರವರ್ತನೆಯನ್ನು ನಾಲ್ಕಾರುಬಾರಿ ಕಂಡ ರಾಮನು ಜಿಂಕೆಯು ನಿಜವಾದ ಜಿಂಕೆಯಲ್ಲವೆಂದೂ, ಯಾವನೋ ರಾಕ್ಷಸನು ಆ ಮಾಯಾಮೃಗದ ವೇಷತಾಳಿ ಬಂದಿರುವನೆಂದೂ ನಿರ್ಧರಿಸಿದವನಾಗಿ, ಅಮೋಘವಾದ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿಗೇರಿಸಿ ಸೆಳೆದು ಜಿಂಕೆಗೆ ಗುರಿಯಿಟ್ಟು ಪ್ರಹರಿಸಿದನು. ರಾಮನ ತೀಕ್ಷ್ಣವಾದ ಬಾಣವು ತಗಲುತ್ತಲೇ ಜಿಂಕೆಯ ರೂಪದಲ್ಲಿದ್ದ ಮಾರೀಚನು ತನ್ನ ನಿಜರೂಪವನ್ನು ತಾಳಿದವನಾಗಿ ರಾಮನ ಕಂಠದ ಶಬ್ದವನ್ನೇ ಅನುಕರಿಸುತ್ತಾ 'ಹಾ ಸೀತೇ! ಹಾ ಲಕ್ಷ್ಮಣ!'–ಎಂದರಚುತ್ತಾ ಪ್ರಾಣತೊರೆದನು.

'ಹಾ ಸೀತೇ' 'ಹಾ ಲಕ್ಷ್ಮಣ'–ಎಂಬ ದಾರುಣವಾದ ಶಬ್ದವನ್ನು ಕೇಳುತ್ತಲೇ ಸೀತೆಯು ಭಯಭೀತಳಾಗಿ ಶಬ್ದವು ಬಂದ ದಿಕ್ಕನ್ನು ಅನುಸರಿಸಿ ಓಡಿಹೋಗಲು ಅನುವಾದಳು. ಅದನ್ನು ಕಂಡು ಲಕ್ಷ್ಮಣನು ಸೀತಾದೇವಿಯನ್ನು ಕುರಿತು ಹೇಳಿದನು :

**ಅಲಂ ತೇ ಶಙ್ಕಯಾ ಭೀರು ಕೋ ರಾಮಂ ಪ್ರಹರಿಷ್ಯತಿ ।**
**ಮುಹೂರ್ತಾದ್ದ್ರಕ್ಷ್ಯಸೇ ರಾಮಂ ಭರ್ತಾರಂ ತ್ವಂ ಶುಚಿಸ್ಮಿತೇ ॥**

"ನಿನ್ನ ಶಂಕೆಯನ್ನು ದೂರಮಾಡು, ದೇವಿ! ರಾಮನನ್ನು ಪ್ರಹರಿಸುವ ಸಾಮರ್ಥ್ಯವು ಯಾರಿಗೆ ತಾನೇ ಇರುವುದು? ಶುಚಿಸ್ಮಿತೇ! ಮುಹೂರ್ತಮಾತ್ರದಲ್ಲಿ ನೀನು ನಿನ್ನ ಪತಿಯಾದ ಶ್ರೀರಾಮನನ್ನು ಸಂದರ್ಶಿಸಲಿರುವೆ."

ಲಕ್ಷ್ಮಣನ ಮಾತುಗಳಿಂದ ಸೀತೆಗೆ ಸಮಾಧಾನವಾಗುವುದಕ್ಕೆ ಬದಲಾಗಿ ಅವನ ಮೇಲೆಯೇ ಶಂಕೆಯುಂಟಾಯಿತು. 'ಹಾ ಲಕ್ಷ್ಮಣ! ಹಾ ಸೀತೆ' ಎಂಬ ರಾಮನ ನುಡಿಯು ಬಹುಸ್ಪಷ್ಟವಾಗಿ ಕೇಳಿದರೂ ಸಹ ಲಕ್ಷ್ಮಣನು ಅಲಕ್ಷ್ಯದಿಂದಿರುವುದನ್ನು ನೋಡಿ ಸೀತೆಗೆ ಸಂಶಯವುಂಟಾದುದು ಸ್ತ್ರೀಯರ ಸ್ವಭಾವಕ್ಕೆ ಅನುಗುಣವಾಗಿಯೇ ಇರುವುದು. (ಸಮಯಗಳಲ್ಲಿ

ಅವರಿಗೆ ಸ್ಥೈರಣೆಯಿರದು. ಕೋಪ-ತಾಪ-ದುಃಖ-ಸಂತೋಷಗಳು ಬಹಳ ಬೇಗ ಬಂದುಬಿಡುತ್ತವೆ. ಆದರಿಂದ ಮುಂದಾಗುವ ದುಷ್ಪರಿಣಾಮವನ್ನೂ ಅವರು ಯೋಚಿಸರು.)

ಅಂತೆಯೇ ನಿಷ್ಕಳಂಕವಾದ ಚಾರಿತ್ರ್ಯವನ್ನು ಹೊಂದಿದ್ದ ಸೀತಾ ದೇವಿಯೂ ಸಹ ಲಕ್ಷ್ಮಣನ ವಿಷಯದಲ್ಲಿ ಶಂಕಿಸಿದವಳಾಗಿ ಗಟ್ಟಿಯಾಗಿ ಅಳುತ್ತಾ ಅವನನ್ನು ಕುರಿತು ಕರ್ಣಕಠೋರವಾದ ಈ ಮಾತುಗಳನ್ನಾಡಿದಳು :

**ನೈಷ ಕಾಮೋ ಭವೇನ್ಮೂಢ ಯಂ ತ್ವಂ ಪ್ರಾರ್ಥಯಸೇ ಹೃದಾ ।**
**ಅಪ್ಯಹಂ ಶಸ್ತ್ರಮಾದಾಯ ಹನ್ಯಾಮಾತ್ಮಾನಮಾತ್ಮನಾ ॥೨೭॥**

**ಪತೇಯಂ ಗಿರಿಶೃಙ್ಗಾದ್ವಾ ವಿಶೇಯಂ ವಾ ಹುತಾಶನಮ್ ।**
**ರಾಮಂ ಭರ್ತಾರಮುತ್ಸೃಜ್ಯ ನ ತ್ವಹಂ ತ್ವಾಂ ಕಥಂಚನ ।**
**ನಿಹೀನಮುಪತಿಷ್ಠೇಯಂ ಶಾರ್ದೂಲೀ ಕ್ರೋಷ್ಟುಕಂ ಯಥಾ ॥೨೮॥**

"ಮೂಢ! ನಿನ್ನ ಹೃದಯದ ಇಂಗಿತವೇನೆಂಬುದನ್ನು ಈ ನಿನ್ನ ಮಾತುಗಳಿಂದಲೂ, ಚರ್ಯೆಯಿಂದಲೂ ತಿಳಿದುಕೊಂಡೆನು. ಆದರೆ ನಿನ್ನ ಮನಸ್ಸಿನ ದುರಾಸೆಯು ಮಾತ್ರ ಎಂದೆಂದಿಗೂ ಪೂರ್ಣವಾಗುವುದಿಲ್ಲ. ನಾನೀಗಲೇ ನಿನ್ನ ಸಮಕ್ಷದಲ್ಲಿಯೇ ಕತ್ತಿಯನ್ನು ತೆಗೆದುಕೊಂಡು ಆತ್ಮಹತ್ಯೆ ಮಾಡಿಕೊಂಡುಬಿಟ್ಟೇನು! ಪರ್ವತದ ಮೇಲಕ್ಕೆ ಹತ್ತಿ ಕೆಳಕ್ಕಾದರೂ ಬಿದ್ದು ಬಿಟ್ಟೇನು! ಅಗ್ನಿಯ ಕುಂಡವೊಂದನ್ನು ನಿರ್ಮಿಸಿ ಅದರೊಳಗಾದರೂ ಧುಮುಕುವೆನು. ಆದರೆ ಲೋಕಾಭಿರಾಮನಾದ, ನನ್ನ ಪತಿಯಾದ ಶ್ರೀರಾಮ ನನ್ನು ಬಿಟ್ಟು ನಿನ್ನನ್ನು ಮಾತ್ರ ನಾನು ಕಣ್ಣೆತ್ತಿಯೂ ನೋಡುವುದಿಲ್ಲ. ಹೆಣ್ಣು ಹುಲಿಯೊಂದು ನರಿಯೊಡನೆ ಅಥವಾ ನರಿಯ ರಕ್ಷಣೆಯಲ್ಲಿ ಇರುವುದು ಹೇಗೆ ಅಸಂಭವವೋ–ಹಾಗೆ ಹೀನನಾದ ನಿನ್ನ ರಕ್ಷಣೆಯಲ್ಲಾಗಲೀ, ನಿನ್ನೊಡ ನಾಗಲೀ ನಾನು ಕ್ಷಣಮಾತ್ರವೂ ಇರತಕ್ಕವಳಲ್ಲ."

ಎಂತಹವನಿಗೂ ಸಹ್ಯವಾಗದ ಮಾತಿದು. ಲಕ್ಷ್ಮಣನಿಗಂತೂ ಕಠೋರ ವಾದ ಆ ಮಾತುಗಳನ್ನು ಕೇಳಿ ಅಲ್ಲಿ ಕ್ಷಣಕಾಲವಾದರೂ ನಿಲ್ಲಲು ಸಾಧ್ಯವಾಗ ಲಿಲ್ಲ. ಆ ಮಾತುಗಳನ್ನು ಕೇಳುತ್ತಿದ್ದಂತೆಯೇ 'ರಾಮ ರಾಮ' ಎನ್ನುತ್ತಾ

ತನ್ನ ಕಿವಿಗಳೆರಡನ್ನೂ ಭದ್ರವಾಗಿ ಮುಚ್ಚಿಕೊಂಡನು. ಭ್ರಾತೃವತ್ಸಲನಾದ ಲಕ್ಷ್ಮಣನು ಸೀತೆಯಿದ್ದೆಡೆಯಲ್ಲಿ ಕ್ಷಣವಾದರೂ ನಿಲ್ಲದೇ ರಾಮನು ಜಿಂಕೆ ಯನ್ನನುಸರಿಸಿ ಹೊರಟ ಮಾರ್ಗವನ್ನೇ ಅನುಸರಿಸಿ ಹೊರಟುಹೋದನು. ಹೋಗುವ ಮೊದಲಾಗಲೀ, ಹೋಗುತ್ತಿದ್ದಾಗಲಾಗಲೀ–ಬಿಂಬೋಷ್ಠಿಯಾದ ಸೀತಾದೇವಿಯನ್ನು ಕಡೆಗಣ್ಣಿನಿಂದಲೂ ಲಕ್ಷ್ಮಣನು ನೋಡಲಿಲ್ಲ.

ರಾವಣನು ಮಾಡಿದ ಮೊದಲನೆಯ ಯೋಜನೆಯು ಕೈಗೂಡಿತು. ಎರಡನೆಯ ಯೋಜನೆಗೆ ಅನುಸಾರವಾಗಿ ರಾಕ್ಷಸೇಶ್ವರನು ಬೂದಿಮುಚ್ಚಿದ ಕೆಂಡದಂತೆ ವೇಷಾಂತರವನ್ನು ಧರಿಸಿ ಆಶ್ರಮದ ಒಳಕ್ಕೆ ಆಗಮಿಸಿದನು. ಯತಿವೇಷವನ್ನು ಧರಿಸಿದ್ದ ಅವನಿಗೆ ಸೀತೆಯ ಹರಣಮಾಡುವುದೇ ಮುಖ್ಯೋದ್ದೇಶವಾಗಿದ್ದಿತು. ಧರ್ಮಜ್ಞನಾದ ಜನಕರಾಜನ ಮಗಳಾದ ಸೀತಾ ದೇವಿಯು ಆಶ್ರಮಕ್ಕಾಗಮಿಸಿದ ಯತಿಯನ್ನು ಸ್ವಾಗತಿಸಿ, ಅರ್ಘ್ಯ-ಪಾದ್ಯಾದಿ ಗಳನ್ನು ಕೊಟ್ಟು ಕುಳಿತುಕೊಳ್ಳಲು ಆಸನವನ್ನಿತ್ತು, ತಿನ್ನಲು ಕಂದ-ಮೂಲ-ಫಲಗಳನ್ನು ಅರ್ಪಿಸಿ ಸತ್ಕರಿಸಲು ಉಪಕ್ರಮಿಸಿದಳು. ಆದರೆ ರಾವಣನಿಗೆ ಆ ವಿಧವಾದ ಉಪಚಾರಗಳೊಂದೂ ಬೇಕಾಗಿರಲಿಲ್ಲ. ಸಾಧ್ಯವಾದಷ್ಟು ಬೇಗ ಸೀತೆಯನ್ನು ಸೆಳೆದೊಯ್ಯುವುದೇ ಅವನ ಇಚ್ಛೆಯಾಗಿತ್ತು. ಅಂತೆಯೇ ಸೀತೆಯು ಹಿಡಿದಿದ್ದ ಅರ್ಘ್ಯ-ಪಾದ್ಯಾದಿಗಳನ್ನು ನಿರ್ಲಕ್ಷಿಸಿ, ತನ್ನ ನಿಜರೂಪವನ್ನು ತಾಳಿ ಸೀತೆಯನ್ನು ಸಂತೈಸುತ್ತಾ ಹೀಗೆಂದು ಹೇಳಿದನು :

"ಸೀತೆ! ನಾನು ರಾಕ್ಷಸೇಶ್ವರನು. ನನ್ನನ್ನು ರಾವಣನೆಂದು ಕರೆಯುವರು. ನಾನಾಳುತ್ತಿರುವ ರಾಜ್ಯದ ಹೆಸರು ಲಂಕಾರಾಜ್ಯ. ಆ ರಾಜ್ಯಕ್ಕೆ ರಾಜ ಧಾನಿಯಾದ ಬಹುರಮ್ಯವಾದ ಲಂಕಾಪುರಿಯಲ್ಲಿ ನಾನು ವಾಸವಾಗಿದ್ದೇನೆ. ನನ್ನ ಲಂಕಾರಾಜ್ಯವು ಮಹೋದಧಿಯ ಆಚೆಯ ದಡದಲ್ಲಿದೆ. ನನ್ನೊಡನೆ ನೀನಲ್ಲಿಗೆ ಬಂದು ಅಲ್ಲಿರುವ ನಾರಿಯರಿಗೆಲ್ಲಾ ರತ್ನಪ್ರಾಯಳಾಗಿ ವಿರಾಜಿಸು. ತಾಪಸವೃತ್ತಿಯಿಂದ ಜೀವಿಸುತ್ತಿರುವ ರಾಮನನ್ನು ಪರಿತ್ಯಜಿಸಿ ನನ್ನ ಭಾರ್ಯೆ ಯಾಗು."

ಯುಧಿಷ್ಠಿರ! ಇವೇ ಮುಂತಾದ ಮನವೊಲಿಸುವ ಮಾತುಗಳನ್ನು ರಾವಣನಾಡಿದನು. ಸಾಧ್ವಿಯಾದ ಸೀತಾದೇವಿಗೆ ಆ ಮಾತುಗಳನ್ನು ಕೇಳಲು

ಕೂಡ ಸಾಧ್ಯವಾಗಲಿಲ್ಲ. ತನ್ನೆರಡು ಕೈಗಳಿಂದಲೂ ಕಿವಿಗಳನ್ನು ಮುಚ್ಚಿಕೊಂಡು ಗಟ್ಟಿಯಾಗಿ ಹೇಳಿದಳು :

**ಪ್ರಪತೇದ್ದ್ಯೌಃ ಸನಕ್ಷತ್ರಾ ಪೃಥಿವೀ ಶಕಲೀಭವೇತ್ ।**
**ಶೈತ್ಯಮಗ್ನಿರಿಯಾನ್ನಾಹಂ ತ್ಯಜೇಯಂ ರಘುನನ್ದನಮ್ ॥೩೮॥**

“ನಕ್ಷತ್ರಮಂಡಲಯುಕ್ತವಾದ ಆಕಾಶವಾದರೂ ಕಳಚಿ ಕೆಳಗೆ ಬೀಳಬಹುದು ; ಈ ಭೂಮಿಯೇ ನುಚ್ಚುನೂರಾಗಿಬಿಡಬಹುದು ; ಅಗ್ನಿಯು ಶೀತಲಸ್ವಭಾವವನ್ನಾದರೂ ತಾಳಬಹುದು–ಆದರೆ ನಾನು ಮಾತ್ರ ರಘುನಂದನನನ್ನು ಖಂಡಿತವಾಗಿಯೂ ತ್ಯಜಿಸಲಾರೆನು.

**ಕಥಂ ಹಿ ಭಿನ್ನಕರಟಂ ಪದ್ಮಿನಂ ವನಗೋಚರಮ್ ।**
**ಉಪಸ್ಥಾಯ ಮಹಾನಾಗಂ ಕರೇಣುಃ ಸೂಕರಂ ಸ್ಪೃಶೇತ್ ॥೩೯॥**

ಮದೋದಕವನ್ನು ಸುರಿಸುತ್ತಿರುವ, ಪದ್ಮಮಾಲಾವಿಭೂಷಿತವಾದ ಅರಣ್ಯದ ಸಲಗದೊಡನೆ ಸ್ವೇಚ್ಛೆಯಿಂದ ವಿಹರಿಸುವ ಹೆಣ್ಣಾನೆಯು ಹಂದಿಯನ್ನು ಮುಟ್ಟುತ್ತದೆಯೇ?

**ಕಥಂ ಹಿ ಪೀತ್ವಾ ಮಾಧ್ವೀಕಂ ಪೀತ್ವಾ ಚ ಮಧುಮಾಧವೀಮ್ ।**
**ಲೋಭಂ ಸೌವೀರಕೇ ಕುರ್ಯಾನ್ನಾರೀ ಕಾಚಿದಿತಿ ಸ್ಮರೇತ್ ॥೪೦॥**

ದ್ರಾಕ್ಷಾರಸವನ್ನೋ, ಜೇನುತುಪ್ಪದಿಂದಲೋ, ಹೂವಿನಿಂದಲೋ, ತಯಾರಿಸಿದ ಸುಗಂಧಯುಕ್ತವಾದ ಮಧುರಸವನ್ನೋ ಕುಡಿದು ಸ್ತ್ರೀಯೊಬ್ಬಳು ಈಚಲಮರದಿಂದ ತಯಾರಿಸಿದ ಮದ್ಯವನ್ನು ಕುಡಿಯಲು ಆಶಿಸುವಳೇ? ಅಥವಾ ಅದನ್ನು ಸ್ಮರಿಸುವಳೇ?” ಹೀಗೆಂದು ಹೇಳುತ್ತಾ ಸೀತಾದೇವಿಯು ಆಶ್ರಮದೊಳಗೆ ಪ್ರವೇಶಿಸಿದಳು. ಕೋಪಾವಿಷ್ಟಳಾಗಿದ್ದ ಅವಳ ಮುಖವು ಕೆಂಪಾಗಿದ್ದಿತು. ತುಟಿಗಳು ಅದುರುತ್ತಿದ್ದುವು. ಮುಂದೇನು ಮಾಡಬೇಕೆಂದು ತೋರದೇ ಸೀತಾದೇವಿಯು ತನ್ನೆರಡು ಕೈಗಳನ್ನೂ ಗಟ್ಟಿಯಾಗಿ ಕೊಡವುತ್ತಿದ್ದಳು. ರಾವಣನೂ ಸಹ ಅವಳ ಹಿಂದೆಯೇ ಹೊರಟು ಮರುಕ್ಷಣದಲ್ಲಿಯೇ ಅವಳ ಮುಂದೆ ನಿಂತು ಅವಳನ್ನು ತಡೆದನು. ತನ್ನ ಭಯಂಕರ ರೂಪವನ್ನು ತಾಳಿ ಗಟ್ಟಿಯಾಗಿ ಗರ್ಜಿಸಿದನು. ಅದರಿಂದಾಗಿ ಕೋಮಲಾಂಗಿಯಾದ ಸೀತಾದೇವಿಯು ಮೂರ್ಛೆಹೋದಳು. ಮೂರ್ಛಿತಳಾಗಿ ಬಿದ್ದಿದ್ದ

ಸೀತಾದೇವಿಯ ಕೇಶರಾಶಿಯನ್ನೇ ಹಿಡಿದುಕೊಂಡು ರಾವಣನು ಅಂತರಿಕ್ಷ ಮಾರ್ಗದಲ್ಲಿ ಪ್ರಯಾಣಹೊರಟನು. ಅಂತರಿಕ್ಷದಲ್ಲಿ ಪ್ರಯಾಣಮಾಡುತ್ತಿದ್ದಾಗ ಪುನಃ ಪ್ರಜ್ಞೆಯನ್ನು ಪಡೆದ ಸೀತಾದೇವಿಯು 'ರಾಮ! ರಕ್ಷಿಸು'– ಎಂದು ದೈನ್ಯದಿಂದ ಚೀರುತ್ತಾ ರೋದನಮಾಡುತ್ತಿದ್ದುದನ್ನು ಪರ್ವತದ ಶಿಖರವೊಂದರಲ್ಲಿ ಕುಳಿತಿದ್ದ ಬೃಹದಾಕಾರದ ಜಟಾಯುವೆಂಬ ಗೃಧ್ರಪಕ್ಷಿಯು ನೋಡಿತು.

೨೭೮ನೆಯ ಅಧ್ಯಾಯವು ಮುಗಿಯಿತು.

೨೭೯ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾವಣನು ಜಟಾಯುವಿನ ವಧೆಮಾಡಿದುದು : ಶ್ರೀರಾಮನು ಜಟಾಯುವಿಗೆ ಅಂತ್ಯಸಂಸ್ಕಾರವನ್ನು ಮಾಡಿದುದು : ಕಬಂಧವಧೆ : ಅನಂತರದಲ್ಲಿ ದಿವ್ಯಸ್ವರೂಪವನ್ನು ತಾಳಿದ ಕಬಂಧನೊಡನೆ ರಾಮನ ಸಂಭಾಷಣೆ

ಯುಧಿಷ್ಠಿರ! ಗೃಧ್ರರಾಜನಾದ ಜಟಾಯುವು ರಾಮನ ತಂದೆಯಾದ ದಶರಥನಿಗೆ ಆಪ್ತಮಿತ್ರನು. ಜಟಾಯುವಿನ ತಂದೆಯು ವಿಖ್ಯಾತನಾದ ಸೂರ್ಯನ ಸಾರಥಿಯಾದ ಅರುಣದೇವ. ಅವನ ಸಹೋದರ ಸಂಪಾತಿ. ತನ್ನ ಮಿತ್ರನಾದ ದಶರಥನ ಸೊಸೆಯಾದ ಸೀತಾದೇವಿಯನ್ನು ದುಷ್ಟನಾದ ರಾವಣನು ಅಪಹರಿಸಿಕೊಂಡು ಹೋಗುತ್ತಿರುವುದನ್ನು ನೋಡಿ ಜಟಾಯುವು ಬಹಳ ಕುಪಿತನಾದನು. ಒಡನೆಯೇ ಮೇಲಕ್ಕೆ ಹಾರಿ ರಾವಣನಿಗೆ ಅಡ್ಡಲಾಗಿ ನಿಂತು ಹೀಗೆಂದು ಹೇಳಿದನು :

"ರಾವಣೇಶ್ವರ! ಮೈಥಿಲಿಯನ್ನು ಬಿಟ್ಟುಬಿಡು. ನಾನಿನ್ನೂ ಬದುಕಿರುವಾಗ ನೀನಿವಳನ್ನು ಹೇಗೆ ತಾನೇ ಅಪಹರಿಸಿಕೊಂಡು ಹೋಗುವೆ? ನೀನೇನಾದರೂ ನನ್ನ ಸೊಸೆಯನ್ನು ವಿಮೋಚಿಸದಿದ್ದರೆ ನಿನ್ನನ್ನು ಖಂಡಿತವಾಗಿಯೂ ಜೀವಸಹಿತವಾಗಿ ಮುಂದೆ ಬಿಡುವುದಿಲ್ಲ."

ಜಟಾಯುವು ಹೀಗೆ ಹೇಳಿ ರಭಸದಿಂದ ರಾವಣನ ಮೇಲೆ ಬಿದ್ದು ಅವನ ಅಂಗಾಂಗಗಳನ್ನೆಲ್ಲಾ ತನ್ನ ತೀಕ್ಷ್ಣವಾದ ಉಗುರುಗಳಿಂದ ಪರಚಿದನು. ಕೊಕ್ಕಿನಿಂದಲೂ ಮತ್ತು ಉಗುರುಗಳಿಂದಲೂ ರಾವಣನ ಶರೀರಾ

ದ್ಯಂತವಾಗಿಯೂ ಘಾಸಿಪಡಿಸಿದನು. ಪರ್ವತದಿಂದ ಝರಿಯು ಹರಿದು ಬರುವಂತೆ–ಪರ್ವತೋಪಮವಾದ ರಾವಣನ ಶರೀರದಿಂದ ರಕ್ತದ ಚಿಲುಮೆ ಗಳು ಹೊರಹೊಮ್ಮಿದ್ದುವು.

ರಾಮನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ತನ್ನನ್ನು ಪದೇ- ಪದೇ ಕೊಕ್ಕಿನಿಂದ ಘಾಸಿಪಡಿಸುತ್ತಿದ್ದ ಜಟಾಯುವನ್ನು ಕಂಡು ಕುಪಿತನಾದ ರಾವಣನು ಒರೆಯಿಂದ ಕತ್ತಿಯನ್ನು ಸೆಳೆದು ಜಟಾಯುವಿನ ಎರಡು ರೆಕ್ಕೆ ಗಳನ್ನೂ ಕತ್ತರಿಸಿಬಿಟ್ಟನು. ಪರ್ವತೋಪಮನಾದ ಜಟಾಯುವು ಪ್ರಜ್ಞಾ ಹೀನನಾಗಿ ಕೆಳಗೆ ಬಿದ್ದನು. ಈ ರೀತಿಯಲ್ಲಿ ಜಟಾಯುವನ್ನು ಪ್ರಹರಿಸಿ ರಾವಣೇಶ್ವರನು ಸೀತೆಯನ್ನು ತೊಡೆಯಿಂದ ಹಿಡಿದೆತ್ತಿಕೊಂಡು ಮೋಡಗಳ ಮೇಲ್ಭಾಗದಲ್ಲಿ ಬಹುವೇಗವಾಗಿ ಪ್ರಯಾಣಮಾಡಿದನು. ಪ್ರಯಾಣಮಾಡು ತ್ತಿದ್ದಾಗ ಸೀತಾದೇವಿಯು-ಋಷ್ಯಾಶ್ರಮವಾಗಲೀ, ಸರೋವರವಾಗಲೀ, ನದಿ ಯಾಗಲೀ ಕಣ್ಣಿಗೆ ಬಿದ್ದಿತೆಂದರೆ ತನ್ನ ಯಾವುದಾದರೊಂದು ಆಭರಣವನ್ನು ಕಳಚಿ ಕೆಳಕ್ಕೆ ಹಾಕುತ್ತಿದ್ದಳು. ಪರ್ವತಶಿಖರದ ಮೇಲೆ ಐವರು ವಾನರಪುಂಗ ವರು ಕುಳಿತಿರುವುದನ್ನು ಆಕಾಶದಿಂದ ನೋಡಿದ ಮನಸ್ವಿನಿಯಾದ ಸೀತಾ ದೇವಿಯು ತಾನುಟ್ಟಿದ್ದ ಅನರ್ಘವಾದ, ದಿವ್ಯವಾದ ಹಳದೀಬಣ್ಣದ ಸೀರೆಯ ಒಂದು ಭಾಗವನ್ನು ಹರಿದು ಕೆಳಕ್ಕೆ ಹಾಕಿದಳು. ಗಾಳಿಯಿಂದ ಹಾರಿಬರುತ್ತಿದ್ದ ಸುಂದರವಾದ ಆ ಪೀತಾಂಬರವು ಪ್ರಕಾಶಿಸುತ್ತಾ ಐವರು ವಾನರಪುಂಗವರು ಕುಳಿತಿದ್ದ ಸ್ಥಳಕ್ಕೆ ಸರಿಯಾಗಿ–ಮೇಘಗಳ ಮಧ್ಯದಲ್ಲಿ ಕಾಣಿಸುವ ಮಿಂಚಿನೋಪಾದಿಯಲ್ಲಿ ಬಂದು ಬಿದ್ದಿತು. ಪಕ್ಷಿಯೋಪಾದಿಯಲ್ಲಿ ರಾವಣೇ ಶ್ವರನು ಸೀತೆಯನ್ನೆತ್ತಿಕೊಂಡು ಆಕಾಶಮಾರ್ಗದಲ್ಲಿ ಬಹುದೂರ ಪ್ರಯಾಣ ಮಾಡಿಬಿಟ್ಟನು. ಮಹೋದಧಿಯನ್ನೂ ದಾಟಿದನಂತರ ರಮ್ಯವಾಗಿದ್ದ, ಅನೇಕಾನೇಕ ರಾಜದ್ವಾರಗಳಿಂದ ಶೋಭಿಸುತ್ತಿದ್ದ, ನೋಡಿದವರ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿದ್ದ, ಪ್ರಾಕಾರಗಳಿಂದಲೂ–ಕೋಟೆಯಿಂದಲೂ ಪರಿವೃತವಾಗಿದ್ದ, ಸಾಕ್ಷಾತ್ ವಿಶ್ವಕರ್ಮನಿಂದಲೇ ನಿರ್ಮಿತವಾಗಿದ್ದ ಲಂಕಾ ಪಟ್ಟಣವನ್ನು ಸೇರಿ ಆಕಾಶದಿಂದ ಕೆಳಗಿಳಿದು ಸೀತಾಸಮೇತನಾಗಿ ಲಂಕಾ ಪಟ್ಟಣವನ್ನು ಪ್ರವೇಶಿಸಿದನು.

ಸೀತೆಯು ರಾವಣನಿಂದ ಅಪಹೃತಳಾದನಂತರ ಇತ್ತಲಾಗಿ ಧೀಮಂತ ನಾದ ರಾಮನು ಚಿನ್ನದ ಮಾಯಾಮೃಗವನ್ನು ಕೊಂದು ಆಶ್ರಮಕ್ಕೆ ಹಿಂದಿರುಗುತ್ತಿರುವಾಗ ದಾರಿಯಲ್ಲಿ ಅನುಜನಾದ ಲಕ್ಷ್ಮಣನನ್ನು ಕಂಡನು.

"ಲಕ್ಷ್ಮಣ! ರಾಕ್ಷಸರಿಂದ ಆವೃತವಾಗಿರುವ ಈ ಅರಣ್ಯದಲ್ಲಿ ಸೀತೆ ಯೊಬ್ಬಳನ್ನೇ ಬಿಟ್ಟು ನೀನೇಕೆ ಬಂದೆ?"

ಎಂದು ಗಡುಸಾಗಿಯೇ ರಾಮನು ಲಕ್ಷ್ಮಣನನ್ನು ಪ್ರಶ್ನಿಸಿದನು. ಮರುಕ್ಷಣದಲ್ಲಿಯೇ ರಾಮನಿಗೆ ಆ ಕೃತ್ಯಗಳೆಲ್ಲವೂ ಪೂರ್ವಕೃತಯೋಜನೆ ಯಂತೆ ನಡೆದಿರುವುದೆಂಬುದರ ಅರಿವಾಯಿತು. ಮಾಯಾಮೃಗವು ಬಹು ದೂರ ಸೆಳೆದುಕೊಂಡು ಹೋದುದನ್ನೂ, ತನ್ನ ಬಾಣಕ್ಕೆ ಗುರಿಯಾಗಿ ಕೆಳಗೆ ಬಿದ್ದು ಸಾಯುವಾಗ–'ಹಾ ಲಕ್ಷ್ಮಣ! ಹಾ ಸೀತೇ'–ಎಂದು ತನ್ನ ಧ್ವನಿಯನ್ನೇ ಅನುಕರಿಸಿ ಕೂಗಿದುದನ್ನೂ, ಹಾಗೆ ಕೂಗಿದ ಕಾರಣದಿಂದಾಗಿ ಸೀತೆಯೊಬ್ಬ ಳನ್ನೇ ಆಶ್ರಮದಲ್ಲಿ ಬಿಟ್ಟು ಲಕ್ಷ್ಮಣನು ತನ್ನೆದುರಾಗಿ ಬಂದಿರುವುದನ್ನೂ– ಕ್ಷಣಕಾಲ ಯೋಚಿಸಿ ರಾಮನಿಗೆ ಬಹಳ ಸಂಕಟವಾಯಿತು. ಸೀತೆಯು ಅಪಾಯಕ್ಕೊಳಗಾಗಿದ್ದಾಳೆಂಬುದನ್ನು ರಾಮನು ನಿಶ್ಚಯಿಸಿದನು. ಲಕ್ಷ್ಮಣನ ಸಮೀಪಕ್ಕೆ ಹೋಗಿ ಗಡುಸಿನ ಧ್ವನಿಯಿಂದಲೇ ರಾಮನು ಲಕ್ಷ್ಮಣನನ್ನು ಕುರಿತು ಪುನಃ ಪ್ರಶ್ನಿಸಿದನು :

"ಲಕ್ಷ್ಮಣ! ಸೀತೆಯಿನ್ನೂ ಬದುಕಿರುವಳೇ? ಅವಳು ಈ ಹೊತ್ತಿನ ವರೆಗೂ ಬದುಕಿರುವಳೆಂಬುದರಲ್ಲಿ ನನಗೆ ಸಂಶಯವಿದೆ."

ಅನಂತರದಲ್ಲಿ ಲಕ್ಷ್ಮಣನು ನಡೆದುದೆಲ್ಲವನ್ನೂ ಯಥಾವತ್ತಾಗಿ ರಾಮ ನಿಗೆ ವಿನೀತನಾಗಿ ತಿಳಿಸಿದನು. ವೈದೇಹಿಯು ತನಗೆ ಹೇಳಿದ ಕರ್ಣಕಠೋರ ವಾದ ಮಾತುಗಳನ್ನೂ ಲಕ್ಷ್ಮಣನು ರಾಮನಿಗೆ ಹೇಳಿದನು. ಲಕ್ಷ್ಮಣನ ಮಾತುಗಳನ್ನು ಕೇಳಿದನಂತರ ರಾಮನಿಗೆ ಸೀತೆಯು ಅಪಾಯಕ್ಕೊಳ ಗಾಗಿರುವಳೆಂಬುದು ಮತ್ತೂ ಸ್ಪಷ್ಟವಾಯಿತು. ಉದ್ವಿಗ್ನಹೃದಯನಾಗಿ ಆಶ್ರಮದ ಕಡೆಗೆ ಓಡಿದನು. ಅವನ ಹೃದಯವು ಸಂತಾಪಾಗ್ನಿಯಿಂದ ಸುಟ್ಟು ಹೋಗುತ್ತಿದ್ದಿತು. ಆಶ್ರಮಕ್ಕೆ ಧಾವಿಸಿ ಬರುತ್ತಿರುವಾಗ ಹಾದಿಯಲ್ಲಿ ರಾಮನು ಪರ್ವತೋಪಮವಾಗಿ ಬಿದ್ದಿದ್ದ ಜಟಾಯುವನ್ನು ಕಂಡನು.

ಬೃಹದಾಕಾರವಾಗಿ ಬಿದ್ದಿರುವವನು ರಾಕ್ಷಸನೇ ಇರಬಹುದೆಂದೆಣಿಸಿ ರಾಮನು ಧನುಸ್ಸನ್ನು ಸಜ್ಜುಗೊಳಿಸುತ್ತಾ ಲಕ್ಷ್ಮಣಸಮೇತನಾಗಿ ಮುಂದೆ ಸಾಗಿದನು.

ತೇಜಸ್ವಿಯಾದ ಜಟಾಯುವು ರಾಮ-ಲಕ್ಷ್ಮಣರಿಬ್ಬರೂ ತನ್ನ ಸಮೀಪಕ್ಕೆ ಬಂದುದನ್ನು ನೋಡಿ ಮೆಲುದನಿಯಿಂದ ಹೇಳಿದನು :

"ರಾಮ! ನಾನು ಗೃಧ್ರರಾಜ. ನನ್ನನ್ನು ಜಟಾಯು–ಎಂದು ಕರೆಯುವರು. ನಿಮ್ಮ ತಂದೆಯಾದ ದಶರಥನ ಸಖನು ನಾನು. ನಿಮಗೆ ಮಂಗಳವಾಗಲಿ."

ಪರ್ವತೋಪಮವಾಗಿ ಬಿದ್ದಿದ್ದ ಪ್ರಾಣಿಯ ಮಾತುಗಳನ್ನು ಕೇಳಿ ರಾಮ-ಲಕ್ಷ್ಮಣರಿಬ್ಬರೂ ಸಜ್ಜುಗೊಳಿಸಿದ್ದ ಧನುಸ್ಸನ್ನು ಹಿಂದಕ್ಕೆ ತೆಗೆದುಕೊಂಡು ಅರಣ್ಯದಲ್ಲಿ ತಮ್ಮ ತಂದೆಯ ಹೆಸರನ್ನು ಹೇಳಿದವರು ಯಾರೆಂದು ತಿಳಿಯಲು ಕೌತುಕಯುಕ್ತರಾಗಿ ಅದರ ಸಮೀಪಕ್ಕೆ ಹೋದರು. ಅಲ್ಲವರು ರೆಕ್ಕೆಗಳಿಂದ ವಿಹೀನವಾದ ಗೃಧ್ರವನ್ನು ನೋಡಿದರು. ರಾಮ-ಲಕ್ಷ್ಮಣರು ತನ್ನ ಸಮೀಪಕ್ಕೆ ಬರುತ್ತಲೇ ಜಟಾಯುವು ರಾವಣನು ಸೀತೆಯನ್ನು ಕದ್ದೊಯ್ಯುತ್ತಿದ್ದುದನ್ನೂ, ಅದನ್ನು ಪ್ರತಿಭಟಿಸಿದುದರ ಪರಿಣಾಮವಾಗಿ ರಾವಣನಿಂದ ತಾನು ಪೆಟ್ಟುತಿಂದು ಇಲ್ಲಿ ಬಿದ್ದಿರುವುದಾಗಿಯೂ ಹೇಳಿದನು.

ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆಯು ತಿಳಿದೊಡನೆಯೇ ಬಹುದುಃಖಿತನಾದ ರಾಮನು ಸೀತೆಯನ್ನೆತ್ತಿಕೊಂಡು ರಾವಣನು ಎತ್ತಕಡೆ ಸಾಗಿದನೆಂದು ಜಟಾಯುವನ್ನು ಪ್ರಶ್ನಿಸಿದನು. ರಾಮನ ಆ ಪ್ರಶ್ನೆಗೆ ಜಟಾಯುವು ಮಾತಿನಿಂದ ಉತ್ತರಿಸಲಾಗದೇ ಕೇವಲ ತಲೆಯಿಂದ ಸನ್ನೆಮಾಡಿ ಪ್ರಾಣತೊರೆದನು. ಪಕ್ಷಿರಾಜನು ಮಾಡಿದ ಸನ್ನೆಯಿಂದ ರಾಮನು ರಾವಣನು ಸೀತೆಯನ್ನು ದಕ್ಷಿಣದಿಕ್ಕಿಗೆ ಕರೆದುಕೊಂಡು ಹೋಗಿರುವನೆಂಬುದನ್ನು ಗ್ರಹಿಸಿದನು. ಅನಂತರದಲ್ಲಿ ರಾಮನು ತನ್ನ ತಂದೆಯ ಮಿತ್ರನಾದ ಜಟಾಯುವಿಗೆ ದಹನಾದಿಸಂಸ್ಕಾರಗಳನ್ನು ಮಾಡಿದನು.

ಸೀತಾಪಹರಣದಿಂದ ಬಹುದುಃಖಿತರಾಗಿದ್ದ ರಾಮ-ಲಕ್ಷ್ಮಣರು ದಂಡ ಕಾರಣ್ಯದಲ್ಲಿ ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿದರು. ಅವರು ಹೋಗು ತ್ತಿದ್ದ ದಾರಿಯಲ್ಲಿ ಅನೇಕಾನೇಕ ಪಾಳುಬಿದ್ದಿದ್ದ ಆಶ್ರಮಗಳನ್ನು ಕಂಡರು.

ಆ ಆಶ್ರಮಗಳಲ್ಲಿ ಋಷಿಗಳಾಗಲೀ, ಶಿಷ್ಯರಾಗಲೀ ಇರಲಿಲ್ಲ. ಆಸನಾದಿಗಳೆಲ್ಲವೂ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ತೀರ್ಥವನ್ನು ತುಂಬಿಡಲು ಉಪಯೋಗಿಸುತ್ತಿದ್ದ ಭಾಂಡಗಳೆಲ್ಲವೂ ಒಡೆದು ಪುಡಿ-ಪುಡಿಮಾಡಲ್ಪಟ್ಟಿದ್ದುವು. ಗುಳ್ಳೇನರಿಗಳು ಹಾಳುಬಿದ್ದಿದ್ದ ಆಶ್ರಮಗಳಲ್ಲಿ ಸೇರಿಕೊಂಡಿದ್ದುವು. ಜಿಂಕೆಗಳು ಗಾಬರಿಗೊಂಡು ದಿಕ್ಕಾಪಾಲಾಗಿ ಓಡುತ್ತಿದ್ದುವು. ದಾವಾಗ್ನಿಯು ಹುಟ್ಟಿ ಕೊಂಡು ಅರಣ್ಯವನ್ನೆಲ್ಲಾ ಸುಡುತ್ತಿರುವಾಗ ಉಂಟಾಗುವ ಪ್ರಾಣಿಗಳ ಘೋರಧ್ವನಿಯಂತೆ ರಾಮ-ಲಕ್ಷ್ಮಣರ ಸುತ್ತಲೂ ಘೋರವಾದ ಶಬ್ದವಾಗುತ್ತಿದ್ದಿತು. ಮುಂದೆ ಸ್ವಲ್ಪದೂರ ಹೋಗುವುದರೊಳಗಾಗಿ ರಾಮ-ಲಕ್ಷ್ಮಣರು ಮೇಘಪರ್ವತೋಪಮನಾಗಿದ್ದ, ಘೋರರೂಪಿಯಾದ, ಕಬಂಧನೆಂಬ ರಾಕ್ಷಸನನ್ನು ಕಂಡರು. ಅವನ ತೋಳುಗಳು ಸಾಲವೃಕ್ಷಗಳಂತೆ ಬಹಳ ನೀಳವಾಗಿದ್ದುವು. ಅವನಿಗೆ ತಲೆಯು ಪ್ರತ್ಯೇಕವಾಗಿರಲಿಲ್ಲ. ಹೊಟ್ಟೆಯಲ್ಲಿಯೇ ಅವನ ಮುಖವಿತ್ತು. ವಕ್ಷಃಸ್ಥಳದಲ್ಲಿ ವಿಶಾಲವಾದ ಕಣ್ಣುಗಳಿದ್ದುವು. ಸ್ವಲ್ಪವಾದರೂ ಶ್ರಮವೇ ಇಲ್ಲದೇ ಆ ರಾಕ್ಷಸನು ಲಕ್ಷ್ಮಣನನ್ನು ತನ್ನ ಕೈಯಲ್ಲಿ ಹಿಡಿದಿಟ್ಟುಕೊಂಡನು. ಲಕ್ಷ್ಮಣನೂ ಸಹ ಭ್ರಾಂತನಾಗಿ ಮುಂದೇನು ಮಾಡಬೇಕೆಂಬುದು ತೋರದೇ ವಿಷಾದಿಸುತ್ತಿದ್ದನು. ರಾಮನನ್ನು ನೋಡಿದ ಆ ರಾಕ್ಷಸನು ಲಕ್ಷ್ಮಣನನ್ನು ಮೊದಲು ನುಂಗಿಬಿಡಬೇಕೆಂಬ ಆಶಯದಿಂದ ತನ್ನ ಹೊಟ್ಟೆಯಲ್ಲಿದ್ದ ಮುಖದ ಸಮೀಪಕ್ಕೆ ಲಕ್ಷ್ಮಣನನ್ನು ಒಂದು ತುತ್ತು ಅನ್ನದೋಪಾದಿಯಲ್ಲಿ ತೆಗೆದುಕೊಂಡು ಹೋದನು.

ಲಕ್ಷ್ಮಣನು ಮತ್ತೂ ವಿಷಣ್ಣನಾಗಿ ಅಣ್ಣನನ್ನು ಕುರಿತು ಹೇಳಿದನು :

"ಅಣ್ಣಾ! ಈ ನನ್ನ ದುರವಸ್ಥೆಯನ್ನಾದರೂ ನೋಡು. ಮೊದಲು ನೀನು ರಾಜ್ಯಭ್ರಷ್ಟನಾದೆ. ಅನಂತರದಲ್ಲಿ ನಮ್ಮ ತಂದೆಯು ಅವಸಾನಹೊಂದಿದನು. ಈ ಎರಡು ದುಃಖಗಳ ಜೊತೆಗೆ ಸೀತಾಪಹರಣದುಃಖವೂ ಸೇರಿಕೊಂಡಿತು. ಇಷ್ಟೇಸಾಲದೋ ಎಂಬಂತೆ ಈಗ ನಾನು ಈ ರಾಕ್ಷಸನಿಗೆ ಆಹಾರವಾಗಲಿದ್ದೇನೆ. ಆದರೆ ನಾನು ನನ್ನ ಅವಸಾನವಾಗಿಬಿಡುವುದೆಂದು ಸಂಕಟಪಡುತ್ತಿಲ್ಲ. ಸೀತೆಯೊಡನೆ ನೀನು ಅಯೋಧ್ಯೆಗೆ ಹಿಂದಿರುಗುವುದನ್ನು ನೋಡಬೇಕೆಂಬ ಅಪೇಕ್ಷೆಯೂ, ನೀನು ಪಿತೃ-ಪಿತಾಮಹರಿಂದ ಸಂಸೇವಿತವಾದ ಈ

ಭೂಮಂಡಲದ ಚಕ್ರವರ್ತಿಯಾಗಿ ಅಯೋಧ್ಯೆಯ ರತ್ನಸಿಂಹಾಸನದಲ್ಲಿ ಸೀತೆಯೊಡನೆ ಕುಳಿತು ವಿರಾಜಿಸುವುದನ್ನು ನೋಡಬೇಕೆಂಬ ಆಶಯವೂ ನನಗಿತ್ತು. ಈಗಿನ ಪರಿಸ್ಥಿತಿಯನ್ನು ನೋಡಿದರೆ ನನಗೆ ಆ ಅದೃಷ್ಟವಿಲ್ಲವೆಂದೇ ತೋರುತ್ತದೆ. ಮುಂದಿನ ಒಂದೆರಡು ಕ್ಷಣಗಳಲ್ಲಿಯೇ ನಾನು ಈ ರಾಕ್ಷಸನಿಗೆ ಆಹಾರವಾಗಿಬಿಡುತ್ತೇನೆ. ಇವನಿಂದ ಬಿಡಿಸಿಕೊಳ್ಳಬೇಕೆಂದು ಮಾಡಿದ ನನ್ನ ಪ್ರಯತ್ನಗಳೆಲ್ಲವೂ ವ್ಯರ್ಥವಾಗುತ್ತಿವೆ.

**ದ್ರಕ್ಷ್ಯನ್ತ್ಯಾರ್ಯಸ್ಯ ಧನ್ಯಾ ಯೇ ಕುಶಲಾಜಶಮೀದಲೈಃ ।**
**ಅಭಿಷಿಕ್ತಸ್ಯ ವದನಂ ಸೋಮಂ ಶಾನ್ತಘನಂ ಯಥಾ ॥೩೪॥**

ಕುಶ-ಲಾಜ-ಶಮೀದಳಗಳಿಂದ ಪಟ್ಟಾಭಿಷಿಕ್ತನಾದ ಮತ್ತು ಮೇಘಗಳು ಇಲ್ಲದಿರುವಾಗ ವಿರಾಜಿಸುವ ಪೂರ್ಣಚಂದ್ರನಂತೆ ಇರುವ ಆರ್ಯನಾದ ನಿನ್ನ ಮುಖಚಂದ್ರನನ್ನು ಅದೃಷ್ಟವಂತರು ಮಾತ್ರವೇ ನೋಡಿ ಆನಂದಿಸುತ್ತಾರೆ. ನಿಶ್ಚಯವಾಗಿಯೂ ಅವರೇ ಧನ್ಯರು.”

ಯುಧಿಷ್ಠಿರ! ಇವೇ ಮುಂತಾಗಿ ಲಕ್ಷ್ಮಣನು ರಾಮನನ್ನು ಕುರಿತು ಕರುಣಾಜನಕವಾದ ಅನೇಕ ಮಾತುಗಳನ್ನು ಹೇಳಿದನು.

ಎಂತಹ ಸಂದಿಗ್ಧಪರಿಸ್ಥಿತಿಯಲ್ಲಿಯೂ ಭ್ರಾಂತನಾಗದೇ ಅನುದ್ವಿಗ್ನ ಮನಸ್ಕನಾಗಿರುವ ರಾಮನು ಲಕ್ಷ್ಮಣನಿಗೆ ಹೇಳಿದನು :

**ಮಾ ವಿಷೀದ ನರವ್ಯಾಘ್ರ ನೈಷ ಕಶ್ಚಿನ್ಮಯಿ ಸ್ಥಿತೇ ।**
**ಛಿನ್ಧ್ಯಸ್ಯ ದಕ್ಷಿಣಂ ಬಾಹುಂ ಛಿನ್ನಃ ಸವ್ಯೋ ಮಯಾ ಭುಜಃ ॥**

“ನರವ್ಯಾಘ್ರನಾದ ಲಕ್ಷ್ಮಣನೇ! ಮಹಾಪರಾಕ್ರಮಿಯಾದ ನೀನು ಈ ಪರಿಯಾಗಿ ಶೋಕಿಸಬೇಡ. ನಾನಿಲ್ಲಿರುವಾಗ ಇವನು ಬದುಕಿ ಉಳಿಯಲಾರನು. ಧೈರ್ಯವನ್ನು ತಾಳು. ಕತ್ತಿಯನ್ನು ಹೊರಸೆಳೆದು ಇವನ ಬಲ ತೋಳನ್ನು ಕತ್ತರಿಸು. ನಾನು ಎಡತೋಳನ್ನು ಕತ್ತರಿಸುತ್ತೇನೆ.”

ರಾಮನು ಹೀಗೆಂದು ಲಕ್ಷ್ಮಣನಿಗೆ ಹೇಳುತ್ತಿರುವಾಗಲೇ ತೀಕ್ಷ್ಣವಾದ ತನ್ನ ಕತ್ತಿಯನ್ನು ಒರೆಯಿಂದ ಹಿರಿದು–ಎಳ್ಳಿನ ಗಿಡದ ಕಾಂಡವನ್ನು ಕತ್ತರಿಸು

ವಂತೆ–ಕ್ಷಣಮಾತ್ರದಲ್ಲಿ ಬೃಹದಾಕಾರನಾಗಿದ್ದ ಆ ರಾಕ್ಷಸನ ಎಡದ ತೋಳನ್ನು ಕತ್ತರಿಸಿಬಿಟ್ಟನು. ಆ ಕಾರ್ಯದಿಂದಾಗಿ ಲಕ್ಷ್ಮಣನಿಗೂ ಧೈರ್ಯ ವುಂಟಾಯಿತು. ಮೇಲಾಗಿ ತನ್ನಣ್ಣನು ತನ್ನ ಸಮೀಪದಲ್ಲಿಯೇ ಇದ್ದನಾದುದ ರಿಂದ ರಾಕ್ಷಸನ ಸಂಬಂಧವಾದ ಭಯವನ್ನು ಸಂಪೂರ್ಣವಾಗಿ ತೊರೆದು, ಲಕ್ಷ್ಮಣನು ಒರೆಯಿಂದ ಕತ್ತಿಯನ್ನು ಹಿರಿದು ರಾಕ್ಷಸನ ಬಲತೋಳನ್ನು ಕತ್ತರಿ ಸಿದನು. ಪುನಃ ಲಕ್ಷ್ಮಣನು ರಾಕ್ಷಸನನ್ನು ಕತ್ತಿಯಿಂದ ಹೊಡೆದನು. ಆ ಪ್ರಹಾರ ವನ್ನು ತಾಳಲಾರದೇ ರಾಕ್ಷಸನು ಘೋರಧ್ವನಿಮಾಡುತ್ತಾ ಅಸುವನ್ನು ತೊರೆದನು.

ಅನಂತರದಲ್ಲಿ ಯುಧಿಷ್ಠಿರ! ರಾಕ್ಷಸನ ಬೃಹದಾಕಾರದ ಆ ಶರೀರ ದಿಂದ ದಿವ್ಯವಾದ ಶರೀರವನ್ನು ಧರಿಸಿದ್ದ ದೇವಪುರುಷನೊಬ್ಬನು ಹೊರ ಬಂದನು. ಆಕಾಶದಲ್ಲಿ ಸೂರ್ಯದೇವನು ಪ್ರಜ್ವಲಿಸುವಂತೆಯೇ ತನ್ನ ಶರೀರದ ದಿವ್ಯಕಾಂತಿಯಿಂದ ದೇದೀಪ್ಯಮಾನವಾಗಿ ಬೆಳಗುತ್ತಿದ್ದ ಆ ಪುರುಷನು ಅಂತರಿಕ್ಷದಲ್ಲಿಯೇ ಕ್ಷಣಕಾಲ ನಿಂತು ರಾಮ-ಲಕ್ಷ್ಮಣರಿಗೆ ಕಾಣಿಸಿ ಕೊಂಡನು.

ದಿವ್ಯರೂಪಿಯಾದ ಆ ಪುರುಷನನ್ನು ವಾಗ್ಮಿಯಾದ ರಾಮನು ಪ್ರಶ್ನಿ ಸಿದನು : “ನೀನಾರು? ಈ ರಾಕ್ಷಸಶರೀರದಿಂದ ನೀನು ಹೊರಗೆ ಬಂದುದು ಹೇಗೆ? ನನ್ನ ಪ್ರಶ್ನೆಗೆ ಸರಿಯಾದ ಉತ್ತರಕೊಡು. ಈ ದೃಶ್ಯವೆಲ್ಲವೂ ನನಗೆ ಪರಮಾದ್ಭುತವಾಗಿ ಕಾಣುತ್ತಿದೆ.”

ರಾಮನು ಕೇಳಿದ ಆ ಪ್ರಶ್ನೆಗಳಿಗೆ ದಿವ್ಯಪುರುಷನು ನಸುನಗುತ್ತಾ ಉತ್ತರಿಸಿದನು : “ರಾಜಕುಮಾರ! ವಿಶ್ವಾವಸು ಎಂಬ ಹೆಸರಿನ ಗಂಧರ್ವನು ನಾನು. ಬ್ರಾಹ್ಮಣನೊಬ್ಬನ ಶಾಪದಿಂದ ಈ ರಾಕ್ಷಸರೂಪವನ್ನು ಹೊಂದಿ ದ್ದೆನು. ಇಂದು ಆ ಶಾಪದ ವಿಮೋಚನೆಯಾಯಿತು. ಇದು ನನ್ನ ಸ್ವಂತ ವಿಷಯವಾಯಿತು. ನಿಮ್ಮ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಹೇಳುತ್ತೇನೆ. ನೀವು ಸೀತೆಯನ್ನು ಹುಡುಕುವ ಸಲುವಾಗಿ ಹೊರಟಿರುತ್ತೀರಿ. ಲಂಕೇಶ್ವರನಾದ ರಾವಣನು ನಿನ್ನ ಪತ್ನಿಯಾದ ಸೀತೆಯನ್ನು ಅಪಹರಿಸಿ ಕೊಂಡು ಹೋಗಿರುತ್ತಾನೆ. ನೀನೀಗಲೇ ಸುಗ್ರೀವನ ಬಳಿಗೆ ಹೋಗಿ ಅವ

ನೊಡನೆ ಸಖ್ಯಮಾಡಿಕೊ. ಋಷ್ಯಮೂಕಪರ್ವತಕ್ಕೆ ಅನತಿದೂರದಲ್ಲಿ ಪಂಪಾ ಎಂಬ ಹೆಸರಿನ ಸರೋವರವಿದೆ. ಆ ಸರೋವರವು ಪರಿಶುದ್ಧವಾದ ಮತ್ತು ಪವಿತ್ರವಾದ ಜಲದಿಂದ ಕೂಡಿರುವುದು. ಅದರಲ್ಲಿ ಅನೇಕಾನೇಕ ರಾಜಹಂಸಗಳೂ, ಕೊಕ್ಕರೆಗಳೂ ಸರ್ವದಾ ನಲಿದಾಡುತ್ತಿರುತ್ತವೆ. ಆ ದಿವ್ಯ ಸರೋವರದ ಸಮೀಪದಲ್ಲಿಯೇ ಸುವರ್ಣಮಾಲಾಲಂಕೃತನಾದ ವಾಲಿಯ ತಮ್ಮನಾದ ಸುಗ್ರೀವನು ನಾಲ್ವರು ಮಂತ್ರಿಗಳೊಡನೆ ವಾಸಮಾಡಿಕೊಂಡಿದ್ದಾನೆ. ಅವನ ಬಳಿಗೆ ಹೋಗಿ ನಿನ್ನ ಇಂದಿನ ದುಃಖದ ಕಾರಣವನ್ನು ಅವನಿಗೆ ಸ್ಪಷ್ಟವಾಗಿ ತಿಳಿಸು. ನಿನ್ನಂತೆಯೇ ಸಮಾನಶೀಲ-ವ್ಯಸನಿಯಾದ ಸುಗ್ರೀವನು ನಿಶ್ಚಯವಾಗಿಯೂ ನಿನಗೆ ಸಹಾಯಮಾಡುವನು. ನಿನ್ನ ವಿಷಯವಾಗಿ ಇಷ್ಟು ಮಾತ್ರ ನಾನು ಹೇಳಬಯಸುತ್ತೇನೆ. ಜಾನಕಿಯ ಪುನಃಪ್ರಾಪ್ತಿಯ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಿಸಬೇಕಾಗಿಲ್ಲ. ಜನಕನ ಮಗಳಾದ ಜಾನಕಿಯನ್ನು ನೀನು ನಿಸ್ಸಂಶಯವಾಗಿ ಕಾಣುವೆ. ವಾನರರಾಜನಾದ ಸುಗ್ರೀವನಿಗೆ ರಾವಣಾದಿಗಳ ವಿಷಯವೂ ಸಂಪೂರ್ಣವಾಗಿ ತಿಳಿದಿರುವುದು. ರಾವಣಾದಿಗಳ ನಿವಾಸಸ್ಥಾನವೂ ಸಹ ಅವನಿಗೆ ನಿಶ್ಚಯವಾಗಿ ತಿಳಿದಿರುವುದು. ನಾನಿನ್ನು ನನ್ನ ಲೋಕಕ್ಕೆ ತೆರಳುತ್ತೇನೆ."

ಹೀಗೆಂದು ಹೇಳುತ್ತಿದ್ದಾಗಲೇ ಮಹಾಪ್ರಭೆಯಿಂದ ಕೂಡಿದ್ದ ಆ ದಿವ್ಯ ಪುರುಷನು ಅದೃಶ್ಯನಾದನು. ಆ ದೃಶ್ಯವನ್ನು ನೋಡಿ ರಾಮ-ಲಕ್ಷ್ಮಣರು ಆಶ್ಚರ್ಯಭರಿತರಾದರು.

೨೭೯ನೆಯ ಅಧ್ಯಾಯವು ಮುಗಿಯಿತು.

೨೮೦ನೆಯ ಅಧ್ಯಾಯ — ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾಮ-ಸುಗ್ರೀವರ ಮೈತ್ರಿ: ವಾಲಿ-ಸುಗ್ರೀವರ ಯುದ್ಧ: ಶ್ರೀರಾಮನಿಂದ ವಾಲಿಯ ವಧೆ: ಲಂಕೆಯ ಅಶೋಕವನದಲ್ಲಿ ರಾಕ್ಷಸಿಯರ ಭರ್ತ್ಸನೆಯಿಂದ ಭಯಗೊಂಡ ಸೀತೆಯನ್ನು ತ್ರಿಜಟೆಯು ಸಮಾಧಾನಪಡಿಸಿದುದು

ಯುಧಿಷ್ಠಿರ! ಕಬಂಧನ ಸಲಹೆಯಂತೆ ರಾಮ-ಲಕ್ಷ್ಮಣರು ಮುಂದೆ

ಸ್ವಲ್ಪದೂರ ಪ್ರಯಾಣಮಾಡುವುದರೊಳಗಾಗಿ ಪಂಪಾಸರೋವರದ ಸಮೀಪಕ್ಕೆ ಬಂದರು. ಆ ಸರೋವರವು ಕಮಲಪುಷ್ಪಗಳಿಂದ ತುಂಬಿದ್ದು ಬಹಳ ಸುಂದರವಾಗಿ ಕಾಣುತ್ತಿದ್ದಿತು. ಕುಸುಮಿತವಾದ ಕಾನನದಿಂದ ಮನಸ್ಸಿಗೆ ಆಹ್ಲಾದಕರವಾದ ಮಂದಮಾರುತವು ಬೀಸುತ್ತಿದ್ದಿತು. ಅಂತಹ ಸನ್ನಿವೇಶದಲ್ಲಿ ರಾಮನಿಗೆ ಸೀತೆಯ ನೆನಪಾಯಿತು. ಸೀತೆಯೊಡನೆ ತಾನಿದ್ದಾಗ ಅಂತಹ ಸುಖಮಯಸನ್ನಿವೇಶಗಳಲ್ಲಿ ವಿಹರಿಸುತ್ತಿದ್ದುದರ ನೆನಪಾಯಿತು. ಹಿಂದಿನ ಸನ್ನಿವೇಶಗಳೆಲ್ಲವೂ ರಾಮನ ಮನಸ್ಸೆಂಬ ತೆರೆಯ ಮೇಲೆ ಒಂದಾದಮೇಲೆ ಮತ್ತೊಂದರಂತೆ ಕಾಣಿಸತೊಡಗಿದುವು. ಬಹುಪ್ರಿಯಳಾದ ಸೀತೆಯೀಗ ಹತ್ತಿರದಲ್ಲಿಲ್ಲದೇ ಇದ್ದುದರಿಂದ ರಾಮನು ಅತಿದಾರುಣವಾದ ವಿರಹವೇದನೆಯನ್ನು ಅನುಭವಿಸಿದನು. 'ಹಾ ಸೀತೇ! ಎಲ್ಲಿ ಹೋದೆ? ನನ್ನನ್ನಗಲಿ ಹೇಗೆ ಹೋದೆ? ಈಗ ನೀನೆಲ್ಲಿರುವೆ?'– ಎಂದು ಹೇಳುತ್ತಾ ರಾಮನು ಬಿಕ್ಕಿ-ಬಿಕ್ಕಿ ಅತ್ತನು. ಧೀರೋದಾತ್ತನಾದ ರಾಮಚಂದ್ರನು ಸಾಧಾರಣಮನುಷ್ಯನಂತೆ ಅಳುತ್ತಿರುವುದನ್ನು ಕಂಡು ಲಕ್ಷ್ಮಣನಿಗೆ ಸಖೇದಾಶ್ಚರ್ಯಗಳುಂಟಾದುವು. ಆತನು ತನ್ನ ಅಣ್ಣನನ್ನು ಕುರಿತು ಹೇಳಿದನು :

"ವಿರಹವೇದನೆಯು ನಿನ್ನಂತಹವನನ್ನು ಮುಟ್ಟುವ ಅರ್ಹತೆಯನ್ನೂ ಹೊಂದಿರುವುದಿಲ್ಲವಣ್ಣಾ! ಸಾಧಾರಣಮಾನವನಂತೆ ಕಾಮಪ್ರಧಾನವಾದ ವಿರಹವೇದನೆಗೆ ನೀನು ತುತ್ತಾಗಬಾರದು. ನಿಯತವಾದ ಆಹಾರ-ವ್ಯವಹಾರ ಗಳನ್ನಿಟ್ಟುಕೊಂಡಿರುವ ವೃದ್ಧನನ್ನು ಯಾವ ವಿಧವಾದ ವ್ಯಾಧಿಯೂ ಕಾಡಿಸದಂತೆ–ಸರ್ವತ್ರ ಸಮಭಾವದಿಂದಿರುವ ನಿನ್ನನ್ನು ಇಂತಹ ಸಾಮಾನ್ಯ ವಿಷಯಗಳು ಖಂಡಿತವಾಗಿಯೂ ಬಾಧೆಪಡಿಸಬಾರದಾಗಿತ್ತು. ನೀನು ಖಂಡಿತವಾಗಿಯೂ ಅಧೀರನಾಗಬೇಡಣ್ಣ! ಮೇಲಾಗಿ ರಾವಣನ ವಿಷಯವೂ ಮತ್ತು ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗಿರುವ ವಿಷಯವೂ ನಿನಗೆ ಈಗಾಗಲೇ ತಿಳಿದಿರುವುದು. ಅವಳನ್ನು ನೀನು ಪುರುಷಪ್ರಯತ್ನದಿಂದಲೂ ಮತ್ತು ಬುದ್ಧಿಬಲದಿಂದಲೂ ಬಿಡುಗಡೆ ಮಾಡಬೇಕಾಗಿದೆ. ಅಲ್ಲಿ ಪರ್ವತದ ಮೇಲೆ ಉಪಸ್ಥಿತನಾಗಿರುವ ಸುಗ್ರೀವನ ಬಳಿಗೆ ನಾವೀಗಲೇ ಪ್ರಯಾಣಮಾಡೋಣ. ಸಮಾಧಾನವನ್ನು ತಂದು

ಕೊಳ್ಳಣ್ಣ! ನಿನ್ನ ಶಿಷ್ಯನೂ, ಸೇವಕನೂ, ಸಹಾಯಕನೂ ಆದ ನಾನು ನಿನ್ನ ಸಮೀಪದಲ್ಲಿಯೇ ಇರುವಾಗ–ನಿನ್ನ ಆಜ್ಞೆಗಾಗಿಯೇ ಸರ್ವದಾ ಕೈಜೋಡಿಸಿ ಕಾದು ಕುಳಿತಿರುವಾಗ, ನೀನೇಕೆ ದುಃಖಿಸುವೆ?"

ಯುಧಿಷ್ಠಿರ! ಲಕ್ಷ್ಮಣನ ಸಮಯೋಚಿತವಾದ ಮಾತುಗಳನ್ನು ಕೇಳಿ ರಾಮನು ಸಮಾಧಾನಗೊಂಡು ತಾನು ಮುಂದೆ ಮಾಡಬೇಕಾದ ಕಾರ್ಯದಲ್ಲಿ ಪ್ರವೃತ್ತನಾದನು. ರಮ್ಯವಾಗಿದ್ದ ಪಂಪಾಸರೋವರದಲ್ಲಿ ಅಣ್ಣ-ತಮ್ಮಂದಿರಿಬ್ಬರೂ, ಸ್ನಾನ-ಸಂಧ್ಯಾವಂದನೆಗಳನ್ನು ಮಾಡಿ, ಪಿತೃದೇವತೆಗಳಿಗೆ ಆ ಪುಣ್ಯೋದಕದಿಂದ ತರ್ಪಣವನ್ನಿತ್ತು, ಋಷ್ಯಮೂಕಪರ್ವತದ ಕಡೆಗೆ ತೆರಳಿದರು. ಫಲಿತವಾದ ವೃಕ್ಷಗಳಿಂದ ನಿಬಿಡವಾಗಿದ್ದ ಋಷ್ಯಮೂಕಪರ್ವತ ವನ್ನು ಸೇರಿದ ರಾಮ-ಲಕ್ಷ್ಮಣರು ಪರ್ವತದ ಮೇಲೆ ಉಪಸ್ಥಿತರಾಗಿದ್ದ ಐವರು ವಾನರಪುಂಗವರನ್ನು ಕಂಡರು. ರಾಮ-ಲಕ್ಷ್ಮಣರು ತಮ್ಮನ್ನು ಕಾಣಲೆಂದೇ ಬರುತ್ತಿರುವುದನ್ನು ಊಹಿಸಿದ ಸುಗ್ರೀವನು–ಮಹಾಮೇಧಾವಿಯೂ ಹಿಮವಂತನಂತೆ ಗಂಭೀರನೂ ಆದ ಹನುಮಂತನನ್ನು ರಾಮ-ಲಕ್ಷ್ಮಣರನ್ನು ಆದರದಿಂದ ಸ್ವಾಗತಿಸಿ ಕರೆತರಲು ಕಳುಹಿಸಿಕೊಟ್ಟನು. ಸಹೋದರರಿಬ್ಬರೂ ಹನುಮಂತನೊಡನೆ ಯಥೋಚಿತವಾದ ಮಾತುಗಳನ್ನಾಡಿ ಅವನೊಡನೆ ಸುಗ್ರೀವನ ಸಮೀಪಕ್ಕೆ ತೆರಳಿದರು.

ಶ್ರೀರಾಮನು ಸುಗ್ರೀವನೊಡನೆ ಯಥಾವಿಧಿಯಾಗಿ ಸಖ್ಯಮಾಡಿ ಕೊಂಡನು. ಅನಂತರದಲ್ಲಿ ಶ್ರೀರಾಮನು ಸುಗ್ರೀವನೊಡನೆ ತನ್ನ ಉದ್ದೇಶ ವೇನೆಂಬುದನ್ನು ಹೇಳಲಾಗಿ (ಸೀತಾನ್ವೇಷಣದ ವಿಷಯವನ್ನು ಹೇಳಲಾಗಿ), ಸುಗ್ರೀವಾದಿಗಳು ರಾವಣನಿಂದ ಅಪಹೃತಳಾಗಿ ಸೀತೆಯು ಆಕಾಶಮಾರ್ಗ ದಲ್ಲಿ ಹೋಗುತ್ತಿದ್ದಾಗ ತಮ್ಮ ಮಧ್ಯದಲ್ಲಿ ಹಾಕಿದ ಪೀತಾಂಬರದ ಸೆರಗನ್ನು ರಾಮನಿಗೆ ತೋರಿಸಿದರು. ಅದರಿಂದ ರಾಮನಿಗೆ ಸುಗ್ರೀವನಲ್ಲಿ ಸಂಪೂರ್ಣ ವಾದ ನಂಬಿಕೆಯುಂಟಾಯಿತು. ವಾನರಶ್ರೇಷ್ಠನಾದ ಸುಗ್ರೀವನನ್ನು ವಾನರ ಚಕ್ರಾಧಿಪತ್ಯಕ್ಕೆ ಅಧಿಪತಿಯನ್ನಾಗಿ ತಾನೇ ಪಟ್ಟಾಭಿಷೇಕಮಾಡಿದನು. ಅದನ್ನು ಕಾರ್ಯಗತಮಾಡಲು ಸುಗ್ರೀವನ ಅಣ್ಣನಾದ ವಾಲಿಯನ್ನು ಸಂಹರಿಸುವುದಾಗಿಯೂ ರಾಮನು ಪ್ರತಿಜ್ಞೆಮಾಡಿದನು. ಅದಕ್ಕೆ ಪ್ರತಿಯಾಗಿ

ಸುಗ್ರೀವನೂ ಸಹ ಸೀತೆಯನ್ನು ಸರ್ವಪ್ರಯತ್ನದಿಂದಲೂ ಕರೆತರುವುದಾಗಿ ಪ್ರತಿಜ್ಞೆಮಾಡಿದನು. ರಾಮ-ಸುಗ್ರೀವರು ಪರಸ್ಪರವಾಗಿ ಈ ವಿಧವಾದ ಶಪಥಮಾಡಿಕೊಂಡು, ಒಬ್ಬರಲ್ಲಿ ಮತ್ತೊಬ್ಬರು ಸಂಪೂರ್ಣವಾಗಿ ವಿಶ್ವಾಸ ವನ್ನಿಟ್ಟ ಮೇಲೆ ವಾಲಿಯೊಡನೆ ಯುದ್ಧಾಪೇಕ್ಷಿಗಳಾಗಿ ಎಲ್ಲರೂ ಕಿಷ್ಕಿಂಧೆಗೆ ಪ್ರಯಾಣಮಾಡಿದರು. ಕಿಷ್ಕಿಂಧಾಪಟ್ಟಣದ ಮಹಾದ್ವಾರಕ್ಕೆ ಆಗಮಿಸಿದೊಡ ನೆಯೇ ಸುಗ್ರೀವನು ಮಹಾಪ್ರವಾಹದ ಶಬ್ದಕ್ಕೆ ಸದೃಶವಾದ ಘೋರನಿನಾದ ವನ್ನು ಮಾಡಿದನು. ತನ್ನ ತಮ್ಮನು ಮಾಡಿದ ಆ ವೀರಗರ್ಜನೆಯನ್ನು ವಾಲಿಗೆ ಕೇಳಲು ಕೂಡ ಸಹ್ಯವಾಗಲಿಲ್ಲ. 'ನನ್ನ ಮುಂದೆ ಇವನು ಈ ವೀರಗರ್ಜನೆ ಮಾಡುವಷ್ಟು ಸೊಕ್ಕಿಹೋಗಿರುವನೇ?'–ಎಂದು ಕಟ-ಕಟನೆ ಹಲ್ಲುಕಡಿ ಯುತ್ತಾ ವಾಲಿಯು ರಭಸದಿಂದ ಅರಮನೆಯನ್ನು ಬಿಟ್ಟು ಹೊರಟನು. ತಾರೆಯು ಅವನಿಗಡ್ಡಲಾಗಿ ಬಂದು ನಿಂತು ವಾಲಿಯನ್ನು ಕುರಿತು ಹೇಳಿದಳು :

"ವಾನರೇಶ್ವರ! ಸುಗ್ರೀವನು ಈ ಸಮಯದಲ್ಲಿ ಮಹಾಬಲಿಷ್ಠನಾಗಿ ನಿನ್ನೊಡನೆ ಯುದ್ಧಕ್ಕೆ ಬಂದಿರುತ್ತಾನೆ. ಮೇಲಾಗಿ ಅವನು ಮಾಡಿದ ಗರ್ಜನೆ ಯನ್ನು ನೋಡಿದರೆ ಮಹಾಬಲಿಷ್ಠನಾದವನೊಬ್ಬನ ಸಹಾಯವನ್ನೂ ಪಡೆದು ಬಂದಿರುವಂತೆ ಕಾಣುತ್ತದೆ. ಈ ಕಾರಣದಿಂದ ನೀನು ಈ ಹೊತ್ತಿನಲ್ಲಿ ಅವ ನೊಡನೆ ಕಾಳಗಕ್ಕೆ ಹೋಗುವುದು ನನಗೆ ಸೂಕ್ತವಾಗಿ ಕಾಣುವುದಿಲ್ಲ."

ಚಂದ್ರವದನೆಯಾದ, ಸರ್ವಾಂಗಸುಂದರಿಯಾದ ತಾರೆಯು ಹೇಳಿದ ಮಾತುಗಳನ್ನು ಕೇಳಿ ಸುವರ್ಣಮಾಲೆಯಿಂದ ಅಲಂಕೃತನಾಗಿದ್ದ ವಾನರ ಪತಿಯಾದ ವಾಲಿಯು ಕ್ಷಣಕಾಲ ನಿಂತಲ್ಲಿಯೇ ನಿಂತು ತಾರೆಯನ್ನು ಪ್ರಶ್ನಿಸಿದನು :

"ತಾರೇ! ನೀನು ನಿಶ್ಚಯವಾಗಿಯೂ ಸರ್ವಪ್ರಾಣಿಗಳೂ ಮಾಡುವ ಶಬ್ದಗಳನ್ನೂ ಮತ್ತು ಆ ಶಬ್ದಗಳ ಯಥಾವತ್ತಾದ ಅರ್ಥವನ್ನೂ ತಿಳಿದವ ಳಾಗಿರುವೆ. ನಿನ್ನ ಬಹುಸೂಕ್ಷ್ಮವಾದ ಬುದ್ಧಿಯಿಂದ ಇನ್ನೂ ಸ್ವಲ್ಪ ವಿವೇಚಿಸಿ, ನನ್ನ ಈ ನಾಮಮಾತ್ರಸೋದರನು ಯಾರ ಬೆಂಬಲವನ್ನು ಪಡೆದು ಇಂದು ಯುದ್ಧಕ್ಕೆ ಬಂದಿರುವನೆಂಬುದನ್ನು ಸ್ಪಷ್ಟವಾಗಿ ಹೇಳು."

ತಾರಾಧಿಪನಾದ ಚಂದ್ರನ ಕಾಂತಿಯುಕ್ತವಾದ ಬಿಂಬಕ್ಕೆ ಅನುರೂಪ

ವಾದ ಮುಖವನ್ನೂ ಮತ್ತು ಕಾಂತಿಯನ್ನೂ ಹೊಂದಿದ್ದ, ಬಹುಪ್ರಾಜ್ಞಳಾದ ತಾರಾದೇವಿಯು ತನ್ನ ಪತಿಯು ಕೇಳಿದ ಪ್ರಶ್ನೆಯ ವಿಷಯವಾಗಿ ಕ್ಷಣಕಾಲ ಮಾತ್ರ ಚಿಂತಿಸಿ ಹೇಳಿದಳು :

"ಕಪೀಶ್ವರ! ನೀನು ಕೇಳಿದ ಪ್ರಶ್ನೆಗೆ ಸವಿಸ್ತರವಾಗಿಯೇ ಉತ್ತರ ಹೇಳುವೆನು ; ಕೇಳು :

ದಶರಥನ ಮಗನಾದ, ಮಹಾಸತ್ತ್ವಶಾಲಿಯಾದ ರಾಮನು ಹೆಂಡತಿಯನ್ನು ಕಳೆದುಕೊಂಡಿದ್ದಾನೆ. ಅವನು ಈ ನಿನ್ನ ತಮ್ಮನಾದ ಸುಗ್ರೀವನೊಡನೆ ಸಖ್ಯಮಾಡಿಕೊಂಡಿರುತ್ತಾನೆ. ಅವನ ಸಖ್ಯದ ರಹಸ್ಯವು ಈ ರೀತಿಯಾಗಿದೆ: ಇಬ್ಬರಲ್ಲಿ ಒಬ್ಬರಿಗೆ ಮಿತ್ರರಾದವರು ಮತ್ತೊಬ್ಬರಿಗೂ ಮಿತ್ರರಾಗುತ್ತಾರೆ. ಒಬ್ಬರಿಗೆ ಶತ್ರುಗಳಾದವರು ಮತ್ತೊಬ್ಬರಿಗೂ ಶತ್ರುಗಳಾಗುತ್ತಾರೆ. ಅರ್ಥಾತ್ ಇವರ ಪರಸ್ಪರಮೈತ್ರಿಯಿಂದಾಗಿ ರಾಮನಿಗೆ ನೀನು ಶತ್ರುವಾಗಿರುವೆ. ಮಹಾಬಾಹುವಾದ, ಸುಮಿತ್ರಾದೇವಿಯ ಮಗನಾದ, ಅಪರಾಜಿತನಾದ ಲಕ್ಷ್ಮಣನೆಂಬುವನು ರಾಮನ ತಮ್ಮನು. ಕಾರ್ಯಾರ್ಥಸಿದ್ಧಿಗಾಗಿ ಲಕ್ಷ್ಮಣನು ರಾಮನನ್ನು ಎಡೆಬಿಡದೆ ಯಾವಾಗಲೂ ಅವನ ಸಮೀಪದಲ್ಲಿಯೇ ಉಪಸ್ಥಿತನಾಗಿರುವನು. ಲಕ್ಷ್ಮಣನೂ ಸುಗ್ರೀವನ ಕಾರ್ಯದಲ್ಲಿ ಆಸಕ್ತನಾಗಿರುವನು.

ಇವರಿಬ್ಬರ ಜೊತೆಯಲ್ಲಿ ಸುಗ್ರೀವನ ಸಚಿವರಾದ ಮೈಂದ, ದ್ವಿವಿದ, ಪವನಸುತನಾದ ಹನುಮಂತ ಮತ್ತು ಕರಡಿಗಳ ರಾಜನಾದ ಜಾಂಬವಂತ– ಇವರೂ ಸಹ ಉಪಸ್ಥಿತರಾಗಿರುವರು. ಕಪೀಶ್ವರ! ಇವರೆಲ್ಲರೂ ಮಹಾಬಲಶಾಲಿಗಳಾಗಿರುವುದಲ್ಲದೇ ಬಹಳ ಬುದ್ಧಿಶಾಲಿಗಳೂ ಆಗಿರುವರು. ಸುಗ್ರೀವನೂ ಮತ್ತು ಅವನ ಸಚಿವರೂ ರಾಮನ ಪರಾಕ್ರಮವನ್ನೇ ಅವಲಂಬಿಸಿ ನಿನ್ನನ್ನು ಧ್ವಂಸಮಾಡಲು ಸಿದ್ಧರಾಗಿ ಬಂದಿರುತ್ತಾರೆ. ಆದುದರಿಂದ ನೀನು ಈ ಸಮಯದಲ್ಲಿ ಅವರೊಡನೆ ಯುದ್ಧಮಾಡಲು ಹೋಗುವುದು ಯುಕ್ತವಾಗಿ ಕಾಣುವುದಿಲ್ಲ."

(ಇದಕ್ಕಿಂತಲೂ ಉತ್ತಮವಾದ ಸಲಹೆಯನ್ನು ಯಾವ ಮಂತ್ರಿಯು ತಾನೇ ಕೊಟ್ಟಾನು? ಸುಗ್ರೀವನು ಮಾಡಿದ ಧ್ವನಿಯಿಂದಲೇ ಅಲ್ಲಿಯ

ಸನ್ನಿವೇಶಗಳೆಲ್ಲವನ್ನೂ ಸಂಪೂರ್ಣವಾಗಿ ಗ್ರಹಿಸಿದ ತಾರಾದೇವಿಯ ಬುದ್ಧಿಯು ಎಷ್ಟು ಸೂಕ್ಷ್ಮವಾಗಿರಬೇಕು? ಸಾಮಾನ್ಯಜನತೆಗೆ ಇದು ಕೇವಲ ಕಥೆಯಾಗಿ ಕಂಡುಬಂದರೂ ಇಂತಹ ಬುದ್ಧಿಶಾಲಿಗಳಾದ ಸ್ತ್ರೀ-ಪುರುಷರಿಗೆ ನಮ್ಮ ದೇಶದಲ್ಲಿ ಕೊರತೆಯಿರಲಿಲ್ಲ. ಪರಮಮೇಧಾವಿಗಳಿಗೆ ಇಂತಹ ವಿಷಯಗಳು ಅಸಂಭಾವ್ಯವೇನೂ ಅಲ್ಲ.

ತನ್ನ ಹಿತೈಷಿಣಿಯಾದ, ಪತ್ನಿಯಾದ ತಾರೆಯು ಹೇಳಿದ ಮಾತುಗಳು ವಾಲಿಗೆ ಪಥ್ಯವಾಗಲಿಲ್ಲ. ವಾಲಿಗೆ ದೈವಬಲವು ಇಲ್ಲದಿದ್ದುದೇ ಇದಕ್ಕೆ ಕಾರಣ. ಮುಂದೆ ಇಂತಹುದೇ ಅಪಾಯವಿದೆಯೆಂಬುದು ನಮಗೆ ಜ್ಯೋತಿಷಶಾಸ್ತ್ರದಿಂದ ಅಥವಾ ಊಹೆಯಿಂದ ತಿಳಿದುಬಂದರೂ ದೈವಸಂಕಲ್ಪವನ್ನು ಮೀರಿ ನಾವು ಅಪಾಯದಿಂದ ಪಾರಾಗಲಾರೆವು–ಎಂಬುದಕ್ಕೆ ಈ ವಾಲಿಯ ಇತಿಹಾಸಕ್ಕಿಂತಲೂ ಬೇರೆಯ ನಿದರ್ಶನದ ಆವಶ್ಯಕತೆಯಿಲ್ಲ.)

ತನ್ನ ಹಿತಕ್ಕಾಗಿಯೇ ಹೇಳಿದ ತಾರಾದೇವಿಯ ಸಲಹೆಯನ್ನು ವಾಲಿಯು ತಳ್ಳಿಹಾಕಿದನು. ಸುಗ್ರೀವನೀಗ ಪರಮಬಲಿಷ್ಠನಾಗಿ ಬಂದಿದ್ದಾನೆಂದು ತಾರೆಯು ಹೇಳಿದ ಯಥಾರ್ಥವಿಷಯವು ವಾಲಿಯ ಮನಸ್ಸಿನಲ್ಲಿ ಅಸೂಯೆಗೆ ಎಡೆಗೊಟ್ಟಿತು ಮತ್ತು ಅದೇ ಕಾರಣದಿಂದಾಗಿ ತಾರೆಯ ಚಾರಿತ್ರ್ಯವನ್ನೂ ವಾಲಿಯು ಶಂಕಿಸುವಂತಾಯಿತು. ತಾರೆಯು ಸುಗ್ರೀವನಲ್ಲಿ ಮೋಹಿತಳಾಗಿರುವಳೆಂದು ವಾಲಿಯು ಭ್ರಮಿಸಿದನು. ಹಿತೋಪದೇಶವನ್ನು ಮಾಡಿದ ತಾರೆಯನ್ನು ನಿಷ್ಕಾರಣವಾಗಿ ನಿಂದಿಸುತ್ತಾ ಗುಹೆಯಿಂದ ಹೊರಟವನಾಗಿ ಮಾಲ್ಯವತ್ಪರ್ವತದ ಸಮೀಪಕ್ಕೆ ಬಂದು, ಅಲ್ಲಿ ಯುದ್ಧಸನ್ನದ್ಧನಾಗಿ ನಿಂತಿದ್ದ ಸುಗ್ರೀವನನ್ನು ಕುರಿತು ಹೇಳಿದನು :

“ಸುಗ್ರೀವ! ನೀನು ನನ್ನೊಡನೆ ಮಾಡಿದ ಯುದ್ಧಗಳಲ್ಲಿ ಅನೇಕ ಬಾರಿ ಸೋತು ಓಡಿಹೋಗಿರುವೆ. ನಿನಗೆ ಪ್ರಾಣದ ಮೇಲೆ ಹೆಚ್ಚು ಮಮತೆ. ಅದನ್ನು ತಿಳಿದೇ ನಾನು ನಿನ್ನ ಬೆನ್ನಟ್ಟಿ ಬರದೇ ಎಲ್ಲಿಯಾದರೂ ಬದುಕಿಕೊಂಡಿರಲೆಂದು ಬಿಟ್ಟುಬಿಟ್ಟಿದ್ದೇನೆ.

ಹೀಗೆ ಬಿಡುವುದಕ್ಕೆ ನೀನು ನನ್ನ ತಮ್ಮನಾಗಿ ಹುಟ್ಟಿರುವೆಯೆಂಬುದೂ ಮತ್ತೊಂದು ಕಾರಣ. ಈಗ ನಿನಗೆ ಜೀವನದ ಮೇಲೆ ಜುಗುಪ್ಸೆಯೇನಾದರೂ

ಹುಟ್ಟಿರುವುದೇ? ಆದರೂ ಸಹ ಸ್ವಲ್ಪಕಾಲವಾದರೂ ಜೀವಿಸಿರಬಹುದಾಗಿದ್ದಿತು. ಮರಣವನ್ನಪ್ಪಲು ಇಷ್ಟು ಅವಸರವೇಕೆ?"

ವಾಲಿಯಿಂದ ಹೀಗೆ ಮಾರ್ಮಿಕವಾಗಿ ಪ್ರಶ್ನಿಸಲ್ಪಟ್ಟ ಸುಗ್ರೀವನು ತನ್ನಣ್ಣನಿಗೆ ಸಕಾರಣವಾದ ಈ ಮಾತುಗಳನ್ನು ಹೇಳಿದನು : (ಶತ್ರುನಿಷೂದನನಾದ ಸುಗ್ರೀವನು ಹೇಳಿದ ಮಾತುಗಳು ರಾಮನನ್ನು ಕುರಿತು ಹೇಳಿದಂತೆಯೂ ಇದ್ದುವು.)

**ಹೃತರಾಜ್ಯಸ್ಯ ಮೇ ರಾಜನ್ ಹೃತದಾರಸ್ಯ ಚ ತ್ವಯಾ ।**
**ಕಿಂ ಮೇ ಜೀವಿತಸಾಮರ್ಥ್ಯಮಿತಿ ವಿದ್ಧಿ ಸಮಾಗತಮ್ ॥೩೪॥**

"ನೀನು ಹೇಳಿದುದು ನಿಜವಣ್ಣ! ನಾನು ಇದುವರೆಗೂ ಪ್ರಾಣವುಳಿಸಿಕೊಳ್ಳಲು ಓಡಿಹೋಗುತ್ತಿದ್ದೆನು. ಆದರೆ ಈಗ ಮಾತ್ರ ನಾನಿನ್ನು ಬದುಕಿದ್ದರೂ ಪ್ರಯೋಜನವಿಲ್ಲವೆಂದು ನಿಶ್ಚಯಿಸಿದವನಾಗಿ ನಿನ್ನೊಡನೆ ಯುದ್ಧಮಾಡಲು ಬಂದಿರುವೆನು. ನಿನ್ನಿಂದ ನಾನು ಹೃತರಾಜ್ಯನೂ (ಅಪಹರಿಸಲ್ಪಟ್ಟ ರಾಜ್ಯವುಳ್ಳವನೂ) ಹೃತದಾರನೂ ಆಗಿರುವೆನು. ರಾಜ್ಯದೊಂದಿಗೆ ನನ್ನ ಹೆಂಡತಿಯನ್ನೂ ನೀನು ಅಪಹರಿಸಿರುವೆ. ಹೃತರಾಜ್ಯನಾದ ನನಗೆ ಜೀವಿಸುವ ಸಾಮರ್ಥ್ಯವೂ ಇಲ್ಲವಾಗಿದೆ. (ಆದುದರಿಂದ ಕಡೆಯವರೆಗೂ ನಿನ್ನೊಡನೆ ಯುದ್ಧಮಾಡಿ ರಾಜ್ಯ ಮತ್ತು ಪತ್ನಿಯನ್ನು ಪಡೆಯಲಾಗದಿದ್ದರೆ ಪ್ರಾಣವನ್ನಾದರೂ ತೊರೆಯುವ ಆಶಯದಿಂದಲೇ ಬಂದಿರುತ್ತೇನೆ.)"

ಯುಧಿಷ್ಠಿರ! ಇವೇ ಮುಂತಾಗಿ ಅಣ್ಣ-ತಮ್ಮಂದಿರು ಪರಸ್ಪರ ಸಂಭಾಷಿಸಿ, ವೀರಗರ್ಜನೆಮಾಡಿ ಶಿಲೆಗಳನ್ನೂ-ತಾಲ-ಶಾಲವೃಕ್ಷಗಳನ್ನೂ ಹಿಡಿದು ಯುದ್ಧಮಾಡಲು ಉಪಕ್ರಮಿಸಿದರು. ಒಬ್ಬರು ಮತ್ತೊಬ್ಬರನ್ನು ನೆಲದ ಮೇಲೆ ಅಪ್ಪಳಿಸುತ್ತಿದ್ದರು. ಛಂಗನೆ ಆಕಾಶಕ್ಕೆ ಹಾರಿ ರಭಸದಿಂದ ಮತ್ತೊಬ್ಬರ ಮೇಲೆ ಬಿದ್ದು ಮುಷ್ಟಿಗಳಿಂದ ಪ್ರಹರಿಸುತ್ತಿದ್ದರು. ಉಗುರುಗಳಿಂದಲೂ, ಕೋರೆದಾಡೆಗಳಿಂದಲೂ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸುತ್ತಿದ್ದರು. ಅದರಿಂದಾಗಿ ಇಬ್ಬರ ಶರೀರಗಳೂ ರಕ್ತದಿಂದ ಸಿಕ್ತವಾದುವು. ಹೂವಿನಿಂದ ತುಂಬಿಹೋಗಿರುವ ಮುತ್ತುಗದ ಮರದಂತೆ ವಾಲಿ-ಸುಗ್ರೀವರು ಕಾಣುತ್ತಿದ್ದರು. ಆದರೆ ಯುಧಿಷ್ಠಿರ! ಅವರಿಬ್ಬರೂ ಯುದ್ಧಮಾಡುತ್ತಿದ್ದರೆ ವಾಲಿಯು

ಯಾರು? ಸುಗ್ರೀವನಾರು?–ಎಂಬುದನ್ನು ಗುರುತಿಸುವ ಸಾಧ್ಯತೆಯೇ ಇರಲಿಲ್ಲ. ಮುಖದಲ್ಲಾಗಲೀ, ಶರೀರದಲ್ಲಾಗಲೀ, ಗಾತ್ರ-ಎತ್ತರಗಳಲ್ಲಾಗಲೀ ಇಬ್ಬರಿಗೂ ಸ್ವಲ್ಪವಾದರೂ ವ್ಯತ್ಯಾಸವೇ ಕಾಣುತ್ತಿರಲಿಲ್ಲ. ರಾಮನಿಗೂ ಅದೊಂದೂ ಸಮಸ್ಯೆಯೇ ಆಗಿಬಿಟ್ಟಿತು. ಆ ಸಮಸ್ಯೆಯನ್ನು ಬಗೆಹರಿಸಲು ಹನುಮಂತನು ಸುಗ್ರೀವನ ಕೊರಳಿಗೆ ಒಂದು ಹೂವಿನಮಾಲೆಯನ್ನು ಹಾಕಿದನು. ಸುಗ್ರೀವನು ಆ ವನಸುಮಮಾಲೆಯಿಂದ–ಮೋಡಗಳ ಮಾಲೆಯನ್ನು ಧರಿಸಿ ವಿರಾಜಿಸುತ್ತಿರುವ ಮಲಯಪರ್ವತದ ಶಿಖರದಂತೆ–ವಿರಾಜಿಸಿದನು.

ಮಾಲೆಯನ್ನು ಧರಿಸಿರುವವನೇ ಸುಗ್ರೀವನೆಂಬುದನ್ನು ಖಚಿತಪಡಿಸಿಕೊಂಡ ಪುರುಷೋತ್ತಮನಾದ ಶ್ರೀರಾಮನು ಧನುಸ್ಸಿಗೆ ಶಿಂಜಿನಿಯನ್ನು ಸೆಳೆದು ಕಟ್ಟಿ, ಧನುಷ್ಟೇಂಕಾರಮಾಡಿದನು. ಯಂತ್ರದಿಂದ ಹೊರಬಂದ ಗುಂಡಿನ ಶಬ್ದದಂತಿದ್ದ ಟೇಂಕಾರಶಬ್ದವನ್ನು ಕೇಳಿ ವಾಲಿಯು ನಡುಗಿದನು. ಆಕರ್ಣಾಂತವಾಗಿ ಸೆಳೆದು ಬಿಟ್ಟ ರಾಮನ ಬಾಣವು ವಾಲಿಯ ಹೃದಯದಲ್ಲಿ ನಾಟಿತು.

ಬಾಣವು ಬಹಳ ಆಳವಾಗಿ ಹೃದಯವನ್ನು ಹೊಗಲಾಗಿ ವೀರನಾದ ವಾಲಿಯು ರಕ್ತವನ್ನು ಕಾರಿದನು. ಅನಂತರದಲ್ಲಿ ವಾಲಿಯು ಲಕ್ಷ್ಮಣನ ಸಮೇತನಾಗಿ ನಿಂತಿದ್ದ ಶ್ರೀರಾಮನನ್ನು ಕಣ್ತುಂಬ ನೋಡಿದನು. ರಾಮನು ಮಾಡಿದ ಆ ಕಾರ್ಯಕ್ಕಾಗಿ ಅವನನ್ನು ನಿಂದನೆಮಾಡುತ್ತಾ ಹೃದಯದ ನೋವನ್ನು ತಾಳಲಾರದೇ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದು ಸ್ವಲ್ಪ ಹೊತ್ತಿನಲ್ಲಿಯೇ ಅಸುವನ್ನು ತೊರೆದನು.

ಚಂದ್ರನ ಮುಖಕ್ಕೆ ಸಮಾನವಾದ ಕಾಂತಿಯನ್ನು ಹೊಂದಿದ್ದ ತನ್ನ ಪತಿಯಾದ ವಾಲಿಯು ಗತಪ್ರಾಣನಾಗಿ ಭೂಮಿಯ ಮೇಲೆ ಬಿದ್ದಿರುವುದನ್ನು ಪ್ರಾಜ್ಞಳಾದ ತಾರೆಯು ನೋಡಿ ಬಹುವಾಗಿ ದುಃಖಿಸಿದಳು.

ವಾಲಿಯ ಉತ್ತರಕ್ರಿಯೆಗಳೆಲ್ಲವೂ ಯಥಾವಿಧಿಯಾಗಿ ನಡೆದ ನಂತರ ಸುಗ್ರೀವನು ತನ್ನ ರಾಜ್ಯವಾದ ಕಿಷ್ಕಿಂಧೆಗೆ ಪುನಃ ರಾಜನಾದುದಲ್ಲದೇ–ಚಂದ್ರವದನೆಯಾದ ತಾರೆಯನ್ನೂ ಪರಿಗ್ರಹಿಸಿದನು. ರಾಮನು ಮಾಲ್ಯ

ವತ್ಪರ್ವತದ ತಪ್ಪಲಿನಲ್ಲಿ ಸುಗ್ರೀವನಿಂದ ಯಥಾಯೋಗ್ಯವಾದ ಸತ್ಕಾರಗಳನ್ನು ಪಡೆಯುತ್ತಾ ನಾಲ್ಕು ತಿಂಗಳುಗಳವರೆಗೆ ಅಲ್ಲಿಯೇ ಸುಖವಾಗಿದ್ದನು.

ಅತ್ತಲಾಗಿ ಕಾಮಾಭಿಭೂತನಾದ ರಾವಣನು ಸೀತೆಯನ್ನು ಅಪಹರಿಸಿ ಕೊಂಡು ಲಂಕಾಪಟ್ಟಣಕ್ಕೆ ಹೋಗಿ ನಂದನವನಕ್ಕೆ ಸದೃಶವಾಗಿದ್ದ ಅಶೋಕ ವನದಲ್ಲಿ ಅವಳನ್ನಿರಿಸಿದನು. ಆ ಅಶೋಕವನವು ಋಷ್ಯಾಶ್ರಮದಂತೆಯೇ ಪ್ರಕಾಶಿಸುತ್ತಿದ್ದಿತು. ವಿಶಾಲಾಕ್ಷಿಯಾದ ಸೀತಾದೇವಿಯು ಯಾವಾಗಲೂ ರಾಮನ ಸ್ಮರಣೆಯನ್ನೇ ಮಾಡುತ್ತಾ, ಕಂದ-ಮೂಲ-ಫಲಗಳನ್ನೇ ತಿಂದು ಜೀವಿಸುತ್ತಾ, ತಪಸ್ವಿಗಳಿಗೆ ಯೋಗ್ಯವಾದ ಬಟ್ಟೆಯನ್ನುಟ್ಟು ಉಪವಾಸಾದಿ ವ್ರತಗಳನ್ನಾಚರಿಸುತ್ತಾ ದಿನೇ ದಿನೇ ಕೃಶಳಾಗುತ್ತಿದ್ದಳು.

ರಾವಣೇಶ್ವರನು ಅನೇಕ ರಾಕ್ಷಸಿಯರನ್ನು ಅವಳ ಕಾವಲಿಗಾಗಿ ನಿಯ ಮಿಸಿದ್ದನು. ಅವರೆಲ್ಲರೂ ಪ್ರಾಸ, ಕತ್ತಿ, ಶೂಲ, ಕೊಡಲಿ, ಮುದ್ಗರ, ಗದೆ– ಮುಂತಾದ ಆಯುಧಗಳನ್ನೂ ಮತ್ತು ಪಂಜುಗಳನ್ನೂ ಹಿಡಿದು ಸರ್ವದಾ ಅವಳನ್ನು ಕಾಯುತ್ತಿದ್ದರು. ಆ ರಾಕ್ಷಸಿಯರಲ್ಲಿ ಎರಡು ಕಣ್ಣುಗಳುಳ್ಳವರೂ, ಮೂರು ಕಣ್ಣುಗಳುಳ್ಳವರೂ, ನೆತ್ತಿಯಲ್ಲಿ ಕಣ್ಣುಳ್ಳವರೂ, ಉದ್ದವಾದ ನಾಲಿಗೆ ಯುಳ್ಳವರೂ, ನಾಲಿಗೆಯೇ ಇಲ್ಲದವರೂ, ಮೂರು ಕುಚಗಳುಳ್ಳವರೂ, ಒಂದೇ ಒಂದು ಕಾಲುಳ್ಳವರೂ, ಮೂರು ಜಟೆಗಳುಳ್ಳವರೂ, ಒಂದೇ ಕಣ್ಣುಳ್ಳವರೂ–ಇದ್ದು ಅವರೆಲ್ಲರೂ ಬಹಳ ವಿಕಾರರೂಪರಾಗಿದ್ದರು. ಅವರ ಕಣ್ಣುಗಳು ಬಹಳ ಪ್ರಕಾಶಮಾನವಾಗಿದ್ದುವು. ಅವರ ಶರೀರದ ಮೇಲಿದ್ದ ಕೂದಲುಗಳು ಒಂಟೆಯ ಕೂದಲಿನಂತೆ ಬಹಳ ಒರಟಾಗಿದ್ದುವು. ಅವ ರೆಲ್ಲರೂ ಸೀತೆಯ ಸುತ್ತಲೂ ಆಯುಧಧಾರಿಣಿಯರಾಗಿ ನಿಂತು ಹಗಲು- ರಾತ್ರಿಗಳೆಂಬ ವಿವೇಚನೆಯೇ ಇಲ್ಲದೇ ಸೀತಾದೇವಿಯನ್ನು ಬಹಳ ಜಾಗರೂ ಕತೆಯಿಂದ ಕಾಯುತ್ತಿದ್ದರು. ಕರ್ಕಶಧ್ವನಿಗಳಿಂದ ಕೂಡಿದ ಆ ಪಿಶಾಚ ಸ್ತ್ರೀಯರು ವಿಶಾಲನೇತ್ರಿಯಾದ ಸೀತಾದೇವಿಯನ್ನು ಕಠಿಣೋಕ್ತಿಗಳಿಂದ ಬೆದರಿಸುತ್ತಿದ್ದರು.

“ನಮ್ಮೊಡೆಯನ ಆಶಯವನ್ನು ಪೂರ್ಣಗೊಳಿಸಲು ಇಚ್ಛಿಸದ ಈ ಸೀತೆಯನ್ನು ತಿಂದುಬಿಡೋಣ. ಇವಳನ್ನು ಚುಚ್ಚಿ-ಚುಚ್ಚಿಯೇ ಸಾಯಿಸಿ ಬಿಡೋಣ. ಇವಳನ್ನು ಎಳ್ಳಿನಂತೆ ಚೂರು-ಚೂರು ಮಾಡಿಬಿಡೋಣ.

ನಮ್ಮೊಡೆಯನನ್ನು ಕ್ಷಣ-ಕ್ಷಣಕ್ಕೂ ತಿರಸ್ಕರಿಸುತ್ತಿರುವ ಇವಳನ್ನು ಇನ್ನೂ ಹೆಚ್ಚು ಕಾಲ ಬದುಕಿರಲು ಬಿಡಬಾರದು.”

ರಾಕ್ಷಸಿಯರ ಆ ಮಾತುಗಳನ್ನು ಕೇಳಿ ಸೀತಾದೇವಿಯು ಒಮ್ಮೆ ಸುದೀರ್ಘವಾಗಿ ನಿಟ್ಟುಸಿರುಬಿಡುವಳು. ತನ್ನ ಪತಿಯಾದ ಶ್ರೀರಾಮಚಂದ್ರ ನನ್ನು ನೆನೆದು ಮತ್ತೊಮ್ಮೆ ಪರಿತಪಿಸುವಳು. ಪದೇ-ಪದೇ ಗರ್ಜನೆಮಾಡಿ ಬೆದರಿಸುತ್ತಿದ್ದ ರಾಕ್ಷಸಿಯರನ್ನು ಕುರಿತು ಸೀತಾದೇವಿಯು ಸ್ವಲ್ಪವಾದರೂ ಉದ್ವೇಗಗೊಳ್ಳದೆ ಗಂಭೀರವಾದ ವಾಣಿಯಿಂದ ಹೇಳಿದಳು :

**ಆರ್ಯಾಃ ಖಾದತ ಮಾಂ ಶೀಘ್ರಂ ನ ಮೇ ಲೋಭೋऽಸ್ತಿ ಜೀವಿತೇ ।**
**ವಿನಾ ತಂ ಪುಣ್ಡರೀಕಾಕ್ಷಂ ನೀಲಕುಞ್ಚಿತಮೂರ್ಧಜಮ್ ॥೫೦॥**

“ಆರ್ಯೆಯರೇ! ನನ್ನನ್ನು ಕೂಡಲೇ ತಿಂದು ಹಾಕಿರಿ. ಸಾವಕಾಶ ಮಾಡಬೇಡಿರಿ. ನನಗೆ ನಿಶ್ಚಯವಾಗಿಯೂ ಈ ನನ್ನ ಪ್ರಾಣಗಳ ಮೇಲೆ ಆಸೆಯಿಲ್ಲ. ನೀಲವಾದ ಗುಂಗುರುತಲೆಗೂದಲುಗಳಿಂದ ಕೂಡಿರುವ ವಿಶಾ ಲಾಕ್ಷನಾದ ಆ ನನ್ನ ರಾಮನನ್ನು ಬಿಟ್ಟು ಜೀವಿಸಿರುವ ಆಸೆಯು ನನಗೆ ಖಂಡಿತವಾಗಿಯೂ ಇರುವುದಿಲ್ಲ. ತಾಳೆಯ ಮರದೊಳಗೆ ಸೇರಿಕೊಂಡಿರುವ ಹೆಣ್ಣುಹಾವಿನೋಪಾದಿಯಲ್ಲಿ–ನಾನು ಅನ್ನಾಹಾರಗಳನ್ನೂ, ಪ್ರಾಣದ ಮೇಲಿನ ಪ್ರೀತಿಯನ್ನೂ ತೊರೆದು ಆ ದೇಹವನ್ನು ಕೃಶಮಾಡಿಬಿಡುತ್ತೇನೆ. ಈ ವಿಷಯವನ್ನು ಮಾತ್ರ ನೀವು ಚೆನ್ನಾಗಿ ಮನದಟ್ಟುಮಾಡಿಕೊಳ್ಳಿರಿ.

**ನ ತ್ವನ್ಯಮಭಿಗಚ್ಛೇಯಂ ಪುಮಾಂಸಂ ರಾಘವಾದೃತೇ ।**
**ಇತಿ ಜಾನೀತ ಸತ್ಯಂ ಮೇ ಕ್ರಿಯತಾಂ ಯದನನ್ತರಮ್ ॥೫೨॥**

ರಘುಕುಲಾವತಂಸನಾದ ರಾಘವನನ್ನು ಬಿಟ್ಟು ನಾನು ಮತ್ತಾರನ್ನೂ ಖಂಡಿತವಾಗಿಯೂ ಪರಿಗ್ರಹಿಸಲಾರೆನು. ನನ್ನೀ ಸತ್ಯಪ್ರತಿಜ್ಞೆಯನ್ನು ನೀವು ಮನದಟ್ಟುಮಾಡಿಕೊಂಡು ನಿಮ್ಮ ಇಚ್ಛೆಯಿದ್ದಂತೆ ಮಾಡಿರಿ.”

ಯುಧಿಷ್ಠಿರ! ಮೃತ್ಯುವಿನ ದವಡೆಯಲ್ಲಿದ್ದೂ ಸಹ ಸುಚರಿತ್ರಳಾದ ಸೀತಾದೇವಿಯು ಹೇಳಿದ ಉದಾತ್ತವಾದ ಆ ಮಾತುಗಳನ್ನು ಕೇಳಿ ಕರ್ಕಶ

ಧ್ವನಿಯುಳ್ಳ ಆ ರಾಕ್ಷಸಿಯರು ತಮ್ಮ ರಾಜನಾದ ರಾವಣೇಶ್ವರನಿಗೆ ಅದನ್ನು ವಿಜ್ಞಾಪಿಸಿಕೊಳ್ಳಲು ಹೊರಟುಹೋದರು.

ಆ ರಾಕ್ಷಸಿಯರೆಲ್ಲರೂ ರಾವಣನ ಸಮೀಪಕ್ಕೆ ಹೊರಟುಹೋದನಂತರ ಉದ್ದೇಶಪೂರ್ವಕವಾಗಿಯೇ ಹಿಂದೆ ಸರಿದು ನಿಂತಿದ್ದ, ಧರ್ಮಜ್ಞಳಾದ, ಪ್ರಿಯವಾದ ಮಾತುಗಳನ್ನಾಡುವ, ತ್ರಿಜಟೆಯೆಂಬ ರಾಕ್ಷಸಿಯು ವೈದೇಹಿಯನ್ನು ಸಾಂತ್ವವಚನಗಳಿಂದ ಸಂತೈಸುತ್ತಾ ಹೇಳಿದಳು :

"ಓ ಸೀತೇ! ನಾನು ನಿನಗೊಂದು ವಿಷಯವನ್ನು ಹೇಳಲಿದ್ದೇನೆ. ನಾನು ಹೇಳುವುದನ್ನು ನಂಬು. ಭಯವನ್ನು ದೂರಮಾಡು. ನನ್ನ ಮೇಲೆ ವಿಶ್ವಾಸವಿಡು. ಮಹಾಮೇಧಾವಿಯಾದ, ವೃದ್ಧನಾದ ಅವಿಂಧ್ಯನೆಂಬ ರಾಕ್ಷಸನೊಬ್ಬನಿರುವನು. ಅವನು ಯಾವಾಗಲೂ ನಿನ್ನ ಪತಿಯಾದ ಶ್ರೀರಾಮನ ಹಿತಚಿಂತನೆಯಲ್ಲಿಯೇ ಆಸಕ್ತನಾಗಿರುವನು. ಅವಿಂಧ್ಯನು ನಿನಗೆ ಹೇಳುವಂತೆ ಕೆಲವು ಮಾತುಗಳನ್ನು ನನ್ನೊಡನೆ ಹೇಳಿಕಳುಹಿಸಿರುವನು. ಅದನ್ನೇ ನಾನು ನಿನಗೆ ಹೇಳುತ್ತೇನೆ.

"ನನ್ನ ಮಾತಿನಂತೆ ನೀನು ಸೀತೆಯ ಬಳಿಗೆ ಹೋಗಿ ಅವಳನ್ನು ಸವಿ ಮಾತುಗಳಿಂದ ಸಮಾಧಾನಗೊಳಿಸು. ಅವಳನ್ನು ಹರ್ಷಯುಕ್ತಳನ್ನಾಗಿ ಮಾಡಿ ಈ ರೀತಿಯಾಗಿ ಹೇಳು : 'ಲಕ್ಷ್ಮಣನಿಂದ ಅನುಸೃತನಾದ, ನಿನ್ನ ಪತಿಯಾದ ಶ್ರೀರಾಮನು ಕುಶಲಿಯಾಗಿರುತ್ತಾನೆ. ನಿನ್ನ ಸಲುವಾಗಿಯೇ ಶ್ರೀರಾಮನು ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಸುಗ್ರೀವನೊಡನೆ ಸಖ್ಯಮಾಡಿಕೊಂಡಿರುತ್ತಾನೆ. ಸಕಲಲೋಕನಿಂದ್ಯನಾದ ರಾವಣನಿಂದ ನಿನಗೆ ಸ್ವಲ್ಪವಾದರೂ ಭಯವಿಲ್ಲ. ಅವನಿಗಾಗಿ ನೀನು ಭಯಪಡುವ ಕಾರಣವಿಲ್ಲ. ಕುಬೇರನ ಪುತ್ರನಾದ ನಲಕೂಬರನ ಶಾಪವಿರುವುದರಿಂದ ರಾವಣನು ನಿನ್ನನ್ನೇನೂ ಮಾಡಲಾರನು.

ಕುಬೇರನ ಸೊಸೆಯಾದ, ನಲಕೂಬರನ ಹೆಂಡತಿಯಾದ ರಂಭೆಯನ್ನು ರಾವಣನೊಮ್ಮೆ ಬಲಾತ್ಕಾರದಿಂದ ಸೆಳೆಯಲು ಹೋದಾಗ ಕುಬೇರನ ಪುತ್ರನಾದ ನಲಕೂಬರನು ರಾವಣನನ್ನು ಶಪಿಸಿದನು. ಆ ಶಾಪದ ಕಾರಣದಿಂದಾಗಿ ರಾವಣೇಶ್ವರನು ಯಾವ ಯುವತಿಯನ್ನೂ ಬಲಾತ್ಕರಿಸಲಾರನು. ಒಲ್ಲದ ಹೆಣ್ಣನ್ನು ಬಲಾತ್ಕರಿಸಿ ಉಪಭೋಗಿಸಲು ಪ್ರಯತ್ನಿಸಿದರೆ ಶಾಪಕ್ಕೆ ಗುರಿ

ಯಾಗಿ ವಿನಾಶಹೊಂದುತ್ತಾನೆ. ರಾವಣನಿಗೆ ಈ ವಿಷಯವು ಮನದಟ್ಟಾಗಿರುವುದರಿಂದಲೇ ನಿನ್ನನ್ನು ಭಯಪಡಿಸಿ ಒಪ್ಪಿಸಲು ಪ್ರಯತ್ನಿಸುತ್ತಿರುವನೇ ಹೊರತು ಬಲಾತ್ಕಾರವಾಗಿ ನಿನ್ನೊಡನೆ ಸಮಾಗಮಕ್ಕೆ ಪ್ರಯತ್ನಿಸುತ್ತಿಲ್ಲ. ಸುಗ್ರೀವನಿಂದ ರಕ್ಷಿತನಾಗಿ ಮತ್ತು ಲಕ್ಷ್ಮಣನಿಂದ ಅನುಸೃತನಾಗಿ ನಿನ್ನ ಪತಿಯು ಇಲ್ಲಿಗೆ ಬಂದು ನಿನ್ನನ್ನು ಕರೆದುಕೊಂಡು ಹೋಗುವನು.' ಸೀತೇ! ಅವಿಂಧ್ಯನು ಈ ರೀತಿ ನಿನಗೆ ಹೇಳಿಕಳುಹಿಸಿದ್ದಾನೆ. ಇದೂ ಅಲ್ಲದೇ ಪುಲಸ್ತ್ಯ ವಂಶಜನಾದ ರಾವಣನ ವಿನಾಶಸೂಚಕವಾದ ಬಹಳ ಭಯಂಕರವಾದ ಕನಸನ್ನು ನಾನು ಕಂಡೆನು. ನಿಶ್ಚಯವಾಗಿಯೂ ನಿಶಾಚರನಾದ ದುಷ್ಟಾತ್ಮನಾದ ರಾವಣೇಶ್ವರನು ಬಹುಕ್ರೂರಿಯು. ಸ್ವಭಾವದಿಂದಲೇ ಅವನು ಬಹಳ ಕ್ರೂರಿಯಾಗಿರುವುದರಿಂದಲೂ ಮತ್ತು ಯಾವಾಗಲೂ ಕ್ರೂರಕರ್ಮಗಳಲ್ಲಿಯೇ ಅವನಿಗೆ ಹೆಚ್ಚು ಆಸಕ್ತಿಯಿರುವುದರಿಂದಲೂ ಅವನು ಸರ್ವರಿಗೂ ಭಯವನ್ನುಂಟುಮಾಡುವವನಾಗಿದ್ದಾನೆ. ವಿಧಿಯ ಚೋದನೆಯಿಂದಲೋ ಎಂಬಂತೆ ಅವನೀಗ ಎಲ್ಲ ದೇವತೆಗಳೊಡನೆ ಸ್ಪರ್ಧೆಯನ್ನಾರಂಭಿಸಿದ್ದಾನೆ. ದೇವತೆಗಳೂ ಪರಾಕ್ರಮದಲ್ಲಿ ತನಗೆ ಸಮಾನರಲ್ಲವೆಂಬ ಅಹಂಕಾರದಿಂದ ಮೆರೆಯುತ್ತಿದ್ದಾನೆ. ನನ್ನ ಕನಸಿನಲ್ಲಿ ಕಂಡ ದೃಶ್ಯಗಳು ರಾವಣನ ವಿನಾಶವು ಸನ್ನಿಹಿತವಾಗಿದೆಯೆಂಬುದಕ್ಕೆ ಸೂಚಕಗಳಾಗಿವೆ.

ರಾವಣನು ಮೈತುಂಬಾ ಎಣ್ಣೆಯನ್ನು ಹಚ್ಚಿಕೊಂಡಿದ್ದಂತೆಯೂ, ತಲೆಯನ್ನು ಮುಂಡನಮಾಡಿಸಿಕೊಂಡಿದ್ದಂತೆಯೂ ನಾನು ನನ್ನ ಕನಸಿನಲ್ಲಿ ಕಂಡೆನು. ಎಣ್ಣೆಯನ್ನು ಹಚ್ಚಿಕೊಂಡೇ ಕೆಸರಿನಲ್ಲಿ ಮುಳುಗಿ ಹೋಗುತ್ತಿದ್ದುದನ್ನೂ ಕಂಡೆನು. ಅವನು ಕತ್ತೆಗಳಿಂದ ಎಳೆಯಲ್ಪಟ್ಟ ರಥದಲ್ಲಿ ಕುಳಿತಿರುವಂತೆ ನಾನು ಕನಸಿನಲ್ಲಿ ನೋಡುತ್ತಿದ್ದೆನು. ಕುಂಭಕರ್ಣಾದಿಗಳೂ ಸಹ ತಲೆಯನ್ನು ಮುಂಡನಮಾಡಿಸಿಕೊಂಡು ನಗ್ನರಾಗಿ ಕುಣಿಯುತ್ತಿದ್ದುದನ್ನು ನಾನು ಕನಸಿನಲ್ಲಿ ಕಂಡೆನು. ಅವರೆಲ್ಲರೂ ಕೆಂಪುಹೂಗಳ ಮಾಲೆಗಳನ್ನು ಧರಿಸಿ, ಕೆಂಪು ಗಂಧವನ್ನು ಶರೀರದಾದ್ಯಂತವಾಗಿ ಲೇಪನಮಾಡಿಕೊಂಡು ದಕ್ಷಿಣಾಭಿಮುಖವಾಗಿ ಪ್ರಯಾಣಮಾಡುತ್ತಿದ್ದರು. ಆದರೆ ವಿಭೀಷಣನೊಬ್ಬನು ಮಾತ್ರ ಕಿರೀಟವನ್ನು ಧಾರಣೆಮಾಡಿದ್ದನು. ಅವನ ತಲೆಯ ಮೇಲೆ ಶ್ವೇತಚ್ಛತ್ರವು ವಿರಾಜಿಸುತ್ತಿದ್ದಿತು. ಬಿಳಿಯ ಹೂಗಳ ಹಾರವನ್ನು ಧರಿಸಿ ವಿಭೀಷಣ

ನೊಬ್ಬನೇ ಶ್ವೇತಪರ್ವತದ ಮೇಲೆ ಕುಳಿತಿದ್ದುದನ್ನು ನಾನು ಕನಸಿನಲ್ಲಿ ನೋಡಿದೆನು. ಅವನ ನಾಲ್ವರು ಮಂತ್ರಿಗಳೂ ಬಿಳಿಯ ಹೂಗಳ ಮಾಲೆಗಳನ್ನು ಧರಿಸಿ ದಿವ್ಯವಾದ ಗಂಧವನ್ನು ಪೂಸಿಕೊಂಡು ಅವನ ಸಮೀಪದಲ್ಲಿ ಕುಳಿತಿದ್ದರು. ವಿಭೀಷಣಾದಿಗಳು ಮಾತ್ರ ಮುಂದೆ ಉಂಟಾಗಲಿರುವ ಸರ್ವವಿನಾಶವೆಂಬ ಮಹಾಭಯದಿಂದ ವಿಮುಕ್ತರಾಗುತ್ತಾರೆಂಬುದನ್ನು ಇದರಿಂದಲೇ ಊಹಿಸಬಹುದಾಗಿದೆ. ರಾಮನ ದಿವ್ಯಾಸ್ತ್ರಗಳಿಂದ ಸಾಗರಯುಕ್ತವಾದ ಈ ಭೂಮಂಡಲವು ತುಂಬಿಹೋಗುತ್ತದೆ. ವಿಜಯಿಯಾದ ನಿನ್ನ ಪತಿಯು ತನ್ನ ಯಶಸ್ಸಿನಿಂದ ಈ ಭೂಮಂಡಲವನ್ನೇ ತುಂಬಿಬಿಡುತ್ತಾನೆ.

ಸತ್ತುಬಿದ್ದಿದ್ದ ಅಪಾರವಾದ ರಾಕ್ಷಸಸೈನ್ಯದ ಅಸ್ಥಿಪಂಜರಗಳ ಮೇಲೆ ನಿಂತು ಮಧುಮಿಶ್ರಿತವಾದ ಪಾಯಸವನ್ನು ಕುಡಿಯುತ್ತಾ ಲಕ್ಷ್ಮಣನು ತನ್ನ ದಿವ್ಯಾಸ್ತ್ರಗಳಿಂದ ಎಲ್ಲ ದಿಕ್ಕುಗಳನ್ನೂ ದಹಿಸುತ್ತಿರುವಂತೆ ನಾನು ಕನಸು ಕಂಡೆನು. ವ್ಯಾಘ್ರವೊಂದರಿಂದ ಸಂರಕ್ಷಿಸಲ್ಪಡುತ್ತಿದ್ದ ನೀನು ರಕ್ತಾನುಲಿಪ್ತಳಾಗಿ ರೋದನಮಾಡುತ್ತಾ ಉತ್ತರದಿಕ್ಕಿನ ಕಡೆಗೆ ಪ್ರಯಾಣಮಾಡುತ್ತಿದ್ದುದನ್ನು ನಾನು ನನ್ನ ಕನಸಿನಲ್ಲಿ ಕಂಡೆನು.

ಸೀತೆ! ನಿನಗೆ ಬಹಳ ಶೀಘ್ರದಲ್ಲಿಯೇ ಹರ್ಷವುಂಟಾಗುತ್ತದೆ. ಸೌಮಿತ್ರಿಯಿಂದೊಡಗೂಡಿದ ಪತಿಯನ್ನು ನೀನು ಬಹುಶೀಘ್ರದಲ್ಲಿಯೇ ಹೊಂದಲಿರುವೆ.”

ಜಿಂಕೆಯ ಮರಿಯ ಕಣ್ಣುಗಳಂತೆ ಥಳ-ಥಳಿಸುವ ಕಣ್ಣುಗಳಿಂದ ಶೋಭಾಯಮಾನಳಾಗಿ ಕಾಣುತ್ತಿದ್ದ ಸೀತಾದೇವಿಯು, ತ್ರಿಜಟೆಯು ಹೇಳಿದ ಮಾತುಗಳನ್ನು ಕೇಳಿ ತಾನು ಪುನಃ ಪತಿಯೊಡನೆ ಸೇರುವೆನೆಂಬ ಆಸೆಯನ್ನು ಹೊಂದಿದಳು. ರಾವಣನಿಗೆ ದೂರಿತ್ತು ಭಯಂಕರಾಕಾರದ ಆ ಪಿಶಾಚ ಸ್ತ್ರೀಯರು ಅಶೋಕವನಕ್ಕೆ ಪುನಃ ಆಗಮಿಸುವ ವೇಳೆಗೆ ಸರಿಯಾಗಿ ಯಥಾ ಪೂರ್ವಸ್ಥಾನಗಳಲ್ಲಿ ಸೀತಾ-ತ್ರಿಜಟೆಯರು ಕುಳಿತಿದ್ದರು. ಸೀತೆಯ ಮುಖ ಭಾವವು ಸ್ವಲ್ಪವೂ ವ್ಯತ್ಯಾಸಹೊಂದಿರಲಿಲ್ಲ.

೨೮೦ನೆಯ ಅಧ್ಯಾಯವು ಮುಗಿಯಿತು.

೨೮೧ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾವಣ-ಸೀತೆಯರ ಸಂವಾದ

ಯುಧಿಷ್ಠಿರ! ಅನಂತರದಲ್ಲಿ ಪತಿಯನ್ನಗಲಿದ ಕಾರಣದಿಂದ ಶೋಕ ತಪ್ತಳಾಗಿಯೂ ಆರ್ತಳಾಗಿಯೂ ಇದ್ದ ಮತ್ತು ಈ ಕಾರಣದಿಂದಲೇ ಬಹಳ ದೀನಳಾಗಿದ್ದ, ಮಲಿನವಾದ ಬಟ್ಟೆಯನ್ನುಟ್ಟಿದ್ದ, ಮಂಗಳಸೂತ್ರವೊಂದನ್ನು ಹೊರತಾಗಿ ಉಳಿದೆಲ್ಲ ಆಭರಣಗಳನ್ನೂ ಪರಿತ್ಯಜಿಸಿದ್ದ, ಯಾವಾಗಲೂ ರಾಮನನ್ನೇ ನೆನೆಯುತ್ತಾ ಗೋಳಿಡುತ್ತಿದ್ದ, ಪತಿವ್ರತೆಯಾದ, ರಾಕ್ಷಸಸ್ತ್ರೀಯ ರಿಂದ ಸೇವಿತಳಾಗಿದ್ದ, ಶಿಲೆಯನ್ನೇ ತನ್ನ ಸುಖಾಸನವನ್ನಾಗಿ ಮಾಡಿಕೊಂಡು ಕುಳಿತಿದ್ದ ಸೀತಾದೇವಿಯನ್ನು ಕಾಮನ ಬಾಣಗಳಿಂದ ಪ್ರಹೃತನಾದ ರಾವಣೇ ಶ್ವರನು ದೂರದಿಂದಲೇ ನೋಡಿದನು ಮತ್ತು ಅನುಸ್ಯೂತವಾದ ಕಾಮಬಾಣ ಗಳ ಆಘಾತವನ್ನು ತಾಳಲಾರದೇ ರಕ್ಷಣೆಗಾಗಿ ಮೊರೆಹೊಗಲೋ ಎಂಬಂತೆ ಸೀತೆಯ ಸಮೀಪಕ್ಕೆ ಧಾವಿಸಿದನು. ದೇವ-ದಾನವ-ಗಂಧರ್ವ-ಯಕ್ಷ-ಕಿಂಪುರುಷರನ್ನೂ ಯುದ್ಧದಲ್ಲಿ ಪರಾಜಯಗೊಳಿಸುವ ಸಾಮರ್ಥ್ಯವುಳ್ಳ ರಾವಣನು ಕೇವಲ ಕಂದರ್ಪನ ಬಾಣಗಳಿಗೆ ಬೆದರಿ ಮತ್ತು ಅದರಿಂದಲೇ ಪೀಡಿತನಾಗಿ ಅಶೋಕವನಕ್ಕೆ ಆಗಮಿಸಿದನು. ಆ ಸಮಯದಲ್ಲಿ ರಾವಣನು ದಿವ್ಯಾಂಬರಧರನಾಗಿಯೂ, ಕರ್ಣಕುಂಡಲಗಳನ್ನು ಧರಿಸಿದವನಾಗಿಯೂ, ವಜ್ರಖಚಿತವಾದ ಕಿರೀಟವನ್ನು ಧರಿಸಿದವನಾಗಿಯೂ ಇದ್ದು ಮೂರ್ತಿ ಮತ್ತಾಗಿ ಬಂದ ವಸಂತಋತುವಿನಂತೆ ವಿರಾಜಿಸಿದನು. ಉದ್ದೇಶಪೂರ್ವಕ ವಾಗಿಯೇ ತನ್ನ ಶರೀರವನ್ನು ಬಹಳ ಅಂದವಾಗಿ ಸಿಂಗರಿಸಿಕೊಂಡಿದ್ದರೂ, ರಾವಣನು, ಇಂದ್ರಲೋಕದ ಕಲ್ಪವೃಕ್ಷವು ಆಹ್ಲಾದಕರವಾಗಿರುವಂತೆ ಆಹ್ಲಾದ ಕರನಾಗಿರಲಿಲ್ಲ.

ಅವನು ಧರಿಸಿದ್ದ ಶೃಂಗಾರವಸ್ತುಗಳು ಬಹಳ ಅನರ್ಘವಾಗಿದ್ದು ನೋಡಲು ನಯನಾನಂದಕರಗಳಾಗಿದ್ದುವು. ಆದರೆ ಅವುಗಳನ್ನು ಧರಿಸಿದ್ದ ರಾವಣನು ಮಾತ್ರ ಬಹುಭಯಂಕರನಾಗಿ ಕಾಣುತ್ತಿದ್ದನು. ಘೋರವಾದ ಶ್ಮಶಾನದಲ್ಲಿ ಸೊಂಪಾಗಿ ಬೆಳೆದಿರುವ ಚೈತ್ಯವೃಕ್ಷದಂತೆ–(ಅಂಜೂರ ಅಥವಾ ಅತ್ತಿ) ಅವನ ಸೌಂದರ್ಯವು ಶೋಭಿಸುತ್ತಿದ್ದಿತು. ರೋಹಿಣೀನಕ್ಷತ್ರದ

ಸಮೀಪಕ್ಕೆ ಬಂದ ಶನೈಶ್ಚರಗ್ರಹದಂತೆ ತನುಮಧ್ಯೆಯಾದ ಸೀತಾದೇವಿಯ ಸಮೀಪಕ್ಕೆ ಭಯಂಕರಾಕಾರನಾದ ರಾವಣನು ಆಗಮಿಸಿದನು. ಪುಷ್ಪಕೇತುವಾದ ಕಾಮದೇವನ ಬಾಣಗಳಿಂದ ಪೀಡಿತನಾದ ರಾವಣೇಶ್ವರನು ಅಬಲೆಯಾದ, ಹೆಣ್ಣು ಜಿಂಕೆಯಂತೆ ಬಹುಭೀತಳಾಗಿದ್ದ, ಸುಂದರವಾದ ನಿತಂಬದಿಂದ ಕೂಡಿದ್ದ ಸೀತಾದೇವಿಯನ್ನು ಕುರಿತು ಹೇಳಿದನು :

"ಸೀತೇ! ನೀನು ಇದುವರೆಗೂ ನಿನ್ನ ಪತಿಯಾದ ರಾಮನನ್ನು ಅನುಗ್ರಹಿಸಿರುವೆ. (ರಾಮನ ಮೇಲಿನ ಪ್ರೀತಿಯಿಂದ ಬಗೆ-ಬಗೆಯ ಕಷ್ಟಗಳನ್ನು ಅನುಭವಿಸಿ ನಿನ್ನ ಪಾತಿವ್ರತ್ಯವನ್ನು ತೋರಿಸಿರುವೆ.) ಇದನ್ನು ಸಾಕುಮಾಡು. ನನ್ನ ಮೇಲೆಯೂ ಸ್ವಲ್ಪ ದಯೆತೋರು. ಪ್ರಸನ್ನಳಾಗು.

ವರಾರೋಹೇ! ನನ್ನನ್ನೂ ಸಂಸೇವಿಸು. ಅನರ್ಘವಾದ ವಸ್ತ್ರಾಭರಣಗಳಿಂದ ನಿನ್ನ ಸುಕೋಮಲವಾದ ಶರೀರವನ್ನು ಸಿಂಗರಿಸು. ನನ್ನ ಅಂತಃಪುರದಲ್ಲಿರುವ ಎಲ್ಲ ಸ್ತ್ರೀಯರಿಗೂ ಮೊದಲನೆಯವಳಾಗು. ನಿನ್ನನ್ನೇ ಇನ್ನು ಮುಂದೆ ನಾನು ಪಟ್ಟಮಹಿಷಿಯೆಂದು ಭಾವಿಸುತ್ತೇನೆ. ನನ್ನ ಅಂತಃಪುರದಲ್ಲಿ ದೇವಕನ್ಯೆಯರೂ, ಅನೇಕಾನೇಕ ಗಂಧರ್ವಕನ್ಯೆಯರೂ, ದಾನವಕನ್ಯೆಯರೂ, ದೈತ್ಯಕನ್ಯೆಯರೂ ಇದ್ದಾರೆ. ಅವರೆಲ್ಲರೂ ನಿನ್ನನ್ನು ಸದಾಕಾಲದಲ್ಲಿಯೂ ಉಪಚರಿಸುತ್ತಾರೆ.

ಇವರುಗಳೇ ಅಲ್ಲದೇ ಹದಿನಾಲ್ಕು ಕೋಟಿ ಪಿಶಾಚರು ನನ್ನ ಆಜ್ಞೆಯನ್ನೇ ನಿರೀಕ್ಷಿಸುತ್ತಾ ಕೈಕಟ್ಟಿ ನಿಂತಿರುತ್ತಾರೆ. ಇಪ್ಪತ್ತೆಂಟು ಕೋಟಿ ನರಭಕ್ಷಕರಾದ, ಭಯಂಕರವಾದ ಕಾರ್ಯಗಳನ್ನು ಮಾಡುವ ರಾಕ್ಷಸರೂ, ನಲವತ್ತೆರಡು ಕೋಟಿ ಯಕ್ಷರೂ ನನ್ನ ಆಜ್ಞೆಯನ್ನು ಶಿರಸಾವಹಿಸಿ ನಿರ್ವಹಿಸುತ್ತಾರೆ. ಯಕ್ಷ-ರಾಕ್ಷಸರಲ್ಲಿ ಕೆಲವರು ಮಾತ್ರವೇ ನನ್ನಣ್ಣನಾದ, ಧನಾಧ್ಯಕ್ಷನಾದ ಕುಬೇರನನ್ನು ಆಶ್ರಯಿಸಿರುತ್ತಾರೆ. ಕುಬೇರನನ್ನು ಸೇವಿಸುವಂತೆಯೇ ಸಾವಿರಾರು ಮಂದಿ ಗಂಧರ್ವಾಪ್ಸರೆಯರು ನನ್ನ ಪಾನಗೃಹದಲ್ಲಿ ತಮ್ಮ ಮಧುರವಾದ ಗಾಯನ ಮತ್ತು ನೇತ್ರಾನಂದಕರವಾದ ನೃತ್ಯಗಳಿಂದ ನನ್ನನ್ನು ಸಂತೋಷಗೊಳಿಸುತ್ತಾರೆ.

ವಿಶ್ರವಸನೆಂಬ ಮುನಿಶ್ರೇಷ್ಠನ ಮಗನು ನಾನು. ನನ್ನ ಭುಜಬಲ-ಪರಾಕ್ರಮಗಳಿಂದ ಐದನೆಯ ಲೋಕಪಾಲಕನೆಂಬ ಕೀರ್ತಿಯನ್ನೂ ನಾನು ಗಳಿಸಿದ್ದೇನೆ.

ಭಾಮಿನಿ! ತ್ರಿದಶೇಶ್ವರನಾದ ಇಂದ್ರನಲ್ಲಿರುವ (ಇಂದ್ರಲೋಕದಲ್ಲಿರುವ) ಅತ್ಯುತ್ಕೃಷ್ಟವಾದ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಾದಿಗಳು ನನ್ನ ಅರಮನೆಯಲ್ಲಿಯೂ ಯಥೇಚ್ಛವಾಗಿ ಸಿಕ್ಕುತ್ತವೆ. ಯಾವುದೋ ದುಷ್ಕರ್ಮ ಫಲದ ಕಾರಣದಿಂದ ನೀನು ಇದುವರೆಗೂ ವನವಾಸದ ಕಷ್ಟವನ್ನನುಭವಿಸ ಬೇಕಾಯಿತು. ನೀನು ಮನಸ್ಸುಮಾಡಿದರೆ ಆ ದುಷ್ಕೃತದ ಫಲವು ಕ್ಷಣ ಮಾತ್ರದಲ್ಲಿ ಪರಿಹಾರವಾಗುತ್ತದೆ. ಆ ದುಷ್ಫಲವು ಪರಿಹಾರವಾಗಲೆಂದೇ ನಾನೂ ಆಶಿಸುತ್ತೇನೆ. ಮಂಡೋದರಿಯಂತೆಯೇ ನೀನೂ ಸಹ ನನ್ನ ಪಟ್ಟ ಮಹಿಷಿಯಾಗು."

ರಾವಣನ ಮಾತುಗಳನ್ನು ಕೇಳಿದ ಸೀತಾದೇವಿಯು ರಾವಣನಿಗೆ ವಿಮುಖಳಾಗಿ ಕುಳಿತು, (ಬೆನ್ನುತಿರುಗಿಸಿ ಕುಳಿತು), ಮಧ್ಯದಲ್ಲಿ ಗರಿಕೆಯ ಹುಲ್ಲನ್ನಿಟ್ಟು ಅದನ್ನೇ ಸಂಬೋಧಿಸಿ ಹೇಳುವ ರೀತಿಯಲ್ಲಿ ರಾವಣನೊಡನೆ ಮಾತನಾಡಲಿಚ್ಛಿಸಿದಳು. ರಾವಣನ ಕರ್ಣಕಠೋರವಾದ ಮಾತುಗಳನ್ನು ಕೇಳಿ ವೈದೇಹಿಯು ನಿರಂತರವಾಗಿ ಅಳುತ್ತಿದ್ದಳು. ತಲೆತಗ್ಗಿಸಿಕೊಂಡು ಅಳುತ್ತಿದ್ದಾಗ ಅವಳ ಕಣ್ಣುಗಳಿಂದ ಧಾರಾಕಾರವಾಗಿ ಹರಿದುಬರುತ್ತಿದ್ದ ಅಶ್ರು ವಾಹಿನಿಯಿಂದ ಸೀತಾದೇವಿಯ ಕುಚದ್ವಯವು ತೋಯ್ದುಹೋಯಿತು. ಪತಿಯನ್ನೇ ದೈವವೆಂದು ಭಾವಿಸಿದ್ದ ಸೀತಾದೇವಿಯು ಕ್ಷುದ್ರನಾದ ರಾವಣನನ್ನು ಕುರಿತು ಹೇಳಿದಳು :

"ರಾವಣೇಶ್ವರ! ನಿಶ್ಚಯವಾಗಿಯೂ ನಾನು ಅಭಾಗ್ಯಳು. ಏಕೆಂದರೆ : ಪದೇ-ಪದೇ ನೀನು ಹೇಳುವ ಕ್ಷುಲ್ಲಕವಾದ ಮಾತುಗಳನ್ನು ನಾನು ನನ್ನ ಕಿವಿ ಗಳಿಂದ ಕೇಳಲೇಬೇಕಾಗಿದೆ. ನೀನಾಡುತ್ತಿರುವ ವಿಷಾದಯುಕ್ತವಾದ ಮಾತು ಗಳನ್ನು ಕೇಳಿಯೂ ಹತಭಾಗ್ಯಳಾದ ನಾನು ಏನು ಮಾಡಲೂ ಅಸಮರ್ಥ ಳಾಗಿದ್ದೇನೆ. ನೀನು ಹೇಳಿದ ಮಾತುಗಳು ಅವಾಚ್ಯವಾದುವುಗಳು ಮತ್ತು ನನ್ನಂತಹವಳು ಕೇಳಲು ಅನರ್ಹವಾದುವುಗಳು. ನಿನಗೆ ಮಂಗಳರೂಪವಾದ

ಸುಖವು ಬೇಕಾಗಿದ್ದರೆ ನನ್ನಿಂದ ನಿನ್ನ ಮನಸ್ಸನ್ನು ಪ್ರತಿನಿವರ್ತಿಸು. ನಿನಗೆ ಮಂಗಳವಾಗಲಿ. ನಾನು ಬೇರೆಯವರ ಭಾರ್ಯೆಯಾಗಿರುತ್ತೇನೆ. ನಾನು ನಿನಗೆ ಖಂಡಿತವಾಗಿಯೂ ಅಲಭ್ಯಳು. ಮೇಲಾಗಿ ನಾನು ಪತಿಯೇ ಪರದೈವವೆಂದು ಭಾವಿಸಿರತಕ್ಕವಳು. ನಿನ್ನ ವಶವರ್ತಿನಿಯಾಗತಕ್ಕವಳಲ್ಲ. ಅಬಲೆಯಾದ, ದಯನೀಯಳಾದ, ಮಾನವಕನ್ಯೆಯಾದ ನಾನು ನಿಶಾಚರನಾದ ನಿನಗೆ ಭಾರ್ಯೆಯಾಗುವುದು ಯುಕ್ತವಲ್ಲ. ಒಲ್ಲದ ಸ್ತ್ರೀಯನ್ನು ಬಲಾತ್ಕಾರಮಾಡಿ ಭಯಪಡಿಸುವುದರಿಂದ ನಿನಗುಂಟಾಗುವ ಸಂತೋಷವಾದರೂ ಏನು? ರಾಕ್ಷಸೇಶ್ವರ!

ನೀನೇ ಹೇಳಿದಂತೆ ನಿನ್ನ ತಂದೆಯು ಮಹರ್ಷಿಯೆಂಬುದನ್ನೂ, ಮಹಾ ತಪಸ್ವಿಯೆಂಬುದನ್ನೂ ನಾನು ಬಲ್ಲೆನು. ವಿಶ್ರವಸನು ಬ್ರಹ್ಮನಿಗೆ ಸಮಾನನಾದ ಬ್ರಾಹ್ಮಣಶ್ರೇಷ್ಠನು. ಬ್ರಹ್ಮಮಾನಸಪುತ್ರನು. ಅಂತಹವನ ಹೊಟ್ಟೆಯಲ್ಲಿ ಹುಟ್ಟಿರುವ ನೀನು ಐದನೆಯ ಲೋಕಪಾಲನೆಂಬ ಹೆಸರಾಂತು ಧರ್ಮವನ್ನೇಕೆ ಪರಿಪಾಲಿಸುತ್ತಿಲ್ಲ? ನಿನ್ನಣ್ಣನಾದ, ರಾಜರಾಜನಾದ, ಮಹೇಶ್ವರನ ಸಖನಾದ, ಧನೇಶ್ವರನನ್ನು ತಿರಸ್ಕಾರಮಾಡುವ (ಅಣ್ಣನೆಂದು ಹೇಳಿಕೊಳ್ಳುವ) ನೀನು ನಿನ್ನ ಈ ಕುತ್ಸಿತಕಾರ್ಯಕ್ಕೆ ನಾಚುತ್ತಿಲ್ಲವೇಕೆ?"–ಹೀಗೆಂದು ಹೇಳುತ್ತಾ ಸೀತಾದೇವಿಯು ಗಟ್ಟಿಯಾಗಿ ಅಳತೊಡಗಿದಳು. ಅವಳ ವಕ್ಷಃಸ್ಥಲವು ಮತ್ತು ಕಂಠವು ಉದ್ವೇಗದಿಂದ ಕಂಪಿಸುತ್ತಿದ್ದುವು. ಸೀರೆಯ ಸೆರಗಿನಿಂದ ಮುಖವನ್ನು ಮರೆಮಾಡಿಕೊಂಡು ಭೂಮಿಯನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಾ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಅಳುತ್ತಿದ್ದಾಗ ಸೀತೆಯು ಮಾಡುತ್ತಿದ್ದ ಶಿರಃಕಂಪನದಿಂದ, ಬಂಧಿತವಾಗಿದ್ದ ಅವಳ ಕೇಶಪಾಶವು ಹೊಯ್ದಾಡುತ್ತಾ ಕಪ್ಪಾದ ಕಾಳಸರ್ಪದಂತೆ ವಿರಾಜಿಸುತ್ತಿದ್ದಿತು.

ಯುಧಿಷ್ಠಿರ! ಸೀತೆಯು ಈ ರೀತಿಯಾಗಿ ರಾವಣನನ್ನು ಧಿಕ್ಕರಿಸಿ ಅತಿ ನಿಷ್ಠುರವಾದ ಮಾತುಗಳನ್ನಾಡಿದರೂ, ಅವನನ್ನು ಸಂಪೂರ್ಣವಾಗಿ ತಿರಸ್ಕರಿಸಿದರೂ, ದುರ್ಮತಿಯಾದ ರಾವಣನು ಪುನಃ ಸೀತೆಯನ್ನು ಕುರಿತು ಹೀಗೆಂದು ಹೇಳಿದನು : "ಸೀತೇ! ಕಾಮದೇವನು ತನ್ನ ಬಾಣಗಳಿಂದ ನನ್ನನ್ನು ಸುಟ್ಟು ಹಾಕಿದರೂ ಸರಿಯೇ–ನಾನು ಮಾತ್ರ ಒಲ್ಲದ ನಿನ್ನನ್ನು ಬಲಾತ್ಕಾರದಿಂದ ಉಪಭೋಗಿಸಲು ಇಚ್ಛಿಸುವುದಿಲ್ಲ. ನಗುಮುಖದ ಸೀತೆಯೇ! ನಾನು

ನಿನ್ನ ಮೌಢ್ಯಕ್ಕೆ ಏನು ತಾನೇ ಮಾಡಲಿ? ಮನುಷ್ಯಮಾತ್ರನಾದ, ನಮ್ಮಂಥ ರಾಕ್ಷಸರಿಗೆ ಆಹಾರವಾಗಲು ಯೋಗ್ಯನಾದ ಹುಲುಮನುಜನಾದ ಆ ರಾಮನನ್ನೇ ನೀನು ಬಹುವಾಗಿ ಪ್ರೀತಿಸುತ್ತಿರುವೆ."

ಯುಧಿಷ್ಠಿರ! ಹೀಗೆಂಬುದಾಗಿ ರಾವಣನು, ಅನಿಂದ್ಯಳಾದ ಅಕಳಂಕಳಾದ ಸೀತಾದೇವಿಗೆ ಹೇಳಿ ಅದೃಶ್ಯನಾಗಿ ಮನಬಂದೆಡೆಗೆ ಹೊರಟುಹೋದನು.

ರಾಕ್ಷಸಸ್ತ್ರೀಯರಿಂದ ಪರಿವೃತಳಾಗಿ ಶೋಕಾಭಿಭೂತಳಾಗಿದ್ದ ಸೀತಾದೇವಿಯು ತ್ರಿಜಟೆಯಿಂದ ಸಂಸೇವಿತಳಾಗಿ ಆ ಅಶೋಕವನದಲ್ಲಿಯೇ ಕಾಲ ಕಳೆಯುತ್ತಿದ್ದಳು."

೨೮೧ನೆಯ ಅಧ್ಯಾಯವು ಮುಗಿಯಿತು.

೨೮೨ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಸುಗ್ರೀವನ ಮೇಲೆ ರಾಮನ ಕೋಪ: ಸೀತಾನ್ವೇಷಣಕ್ಕಾಗಿ ಸುಗ್ರೀವನು ವಾನರಸೈನ್ಯವನ್ನು ಕಳುಹಿಸಿಕೊಟ್ಟುದು : ಹನುಮಂತನು ಲಂಕೆಯಿಂದ ಹಿಂದಿರುಗಿ ಸೀತಾದೇವಿಯ ವೃತ್ತಾಂತವನ್ನು ಹೇಳಿದುದು

ಮಾರ್ಕಂಡೇಯಮಹರ್ಷಿಗಳು ಯುಧಿಷ್ಠಿರನಿಗೆ ಹೇಳುತ್ತಾರೆ :

"ಯುಧಿಷ್ಠಿರ! ಲಕ್ಷ್ಮಣಸಹಿತನಾದ ರಾಮನು ಸುಗ್ರೀವನಿಂದ ಸತ್ಕೃತನಾಗಿ ಮಾಲ್ಯವತ್ಪರ್ವತದ ತಪ್ಪಲಿನಲ್ಲಿ ಕಾಲಕಳೆಯುತ್ತಿದ್ದನು. ಅಲ್ಲಿ ತಂಗಿದ್ದ ಸಮಯದಲ್ಲಿ ರಾಮನು ಪ್ರತಿನಿತ್ಯವೂ ರಾತ್ರಿಯ ವೇಳೆಯಲ್ಲಿ ಆಕಾಶವನ್ನೇ ದಿಟ್ಟಿಸಿನೋಡುತ್ತಿದ್ದನು. ಆಕಾಶವು ನಿರ್ಮಲವಾಗಿರುತ್ತಿತ್ತು. ನಕ್ಷತ್ರ-ಗ್ರಹ-ತಾರೆಗಳು ಮಿನುಗುತ್ತಿದ್ದುವು. ಪೂರ್ಣಚಂದ್ರನ ಪ್ರಶಾಂತವಾದ ಬೆಳದಿಂಗಳು ಸುತ್ತಲೂ ಹರಡಿದ್ದಿತು. ಪಂಪಾಸರೋವರದಲ್ಲಿದ್ದ ಕನ್ನೈದಿಲೆ ಪುಷ್ಪಗಳ ಮೇಲೆಯೂ, ವನಸುಮಗಳ ಮೇಲೆಯೂ ಬೀಸಿದ ಸುವಾಸಿತವಾದ ತಂಗಾಳಿಯು ರಾಮನನ್ನು ಎಚ್ಚರಗೊಳಿಸಿತು. (ಶರತ್ಕಾಲವು ಬಂದಿರುವುದೆಂದೂ ಮುಂದಿನ ಕಾರ್ಯವನ್ನು ಮಾಡಬೇಕೆಂದೂ ಸೂಚಿಸಿತು.)

ತನ್ನ ಪ್ರೇಯಸಿಯಾದ ಸೀತೆಯು ರಾವಣನ ಅಧೀನದಲ್ಲಿರುವುದನ್ನು

ನೆನೆದು ರಾಮನಿಗೆ ಬಹಳ ಸಂಕಟವಾಯಿತು. ಪ್ರಾತಃಕಾಲವಾದೊಡನೆಯೇ ಧರ್ಮಾತ್ಮನಾದ ರಾಮನು ಲಕ್ಷ್ಮಣನನ್ನು ಕುರಿತು ಹೇಳಿದನು :

"ಲಕ್ಷ್ಮಣ! ಈ ಕೂಡಲೇ ಕಿಷ್ಕಿಂಧೆಗೆ ಹೋಗಿ ಆ ಮೂಢನ ಇಂಗಿತ ವೇನೆಂಬುದನ್ನು ತಿಳಿದು ಬಾ. ಕಪೀಶ್ವರನಾದ ಸುಗ್ರೀವನು ನಮ್ಮನ್ನಿಲ್ಲಿ ಬಿಟ್ಟು ತಾನು ಸ್ವೇಚ್ಛೆಯಿಂದ ಸುಖೋಪಭೋಗಗಳಲ್ಲಿ ಆಸಕ್ತನಾಗಿಬಿಟ್ಟಿದ್ದಾನೆ. ಅವನು ಕೇವಲ ಸ್ವಾರ್ಥಿ. ತನ್ನ ಕಾರ್ಯವಾದೊಡನೆಯೇ ಅವನು ನಮ್ಮ ಕಾರ್ಯದ ವಿಷಯವನ್ನೇ ಮರೆತು ಪ್ರಮತ್ತನಾಗಿದ್ದಾನೆ. ವಾನರ ಕುಲಾಧಮನಾದ ಪರಮಮೂಢನಾದ ಅವನನ್ನು ಅವನ ನಿಜಸ್ವಭಾವ ವೇನೆಂಬುದನ್ನು ತಿಳಿಯದೆ ಕಿಷ್ಕಿಂಧೆಗೆ ರಾಜನನ್ನಾಗಿ ಮಾಡಿದೆನು. ಅವನನ್ನು ಸರ್ವವಾನರರೂ, ಗೋಪುಚ್ಛರೂ, ಋಕ್ಷರೂ ಯಾವಾಗಲೂ ಸೇವಿಸು ತ್ತಾರೆ. ಕಿಷ್ಕಿಂಧೆಯ ಉಪವನದಲ್ಲಿ ಅಂದು ನಾನು ನಿನ್ನೊಡನೆ ಯಾವನಿ ಗೋಸ್ಕರ ವಾಲಿಯನ್ನು ನಿಗ್ರಹಿಸಿದೆನೋ ಆ ಸುಗ್ರೀವನನ್ನು ಕೃತಘ್ನನೆಂದೇ ಭಾವಿಸಿದ್ದೇನೆ. ನಾವು ಮಾಡಿದ ಉಪಕಾರಸ್ಮರಣೆಯು ಅವನಿಗೆ ಸ್ವಲ್ಪ ವಾದರೂ ಇಲ್ಲ. ನಾನಿಲ್ಲಿ ವಿರಹವೇದನೆಯಿಂದ ಸಂಕಟಪಡುತ್ತಿರುವೆನೆಂಬು ದರ ಅರಿವು ಆ ಮೂಢನಿಗೆ ಸ್ವಲ್ಪವಾದರೂ ಇರುವುದಿಲ್ಲ. ಪರಸ್ಪರವಾಗಿ ಮಾಡಿಕೊಂಡಿರುವ ನಿಬಂಧನೆಯನ್ನು ಪರಿಪಾಲಿಸಬೇಕೆಂಬ ಪರಿಜ್ಞಾನವೂ ಸಹ ಅವನಿಗಿರುವುದಿಲ್ಲ. ಉಪಕಾರಮಾಡಿದ ನನ್ನನ್ನು ಅಲ್ಪಬುದ್ಧಿಯ ಕಾರಣ ದಿಂದ ಆ ಸುಗ್ರೀವನು ಅನಾದರಣೆಮಾಡಿದ್ದಾನೆ. ಇದು ನಿಶ್ಚಯ. ಅವನು ತನ್ನ ಕರ್ತವ್ಯವೇನೆಂಬುದನ್ನು ಮರೆತು ಸುಖಲೋಲುಪತೆಯಿಂದಲೇ ತನ್ನ ಜೀವನವನ್ನು ಮುಂದುವರಿಸಲು ಇಚ್ಛಿಸಿದನಾದರೆ, ವಾಲಿಯನ್ನು ನಾನು ಕಳುಹಿಸಿದಂತೆಯೇ–ಸರ್ವಭೂತಗಳೂ ಅಂತ್ಯದಲ್ಲಿ ಸೇರಬೇಕಾದ ಸ್ಥಾನಕ್ಕೆ– ಆ ಮೂಢನನ್ನೂ ಕಳುಹಿಸಿಬಿಡು. ಅವನು ನಮ್ಮ ವಿಷಯದಲ್ಲಿ ಸ್ವಲ್ಪ ವಾದರೂ ಅನಾದರಣೆಯನ್ನು ತೋರಿಸಿದರೆ ಆ ನಿಮಿಷದಲ್ಲಿಯೇ ಅವನನ್ನು ಸಂಹರಿಸು. ಒಂದು ವೇಳೆ ಕಾರ್ಯಪ್ರವೃತ್ತನಾಗಿರುವನೆಂದು ನಿನಗೆ ತಿಳಿದು ಬಂದರೆ ವಾನರಶ್ರೇಷ್ಠನಾದ ಸುಗ್ರೀವನನ್ನು ಒಡನೆಯೇ ಇಲ್ಲಿಗೆ ಕರೆದು ಕೊಂಡು ಬಾ." (ಕೆಲವು ಸನ್ನಿವೇಶಗಳಲ್ಲಿ ಮಾನವನ ಮನಸ್ಸು ಉದ್ವಿಗ್ನ

ವಾಗುವುದು ಸಹಜ. ಮಹಾತಪಸ್ವಿಗಳಾದ ಮಹರ್ಷಿಗಳ ಮನಸ್ಸೂ ಸಹ ಕೆಲವು ಸಮಯಗಳಲ್ಲಿ ಋತುಧರ್ಮವನ್ನನುಸರಿಸಿ ಉದ್ವಿಗ್ನವಾದ ಅನೇಕ ಕಥೆಗಳನ್ನು ನಾವು ಕೇಳಿದ್ದೇವೆ. ಋತುಧರ್ಮಾನುಸಾರವಾಗಿ ರಾಮನ ಮನಸ್ಸು ಉದ್ವಿಗ್ನವಾದುದೂ ಸ್ವಾಭಾವಿಕವಾಗಿಯೇ ಇದೆ. ತನ್ನ ಪ್ರೇಯಸಿಯು ಪರಪುರುಷನ ಅಧೀನದಲ್ಲಿರುವುದನ್ನು ನೆನೆದಾಗ ಎಂತಹವನ ಮನಸ್ಸೂ ಅಲ್ಲೋಲ-ಕಲ್ಲೋಲವಾಗುತ್ತದೆ. ಸೀತೆಯನ್ನು ಕರೆತರುವೆನೆಂದು ಸುಗ್ರೀವನು ಪ್ರತಿಜ್ಞೆಮಾಡಿ ಅನೇಕ ದಿನಗಳು ಕಳೆದುಹೋಗಿವೆ. ಅವನು ಸೀತಾನ್ವೇಷಣದ ಕಾರ್ಯವನ್ನು ಆರಂಭಿಸಿರುವನೇ–ಇಲ್ಲವೇ? ಎಂಬುದು ರಾಮನಿಗೆ ತಿಳಿಯದು. ಒಂದು ವೇಳೆ ಆರಂಭಿಸಿದ್ದರೆ ಫಲಿತಾಂಶವೇನೆಂಬುದೂ ರಾಮನಿಗೆ ತಿಳಿದಿಲ್ಲ. ಇಂತಹ ಸನ್ನಿವೇಶದಲ್ಲಿ ರಾಮನಾಡಿದ ಮಾತುಗಳು ಸಹಜವಾಗಿವೆ.)

ಅಣ್ಣನಾದ ಶ್ರೀರಾಮನು ಹೀಗೆಂದು ಹೇಳಿದೊಡನೆಯೇ ಗುರುವಿನ ಆಜ್ಞೆಯ ನಿರ್ವಹಣೆಯಲ್ಲಿಯೇ ನಿರತನಾದ ಲಕ್ಷ್ಮಣನು ಸುಂದರವಾದ ಧನುಸ್ಸನ್ನೂ ಬತ್ತಳಿಕೆಯನ್ನೂ ಹೆಗಲಿಗೇರಿಸಿಕೊಂಡು ಬಹುಶೀಘ್ರವಾಗಿ ಕಿಷ್ಕಿಂಧಾಪಟ್ಟಣಕ್ಕೆ ಅಭಿಮುಖವಾಗಿ ಹೊರಟನು. ಮಹಾದ್ವಾರದ ಬಳಿಗೆ ಲಕ್ಷ್ಮಣನು ಸೇರುತ್ತಲೇ ಅಲ್ಲಿದ್ದ ದ್ವಾರಪಾಲಕರು ಅವನ ಮುಖಭಾವವನ್ನು ವೀಕ್ಷಿಸಿ ಮತ್ತು ತಮ್ಮ ರಾಜನ ಗೆಳೆಯನೆಂಬುದನ್ನೂ ನೆನೆದೂ ಅವನನ್ನು ತಡೆಯಲಿಲ್ಲ. ಲಕ್ಷ್ಮಣನು ನೇರವಾಗಿ ಸುಗ್ರೀವನ ಅರಮನೆಯ ಬಾಗಿಲಿಗೆ ತೆರಳಿದನು. ಲಕ್ಷ್ಮಣನನ್ನು ನೋಡಿದೊಡನೆಯೇ ಅವನು ಕುಪಿತನಾಗಿರುವನೆಂದು ಸುಗ್ರೀವನಿಗೂ ತಿಳಿಯಿತು. ಅವನು ಒಡನೆಯೇ ತಾರಾಸಮೇತನಾಗಿ ಬಂದು ಲಕ್ಷ್ಮಣನನ್ನು ಆದರದಿಂದ ಸ್ವಾಗತಿಸಿ, ಕಂದ-ಮೂಲ-ಫಲಗಳನ್ನು ತಿನ್ನಲುಕೊಟ್ಟು, ವಿನೀತನಾಗಿ ಲಕ್ಷ್ಮಣನಿಗೆ ಸ್ವಲ್ಪದೂರದಲ್ಲಿದ್ದ ಆಸನದಲ್ಲಿ ಭಾರ್ಯೆಯೊಡನೆ ಕುಳಿತುಕೊಂಡನು. ಭಯವೆಂಬುದನ್ನೇ ಅರಿಯದ ಲಕ್ಷ್ಮಣನು ರಾಮನು ಹೇಳಿದ್ದ ಮಾತುಗಳೆಲ್ಲವನ್ನೂ ಯಥಾವತ್ತಾಗಿ ಸುಗ್ರೀವನಿಗೆ ಹೇಳಿದನು. ಲಕ್ಷ್ಮಣನಾಡಿದ ಮಾತುಗಳೆಲ್ಲವನ್ನೂ ಕೇಳಿದ ನಂತರ ಕಪೀಶ್ವರನಾದ ಸುಗ್ರೀವನು ಬಹುವಿನೀತನಾಗಿ ಭಾರ್ಯಾ-ಬಂಧು

ಗಳೊಡನೆ ಕೈಜೋಡಿಸಿ ನಿಂತು ನರಕುಂಜರನಾದ ಲಕ್ಷ್ಮಣನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಲಕ್ಷ್ಮಣ! ನಾನು ಮೂಢನೂ ಅಲ್ಲ ; ಕೃತಘ್ನನೂ ಅಲ್ಲ ; ದಯಾ ರಹಿತನೂ ಅಲ್ಲ. ಸೀತೆಯನ್ನು ಹುಡುಕುವ ಸಲುವಾಗಿ ನಾನು ಇದುವರೆಗೆ ಮಾಡಿರುವ ಪ್ರಯತ್ನಗಳೆಲ್ಲವನ್ನೂ ವಿವರಿಸಿ ಹೇಳುವೆನು, ಕೇಳು. ಸೀತೆ ಯನ್ನು ಹುಡುಕಿಕೊಂಡು ಬರುವ ಸಲುವಾಗಿ ವಿನೀತರಾದ ಕಪಿಶ್ರೇಷ್ಠರನ್ನು ಎಲ್ಲ ದಿಕ್ಕುಗಳಿಗೂ ಕಳುಹಿಸಿಕೊಟ್ಟಿರುತ್ತೇನೆ. ಒಂದು ಮಾಸದ ಅವಧಿ ಯೊಳಗಾಗಿ ಕಿಷ್ಕಿಂಧೆಗೆ ಪುನರಾಗಮಿಸಬೇಕೆಂದು ಎಲ್ಲರಿಗೂ ಆಜ್ಞೆಮಾಡಿರು ತ್ತೇನೆ. ಅವರು ಆಯಾ ದಿಕ್ಕುಗಳಲ್ಲಿರುವ ನಗರ-ಗ್ರಾಮಗಳಲ್ಲಿಯೂ, ಗಿರಿ-ಪರ್ವತ-ದುರ್ಗಗಳಲ್ಲಿಯೂ, ಅರಣ್ಯಗಳಲ್ಲಿಯೂ ಸೀತೆಯನ್ನು ಹುಡುಕ ಬೇಕು. ಯಾವ ಪ್ರದೇಶವನ್ನೂ ಅವರು ಹುಡುಕದೇ ಬಿಟ್ಟುಬರುವಂತಿಲ್ಲ. ಈ ಕಾರ್ಯವನ್ನವರು ಒಂದು ಮಾಸದ ಅವಧಿಯಲ್ಲಿ ಮಾಡಿ ಮುಗಿಸಬೇಕಾ ಗಿದೆ. ಮಾಸದ ಅವಧಿಯು ಮುಗಿಯಲು ಇನ್ನು ಕೇವಲ ಐದು ರಾತ್ರಿಗಳು ಉಳಿದಿವೆ. ಐದು ದಿನಗಳು ಕಳೆದನಂತರದಲ್ಲಿ ರಾಮನೊಡನೆ ಕುಳಿತು ನೀನು ಅತ್ಯಂತ ಪ್ರಿಯಕರವಾದ ವಾರ್ತೆಯನ್ನು ಕೇಳಲಿರುವೆ. (ಏಕೆಂದರೆ : ನಾನು ಕಳುಹಿಸಿರುವ ವಾನರಶ್ರೇಷ್ಠರು ಕೃತಕೃತ್ಯರಾಗದೇ ಹಿಂದಿರುಗುವ ಸಾಧ್ಯತೆಯೇ ಇಲ್ಲ. ಅವರು ಸೀತೆಯ ವಿಷಯವನ್ನು ಸಂಪೂರ್ಣವಾಗಿ ತಿಳಿದುಕೊಂಡೇ ಬರುತ್ತಾರೆ.)" ಸುಗ್ರೀವನು ಹೀಗೆಂದು ಹೇಳಿದ ನಂತರ ಲಕ್ಷ್ಮಣನು ಶಾಂತನಾಗಿ ಸುಗ್ರೀವನನ್ನು ಪ್ರತಿಪೂಜಿಸಿ ಅವನನ್ನೂ ಜೊತೆಯಲ್ಲಿಯೇ ಕರೆದುಕೊಂಡು ಮಾಲ್ಯವತ್ಪರ್ವತದ ತಪ್ಪಲಿಗೆ ಆಗಮಿಸಿದನು.

ಲಕ್ಷ್ಮಣನು ರಾಮನ ಸಮೀಪಕ್ಕೆ ಆಗಮಿಸಿ ಸೀತೆಯನ್ನು ಹುಡುಕುವ ಕಾರ್ಯವು ಪ್ರಾರಂಭವಾಗಿರುವುದೆಂಬ ಶುಭವಾರ್ತೆಯನ್ನು ರಾಮನಿಗೆ ಹೇಳಿದನು. ಆ ವೇಳೆಗೆ ಸರಿಯಾಗಿ ಉತ್ತರ, ಪೂರ್ವ, ಪಶ್ಚಿಮದಿಕ್ಕುಗಳಿಗೆ ಸೀತೆಯನ್ನು ಹುಡುಕಲು ಹೋಗಿದ್ದ ಸಾವಿರಾರು ವಾನರಪುಂಗವರು ಆ ಮೂರು ದಿಕ್ಕುಗಳಲ್ಲಿಯೂ ಸೀತೆಯನ್ನು ಕಾಣದೇ ಹಿಂದಿರುಗಿಬಂದರು. ಆದರೆ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದ್ದವರಾರೂ ಇನ್ನೂ ಆಗಮಿಸಿರಲಿಲ್ಲ.

ಪೂರ್ವ-ಪಶ್ಚಿಮ-ಉತ್ತರದಿಕ್ಕುಗಳಿಂದ ಆಗಮಿಸಿದ ವಾನರಪುಂಗವರು ತಾವು ಸಮುದ್ರಾಂತವಾದ ಭೂಮಿಯ ಎಲ್ಲೆಡೆಗಳಲ್ಲಿಯೂ ಹುಡುಕಿದುದಾಗಿಯೂ, ಆದರೆ ಯಾವ ಪ್ರದೇಶದಲ್ಲಿಯೂ ಸೀತೆಯನ್ನಾಗಲೀ, ರಾವಣನನ್ನಾಗಲೀ ತಾವು ಕಾಣಲಿಲ್ಲವೆಂದೂ ರಾಮನಿಗೆ ನಿವೇದಿಸಿದರು. ಮೂರು ದಿಕ್ಕುಗಳಲ್ಲಿಯೂ ಸೀತೆಯು ಸಿಕ್ಕಲಿಲ್ಲವೆಂಬ ವಾರ್ತೆಯನ್ನು ಕೇಳಿ ರಾಮನು ಬಹುದುಃಖಿತನಾದರೂ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿರುವ ಕಪಿಗಳಿಂದಾದರೂ ನನಗೆ ಶುಭವಾರ್ತೆಯು ಬರಬಹುದೆಂದಾಶಿಸಿ ತನ್ನ ಪ್ರಾಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದನು.

ಎರಡು ಮಾಸಗಳು ಕಳೆದನಂತರದಲ್ಲಿ ಕೆಲವು ವಾನರಪುಂಗವರು ಸುಗ್ರೀವನನ್ನು ಬಹಳ ಅವಸರವಾಗಿ ನೋಡಲು ಬಂದವರಾಗಿ ಅವನನ್ನು ಕುರಿತು ಅತ್ಯುದ್ವೇಗದಿಂದ ಈ ಮಾತುಗಳನ್ನಾಡಿದರು :

"ಮಹಾರಾಜ! ನೀನು ದಕ್ಷಿಣದಿಕ್ಕಿಗೆ ಕಳುಹಿಸಿದ ಹನುಮಂತ, ವಾಲಿಯ ಮಗನಾದ ಅಂಗದ, ಜಾಂಬವಂತ–ಇವರೆಲ್ಲರೂ ಪುನರಾಗಮಿಸಿದ್ದಾರೆ. ಆದರೆ ಅವರು ನೇರವಾಗಿ ನಿನ್ನ ಬಳಿಗೆ ಬಾರದೆ ಹಾದಿಯಲ್ಲಿರುವ ಮಧುವನವನ್ನು ಪ್ರವೇಶಿಸಿ, ಅಲ್ಲಿರುವ ಮಧುವನ್ನು ಯಥೇಚ್ಛವಾಗಿ ಪಾನಮಾಡುತ್ತಿರುವರಲ್ಲದೇ ಆ ಸುಂದರವನವನ್ನೂ ಹಾಳುಮಾಡುತ್ತಿದ್ದಾರೆ. ಆ ವನವನ್ನು ವಾಲಿಯು ಬಹಳ ಜಾಗರೂಕತೆಯಿಂದ ನೋಡಿಕೊಳ್ಳುತ್ತಿ ದ್ದನು. ಅವನ ನಂತರದಲ್ಲಿ ನೀನೂ ಸಹ ಆ ವನದ ರಕ್ಷಣೆಗೆ ನಮ್ಮನ್ನು ನಿಯಮಿಸಿರುವೆ. ಆ ವನವು ನಿನಗೆ ಬಹುಪ್ರಿಯವೆಂಬುದು ಅವರೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಹೀಗಿದ್ದರೂ ಸಹ ಅವರು ನಮ್ಮನ್ನು ಪ್ರಹರಿಸಿ ಸ್ವೇಚ್ಛೆಯಿಂದ ವರ್ತಿಸುತ್ತಿದ್ದಾರೆ."

ತನ್ನ ಸೇವಕರ ಮಾತುಗಳನ್ನು ಕೇಳಿ ದಕ್ಷಿಣದಿಕ್ಕಿಗೆ ಸೀತೆಯನ್ನು ಹುಡುಕಲು ಪ್ರಯಾಣಮಾಡಿದ ವಾನರಪುಂಗವರು ಕೃತಕೃತ್ಯರಾಗಿಯೇ ಬಂದಿರುವರೆಂದು ಸುಗ್ರೀವನು ನಿರ್ಧರಿಸಿದನು. ಆ ಸ್ವೇಚ್ಛಾವರ್ತನೆಯು ಕೃತಕೃತ್ಯರಾದ ಭೃತ್ಯರಿಂದಲೇ ಮಾಡಲ್ಪಟ್ಟಿದೆಯೆಂದು ನಿಶ್ಚಯಿಸಿದ, ಮೇಧಾವಿಯಾದ ಸುಗ್ರೀವನು ಅದೇ ವಿಷಯವನ್ನು ರಾಮನಿಗೂ ಹೇಳಿದನು.

ರಾಮನೂ ಸಹ ಆ ವಾರ್ತೆಯಿಂದ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿರುವ ವಾನರಪುಂಗವರು ಮೈಥಿಲಿಯನ್ನು ಕಂಡೇ ಬಂದಿರಬಹುದೆಂದು ಊಹಿಸಿದನು. ಹನುಮಂತ ಮತ್ತು ಅಂಗದಾದಿಗಳು ಮಧುವನದಲ್ಲಿ ಸ್ವಲ್ಪ ಕಾಲ ವಿಶ್ರಾಂತಿಯನ್ನು ಪಡೆದವರಾಗಿ ರಾಮ-ಲಕ್ಷ್ಮಣರೊಡನಿದ್ದ ತಮ್ಮ ರಾಜ ನಾದ ಸುಗ್ರೀವನ ಸನ್ನಿಧಿಗೆ ಆಗಮಿಸಿದರು. ಹನುಮಂತನ ನಡಿಗೆ ಮತ್ತು ಅವನ ಮುಖಭಾವಗಳನ್ನು ನೋಡಿದ ಶ್ರೀರಾಮನಿಗೆ ಹನುಮಂತನೇ ಸೀತೆಯನ್ನು ನೋಡಿಬಂದಿರುವನೆಂಬ ವಿಶ್ವಾಸವುಂಟಾಯಿತು. ವಿಜಯಿಗಳಾಗಿ ಬಂದಿದ್ದ, ಹನುಮತ್ಪ್ರಮುಖರಾದ ವಾನರಪುಂಗವರು ಸಂತುಷ್ಟಾಂತರಂಗ ರಾಗಿ ರಾಮ-ಲಕ್ಷ್ಮಣ-ಸುಗ್ರೀವರಿಗೆ ನಮಿಸಿದರು.

ಹನುಮತ್ಪ್ರಮುಖರಾದ ವಾನರಶ್ರೇಷ್ಠರು ರಾಮ-ಲಕ್ಷ್ಮಣ-ಸುಗ್ರೀವರಿಗೆ ನಮಸ್ಕಾರಮಾಡಿದನಂತರ ರಾಮನು ಧನುಸ್ಸನ್ನೂ, ಬತ್ತಳಿಕೆಯನ್ನೂ ಧರಿಸಿದವನಾಗಿ ವಾನರಶ್ರೇಷ್ಠರನ್ನು ಪ್ರಶ್ನಿಸಿದನು :

**ಅಪಿ ಮಾಂ ಜೀವಯಿಷ್ಯಧ್ವಮಪಿ ವಃ ಕೃತಕೃತ್ಯತಾ ।**
**ಅಪಿ ರಾಜ್ಯಮಯೋಧ್ಯಾಯಾಂ ಕಾರಯಿಷ್ಯಾಮ್ಯಹಂ ಪುನಃ ।**
**ನಿಹತ್ಯ ಸಮರೇ ಶತ್ರೂನಾಹೃತ್ಯ ಜನಕಾತ್ಮಜಾಮ್ ॥೩೫॥**

**ಆಮೋಕ್ಷಯಿತ್ವಾ ವೈದೇಹೀಮಹತ್ವಾ ಚ ರಣೇ ರಿಪೂನ್ ।**
**ಹೃತದಾರೋಽವಧೂತಶ್ಚ ನಾಹಂ ಜೀವಿತುಮುತ್ಸಹೇ ॥೩೬॥**

“ನಾನು ಜೀವಂತನಾಗಿ ಬಾಳುವ ರೀತಿಯಲ್ಲಿ ಇಂದು ನನಗೆ ವಾರ್ತೆ ಯನ್ನು ತಂದಿರುವಿರಾ? ನಾನು ಜೀವಿಸಿರುವುದು ಅಥವಾ ಪ್ರಾಣತೊರೆಯು ವುದು ಎರಡೂ ನೀವು ಮುಂದೆ ಹೇಳಲಿರುವ ವಾರ್ತೆಯನ್ನೇ ಅವಲಂಬಿಸಿದೆ. ನೀವು ನಿಶ್ಚಯವಾಗಿಯೂ ಕೃತಕೃತ್ಯರಾಗಿ ಬಂದಿರುವಿರಾ? ನೀವಿಲ್ಲಿಂದ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದ ಕಾರ್ಯವು ಪೂರ್ಣವಾಗಿರುವುದೇ? ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ನಾನು ಪುನಃ ಅಯೋಧ್ಯೆಗೆ ಸೀತೆಯೊಡನೆ ಹೋಗಿ ಸಿಂಹಾಸನದಲ್ಲಿ ಕುಳಿತು ರಾಜ್ಯವಾಳುವೆನೇ? ವೈದೇಹಿಯನ್ನು ವಿಮೋಚನೆಗೊಳಿಸದೇ, ವೈದೇಹಿಯನ್ನು ಅಪಹರಿಸಿಕೊಂಡು ಹೋಗಿರುವವ

ನನ್ನೂ ಮತ್ತು ಅವನ ಅನುಯಾಯಿಗಳನ್ನೂ ಸಂಹಾರಮಾಡದೇ ಪತ್ನಿಯನ್ನು ಕಳೆದುಕೊಂಡಿರುವ ಮತ್ತು ಆ ಕಾರಣದಿಂದಲೇ ಗೌರವವನ್ನೂ ಕಳೆದು ಕೊಂಡಿರುವ ನಾನು ಅವಧೂತನಾಗಿ ಜೀವಿಸಿರಲು ಇಚ್ಛೆಯುಳ್ಳವನಾಗಿಲ್ಲ.”

ರಾಮನು ಹೀಗೆಂದು ಹೇಳಿದನಂತರ ಪವನಸುತನಾದ ಆಂಜನೇಯನು ಶ್ರೀರಾಮನನ್ನು ಕುರಿತು ಹೇಳಿದನು :

**ಪ್ರಿಯಮಾಖ್ಯಾಮಿ ತೇ ರಾಮ ದೃಷ್ಟಾ ಸಾ ಜಾನಕೀ ಮಯಾ ॥**

“ರಾಮ! ನಿನಗೆ ಪರಮಪ್ರಿಯವಾದ ವಾರ್ತೆಯನ್ನೇ ಹೇಳುತ್ತೇನೆ. ಸೀತೆಯನ್ನು ನಾನು ನೋಡಿಬಂದೆನು. ಸುಗ್ರೀವನ ಆಜ್ಞೆಯಂತೆ ನಾವುಗಳು ಸೀತಾದೇವಿಯನ್ನು ಹುಡುಕಿಕೊಂಡು ಬರಲು ದಕ್ಷಿಣದಿಕ್ಕಿಗೆ ಹೋಗಿದ್ದೆವು. ದಕ್ಷಿಣದಿಕ್ಕಿನಲ್ಲಿದ್ದ ಗಿರಿ-ಪರ್ವತ-ದುರ್ಗಗಳಲ್ಲಿಯೂ, ಗ್ರಾಮ-ಪಟ್ಟಣ-ದೇಶ ಗಳಲ್ಲಿಯೂ, ಅರಣ್ಯಗಳಲ್ಲಿಯೂ, ತಟಾಕ-ನದೀ-ಸರೋವರಗಳ ಪ್ರದೇಶ ಗಳಲ್ಲಿಯೂ ಹುಡುಕಿ ನಿರಾಶರಾದೆವು. ನಮಗೆ ಬಹಳ ಆಯಾಸವೂ ಆಯಿತು. ನಾವು ಹಿಂದಿರುಗಲು ನಿಗದಿಮಾಡಿದ್ದ ಕಾಲವೂ ಕಳೆಯುತ್ತಾ ಬಂದಿತು. ಆ ಸಮಯದಲ್ಲಿ ನಮಗೆ ಗುಹೆಯೊಂದರ ದರ್ಶನವಾಯಿತು. ನಿರಾಶೆಯಿಂದಲೂ, ಬಳಲಿಕೆಯಿಂದಲೂ ಜೀವನದಲ್ಲಿಯೇ ಬೇಸತ್ತಿದ್ದ ನಾವು ಗುಹೆಯೊಳಕ್ಕೆ ಪ್ರವೇಶಮಾಡಿದೆವು. ಅನೇಕಯೋಜನಗಳಷ್ಟು ದೂರ ಆ ಗುಹೆಯೊಳಗೇ ನಾವು ನಡೆದುಹೋದೆವು. ಹಾದಿಯಲ್ಲಿ ಕತ್ತಲು ಕವಿದಿತ್ತು. ಅಲ್ಲಿ ಮರ-ಗಿಡ-ಬಳ್ಳಿಗಳಿದ್ದುವು. ವೃಕ್ಷಗಳ ಮೇಲಿದ್ದ ಕೀಟಗಳ ಶಬ್ದವು ಮಾತ್ರ ಕೇಳಿಸುತ್ತಿದ್ದಿತು. ಬಹಳ ದೂರದವರೆಗೆ ಗಹನವಾದ ಹಾದಿ ಯಲ್ಲಿಯೇ ಪ್ರಯಾಣಮಾಡಿದನಂತರ ಸೂರ್ಯನ ಪ್ರಭೆಗೆ ಸಮಾನವಾದ ಬೆಳಕನ್ನು ನೋಡಿದೆವು. ಸುರಂಗಮಾರ್ಗದಲ್ಲಿ ಒಂದು ಅರಮನೆಯು ಕಂಗೊಳಿಸುತ್ತಿದ್ದಿತು.

ರಾಘವ! ಆ ಅರಮನೆಯು ದೈತ್ಯರಾಜನಾದ ಮಯನ ನಿವಾಸಸ್ಥಾನ ವಾಗಿತ್ತು. ಅಲ್ಲಿ ಪ್ರಭಾವತೀ ಎಂಬ ತಾಪಸಿಯೊಬ್ಬಳು ತಪಸ್ಸಿನಲ್ಲಿ ನಿರತ ಳಾಗಿದ್ದಳು. ಅವಳು ನಮಗೆ ಶುಚಿ-ರುಚಿಯಾದ ಆಹಾರವನ್ನೂ, ನಾನಾ

ಬಗೆಯ ಪಾನೀಯಗಳನ್ನೂ ಕೊಟ್ಟಳು. ಅವಳು ಕೊಟ್ಟ ಆಹಾರವನ್ನು ಭುಂಜಿಸಿ, ಪಾನೀಯಗಳನ್ನೂ ಪಾನಮಾಡಿದನಂತರ ನಮ್ಮ ಹಸಿವು-ಬಾಯಾರಿಕೆ-ಆಯಾಸಗಳು ಪರಿಹಾರವಾದುವು. ಅವಳು ನಿರ್ದೇಶಿಸಿದ ಹಾದಿಯಲ್ಲಿಯೇ ಮುಂದೆ ಪ್ರಯಾಣಮಾಡಿ ಗುಹೆಯಿಂದ ಹೊರಬಂದೆವು. ಅಲ್ಲಿ ಸಮುದ್ರವನ್ನೂ, ಸಮುದ್ರದ ಸಮೀಪದಲ್ಲಿಯೇ ಇದ್ದ ಸಹ್ಯಾಚಲ-ಮಲಯ ಪರ್ವತಗಳನ್ನೂ, ಮಹಾಗಿರಿಯಾದ ದರ್ದುರಪರ್ವತವನ್ನೂ ನೋಡಿದೆವು. ಮಲಯಪರ್ವತವನ್ನು ಹತ್ತಿ ಅದರ ಮೇಲಿನಿಂದ ವಿಶಾಲವಾದ, ವರುಣನ ಆಲಯವಾದ ಸಮುದ್ರವನ್ನು ನೋಡಿದೆವು. ಆಗಮಿಸಿದ ಕಾರ್ಯವು ಫಲಿತವಾಗದೇ ಇದ್ದುದರಿಂದ ನಮಗೆ ಜೀವನದಲ್ಲಿಯೇ ನಿರಾಶೆಯುಂಟಾಯಿತು. ವಿಷಣ್ಣರೂ, ಖಿನ್ನಮನಸ್ಕರೂ ಆದೆವು. ಯಾರೊಬ್ಬರ ಮುಖದಲ್ಲಿಯೂ ಕಾಂತಿಯೇ ಇರಲಿಲ್ಲ. ಎಲ್ಲರೂ ದುಃಖಸಾಗರದಲ್ಲಿ ಮುಳುಗಿಹೋಗಿದ್ದೆವು. ಮಹೋದಧಿಯು ಅನೇಕಶತಯೋಜನಗಳಷ್ಟು ವಿಸ್ತೀರ್ಣವಾಗಿರುವುದನ್ನೂ ಮತ್ತು ಮೊಸಳೆ-ತಿಮಿ-ತಿಮಿಂಗಿಲಗಳೇ ಮೊದಲಾದ ಪ್ರಾಣಿಗಳಿಂದ ಪೂರ್ಣವಾಗಿರುವುದನ್ನೂ ಚಿಂತಿಸುತ್ತಾ ಬಹುದುಃಖಿತರಾಗಿ ಕುಳಿತಿದ್ದೆವು. ನಮಗೆ ಮುಂದೇನು ಮಾಡಬೇಕೆಂಬುದರ ಅರಿವಾಗಲಿಲ್ಲ. ಕೃತಕೃತ್ಯರಾಗದೇ ಹಿಂದಕ್ಕೆ ಬರುವ ಇಚ್ಛೆಯೂ ಇರಲಿಲ್ಲ. ಉಪವಾಸವ್ರತದ ಸಂಕಲ್ಪಮಾಡಿ, ಮುಂದಕ್ಕೆ ನಾವೇನು ಮಾಡಬೇಕೆಂಬುದರ ವಿಷಯವಾಗಿ ಸೂಚನೆಗಳಾವುವೂ ಸಿಕ್ಕದಿದ್ದರೆ ಆಮರಣಾಂತ ಉಪವಾಸಮಾಡುವುದಾಗಿ ಸಂಕಲ್ಪಿಸಿ ನಾವೆಲ್ಲರೂ ಕುಳಿತೆವು. ನಾವು ಪರಸ್ಪರ ಮಾತನಾಡಿಕೊಳ್ಳುತ್ತಿದ್ದಾಗ ಸೀತಾಪಹರಣದ ವಿಷಯವನ್ನೂ ಪ್ರಸ್ತಾಪಿಸಿದೆವು. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ ಜಟಾಯುವು ಪ್ರತಿಭಟಿಸಿದುದನ್ನೂ ಪ್ರಸ್ತಾಪಿಸಿ, ಜಟಾಯುವನ್ನು ಮುಕ್ತಕಂಠದಿಂದ ಪ್ರಶಂಸೆಮಾಡುತ್ತಿದ್ದೆವು. ಆ ವೇಳೆಗೆ ಸರಿಯಾಗಿ ಪರ್ವತೋಪಮವಾದ, ಘೋರರೂಪಿಯಾದ, ನೋಡಿದವರ ಹೃದಯದಲ್ಲಿ ಭಯವನ್ನುಂಟುಮಾಡುವ, ವೈನತೇಯನ ಅಪರಾವತಾರದಂತೆಯೇ ಕಾಣುತ್ತಿದ್ದ ಮಹಾಪಕ್ಷಿಯೊಂದನ್ನು ನೋಡಿದೆವು. ಆ ಪಕ್ಷಿಯು ನಮಗೆ ತಿಳಿಯದಂತೆಯೇ ನಮ್ಮ ಸಮೀಪಕ್ಕೆ ಬಂದು ನಮ್ಮೆಲ್ಲರನ್ನೂ ನುಂಗಿಹಾಕಲು ಉದ್ದೇಶಿಸಿತ್ತು. ಆದರೆ ನಾವು ಮಹಾತ್ಮನಾದ ಜಟಾಯುವಿನ ಗುಣಗಾನ

ಮಾಡುತ್ತಿದ್ದುದರಿಂದ ಅಪಮೃತ್ಯುವಿನಿಂದ ಪಾರಾದೆವು. ನಮ್ಮನ್ನು ನುಂಗಿ ಹಾಕಲು ಬಂದಿದ್ದ ಆ ಪಕ್ಷಿಯು ನಾವು ಜಟಾಯುವಿನ ವಿಷಯವನ್ನು ಪ್ರಸ್ತಾಪಿಸುತ್ತಿದ್ದುದನ್ನು ಕೇಳಿ ಕುತೂಹಲದಿಂದ ನಮ್ಮನ್ನು ಪ್ರಶ್ನಿಸಿತು :

**ಭೋಃ ಕ ಏಷ ಮಮ ಭ್ರಾತುರ್ಜಟಾಯೋಃ ಕುರುತೇ ಕಥಾಮ್ ।**
**ಸಮ್ಪಾತಿರ್ನಾಮ ತಸ್ಯಾಹಂ ಜ್ಯೇಷ್ಠೋ ಭ್ರಾತಾ ಖಗಾಧಿಪಃ ॥೪೮॥**

"ನನ್ನ ತಮ್ಮನಾದ ಜಟಾಯುವಿನ ಕಥೆಯನ್ನು ಹೇಳುತ್ತಿರುವ ನೀವು ಯಾರು? ಅವನ ಹಿರಿಯಣ್ಣನು ನಾನು. ನನ್ನನ್ನು ಸಂಪಾತಿಯೆಂದು ಕರೆಯುತ್ತಾರೆ.

ಒಂದಾನೊಂದು ಸಮಯದಲ್ಲಿ ನಾವಿಬ್ಬರೂ ಪರಸ್ಪರಸ್ಪರ್ಧೆಯಿಂದ ಸೂರ್ಯದೇವನೆಡೆಗೆ ಹಾರಿಹೋಗುತ್ತಿದ್ದೆವು. ಸೂರ್ಯನನ್ನು ಸಮೀಪಿಸುತ್ತಿದ್ದಂತೆಯೇ ನನ್ನ ರೆಕ್ಕೆಗಳು ಭಸ್ಮವಾಗಿ ಹೋದುವು. ಆದರೆ ಜಟಾಯುವಿನ ರೆಕ್ಕೆಗಳು ಮಾತ್ರ ಸೂರ್ಯನ ಬಹುತೀಕ್ಷ್ಣವಾದ ಬೇಗೆಗೆ ಸಿಕ್ಕಿಯೂ ಸುಡಲಿಲ್ಲ. ರೆಕ್ಕೆಗಳನ್ನು ಸುಟ್ಟುಕೊಂಡ ನಾನು ಈ ಪರ್ವತದ ಮೇಲೆ ಬಿದ್ದುಬಿಟ್ಟೆನು. ಅಂದಿನಿಂದ ಇಂದಿನವರೆಗೆ ಪಕ್ಷಿರಾಜನಾದ ನನ್ನ ತಮ್ಮನೆಲ್ಲಿದ್ದಾನೆಂಬ ವಿಷಯವು ನನಗೆ ತಿಳಿಯಲೇ ಇಲ್ಲ. ನೀವೀಗ ಅವನ ಪ್ರಸ್ತಾಪ ಮಾಡುತ್ತಿರುವುದರಿಂದ ಅವನ ಸಮಾಚಾರಗಳೆಲ್ಲವೂ ನಿಮಗೆ ತಿಳಿದಿರಲೇಬೇಕು. ಅವನು ಎಲ್ಲಿದ್ದಾನೆ? ಹೇಗಿದ್ದಾನೆ? ಎಂಬುದನ್ನು ವಿವರವಾಗಿ ತಿಳಿಸಿರಿ."

ಪ್ರಭುವೇ! ಸಂಪಾತಿಯು ಕೇಳಿದ ಆ ಪ್ರಶ್ನೆಗೆ ನಾವು ಸಂಕ್ಷೇಪವಾಗಿ ಉತ್ತರಿಸುತ್ತಾ ಸೀತೆಯನ್ನು ರಾವಣನು ಒಯ್ಯುತ್ತಿದ್ದಾಗ ಜಟಾಯುವು ಪ್ರತಿಭಟಿಸಿದುದನ್ನೂ, ರಾವಣನಿಂದ ಜಟಾಯುವು ಹತನಾದುದನ್ನೂ ಸಂಪಾತಿಗೆ ಹೇಳಿದೆವು. ಅನಂತರದಲ್ಲಿ ನಿನಗುಂಟಾಗಿರುವ ವ್ಯಸನವನ್ನೂ ಸಹ ಅವನೊಡನೆ ನಾವು ಪ್ರಸ್ತಾಪಮಾಡಿದೆವು.

ರಾಮಭದ್ರ! ನಾವು ಹೇಳಿದ ಬಹಳ ಅಪ್ರಿಯವಾದ ಮಾತನ್ನು ಕೇಳಿ ವಿಷಣ್ಣನಾದ ಸಂಪಾತಿಯು ಪುನಃ ನಮ್ಮನ್ನು ಪ್ರಶ್ನಿಸಿದನು :

**ಕಃ ಸ ರಾಮಃ ಕಥಂ ಸೀತಾ ಜಟಾಯುಶ್ಚ ಕಥಂ ಹತಃ ।**
**ಇಚ್ಛಾಮಿ ಸರ್ವಮ್ಯೈವೈತಚ್ಛ್ರೋತುಂ ಪ್ಲವಗಸತ್ತಮಾಃ ॥೫೪॥**

"ರಾಮನೆಂಬುವನಾರು? ಸೀತೆಯು ಹೇಗೆ ಅಪಹೃತಳಾದಳು? ಆ ಸಂದರ್ಭದಲ್ಲಿ ರಾವಣನೇಕೆ ಜಟಾಯುವನ್ನು ಸಂಹರಿಸಿದನು? ಈ ಎಲ್ಲ ವಿಷಯಗಳನ್ನೂ ವಿಶದವಾಗಿ ನಿಮ್ಮಿಂದ ಕೇಳಿ ತಿಳಿದುಕೊಳ್ಳಲಿಚ್ಛಿಸಿದ್ದೇನೆ. ವಾನರಶ್ರೇಷ್ಠರೇ! ಎಲ್ಲವನ್ನೂ ವಿಸ್ತರವಾಗಿ ತಿಳಿಸಿರಿ."

ಪ್ರಭುವೇ! ಆಗ ನಾವು ಎಲ್ಲ ವಿಷಯಗಳನ್ನೂ ವಿಶದವಾಗಿ ಸಂಪಾತಿಗೆ ಹೇಳಿದೆವು. ನಿನಗೆ ಪ್ರಾಪ್ತವಾಗಿರುವ ವ್ಯಸನವನ್ನೂ, ಅದಕ್ಕೆ ಕಾರಣವನ್ನೂ ಸವಿಸ್ತರವಾಗಿ ಹೇಳಿದೆವು. ಸೀತೆಯನ್ನು ಹುಡುಕುವ ಸಲುವಾಗಿ ನಾವು ದಕ್ಷಿಣದಿಕ್ಕಿಗೆ ಸುಗ್ರೀವನಾಜ್ಞೆಯಂತೆ ಹೊರಟು ಬಂದುದನ್ನೂ, ಅವಧಿಯು ಮುಗಿಯುತ್ತಾ ಬಂದರೂ ಕೃತಕೃತ್ಯರಾಗದೇ ಇದ್ದುದರಿಂದ ಪ್ರಾಯೋಪ ವೇಶದ ಸಂಕಲ್ಪಮಾಡಿ ಕುಳಿತಿರುವುದನ್ನೂ ಸಂಪಾತಿಗೆ ನಾನು ಹೇಳಿದೆನು. ಪಕ್ಷಿರಾಜನು ಪ್ರಾಯೋಪವೇಶದ ಸಂಕಲ್ಪವನ್ನು ಕೈಬಿಡಲು ನಮಗೆ ಹೇಳಿ ರಾವಣನ ವಿಷಯವಾಗಿ ಹೀಗೆಂದು ಹೇಳಿದನು :

"ಕಪಿಸತ್ತಮರೇ! ನಾನು ರಾವಣನನ್ನು ಚೆನ್ನಾಗಿ ಬಲ್ಲೆನು. ಲಂಕೆಯೇ ಅವನ ರಾಜಧಾನಿ. ಸಮುದ್ರದಾಚೆಯ ದಡದಲ್ಲಿರುವ ತ್ರಿಕೂಟಪರ್ವತದ ತಪ್ಪಲಿನಲ್ಲಿರುವ ಆ ಲಂಕಾಪಟ್ಟಣವನ್ನೂ ನಾನು ಪ್ರತ್ಯಕ್ಷವಾಗಿಯೇ ನೋಡುತ್ತಿದ್ದೇನೆ. ಸೀತೆಯು ಅಲ್ಲಿಯೇ ಇದ್ದಾಳೆ. ಇದರಲ್ಲಿ ನನಗೆ ಸಂಶಯವೇ ಇಲ್ಲ."

ಸಂಪಾತಿಯ ಮಾತುಗಳನ್ನು ಕೇಳಿ ನಮಗೆ ಅಪಾರವಾದ ಸಂತೋಷ ವುಂಟಾಯಿತು. ಪ್ರಾಯೋಪವೇಶಸಂಕಲ್ಪವನ್ನು ಒಡನೆಯೇ ವಿಸರ್ಜಿಸಿದವ ರಾಗಿ ಸಮುದ್ರಲಂಘನದ ವಿಷಯವಾಗಿ ಪರಸ್ಪರವಾಗಿ ಸಮಾಲೋಚನೆ ಮಾಡಿದೆವು. ಬಹುಯೋಜನವಿಸ್ತೀರ್ಣದ ಸಾಗರವನ್ನು ದಾಟಲು ಯಾರೂ ಮುಂದೆ ಬರಲಿಲ್ಲ. ಆಗ ನಾನು ನನ್ನ ತಂದೆಯಾದ ವಾಯುದೇವನ ಸಹಕಾರ ವನ್ನು ಪಡೆದು ವಾಯುದೇವನಲ್ಲಿ ಅಂತರ್ಹಿತನಾಗಿ ಸಾಗರವನ್ನು ದಾಟಿ ದೆನು. ನಾನು ಸಮುದ್ರವನ್ನು ಲಂಘಿಸುತ್ತಿರುವಾಗ ನನ್ನ ಗಮನವನ್ನು ತಡೆದು

ನನ್ನನ್ನು ತಿನ್ನಲು ಬಂದ ರಾಕ್ಷಸಿಯನ್ನು ಸಂಹರಿಸಿ, ಲಂಕಾಪಟ್ಟಣಕ್ಕೆ ಹೋಗಿ, ಅಲ್ಲಿ ಪತಿವ್ರತೆಯಾದ ಸೀತಾದೇವಿಯನ್ನು ರಾವಣನ ಅಂತಃಪುರಕ್ಕೆ ಸೇರಿದ ಅಶೋಕವನದಲ್ಲಿ ಸಂದರ್ಶಿಸಿದೆನು. ಸೀತಾದೇವಿಯು ನಿತ್ಯೋಪವಾಸದಿಂದ ಕೃಶಳಾಗಿ ಹೋಗಿದ್ದಳು. ಪತಿಯನ್ನು ಸೇರಬೇಕೆಂಬ ಆಕಾಂಕ್ಷೆಯಿಂದ ಅನೇಕ ವ್ರತಗಳನ್ನು ಅನುಷ್ಠಾನಮಾಡುತ್ತಿದ್ದಳು. ಅವಳ ನೀಳವಾದ ಕೇಶರಾಶಿಯು ಜಡೆಗಟ್ಟಿದ್ದಿತು. ಶರೀರವೆಲ್ಲವೂ ಧೂಳಿನಿಂದ ಧೂಸರಿತವಾಗಿದ್ದಿತು. ತಪಸ್ವಿನಿಯಾದ ಸೀತಾದೇವಿಯು ಬಹಳ ದೀನವದನೆಯಾಗಿದ್ದಳು. ಆ ಎಲ್ಲ ಲಕ್ಷಣಗಳಿಂದ ಅವಳೇ ಸೀತಾದೇವಿಯಿರಬಹುದೆಂದು ನಿಶ್ಚಯಿಸಿದ ನಾನು ಏಕಾಕಿನಿಯಾಗಿದ್ದಾಗ ಅವಳನ್ನು ಸಂಧಿಸಿ ಸಾಧ್ವಿಯಾದ ಸೀತಾದೇವಿಯನ್ನು ಕುರಿತು ಹೀಗೆಂದು ಹೇಳಿದೆನು :

**ಸೀತೇ ರಾಮಸ್ಯ ದೂತೋಽಹಂ ವಾನರೋ ಮಾರುತಾತ್ಮಜಃ ।**
**ತ್ವದ್ದರ್ಶನಮಭಿಪ್ರೇಪ್ಸುರಿಹ ಪ್ರಾಪ್ತೋ ವಿಹಾಯಸಾ ॥೬೩॥**

"ಸೀತಾದೇವಿ! ನಾನು ರಾಮನ ದೂತನಾಗಿದ್ದೇನೆ. ವಾಯುದೇವನ ಪುತ್ರನು. ನಾನು ವಾನರ. ನಿನ್ನನ್ನು ಸಂದರ್ಶಿಸಬೇಕೆಂಬ ಅಭಿಲಾಷೆಯಿಂದ ಆಕಾಶಮಾರ್ಗದ ಮೂಲಕ ಇಲ್ಲಿಗೆ ನಾನು ಆಗಮಿಸಿದ್ದೇನೆ. ಸಹೋದರರಾದ, ರಾಜಕುಮಾರರಾದ ರಾಮ-ಲಕ್ಷ್ಮಣರು ಕುಶಲಿಗಳಾಗಿರುತ್ತಾರೆ. ಸಕಲವಾನರರಿಗೂ ರಾಜನಾದ ಸುಗ್ರೀವನು ಅವರನ್ನು ಯಥೋಚಿತವಾಗಿ ಸತ್ಕರಿಸುತ್ತಾ ಪರಿಪಾಲಿಸುತ್ತಿದ್ದಾನೆ. ಸೌಮಿತ್ರಿಸಹಿತನಾದ ರಾಮನು ನಿನಗೆ ತನ್ನ ಕುಶಲವನ್ನು ತಿಳಿಸಿದನು. ರಾಮ-ಲಕ್ಷ್ಮಣರೊಡನಿರುವ ಸ್ನೇಹದ ಕಾರಣದಿಂದಾಗಿ ಸುಗ್ರೀವನೂ ನಿನ್ನ ಕುಶಲವನ್ನು ಕೋರುತ್ತಾನೆ. ಅಪಾರವಾದ ವಾನರಸೇನೆಯೊಡನೆ ನಿನ್ನ ಪತಿಯಾದ ಶ್ರೀರಾಮನು ಇಲ್ಲಿಗೆ ಆಗಮಿಸಲಿದ್ದಾನೆ."

ಪ್ರಭೋ! ನಾನು ನಿನ್ನ (ರಾಮನ) ವಿಷಯವಾಗಿ ಮಾತನಾಡುತ್ತಿದ್ದರೂ ಸೀತಾದೇವಿಗೆ ಒಡನೆಯೇ ನನ್ನಲ್ಲಿ ವಿಶ್ವಾಸವುಂಟಾಗಲಿಲ್ಲ. ಅವಳ ಮನೋಗತವಾದ ಅಭಿಪ್ರಾಯವನ್ನು ತಿಳಿದವನಾಗಿ ಪುನಃ ಹೇಳಿದೆನು :

**ಪ್ರತ್ಯಯಂ ಕುರು ಮೇ ದೇವಿ ವಾನರೋಽಸ್ಮಿ ನ ರಾಕ್ಷಸಃ ॥೬೬॥**

"ನನ್ನ ಮಾತಿನಲ್ಲಿ ವಿಶ್ವಾಸವಿಡು, ದೇವಿ! ನಾನು ನಿಶ್ಚಯವಾಗಿಯೂ ವಾನರನು. ರಾಮನ ದೂತನು. ಖಂಡಿತವಾಗಿಯೂ ರಾಕ್ಷಸನಲ್ಲ."

ರಾಮಭದ್ರ! ನಾನು ಇಷ್ಟು ಹೇಳಿದ ನಂತರ ಸೀತೆಯು ಕ್ಷಣಕಾಲ ಧ್ಯಾನಯೋಗದಲ್ಲಿದ್ದು ಅನಂತರ ಕಣ್ತೆರೆದು ನನ್ನನ್ನು ಕುರಿತು ಹೇಳಿದಳು :

"ವಾನರೋತ್ತಮ! ಅವಿಂಧ್ಯನು ಈ ಮೊದಲೇ ನಿನ್ನ ಆಗಮನದ ವಿಷಯವನ್ನು ಹೇಳಿದ್ದನಾದ್ದರಿಂದ ನನ್ನ ಬಳಿಗೆ ಆಗಮಿಸಿರುವ ನೀನು ಹನುಮಂತನೆಂಬುದನ್ನು ನಾನು ಬಲ್ಲೆನು. ಮಹಾಬಾಹುವೇ! ಅವಿಂಧ್ಯನೆಂಬ ರಾಕ್ಷಸನು ವೃದ್ಧಸೇವಿಯೂ, ವೃದ್ಧಸಮ್ಮತನೂ ಆಗಿರುವುದರಿಂದಲೇ ವಿವೇಕಿಯೂ ಆಗಿರುತ್ತಾನೆ. ಸುಗ್ರೀವನು ನಿನ್ನಂತಹ ಧೀಮಂತರಾದ ಮಂತ್ರಿಗಳಿಂದ ಕೂಡಿರುವನೆಂಬ ವಿಷಯವನ್ನೂ ಸಹ ಅವಿಂಧ್ಯನೇ ನನ್ನೊಡನೆ ಹೇಳಿರುವನು. ನೀನಿನ್ನು ಹೋಗಿ ಬಾ, ಕಪೀಶ್ವರ!"–ಎಂಬುದಾಗಿ ಹೇಳಿ ಸೀತೆಯು ಈ ಚೂಡಾಮಣಿಯನ್ನು ಗುರುತಿಗಾಗಿ ಕೊಟ್ಟಿದ್ದಾಳೆ. ಅಕಳಂಕಳಾದ, ಅನಿಂದ್ಯಳಾದ ಸೀತಾದೇವಿಯು ಈ ಮಣಿಯನ್ನೇ ಅನುದಿನವು ನೋಡಿಕೊಂಡಿರುತ್ತಿದ್ದು ಇದುವರೆಗೂ ತನ್ನ ಜೀವಧಾರಣೆಮಾಡಿದ್ದಾಳೆ. ಸೀತೆಯನ್ನು ನಾನು ಸಂದರ್ಶಿಸಿ ಬಂದಿರುವೆನೆಂಬ ವಿಶ್ವಾಸವು ನಿನಗೆ ಉಂಟಾಗಲೆಂದು ಹಿಂದೆ ಸಂಘಟಿಸಿದ ಒಂದು ಕಥೆಯನ್ನೂ ಸೀತೆಯು ನನ್ನೊಡನೆ ಹೇಳಿದ್ದಾಳೆ.

ನೀವಿಬ್ಬರೂ ಚಿತ್ರಕೂಟವೆಂಬ ಪರ್ವತದ ತಪ್ಪಲಿನಲ್ಲಿದ್ದಿರಿ. ಕಾಕಾಸುರನು ಸೀತೆಗೆ ಉಪದ್ರವಕೊಡಲು ಉಪಕ್ರಮಿಸಿದನು. ಒಡನೆಯೇ ನೀನು ದರ್ಭೆಯೊಂದನ್ನು ತೆಗೆದುಕೊಂಡು ಅದನ್ನೇ ಬ್ರಹ್ಮಾಸ್ತ್ರದ ಮಂತ್ರದಿಂದ ಅಭಿಮಂತ್ರಿಸಿ ಕಾಕಾಸುರನ ಮೇಲೆ ಪ್ರಯೋಗಿಸಿದೆ. ಕಾಕಾಸುರನು ತ್ರಿಭುವನಗಳನ್ನೂ ಸುತ್ತಾಡಿ ರಕ್ಷಕರಾರೂ ಸಿಕ್ಕದೇ ಪುನಃ ನಿನ್ನನ್ನೇ ಮರೆಹೊಕ್ಕನು. ಅವನ ಒಂದು ಕಣ್ಣನ್ನು ಮಾತ್ರವೇ ನೀನು ಬ್ರಹ್ಮಾಸ್ತ್ರಕ್ಕೆ ಗುರಿಮಾಡಿ ಶರಣಾಗತನಾದ ಅವನಿಗೆ ಪ್ರಾಣಭಿಕ್ಷೆಯನ್ನಿತ್ತು ಕಳುಹಿಸಿದೆ. ದರ್ಭೆಯ ಹುಲ್ಲನ್ನು ಬ್ರಹ್ಮಾಸ್ತ್ರವನ್ನಾಗಿ ಪರಿವರ್ತಿಸಿದ ಮಹಾನುಭಾವನು ನೀನು. ರಹಸ್ಯದಲ್ಲಿ ನಡೆದ ಈ ವಿಷಯವನ್ನು ಸೀತೆಯು ನನ್ನೊಡನೆ ಹೇಳಿದಳು. ರಾಮ! ನಾನು ವಿದೇಹನ ಸುತೆಯಾದ ಜಾನಕಿಯನ್ನೇ ನೋಡಿ ಬಂದಿರುವೆನೆಂಬುದಕ್ಕೆ ಇದು ಪ್ರತ್ಯಕ್ಷನಿದರ್ಶನ.

ಸೀತೆಯಿಂದ ಅನುಜ್ಞೆಯನ್ನು ಪಡೆದ ನಾನು, ಸ್ವೇಚ್ಛೆಯಿಂದಲೇ ರಾವಣನ ಸೈನಿಕರಿಗೆ ಸಿಕ್ಕಿಬಿದ್ದು ಅನಂತರದಲ್ಲಿ ಲಂಕಾಪಟ್ಟಣವನ್ನೂ ಸಂಪೂರ್ಣವಾಗಿ ದಹಿಸಿ ಹೊರಟುಬಂದೆನು."

ಹನುಮಂತನ ಅತ್ಯಂತಪ್ರಿಯಕರವಾದ ಮಾತುಗಳನ್ನು ಕೇಳಿ ಪರಮಪುರುಷನಾದ ಶ್ರೀರಾಮನು ಪವನಾತ್ಮಜನನ್ನು ಯಥೋಚಿತವಾಗಿ ಸತ್ಕರಿಸಿದನು.

೨೮೨ನೆಯ ಅಧ್ಯಾಯವು ಮುಗಿಯಿತು.

೨೮೩ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ವಾನರಸೈನ್ಯಗಳ ಸಂಘಟನೆ : ಸೇತುನಿರ್ಮಾಣ : ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿಷೇಕ : ಲಂಕಾಪಟ್ಟಣದ ಎಲ್ಲೆಗೆ ಸೈನ್ಯಪ್ರವೇಶ : ಅಂಗದನ ದೌತ್ಯ

ಯುಧಿಷ್ಠಿರ! ಶ್ರೀರಾಮನು ಲಕ್ಷ್ಮಣನೊಡನೆ ಆ ಪರ್ವತದ ತಪ್ಪಲಿನಲ್ಲಿಯೇ ಕುಳಿತಿರಲಾಗಿ, ಸುಗ್ರೀವಾಜ್ಞೆಯಂತೆ ಕೋಟ್ಯನುಕೋಟಿ ಸಂಖ್ಯಾತರಾದ ವಾನರರು ಅಲ್ಲಿಗೆ ಆಗಮಿಸತೊಡಗಿದರು. ವಾಲಿಯ ಮಾವನಾದ ಸುಷೇಣನು ಒಂದು ಸಾವಿರ ಕೋಟಿ ಕಪಿಗಳೊಡನೆ ಅಲ್ಲಿಗೆ ಆಗಮಿಸಿದನು. ವಾನರೇಂದ್ರರಾದ, ಮಹಾವೀರ್ಯರಾದ ಗಜ-ಗವಯ ಎಂಬ ಇಬ್ಬರು ಕಪಿನಾಯಕರು ಪ್ರತ್ಯೇಕವಾಗಿ ನೂರು ಕೋಟಿ ಕಪಿಸೇನೆಯೊಡನೆ ಅಲ್ಲಿಗೆ ಆಗಮಿಸಿದರು. ಎತ್ತಿನ ಬಾಲದಂತಿರುವ ಬಾಲವನ್ನು ಹೊಂದಿದ್ದ ಭಯಂಕರಾಕಾರನಾದ ಗವಾಕ್ಷನೆಂಬ ವಾನರಶ್ರೇಷ್ಠನು ಅರುವತ್ತು ಸಾವಿರ ಕೋಟಿ ಗೋಲಾಂಗೂಲರೊಡನೆ ರಾಮನಿದ್ದಲ್ಲಿಗೆ ಆಗಮಿಸಿದನು. ಗಂಧಮಾದನ ಪರ್ವತದಲ್ಲಿ ವಾಸಮಾಡುತ್ತಿದ್ದ ಗಂಧಮಾದನನೆಂಬ ಕಪೀಶ್ವರನು ಒಂದು ಲಕ್ಷಕೋಟಿ ಕಪಿಗಳೊಡನೆ ಆಗಮಿಸಿದನು. ಮಹಾಬಲಶಾಲಿಯಾದ ಮತ್ತು ಮೇಧಾವಿಯಾದ ಪನಸನೆಂಬ ಕಪಿಶ್ರೇಷ್ಠನು ಐವತ್ತೇಳು ಕೋಟಿ ಕಪಿಸೇನೆ

ಯನ್ನು ರಾಮನ ಬಳಿಗೆ ತೆಗೆದುಕೊಂಡು ಬಂದನು. ವೃದ್ಧನಾದ, ಮಹಾ ಬಲಶಾಲಿಯಾದ ದಧಿಮುಖನೆಂಬ ಕಪಿಶ್ರೇಷ್ಠನು ಮಹಾಪರಾಕ್ರಮಿಗಳಿಂದ ಕೂಡಿದ ಅಪಾರವಾದ ಕಪಿಸೈನ್ಯವನ್ನು ತೆಗೆದುಕೊಂಡು ಬಂದನು. ಭಯಂಕರವಾದ ಕಾರ್ಯಮಾಡುವ, ಕಪ್ಪಾದ ಕೂದಲಿನಿಂದ ಕೂಡಿದ್ದು ಹಣೆ ಯಲ್ಲಿ ಮಾತ್ರ ತಿಲಕದಂತೆ ಬಿಳಿಯದಾದ ಛಾಯೆಯನ್ನು ಹೊಂದಿದ್ದ ಮೂರುಕೋಟಿ ಕರಡಿಗಳ ಸಮೇತನಾಗಿ ಜಾಂಬವಂತನು ಆಗಮಿಸಿದನು.

ಇವರುಗಳೇ ಅಲ್ಲದೆ ಇನ್ನೂ ಅನೇಕ ಕಪಿಶ್ರೇಷ್ಠರು ತಮ್ಮ-ತಮ್ಮ ಅನು ಯಾಯಿಗಳೊಡನೆ ರಾಮನ ಕಾರ್ಯಾರ್ಥವಾಗಿ ಮಾಲ್ಯವತ್ಪರ್ವತಕ್ಕೆ ಆಗಮಿ ಸಿದರು. ಆ ಕಪಿಶ್ರೇಷ್ಠರು ಪರ್ವತದ ಶಿಖರಗಳಿಗೆ ಸದೃಶವಾದ ಶರೀರಗಳನ್ನು ಹೊಂದಿದ್ದರು. ಅವರ ಧ್ವನಿಯು ಸಿಂಹನಾದವನ್ನು ಅನುಕರಿಸುತ್ತಿದ್ದಿತು. ಕೋಟ್ಯಂತರ ಕಪಿಗಳು ಪರ್ವತದ ತಪ್ಪಲಿನಲ್ಲಿ ಸುತ್ತಾಡುತ್ತಿದ್ದಾಗ ಉಂಟಾಗು ತ್ತಿದ್ದ ತುಮುಲಶಬ್ದವು ಸರ್ವತ್ರ ವ್ಯಾಪಿಸಿತು. ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ ಆ ವಾನರರಲ್ಲಿ ಕೆಲವು ಪರ್ವತಶಿಖರಗಳಂತೆ ಎತ್ತರವಾಗಿಯೂ, ಮತ್ತೆ ಕೆಲವು ಕಾಡುಕೋಣಗಳಂತೆ ಕಪ್ಪಾಗಿಯೂ, ಕೆಲವು ಶರತ್ಕಾಲದ ಮೋಡಗಳಂತೆ ಬಿಳುಪಾಗಿಯೂ, ಮತ್ತೆ ಹಲವು ಕುಂಕುಮದಂತೆ ಕೆಂಪಾದ ಮುಖದಿಂದ ಕೂಡಿದುವುಗಳಾಗಿಯೂ ಇದ್ದುವು. ಕೆಲವು ಕಪಿಗಳು ಪರ್ವತದ ಶಿಖರದ ಮೇಲಕ್ಕೆ ಹಾರುತ್ತಿದ್ದುವು. ಮತ್ತೆ ಕೆಲವು ಪರ್ವತದ ಕೆಳಕ್ಕೆ ಧುಮುಕುತ್ತಿದ್ದುವು. ಮತ್ತೆ ಕೆಲವು ನೆಲವನ್ನು ಬಲವಾಗಿ ತುಳಿದು ಭೂಮಿಯಿಂದ ಹುಟ್ಟಿದ ಧೂಳು ಸರ್ವತ್ರ ವ್ಯಾಪಿಸುವಂತೆ ಮಾಡುತ್ತಿದ್ದುವು. ಸುಗ್ರೀವನ ಆಜ್ಞೆಯಂತೆ ಎಲ್ಲ ದಿಕ್ಕುಗಳಿಂದಲೂ ತಂಡ-ತಂಡವಾಗಿ ಆಗಮಿಸಿ ಒಂದೆಡೆಯಲ್ಲಿ ಸೇರಿದ್ದ ಆ ಮಹಾಕಪಿಸೈನ್ಯವು ನಿಶ್ಚಯವಾಗಿಯೂ ಪೂರ್ಣವಾಗಿ ತುಂಬಿರುವ ಸಮುದ್ರದೋಪಾದಿಯಲ್ಲಿ ಕಾಣುತ್ತಿದ್ದಿತು.

ಎಲ್ಲ ಕಡೆಗಳಿಂದಲೂ ಕೋಟ್ಯನುಕೋಟಿ ಸಂಖ್ಯೆಯಲ್ಲಿ ಕಪಿಶ್ರೇಷ್ಠರು ಆಗಮಿಸಲಾಗಿ, ಶುಭತಿಥಿ-ಶುಭವಾರ-ಶುಭನಕ್ಷತ್ರ-ಶುಭಮುಹೂರ್ತಗಳಿಂದ

ಕೂಡಿರುವ ಸಮಯದಲ್ಲಿ ಶ್ರೀರಾಮನು ಸುಗ್ರೀವಸಹಿತನಾಗಿ ಪ್ರಯಾಣ ಹೊರಟನು. ಆ ಸೇನಾಮಹಾವಾಹಿನಿಯು ಲೋಕವನ್ನೇ ಧ್ವಂಸಗೊಳಿಸಿ ಬಿಡಲು ಹೊರಟಿರುವುದೋ–ಎಂಬಂತೆ ಕಾಣುತ್ತಿದ್ದಿತು. ಸೈನ್ಯದ ಮುಂಭಾಗ ದಲ್ಲಿ ವಾಯುಸುತನಾದ ಹನುಮಂತನಿದ್ದನು. ಭಯವೆಂದರೇನೆಂಬುದನ್ನೇ ತಿಳಿಯದ ಲಕ್ಷ್ಮಣನು ಸೇನೆಯ ಹಿಂಭಾಗದಲ್ಲಿ ನಿಂತು ಅದನ್ನು ಸಂರಕ್ಷಿಸು ತ್ತಿದ್ದನು. ಧನುಸ್ಸಿನ ಶಿಂಜಿನಿಯನ್ನು ಸೆಳೆದು ಕಟ್ಟಲು ಮತ್ತು ಬಾಣಗಳನ್ನು ಸೆಳೆದು ಬಿಡಲು ಅಂಗುಷ್ಠ-ತರ್ಜನಿಗಳಿಗೆ ಅಂಗುಲಿತ್ರಾಣಗಳನ್ನು ಧರಿಸಿದ್ದ ರಾಮ-ಲಕ್ಷ್ಮಣರು ಕಪಿಶ್ರೇಷ್ಠರಿಂದ ಪರಿವೃತರಾಗಿ–ಗ್ರಹಪರಿವೃತರಾದ ಸಾಕ್ಷಾತ್ ಸೂರ್ಯ-ಚಂದ್ರರೋಪಾದಿಯಲ್ಲಿ ವಿರಾಜಿಸುತ್ತಿದ್ದರು. ಕಪಿಸೈನ್ಯವು ಸಾಲ-ತಾಲವೃಕ್ಷಗಳನ್ನೂ, ಶಿಲೆಗಳನ್ನೂ ಹೊತ್ತುಕೊಂಡು ಹೋಗುತ್ತಿದ್ದು ದನ್ನು ನೋಡಿದರೆ ಪ್ರಾತಃಕಾಲದಲ್ಲಿ ಕಾಣುವ ಬಹುವಿಶಾಲವಾದ ಭತ್ತದ ಗದ್ದೆಯಂತೆ (ಭತ್ತದ ಹುಲ್ಲಿನ ಮನೆಗಳಂತೆ) ಕಾಣುತ್ತಿದ್ದಿತು. ನಲ, ನೀಲ, ಅಂಗದ, ಕ್ರಾಥ, ಮೈಂದ, ದ್ವಿವಿದ–ಇವರ ನಾಯಕತ್ವದಲ್ಲಿ ರಾಘವನ ಕಾರ್ಯಸಿದ್ಧಿಗಾಗಿ ಹೊರಟಿದ್ದ ಮಹಾಸೇನೆಯು ಬಹುವಿಶಾಲವಾಗಿದ್ದ, ಕಂದ-ಮೂಲ-ಫಲಗಳಿಂದಲೂ ನೀರಿನಿಂದಲೂ ಸಮೃದ್ಧವಾಗಿದ್ದ, ಮಧುವಿನಿಂದ ಕೂಡಿದ್ದ, ನಿರ್ಬಾಧಿತವಾದ ತಪ್ಪಲುಪ್ರದೇಶಗಳಲ್ಲಿ ವಿಶ್ರಮಿಸಿಕೊಳ್ಳುತ್ತಾ ಕಟ್ಟಕಡೆಗೆ ವಿಶಾಲವಾದ ಲವಣಸಮುದ್ರದ ತೀರವನ್ನು ತಲುಪಿತು.

ಎರಡನೆಯ ಸಮುದ್ರಕ್ಕೆ ಸದೃಶವಾಗಿದ್ದ, ಬಣ್ಣ-ಬಣ್ಣಗಳ ಧ್ವಜಪತಾಕೆ ಗಳನ್ನು ಹೊಂದಿದ್ದ ಆ ಅಪಾರವಾದ ವಾನರಸೇನೆಯು ಸಮುದ್ರದ ತೀರ ದಲ್ಲಿರುವ ವನವನ್ನು ಸೇರಿ ಅಲ್ಲಿ ಬೀಡುಬಿಟ್ಟಿತು.

ಯುಧಿಷ್ಠಿರ! ಅನಂತರದಲ್ಲಿ ದಶರಥನ ಮಗನಾದ ಶ್ರೀರಾಮನು ವಾನರಮುಖ್ಯನಾದ ಸುಗ್ರೀವನನ್ನು ಕುರಿತು ತತ್ಕಾಲೋಚಿತವಾದ ಈ ಮಾತುಗಳನ್ನು ಹೇಳಿದನು :

"ವಯಸ್ಯ! ನಮ್ಮ ಸೇನೆಯು ಅಪಾರವಾಗಿದೆ. ಈ ಸಮುದ್ರವೂ ಸಹ ಬಹಳ ವಿಸ್ತಾರವಾಗಿದ್ದು ಅಲಂಘನೀಯವಾಗಿದೆ. ಅಪಾರವಾದ ಈ ಜಲರಾಶಿಯನ್ನು ದಾಟಲು ಯಾವುದಾದರೂ ಉಪಾಯವಿರುವುದೇ?"

ಶ್ರೀರಾಮನ ಮಾತನ್ನು ಕೇಳಿ ತಾವೇ ಮಹಾಬಲಿಷ್ಠರೆಂದು ಭಾವಿಸಿದ್ದ ಕೆಲವರು ವಾನರಶ್ರೇಷ್ಠರು ಒಕ್ಕೊರಳಿನಿಂದ ಹೇಳಿದರು : "ನಾವು ಈ ಅಪಾರವಾದ ಸಮುದ್ರವನ್ನು ಹಾರಿ ದಾಟಲು ಸಮರ್ಥರಾಗಿದ್ದೇವೆ."

ಆದರೆ ಆ ಮಾತು ಸರ್ವಸಮ್ಮತವಾಗಿರಲಿಲ್ಲ. ಸಮುದ್ರವನ್ನು ಹಾರಿಕೊಂಡೇ ದಾಟುವ ಸಾಮರ್ಥ್ಯವು ಎಲ್ಲ ಕಪಿಗಳಿಗೂ ಇರಲಿಲ್ಲ. ಕೆಲವು ಕಪಿಗಳು ದೋಣಿಗಳಿಂದ ಸಮುದ್ರವನ್ನು ದಾಟುವ ಸೂಚನೆಯನ್ನಿತ್ತುವು. ಮತ್ತೆ ಕೆಲವು ತೆಪ್ಪಗಳಲ್ಲಿ ಸಮುದ್ರವನ್ನು ದಾಟುವ ಇಚ್ಛೆಯನ್ನು ವ್ಯಕ್ತಪಡಿಸಿದುವು. ಸಮುದ್ರವನ್ನು ದಾಟುವ ಸಲುವಾಗಿಯೇ ದೊಡ್ಡ-ದೊಡ್ಡ ಹಡಗುಗಳನ್ನು ತಯಾರಿಸಬೇಕೆಂದು ಮತ್ತೆ ಕೆಲವು ಕಪಿಗಳು ಸಲಹೆಮಾಡಿದುವು. ಕೋಟ್ಯಂತರ ಕಪಿಸ್ತೋಮದಿಂದ ಲಕ್ಷೋಪಲಕ್ಷ ಸಲಹೆಗಳು ಬಂದುವು.

"ಈ ಸಲಹೆಗಳಾವುವೂ ಪ್ರಸಕ್ತಸಂದರ್ಭದಲ್ಲಿ ನನಗೆ ಸರಿಯಾಗಿ ಕಾಣುತ್ತಿಲ್ಲ"–ಎಂದು ಶ್ರೀರಾಮನು ಹೇಳಿ ಕಪಿಗಳನ್ನೂ, ಕಪಿಪ್ರಮುಖರನ್ನೂ ಸಂತೈಸುತ್ತಾ ಹೇಳಿದನು :

"ನೀವು ಕೊಟ್ಟ ಯಾವ ಸಲಹೆಯೂ ನನಗೆ ಸೂಕ್ತವಾಗಿ ಕಾಣುತ್ತಿಲ್ಲ. ಈ ಸಮುದ್ರವು ನೂರುಯೋಜನಗಳಷ್ಟು ವಿಸ್ತೀರ್ಣದ್ದಾಗಿದೆ. ವೀರಾಗ್ರಣಿಗಳೇ! ನೀವೆಲ್ಲರೂ ಈ ಅಪಾರವಾದ ಸಮುದ್ರವನ್ನು ದಾಟಲು ಸಮರ್ಥರಲ್ಲ. ಕೆಲವರು ಮಾತ್ರವೇ ಈ ಸಮುದ್ರವನ್ನು ದಾಟಬಹುದು. ನಾವು ಅಪಾರಸೈನ್ಯವನ್ನು ಸಿದ್ಧಗೊಳಿಸಿರುವಾಗ ಕೆಲವರು ಮಾತ್ರವೇ ಲಂಕೆಗೆ ಹೋಗುವುದೂ ಸೂಕ್ತವಲ್ಲ. ಆದುದರಿಂದ ನಿಮ್ಮಲ್ಲಿ ಕೆಲವರು ಮಾತ್ರವೇ ಸಮುದ್ರವನ್ನು ಹಾರುತ್ತೇವೆಂದು ಮಾಡಿದ ಸಲಹೆಯು ಯುಕ್ತಿಯುಕ್ತವೂ ಅಲ್ಲ; ಗ್ರಾಹ್ಯವೂ ಅಲ್ಲ. ಎರಡನೆಯದು–ನೌಕೆಗಳ ಮೂಲಕ ಸಮುದ್ರವನ್ನು ದಾಟಬೇಕೆಂಬ ಸಲಹೆ. ಇದೇನೋ ಸರಿಯಾದ ಸಲಹೆಯೇ ಆಗಿದೆ. ಆದರೆ ಅನೇಕಸಹಸ್ರಕೋಟಿ ಕಪಿಸೇನೆಗಳನ್ನು ಒಯ್ಯುವಷ್ಟು ನೌಕೆಗಳು ನಮ್ಮಲ್ಲಿರುವುದಿಲ್ಲ. ಇರುವ ನೌಕೆಗಳಿಂದಲೇ ದಾಟಬೇಕಾದರೆ ಈ ಅಪಾರ ಸೈನ್ಯವನ್ನು ಸಾಗಿಸಲು ಬಹಳ ದಿನಗಳೇ ಬೇಕಾಗುತ್ತವೆ. ಇದರಿಂದ ನೌಕೆಗಳ ಮೂಲಕವಾಗಿ ವ್ಯಾಪಾರ-ವ್ಯವಹಾರವನ್ನಿಟ್ಟುಕೊಂಡಿರುವವರಿಗೂ ಬಹಳ

ತೊಂದರೆಯಾಗುತ್ತದೆ. ಮೂರನೆಯದಾಗಿ–ನಾವು ಬಹಳ ದಿವಸಗಳವರೆಗೆ ಸೈನ್ಯವನ್ನು ಸಾಗಿಸುತ್ತಿದ್ದರೆ ಶತ್ರುವಿಗಿದು ತಿಳಿಯದೇ ಇರುವುದಿಲ್ಲ. ಸಮಯವನ್ನು ನೋಡಿಕೊಂಡು ನಮಗೆ ಶತ್ರುಗಳು ತೊಂದರೆಕೊಡಬಹುದು.

ಈ ಕಾರಣಗಳಿಂದಾಗಿ ನೌಕೆಗಳ ಮೂಲಕವಾಗಲೀ, ದೋಣಿಗಳ ಮೂಲಕವಾಗಲೀ ನಮ್ಮ ಅಪಾರಸೇನೆಯನ್ನು ಸಾಗಿಸಿಕೊಂಡು ಹೋಗಬಹುದೆನ್ನುವ ಸಲಹೆಯೂ ಸಹ ನನಗೆ ಸೂಕ್ತವಾಗಿ ಕಾಣುತ್ತಿಲ್ಲ. ಆದರೆ ಸಮುದ್ರವನ್ನು ದಾಟಲು ಬೇರೆಯ ಉಪಾಯವೇ ಇಲ್ಲವೆಂದು ನೀವು ಅಧೀರರಾಗಬೇಕಾಗಿಲ್ಲ. ಸಮುದ್ರವನ್ನು ದಾಟುವ ಉಪಾಯವು ಯಾವುದೆಂಬುದನ್ನು ಸಮುದ್ರರಾಜನನ್ನೇ ಕೇಳಿಬಿಡೋಣ.

ನಾನೀಗಲೇ ಸಮುದ್ರರಾಜನನ್ನು ಪ್ರಾರ್ಥಿಸುತ್ತೇನೆ. ಅನ್ನಾಹಾರಗಳನ್ನು ತ್ಯಜಿಸಿ ಸಮುದ್ರದ ದಡದಲ್ಲಿ ಮಲಗಿಕೊಳ್ಳುತ್ತೇನೆ. ಅವನು ಖಂಡಿತವಾಗಿಯೂ ನನಗೆ ಪ್ರತ್ಯಕ್ಷನಾಗಿಯೇ ಆಗುತ್ತಾನೆ. ಒಂದು ವೇಳೆ ಅವನು ದರ್ಶನವೀಯದೇ ಹೋದರೆ, ಲಂಘನಮಾಡಲು ಉಪಾಯವನ್ನೂ ಸೂಚಿಸದಿದ್ದರೆ–ಅಪ್ರತಿಹತವಾದ ಅಗ್ನಿ-ವಾಯುಗಳಿಗಿಂತಲೂ ಉಗ್ರವಾದ ಮಹಾಸ್ತ್ರಗಳಿಂದ ಈ ಅಪಾರವಾದ ಸಮುದ್ರವನ್ನೇ ಕ್ಷಣಮಾತ್ರದಲ್ಲಿ ಶೋಷಿಸಿಬಿಡುತ್ತೇನೆ."

ಹೀಗೆಂದು ಹೇಳಿದ ಶ್ರೀರಾಮನು ಲಕ್ಷ್ಮಣನ ಸಮೇತನಾಗಿ ಆಚಮನ ಮಾಡಿ ಪವಿತ್ರವಾದ ದರ್ಭಾಸ್ತರಣದಲ್ಲಿ ಸಮುದ್ರಕ್ಕಭಿಮುಖವಾಗಿ ಮಲಗಿದನು. ನದ-ನದಿಗಳಿಗೊಡೆಯನಾದ, ಶ್ರೀಮಂತನಾದ ಸಮುದ್ರರಾಜನು ಸಮುದ್ರದಲ್ಲಿರುವ ಪ್ರಾಣಿಗಳಿಂದ ಸಮಾವೃತನಾಗಿ ಶ್ರೀರಾಮನ ಕನಸಿನಲ್ಲಿ ಕಾಣಿಸಿಕೊಂಡನು.

ನಾನಾವಿಧವಾದ ರತ್ನಗಳ ರಾಶಿಗಳಿಂದಲೇ ಅಲಂಕೃತನಾಗಿದ್ದ ಸಮುದ್ರರಾಜನು ರಾಮನನ್ನು–'**ಕೌಸಲ್ಯಾಮಾತಃ** ' 'ಕೌಸಲ್ಯಾದೇವಿಯ ಪುತ್ರನೇ!'–ಎಂದು ಸುಮಧುರವಾಗಿಯೂ, ಮೃದುವಾಗಿಯೂ ಸಂಬೋಧಿಸಿ ಹೇಳಿದನು:

"ಪುರುಷರ್ಷಭನೇ! ನಾನು ನಿನಗೇನು ಸಹಾಯಮಾಡಬೇಕಾಗಿದೆ

ಯೆಂಬುದನ್ನು ಹೇಳು. ಸಗರಪುತ್ರರಿಂದ ಸಂವರ್ಧಿತನಾದ ಕಾರಣ ನಾನು ಕೂಡ ಇಕ್ಷ್ವಾಕುವಂಶದಲ್ಲಿಯೇ ಹುಟ್ಟಿದವನಾಗಿದ್ದು ನಿನ್ನ ಜ್ಞಾತಿಯೂ ಆಗಿದ್ದೇನೆ. ಆದುದರಿಂದ ನಿನ್ನ ಆಶಯವೇನೆಂಬುದನ್ನು ಹೇಳು, ರಾಮ!"

"ನದ-ನದಿಗಳೊಡೆಯನೇ! ನನ್ನ ಈ ಅಪಾರಸೈನ್ಯಕ್ಕೆ ನಿನ್ನ ಮೂಲಕ ವಾಗಿ ಒಂದು ಮಾರ್ಗದ ಆವಶ್ಯಕತೆಯಿದೆ. ಆ ಮಾರ್ಗದಿಂದ ಈ ಅಪಾರ ವಾದ ಕಪಿಸೈನ್ಯದೊಡನೆ ನಾನು ನಿನ್ನನ್ನು ದಾಟಿಹೋಗಿ ಪೌಲಸ್ತ್ಯಕುಲ ಪಾಂಸನನಾದ ದಶಗ್ರೀವನನ್ನು ಸಂಹರಿಸಬೇಕಾಗಿದೆ. ಈ ನನ್ನ ಪ್ರಾರ್ಥನೆ ಯನ್ನು ನೀನು ನಡೆಸಿಕೊಡಲು ನಿರಾಕರಿಸಿದರೆ ಮಹಾಮಂತ್ರಗಳಿಂದ ಅಭಿ ಮಂತ್ರಿತವಾದ ಮಹಾಸ್ತ್ರಗಳಿಂದ ನಿನ್ನನ್ನು ಶೋಷಿಸಿಬಿಡುತ್ತೇನೆ."

ವರುಣಾಲಯನಾದ ಸಮುದ್ರರಾಜನು ಬಹುವ್ಯಥಿತನಾಗಿ ಬದ್ಧಾಂಜಲಿ ಯಾಗಿ ನಿಂತು ಈ ಮಾತುಗಳನ್ನು ಹೇಳಿದನು :

**ನೇಚ್ಛಾಮಿ ಪ್ರತಿಘಾತಂ ತೇ ನಾಸ್ಮಿ ವಿಘ್ನಕರಸ್ತವ ।**
**ಶೃಣು ಚೇದಂ ವಚೋ ರಾಮ ಶ್ರುತ್ವಾ ಕರ್ತವ್ಯಮಾಚರ ॥೩೯॥**

"ನಿನ್ನ ಕಾರ್ಯಕ್ಕೆ ಪ್ರತಿಬಂಧಕಮಾಡುವ ಆಶಯವು ನನಗಿಲ್ಲ. ನಾನು ನಿನ್ನ ಶತ್ರುವಲ್ಲ. ನಿನ್ನ ಕಾರ್ಯಕ್ಕೆ ಖಂಡಿತವಾಗಿಯೂ ವಿಘ್ನ ವನ್ನುಂಟುಮಾಡತಕ್ಕವನಲ್ಲ. ನಾನು ಹೇಳಲಿರುವ ಈ ಮಾತುಗಳನ್ನು ಕೇಳು. ಅನಂತರದಲ್ಲಿ ನಿನ್ನ ಕರ್ತವ್ಯವನ್ನು ಮಾಡು.

**ಯದಿ ದಾಸ್ಯಾಮಿ ತೇ ಮಾರ್ಗಂ ಸೈನ್ಯಸ್ಯ ವ್ರಜತೋಽಽಜ್ಞಯಾ ।**
**ಅನ್ಯೇಽಪ್ಯಾಜ್ಞಾಪಯಿಷ್ಯನ್ತಿ ಮಾಮೇವಂ ಧನುಷೋ ಬಲಾತ್ ॥೪೦॥**

ರಾಮ! ಈಗ ನಾನೇನಾದರೂ ನಿನ್ನ ಆಜ್ಞಾನುಸಾರವಾಗಿ ನನ್ನಲ್ಲಿಯೇ ನಿನ್ನ ಸೈನ್ಯವು ಹೋಗಲು ಮಾರ್ಗಮಾಡಿಕೊಟ್ಟೆನಾದರೆ ಇತರರೂ ಸಹ ತಮ್ಮ ಧನುಸ್ಸಿನ ಬಲವನ್ನು ನನ್ನ ಮುಂದೆ ಪ್ರದರ್ಶಿಸಿ ತಮಗೂ ಮಾರ್ಗ ಮಾಡಿಕೊಡಲು ಆಜ್ಞಾಪಿಸುತ್ತಾರೆ. ಅದಕ್ಕೆ ಅವಕಾಶವಾಗದಂತೆ ನಾನೊಂದು ಉಪಾಯವನ್ನು ನಿನಗೆ ಸೂಚಿಸುತ್ತೇನೆ.

ರಾಘವ! ನಿನ್ನ ಸೈನ್ಯದಲ್ಲಿ ನಲನೆಂಬ ಹೆಸರಿನ ಶಿಲ್ಪಿಯೊಬ್ಬನಿದ್ದಾನೆ. ಅವನು ಮಹಾಮೇಧಾವೀ. ಅವನು ದೇವಶಿಲ್ಪಿಯಾದ ವಿಶ್ವಕರ್ಮನ ಮಗನು.

ಮಹಾಬಲಿಷ್ಠ. ಅವನು ತನ್ನ ಕೈಯಿಂದ ಮುಟ್ಟಿ ಮರವನ್ನೇ ಆಗಲೀ, ಕಲ್ಲನ್ನೇ ಆಗಲೀ–ನನ್ನಲ್ಲಿ ಹಾಕಿದರೆ ಅದನ್ನು ನಾನು ಹಾಗೆಯೇ ಎತ್ತಿಹಿಡಿಯುತ್ತೇನೆ. ಮುಳುಗಗೊಡುವುದಿಲ್ಲ. ಅದೇ ನಿನಗೆ ಸೇತುವೆಯಾಗಿ ಪರಿಣಮಿಸುತ್ತದೆ" ಹೀಗೆಂದು ಹೇಳಿ ಸಮುದ್ರರಾಜನು ಅಂತರ್ಹಿತನಾದನು. ರಾಮನು ಎಚ್ಚೆತ್ತು ಕನಸಿನಲ್ಲಾದುದನ್ನು ಸ್ಮರಿಸಿಕೊಂಡವನಾಗಿ ನಲನನ್ನು ತನ್ನ ಸಮೀಪಕ್ಕೆ ಕರೆದು ಹೇಳಿದನು :

"ನಲನೇ! ಈ ಸಮುದ್ರದ ಮೇಲೆ ಸೇತುವೆಯನ್ನು ನಿರ್ಮಾಣ ಮಾಡು. ನೀನೊಬ್ಬನು ಮಾತ್ರವೇ ಸಮುದ್ರದ ಮೇಲೆ ಸೇತುವೆ ಕಟ್ಟಲು ಸಮರ್ಥನಾಗಿರುವೆ."

ನಲನು 'ತಥಾಸ್ತು' ಎಂದನು.

ಯುಧಿಷ್ಠಿರ! ಈ ರೀತಿಯಾಗಿ ರಾಘವನು ನಲನಿಂದ ಹತ್ತು ಯೋಜನಗಳಷ್ಟು ಅಗಲವಾಗಿಯೂ, ನೂರು ಯೋಜನಗಳಷ್ಟು ಉದ್ದ ವಾಗಿಯೂ ಇರುವ ಸೇತುವೆಯನ್ನು ಸಮುದ್ರದ ಮೇಲೆ ನಿರ್ಮಾಣಮಾಡಿ ಸಿದನು. ಇಂದಿಗೂ ಸಹ ಆ ಸೇತುವೆಯು ನಲಸೇತುವೆಂದೇ ಪ್ರಸಿದ್ಧಿಯಾಗಿ ಅಚ್ಚಳಿಯದೇ ಇರುವುದು.

ರಾಮನ ಆಜ್ಞಾನುಸಾರವಾಗಿ ನಿರ್ಮಿಸಲ್ಪಟ್ಟು ಸಮುದ್ರದಲ್ಲಿ ಹೊರ ಹೊಮ್ಮಿದ್ದ ಆ ಸೇತುವೆಯು ಪರ್ವತೋಪಮವಾಗಿದ್ದಿತು.

ರಾಮನಿನ್ನೂ ಸಮುದ್ರದ ಇತ್ತಕಡೆಯಲ್ಲಿಯೇ ಇದ್ದಾಗ (ಲಂಕೆಗೆ ಪ್ರಯಾಣಮಾಡುವ ಮೊದಲು) ಧರ್ಮಾತ್ಮನಾದ, ರಾವಣನ ತಮ್ಮನಾದ ವಿಭೀಷಣನು ತನ್ನ ನಾಲ್ವರು ಅಮಾತ್ಯರಿಂದ ಕೂಡಿದವನಾಗಿ ರಾಮನ ಸಮೀಪಕ್ಕೆ ಆಗಮಿಸಿದನು. ವಿಶಾಲಮನಸ್ಕನಾದ ರಾಮನು ವಿಭೀಷಣನನ್ನು ಸ್ವಾಗತಿಸಿದನು. ಆದರೆ ಸುಗ್ರೀವನು ಮಾತ್ರ ವಿಭೀಷಣನನ್ನು ಗೂಢಚಾರ ನಿರಬಹುದೆಂದೇ ಶಂಕಿಸಿದನು. ರಾಘವನಾದರೋ ವಿಭೀಷಣನ ಸತ್ಯಚೇಷ್ಟೆ, ನಿರ್ದುಷ್ಟವಾದ ನಡತೆ, ನಿಷ್ಕಳಂಕವಾದ ಮುಖಭಾವ–ಇವುಗಳನ್ನು ವೀಕ್ಷಿಸಿ ಅವನು ನಂಬಿಕೆಗೆ ಅರ್ಹನೆಂದು ತಿಳಿದನಂತರವೇ ಅವನನ್ನು ಆದರಿಸಿ-ಗೌರವಿ ಸಿದನು. ರಾವಣನನ್ನು ಸಂಹರಿಸುವ ಮೊದಲೇ ರಾಮನು ವಿಭೀಷಣನನ್ನು

ಸಕಲರಾಕ್ಷಸರಿಗೂ ಸಾರ್ವಭೌಮನನ್ನಾಗಿ ಮಾಡಿದನು. ವಿಭೀಷಣನನ್ನು ಮಂತ್ರಾಲೋಚನಾಸಭೆಯ ಸದಸ್ಯನನ್ನಾಗಿ ಮಾಡಿಕೊಂಡನಲ್ಲದೇ-ಅವನನ್ನು ಲಕ್ಷ್ಮಣನಿಗೂ ಪರಿಚಯಮಾಡಿಕೊಟ್ಟು ವಿಭೀಷಣನೊಡನೆ ಮೈತ್ರಿ ಯಿಂದಿರಲೂ ಹೇಳಿದನು.

ವಿಭೀಷಣನ ಸಲಹೆಯನ್ನು ಸಂಪೂರ್ಣವಾಗಿ ಪಡೆದು, ರಾಮನೂ ಮತ್ತು ಅಪಾರವಾದ ಕಪಿಸೈನಿಕರೂ ಒಂದು ತಿಂಗಳ ಅವಧಿಯಲ್ಲಿ ನಲ ಸೇತುವೆಯ ಮೂಲಕ ಸಮುದ್ರವನ್ನು ದಾಟಿದರು. ಸೈನ್ಯಸಮೇತನಾಗಿ ಲಂಕೆಗೆ ಬಂದನಂತರ ರಾಮನು ಲಂಕಾಪಟ್ಟಣದ ಸುತ್ತಲೂ ಇದ್ದ ಅನೇಕಾನೇಕ ಸುಂದರೋದ್ಯಾನವನಗಳನ್ನು ಧ್ವಂಸಮಾಡಲು ಕಪಿಸೈನ್ಯಕ್ಕೆ ಕರೆ ಕೊಟ್ಟನು. ಈ ಮಧ್ಯದಲ್ಲಿ ರಾವಣನ ಮಂತ್ರಿಗಳಾದ ಶುಕ ಮತ್ತು ಸಾರಣರು ಕಪಿಗಳಾಗಿ ವೇಷಾಂತರವನ್ನು ಹೊಂದಿ ರಾಮನ ಸೈನ್ಯದಲ್ಲಿ ಸೇರಿಕೊಂಡು ಅಲ್ಲಿ ನಡೆಯುತ್ತಿದ್ದ ವಿಷಯಗಳೆಲ್ಲವನ್ನೂ ಗ್ರಹಿಸಿಕೊಳ್ಳುತ್ತಿದ್ದರು. ಕಪಿಗಳ ರೂಪದಲ್ಲಿದ್ದರೂ ಅವರ ವರ್ತನೆಯನ್ನು ಶಂಕಿಸಿದ ವಿಭೀಷಣನು ಅವರಿ ಬ್ಬರೂ ವಾನರರಲ್ಲವೆಂದೂ-ವಾನರವೇಷವನ್ನು ಧರಿಸಿರುವ ರಾಕ್ಷಸರೆಂದೂ ರಾಮನಿಗೆ ತಿಳಿಸಿದನು. ವಿಭೀಷಣನ ಕೈಗೆ ಸಿಕ್ಕಿಬಿದ್ದ ಆ ರಾಕ್ಷಸರು ಅನ್ಯಥಾ ವಿಧಿಯಿಲ್ಲದೇ ತಮ್ಮ ಪೂರ್ವರೂಪವನ್ನು ಹೊಂದಬೇಕಾಯಿತು. ಧೀಮಂತ ನಾದ ರಾಮನು ಅವರನ್ನು ಸಾಯಗೊಡಲಿಲ್ಲ. ಅವರಿಗೆ ತನ್ನ ಅಪಾರಸೈನ್ಯ ವನ್ನು ತೋರಿಸಿ ಅವರನ್ನು ಹಿಂದಕ್ಕೆ ಕಳುಹಿಸಿಕೊಟ್ಟನು. ಶ್ರೀರಾಮನು ಲಂಕಾ ಪಟ್ಟಣದ ಸುತ್ತಲೂ ಇದ್ದ ವನಗಳಲ್ಲಿ ಸೈನ್ಯವನ್ನು ಸಜ್ಜಾಗಿ ನಿಲ್ಲಿಸಿದ ನಂತರ ಪ್ರಾಜ್ಞನಾದ ಮತ್ತು ಮೇಧಾವಿಯಾದ ಅಂಗದನನ್ನು ರಾಯಭಾರಿಯನ್ನಾಗಿ ಮಾಡಿ ರಾವಣನ ಬಳಿಗೆ ಕಳುಹಿಸಿಕೊಟ್ಟನು.

೨೮೩ನೆಯ ಅಧ್ಯಾಯವು ಮುಗಿಯಿತು.

## ಅಂಗದನು ರಾವಣನ ಸಮೀಪಕ್ಕೆ ಹೋಗಿ ರಾಮನ ಸಂದೇಶವನ್ನು ತಿಳಿಸಿದುದು : ವಾನರ–ರಾಕ್ಷಸರ ಘೋರಸಂಗ್ರಾಮ

ಯುಧಿಷ್ಠಿರ! ಸೇನೆಯನ್ನು ನಿಲ್ಲಿಸಿದ್ದ ಆ ಸ್ಥಳದಲ್ಲಿ ಸೈನ್ಯಕ್ಕೆ ಅನ್ನೋದಕಗಳು ಯಥೇಷ್ಟವಾಗಿ ಸಿಕ್ಕುತ್ತಿದ್ದುವು. ಕಂದ-ಮೂಲ-ಫಲಗಳೂ ಸಮೃದ್ಧವಾಗಿ ಸಿಕ್ಕುತ್ತಿದ್ದುವು. ಅಂತಹ ಸರ್ವಸಮೃದ್ಧವಾದ ಸ್ಥಳದಲ್ಲಿ ರಾಮನು ಸೇನೆಯನ್ನು ನಿಲ್ಲಿಸಿ, ಆ ಅಪಾರಸೈನ್ಯವನ್ನು ಬಹುಜಾಗರೂಕತೆಯಿಂದ ಸಂರಕ್ಷಿಸುತ್ತಿದ್ದನು.

ಇತ್ತಲಾಗಿ ರಾವಣನೂ ಸಹ ಶಾಸ್ತ್ರಾನುಸಾರವಾಗಿ ನಿರ್ಮಿಸಿದ ಅನೇಕ ಯುದ್ಧಯಂತ್ರೋಪಕರಣಗಳನ್ನು ನಗರದ ಸುತ್ತಲೂ ಸ್ಥಾಪಿಸಿದನು. ದೃಢವಾದ ಕೋಟೆಗಳಿಂದಲೂ, ಪ್ರಾಕಾರಗಳಿಂದಲೂ, ಸಂಪೂರ್ಣವಾಗಿ ನೀರಿನಿಂದ ತುಂಬಿಹೋಗಿದ್ದ ಏಳು ಕಂದಕಗಳಿಂದಲೂ ಆ ಲಂಕಾಪಟ್ಟಣವು ಬಹುದುರ್ಗಮವಾಗಿದ್ದಿತು. ಆ ಕಂದಕಗಳಲ್ಲಿ ಮೊಸಳೆ-ತಿಮಿ-ತಿಮಿಂಗಿಲಗಳು ತುಂಬಿದ್ದುವು ಮತ್ತು ಖಾದಿರವೃಕ್ಷಗಳ ಮುಳ್ಳುಗಳಿಂದಲೂ ಆ ಕಂದಕಗಳು ತುಂಬಿದ್ದುವು.

ಲಂಕಾಪಟ್ಟಣದ ಎಲ್ಲ ಮಹಾದ್ವಾರಗಳಲ್ಲಿಯೂ ಕಲ್ಲಿನ ರಾಶಿಗಳನ್ನೂ ಮರದ ದಿಮ್ಮಿಗಳನ್ನೂ ಇಟ್ಟಿದ್ದರು. ಕಾಲಾಳುಗಳೂ, ಗಜ-ತುರಗಸೈನಿಕರೂ ಸದಾಕಾಲದಲ್ಲಿಯೂ ಮಹಾದ್ವಾರಗಳನ್ನು ಕಾಯುತ್ತಿದ್ದರು. ಕೋಟೆಯನ್ನು ಕಾಯುತ್ತಿದ್ದ ಹಲವಾರು ರಾಕ್ಷಸಸೈನಿಕರು ಮಡಕೆಗಳಲ್ಲಿ ವಿಷಸರ್ಪಗಳನ್ನು ಹಿಡಿದಿಟ್ಟುಕೊಂಡಿದ್ದರು. ಬೆಂಕಿಗೆ ಹಾಕಿದೊಡನೆಯೇ ವಿಷಪೂರಿತವಾದ ಹೊಗೆಯನ್ನು ಪ್ರಸರಿಸುವ ಅನೇಕವಿಧವಾದ ರಾಳಗಳನ್ನು ಆ ಸೈನಿಕರು ಇಟ್ಟುಕೊಂಡಿದ್ದರು. ಒಬ್ಬೊಬ್ಬರೂ ಪಂಜುಗಳನ್ನೂ, ಭರ್ಜಿಗಳನ್ನೂ, ಈಟಿಗಳನ್ನೂ, ಗಂಡುಗೊಡಲಿಗಳನ್ನೂ, ಮೇಣದಿಂದ ಲೇಪಿತವಾದ ಗದೆಗಳನ್ನೂ, ಕತ್ತಿ-ಗುರಾಣಿಗಳನ್ನೂ ಇಟ್ಟುಕೊಂಡಿದ್ದರು. ಒಂದೇ ಬಾರಿಗೆ ನೂರಾರು ಜನರನ್ನು ಸಂಹರಿಸುವ ಶತಘ್ನೀ–ಎಂಬ ಯಂತ್ರವಿಶೇಷಗಳನ್ನು ಲಂಕಾಪಟ್ಟಣದ ಕೋಟೆಯ ಸುತ್ತಲೂ ಇಡಲಾಗಿತ್ತು. ಎಲ್ಲ ಬಾಗಿಲುಗಳಲ್ಲಿಯೂ

ಯಾವಾಗಲೂ ಕಾವಲು ಕಾಯುವ ಸ್ಥಿರವಾದ ಪಡೆಗಳೂ, ಆಗಾಗ ಬಂದು ಹೋಗುವ ಸೈನ್ಯಗಳೂ ಇದ್ದುವು. ಅವುಗಳಲ್ಲಿ ಪದಾತಿಗಳೂ, ಗಜಾಶ್ವಸೈನ್ಯಗಳೂ ಹೆಚ್ಚು ಸಂಖ್ಯೆಯಲ್ಲಿದ್ದುವು.

ಈ ರೀತಿ ಬಹುದುರ್ಗಮವಾಗಿದ್ದ ಲಂಕಾಪಟ್ಟಣವನ್ನು ರಾಮನ ರಾಯಭಾರಿಯಾದ ಅಂಗದನು ಪ್ರವೇಶಿಸಿದನು. ತಾನು ರಾಮನ ರಾಯಭಾರಿಯಾಗಿ ರಾವಣನನ್ನು ನೋಡಲು ಬಂದಿರುವೆನೆಂಬ ವಾರ್ತೆಯನ್ನು ರಾವಣನಿಗೆ ಕಳುಹಿಸಿ, ಭಯವಾಗಲೀ–ಶಂಕೆಯಾಗಲೀ ಇಲ್ಲದೇ ರಾವಣನ ಅರಮನೆಯನ್ನು ಪ್ರವೇಶಿಸಿದನು. ಅಂಗದನು ರಾಜಬೀದಿಯಲ್ಲಿ ಹೋಗುತ್ತಿದ್ದಾಗ ಸಾವಿರಾರು ರಾಕ್ಷಸರು ಕುತೂಹಲಯುಕ್ತರಾಗಿ ಅವನನ್ನು ನೋಡುತ್ತಿದ್ದರು. ಅವರ ಮಧ್ಯದಲ್ಲಿದ್ದ ಅಂಗದನು ಕಾರ್ಮುಗಿಲುಗಳ ಮಧ್ಯದಲ್ಲಿ ಕಾಣಿಸುವ ಸೂರ್ಯನಂತೆ ಪ್ರಕಾಶಿಸಿದನು. ರಾಜಸಭೆಗೆ ಪ್ರವೇಶಿಸಿದ ವಾಗ್ಮಿಯಾದ ಅಂಗದನು ಅಮಾತ್ಯರಿಂದ ಪರಿವೃತನಾಗಿದ್ದ ರಾವಣನಿಗೆ ಯಥಾಯೋಗ್ಯವಾಗಿ ಅಭಿನಂದಿಸಿ ರಾಮನ ಸಂದೇಶವನ್ನು ಹೇಳಲುಪಕ್ರಮಿಸಿದನು :

"ರಾವಣೇಶ್ವರ! ರಘುಕುಲಾವತಂಸನಾದ, ಕೋಸಲರಾಜ್ಯದ ಅರಸನಾದ, ಯಶೋವಂತನಾದ ಶ್ರೀರಾಮನು ಏತತ್ಕಾಲಯೋಗ್ಯವಾದ ಈ ಸಂದೇಶವನ್ನು ನಿನಗೆ ಕಳುಹಿಸಿದ್ದಾನೆ. ಈ ಸಂದೇಶವನ್ನು ನಾನು ಯಥಾವತ್ತಾಗಿ ನಿನ್ನ ಮುಂದಿಡುತ್ತೇನೆ. ರಾಮನ ದಿವ್ಯಸಂದೇಶವನ್ನು ಗೌರವಿಸಿ ಅದರಂತೆ ನಡೆಯುವುದು ಯುಕ್ತವಾಗಿದೆ.

**ಅಕೃತಾತ್ಮಾನಮಾಸಾದ್ಯ ರಾಜಾನಮನಯೇ ರತಮ್ ।**
**ವಿನಶ್ಯನ್ತ್ಯನಯಾವಿಷ್ಟಾ ದೇಶಾಶ್ಚ ನಗರಾಣಿ ಚ ॥೧೧॥**

"ರಾಜ್ಯದ ಆಗು-ಹೋಗುಗಳಿಗೆ ರಾಜನೇ ಮುಖ್ಯಕಾರಣನಾಗುತ್ತಾನೆ. ರಾಜನ ನಡವಳಿಕೆ ಇದ್ದಂತೆ ಪ್ರಜೆಗಳ ನಡೆವಳಿಕೆಗಳೂ ಇರುತ್ತವೆ. ರಾಜನು ಶುದ್ಧಚರಿತನಾದರೆ ಪ್ರಜೆಗಳೂ ಸಹ ಶುದ್ಧಚಾರಿತ್ರ್ಯವುಳ್ಳವರಾಗಿರುತ್ತಾರೆ. ರಾಜನು ಸಂಯಮಿಯಾಗಿರದೆ ಸ್ವೇಚ್ಛಾವರ್ತನೆಯಿಂದಿದ್ದರೆ ಪ್ರಜೆಗಳೂ ಅದೇ ಮಾರ್ಗವನ್ನು ಅನುಸರಿಸುತ್ತಾರೆ. ಅಕೃತಾತ್ಮರಾದ ಜಿತೇಂದ್ರಿಯರಲ್ಲದ ರಾಜರಿರುವ ರಾಜ್ಯಗಳು ಕಾಲಾನುಕ್ರಮದಲ್ಲಿ ಪಾಪಭೂಯಿಷ್ಠವಾಗಿ

ವಿನಾಶಹೊಂದುತ್ತವೆ. ಅರ್ಥಾತ್ ಒಬ್ಬನೇ ಒಬ್ಬ ವ್ಯಕ್ತಿಯ ಕಾರಣದಿಂದ ದೇಶ-ಕೋಶಗಳೆಲ್ಲವೂ ಹಾಳಾಗುತ್ತವೆ. ಪ್ರಕೃತಸಂದರ್ಭದಲ್ಲಿ ಸೀತೆಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದು ನನಗೆ ಅಪರಾಧಮಾಡಿರುವವನು ನೀನೊಬ್ಬನೇ ಆಗಿರುವೆ. ಸೀತೆಯ ಅಪಹರಣಕ್ಕೆ ನಿನ್ನ ಮಂತ್ರಿಗಳಾಗಲೀ ಪ್ರಜೆಗಳಾಗಲೀ ಕಾರಣರಲ್ಲ. ಕೇವಲ ಕಾಮುಕತೆಯಿಂದ ನೀನು ಮಾಡಿದ ಸೀತಾಪಹರಣದಿಂದ ನನಗೆ ಅಪರಾಧಮಾಡಿರುವೆ. ಅಪರಾಧಿಯು ನೀನೊಬ್ಬನೇ ಆದರೂ ನಿರಪರಾಧಿಗಳೂ ಸಹ ಅದರ ಫಲವನ್ನು ಅನುಭವಿಸಬೇಕಾಗುವುದು. ನಿರಪರಾಧಿಗಳಾದ ಅನೇಕರ ಸಾವಿಗೆ ನೀನು ಕಾರಣನಾಗಲಿರುವೆ. ನೀನು ಅನೇಕಬಾರಿ ಅನೇಕರ ವಿಷಯದಲ್ಲಿ ಅಪರಾಧಮಾಡಿರುವೆಯೆಂಬ ವಿಷಯವೂ ನನಗೆ ತಿಳಿಯದಿಲ್ಲ. ಕೇವಲ ಬಲ ಮತ್ತು ದರ್ಪಗಳಿಂದ ಉದ್ಧಟನಾದ ನೀನು ಅರಣ್ಯದಲ್ಲಿ ತಪಶ್ಚರಣೆಮಾಡುತ್ತಿದ್ದ ಅನೇಕ ಋಷಿ-ಮಹರ್ಷಿಗಳನ್ನು ಕಾರಣವಿಲ್ಲದೇ ಕೊಂದಿರುವೆ. ನಿನ್ನ ಅನುಯಾಯಿಗಳು ಅವರಿಗೆ ಉಪಟಳ ಕೊಡುತ್ತಲೇ ಇರುತ್ತಾರೆ. ದೇವತೆಗಳನ್ನೂ ನೀನು ಅನೇಕ ಬಾರಿ ಅವಮಾನಿಸಿರುವೆ. ಅನೇಕರಾಜರ್ಷಿಗಳೂ ನಿನ್ನಿಂದ ಹತರಾಗಿದ್ದಾರೆ. ಪತಿಗಳನ್ನು ಕಳೆದುಕೊಂಡು ರೋದಿಸುತ್ತಿದ್ದ ಅನೇಕನಾರೀಮಣಿಯರನ್ನು ನಿರ್ದಯಹೃದಯನಾದ ನೀನು ಅಪಹರಿಸಿರುವೆ. ಈ ಘೋರಕೃತ್ಯಗಳ ಫಲವೀಗ ನಿನಗೆ ಸನ್ನಿಹಿತವಾಗಿದೆ. ಅಮಾತ್ಯರಿಂದ ಸಮೇತನಾದ ನಿನ್ನನ್ನು ನಾನೀಗ ಸಂಹರಿಸಲಿದ್ದೇನೆ. ತಪಸ್ವಿಗಳ ಮೇಲೆ, ಅಬಲೆಯರ ಮೇಲೆ, ಸಾಧು-ಸಂತರ ಮೇಲೆ ಪೌರುಷವನ್ನು ತೋರಿಸಿದ ನೀನಿಂದು ನನ್ನೊಡನೆ ಯುದ್ಧಮಾಡಿ ನಿನ್ನ ಪೌರುಷವನ್ನು ತೋರಿಸು. ಮನುಷ್ಯರನ್ನು ನೀನು ಬಹಳ ಕೀಳಾಗಿ ಭಾವಿಸಿರುವೆ. ಅಂತಹ ಮನುಷ್ಯರಲ್ಲೇ ನಾನೂ ಒಬ್ಬನಾಗಿರುತ್ತೇನೆ. ಮನುಷ್ಯನಾದ ನನ್ನ ಧನುಸ್ಸಿನ ವೀರ್ಯವನ್ನಾದರೂ ನೋಡು. ಒಂದು ವೇಳೆ ಈಗ ನೀನು ನಿನ್ನ ಪ್ರಾಣವನ್ನುಳಿಸಿಕೊಳ್ಳಲು ಇಚ್ಛಿಸುವೆಯಾದರೆ ಜನಕನ ಮಗಳಾದ ಸೀತೆಯನ್ನು ಈ ಕೂಡಲೇ ತಂದೊಪ್ಪಿಸು. ಹಾಗೆ ಮಾಡದಿದ್ದರೆ ನನ್ನ ನಿಶಿತವಾದ ಮಹಾಸ್ತ್ರಗಳಿಂದ ಈ ಭೂಮಿಯನ್ನೇ ರಾಕ್ಷಸರಹಿತವನ್ನಾಗಿ ಮಾಡಿಬಿಡುತ್ತೇನೆ.” ಈ ಪ್ರಕಾರವಾದ ಶ್ರೀರಾಮನ ಸಂದೇಶವನ್ನು ಹೇಳಿ ಅಂಗದನು ವಿರಮಿಸಿದನು. ರಾಮದೂತನ ಬಹುನಿಷ್ಠುರವಾದ ಆ ಮಾತುಗಳು ರಾವಣ

ನಿಗೆ ಸಹ್ಯವಾಗಲಿಲ್ಲ. ಕೋಪದಿಂದ ಕಿಡಿ-ಕಿಡಿಯಾದನು. ಮುಖಭಾವ ದಿಂದಲೇ ತಮ್ಮರಾಜನ ಇಂಗಿತವೇನೆಂಬುದನ್ನು ತಿಳಿದ ನಾಲ್ವರು ರಾಕ್ಷಸರು-ಪಕ್ಷಿಗಳು ವ್ಯಾಘ್ರರಾಜನನ್ನು ಹಿಡಿಯಲು ಹೋಗುವಂತೆ–ನಾಲ್ಕು ನಿಟ್ಟಿನಿಂದಲೂ ನುಗ್ಗಿ ಅಂಗದನನ್ನು ಹಿಡಿದುಕೊಂಡರು. ನಾಲ್ವರು ರಾಕ್ಷಸರೂ ಅಂಗದನ ಕೈಕಾಲುಗಳನ್ನು ಬಲವಾಗಿ ಹಿಡಿದು ನಿಂತಿದ್ದರೂ ಸಹ ಮಹಾ ಬಲಿಷ್ಠನಾದ ಅಂಗದನು ಅವರನ್ನು ಎತ್ತಿಕೊಂಡೇ ಛಂಗನೆ ಹಾರಿ ಅರಮನೆಯ ಮೇಲೆ ಹೋಗಿ ನಿಂತನು. ನಾಲ್ವರು ರಾಕ್ಷಸರೂ ತೊಪ-ತೊಪನೆ ಕೆಳಗೆ ಬಿದ್ದರು. ಅವರ ಹೃದಯಗಳು ಸೀಳಿಹೋದುವು. ಅಂಗದನು ಅರಮನೆಯ ಚಿನ್ನದ ಶಿಖರದ ಮೇಲಿಂದ ಹಾರಿ ಲಂಕೆಯನ್ನು ದಾಟಿ ಸುಮೇರು ಪರ್ವತದ ಸಮೀಪದಲ್ಲಿದ್ದ ಕೋಸಲೇಂದ್ರನ ಸಮೀಪಕ್ಕೆ ಆಗಮಿಸಿದನು. ರಾವಣನ ರಾಜಸಭೆಯಲ್ಲಿ ನಡೆದುದೆಲ್ಲವನ್ನೂ ರಾಮನಿಗೆ ಹೇಳಿದನಂತರ ರಾಮನಿಂದ ಸಮ್ಮಾನಿತನಾಗಿ ಸ್ವಲ್ಪಕಾಲ ವಿಶ್ರಮಿಸಿಕೊಂಡನು.

ಶುಭಮುಹೂರ್ತದಲ್ಲಿ ರಾಮನು ಲಂಕೆಯ ಆಕ್ರಮಣಕ್ಕೆ ಆಜ್ಞೆಮಾಡಿದನು. ವಾಯುವೇಗಕ್ಕೆ ಸಮನಾದ ವೇಗವುಳ್ಳ ವಾನರಸೈನಿಕರು ರಾಮನ ಆಜ್ಞೆಯಂತೆ ಲಂಕಾಪಟ್ಟಣದ ಕೋಟೆಯನ್ನು ಭೇದಿಸಿದರು. ಲಕ್ಷ್ಮಣನು ವಿಭೀಷಣ ಮತ್ತು ಜಾಂಬವಂತರೊಡನೆ ಅಭೇದ್ಯವಾಗಿದ್ದ ಲಂಕಾಪಟ್ಟಣದ ದಕ್ಷಿಣದ ಹೆಬ್ಬಾಗಿಲಿಗೆ ಮುತ್ತಿಗೆಹಾಕಿ ಅದನ್ನು ಭೇದಿಸಿ ಒಳಗೆ ನುಗ್ಗಿದನು. ರಾಮನು ಕೋಟ್ಯನುಕೋಟಿ ವಾನರಸೇನೆಯೊಡನೆ ಲಂಕೆಯ ಮೇಲೆ ದಾಳಿಮಾಡಿದನು. ಕೆಂಪು ಮತ್ತು ಬಿಳಿಯ ಛಾಯೆಯಿಂದ ಕೂಡಿದ್ದ ಆ ವಾನರರು ಯುದ್ಧದಲ್ಲಿ ಬಹುನಿಷ್ಣಾತರಾಗಿದ್ದರು. ಕೋಟ್ಯನುಕೋಟಿ ವಾನರಸೇನೆಯ ಹಿಂಬದಿಯಲ್ಲಿಯೇ ದೀರ್ಘವಾದ ಬಾಹುಗಳಿಂದಲೂ ಕಾಲುಗಳಿಂದಲೂ ಕೂಡಿದ್ದ, ನೀಳವಾದ ಕೂದಲಿನಿಂದಲೂ, ನೀಳವಾದ ಕೋರೆದಾಡೆಗಳಿಂದಲೂ ಕೂಡಿದ ಧೂಮ್ರವರ್ಣವುಳ್ಳ ಮತ್ತು ಮಹಾಬಲಿಷ್ಠವಾದ ಮೂರುಕೋಟಿ ಕರಡಿಗಳ ಸೈನ್ಯವೂ ಲಂಕಾಪಟ್ಟಣದ ಮೇಲೆ ದಾಳಿಯನ್ನು ಆರಂಭಿಸಿತು.

ಯುಧಿಷ್ಠಿರ! ಕೋಟ್ಯಂತರ ಕಪಿಗಳು ಇತ್ತಲಿಂದತ್ತ ಹಾರಾಡುತ್ತಿದ್ದುವು. ಅವುಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರಾಡುತ್ತಿದ್ದುದರಿಂದಲೂ ಮತ್ತು ನೆಲದ ಮೇಲೆ ನೆಗೆದು ಅಪಾರವಾದ ಧೂಳನ್ನು

ಎಬ್ಬಿಸುತ್ತಿದ್ದುದರಿಂದಲೂ ಸೂರ್ಯನ ರಶ್ಮಿಯೇ ನೆಲದ ಮೇಲೆ ಬೀಳಲು ಅವಕಾಶವಿಲ್ಲದಂತಾಯಿತು.

ಲಂಕಾಪಟ್ಟಣದ ಜನರು ಬೂದು, ಹಳದಿ, ಕೆಂಪು ಮತ್ತು ಶಿರೀಷ ಕುಸುಮದ ಬಣ್ಣಗಳ ಕಪಿಗಳಿಂದ ತುಂಬಿಹೋಗಿದ್ದ ಪ್ರಾಕಾರವನ್ನು ನೋಡಿದರು.

ಲಂಕಾಪಟ್ಟಣದ ಪ್ರಾಕಾರದ ಮೇಲೆ ಭತ್ತದ ತೆನೆಯಂತೆ ಮಾಸಲು ಹೊಂಬಣ್ಣದ ಕೋತಿಗಳಿದ್ದುವು. ಶಿರೀಷಕುಸುಮದಂತೆ ಮಾಸಲು ಹಸುರಿನ ಬಣ್ಣದ ಕೋತಿಗಳಿದ್ದುವು. ಹುಟ್ಟುತ್ತಿರುವ ಬಾಲಸೂರ್ಯನಂತೆ ಕೆಂಬಣ್ಣದ ಕೋತಿಗಳಿದ್ದುವು. ಸೆಣಬಿನಂತೆ ಮಾಸಲು ಬಿಳುಪಾದ ಕೋತಿಗಳಿದ್ದುವು. ಆಬಾಲವೃದ್ಧರಾದಿಯಾಗಿ ಸಕಲರಾಕ್ಷಸರೂ ಕೋತಿಗಳ ಆ ಸಮೂಹವನ್ನು ನೋಡಿ ಆಶ್ಚರ್ಯಚಕಿತರಾದರು. ರಾಕ್ಷಸರು ನೋಡುತ್ತಿದ್ದಂತೆಯೇ ವಾನರಪುಂಗವರು ಮಹಾಸೌಧಗಳ ಮಣಿಮಯಸ್ತಂಭಗಳನ್ನು ಕೆಳಗುರುಳಿಸಿ ಉಪ್ಪರಿಗೆಗಳನ್ನು ಕೆಡವಿದರು. ರಕ್ಷಣೆಗಾಗಿ ಪ್ರಾಕಾರದ ಸಮೀಪದಲ್ಲಿ ಎರಡು ಚಕ್ರಗಳ ಗಾಡಿಗಳ ಮೇಲೆ ನಿಲ್ಲಿಸಿದ್ದ ಸಾವಿರಾರು ಶತಘ್ನೀಯಂತ್ರಗಳನ್ನು ವಾನರಪುಂಗವರು ಧ್ವಂಸಮಾಡಿ ಒಡೆದ ಚೂರುಗಳನ್ನು ನಗರದ ನಾನಾಭಾಗಗಳಿಗೆ ರಭಸದಿಂದ ಎಸೆಯತೊಡಗಿದರು. ಹಿಂದೆಂದೂ ಕಂಡು-ಕೇಳದ ಆ ಕಪಿಸೇನೆಯನ್ನೂ ಮತ್ತು ಅವುಗಳು ಕೊಡುತ್ತಿರುವ ಉಪಟಳವನ್ನೂ ಕಂಡು ಪ್ರಾಕಾರವನ್ನು ಕಾಯುತ್ತಿದ್ದ ಸಾವಿರಾರು ರಾಕ್ಷಸರು ಭ್ರಾಂತರಾಗಿ ಪಲಾಯನಮಾಡಿದರು.

ರಾವಣೇಶ್ವರನು ಒಡನೆಯೇ ಎಲ್ಲವನ್ನೂ ತನ್ನ ಹತೋಟಿಗೆ ತೆಗೆದುಕೊಂಡನು. ರಾಜಾಜ್ಞೆಯಂತೆ ಇಚ್ಛೆಬಂದ ರೂಪವನ್ನು ಹೊಂದಲು ಸಮರ್ಥರಾದ ಮಹಾಭಯಂಕರರಾದ ಲಕ್ಷೋಪಲಕ್ಷ ರಾಕ್ಷಸಸೈನಿಕರು ಯುದ್ಧಸನ್ನದ್ಧರಾಗಿ ತಮ್ಮ-ತಮ್ಮ ನೆಲೆಗಳಿಂದ ಹೊರಬಂದರು.

ವಾನರಸೈನ್ಯದ ಮೇಲೆ ಸತತವಾದ ಶರವರ್ಷವನ್ನು ಸುರಿಸಿದರು. ಅವರ ನಿಶಿತವಾದ ಶಸ್ತ್ರಗಳ ಪ್ರಹಾರವನ್ನು ಸಹಿಸಿಕೊಳ್ಳಲು ವಾನರಸೇನೆಗೆ ಸಾಧ್ಯವಾಗಲಿಲ್ಲ. ಆಕ್ರಮಿಸಿದ್ದ ಪ್ರಾಕಾರವನ್ನು ಬಿಟ್ಟುಕೊಡಬೇಕಾಯಿತು. ವಾನರಸೇನೆಯು ಆಕ್ರಮಿಸಿದ್ದಾಗ ನಾನಾವರ್ಣಗಳಿಂದ ಕಂಗೊಳಿಸುತ್ತಿದ್ದ

ಪ್ರಾಕಾರವು ಪುನಃ ಉದ್ದಿನ ರಾಶಿಯಿಂದ ತುಂಬಿಹೋದಂತೆ–ಭೀಮರೂಪ ರಾದ ರಾಕ್ಷಸರಿಂದ ತುಂಬಿಹೋಯಿತು. ರಾಕ್ಷಸಸೇನೆಯು ಉಪ್ಪರಿಗೆಗಳ ಮೇಲಿದ್ದ ವಾನರಪುಂಗವರನ್ನು ಶೂಲಾದ್ಯಾಯುಧಗಳಿಂದ ಪ್ರಹರಿಸುತ್ತಿದ್ದರು. ಆ ಪ್ರಹಾರಗಳಿಂದ ಕುಪಿತರಾದ ಪರ್ವತೋಪಮರಾದ ಆ ವಾನರ ಪುಂಗವರು ರಾಕ್ಷಸಸೈನ್ಯದ ಮೇಲೆ ಸ್ತಂಭಗಳನ್ನೂ, ತೋರಣಗಳನ್ನೂ ರಭಸ ದಿಂದ ಎಸೆಯುತ್ತಿದ್ದರು. ಇದರಿಂದ ಭಗ್ನರಾದ ಅನೇಕ ರಾಕ್ಷಸರು ಕೆಳಗುರುಳಿ ದರು. ರಾಕ್ಷಸರಿಗೂ ಕಪಿಸೇನೆಗೂ ಘೋರಯುದ್ಧವು ಪ್ರಾರಂಭವಾಯಿತು. ರಾಕ್ಷಸರು ವಾನರಪುಂಗವರನ್ನು ಹಿಡಿದು ನುಂಗಿಹಾಕಲು ಯತ್ನಿಸುತ್ತಿದ್ದರು. ಕಪಿಮುಖ್ಯರು ಸಿಕ್ಕಿದ ರಾಕ್ಷಸರನ್ನು ಉಗುರುಗಳಿಂದ ಪರಚಿ, ಹಲ್ಲುಗಳಿಂದ ಕಡಿದು ಗಾಯಗೊಳಿಸುತ್ತಿದ್ದರು. ಒಬ್ಬರ ಕೇಶರಾಶಿಯನ್ನು ಮತ್ತೊಬ್ಬರು ಹಿಡಿದು ಅಪ್ಪಳಿಸುತ್ತಿದ್ದರು. ಒಬ್ಬೊಬ್ಬರೂ ಘೋರಗರ್ಜನೆಗಳನ್ನು ಮಾಡು ತ್ತಿದ್ದರು. ಆ ತುಮುಲಯುದ್ಧದಲ್ಲಿ ಸಾವಿರಾರು ಮಂದಿ ರಾಕ್ಷಸಯೋಧರೂ- ವಾನರಯೋಧರೂ ಮಡಿದರು. ಆದರೆ ಯಾವ ಪಕ್ಷದವರೂ ಪರಾಜಿತರಾಗಿ ಹಿಂದಿರುಗಲಿಲ್ಲ. ವೀರಗರ್ಜನೆಗಳೊಡನೆ ಯುದ್ಧವು ಮುಂದುವರಿಯಿತು.

ಮೇಘಗಳಿಂದ ಮಳೆಯು ಸತತವಾಗಿ ಸುರಿಯುವಂತೆ–ಅನುಸ್ಯೂತ ವಾದ ಬಾಣಗಳ ಮಳೆಯನ್ನೇ ರಾಮನು ರಾಕ್ಷಸಯೋಧರ ಮೇಲೆ ಸುರಿಸು ತ್ತಿದ್ದನು. ಅವನು ಬಿಡುತ್ತಿದ್ದ ಬಾಣಗಳು ಲಂಕೆಯನ್ನೆಲ್ಲಾ ಸಂಪೂರ್ಣವಾಗಿ ಆವರಿಸಿ ಸಾವಿರಾರು ರಾಕ್ಷಸಯೋಧರನ್ನು ಸಂಹರಿಸಿದುವು.

ಧನುಸ್ಸನ್ನು ದೃಢವಾಗಿ ಹಿಡಿದಿದ್ದ, ಆಯಾಸವೆಂಬುದನ್ನೇ ಕಾಣದ ಸುಮಿತ್ರೆಯ ಮಗನಾದ ಲಕ್ಷ್ಮಣನೂ ಸಹ ಕೋಟೆಯ ಮೇಲೆ ನಿಂತು, ರಾಕ್ಷಸಸೈನ್ಯದ ನಾಯಕತ್ವವನ್ನು ವಹಿಸಿ ಸೈನ್ಯಗಳಿಗೆ ನಿರ್ದೇಶನಮಾಡುತ್ತಿದ್ದ ರಾಕ್ಷಸಪ್ರಮುಖರ ಹೆಸರುಗಳನ್ನು ಹೇಳಿ, ಅವರನ್ನು ಕೊಲ್ಲುವುದಾಗಿ ಸೂಚನೆಯನ್ನಿತ್ತು, ತನ್ನ ನಿಶಿತಾಸ್ತ್ರಗಳಿಂದ ಸಂಹರಿಸುತ್ತಿದ್ದನು.

ಯುಧಿಷ್ಠಿರ! ಈ ರೀತಿಯಲ್ಲಿ ವಾನರಸೇನೆಯು ಸುಭದ್ರವಾಗಿದ್ದ ಲಂಕಾಪಟ್ಟಣದ ಕೋಟೆಯನ್ನು ಭೇದಿಸಿತು. ಲಂಕಾಪಟ್ಟಣದಲ್ಲಿ ಸರ್ವತ್ರ

ಪ್ರವೇಶಿಸಲು ವಾನರಸೇನೆಗೆ ಅವಕಾಶವು ಸಿಕ್ಕಿತು. ಪ್ರಾರಂಭದ ಜಯಗಳಿಸಿದನಂತರ ಶ್ರೀರಾಮನು ಅಂದಿನ ಯುದ್ಧವನ್ನು ಪರಿಸಮಾಪ್ತಿಗೊಳಿಸಿದನು.

೨೮೪ನೆಯ ಅಧ್ಯಾಯವು ಮುಗಿಯಿತು.

೨೮೫ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾಮ-ರಾವಣರ ಸೇನೆಗಳ ದ್ವಂದ್ವಯುದ್ಧ

ಯುಧಿಷ್ಠಿರ! ರಾಮನ ಆಜ್ಞೆಯಂತೆ ಅಪಾರವಾದ ವಾನರಸೇನೆಯು ವಿಶ್ರಾಂತಿಪಡೆಯುತ್ತಿರಲಾಗಿ, ರಾವಣನ ಅನುಯಾಯಿಗಳಾದ ಕ್ಷುದ್ರ ರಾಕ್ಷಸರೂ ಮತ್ತು ಪಿಶಾಚರೂ ವೇಷಗಳನ್ನು ಬದಲಾಯಿಸಿಕೊಂಡು ರಾಮನ ಸೈನ್ಯದಲ್ಲಿ ಸೇರಿಕೊಂಡರು. ಪರ್ವಣ, ಪತನ, ಜಂಭ, ಖರ, ಕ್ರೋಧವಶ, ಹರಿ, ಪ್ರರುಜ, ಅರುಜ, ಪ್ರಘಸ-ಮುಂತಾದವರು ಆ ರಾಕ್ಷಸಗಣದ ಪ್ರಮುಖರಾಗಿದ್ದರು. ದುರಾತ್ಮರಾದ ಆ ರಾಕ್ಷಸರು ಅದೃಶ್ಯರಾಗಿಯೇ ರಾಮನ ಸೈನ್ಯದ ಮೇಲೆ ಬೀಳುತ್ತಿದ್ದುದನ್ನು ಕಂಡ ವಿಭೀಷಣನು ತನ್ನ ಸ್ವಶಕ್ತಿಯಿಂದ ಅವರ ಅಂತರ್ಧಾನವಿದ್ಯೆಯನ್ನು ನಿರಸ್ತಗೊಳಿಸಿ ಅವರು ಎಲ್ಲರಿಗೂ ಕಾಣಿಸುವಂತೆ ಮಾಡಿದನು. ವಾನರಸೈನಿಕರು ತಮ್ಮ ಮಧ್ಯದಲ್ಲಿ ರಾಕ್ಷಸರಿರುವುದನ್ನು ಕಂಡೊಡನೆಯೇ ಅವರೆಲ್ಲರನ್ನೂ ಕ್ಷಣಮಾತ್ರದಲ್ಲಿ ಧ್ವಂಸಮಾಡಿಬಿಟ್ಟರು. ಪ್ರಾಣವನ್ನು ತೊರೆದ ಆ ರಾಕ್ಷಸರು ತಂಡತಂಡವಾಗಿ ಭೂಮಿಯ ಮೇಲೆ ಬಿದ್ದರು.

ಆ ವಿಷಯವು ತಿಳಿದೊಡನೆಯೇ ರಾಕ್ಷಸರಾಜನು ಬಹಳ ಕುಪಿತನಾದನು. ತನ್ನ ಸೈನಿಕರಿಗಾದ ಅಪಜಯವನ್ನು ಸಹಿಸಲಾರದೇ ಚತುರಂಗ ಬಲಸಮೇತನಾಗಿ ತಾನೇ ಸ್ವತಃ ರಾಮನ ಮೇಲೆ ಯುದ್ಧಕ್ಕೆ ಹೊರಟನು. ಅವನನ್ನೇ ಅನುಸರಿಸಿ ಹೋಗುತ್ತಿದ್ದ ಸೇನೆಯಲ್ಲಿ ಘೋರರೂಪಿಗಳಾದ ರಾಕ್ಷಸರೂ ಪಿಶಾಚರೂ ಅಸಂಖ್ಯಾತರಾಗಿದ್ದರು. ಯುದ್ಧಶಾಸ್ತ್ರದಲ್ಲಿ ರಾವಣನು ಕುಶಲಿಯಾಗಿದ್ದನಲ್ಲದೇ-ಶುಕ್ರಾಚಾರ್ಯರಿಗೆ ಸಮಾನನೆನಿಸಿದ್ದನು. ಔಶನಸವೆಂಬ ಸೇನಾವ್ಯೂಹವನ್ನು ರಚಿಸಿ ವಾನರಸೈನ್ಯದ ಮೇಲೆ ಯುದ್ಧ ಮಾಡಲುಪಕ್ರಮಿಸಿದನು.

ಔಶನಸವ್ಯೂಹವನ್ನು ರಚಿಸಿ ರಾವಣನು ಯುದ್ಧಕ್ಕೆ ಬಂದಿರುವನೆಂಬ ವಿಷಯವನ್ನು ತಿಳಿದ ರಾಮನು ಔಶನಸವ್ಯೂಹಕ್ಕೆ ಪ್ರತಿಯಾದ ಬಾರ್ಹಸ್ಪತ್ಯ ವ್ಯೂಹದಲ್ಲಿ ತನ್ನ ಸೇನೆಯನ್ನು ಸಜ್ಜುಗೊಳಿಸಿ ರಾವಣನನ್ನು ಎದುರಿಸಿದನು.

ರಾವಣನು ರಾಮನೊಡನೆ ಯುದ್ಧಮಾಡಲು ಪ್ರಾರಂಭಿಸಿದನಂತರ ಲಕ್ಷ್ಮಣನು ಇಂದ್ರಜಿತುವಿನೊಡನೆಯೂ, ಸುಗ್ರೀವನು ವಿರೂಪಾಕ್ಷನೊಡನೆಯೂ ಯುದ್ಧವನ್ನುಪಕ್ರಮಿಸಿದರು. ತಾರನೆಂಬ ವಾನರಪುಂಗವನೊಡನೆ–ನಿಖರ್ವಟನೆಂಬ ರಾಕ್ಷಸನೂ, ನಲನೊಡನೆ–ತುಂಡನೆಂಬುವನೂ, ಪಟ್ಟಿಶನೆಂಬ ರಾಕ್ಷಸನೊಡನೆ–ಪನಸನೂ ಯುದ್ಧಮಾಡಲುಪಕ್ರಮಿಸಿದರು. ಎರಡು ಕಡೆಗಳಲ್ಲಿಯೂ ಯಾವೊಬ್ಬ ಯೋಧನೇ ಆಗಲೀ ತನಗಿಂತ ಹೀನಬಲನೊಡನೆ ಯುದ್ಧಮಾಡುತ್ತಿರಲಿಲ್ಲ. ತನ್ನ ಎದುರಾಳಿಯು ತನಗೆ ಬಲದಲ್ಲಿ ಸಮಾನನೆಂದು ತಿಳಿದನಂತರವೇ ಅವನೊಡನೆ ಯುದ್ಧಮಾಡುತ್ತಿದ್ದನು. ಕೇವಲ ತಮ್ಮ-ತಮ್ಮ ಸ್ವಶಕ್ತಿಯನ್ನೇ ಅವಲಂಬಿಸಿ ವಾನರ-ರಾಕ್ಷಸರು ಪರಸ್ಪರ ಯುದ್ಧಮಾಡುತ್ತಿದ್ದರು. ಭೀರುಗಳಿಗೆ ಆ ಸಮರವನ್ನು ನೋಡಲು ಕೂಡ ಸಾಧ್ಯವಾಗುತ್ತಿರಲಿಲ್ಲ. ರಾಮ-ರಾವಣರ ಯುದ್ಧವು ಬಹುಘೋರವೂ ರೋಮಾಂಚಕಾರಿಯೂ ಆಗಿದ್ದು ಹಿಂದಿನ ಕಾಲದ ದೇವಾಸುರಯುದ್ಧವನ್ನು ಸ್ಮರಣೆಗೆ ತರುವುದಾಗಿದ್ದಿತು.

ಶಕ್ತ್ಯಾಯುಧ-ಶೂಲ-ಕತ್ತಿಗಳೇ ಮೊದಲಾದ ಆಯುಧಗಳಿಂದ ರಾವಣನು ರಾಮನನ್ನು ಪ್ರಹರಿಸುತ್ತಿದ್ದನು. ರಾಮನೂ ಸಹ ತನಗೆದುರಾಗಿ ಬಂದ ಆಯುಧಗಳೆಲ್ಲವನ್ನೂ ನಿಶಿತವಾದ ಬಾಣಗಳಿಂದ ಕತ್ತರಿಸಿ, ನಿಶಿತವಾದ ಅಯೋಮಯವಾದ ಬಾಣಗಳ ಜಾಲದಿಂದ ರಾವಣನನ್ನೂ ಅವನ ರಥ-ಸಾರಥಿ-ಕುದುರೆಗಳನ್ನೂ ಮುಚ್ಚಿಬಿಡುತ್ತಿದ್ದನು. ಲಕ್ಷ್ಮಣನೂ ಸಹ ಮರ್ಮಭೇದಿಗಳಾದ ಮಹಾಸ್ತ್ರಗಳಿಂದ ಇಂದ್ರಜಿತುವನ್ನು ಪ್ರಹರಿಸುತ್ತಿದ್ದನು. ಇಂದ್ರಜಿತುವೂ ಸಹ ಅನುಸ್ಯೂತವಾದ ಬಾಣಗಳಿಂದ ಲಕ್ಷ್ಮಣನನ್ನು ಬಾಧೆಪಡಿಸುತ್ತಿದ್ದನು. ಪಕ್ಷಿಗಳ ರೆಕ್ಕೆಗಳನ್ನು ಕಟ್ಟಿದ್ದ ತೀಕ್ಷ್ಣವಾದ ಬಾಣಗಳಿಂದ ವಿಭೀಷಣ-ಪ್ರಹಸ್ತರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಯದ್ಯಪಿ ವಿಭೀಷಣ-ಪ್ರಹಸ್ತರು ಪರಸ್ಪರ ಸಂಬಂಧಿಗಳಾದರೂ ಯುದ್ಧಕಾಲ

ದಲ್ಲಿ ತಮ್ಮ ಸಂಬಂಧವನ್ನು ಅವರು ಸ್ಮರಣೆಗೂ ತಂದುಕೊಳ್ಳುತ್ತಿರಲಿಲ್ಲ. ಶತ್ರುಗಳಂತೆಯೇ ಒಬ್ಬರು ಮತ್ತೊಬ್ಬರನ್ನು ಎದುರಿಸಿ ಕಾದಾಡುತ್ತಿದ್ದರು.

ಭೀಕರವಾದ ವಾನರ-ರಾಕ್ಷಸರ ಯುದ್ಧದಲ್ಲಿ ಅನೇಕಾನೇಕ ಮಹಾಸ್ತ್ರಗಳು ಪ್ರಯೋಗಿಸಲ್ಪಡುತ್ತಿದ್ದುವು. ಆ ಮಹಾಸ್ತ್ರಗಳ ಸತತವಾದ ಪ್ರಯೋಗೋಪಸಂಹಾರಗಳಿಂದ ಮೂರು ಲೋಕಗಳ ಸ್ಥಾವರ-ಜಂಗಮಗಳೂ ಸಂತಾಪಗೊಂಡುವು.

೨೮೫ನೆಯ ಅಧ್ಯಾಯವು ಮುಗಿಯಿತು.

೨೮೬ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಪ್ರಹಸ್ತ ಮತ್ತು ಧೂಮ್ರಾಕ್ಷರ ವಧೆಯಿಂದ ದುಃಖಿತನಾದ ರಾವಣನು ಕುಂಭಕರ್ಣನನ್ನು ಎಬ್ಬಿಸಿ ಯುದ್ಧಕ್ಕೆ ಕಳುಹಿಸಿದುದು

ಯುಧಿಷ್ಠಿರ! ಪ್ರಹಸ್ತನು ಕೈಯಲ್ಲಿ ಗದೆಯನ್ನು ಹಿಡಿದು ರಣಗರ್ಜನೆ ಮಾಡುತ್ತಾ ರಭಸದಿಂದ ವಿಭೀಷಣನ ಬಳಿಗೆ ಹೋಗಿ ಅವನನ್ನು ಗದೆಯಿಂದ ಪ್ರಹರಿಸಿದನು. ಪ್ರಹಸ್ತನು ಬಹುರಭಸದಿಂದ ಧೀಮಂತನಾದ ವಿಭೀಷಣನನ್ನು ಪ್ರಹರಿಸಿದರೂ ಮಹಾನುಭಾವನಾದ ವಿಭೀಷಣನು ನಿಂತ ಜಾಗದಿಂದ ಕದಲಲಿಲ್ಲ. ಹಿಮವತ್ಪರ್ವತದಂತೆ ಸುಸ್ಥಿರನಾಗಿದ್ದನು. ಅನಂತರದಲ್ಲಿ ವಿಭೀಷಣನು ನೂರು ಘಂಟೆಗಳಿಂದ ಅಲಂಕೃತವಾಗಿದ್ದ ಬಹಳ ದೊಡ್ಡದಾಗಿದ್ದ ಶತಘಂಟಾ ಎಂಬ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ಮಹಾಮಂತ್ರವನ್ನು ಪುನಶ್ಚರಣೆಮಾಡಿ ರಭಸದಿಂದ ಪ್ರಹಸ್ತನ ಕುತ್ತಿಗೆಗೆ ಗುರಿಯಿಟ್ಟು ಹೊಡೆದನು. ಅಭಿಮಂತ್ರಿತವಾದ ಆ ಶಕ್ತ್ಯಾಯುಧವು ಸಿಡಿಲಿನಂತೆ ಅಷ್ಟೇ ರಭಸದಿಂದ ಪ್ರಹಸ್ತನ ಮೇಲೆ ಬಿದ್ದು ಅವನ ಕತ್ತನ್ನು ಕತ್ತರಿಸಿಕೊಂಡು ಹೋಯಿತು. ಉತ್ತಮಾಂಗವಿಹೀನನಾದ ಪ್ರಹಸ್ತನು–ಗಾಳಿಯ ಹೊಡೆತಕ್ಕೆ ಸಿಕ್ಕಿ ಮುರಿದುಬಿದ್ದ ವೃಕ್ಷದಂತೆಯೇ ಪ್ರಕಾಶಿಸಿದನು. ನಿಶಾಚರನಾದ ಪ್ರಹಸ್ತನು ಯುದ್ಧದಲ್ಲಿ ಮರಣಹೊಂದಿದುದನ್ನು ನೋಡಿ ಧೂಮ್ರಾಕ್ಷನೆಂಬ ರಾಕ್ಷಸನು ಸೈನ್ಯಸಮೇತನಾಗಿ ಬಹುರಭಸದಿಂದ ಕಪಿಸೇನೆಯ ಮೇಲೆ ದಾಳಿ

ಮಾಡಲು ಉಪಕ್ರಮಿಸಿದನು. ಬಹುಭಯಂಕರವಾದ ಕಾಲಮೇಘಸದೃಶವಾದ ಅವನ ಸೈನ್ಯವು ಕಪಿಸೈನ್ಯದ ಮೇಲೆ ಬೀಳಲಾಗಿ ಕಪಿಸೈನ್ಯವು ತತ್ತರಿಸಿ ದಿಕ್ಕಾಪಾಲಾಗಿ ಓಡಲಾರಂಭಿಸಿತು. ಧೂಮ್ರಾಕ್ಷನ ಸೇನೆಯನ್ನು ಎದುರಿಸಲಾರದೇ ಕಪಿಸೈನ್ಯವು ಹಿಮ್ಮೆಟ್ಟುತ್ತಿರುವುದನ್ನು ಕಂಡು ಪವನಸುತನಾದ ಹನುಮಂತನು ಕಪಿಸೈನ್ಯವನ್ನು ಹುರಿದುಂಬಿಸುತ್ತಾ ಧೂಮ್ರಾಕ್ಷನ ಸೇನೆಗೆದುರಾಗಿ ನಿಂತು ಯುದ್ಧಮಾಡಲುಪಕ್ರಮಿಸಿದನು.

ಹನುಮಂತನು ಶತ್ರುಸೇನೆಗೆದುರಾಗಿ ನಿಂತು ಯುದ್ಧಮಾಡುತ್ತಿರುವುದನ್ನು ಕಂಡು, ಭಯದಿಂದ ಹಿಮ್ಮೆಟ್ಟುತ್ತಿದ್ದ ವಾನರಸೇನೆಯು ಪುನಃ ಯುದ್ಧಕ್ಕೆ ಹಿಂದಿರುಗಿತು. ಎದುರು-ಬದುರಾಗಿ ನಿಂತು ಯುದ್ಧಮಾಡುತ್ತಿದ್ದ ರಾಮ-ರಾವಣರ ಸೈನ್ಯಗಳಲ್ಲಿ ರೋಮಹರ್ಷಣಕರವಾದ ಮಹಾರಣಘೋಷವು ಕೇಳಿಬರುತ್ತಿದ್ದಿತು. ಘೋರವಾದ ಆ ಸಂಗ್ರಾಮದಲ್ಲಿ ಸಾವಿರಾರು ರಾಕ್ಷಸಯೋಧರೂ ಸಾವಿರಾರು ಕಪಿಯೋಧರೂ ಹತರಾಗಿ ಅವರೆಲ್ಲರ ರಕ್ತಪ್ರಸ್ರವಣದಿಂದ ಭೂಮಿಯು ತೋಯ್ದು ಸರ್ವತ್ರ ಕೆಸರಾಯಿತು.

ಧೂಮ್ರಾಕ್ಷನು ಅನುಸ್ಯೂತವಾದ ಬಾಣಪ್ರಯೋಗದಿಂದ ಕಪಿಸೇನೆಯನ್ನು ಘಾಸಿಪಡಿಸಿದನು. ಕಪಿಸೇನೆಯನ್ನು ಸಂಹಾರಮಾಡುತ್ತಾ ಮುನ್ನುಗ್ಗುತ್ತಿದ್ದ ಧೂಮ್ರಾಕ್ಷನನ್ನು ಶತ್ರುನಿಬರ್ಹಣನಾದ, ಪವನಸುತನಾದ ಹನುಮಂತನು ಪ್ರತಿರೋಧಿಸಿದನು. ಒಬ್ಬರನ್ನು ಮತ್ತೊಬ್ಬರು ಗೆಲ್ಲಬೇಕೆಂಬ ದೃಢತೆಯಿಂದ ಪರಸ್ಪರವಾಗಿ ಭೀಕರಕದನವನ್ನು ನಡೆಸುತ್ತಿದ್ದ ಮಾರುತಿ-ಧೂಮ್ರಾಕ್ಷರ ಕಾಳಗವು ಹಿಂದೆ ನಡೆದ ಇಂದ್ರ-ಪ್ರಹ್ಲಾದರ ಯುದ್ಧವನ್ನು ಸ್ಮರಣೆಗೆ ತರುವುದಾಗಿದ್ದಿತು. ಗದೆಗಳಿಂದಲೂ, ಪರಿಘಾಯುಧಗಳಿಂದಲೂ ರಾಕ್ಷಸನು ಕಪೀಶ್ವರನನ್ನು ಪ್ರಹರಿಸುತ್ತಿದ್ದನು. ಅದಕ್ಕೆ ಪ್ರತಿಯಾಗಿ ಕಪೀಶ್ವರನು ವೃಕ್ಷಗಳನ್ನೇ ಕಿತ್ತು ಅವುಗಳಿಂದ ಧೂಮ್ರಾಕ್ಷನನ್ನು ಪ್ರಹರಿಸುತ್ತಿದ್ದನು. ಕಟ್ಟಕಡೆಗೆ ಹನುಮಂತನು ಬಹುಕುಪಿತನಾಗಿ ಧೂಮ್ರಾಕ್ಷನನ್ನು ಸಂಹರಿಸಿದ್ದಲ್ಲದೇ–ಅವನ ಸಾರಥಿಯನ್ನೂ ಕುದುರೆಗಳನ್ನೂ ಸಂಹರಿಸಿ, ರಥವನ್ನೂ ಚೂರು-ಚೂರು ಮಾಡಿಬಿಟ್ಟನು.

ರಾಕ್ಷಸೋತ್ತಮನಾದ ಧೂಮ್ರಾಕ್ಷನು ಮರಣಹೊಂದಿದನಂತರ ಕಪಿ

ಸೈನ್ಯಕ್ಕೆ ಪುನಶ್ಚೇತನವೇ ಬಂದಂತಾಯಿತು. ವಾನರರು ಭಯವನ್ನು ತೊರೆದು ಅಮಿತೋತ್ಸಾಹದಿಂದ ಯುದ್ಧಮಾಡಿ ಅನೇಕ ರಾಕ್ಷಸಸೈನಿಕರನ್ನು ಸಂಹರಿಸಿದರು. ಧೂಮ್ರಾಕ್ಷನ ಸಂಹಾರವಾದನಂತರ ರಾಕ್ಷಸರ ಬಲವು ಕುಗ್ಗಿತು. ಕಪಿಸೈನ್ಯವನ್ನು ಎದುರಿಸಲಾರದೇ ಅಳಿದುಳಿದ ರಾಕ್ಷಸರು ಲಂಕೆಗೆ ಪಲಾಯನಮಾಡಿ, ರಾಮನೊಡನೆ ಯುದ್ಧಮಾಡಿದ ಆಯಾಸವನ್ನು ಪರಿ ಹರಿಸಿಕೊಳ್ಳಲು ವಿಶ್ರಾಂತಿಯನ್ನು ಪಡೆಯುತ್ತಿದ್ದ ರಾವಣನ ಬಳಿಗೆ ಹೋಗಿ ಎಲ್ಲ ವಿಷಯಗಳನ್ನೂ ಹೇಳಿದರು. ಮಹಾಬಲಿಷ್ಠನಾದ ಪ್ರಹಸ್ತನೂ, ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಧೂಮ್ರಾಕ್ಷನೂ ಸೈನ್ಯಸಮೇತರಾಗಿ ಕಪಿ ಸೈನ್ಯದೊಡನೆ ಮಾಡಿದ ಘೋರಯುದ್ಧದಲ್ಲಿ ಹತರಾದುದನ್ನು ಕೇಳಿ ರಾವ ಣನು ನಿಟ್ಟುಸಿರುಬಿಟ್ಟನು. ಒಡನೆಯೇ ತನ್ನ ಸಿಂಹಾಸನದಿಂದ ಮೇಲೆದ್ದು- 'ಕುಂಭಕರ್ಣನು ಯುದ್ಧಮಾಡುವ ಕಾಲವೀಗ ಸನ್ನಿಹಿತವಾಗಿದೆ'–ಎಂದು ಹೇಳುತ್ತಾ ಬಹಳ ಕಾಲದಿಂದ ನಿದ್ರೆಮಾಡುತ್ತಾ ಮಲಗಿದ್ದ ಕುಂಭಕರ್ಣನನ್ನು ಅನೇಕವಿಧವಾದ ಭೇರೀ-ಮೃದಂಗಾದಿ ವಾದ್ಯಗಳಿಂದಲೂ, ಗಟ್ಟಿಯಾದ ಶಬ್ದ ಗಳಿಂದಲೂ, ಮಹಾಧ್ವನಿಯುಳ್ಳ ಬಗೆಬಗೆಯ ವಾದ್ಯಗಳಿಂದಲೂ ಎಚ್ಚರಿ ಸಿದನು. ಅವನ ನಿದ್ದೆಯಿನ್ನೂ ಸಂಪೂರ್ಣವಾಗಿ ಮುಗಿದಿರಲಿಲ್ಲ. ಅರ್ಧ ನಿದ್ರೆಯಲ್ಲಿದ್ದ ಅವನನ್ನು ಜಾಗ್ರತಗೊಳಿಸಲು ರಾವಣನು ಬಹಳ ಶ್ರಮಿಸ ಬೇಕಾಯಿತು. ಅವನ ನಿದ್ರೆಯು ಸಂಪೂರ್ಣವಾಗಿ ಕಳೆಯಿತೆಂದು ತಿಳಿದ ನಂತರ ಇನ್ನೂ ಹಾಸಿಗೆಯ ಮೇಲೆಯೇ ಕುಳಿತಿದ್ದ ಕುಂಭಕರ್ಣನನ್ನು ಕುರಿತು ರಾವಣನು ಹೇಳಿದನು :

"ಕುಂಭಕರ್ಣ! ನಿಶ್ಚಯವಾಗಿಯೂ ನೀನೊಬ್ಬನೇ ಸುಖೀಪುರುಷನು. ನಮಗಿಂದು ಪ್ರಾಪ್ತವಾಗಿರುವ ಭಯಂಕರವಾದ ವಿಪತ್ತಿನ ವಿಷಯವೇ ನಿನಗೆ ತಿಳಿದಿರುವುದಿಲ್ಲ. ಯಾವ ವಿಧವಾದ ಆತಂಕವೂ ಇಲ್ಲದೇ ನೀನು ನಿಶ್ಚಿಂತ ನಾಗಿ ಮಲಗಿಬಿಟ್ಟಿದ್ದೆಯಲ್ಲವೇ? ಮಾನವನಾದ ರಾಮನು ಅಪಾರವಾದ ಕಪಿಸೇನೆಯೊಡನೆ ಸೇತುವೆಯ ಮೂಲಕವಾಗಿ ಸಮುದ್ರವನ್ನು ದಾಟಿ ಲಂಕೆಗೆ ಆಗಮಿಸಿದ್ದಾನೆ. ನಮ್ಮ ಶೌರ್ಯ-ಪರಾಕ್ರಮಗಳನ್ನು ಸ್ವಲ್ಪವಾದರೂ ಲೆಕ್ಕಿಸದೇ ನಮ್ಮ ಮೇಲೆ ಯುದ್ಧವನ್ನು ಪ್ರಾರಂಭಿಸಿದ್ದಾನೆ. ನಾನು ಜನಕನ ಸುತೆ ಯಾದ ಮತ್ತು ರಾಮನ ಭಾರ್ಯೆಯಾದ ಸೀತೆಯನ್ನು ಅಪಹರಿಸಿ

ಕೊಂಡು ಬಂದೆನು. ಅವಳನ್ನು ಕರೆದೊಯ್ಯುವ ಸಲುವಾಗಿಯೇ ರಾಮನು ವಿಶಾಲವಾದ ಸಮುದ್ರಕ್ಕೆ ಸೇತುವೆಯನ್ನು ನಿರ್ಮಿಸಿ ಇಲ್ಲಿಗೆ ಆಗಮಿಸಿದ್ದಾನೆ. ನಮ್ಮ ಜ್ಞಾತಿ-ಬಾಂಧವರಾದ ಪ್ರಹಸ್ತಾದಿಗಳು ಈಗಾಗಲೇ ಅವನಿಂದ ಸಂಹೃತರಾದರು. ಇಂತಹ ಸಂದಿಗ್ಧಪರಿಸ್ಥಿತಿಯಲ್ಲಿ ನಾನಿಂದು ನಿನ್ನನ್ನು ಎಚ್ಚರಗೊಳಿಸಿದ್ದೇನೆ. ಶತ್ರುಹಂತಕನೇ! ನಮ್ಮ ಪಕ್ಷದಲ್ಲಿ ನಿನ್ನನ್ನು ಬಿಟ್ಟು ಬೇರಾರಿಗೂ ರಾಮನನ್ನು ಸಂಹರಿಸುವ ಸಾಮರ್ಥ್ಯವಿಲ್ಲ. ಆದುದರಿಂದ ನೀನು ಈಗಲೇ ಯುದ್ಧಕವಚವನ್ನು ಧರಿಸಿದವನಾಗಿ, ದಿವ್ಯಾಯುಧಪಾಣಿಯಾಗಿ, ರಾಮನನ್ನೂ ಅವನ ಅನುಯಾಯಿಗಳನ್ನೂ ಪರಾಜಯಗೊಳಿಸಲು ಯುದ್ಧರಂಗಕ್ಕೆ ಪ್ರಯಾಣಮಾಡು. ದೂಷಣನ ಅನುಜರಾದ ವಜ್ರವೇಗ ಮತ್ತು ಪ್ರಮಾಥಿಗಳು ತಮ್ಮ ಸೈನ್ಯಗಳೊಡನೆ ನಿನ್ನ ಬೆಂಬಲಿಗರಾಗಿ ಬರುವರು.”

ಹೀಗೆಂಬುದಾಗಿ ಕುಂಭಕರ್ಣನಿಗೆ ಹೇಳಿದನಂತರ ರಾವಣೇಶ್ವರನು ವಜ್ರವೇಗ-ಪ್ರಮಾಥಿಗಳನ್ನು ಕರೆಯಿಸಿ, ಸೈನ್ಯಸಮೇತರಾಗಿ ಕುಂಭಕರ್ಣನ ನಾಯಕತ್ವದಲ್ಲಿ ಯುದ್ಧರಂಗಕ್ಕೆ ಹೋಗುವಂತೆ ಆಜ್ಞಾಪಿಸಿದನು. ರಾವಣನ ಸಲಹೆಯಂತೆ ದೂಷಣನ ಇಬ್ಬರು ಅನುಜರೂ ಸಸೈನ್ಯರಾಗಿ ಕುಂಭಕರ್ಣನನ್ನು ಅನುಸರಿಸಿ ಯುದ್ಧಕ್ಕೆ ತೆರಳಿದರು.

೨೮೬ನೆಯ ಅಧ್ಯಾಯವು ಮುಗಿಯಿತು.

೨೮೭ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಕುಂಭಕರ್ಣ, ವಜ್ರವೇಗ ಮತ್ತು ಪ್ರಮಾಥಿಗಳ ವಧೆ

ಮಾರ್ಕಂಡೇಯರು ರಾಮಾಯಣದ ಕಥೆಯನ್ನು ಮುಂದುವರಿಸಿ ಯುಧಿಷ್ಠಿರನಿಗೆ ಹೇಳುತ್ತಾರೆ :

“ಯುಧಿಷ್ಠಿರ! ತನ್ನ ಅನುಯಾಯಿಗಳೊಡನೆ ಕುಂಭಕರ್ಣನು ರಣರಂಗಕ್ಕೆ ಹೊರಟನು. ರಣರಂಗದಲ್ಲಿ ಅನೇಕಾನೇಕ ವಾನರಸೈನ್ಯವು ಯುದ್ಧಸನ್ನದ್ಧವಾಗಿ ನಿಂತಿರುವುದನ್ನು ಅವನು ಕಂಡನು. ಆದರೆ ವಾನರಸೈನ್ಯದೊಡನೆ ಯುದ್ಧಮಾಡುವುದು ಅವನ ಆಶಯವಾಗಿರಲಿಲ್ಲ. ರಾಮನೊಡನೆ ಯುದ್ಧಮಾಡುವುದೇ ಅವನ ಇಚ್ಛೆಯಾಗಿತ್ತು. ಆದುದರಿಂದ ರಾವಣಾನುಜನು ರಾಮನನ್ನು ಹುಡುಕಿಕೊಂಡು ಹೊರಟನು. ಆ ಮಧ್ಯದಲ್ಲಿ

ರಾಮಾನುಜನಾದ ಲಕ್ಷ್ಮಣನು ಧನುಷ್ಪಾಣಿಯಾಗಿ ನಿಂತಿರುವುದನ್ನು ಕುಂಭಕರ್ಣನು ನೋಡಿದನು. ತಮ್ಮನ್ನು ನಿರ್ಲಕ್ಷಿಸಿ ಹೋದನೆಂಬ ಕಾರಣದಿಂದ ಸಾವಿರಾರು ವಾನರಪ್ರಮುಖರು ಕುಂಭಕರ್ಣನ ಬಳಿಗೆ ಬಂದು ಅವನನ್ನು ಸುತ್ತುಗಟ್ಟಿ ನಿಂತು, ಸಾವಿರಾರು ವೃಕ್ಷಗಳಿಂದ ಅವನನ್ನು ಪ್ರಹರಿಸತೊಡಗಿದರು. ಮತ್ತೆ ಕೆಲವು ಕಪಿಗಳು ಪರ್ವತೋಪಮವಾದ ಅವನ ಶರೀರದ ಮೇಲೆ ಹತ್ತಿ ಅವನ ಶರೀರವನ್ನು ಉಗುರುಗಳಿಂದ ಪರಚುತ್ತಲೂ, ಹಲ್ಲುಗಳಿಂದ ಕಡಿಯುತ್ತಲೂ ಇದ್ದುವು. ಮತ್ತೂ ಕೆಲವು ವಾನರಪುಂಗವರು ಯುದ್ಧದ ವಿಧಿಯನ್ನನುಸರಿಸಿಯೇ ಕದನಮಾಡುತ್ತಿದ್ದರು. ನಾನಾವಿಧವಾದ, ಭಯಂಕರ ವಾದ ಆಯುಧಗಳಿಂದ ವಾನರಪುಂಗವರು ರಾಕ್ಷಸೇಂದ್ರನನ್ನು ಪ್ರಹರಿಸಿದರು.

ಆದರೆ ಆ ವಾನರಪುಂಗವರ ತಾಡನದಿಂದಾಗಲೀ, ಪರಚುವಿಕೆಯಿಂದಾಗಲೀ, ಕಚ್ಚುವಿಕೆಯಿಂದಾಗಲೀ ಕುಂಭಕರ್ಣನಿಗೆ ಯಾವ ವಿಧವಾದ ನೋವೂ ಉಂಟಾಗಲಿಲ್ಲ. ಕಪಿಸೈನ್ಯವು ಶ್ರಮವಹಿಸಿ ಯುದ್ಧಮಾಡುತ್ತಿರುವುದನ್ನೂ ಅವುಡುಕಚ್ಚಿ ಪ್ರಹರಿಸುತ್ತಿರುವುದನ್ನೂ ಕಂಡು ನಸುನಗುತ್ತಾ ಕುಂಭಕರ್ಣನು ಆಯುಧಗಳನ್ನು ಹಿಡಿದಿದ್ದ ಕಪಿಗಳನ್ನೇ ಒಂದೊಂದನ್ನಾಗಿ ಕೈಗೆ ತೆಗೆದುಕೊಂಡು ಅನ್ನದ ತುತ್ತನ್ನು ನುಂಗುವಂತೆ ನುಂಗಿಹಾಕಲುಪಕ್ರಮಿಸಿದನು. ಬಲ, ಚಂಡಬಲ, ವಜ್ರಬಾಹು–ಮುಂತಾದ ಅನೇಕ ವಾನರಪ್ರಮುಖರು ಕುಂಭಕರ್ಣನ ಹೊಟ್ಟೆಯನ್ನು ಸೇರಿದರು. ರಾಕ್ಷಸನ ಆ ಭಯಂಕರ ಕೃತ್ಯವನ್ನು ನೋಡಿ ಕಳವಳಗೊಂಡ ತಾರನೇ ಮೊದಲಾದ ಕಪಿನಾಯಕರು ಗಟ್ಟಿಯಾಗಿ ಕಿರುಚಿಕೊಂಡರು. ಸೇನೆಯು ದಿಕ್ಕಾಪಾಲಾಗಿ ಓಡುತ್ತಿರುವುದನ್ನೂ, ಗಟ್ಟಿಯಾಗಿ ಅರಚುತ್ತಿರುವುದನ್ನೂ ಕೇಳಿ ಸುಗ್ರೀವನು ಒಡನೆಯೇ ಕುಂಭಕರ್ಣನಿಗೆದುರಾಗಿ ಬಂದು ನಿಂತನು. ಮರುಕ್ಷಣದಲ್ಲಿಯೇ ಒಂದು ಸಾಲವೃಕ್ಷವನ್ನು ಕೈಗೆತ್ತಿಕೊಂಡು ರಾಕ್ಷಸನ ತಲೆಯ ಮೇಲೆ ಅಪ್ಪಳಿಸಿದನು. ಬಲವನ್ನೆಲ್ಲಾ ಬಿಟ್ಟು ಸುಗ್ರೀವನು ಪ್ರಹರಿಸಿದ ಆ ಸಾಲವೃಕ್ಷವು ನುಚ್ಚುನೂರಾಯಿತೇ ಹೊರತು ಕುಂಭಕರ್ಣನು ಮಾತ್ರ ಸ್ವಲ್ಪವೂ ಕಂಪಿಸಲಿಲ್ಲ. ಸಾಲವೃಕ್ಷದ ಸಂಸ್ಪರ್ಶದಿಂದ ಎಚ್ಚರಗೊಂಡನೋ ಎಂಬಂತೆ ಗಟ್ಟಿಯಾಗಿ ರಣಗರ್ಜನೆಮಾಡಿದ ಕುಂಭಕರ್ಣನು ತನ್ನೆರಡು ತೋಳುಗಳಿಂದಲೂ ಸುಗ್ರೀವನನ್ನು ಬಲಾತ್ಕಾರವಾಗಿ ಹಿಡಿದುಕೊಂಡನು.

ಕುಂಭಕರ್ಣನು ಸುಗ್ರೀವನನ್ನು ಹಿಡಿದೆಳೆಯುತ್ತಿರುವುದನ್ನು ಕಂಡು ಮಿತ್ರನಂದನನಾದ ಸೌಮಿತ್ರಿಯು ಬಹುಶೀಘ್ರವಾಗಿ ರಾಕ್ಷಸನ ಮುಂಭಾಗಕ್ಕೆ ಧಾವಿಸಿದನು. ಕುಂಭಕರ್ಣನಿಗೆ ಎದುರಾಗಿ ನಿಂತಿದ್ದ ಶತ್ರುವಿಧ್ವಂಸಕನಾದ ಸೌಮಿತ್ರಿಯು ದಿವ್ಯವಾದ ಧನುಸ್ಸಿಗೆ ಹೆದೆಯೇರಿಸಿ ಸುವರ್ಣಮಯವಾದ ಗರಿಗಳನ್ನು ಹೊಂದಿದ್ದ ದಿವ್ಯಬಾಣವನ್ನು ರಾಕ್ಷಸನ ಎದೆಗೆ ಗುರಿಯಿಟ್ಟು ಹೊಡೆದನು. ಆ ದಿವ್ಯಬಾಣವು ರಾಕ್ಷಸನು ಧರಿಸಿದ್ದ ಕವಚವನ್ನು ಭೇದಿಸಿ ಕೊಂಡು ಶರೀರವನ್ನು ಹೊಕ್ಕು ರಾಕ್ಷಸನ ರಕ್ತವನ್ನು ಪಾನಮಾಡಿ ರಭಸದಿಂದ ಹೊರಬಂದು ಭೂಮಿಯಲ್ಲಿ ನೆಟ್ಟುಕೊಂಡಿತು. ತೀಕ್ಷ್ಣಬಾಣವು ಒಳಹೊಕ್ಕು ಹೊರಬಂದರೂ ಸಹ ರಾಕ್ಷಸನು ಸಾಯಲಿಲ್ಲ. ಸುಗ್ರೀವನನ್ನು ಬಂಧಿಸಿಟ್ಟು ಕೊಳ್ಳಲು ಸಾಧ್ಯವಾಗದೇ ಅವನನ್ನು ಬಿಟ್ಟು, ಸಮ್ಮುಖದಲ್ಲಿದ್ದ ಶತ್ರುವನ್ನು ಸಂಹರಿಸುವ ಸಲುವಾಗಿ ದೊಡ್ಡದೊಂದು ಬಂಡೆಯನ್ನು ಕೈಯಲ್ಲಿ ಹಿಡಿದು ಲಕ್ಷ್ಮಣನ ಮೇಲೆ ರಭಸದಿಂದ ನುಗ್ಗಿದನು. ಬಂಡೆಯನ್ನು ಮೇಲೆತ್ತಿ ಕುಂಭ ಕರ್ಣನು ಲಕ್ಷ್ಮಣನನ್ನು ಪ್ರಹರಿಸಲು ಬರುತ್ತಿದ್ದಾಗಲೇ ಲಕ್ಷ್ಮಣನು ಎರಡು ತೀಕ್ಷ್ಣವಾದ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ, ರಾಕ್ಷಸನ ಎರಡು ತೋಳುಗಳಿಗೂ ಗುರಿಯಿಟ್ಟು ಹೊಡೆದನು. ಬಂಡೆಯನ್ನು ಮೇಲೆತ್ತಿದ್ದ ಆ ರಾಕ್ಷಸನ ಎರಡು ಕೈಗಳೂ ಬಂಡೆಯ ಸಹಿತವಾಗಿಯೇ ಕೆಳಕ್ಕುರುಳಿದುವು. ಆದರೆ ಮರುಕ್ಷಣದಲ್ಲಿಯೇ ರಾಕ್ಷಸನಿಗೆ ನಾಲ್ಕು ಕೈಗಳು ಹುಟ್ಟಿಕೊಂಡುವು.

ನಾಲ್ಕು ಕೈಗಳಿಂದಲೂ ಕುಂಭಕರ್ಣನು ಬಂಡೆಗಳನ್ನು ಕಿತ್ತು ತಂದು ಲಕ್ಷ್ಮಣನನ್ನು ಪ್ರಹರಿಸುವುದರಲ್ಲಿದ್ದಾಗ, ಲಕ್ಷ್ಮಣನು ಪುನಃ ಬಾಣಗಳನ್ನು ಪ್ರಯೋಗಿಸಿ ರಾಕ್ಷಸನ ನಾಲ್ಕು ಕೈಗಳನ್ನೂ ತುಂಡುಮಾಡಿದನು. ಅದ ರಿಂದಲೂ ಕುಂಭಕರ್ಣನು ಹತನಾಗಲಿಲ್ಲ. ರಾಕ್ಷಸನು ಪರ್ವತೋಪಮನಾಗಿ ಬೆಳೆದನು. ಒಂದು ತಲೆಗೆ ಬದಲಾಗಿ ನೂರಾರು ತಲೆಗಳೂ ಹುಟ್ಟಿಕೊಂಡುವು. ನೂರಾರು ತೋಳುಗಳೂ, ನೂರಾರು ಕಾಲುಗಳೂ ಆ ಪರ್ವತಾಕಾರನಾದ ಕುಂಭಕರ್ಣನ ಶರೀರಕ್ಕಿದ್ದುವು. ಆ ಅದ್ಭುತಾಕಾರವನ್ನು ನೋಡಿ ಸೌಮಿತ್ರಿಯು ರಾಕ್ಷಸನನ್ನು ಬ್ರಹ್ಮಾಸ್ತ್ರದಿಂದ ಸಂಹರಿಸಬೇಕೆಂದು ನಿಶ್ಚಯಿಸಿದವನಾಗಿ ಧನು ಸ್ಸಿಗೆ ಶರವನ್ನು ಯೋಜಿಸಿ, ಬ್ರಹ್ಮಾಸ್ತ್ರದ ಮಂತ್ರದಿಂದ ಅಭಿಮಂತ್ರಿಸಿ, ಪರ್ವತ

ಗಳ ಸಮೂಹದಂತೆ ಕಾಣುತ್ತಿದ್ದ ಕುಂಭಕರ್ಣನ ಮೇಲೆ ಪ್ರಯೋಗಿಸಿದನು. ನೂರಾರು ರೆಂಬೆಗಳನ್ನು ಹೊಂದಿರುವ ಮಹಾವೃಕ್ಷವೊಂದು ಹಠಾತ್ತಾಗಿ ಸಿಡಿಲು ಬಡಿದು ಕೆಳಗೆ ಬೀಳುವಂತೆ–ಬ್ರಹ್ಮಾಸ್ತ್ರದ ಪ್ರಹಾರದಿಂದ ಪರ್ವತ ಸದೃಶನಾದ ಕುಂಭಕರ್ಣನು ಅಸುವನ್ನು ತೊರೆದು ಕೆಳಗುರುಳಿದನು. ವೃತ್ರಾ ಸುರನಿಗೆ ಸಮಾನನೆನಿಸಿದ್ದ ಮಹಾಪರಾಕ್ರಮಿಯಾದ ಕುಂಭಕರ್ಣನು ಗತ ಪ್ರಾಣನಾಗಿ ಕೆಳಗೆ ಬಿದ್ದುದನ್ನು ಕಂಡು ರಾಕ್ಷಸಯೋಧರು ಭಯದಿಂದ ಪಲಾಯನಮಾಡತೊಡಗಿದರು.

ಯುದ್ಧಭೂಮಿಯಿಂದ ರಾಕ್ಷಸಯೋಧರು ಪಲಾಯನಮಾಡುತ್ತಿರುವು ದನ್ನು ಕಂಡು ದೂಷಣನ ಅನುಜರಾದ ವಜ್ರವೇಗ-ಪ್ರಮಾಥಿಗಳು ಓಡುತ್ತಿದ್ದ ಯೋಧರನ್ನು ಹುರಿದುಂಬಿಸಿ ಪುನಃ ಅವರುಗಳನ್ನು ಯುದ್ಧಸನ್ನದ್ಧರನ್ನಾಗಿ ಮಾಡಿ ಲಕ್ಷ್ಮಣನ ಮೇಲೆ ದಾಳಿಮಾಡಿದರು. ಲಕ್ಷ್ಮಣನೂ ಸಹ ರಣಗರ್ಜನೆ ಮಾಡುತ್ತಾ ತನ್ನ ಮೇಲೆ ರಭಸದಿಂದ ಬೀಳುತ್ತಿದ್ದ ರಾಕ್ಷಸರನ್ನು ಬಾಣ ಪ್ರಯೋಗದ ಮೂಲಕವಾಗಿಯೇ ಸ್ವಾಗತಿಸಿದನು. ಲಕ್ಷ್ಮಣನಿಗೂ ಮತ್ತು ವಜ್ರವೇಗ-ಪ್ರಮಾಥಿಗಳಿಗೂ ನಡೆದ ಯುದ್ಧವು ಬಹಳ ಭಯಂಕರವೂ ರೋಮಾಂಚಕಾರಿಯೂ ಆಗಿದ್ದಿತು. ಲಕ್ಷ್ಮಣನು ಅನುಸ್ಯೂತವಾದ ಬಾಣಗಳ ಪ್ರಯೋಗದಿಂದ ಆ ಇಬ್ಬರು ರಾಕ್ಷಸರನ್ನೂ ಬಾಣಗಳ ಜಾಲದಿಂದ ಮುಚ್ಚಿ ಬಿಟ್ಟನು. ಅದರಿಂದ ಕುಪಿತರಾದ ಆ ಇಬ್ಬರು ರಾಕ್ಷಸರೂ ತಮ್ಮೆದುರಾಗಿ ಬರು ತ್ತಿದ್ದ ಲಕ್ಷ್ಮಣನ ಬಾಣಗಳೆಲ್ಲವನ್ನೂ ಕತ್ತರಿಸಿ ಲಕ್ಷ್ಮಣನ ಮೇಲೆ ಸತತವಾಗಿ ಬಾಣಪ್ರಯೋಗಮಾಡಿದರು. ಆದರೆ ಅವರ ಆ ಭಯಂಕರವಾದ ಯುದ್ಧವು ಬಹಳ ಹೊತ್ತಿನವರೆಗೆ ಮುಂದುವರಿಯಲಿಲ್ಲ. ವಾಯುಸುತನಾದ ಹನು ಮಂತನು ದೊಡ್ಡದಾದ ಪರ್ವತಶಿಖರವೊಂದನ್ನು ಎತ್ತಿಕೊಂಡು ಬಂದು ವಜ್ರವೇಗನ ಮೇಲೆ ರಭಸದಿಂದ ಪ್ರಯೋಗಿಸಿ ಅವನನ್ನು ಸಂಹರಿಸಿಬಿಟ್ಟನು. ಮಹಾಪರಾಕ್ರಮಿಯಾದ ನೀಲನು ದೊಡ್ಡದಾದ ಒಂದು ಬಂಡೆಯನ್ನೆತ್ತಿ ಕೊಂಡು ಪ್ರಮಾಥಿಯ ಮೇಲೆ ಪ್ರಯೋಗಿಸಿ ಅವನನ್ನೂ ಸಂಹರಿಸಿಬಿಟ್ಟನು. ವಜ್ರವೇಗ-ಪ್ರಮಾಥಿಗಳ ಸಂಹಾರವಾದನಂತರವೂ ರಾವಣಸೇನೆಗೂ-ರಾಮ ಸೇನೆಗೂ ಪರಸ್ಪರವಾಗಿ ಯುದ್ಧವು ಬಹಳ ಹೊತ್ತಿನವರೆಗೆ ನಡೆಯಿತು.

ನೂರಾರು ರಾಕ್ಷಸರು ಕಪಿಸೈನ್ಯದಿಂದ ಹತರಾದರು. ಅನೇಕ ಕಪಿಸೈನಿಕರು ಹತರಾದರೂ ಸಹ ಸತ್ತವರ ಸಂಖ್ಯೆಯಲ್ಲಿ ರಾಕ್ಷಸರ ಸಂಖ್ಯೆಯೇ ಹೆಚ್ಚಾಗಿದ್ದಿತು."

೨೮೭ನೆಯ ಅಧ್ಯಾಯವು ಮುಗಿಯಿತು.

೨೮೮ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಇಂದ್ರಜಿತುವಿನ ಮಾಯಾಯುದ್ಧ: ಶ್ರೀರಾಮ-ಲಕ್ಷ್ಮಣರ ಮೂರ್ಛೆ

"ಯುಧಿಷ್ಠಿರ! ಕುಂಭಕರ್ಣನೂ ಮತ್ತು ಅವನ ಅನುಯಾಯಿಗಳಾದ ಪ್ರಮಾಥಿ-ವಜ್ರವೇಗರೂ ಯುದ್ಧದಲ್ಲಿ ಮರಣಹೊಂದಿದ ವಾರ್ತೆಯನ್ನು ರಾವಣನು ಕೇಳಿದನು. ಮಹಾಶೂರನಾದ ಪ್ರಹಸ್ತ-ಧೂಮ್ರಾಕ್ಷರು ಆ ಮೊದಲೇ ಯಮಾಲಯವನ್ನು ಸೇರಿದ್ದರು. ಮುಂದೆ ಯಾರನ್ನು ಯುದ್ಧಕ್ಕೆ ಕಳುಹಿಸಬೇಕೆಂಬುದಾಗಿ ರಾವಣನು ಸ್ವಲ್ಪಕಾಲ ಯೋಚಿಸಿ ತನ್ನ ಮಗನಾದ, ಮಹಾಪರಾಕ್ರಮಿಯಾದ ಇಂದ್ರಜಿತುವನ್ನು ಕರೆಯಿಸಿ ಅವನನ್ನು ಕುರಿತು ಹೇಳಿದನು : "ಶತ್ರುನಿಷೂದನನೇ! ನೀನಾದರೂ ಯುದ್ಧದಲ್ಲಿ ರಾಮ-ಲಕ್ಷ್ಮಣ-ಸುಗ್ರೀವರನ್ನು ಸಂಹರಿಸು. ಸತ್ಪುತ್ರನೇ! ನಿನ್ನಿಂದಲೇ ಪ್ರಕಾಶಮಾನವಾದ (ಉಜ್ಜ್ವಲವಾದ) ಕೀರ್ತಿಯು ನಮಗೆ ಲಭ್ಯವಾಯಿತು. ಯುದ್ಧದಲ್ಲಿ ಸಹಸ್ರಾಕ್ಷನಾದ, ವಜ್ರಾಯುಧಪಾಣಿಯಾದ ಶಚೀಪತಿಯನ್ನೇ ಸೋಲಿಸಿ ಇಂದ್ರಜಿತನೆಂಬ ಅನ್ವರ್ಥನಾಮವನ್ನೂ ನೀನು ಪಡೆದಿರುವೆ. ಮಾಯಾ ಯುದ್ಧದಲ್ಲಿಯೂ ಮತ್ತು ಪ್ರತ್ಯಕ್ಷವಾಗಿ ನಿಂತು ಯುದ್ಧಮಾಡುವುದರಲ್ಲಿಯೂ ನೀನು ನಿಷ್ಣಾತನಾಗಿರುವೆ. ನೀನು ತಪಸ್ಸುಮಾಡಿ ಅನೇಕಾನೇಕ ದಿವ್ಯಾಸ್ತ್ರಗಳನ್ನೂ ಪಡೆದಿರುವೆ. ಆ ದಿವ್ಯಾಸ್ತ್ರಗಳ ಸಹಾಯದಿಂದ ನೀನು ನಮ್ಮ ಶತ್ರುಗಳನ್ನು ಪರಾಜಯಗೊಳಿಸು. ಮಹಾಧನುಷ್ಮಂತರಾದ ರಾಮ-ಲಕ್ಷ್ಮಣ-ಸುಗ್ರೀವರು ನಿನ್ನ ಮುಂದೆ ನಿಂತು ಯುದ್ಧಮಾಡಲಾರರು. ನಿನ್ನ ಮಹಾಸ್ತ್ರಗಳ ಪ್ರಹಾರವನ್ನು ಸಹಿಸಿಕೊಳ್ಳಲಾರರು. ಹೀಗಿರುವಾಗ ರಾಮನ ಅನುಯಾಯಿಗಳು ನಿನ್ನ ಮುಂದೆ ನಿಲ್ಲುವ ಸಾಧ್ಯತೆಯೇ ಇಲ್ಲ. ಪ್ರಹಸ್ತ-ಕುಂಭಕರ್ಣರು, ರಾಮನು ಖರನನ್ನು ಕೊಂದುದಕ್ಕೆ ಪ್ರತೀಕಾರಮಾಡಲು ಸಮರ್ಥರಾಗಲಿಲ್ಲ. ನೀನು ಶತ್ರುಗಳನ್ನು ಪರಾಜಯಗೊಳಿಸಿ ಕೀರ್ತಿವಂತನಾಗು. ಅಪಾರಸೈನ್ಯ

ದೊಡನೆ ಆಗಮಿಸಿರುವ ನಮ್ಮ ಶತ್ರುಗಳನ್ನು ನಿನ್ನ ಸುತೀಕ್ಷ್ಣವಾದ ಬಾಣ ಜಾಲದಿಂದ ಸಂಹರಿಸು. ಹಿಂದೊಮ್ಮೆ ನೀನು ವಾಸವನನ್ನು ಪರಾಜಯ ಗೊಳಿಸಿ ನನಗೆ ಮಹಾನಂದವನ್ನುಂಟುಮಾಡಿದಂತೆ–ಇಂದೂ ಸಹ ರಾಮಾದಿಗಳನ್ನು ಪರಾಜಯಗೊಳಿಸಿ ನನ್ನ ಆನಂದವನ್ನು ಹೆಚ್ಚಿಸು."

ರಾವಣನ ಉತ್ತೇಜಕರವಾದ ಮಾತುಗಳನ್ನು ಕೇಳಿ ಇಂದ್ರಜಿತುವು 'ತಥಾಸ್ತು' ಎಂದು ಪ್ರತಿವಚನವನ್ನಿತ್ತು ಯುದ್ಧಕಾಲದಲ್ಲಿ ಧರಿಸಲು ಯೋಗ್ಯವಾದ ಕವಚವನ್ನು ಧರಿಸಿದವನಾಗಿ ರಥದಲ್ಲಿ ಕುಳಿತು ಯುದ್ಧ ಭೂಮಿಗೆ ತೆರಳಿದನು. ಅಲ್ಲಿಗೆ ಹೋದೊಡನೆಯೇ–"ರಾವಣನ ಮಗನಾದ ಇಂದ್ರಜಿತುವೆಂಬ ನಾಮಾಂಕಿತನಾದ ನಾನು ಯುದ್ಧಕ್ಕೆ ಬಂದಿರುವೆನು"– ಎಂದು ಸ್ಪಷ್ಟವಾಗಿ ಘೋಷಣೆಮಾಡಿ, ಶುಭಲಕ್ಷಣಸಂಪನ್ನನಾದ ಲಕ್ಷ್ಮಣನನ್ನು ಯುದ್ಧಕ್ಕೆ ಆಹ್ವಾನಿಸಿದನು. ಧನುಸ್ಸನ್ನೂ ಮತ್ತು ಬಾಣಗಳನ್ನೂ ಕೈಯ್ಯಲ್ಲಿ ಹಿಡಿದು ಲಕ್ಷ್ಮಣನು ಧನುಷ್ಟೇಂಕಾರದಿಂದ ರಣರಂಗವನ್ನೇ ಪ್ರತಿಧ್ವನಿಸುತ್ತಾ ಸಿಂಹವು ಕಾಡಿನಲ್ಲಿರುವ ಕ್ಷುದ್ರಮೃಗಗಳನ್ನು ಭಯಪಡಿಸುವಂತೆ–ರಣಘೋಷಗಳಿಂದ ರಾಕ್ಷಸಸೈನ್ಯವನ್ನು ಭಯಗೊಳಿಸುತ್ತಾ ಇಂದ್ರಜಿತುವಿಗೆ ಅಭಿಮುಖವಾಗಿ ನಿಂತು ಬಾಣಪ್ರಯೋಗಮಾಡಲು ಪ್ರಾರಂಭಿಸಿದನು. ಇಬ್ಬರು ವೀರರೂ ತಮ್ಮ-ತಮ್ಮ ಪಕ್ಷಕ್ಕೇ ಜಯಗಳಿಸಿಕೊಡಲು ಬಯಸುತ್ತಿದ್ದರು. ಇಬ್ಬರೂ ಮಹಾಸ್ತ್ರಗಳನ್ನು ತಿಳಿದವರಾಗಿದ್ದರು. ಆ ಮಹಾಯುದ್ಧದಲ್ಲಿ ಇಬ್ಬರೂ ಸ್ಪರ್ಧಾಳುಗಳಾಗಿದ್ದರು. ಪರಸ್ಪರವಾಗಿ ಧನುರ್ಯುದ್ಧವು ಬಹಳ ಹೊತ್ತಿನವರೆಗೆ ನಡೆಯಿತು. ಧನುರ್ವಿದ್ಯೆಯಲ್ಲಿ ತನಗೆ ಸರಿಸಮಾನನಾಗಿದ್ದ ಲಕ್ಷ್ಮಣನನ್ನು ಬಾಣಪ್ರಯೋಗದಿಂದಲೇ ಪರಾಜಯಗೊಳಿಸುವ ಸಾಧ್ಯತೆಯು ಇಂದ್ರಜಿತುವಿಗೆ ಕಂಡುಬರಲಿಲ್ಲ. ಇನ್ನೂ ಹೆಚ್ಚಿನ ಪ್ರಯತ್ನದಿಂದ ಲಕ್ಷ್ಮಣ ನನ್ನು ಪರಾಜಯಗೊಳಿಸಲು ನಿಶ್ಚಯಿಸಿದವನಾಗಿ ಇಂದ್ರಜಿತುವು ಲಕ್ಷ್ಮಣನ ಮೇಲೆ ಅನುಸ್ಯೂತವಾಗಿ ತೋಮರಾಯುಧಗಳನ್ನು ಪ್ರಯೋಗಿಸತೊಡಗಿ ದನು. ಬಹುರಭಸದಿಂದ ಬರುತ್ತಿದ್ದ ಆ ತೋಮರಗಳನ್ನೂ ನಿಶಿತವಾದ ಬಾಣಗಳಿಂದ ಲಕ್ಷ್ಮಣನು ಕತ್ತರಿಸಿಬಿಟ್ಟನು. ಬಾಣಗಳಿಂದ ಕತ್ತರಿಸಲ್ಪಟ್ಟ ಆ ತೋಮರಗಳು ರಾಶಿ-ರಾಶಿಯಾಗಿ ನೆಲದ ಮೇಲೆ ಬಿದ್ದುವು.

ವಾಲಿಯ ಮಗನಾದ ಅಂಗದನು ದೊಡ್ಡದೊಂದು ವೃಕ್ಷವನ್ನು ಕಿತ್ತು

ತಂದು ಅತಿರಭಸದಿಂದ ಇಂದ್ರಜಿತುವಿನ ಮೇಲೆ ಅಪ್ಪಳಿಸಿದನು. ಅದರಿಂದ ಇಂದ್ರಜಿತುವು ಸ್ವಲ್ಪವಾದರೂ ಭ್ರಾಂತನಾಗಲಿಲ್ಲ. ಇಂದ್ರಜಿತುವು ಪ್ರಾಸಾಯುಧವನ್ನು ಅಂಗದನ ಮೇಲೆ ಪ್ರಹರಿಸಲಿಚ್ಛಿಸಿ ಮೇಲಕ್ಕೆತ್ತಿದನು.

ಅವನು ಪ್ರಹರಿಸುವ ಮೊದಲೇ ಲಕ್ಷ್ಮಣನು ಬಾಣವನ್ನು ಪ್ರಯೋಗಿಸಿ ಪ್ರಾಸಾಯುಧವನ್ನು ಕತ್ತರಿಸಿಬಿಟ್ಟನು. ಅದರಿಂದ ಕುಪಿತನಾದ ಇಂದ್ರಜಿತುವು ಗದೆಯನ್ನು ತೆಗೆದುಕೊಂಡು ತನ್ನ ಸಮೀಪದಲ್ಲಿಯೇ ಇದ್ದ ಅಂಗದನ ಎಡಪಾರ್ಶ್ವಕ್ಕೆ ವೇಗವಾಗಿ ಪ್ರಹರಿಸಿದನು. ಇಂದ್ರಜಿತುವಿನ ಗದಾಪ್ರಹಾರ ದಿಂದಲೂ ಮಹಾವೀರ್ಯನಾದ ಅಂಗದನು ಧೈರ್ಯಗುಂದಲಿಲ್ಲ. ದೊಡ್ಡದಾದ ಸಾಲವೃಕ್ಷವೊಂದನ್ನು ಕಿತ್ತು ತಂದು ಇಂದ್ರಜಿತುವನ್ನು ಬಲವಾಗಿ ಪ್ರಹರಿಸಿದನು. ಇಂದ್ರಜಿತುವಿನ ಸಂಹಾರಕ್ಕೆಂದು ಮಹಾವೀರ್ಯನಾದ ಅಂಗದನಿಂದ ಪ್ರಹಿತವಾದ ಸಾಲವೃಕ್ಷವು ರಾಕ್ಷಸಪುಂಗವನ ರಥವನ್ನೂ, ಸಾರಥಿಯನ್ನೂ, ಕುದುರೆಗಳನ್ನೂ ಧ್ವಂಸಮಾಡಿತು.

ರಥವನ್ನೂ, ಸಾರಥಿಯನ್ನೂ ಕಳೆದುಕೊಂಡ ಇಂದ್ರಜಿತುವು ಒಡನೆಯೇ ಕೆಳಕ್ಕೆ ಹಾರಿ ಮಾಯೆಯಿಂದ ಅಂತರ್ಹಿತನಾದನು. ಇಂದ್ರಜಿತುವು ಮಾಯಾವಿದ್ಯೆ ಮತ್ತು ಮಾಯಾಯುದ್ಧ–ಇವುಗಳೆರಡರಲ್ಲಿಯೂ ಬಹುನಿಷ್ಣಾತನಾಗಿರುವನೆಂಬ ವಿಷಯವು ರಾಮನಿಗೂ ತಿಳಿದಿತ್ತು. ರಥವು ಮುರಿದು ಹೋದೊಡನೆಯೇ ಅಂತರ್ಧಾನಹೊಂದಿ ಇಂದ್ರಜಿತುವು ಮಾಯಾಯುದ್ಧವನ್ನು ಮಾಡಬಹುದೆಂದು ಊಹಿಸಿದ ರಾಮನು ತನ್ನ ಅಪಾರಸೇನೆಯನ್ನು ಬಹುಜಾಗರೂಕತೆಯಿಂದ ರಕ್ಷಿಸುತ್ತಿದ್ದನು. ಇಂದ್ರಜಿತುವಾದರೋ ಅಂತರ್ಹಿತನಾಗಿಯೇ ಇದ್ದು ವರಪ್ರಸಾದದಿಂದ ಪ್ರಾಪ್ತವಾಗಿದ್ದ ಅನೇಕಮಹಾಸ್ತ್ರಗಳನ್ನು ರಾಮ-ಲಕ್ಷ್ಮಣರ ಮೇಲೆ ಪ್ರಯೋಗಿಸುತ್ತಾ ಅವರನ್ನು ಬಹುವಾಗಿ ಬಾಧೆಪಡಿಸಿದನು. ಯದ್ಯಪಿ ಇಂದ್ರಜಿತುವು ಅದೃಶ್ಯನಾಗಿಯೇ ಇದ್ದು ರಾಮ-ಲಕ್ಷ್ಮಣರ ಮೇಲೆ ಮಹಾಸ್ತ್ರಗಳ ಮಳೆಗರೆಯುತ್ತಿದ್ದರೂ ಮಹಾಶೂರರಾದ ರಾಮ-ಲಕ್ಷ್ಮಣರು ಮಹಾಸ್ತ್ರಗಳ ಪ್ರಭಾವವನ್ನು ಅವುಗಳಿಗೆ ಅನುರೂಪವಾದ ಪ್ರತ್ಯಸ್ತ್ರಗಳಿಂದ ನಿರಸನಗೊಳಿಸುತ್ತಾ, ಅಸ್ತ್ರಗಳು ಬರುತ್ತಿದ್ದ ಕಡೆಗೆ ಮತ್ತು ಧನುಷ್ಟೇಂಕಾರವಾಗುತ್ತಿದ್ದ ಕಡೆಗೆ ಗುರಿಯಿಟ್ಟು ಬಾಣಪ್ರಯೋಗವನ್ನು

ಮಾಡುತ್ತಿದ್ದರು. ಆದರೆ ಇಂದ್ರಜಿತುವು ಒಂದೆಡೆಯಲ್ಲಿಯೇ ನಿಂತು ಯುದ್ಧ ಮಾಡುತ್ತಿರಲಿಲ್ಲ.

ಒಮ್ಮೆ ರಾಮ-ಲಕ್ಷ್ಮಣರಿಗೆ ಅಭಿಮುಖವಾಗಿ ಬಾಣಗಳು ಬರುತ್ತಿದ್ದರೆ ಮರುಕ್ಷಣದಲ್ಲಿಯೇ ಅವರ ಹಿಂಬದಿಯಿಂದ ಬಾಣಗಳು ಬಂದು ಬೀಳುತ್ತಿದ್ದುವು. ಅವರು ಲಕ್ಷ್ಯವನ್ನು ಕ್ಷಣ-ಕ್ಷಣಕ್ಕೂ ಬದಲಾಯಿಸಬೇಕಾಗಿತ್ತು. ಆ ಅಂತರದಲ್ಲಿ ಇಂದ್ರಜಿತುವು ಸಾವಿರಾರು ತೀಕ್ಷ್ಣವಾದ ಬಾಣಗಳನ್ನು ಪುರುಷಪುಂಗವರಾದ ರಾಮ-ಲಕ್ಷ್ಮಣರ ಮೇಲೆ ಪ್ರಯೋಗಿಸುತ್ತಿದ್ದನು. ಕಣ್ಣಿಗೆ ಕಾಣದಿದ್ದ ಇಂದ್ರಜಿತುವನ್ನು ಹುಡುಕುವ ಸಲುವಾಗಿ ಸಾವಿರಾರು ವಾನರಪುಂಗವರು ಕೈಗಳಲ್ಲಿ ಬಂಡೆಗಳನ್ನು ಹೊತ್ತು ಆಕಾಶಕ್ಕೆ ಹಾರುತ್ತಿದ್ದರು. ಸಾವಿರಾರು ವಾನರಸೈನಿಕರನ್ನೂ ಮತ್ತು ರಾಮ-ಲಕ್ಷ್ಮಣರನ್ನೂ ಸಹ ಅಗೋಚರನಾಗಿದ್ದ ಇಂದ್ರಜಿತುವು ತನ್ನ ತೀಕ್ಷ್ಣಾಸ್ತ್ರಗಳಿಂದ ಏಕಕಾಲದಲ್ಲಿ ಬಾಧೆಪಡಿಸುತ್ತಿದ್ದನು. ಗಗನಕ್ಕೆ ಹಾರಿದ ಅಸಂಖ್ಯಾತವಾದ ವಾನರಪುಂಗವರಲ್ಲಿ ಒಬ್ಬರನ್ನಾದರೂ ಬಿಡದೇ ಇಂದ್ರಜಿತುವು ಎಲ್ಲರನ್ನೂ ಪ್ರಹರಿಸಿದನು. ರಾಮ-ಲಕ್ಷ್ಮಣರೂ ಸಹ ಇಂದ್ರಜಿತುವಿನ ಅನುಸ್ಯೂತವಾದ ಬಾಣಗಳ ಜಾಲಗಳಿಂದ ಪೀಡಿತರಾಗಿ ಆಕಾಶದಿಂದ ಕೆಳಕ್ಕೆ ಬಿದ್ದ ಸೂರ್ಯ-ಚಂದ್ರರಂತೆ ಮೂರ್ಛಿತರಾಗಿ ನೆಲದ ಮೇಲೆ ಬಿದ್ದರು."

೨೮೮ನೆಯ ಅಧ್ಯಾಯವು ಮುಗಿಯಿತು.

೨೮೯ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾಮ-ಲಕ್ಷ್ಮಣರು ಮೂರ್ಛೆಯಿಂದ ಎಚ್ಚರಗೊಂಡುದು : ಕುಬೇರನು ಕಳುಹಿಸಿದ್ದ ಶುಭಜಲವನ್ನು ವಾನರರೊಡನೆ ಕಣ್ಣುಗಳಿಗೆ ಹಚ್ಚಿಕೊಂಡುದು : ಲಕ್ಷ್ಮಣನಿಂದ ಇಂದ್ರಜಿತುವಿನ ಸಂಹಾರ : ಸೀತೆಯನ್ನು ಸಂಹರಿಸಲು ಹೊರಟಿದ್ದ ರಾವಣನನ್ನು ಅವಿಂಧ್ಯನು ಹಿತವಚನಗಳಿಂದ ತಡೆದುದು

ಮಾರ್ಕಂಡೇಯರು ರಾಮಾಯಣಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

"ಯುಧಿಷ್ಠಿರ! ರಾಮ-ಲಕ್ಷ್ಮಣರಿಬ್ಬರೂ ಶರಗಳ ಆಘಾತದಿಂದ

ಭೂಮಿಯ ಮೇಲೆ ಬಿದ್ದುದನ್ನು ನೋಡಿ ಇಂದ್ರಜಿತುವು ವರದಿಂದ ಪ್ರಾಪ್ತವಾಗಿದ್ದ ಬಾಣಗಳ ಜಾಲದಿಂದ ರಾಮ-ಲಕ್ಷ್ಮಣರಿಬ್ಬರನ್ನೂ ಬಂಧಿಸಿಬಿಟ್ಟನು. ರಣರಂಗದಲ್ಲಿ ಇಂದ್ರಜಿತುವಿನ ಶರಪಂಜರದಿಂದ ಬಂಧಿತರಾಗಿದ್ದ ರಾಮ-ಲಕ್ಷ್ಮಣರು ಪಂಜರದಲ್ಲಿರುವ ಎರಡು ಪಕ್ಷಿಗಳಂತೆಯೇ ವಿರಾಜಿಸಿದರು. ನೂರಾರು ಬಾಣಗಳಿಂದ ಚುಚ್ಚಲ್ಪಟ್ಟವರಾಗಿ ನೆಲದ ಮೇಲೆ ಬಿದ್ದಿದ್ದ ರಾಮ-ಲಕ್ಷ್ಮಣರನ್ನು ನೋಡಿ ವಾನರರಾಜನಾದ ಸುಗ್ರೀವನು ತನ್ನ ಅನುಯಾಯಿಗಳಾದ ಸುಷೇಣ, ಮೈಂದ, ದ್ವಿವಿದ, ಕುಮುದ, ಅಂಗದ, ಹನುಮಂತ, ನೀಲ, ತಾರ, ನಲ–ಇವರೊಡನೆ ರಾಮ-ಲಕ್ಷ್ಮಣರನ್ನು ಸುತ್ತುವರಿದು ನಿಂತನು. ಬೇರೊಂದೆಡೆಯಲ್ಲಿ ಯುದ್ಧಮಾಡುತ್ತಿದ್ದ ವಿಭೀಷಣನು ಯುದ್ಧದಲ್ಲಿ ಜಯಗಳಿಸಿ ಹಿಂದಿರುಗಿ ಬಂದವನಾಗಿ ಪ್ರಜ್ಞಾಹೀನರಾಗಿ ಬಿದ್ದಿದ್ದ, ರಾಮ-ಲಕ್ಷ್ಮಣರನ್ನು ಕಂಡು ಒಡನೆಯೇ ಅವರ ಮೇಲೆ 'ಪ್ರಜ್ಞಾ' ಎಂಬ ಅಸ್ತ್ರವನ್ನು ಪ್ರಯೋಗಿಸಿ ಅವರನ್ನು ಪ್ರಜ್ಞಾವಂತರನ್ನಾಗಿ ಮಾಡಿದನು. ಮೂರ್ಛಿತರಾಗಿ ಬಿದ್ದಿದ್ದ ರಾಮ-ಲಕ್ಷ್ಮಣರಿಗೆ ಪ್ರಜ್ಞಾಸ್ತ್ರಪ್ರಯೋಗದಿಂದ ಜ್ಞಾನವು ಬಂದಿತೇ ಹೊರತು ಬಾಣಗಳ ಆಘಾತದಿಂದ ಶರೀರಾದ್ಯಂತವಾಗಿ ಉಂಟಾಗಿದ್ದ ಯಾತನೆಯು ಯಥಾಪೂರ್ವವಾಗಿಯೇ ಇದ್ದಿತು. ಸುಗ್ರೀವನು ರಾಮ-ಲಕ್ಷ್ಮಣರ ಶರೀರಕ್ಕೆ ಚುಚ್ಚಿಕೊಂಡಿದ್ದ ಬಾಣಗಳೆಲ್ಲವನ್ನೂ ಬಹಳ ಉಪಾಯದಿಂದ ಯಾತನೆಯಾಗದಂತೆ ತೆಗೆದನು. ಸುಷೇಣನ ಸಲಹೆಯಂತೆ ವಿಶಲ್ಯಾ ಎಂಬ ಮೂಲಿಕೆಯನ್ನು ಮಂತ್ರಪುರಸ್ಸರವಾಗಿ ರಾಮ-ಲಕ್ಷ್ಮಣರ ಶರೀರಕ್ಕೆ ಲೇಪಿಸಲಾಯಿತು. ವಿಶಲ್ಯಾಮೂಲಿಕೆಯ ಪ್ರಯೋಗವನ್ನು ಯಥಾವಿಧಿಯಾಗಿ ಮಾಡಿ ಚುಚ್ಚಿಕೊಂಡಿದ್ದ ಬಾಣಗಳನ್ನು ತೆಗೆದೊಡನೆಯೇ ರಾಮ-ಲಕ್ಷ್ಮಣರು ನಿದ್ದೆತಿಳಿದವರಂತೆ ಮೇಲೆದ್ದು ಕುಳಿತರು. ಬಾಣಾಘಾತದಿಂದ ಉಂಟಾಗಿದ್ದ ಯಾತನೆ ಮತ್ತು ಅನವರತವಾಗಿ ಯುದ್ಧಮಾಡಿದ್ದರಿಂದ ಉಂಟಾಗಿದ್ದ ಆಯಾಸ–ಎಲ್ಲವೂ ಸಂಪೂರ್ಣವಾಗಿ ಪರಿಹಾರವಾಯಿತು.

ಇಕ್ಷ್ವಾಕುಕುಲಾವತಂಸನಾದ ಶ್ರೀರಾಮನು ನಿರಾಯಾಸನಾಗಿ ಯಥಾಪೂರ್ವಸ್ಥಿತಿಯಲ್ಲಿದ್ದುದನ್ನು ಕಂಡು ಹರ್ಷಿತನಾದ ವಿಭೀಷಣನು ಕೈಜೋಡಿಸಿ ನಿಂತು ಶ್ರೀರಾಮನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ರಾಮಭದ್ರ! ರಾಜರಾಜನಾದ ಕುಬೇರನ ಆಜ್ಞೆಯಂತೆ ನೀರು

ತುಂಬಿದ ಈ ಕಲಶವನ್ನು ತೆಗೆದುಕೊಂಡು ಶ್ವೇತಪರ್ವತದಿಂದ ಗುಹ್ಯಕನೊಬ್ಬನು ನಿನ್ನ ಸಮೀಪಕ್ಕೆ ಆಗಮಿಸಿದ್ದಾನೆ. ಕುಬೇರನು ಮಂತ್ರಪೂತವಾದ ಪುಣ್ಯತೀರ್ಥದಿಂದ ತುಂಬಿರುವ ಈ ಕಲಶವನ್ನು ಪಾರಿತೋಷಕವಾಗಿ ಕಳುಹಿಸಿರುತ್ತಾನೆ. ಈ ಪುಣ್ಯೋದಕವನ್ನು ನೀನು ನಿನ್ನ ಕಣ್ಣುಗಳಿಗೆ ಹಚ್ಚಿದೆಯಾದರೆ ಅಂತರ್ಧಾನಹೊಂದಿರುವವರೆಲ್ಲರೂ ನಿನ್ನ ಕಣ್ಣುಗಳಿಗೆ ಕಾಣಿಸುವರು.



ನೀನೂ ಈ ಪುಣ್ಯೋದಕವನ್ನು ಉಪಯೋಗಿಸಬಹುದಲ್ಲದೇ ನೀನಿಚ್ಛಿಸಿದ ಬೇರೆಯವರಿಗೂ ಸಹ ಇದನ್ನು ನೀನು ಕೊಡಬಹುದಾಗಿದೆ. ನಿನಗುಂಟಾಗುವ ಲಾಭವೇ ಇತರರಿಗೂ ಈ ಪುಣ್ಯೋದಕದ ಲೇಪನದಿಂದ ಪ್ರಾಪ್ತವಾಗುವುದು"–ಎಂದು ಹೇಳಿ ಪುಣ್ಯೋದಕವಿದ್ದ ಕಲಶವನ್ನು ವಿಭೀಷಣನು ರಾಮನಿಗೆ ಸಮರ್ಪಿಸಿದನು.

"ನೀನು ಹೇಳಿದಂತೆಯೇ ಮಾಡುವೆನು, ವಿಭೀಷಣ!"

ಎಂದು ಹೇಳುತ್ತಾ ರಾಮನು ಕಲಶವನ್ನು ಸ್ವೀಕರಿಸಿ ಅದರಲ್ಲಿದ್ದ ಪುಣ್ಯೋದಕವನ್ನು ಕಣ್ಣಿಗೆ ಲೇಪಿಸಿಕೊಂಡು ಲಕ್ಷ್ಮಣನಿಗೂ ಕೊಟ್ಟನು. ಲಕ್ಷ್ಮಣನೂ ಲೇಪಿಸಿಕೊಂಡನಂತರ ಸುಗ್ರೀವ, ಜಾಂಬವಂತ, ಹನುಮಂತ, ಅಂಗದ, ಮೈಂದ, ದ್ವಿವಿದ, ನೀಲ ಮತ್ತು ಇನ್ನೂ ಅನೇಕ ವಾನರ ಪ್ರಮುಖರು ಆ ಪುಣ್ಯೋದಕವನ್ನು ಕಣ್ಣುಗಳಿಗೆ ಹಚ್ಚಿಕೊಂಡರು.

ಯುಧಿಷ್ಠಿರ! ವಿಭೀಷಣನು ಹೇಳಿದಂತೆಯೇ ಆಯಿತು. ಪುಣ್ಯೋದಕ ದಿಂದ ಲೇಪಿತವಾಗಿದ್ದ ಕಣ್ಣುಗಳಿಂದ ನೋಡಲು ಸಾಧ್ಯವಾಗದಿದ್ದ ಅದೃಶ್ಯ ವಸ್ತುಗಳೆಲ್ಲವೂ ಕಾಣತೊಡಗಿದುವು.

ಇತ್ತಲಾಗಿ ಇಂದ್ರಜಿತುವು ಮಾಯಾಯುದ್ಧದಲ್ಲಿ ಜಯಗಳಿಸಿದನಂತರ ತನ್ನ ತಂದೆಯ ಬಳಿಗೆ ಹೋಗಿ ರಾಮ-ಲಕ್ಷ್ಮಣರೊಡನೆ ಮಾಡಿದ ಯುದ್ಧದಲ್ಲಿ ತಾನು ತೋರಿದ ಅದ್ಭುತಪರಾಕ್ರಮವನ್ನು ರಾವಣೇಶ್ವರನಿಗೆ ಹೇಳಿ ಅವನಿಂದ ಶ್ಲಾಘಿಸಲ್ಪಟ್ಟವನಾಗಿ, ಬಹುಶೀಘ್ರವಾಗಿ ಪುನಃ ಯುದ್ಧರಂಗಕ್ಕೆ ತೆರಳಿ ತನ್ನ ಸೇನೆಯ ಮುಂಭಾಗದಲ್ಲಿ ಯುದ್ಧಕ್ಕೆ ಸಜ್ಜಾಗಿ ನಿಂತನು. ವಿಭೀಷಣನ ಸಲಹೆ ಯಂತೆ ಲಕ್ಷ್ಮಣನು ಮಹಾಕುಪಿತನಾಗಿದ್ದ ರಾವಣಿಯನ್ನು ಎದುರಿಸಿ ಯುದ್ಧಕ್ಕೆ ನಿಂತನು.

ಇಂದ್ರಜಿತುವು ಬಹುಕರ್ಮಠನು. ತನ್ನ ನಿತ್ಯಕರ್ಮಗಳನ್ನು ಮುಗಿಸಿ ಕೊಳ್ಳದೇ ಎಂದೂ ಅರಮನೆಯಿಂದ ಹೊರಟವನೇ ಅಲ್ಲ. ನಿತ್ಯಕರ್ಮ ಗಳೊಂದಿಗೆ ವಿಜಯಸಾಧಕಗಳಾದ ಜಪ-ಹೋಮಾದಿಗಳನ್ನೂ ಸಹ ಅನು ದಿನವೂ ಮಾಡಿ ಮುಗಿಸುತ್ತಿದ್ದನು. ಅದರಿಂದಾಗಿ ಇಂದ್ರಜಿತುವಿಗೆ ಸೋಲೆಂಬುದೇ ಇರಲಿಲ್ಲ. ಆದರೆ ಅಂದು ಮಾತ್ರ ತಂದೆಯ ಮಾತಿಗೆ ಕಟ್ಟು ಬಿದ್ದವನಾಗಿ ತನ್ನ ನಿತ್ಯ-ನೈಮಿತ್ತಿಕ-ಕಾಮ್ಯಕರ್ಮಗಳನ್ನು ಮುಗಿಸದೆಯೇ ಯುದ್ಧಭೂಮಿಗೆ ಹೋಗಬೇಕಾಯಿತು. ಅವನ ಮುಖಲಕ್ಷಣವನ್ನು ಕಂಡೊಡ ನೆಯೇ ವಿಭೀಷಣನು ಇಂದ್ರಜಿತುವಿಂದು ನಿತ್ಯಕರ್ಮಗಳನ್ನು ಮುಗಿಸಿ ಬಂದಿಲ್ಲ ವೆಂಬ ಇಂಗಿತವನ್ನರಿತುಕೊಂಡು ಇಂದಿನ ದಿನ ಇಂದ್ರಜಿತುವಿನ ಸಂಹಾರವು ಸಾಧ್ಯವೆಂದು ನಿಶ್ಚಯಿಸಿದವನಾಗಿ ಲಕ್ಷ್ಮಣನಿಗೆ ಅದರ ಸೂಚನೆಯನ್ನಿತ್ತನು.

ಲಕ್ಷ್ಮಣನು ರೋಷಾವೇಶದಿಂದ ಇಂದ್ರಜಿತುವಿನ ಮೇಲೆ ಬಾಣಗಳ ಮಳೆಗರೆದನು. ಇಂದ್ರಜಿತುವೂ ಸಹ ತನ್ನ ಬಾಣಗಳ ಜಾಲದಿಂದ ಲಕ್ಷ್ಮಣನನ್ನು ಮುಚ್ಚಿಬಿಟ್ಟನು. ಒಬ್ಬರು ಮತ್ತೊಬ್ಬರನ್ನು ಪರಾಜಯಗೊಳಿಸಬೇಕೆಂಬ ದೃಢ ಸಂಕಲ್ಪವು ಇಬ್ಬರಿಗೂ ಇದ್ದಿತು. ಇಂದ್ರಜಿತು-ಲಕ್ಷ್ಮಣರ ಪರಸ್ಪರ ಯುದ್ಧವು ಮಹಾಭಯಂಕರವಾಗಿಯೂ, ಚಿತ್ರ-ವಿಚಿತ್ರವಾಗಿಯೂ, ಆಶ್ಚರ್ಯಕರವಾಗಿಯೂ, ಹಿಂದೆ ನಡೆದ ಇಂದ್ರ-ಪ್ರಹ್ಲಾದರ ಯುದ್ಧವನ್ನು ಸ್ಮರಣೆಗೆ ತರುವುದಾಗಿಯೂ ಇದ್ದಿತು. ಮರ್ಮಭೇದಿಗಳಾದ ಬಾಣಗಳ ಪಂಕ್ತಿಯನ್ನೇ ಇಂದ್ರಜಿತುವು ಲಕ್ಷ್ಮಣನ ಮೇಲೆ ಅನುಸ್ಯೂತವಾಗಿ ಪ್ರಯೋಗಿಸುತ್ತಿದ್ದನು. ತನ್ನೆದುರಾಗಿ ಬರುತ್ತಿದ್ದ ಬಾಣಗಳೆಲ್ಲವನ್ನೂ ಕತ್ತರಿಸಿ ಬಹುತೀಕ್ಷ್ಣವಾದ ಬಾಣಗಳನ್ನು ಲಕ್ಷ್ಮಣನು ರಾವಣಿಯ ಮೇಲೆ ಪ್ರಯೋಗಿಸುತ್ತಿದ್ದನು. ಲಕ್ಷ್ಮಣನ ಸುತೀಕ್ಷ್ಣವಾದ ಬಾಣಗಳು ರಾವಣಿಯ ಕವಚವನ್ನು ಭೇದಿಸಿ ಶರೀರವನ್ನೂ ಹೊಗುತ್ತಿದ್ದುವು. ಅದರಿಂದಾಗಿ ಇಂದ್ರಜಿತುವು ಕೋಪಾವಿಷ್ಟ ನಾಗಿ ತನ್ನ ಬತ್ತಳಿಕೆಯಿಂದ ಸರ್ಪಸದೃಶವಾದ ಎಂಟು ಬಾಣಗಳನ್ನು ತೆಗೆದು ಧನುಸ್ಸಿಗೇರಿಸಿ ರಭಸದಿಂದ ಸೆಳೆದು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು.

ಯುಧಿಷ್ಠಿರ! ಮಹಾಸಾಹಸಿಯಾದ ಲಕ್ಷ್ಮಣನು ಸರ್ಪಸದೃಶವಾದ ಎಂಟು ಬಾಣಗಳನ್ನೂ ಚತುರತೆಯಿಂದ ತುಂಡುಮಾಡಿದುದಲ್ಲದೇ–ರೆಕ್ಕೆಗಳಿಂದ ಕೂಡಿದ್ದ ಅಗ್ನಿಸದೃಶವಾದ ಮೂರು ಬಾಣಗಳಿಂದ ಇಂದ್ರಜಿತುವನ್ನು ಹೇಗೆ ಸಂಹರಿಸಿದನೆಂಬುದನ್ನು ಹೇಳುವೆನು ; ಕೇಳು :

**ಏಕೇನಾಸ್ಯ ಧನುಷ್ಮನ್ತಂ ಬಾಹುಂ ದೇಹಾದಪಾತಯತ್ ।**
**ದ್ವಿತೀಯೇನ ಸನಾರಾಚಂ ಭುಜಂ ಭೂಮೌ ನ್ಯಪಾತಯತ್ ॥೨೨॥**

**ತೃತೀಯೇನ ತು ಬಾಣೇನ ಪೃಥುಧಾರೇಣ ಭಾಸ್ವತಾ ।**
**ಜಹಾರ ಸುನಸಂ ಚಾಪಿ ಶಿರೋ ಭ್ರಾಜಿಷ್ಣುಕುಣ್ಡಲಮ್ ॥೨೩॥**

ಧನುಸ್ಸನ್ನು ಹಿಡಿದಿದ್ದ ಇಂದ್ರಜಿತುವಿನ ನೀಳವಾದ ಬಾಹುವನ್ನು ಒಂದು ಬಾಣದಿಂದ ಕತ್ತರಿಸಿ ದೇಹದಿಂದ ಕೆಳಕ್ಕೆ ಬೀಳಿಸಿದನು. ಎರಡನೆಯ ಬಾಣದಿಂದ ಧನುಸ್ಸಿಗೆ ಯೋಜಿಸಲು ಬಾಣಗಳನ್ನು ಹಿಡಿದಿದ್ದ ಮತ್ತೊಂದು ಬಾಹುವನ್ನು ಕಡಿದುಹಾಕಿದನು. ಧನುರ್ಬಾಣಗಳನ್ನು ಹಿಡಿದಿದ್ದ ಎರಡು

ಕೈಗಳೂ ಧನುರ್ಬಾಣಗಳ ಸಮೇತವಾಗಿಯೇ ಕೆಳಕ್ಕೆ ಬಿದ್ದುವು. ಥಳ-ಥಳನೆ ಪ್ರಕಾಶಿಸುತ್ತಿದ್ದ ಮತ್ತು ಬಹಳ ಚೂಪಾಗಿದ್ದ ಮೂರನೆಯ ಬಾಣದಿಂದ, ಸುಂದರವಾದ ಮೂಗನ್ನು ಹೊಂದಿದ್ದ ಮತ್ತು ಪ್ರಕಾಶಮಾನವಾದ ಕರ್ಣ ಕುಂಡಲಗಳನ್ನು ಧರಿಸಿದ್ದ ಇಂದ್ರಜಿತುವಿನ ತಲೆಯನ್ನು ಕತ್ತರಿಸಿಬಿಟ್ಟನು. ಎರಡು ಕೈಗಳಿಂದಲೂ ಮತ್ತು ಶಿರಸ್ಸಿನಿಂದಲೂ ವಿಹೀನವಾದ ಇಂದ್ರಜಿತುವಿನ ಮುಂಡವು ನೋಡಲು ಬಹುಭಯಂಕರವಾಗಿ ಕಾಣುತ್ತಿದ್ದಿತು. ರಾವಣಿಯನ್ನು ಸಂಹರಿಸಿದನಂತರ ರಥದಲ್ಲಿದ್ದ ಸೂತನನ್ನೂ ಸೌಮಿತ್ರಿಯು ಸಂಹರಿಸಿದನು.

ಕುದುರೆಗಳೇ ಇಂದ್ರಜಿತುವಿನ ರಥವನ್ನು ರಾವಣನ ಅರಮನೆಯ ಸಮೀಪಕ್ಕೆ ಸೆಳೆದೊಯ್ದುವು. ಪುತ್ರನಿಂದಲೂ ಸಾರಥಿಯಿಂದಲೂ ವಿಹೀನ ವಾಗಿದ್ದ ರಥವನ್ನು ನೋಡಿ ರಾವಣನು ತನ್ನ ಪ್ರೇಮಪುತ್ರನೂ ಸಹ ಸಮ ರಾಂಗಣದಲ್ಲಿ ಮೃತನಾಗಿರುವನೆಂದು ನಿರ್ಧರಿಸಿದನು. ರಾವಣನಿಗೆ ತಡೆಯ ಲಾಗದ ದುಃಖವುಂಟಾಯಿತು. ಪುತ್ರಶೋಕದಿಂದಲೂ, ಸೀತೆಯ ಮೇಲಿನ ವ್ಯಾಮೋಹದಿಂದಲೂ ಬಹಳ ಆರ್ತನಾಗಿದ್ದ ರಾವಣನು ಕಟ್ಟಕಡೆಗೆ ಸೀತೆ ಯನ್ನೇ ಕೊಲ್ಲಲು ನಿಶ್ಚಯಿಸಿದನು. ಒಡನೆಯೇ ಕತ್ತಿಯನ್ನು ಝಳಪಿಸುತ್ತಾ ಅಶೋಕವನದಲ್ಲಿ ಪತಿಯ ಆಗಮನವನ್ನೇ ನಿರೀಕ್ಷಿಸುತ್ತಾ ಕುಳಿತಿದ್ದ ಸೀತೆಯ ಬಳಿಗೆ ಧಾವಿಸಿದನು. ರಾಮನ ಹಿತಚಿಂತಕನಾದ ಅವಿಂಧ್ಯನು ದುರ್ಬುದ್ಧಿಯಿಂದ ಕೂಡಿದ ರಾವಣನ ಮನೋಭಿಲಷಿತವನ್ನು ತಿಳಿದವನಾಗಿ ಅವನನ್ನು ಆ ಪಾಪಕೃತ್ಯದಿಂದ ವಿಮುಖನನ್ನಾಗಿ ಹೇಗೆ ಮಾಡಿದನೆಂಬ ವಿಷಯವನ್ನು ಹೇಳುವೆನು ಕೇಳು, ಯುಧಿಷ್ಠಿರ!

ಅವಿಂಧ್ಯನು ರಾವಣನ ಹಿಂದೆಯೇ ಹೋಗಿ ಅವನನ್ನು ಕುರಿತು ಹೇಳಿದನು :

**ಮಹಾರಾಜ್ಯೇ ಸ್ಥಿತೋ ದೀಪ್ತೇ ನ ಸ್ತ್ರಿಯಂ ಹನ್ತುಮರ್ಹಸಿ ।**
**ಹತೈವೈಷಾ ಯದಾ ಸ್ತ್ರೀ ಚ ಬನ್ಧನಸ್ಥಾ ಚ ತೇ ವಶೇ ॥೨೯॥**

**ನ ಚೈಷಾ ದೇಹಭೇದೇನ ಹತಾ ಸ್ಯಾದಿತಿ ಮೇ ಮತಿಃ ।**
**ಜಹಿ ಭರ್ತಾರಮೇವಾಸ್ಯಾ ಹತೇ ತಸ್ಮಿನ್ಹತಾ ಭವೇತ್ ॥೩೦॥**

**ನ ಹಿ ತೇ ವಿಕ್ರಮೇ ತುಲ್ಯಃ ಸಾಕ್ಷಾದಪಿ ಶತಕ್ರತುಃ ।**
**ಅಸಕೃದ್ಧಿ ತ್ವಯಾ ಸೇನ್ದ್ರಾಸ್ತ್ರಾಸಿತಾಸ್ತ್ರಿದಶಾ ಯುಧಿ ॥೩೧॥**

"ರಾವಣೇಶ್ವರ! ನೀನು ಸುವಿಖ್ಯಾತವಾದ ಲಂಕಾರಾಜ್ಯದ ಚಕ್ರವರ್ತಿಯಾಗಿರುವೆ. ಅಂತಹ ನೀನು ಸ್ತ್ರೀಯೊಬ್ಬಳನ್ನು ಸಂಹರಿಸುವುದು ಸಾಧುವಲ್ಲ. ಮೇಲಾಗಿ ಈ ಸ್ತ್ರೀಯು ನಿನ್ನ ಬಂಧನದಲ್ಲಿರುವುದರಿಂದಲೂ, ನಿನ್ನ ವಶದಲ್ಲಿಯೇ ಇರುವುದರಿಂದಲೂ ಮೃತಪ್ರಾಯಳೇ ಆಗಿರುತ್ತಾಳೆ. ಆದುದರಿಂದ ಇವಳ ಶರೀರವನ್ನು ಕತ್ತರಿಸಿಯೇ ಇವಳ ವಧೆಯನ್ನು ಮಾಡಬೇಕಾದ ಅವಶ್ಯಕತೆಯಿಲ್ಲ. ಒಂದು ವೇಳೆ ಹಾಗೂ ಇವಳನ್ನು ಕೊಲ್ಲಲೇಬೇಕೆನ್ನುವುದಾದರೆ ಇವಳ ಗಂಡನನ್ನು ಯುದ್ಧದಲ್ಲಿ ಸಂಹರಿಸು. ಅವನನ್ನು ಸಂಹರಿಸಿದೊಡನೆಯೇ ಇವಳೂ ಸಹ ನಿನ್ನ ಸಮ್ಮುಖದಲ್ಲಿಯೇ ದೇಹಪರಿತ್ಯಾಗ ಮಾಡುತ್ತಾಳೆ. ಕೇವಲ ಮನುಷ್ಯಮಾತ್ರನಾದ ರಾಮನನ್ನು ಸಂಹರಿಸುವುದು ನಿನಗೆ ದುಃಸಾಧ್ಯವಾದುದೇನಲ್ಲ. ಶಚೀಪತಿಯಾದ ಇಂದ್ರನೂ ಸಹ ಪರಾಕ್ರಮದಲ್ಲಿ ನಿನಗೆ ಸಮನೆನಿಸಲಾರನು. ಇಂದ್ರಪ್ರಮುಖರಾದ ದೇವತೆಗಳು ಅನೇಕ ಯುದ್ಧಗಳಲ್ಲಿ ನಿನ್ನಿಂದ ಪರಾಜಿತರಾಗಿ ಭಯಪಟ್ಟು ಓಡಿಹೋಗಿದ್ದಾರೆ. ಇಂತಹ ಅತುಲಪರಾಕ್ರಮಿಯಾದ ನೀನು ಅಬಲೆಯಾದ, ನಿನ್ನ ವಶದಲ್ಲಿಯೇ ಇರುವ ಸ್ತ್ರೀಯೊಬ್ಬಳನ್ನು ಕೊಲ್ಲುವುದು ನ್ಯಾಯವೇ?"

ಯುಧಿಷ್ಠಿರ! ಇವೇ ಮುಂತಾದ ಯುಕ್ತಿಯುಕ್ತವಾದ ಮಾತುಗಳನ್ನು ಅವಿಂಧ್ಯನು ರಾವಣನಿಗೆ ಹೇಳಿ ಅವನನ್ನು ಸಮಾಧಾನಗೊಳಿಸಿದನು. ರಾವಣನು ಕತ್ತಿಯನ್ನು ಒರೆಯಲ್ಲಿಟ್ಟನು. ರಾಮನೊಡನೆ ತಾನೇ ಯುದ್ಧ ಮಾಡುವುದಾಗಿ ನಿಶ್ಚಯಿಸಿ ಯುದ್ಧಕ್ಕೆ ಯೋಗ್ಯವಾದ ರಥವನ್ನು ಸಿದ್ಧಗೊಳಿಸುವಂತೆ ಸೇವಕರಿಗೆ ಆಜ್ಞಾಪಿಸಿದನು.

೨೮೯ನೆಯ ಅಧ್ಯಾಯವು ಮುಗಿಯಿತು.

೨೯೦ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ರಾಮ-ರಾವಣರ ಯುದ್ಧ ಮತ್ತು ರಾವಣನ ವಧೆ

ಯುಧಿಷ್ಠಿರ! ದಶಕಂಠನಾದ ರಾವಣನು, ಪುತ್ರನಾದ ಇಂದ್ರಜಿತುವು ಯುದ್ಧದಲ್ಲಿ ಮರಣಹೊಂದಿದ ಕಾರಣದಿಂದ ಬಹುಕುಪಿತನಾಗಿ, ಸ್ವರ್ಣ

ಖಚಿತವಾಗಿದ್ದ ಮತ್ತು ನಾನಾವಿಧವಾದ ರತ್ನಗಳಿಂದ ಅಲಂಕೃತವಾಗಿದ್ದ ರಥದಲ್ಲಿ ಕುಳಿತು ರಣರಂಗಕ್ಕೆ ಹೊರಟನು. ಘೋರರೂಪಿಗಳಾದ ವಿಧವಿಧವಾದ ಆಯುಧಗಳನ್ನು ಹೊಂದಿದ್ದ ಅನೇಕಾನೇಕ ರಾಕ್ಷಸರಿಂದ ಪರಿವೃತನಾದ ರಾವಣನು ಅನೇಕ ಕಪಿನಾಯಕರೊಡನೆ ಯುದ್ಧಮಾಡುತ್ತಾ ರಾಮನಿದ್ದ ಕಡೆಗೆ ಧಾವಿಸುತ್ತಿದ್ದನು.

ಕಪಿಸೈನ್ಯದ ಮೇಲೆ ರಾವಣನು ಸತತವಾಗಿ ದಾಳಿಮಾಡುತ್ತಿರುವುದನ್ನು ಕಂಡು ಮೈಂದ, ನೀಲ, ನಲ, ಅಂಗದ, ಹನುಮಂತ, ಜಾಂಬವಂತ–ಇವರುಗಳು ತಮ್ಮ ಅಪಾರವಾದ ಸೈನ್ಯದೊಡನೆ ರಾವಣನನ್ನು ಎದುರಿಸಿ ನಿಂತರು. ಕಪಿಸೈನ್ಯವೂ ಮತ್ತು ಕರಡಿಗಳ ಸೈನ್ಯವೂ ರಾವಣನ ಸಮಕ್ಷದಲ್ಲಿಯೇ ಅವನ ಸಾವಿರಾರು ಸೈನಿಕರನ್ನು ದೊಡ್ಡದಾದ ವೃಕ್ಷಗಳಿಂದ ಪ್ರಹರಿಸಿ ಕೊಲ್ಲುತ್ತಿದ್ದುವು. ಶತ್ರುಪಕ್ಷದ ಸೈನಿಕರು ಅಪಾರವಾದ ರಾಕ್ಷಸಸೈನ್ಯವನ್ನು ತನ್ನ ಕಣ್ಣೆದುರಿನಲ್ಲಿಯೇ ಧ್ವಂಸಗೊಳಿಸುತ್ತಿರುವುದನ್ನು ಕಂಡು ಮಾಯಾಯುದ್ಧದಲ್ಲಿ ಪ್ರವೀಣನಾದ ರಾವಣನು ಮಾಯಾಯುದ್ಧವನ್ನು ಮಾಡಲುಪಕ್ರಮಿಸಿದನು. ಮಾಯಾವಿದ್ಯೆಯನ್ನು ಪ್ರಯೋಗಮಾಡಲಾಗಿ ಅನೇಕ ರಾಕ್ಷಸಯೋಧರು ಶರ, ಶಕ್ತ್ಯಾಯುಧ, ಕತ್ತಿಗಳನ್ನು ಹಿಡಿದು ರಾವಣನ ಶರೀರದಿಂದ ಘೋರಗರ್ಜನೆಗಳನ್ನು ಮಾಡುತ್ತಾ ಹೊರಬಂದರು. ರಾಮನು ಆ ಎಲ್ಲ ರಾಕ್ಷಸರನ್ನೂ ಅನೇಕ ದಿವ್ಯಾಸ್ತ್ರಗಳ ಪ್ರಯೋಗದಿಂದ ಸಂಹರಿಸಿದನು. ತಾನು ಸೃಷ್ಟಿಸಿದ್ದ ರಾಕ್ಷಸರೆಲ್ಲರೂ ವಿನಾಶಹೊಂದಲಾಗಿ ರಾವಣನು ಪುನಃ ಮಾಯಾವಿದ್ಯೆಯನ್ನು ಪ್ರಯೋಗಮಾಡಿ ಕ್ಷಣಮಾತ್ರದಲ್ಲಿ ರಾಮ-ಲಕ್ಷ್ಮಣರೂಪಿಗಳಾದ ಅನೇಕ ರಾಕ್ಷಸರನ್ನು ತನ್ನ ಶರೀರದಿಂದ ಸೃಷ್ಟಿಸಿದನು. ರಾಮ-ಲಕ್ಷ್ಮಣರೂಪಿಗಳಾದ ಧನುಷ್ಪಾಣಿಗಳಾಗಿದ್ದ ಆ ರಾಕ್ಷಸರೂ ಶ್ರೀರಾಮನೆಡೆಗೆ ರಭಸದಿಂದ ನುಗ್ಗಿದರು. ಅವರ ಜೊತೆಯಲ್ಲಿ ರಾವಣನೂ ಸಹ ರಾಮನ ಮೇಲೆ ದಾಳಿ ಮಾಡಲುಪಕ್ರಮಿಸಿದನು. ರಾಮ-ಲಕ್ಷ್ಮಣರೇ ತಮ್ಮ ಮೇಲೆ ಬೀಳಲು ಬಂದರೆ ಏನು ಮಾಡಬೇಕೆಂಬ ಭ್ರಾಂತಿಯು ಕಪಿಸೈನ್ಯದಲ್ಲುಂಟಾಗುವುದು ಸಹಜವಾಗಿಯೇ ಇದೆ. ಲಕ್ಷ್ಮಣನಿದ್ದೆಡೆಗೆ ಲಕ್ಷ್ಮಣರೂಪಿಗಳಾದ ರಾಕ್ಷಸರೂ-ರಾಮನಿದ್ದೆಡೆಗೆ ರಾಮರೂಪಿಗಳಾದ ರಾಕ್ಷಸರೂ ರಭಸದಿಂದ ನುಗ್ಗುತ್ತಿ

ದ್ದರು. ಯದ್ಯಪಿ ಅದು ರಾವಣನ ಮಾಯೆಯೆಂದು ತಿಳಿದರೂ ಸಹ ಕ್ಷಣ ಕಾಲ ರಾಮನ ಸೈನ್ಯದಲ್ಲಿ ಭ್ರಾಂತಿಯುಂಟಾದುದರಲ್ಲಿ ಆಶ್ಚರ್ಯವೇನಿರಲಿಲ್ಲ. ತನ್ನ ರೂಪವನ್ನು ಧರಿಸಿದ್ದ ರಾಕ್ಷಸರು ರಾಮನ ಮೇಲೆ ರಭಸದಿಂದ ಬೀಳುತ್ತಿರುವುದನ್ನು ನೋಡಿ ಆ ವಿಧವಾದ ಭ್ರಾಂತಿಯು ರಾಮನಿಗೂ ಉಂಟಾಗಬಹುದೆಂದೆಣಿಸಿ ಸಂಭ್ರಮಗೊಳ್ಳದ ಲಕ್ಷ್ಮಣನು ರಾಮನನ್ನು ಕುರಿತು ಹೇಳಿದನು:

**ಜಹೀಮಾನ್ರಾಕ್ಷಸಾನ್ಪಾಪಾನಾತ್ಮನಃ ಪ್ರತಿರೂಪಕಾನ್ ॥೧೧॥**

"ರಾಮ! ನಮ್ಮ ಸ್ವರೂಪವನ್ನೇ ಧರಿಸಿರುವ ಪಾಪಿಷ್ಠರಾದ ಈ ರಾಕ್ಷಸರನ್ನು ಕೂಡಲೇ ಸಂಹರಿಸು."

ಲಕ್ಷ್ಮಣನ ಮಾತುಗಳನ್ನು ಕೇಳುತ್ತಲೇ ರಾಮನು ಮಹಾಸ್ತ್ರಗಳ ಪ್ರಯೋಗದಿಂದ ತನ್ನ ಮತ್ತು ಲಕ್ಷ್ಮಣನ ರೂಪಗಳನ್ನು ಧರಿಸಿದ್ದ ರಾಕ್ಷಸರೆಲ್ಲರನ್ನೂ ಕ್ಷಣಮಾತ್ರದಲ್ಲಿ ಸಂಹರಿಸಿದನು.

ಆ ಸಮಯಕ್ಕೆ ಸರಿಯಾಗಿ ಇಂದ್ರನ ಸಾರಥಿಯಾದ ಮಾತಲಿಯು ಹಸಿರು ಬಣ್ಣದ ಕುದುರೆಗಳಿಂದ ಯುಕ್ತವಾದ ಮತ್ತು ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ದಿವ್ಯರಥದಲ್ಲಿ ಕುಳಿತು ರಣಾಂಗಣಕ್ಕೆ ಆಗಮಿಸಿ ರಾಮನನ್ನು ಕುರಿತು ಹೇಳಿದನು :

"ಕಾಕುತ್ಸ್ಥ! ನಾನು ದೇವಲೋಕದಿಂದ ತಂದಿರುವ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಮತ್ತು ಹಸಿರು ಬಣ್ಣದ ಕುದುರೆಗಳನ್ನು ಕಟ್ಟಿರುವ, ಉತ್ತಮೋತ್ತಮವಾದ, ಸರ್ವತ್ರ ಜಯಶಾಲಿಯಾದ ಈ ದಿವ್ಯರಥವು ದೇವೇಂದ್ರನದು. ದೇವೇಂದ್ರನು ಈ ದಿವ್ಯರಥದಲ್ಲಿ ಕುಳಿತು ದೈತ್ಯ-ದಾನವರನ್ನು ಅಪರಿಮಿತಸಂಖ್ಯೆಯಲ್ಲಿ ಸಂಹರಿಸಿದ್ದಾನೆ. ಆದುದರಿಂದ ನೀನೂ ಸಹ ಕೂಡಲೇ ಈ ದಿವ್ಯರಥದಲ್ಲಿ ಕುಳಿತು ರಾವಣನನ್ನು ಸಂಹರಿಸು. ನಾನೇ ನಿನಗೆ ಸಾರಥಿಯಾಗುತ್ತೇನೆ. ನೀನು ಈ ಕಾರ್ಯಮಾಡಲು ವಿಲಂಬಮಾಡಬೇಡ."

ಆ ಸಂದರ್ಭದಲ್ಲಿ ಅಲ್ಲಿ ನಡೆಯುತ್ತಿದ್ದ ಯುದ್ಧವೇ ಮಾಯಾಯುದ್ಧವಾಗಿದ್ದುದರಿಂದ ಮಾತಲಿಯು ಹೇಳಿದ ಮಾತನ್ನು ಕೂಡ ರಾಮನು ಸಂಶಯಿಸುವಂತಾಯಿತು. ಅದೂ ಸಹ ರಾಕ್ಷಸರ ಮಾಯೆಗಳಲ್ಲಿ ಒಂದಾಗಿರಬಹು

ದೆಂದು ರಾಮನು ಭಾವಿಸಿದನು. ಸಮೀಪದಲ್ಲಿಯೇ ಇದ್ದ ವಿಭೀಷಣನಿಗೆ ರಾಮನ ಇಂಗಿತವೇನೆಂಬುದು ತಿಳಿಯಿತು. ಕೂಡಲೇ ವಿಭೀಷಣನು ರಾಮನಿಗೆ ಹೇಳಿದನು : "ಪುರುಷವ್ಯಾಘ್ರನೇ! ಮಾತಲಿಯೀಗ ನಿನ್ನ ಬಳಿಗೆ ಬಂದು ಮಾತನಾಡುತ್ತಿರುವುದು ರಾವಣನ ಮಾಯಾವಿದ್ಯೆಯ ಪ್ರಭಾವದಿಂದಲ್ಲ. ನಿಶ್ಚಯವಾಗಿಯೂ ಇಂದ್ರನ ಸಾರಥಿಯಾದ ಮಾತಲಿಯೇ ನಿನ್ನ ಬಳಿಗೆ ಬಂದು ಮಾತನಾಡುತ್ತಿದ್ದಾನೆ. ಇದನ್ನು ಸಂಶಯಿಸಬೇಡ. ಕೂಡಲೇ ನೀನು ಮಾತಲಿಯ ಮಾತಿನಂತೆಯೇ ಈ ದಿವ್ಯರಥವನ್ನು ಆರೋಹಣಮಾಡು. ಇದು ನಿಶ್ಚಯವಾಗಿಯೂ ಇಂದ್ರನ ರಥವೇ ಆಗಿರುವುದು."

ಕಕುತ್ಸ್ಥವಂಶಪ್ರದೀಪನಾದ ಶ್ರೀರಾಮನು ಹಾಗೆಯೇ ಆಗಲೆಂದು ಮಂದಹಾಸದೊಡನೆ ವಿಭೀಷಣನಿಗುತ್ತರಿಸಿ, ಇಂದ್ರನ ರಥದಲ್ಲಿ ಕುಳಿತು, ರಾವಣನಿಂದ ಸೀತೆಯು ಅಪಹೃತಳಾದುದನ್ನು ನೆನೆದು ಕುಪಿತನಾಗಿ, ರಾವಣನೆಡೆಗೆ ರಭಸದಿಂದ ನುಗ್ಗಿದನು. ರಾವಣನೂ ಸಹ ರಣಗರ್ಜನೆಮಾಡುತ್ತಾ ರಾಮನಿಗೆದುರಾಗಿ ಬಂದು ನಿಲ್ಲಲು, ಪ್ರಪಂಚದ ಪ್ರಾಣಿಗಳೆಲ್ಲವೂ ಹಾಹಾಕಾರ ಮಾಡಿದುವು. ಯುದ್ಧವನ್ನು ನೋಡುವ ಸಲುವಾಗಿ ಆಕಾಶದಲ್ಲಿ ನೆರೆದು ನಿಂತಿದ್ದ ದೇವತೆಗಳು ಸಿಂಹನಾದಮಾಡುತ್ತಾ ಭೇರಿ-ಕಹಳೆಗಳೇ ಮೊದಲಾದ ರಣವಾದ್ಯಗಳನ್ನು ಮೊಳಗಿಸಿದರು. ದಶಕಂಠನಿಗೂ ಮತ್ತು ಶ್ರೀರಾಮನಿಗೂ ಘೋರಯುದ್ಧವು ಪ್ರಾರಂಭವಾಯಿತು. ರಾಮ-ರಾವಣರ ಯುದ್ಧಕ್ಕೆ ಸಾದೃಶ್ಯವನ್ನು ಕೊಡಬಹುದಾದ ಯುದ್ಧವು ಆ ಹಿಂದೆ ಎಲ್ಲಿಯೂ ನಡೆದಿರಲಿಲ್ಲ. ರಾಮ-ರಾವಣರ ಯುದ್ಧದಂತೆಯೇ ರಾಮ-ರಾವಣರ ಯುದ್ಧವಿದ್ದಿತೆಂದು ಹೇಳಬಹುದಾಗಿತ್ತೇ ಹೊರತು ಆ ಇಬ್ಬರ ಯುದ್ಧಕ್ಕೆ ಬೇರೊಂದರ ಹೋಲಿಕೆಯನ್ನು ನಿರೂಪಿಸುವ ಸಾಧ್ಯತೆಯಿರಲಿಲ್ಲ.

ರಾವಣನು ಇಂದ್ರನ ವಜ್ರಾಯುಧಕ್ಕೂ ಮತ್ತು ಬ್ರಾಹ್ಮಣರ ದಂಡಾಯುಧಕ್ಕೂ (ಬ್ರಹ್ಮದಂಡಕ್ಕೂ) ಸಮಾನವಾಗಿದ್ದ ಮಹಾಘೋರವಾಗಿದ್ದ ಶಕ್ತ್ಯಾಯುಧವನ್ನು ರಾಮನ ಮೇಲೆ ರಭಸದಿಂದ ಪ್ರಯೋಗಿಸಿದನು. ಅಪಾರ ಮಹಿಮೆಯಿಂದ ಕೂಡಿದ್ದ ರಾವಣನ ಶಕ್ತ್ಯಾಯುಧವನ್ನೂ ಶ್ರೀರಾಮನು ನಿಶಿತವಾದ ಪ್ರತ್ಯಸ್ತ್ರಗಳಿಂದ ಕತ್ತರಿಸಿಬಿಟ್ಟನು. ಪರಮಾದ್ಭುತವಾದ ಸುದುಷ್ಕರವಾದ ಆ ಸಾಹಸಕಾರ್ಯವನ್ನು ಕಂಡು ರಾವಣನಿಗೂ ಭಯ

ವುಂಟಾಯಿತು. ಪರಾಕ್ರಮಿಯಾದ ಶತ್ರುವಿನೆದುರಿನಲ್ಲಿ ತನ್ನ ಭಯವನ್ನು ತೋರ್ಪಡಿಸದೇ ಮರುಕ್ಷಣದಲ್ಲಿಯೇ ಕೋಪಾವಿಷ್ಟನಾಗಿ ಹೂಂಕರಿಸುತ್ತಾ ನಿಶಿತವಾದ ಅನೇಕ ಬಾಣಗಳನ್ನೂ, ವಿಧವಿಧವಾದ ಭುಶುಂಡಿ-ಶೂಲ-ಮುಸಲ-ಪರಶ್ವಧ ಮುಂತಾದ ಆಯುಧಗಳನ್ನೂ, ಶತಘ್ನಿಗಳನ್ನೂ, ಬಹು ತೀಕ್ಷ್ಣವಾದ ಅಲುಗುಗಳುಳ್ಳ ಕತ್ತಿಗಳನ್ನೂ–ಅನವರತವಾಗಿ ಮಳೆಯನ್ನು ಸುರಿಸುವಂತೆಯೇ ರಾಮನ ಮೇಲೆಯೂ, ಅಪಾರವಾದ ಕಪಿಸೈನ್ಯದ ಮೇಲೆಯೂ ಸುರಿಸಿದನು. ರಾಕ್ಷಸರಾಜನಾದ ದಶಗ್ರೀವನ ಮಾಯಾವಿದ್ಯೆಯ ವಿಕೃತಸ್ವರೂಪವನ್ನು ಕಂಡು ವಾನರಪುಂಗವರು ಭಯದಿಂದ ದಿಕ್ಕೆಟ್ಟು ಓಡಲಾರಂಭಿಸಿದರು. ರಾವಣನ ಆ ಮಾಯಾಜಾಲವನ್ನು ಕಂಡು ಭ್ರಮಿಸದ, ಧೀರನಾದ ಶ್ರೀರಾಮನು ಸುಂದರವಾದ ಪಾರ್ಶ್ವಗಳಿಂದಲೂ, ಸುವರ್ಣಮಯವಾದ ರೆಕ್ಕೆಗಳಿಂದಲೂ ಕೂಡಿದ್ದು ನೋಡಲು ಬಹಳ ಸುಂದರವಾಗಿದ್ದ, ಶ್ರೇಷ್ಠವಾದ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿಗೇರಿಸಿ ಬ್ರಹ್ಮಾಸ್ತ್ರದ ಮಹಾಮಂತ್ರವನ್ನು ಪುನಶ್ಚರಣೆಮಾಡಲುಪಕ್ರಮಿಸಿದನು. ರಾಮನು ಉತ್ತಮೋತ್ತಮವಾದ ಆ ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಬ್ರಹ್ಮಾಸ್ತ್ರದ ಮಹಾಮಂತ್ರಪುನಶ್ಚರಣೆಯನ್ನು ಮಾಡುತ್ತಿರುವುದನ್ನು ಕಂಡು ಇಂದ್ರಪುರಸ್ಸರರಾದ ದೇವ-ಗಂಧರ್ವಾಪ್ಸರೆಯರು ಹರ್ಷಿತರಾದರು. ದುರ್ಮತಿಯಾದ ರಾವಣನ ಆಯುಷ್ಯವೂ ಅಲ್ಪಕಾಲ ಮಾತ್ರವೇ ಉಳಿದಿರುವುದೆಂದೂ ಅವರು ನಿಶ್ಚಯಿಸಿದರು.

ಅನಂತರದಲ್ಲಿ ಶ್ರೀರಾಮನು ಮಹಾಪ್ರಭೆಯಿಂದ ಕೂಡಿದ್ದ, ಅಪ್ರತಿಮವಾದ, ರಾವಣಾಂತಕರವಾದ, ಮೇಲೆತ್ತಿದ ಬ್ರಹ್ಮದಂಡದಂತೆಯೇ ಪ್ರಜ್ವಲಿಸುತ್ತಿದ್ದ ಬ್ರಹ್ಮಾಸ್ತ್ರವನ್ನು ರಾವಣನಿಗೆ ಗುರಿಯಿಟ್ಟು ಪ್ರಯೋಗಿಸಿದನು. ಬಹು ದೀರ್ಘವಾಗಿ ಶಿಂಜಿನಿಯನ್ನು ಸೆಳೆದು ಪ್ರಯೋಗಿಸಲ್ಪಟ್ಟ ಆ ಬ್ರಹ್ಮಾಸ್ತ್ರವು ಅಶ್ವ-ರಥ-ಸಾರಥಿಗಳೊಡನೆ ರಾವಣಾಸುರನನ್ನು ಧಗ-ಧಗನೆ ಸುಟ್ಟುಬಿಟ್ಟಿತು. ಅಷ್ಟುಮಾತ್ರವಲ್ಲ ; ಬ್ರಹ್ಮಾಸ್ತ್ರಪ್ರಭಾವದಿಂದ ರಥದ ಸುತ್ತಲೂ ಅದ್ಭುತವಾದ ಬೆಂಕಿಯು ಹೊತ್ತಿಕೊಂಡು ಉರಿಯತೊಡಗಿತು. ಬಹುಕ್ಲಿಷ್ಟವಾದ ಕಾರ್ಯವನ್ನೂ ಬಹುಸುಲಭವಾಗಿ ಮಾಡಿ ಮುಗಿಸುವ ಸಾಮರ್ಥ್ಯದಿಂದ ಕೂಡಿದ್ದ ಶ್ರೀರಾಮನು ರಾವಣನನ್ನು ಬ್ರಹ್ಮಾಸ್ತ್ರದಿಂದ ಸಂಹರಿಸಿದುದನ್ನು

ಕಂಡು ಯಕ್ಷ-ಗಂಧರ್ವ-ಚಾರಣರಿಂದೊಡಗೂಡಿದ ದೇವತೆಗಳು ಆನಂದ ಭರಿತರಾದರು. ಅನಂತರ ಪೃಥಿವ್ಯಾದಿ ಪಂಚಭೂತಗಳು ರಾವಣನ ಶರೀರ ವನ್ನು ಪರಿತ್ಯಜಿಸಿದುವು. (ರಾವಣನು ಮರಣಹೊಂದಿದನು.) ಅವನು ಬ್ರಹ್ಮಾಸ್ತ್ರದ ತೇಜಸ್ಸಿನಿಂದ ದಗ್ಧನಾಗಿ ಸಮಸ್ತಲೋಕಗಳಿಂದಲೂ ಭ್ರಂಶಿತನಾದನು.

ರಾವಣಾಸುರನಲ್ಲಿದ್ದ ಪಂಚಭೂತಗಳೂ (ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ) ತಮ್ಮ-ತಮ್ಮ ಸ್ಥಾನಗಳಲ್ಲಿ ಸೇರಿಕೊಂಡುವು. ಬ್ರಹ್ಮಾಸ್ತ್ರದಿಂದ ದಗ್ಧವಾದ ರಾವಣನ ಶರೀರದಲ್ಲಿ ಮಾಂಸ-ರಕ್ತ-ಅಸ್ಥಿ ಯಾವುದೂ ಉಳಿಯಲಿಲ್ಲ. ಭಸ್ಮವಾದನಂತರ ಬೂದಿಯೂ ಸಹ ಉಳಿಯಲಿಲ್ಲ. ಅರ್ಥಾತ್ ಬ್ರಹ್ಮಾಸ್ತ್ರವು ರಾವಣಾಸುರನನ್ನು ನಾಮಾವಶೇಷನನ್ನಾಗಿ ಮಾಡಿಬಿಟ್ಟಿತು.

೨೯೦ನೆಯ ಅಧ್ಯಾಯವು ಮುಗಿಯಿತು.

೨೯೧ನೆಯ ಅಧ್ಯಾಯ ರಾಮೋಪಾಖ್ಯಾನಪರ್ವ (ಮುಂದುವರಿದಿದೆ.)

## ಶ್ರೀರಾಮನು ಸೀತೆಯ ವಿಷಯದಲ್ಲಿ ಸಂದೇಹಿಸಿದುದು : ದೇವತೆಗಳು ಸೀತೆಯ ಪಾವಿತ್ರ್ಯವನ್ನು ಸಮರ್ಥಿಸಿದುದು : ಶ್ರೀರಾಮನು ಸೈನ್ಯಸಮೇತನಾಗಿ ಕಿಷ್ಕಿಂಧೆಯ ಮೂಲಕ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದುದು

ಯುಧಿಷ್ಠಿರ! ಸುರಾರಿಯಾದ, ಕ್ಷುದ್ರನಾದ ರಾವಣಾಸುರನನ್ನು ಕೊಂದು ಮಿತ್ರ-ಭ್ರಾತೃಸಮೇತನಾಗಿ ಶ್ರೀರಾಮನು ಆನಂದಿಸಿದನು. ನಿರಂತರವಾಗಿ ಉಪಟಳವನ್ನು ಕೊಡುತ್ತಿದ್ದ ದಶಗ್ರೀವನು ರಾಮನಿಂದ ಹತನಾಗಲಾಗಿ ಋಷಿಪುರೋಗರಾದ ದೇವತೆಗಳು–'ಶ್ರೀರಾಮನಿಗೆ ಜಯವಾಗಲಿ!'– ಎಂಬ ಸತತವಾದ ಜಯಕಾರಗಳೊಡನೆ ರಾಮನನ್ನು ಸುತ್ತುವರಿದು ನಿಂತು ಮಹಾಭುಜನಾದ ಶ್ರೀರಾಮನನ್ನು ಆಶೀರ್ವದಿಸಿದರು. ಕಮಲಪತ್ರಾಕ್ಷನಾದ ಶ್ರೀರಾಮನನ್ನು ಸಕಲದೇವತೆಗಳೂ ಸ್ತೋತ್ರಮಾಡಿದರು. ಗಂಧರ್ವರು ಪುಷ್ಪವೃಷ್ಟಿಗರೆದರು. ಮತ್ತೆ ಕೆಲವು ದೇವತೆಗಳು ರಾಮನನ್ನು ಬಹುವಾಗಿ ಹೊಗಳಿದರು. ಈ ರೀತಿಯಲ್ಲಿ ದೇವರ್ಷಿಗಳೂ, ದೇವತೆಗಳೂ, ಗಂಧರ್ವಾಪ್ಸರೆ

ಯರೂ, ಯಕ್ಷ-ಕಿನ್ನರರೂ ಶ್ರೀರಾಮನನ್ನು ಯಥಾಯೋಗ್ಯವಾಗಿ ಪೂಜಿಸಿ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

ಅಚ್ಯುತನೇ! (ಧರ್ಮಜನೇ!) ಆ ಸಮಯದಲ್ಲಿ, ಅದ್ಭುತವಾದ ಒಂದು ಮಹೋತ್ಸವವು ನಡೆಯುತ್ತಿದೆಯೋ ಎಂಬಂತೆ ದೇವತೆಗಳಿಂದ ತುಂಬಿಹೋಗಿದ್ದ ಆಕಾಶವು ವಿಜೃಂಭಿಸಿತು.

ಪರಪುರಂಜಯನಾದ, ಪ್ರಭುವಾದ, ಮಹಾಯಶಸ್ವಿಯಾದ ಶ್ರೀರಾಮನು ರಾವಣನನ್ನು ಸಂಹಾರಮಾಡಿದನಂತರ ಲಂಕಾರಾಜ್ಯವನ್ನು ವಿಭೀಷಣನಿಗೊಪ್ಪಿಸಿದನು. ಅನಂತರದಲ್ಲಿ ರಾವಣನ ಅಮಾತ್ಯನಾಗಿದ್ದ, ಬಹುವೃದ್ಧನಾಗಿದ್ದ ಮತ್ತು ಬಹುಪ್ರಾಜ್ಞನಾಗಿದ್ದ ಅವಿಂಧ್ಯನು ವಿಭೀಷಣ ಪುರಸ್ಸರಳಾಗಿರುವ ಸೀತೆಯನ್ನು ರಾಮನ ಸಮೀಪಕ್ಕೆ ಕರೆದುಕೊಂಡು ಬಂದನು. ಅವಿಂಧ್ಯನು ರಾಮನ ಸಮೀಪದಲ್ಲಿ ಕೈಜೋಡಿಸಿ ಬಹುವಿನೀತ ನಾಗಿ ರಾಮನನ್ನು ಕುರಿತು ಹೇಳಿದನು :

**ಪ್ರತೀಚ್ಛ ದೇವೀಂ ಸದ್ವೃತ್ತಾಂ ಮಹಾತ್ಮಞ್ಜಾನಕೀಮಿತಿ ॥೭॥**

"ಮಹಾತ್ಮನಾದ ಶ್ರೀರಾಮನೇ! ಸದ್ವೃತ್ತಿಯಿಂದ ಕೂಡಿರುವ ಸುಚರಿತೆಯಾದ ಜಾನಕೀದೇವಿಯನ್ನು ಸ್ವೀಕರಿಸು."

ಅವಿಂಧ್ಯನ ಮಾತುಗಳನ್ನು ಕೇಳಿ ಶ್ರೀರಾಮನು ರಥದಿಂದಿಳಿದು ಬಂದು ಅಶ್ರುಪೂರ್ಣವಾದ ಮುಖದಿಂದ ಕೂಡಿದ್ದ ಸೀತಾದೇವಿಯನ್ನು ನೋಡಿದನು. ಸರ್ವಾಂಗಸುಂದರಿಯಾದ ಸೀತಾದೇವಿಯು ಇನ್ನೂ ಪಲ್ಲಕ್ಕಿಯಲ್ಲಿಯೇ ಕುಳಿತಿದ್ದಳು. ಶೋಕಾಭಿಭೂತಳಾಗಿ ಬಿಕ್ಕಿ-ಬಿಕ್ಕಿ ಅಳುತ್ತಿದ್ದಳು. ಸುಕೋಮಲ ವಾದ ಅವಳ ಶರೀರಾದ್ಯಂತವಾಗಿ ಧೂಳು ಮುಚ್ಚಿದ್ದಿತು. ನೀಳವಾದ ತಲೆ ಗೂದಲು ಜಡೆಕಟ್ಟಿದ್ದಿತು. ವಸ್ತ್ರವು ಮಾಸಿಹೋಗಿದ್ದಿತು. ಅಂತಹ ದುರವಸ್ಥೆ ಯಲ್ಲಿದ್ದರೂ ಅನ್ಯರ ಗೃಹದಲ್ಲಿದ್ದ ಸೀತಾದೇವಿಯನ್ನು ಪರಪುರುಷಸ್ಪರ್ಶ ಶಂಕೆಯಿಂದ ಸ್ವೀಕರಿಸದೆ ಶ್ರೀರಾಮನು ಅವಳನ್ನು ಕುರಿತು ಹೇಳಿದನು :

**ಗಚ್ಛ ವೈದೇಹಿ ಮುಕ್ತಾ ತ್ವಂ ಯತ್ಕಾರ್ಯಂ ತನ್ಮಯಾ ಕೃತಮ್ ।**
**ಮಾಮಾಸಾದ್ಯ ಪತಿಂ ಭದ್ರೇ ನ ತ್ವಂ ರಾಕ್ಷಸವೇಶ್ಮನಿ ।**
**ಜರಾಂ ವ್ರಜೇಥಾ ಇತಿ ಮೇ ನಿಹತೋಽಸೌ ನಿಶಾಚರಃ ॥೧೧॥**

**ಕಥಂ ಹ್ಯಸ್ಮದ್ವಿಧೋ ಜಾತು ಜಾನನ್ಧರ್ಮವಿನಿಶ್ಚಯಮ್ ।**
**ಪರಹಸ್ತಗತಾಂ ನಾರೀಂ ಮುಹೂರ್ತಮಪಿ ಧಾರಯೇತ್ ॥೧೨॥**

**ಸುವೃತ್ತಾಮಸುವೃತ್ತಾಂ ವಾಪ್ಯಹಂ ತ್ವಾಮದ್ಯ ಮೈಥಿಲಿ ।**
**ನೋತ್ಸಹೇ ಪರಿಭೋಗಾಯ ಶ್ವಾವಲೀಢಂ ಹವಿರ್ಯಥಾ ॥೧೩॥**

"ವೈದೇಹಿ! ನೀನೀಗ ಬಂಧನದಿಂದ ವಿಮುಕ್ತಳಾಗಿರುವೆ. ಇಚ್ಛೆ ಬಂದಲ್ಲಿಗೆ ನೀನಿನ್ನು ತೆರಳಬಹುದು. ಮಂಗಳಾಂಗಿ! ನಾನು ನಿನ್ನ ಪತಿಯಾದುದರಿಂದ ಪತಿಯ ಕರ್ತವ್ಯದಂತೆ ನಿನ್ನನ್ನು ಅಪಹರಿಸಿದ ರಾಕ್ಷಸನನ್ನು ಕೊಂದು ನಿನ್ನನ್ನು ಬಿಡುಗಡೆಮಾಡಿರುತ್ತೇನೆ. ಮುಪ್ಪಿನವರೆಗೂ ನೀನು ರಾಕ್ಷಸನ ಬಂಧನದಲ್ಲಿರಕೂಡದೆಂಬುದು ನನ್ನ ಆಶಯವಾಗಿತ್ತು. ಧರ್ಮಸೂಕ್ಷ್ಮವನ್ನು ಸಂಪೂರ್ಣವಾಗಿ ತಿಳಿದಿರುವ ನನ್ನಂತಹವರಿಗೆ ಪರಹಸ್ತಗತಳಾಗಿದ್ದ ಸ್ತ್ರೀಯೊಬ್ಬಳನ್ನು ಪುನಃ ಪ್ರತಿಗ್ರಹಮಾಡಲು ಹೇಗೆ ತಾನೇ ಸಾಧ್ಯವಾದೀತು? ಮೈಥಿಲಿ! ನೀನೀಗ ಸುಚರಿತ್ರಳೇ ಆಗಿರಬಹುದು ಅಥವಾ ಅಲ್ಲದಿರಬಹುದು. ಕನಸು-ಮನಸ್ಸುಗಳಲ್ಲಿಯೂ ಪರಪುರುಷನನ್ನು ಸ್ಮರಿಸದ ಸುಚರಿತ್ರಳಾದ ಮಹಾಪತಿವ್ರತೆಯೇ ಆಗಿರಬಹುದು. ಆದರೂ ಸಹ–ನಾಯಿ ನೆಕ್ಕಿದ ಯಜ್ಞದ ಹವಿಸ್ಸಿನಂತೆ–ಪರಗೃಹದಲ್ಲಿದ್ದ ನಿನ್ನೊಡನೆ ನಾನು ಪುನಃ ಸುಖೋಪಭೋಗಗಳನ್ನು ಅನುಭವಿಸಲಾರೆನು."

ನಿಶ್ಚಯವಾಗಿಯೂ ರಾಮನಾಡಿದ ಮಾತುಗಳು ಕರ್ಣಕಠೋರವಾದುವುಗಳು. ಪತಿವ್ರತೆಯಾದ ಸೀತೆಯಂತೂ ರಾಮನ ಮಾತುಗಳನ್ನು ಕೇಳಿದೊಡನೆಯೇ ಕತ್ತರಿಸಲ್ಪಟ್ಟು ಕೆಳಗೆಬಿದ್ದ ಬಾಳೆಯ ಗಿಡದಂತೆ ಕುಸಿದು ಬಿದ್ದಳು. ಕನ್ನಡಿಯೊಂದರ ಮೇಲೆ ಉಸಿರುಬಿಡುವುದರಿಂದ ವ್ಯಾಪ್ತವಾಗುವ ಸೂಕ್ಷ್ಮವಾದ ನೀರಿನ ಕಣಗಳು ಮರುಕ್ಷಣದಲ್ಲಿಯೇ ಆರಿಹೋಗುವಂತೆ–ರಾಮನ ದರ್ಶನದಿಂದ ವಿಕಸಿತವಾಗಿದ್ದ ಸೀತಾದೇವಿಯ ಮುಖಾರವಿಂದವು ರಾಮನ ಕಠಿನತರವಾದ ಆ ಮಾತುಗಳನ್ನು ಕೇಳುತ್ತಿದ್ದಂತೆಯೇ ಕಂದಿಹೋಯಿತು.

ಲಕ್ಷ್ಮಣಸಮೇತರಾದ ಕಪಿನಾಯಕರಂತೂ ಮೃತಪ್ರಾಯರೇ ಆದರು. ಮುಂದೇನು ಮಾಡಬೇಕೆಂಬುದನ್ನು ತಿಳಿಯದೆ ಸರ್ವರೂ ಶೂನ್ಯಚಿತ್ತರಾಗಿ

ದ್ದಾಗ ವಿಶುದ್ಧಾತ್ಮನಾದ, ಪದ್ಮಜನಾದ, ಜಗತ್ತಿನ ಉತ್ಪತ್ತಿಗೆ ಕಾರಣನಾದ ಚತುರ್ಮುಖನು ವಿಮಾನದಲ್ಲಿ ಆಗಮಿಸಿ ರಾಮನಿಗೆ ದರ್ಶನವನ್ನಿತ್ತನು. ಚತುರ್ಮುಖನನ್ನೇ ಅನುಸರಿಸಿ ಇಂದ್ರ, ಅಗ್ನಿ, ವಾಯು, ಯಮ, ವರುಣ, ಯಕ್ಷರ ಅಧಿಪತಿಯಾದ ಕುಬೇರ, ಶುದ್ಧಾತ್ಮರಾದ ಸಪ್ತರ್ಷಿಗಳು–ಇವರೆಲ್ಲರೂ ರಾಮನಿಗೆ ದರ್ಶನವಿತ್ತರು. ದಿವ್ಯವಾದ ಮತ್ತು ತೇಜೋಮಯವಾದ ಶರೀರವನ್ನು ಧರಿಸಿದ್ದ ದಶರಥನೂ ಸಹ ಹಂಸಯುಕ್ತವಾದ ವಿಮಾನದಲ್ಲಿ ಕುಳಿತು ರಾಮನಿಗೆ ಕಾಣಿಸಿಕೊಂಡನು. ದೇವ-ಗಂಧರ್ವರಿಂದ ತುಂಬಿ ಹೋಗಿದ್ದ ಆಕಾಶಮಂಡಲವು ಶರತ್ಕಾಲದಲ್ಲಿ ಮಿನುಗುವ ತಾರೆಗಳಿಂದ ಕೂಡಿ ಪ್ರಕಾಶಿಸುವ ನಭಸ್ಥಳದಂತೆಯೇ ಕಾಣುತ್ತಿದ್ದಿತು. ಅನಂತರದಲ್ಲಿ ಯಶಸ್ವಿನಿಯಾದ ಸೀತಾದೇವಿಯು ಚೇತರಿಸಿಕೊಂಡು ಮೇಲೆದ್ದು ವಿಶಾಲ ವಕ್ಷನಾದ ಶ್ರೀರಾಮನನ್ನು ಕುರಿತು ಹೀಗೆಂದು ಹೇಳಿದಳು :

**ರಾಜಪುತ್ರ ನ ತೇ ದೋಷಂ ಕರೋಮಿ ವಿದಿತಾ ಹಿ ತೇ ।**
**ಗತಿಃ ಸ್ತ್ರೀಣಾಂ ನರಾಣಾಂ ಚ ಶೃಣು ಚೇದಂ ವಚೋ ಮಮ ॥೨೨॥**

**ಅನ್ತಶ್ಚರತಿ ಭೂತಾನಾಂ ಮಾತರಿಶ್ವಾ ಸದಾಗತಿಃ ।**
**ಸ ಮೇ ವಿಮುಞ್ಚತು ಪ್ರಾಣಾನ್ಯದಿ ಪಾಪಂ ಚರಾಮ್ಯಹಮ್ ॥೨೩॥**

**ಅಗ್ನಿರಾಪಸ್ತಥಾಕಾಶಂ ಪೃಥಿವೀ ವಾಯುರೇವ ಚ ।**
**ವಿಮುಞ್ಚನ್ತು ಮಮ ಪ್ರಾಣಾನ್ಯದಿ ಪಾಪಂ ಚರಾಮ್ಯಹಮ್ ॥೨೪॥**

**ಯಥಾಹಂ ತ್ವದೃತೇ ವೀರ ನಾನ್ಯಂ ಸ್ವಪ್ನೇಽಪ್ಯಚಿನ್ತಯಮ್ ।**
**ತಥಾ ಮೇ ದೇವನಿರ್ದಿಷ್ಟಸ್ತ್ವಮೇವ ಹಿ ಪತಿರ್ಭವ ॥೨೫॥**

"ರಾಜಪುತ್ರ! ನೀನು ನನ್ನ ವಿಷಯದಲ್ಲಿ ಇಷ್ಟು ಕಠಿನವಾದ ಮಾತುಗಳನ್ನಾಡಿದರೂ ನಾನು ನಿನ್ನಲ್ಲಿ ದೋಷವನ್ನೆಣಿಸುವುದಿಲ್ಲ. ಏಕೆಂದರೆ : ನಿನಗೆ ಸ್ತ್ರೀ-ಪುರುಷರ ಚರ್ಯೆಯು ಸಂಪೂರ್ಣವಾಗಿ ತಿಳಿದಿರುವುದು. ಆದರೂ ಸಹ ನಾನು ಹೇಳಲಿರುವ ಈ ಮಾತುಗಳನ್ನು ದಯಮಾಡಿ ಲಾಲಿಸು. ಸರ್ವಕಾಲದಲ್ಲಿಯೂ ಸಂಚರಿಸುವ ಸ್ವಭಾವದಿಂದ ಕೂಡಿರುವ ವಾಯುದೇವನು ಸರ್ವರ ಶರೀರಗಳಲ್ಲಿಯೂ ಇದ್ದಾನೆ. ನಾನೇನಾದರೂ ಪಾಪಮಾಡಿದ್ದರೆ ನನ್ನಲ್ಲಿ ಪ್ರಾಣರೂಪನಾಗಿರುವ ಆ ವಾಯುದೇವನು ನನ್ನನ್ನು ಈ ಕ್ಷಣ

ದಲ್ಲಿಯೇ ಪರಿತ್ಯಜಿಸಿ ಹೊರಟುಹೋಗಲಿ. ಈ ನನ್ನ ಶರೀರವು ಎಲ್ಲರ ಶರೀರಗಳಂತೆಯೇ ಪಂಚಭೂತಾತ್ಮಕವಾಗಿದೆ. ನಾನೇನಾದರೂ ಪಾಪಮಾಡಿದ್ದರೆ ನನ್ನ ಶರೀರದಲ್ಲಿ ಪಂಚಭೂತರೂಪಕವಾಗಿರುವ ಅಗ್ನಿ, ಜಲ, ಆಕಾಶ, ಪೃಥವೀ, ವಾಯು–ಈ ಐವರೂ ಸಹ ನನ್ನನ್ನು ಈ ಕೂಡಲೇ ತೊರೆಯಲಿ. ವೀರನೇ! ನಾನು ನಿನ್ನ ಹೊರತಾಗಿ ಬೇರೊಬ್ಬ ಪುರುಷನನ್ನು ಸ್ವಪ್ನದಲ್ಲಿಯೂ ಚಿಂತನೆಮಾಡಿಲ್ಲ. ಇದನ್ನು ನೀನು ಈ ದೇವತೆಗಳ ನಿರ್ದೇಶದಿಂದಲೇ ತಿಳಿದುಕೊಂಡು ನನ್ನ ಪತಿಯಾಗು. (ನಾನು ಕನಸಿನಲ್ಲಿಯೂ ಸಹ ಪರ ಪುರುಷನನ್ನು ಸ್ಮರಿಸಿರುವುದಿಲ್ಲ. ಇದಕ್ಕೆ ನನ್ನ ಶರೀರದಲ್ಲಿ ಪಂಚಭೂತ ಸ್ವರೂಪರಾಗಿರುವ ಈ ದೇವತೆಗಳೇ ಸಾಕ್ಷಿ. ಇವರು ನನ್ನ ಮನಸ್ಸಿನ ಪಾವಿತ್ರ್ಯವನ್ನು ನಿನ್ನೊಡನೆ ಹೇಳಿಯೇ ಹೇಳುತ್ತಾರೆ. ಇವರ ಮಾತನ್ನು ಕೇಳಿ ಇವರ ನಿರ್ದೇಶನದಂತೆ ನೀನು ನನ್ನನ್ನು ಪುನಃ ಪರಿಗ್ರಹಿಸುವುದು ಯುಕ್ತವಾಗಿದೆ.)"

ಸೀತಾದೇವಿಯು ರಾಮನಿಗೆ ಹೀಗೆಂದು ಹೇಳಿದನಂತರ ಮಂಗಳಕರವಾದ, ಕಪಿಕೋಟಿಗೆ ಆನಂದಕರವಾದ, ಲೋಕಸಾಕ್ಷಿಯಾದ ವಾಣಿಯು ಅಂತರಿಕ್ಷದಲ್ಲಿ ಪ್ರತಿಧ್ವನಿತವಾಯಿತು, ಸರ್ವರೂ ವಾಣಿಯು ಬರುತ್ತಿದ್ದ ಕಡೆಗೆ ವೀಕ್ಷಿಸಿದರು. ದೇವತೆಗಳ ಮಧ್ಯದಲ್ಲಿದ್ದ ವಾಯುದೇವನು ರಾಮನನ್ನು ಕುರಿತು ಈ ಮಾತನ್ನು ಹೇಳುತ್ತಿದ್ದನು :

**ಭೋ ಭೋ ರಾಘವ ಸತ್ಯಂ ವೈ ವಾಯುರಸ್ಮಿ ಸದಾಗತಿಃ ।**
**ಅಪಾಪಾ ಮೈಥಿಲೀ ರಾಜನ್ಸಂಗಚ್ಛ ಸಹ ಭಾರ್ಯಯಾ ॥೨೭॥**

"ಭೋ ಭೋ ರಾಘವ! ನಾನು ಸದಾ ಸರ್ವತ್ರ ಸಂಚರಿಸುವ ವಾಯುದೇವನಾಗಿದ್ದೇನೆ. ಮೈಥಿಲಿಯು ಪಾಪರಹಿತಳೆಂಬುದು ಸತ್ಯ. ಸಂಶಯವನ್ನು ತೊರೆದು ಭಾರ್ಯೆಯನ್ನು ಪರಿಗ್ರಹಿಸಿ ಅವಳೊಡನೆ ಯಥೋಚಿತವಾಗಿ ಬಾಳುವವನಾಗು."

ವಾಯುವು ಈ ಮಾತನ್ನು ಹೇಳಿ ಮುಗಿಸಿದ ನಂತರ ಅಗ್ನಿದೇವನು ಹೇಳಿದನು :

**ಅಹಮನ್ತಃಶರೀರಸ್ಥೋ ಭೂತಾನಾಂ ರಘುನನ್ದನ ।**
**ಸುಸೂಕ್ಷ್ಮಮಪಿ ಕಾಕುತ್ಸ್ಥ ಮೈಥಿಲೀ ನಾಪರಾಧ್ಯತಿ ॥೨೮॥**

"ರಘುನಂದನ! ನಾನು ಸರ್ವಪ್ರಾಣಿಗಳ ಶರೀರಗಳಲ್ಲಿಯೂ ಇರುವವ ನಾಗಿದ್ದೇನೆ. ಆದುದರಿಂದ ಸರ್ವಪ್ರಾಣಿಗಳೂ ಮಾಡುವ ವ್ಯಾಪಾರ ಮತ್ತು ಅವುಗಳ ಮನಸ್ಸಿನ ಆಲೋಚನೆ–ಇವುಗಳೆಲ್ಲವೂ ನನಗೆ ಬಹುಸ್ಪಷ್ಟವಾಗಿ ತಿಳಿದಿರುತ್ತದೆ. ಮೈಥಿಲಿಯು ಸೂಕ್ಷ್ಮವಾದ ಒಂದು ತಪ್ಪನ್ನೂ ಖಂಡಿತ ವಾಗಿಯೂ ಮಾಡಿರುವುದಿಲ್ಲ. ಇದಕ್ಕೆ ನಾನೇ ಸಾಕ್ಷಿಭೂತನಾಗಿದ್ದೇನೆ."

ಯಜ್ಞೇಶ್ವರನು ಈ ಮಾತನ್ನು ಹೇಳಿದನಂತರ ವರುಣದೇವನೂ ಸಹ ಹೇಳಿದನು :

**ರಸಾ ವೈ ಮತ್ಪ್ರಸೂತಾ ಹಿ ಭೂತದೇಹೇಷು ರಾಘವ ।**
**ಅಹಂ ವೈ ತ್ವಾಂ ಪ್ರಬ್ರವೀಮಿ ಮೈಥಿಲೀ ಪ್ರತಿಗೃಹ್ಯತಾಮ್ ॥೨೯॥**

"ಸರ್ವಪ್ರಾಣಿಗಳ ಶರೀರಗಳಲ್ಲಿಯೂ ಇರುವ ಜಲತತ್ತ್ವವು (ರಸಾದಿ ಗಳು) ನನ್ನಿಂದಲೇ ಉತ್ಪನ್ನವಾಗುತ್ತದೆ. ಆದುದರಿಂದ ಸೀತೆಯು ಅಶೋಕ ವನದಲ್ಲಿದ್ದಾಗ ಹೇಗಿದ್ದಳೆಂಬುದನ್ನು ನಾನು ಬಹುಸ್ಪಷ್ಟವಾಗಿ ತಿಳಿದಿದ್ದೇನೆ. ಇವಳು ಅಕಳಂಕಳು. ಆದುದರಿಂದ ಇವಳನ್ನು ಈ ಕೂಡಲೇ ಪ್ರತಿಗ್ರಹಿಸೆಂದು ನಾನು ಹೇಳುತ್ತೇನೆ."

ವಾಯ್ವಗ್ನಿ-ವರುಣರು ಈ ಸಲಹೆಗಳನ್ನು ಕೊಟ್ಟನಂತರ ಸರ್ವಲೋಕ ಪಿತಾಮಹನಾದ ಚತುರ್ಮುಖನು ರಾಮನನ್ನು ಕುರಿತು ಹೀಗೆಂದು ಹೇಳಿದನು:

"ಪುತ್ರ! ಕಾಕುತ್ಸ್ಥ! ರಾಜರ್ಷಿಗಳ ಧರ್ಮದಲ್ಲಿರುವ, ಸಾಧು ಸ್ವರೂಪನಾದ, ಸರ್ವದಾ ಸದ್ವೃತ್ತಿಯಲ್ಲಿಯೇ ಇರುವ ನೀನು ಸೀತೆಯ ವಿಷಯವಾಗಿ ಹೇಳಿದ ಮಾತುಗಳು ಆಶ್ಚರ್ಯಕರವಲ್ಲ. ಪರಮಧಾರ್ಮಿಕ ನಾದ ನಿನಗೆ ಈ ಮಾತುಗಳು ಅನುರೂಪವಾಗಿಯೇ ಇವೆ. ಆದರೂ ಸಹ ನಾನೀಗ ಹೇಳಲಿರುವ ಮಾತುಗಳನ್ನು ಏಕಾಗ್ರತೆಯಿಂದ ಲಾಲಿಸು. ದೇವ-ಗಂಧರ್ವ-ದಾನವ-ಯಕ್ಷ-ರಾಕ್ಷಸ-ಮಹರ್ಷಿಗಳೆಲ್ಲರಿಗೂ ಪರಮಶತ್ರು ವಾಗಿದ್ದ ರಾವಣಾಸುರನನ್ನು ನೀನೀಗ ಸಂಹರಿಸಿರುವೆ. ನನ್ನ ವರದಿಂದಲೇ ಅವನು ಇದುವರೆಗೂ ಯಾರೊಬ್ಬರಿಂದಲೂ ವಧ್ಯನಾಗಲು ಸಾಧ್ಯವಿರಲಿಲ್ಲ. ಯಾವುದೋ ಒಂದು ಕಾರಣದಿಂದಾಗಿ ಅವನು ದೇವ-ಗಂಧರ್ವರಿಗೆ ಪದೇ-

ಪದೇ ಕೊಡುತ್ತಿದ್ದ ಉಪಟಳವನ್ನು ನಾನೂ ಸಹಿಸಿಕೊಂಡೇ ಬಂದೆನು. ದುಷ್ಟನಾದ ರಾವಣನು ತನ್ನ ಮರಣಕ್ಕಾಗಿಯೇ ಸೀತೆಯನ್ನು ದಂಡಕಾರಣ್ಯದಿಂದ ಅಪಹರಿಸಿಕೊಂಡು ಬಂದನು. ಸೀತೆಯು ರಾವಣನ ಅಧೀನದಲ್ಲಿ ಕೆಲವು ಕಾಲ ಇದ್ದಳಾದರೂ ನಲಕೂಬರನು ರಾವಣನಿಗೆ ಕೊಟ್ಟ ಶಾಪದ ಪ್ರಭಾವದಿಂದ ಅವನು ಸೀತೆಯನ್ನು ಮುಟ್ಟದಂತೆಯೇ ಮಾಡಿ ಅವಳನ್ನು ಸಂರಕ್ಷಿಸಿದ್ದೇನೆ.

**ಯದಿ ಹ್ಯಕಾಮಾಂ ಸೇವೇತ ಸ್ತ್ರಿಯಮನ್ಯಾಮಪಿ ಧ್ರುವಮ್ ।**
**ಶತಧಾಸ್ಯ ಫಲೇನ್ಮೂರ್ಧಾ ಇತ್ಯುಕ್ತಃ ಸೋಽಭವತ್ಪುರಾ ॥೩೪॥**

'ಒಲ್ಲದ ಸ್ತ್ರೀಯರನ್ನು ಬಲಾತ್ಕಾರದಿಂದ ಸೆಳೆಯಲು ಹೋದರೆ ನಿನ್ನ ತಲೆಯು ನುಚ್ಚುನೂರಾಗಲಿ'–ಎಂದು ನಲಕೂಬರನು ರಾವಣನಿಗೆ ಬಹಳ ವರ್ಷಗಳ ಹಿಂದೆಯೇ ಶಾಪವಿತ್ತಿದ್ದನು. ಆದುದರಿಂದ ಸೀತೆಯ ಪಾತಿವ್ರತ್ಯದ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಿಸುವ ಕಾರಣವಿಲ್ಲ. ದ್ಯುತಿಮಂತನಾದ ಶ್ರೀರಾಮನೇ! ಇವಳನ್ನು ಈ ಕೂಡಲೇ ಪರಿಗ್ರಹಿಸು. ದೇವಸದೃಶನೇ! ದೇವತೆಗಳ ಪರಮಶತ್ರುವಾದ, ಉಗ್ರನಾದ, ರಾವಣಾಸುರನನ್ನು ನೀನು ಸಂಹರಿಸಿ ಮಹಾಕಾರ್ಯವನ್ನೇ ಮಾಡಿರುವೆ."

ಬ್ರಹ್ಮನೂ ಸಹ ಹೀಗೆಂದು ಹೇಳಿದನಂತರ ದಿವ್ಯವಾದ ಶರೀರವನ್ನು ಧರಿಸಿದ್ದ ದಶರಥನು ಶ್ರೀರಾಮನಿಗೆ ಹೇಳಿದನು :

**ಪ್ರೀತೋಽಸ್ಮಿ ವತ್ಸ ಭದ್ರಂ ತೇ ಪಿತಾ ದಶರಥೋಽಸ್ಮಿ ತೇ ।**
**ಅನುಜಾನಾಮಿ ರಾಜ್ಯಂ ಚ ಪ್ರಶಾಧಿ ಪುರುಷೋತ್ತಮ ॥೩೬॥**

"ಪುರುಷೋತ್ತಮ! ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ. ನಿನ್ನ ತಂದೆಯಾದ ದಶರಥನೇ ನಾನು. ಸೀತೆಯನ್ನು ಪರಿಗ್ರಹಿಸಲು ನಾನು ನಿನಗೆ ಅನುಮತಿಯನ್ನಿತ್ತಿದ್ದೇನೆ. ಈ ಕೂಡಲೇ ಇವಳನ್ನು ಪರಿಗ್ರಹಿಸು. ಇವಳೊಡನೆ ಅಯೋಧ್ಯೆಗೆ ಹಿಂದಿರುಗಿ ರಾಜ್ಯವನ್ನು ಧರ್ಮದಿಂದ ಪರಿಪಾಲನೆ ಮಾಡು."

ದಶರಥನು ಹೀಗೆಂದು ಹೇಳಿದನಂತರ ಪರಮಹೃಷ್ಟನಾದ ಶ್ರೀರಾಮನು ಬದ್ಧಾಂಜಲಿಯಾಗಿ ನಿಂತು ದಶರಥನನ್ನು ಕುರಿತು ಹೇಳಿದನು :

**ಅಭಿವಾದಯೇ ತ್ವಾಂ ರಾಜೇನ್ದ್ರ ಯದಿ ತ್ವಂ ಜನಕೋ ಮಮ ।**
**ಗಮಿಷ್ಯಾಮಿ ಪುರೀಂ ರಮ್ಯಾಮಯೋಧ್ಯಾಂ ಶಾಸನಾತ್ತವ ॥೩೭॥**

“ನೀನು ನಿಶ್ಚಯವಾಗಿಯೂ ನನ್ನ ತಂದೆಯೇ ಆಗಿದ್ದರೆ ರಾಜೇಂದ್ರ! ನಿನಗೆ ನಾನು ಅಭಿವಾದನಮಾಡುತ್ತೇನೆ. ನಿನ್ನ ಶಾಸನಾನುಸಾರವಾಗಿ ರಮ್ಯವಾದ ಅಯೋಧ್ಯೆಗೆ ಸೀತೆಯೊಡನೆ ಪ್ರಯಾಣಮಾಡುತ್ತೇನೆ.”

ಯುಧಿಷ್ಠಿರ! ರಾಮನು ಹೇಳಿದ ಮಾತುಗಳನ್ನು ಕೇಳಿ ದಶರಥನು ಸಂತುಷ್ಟನಾಗಿ ಪುನಃ ರಕ್ತಾಂತಲೋಚನನಾದ ರಾಮನನ್ನು ಕುರಿತು ಹೇಳಿದನು:

“ಮಗು! ರಾಮ! ಅಯೋಧ್ಯೆಗೆ ಈಗಲೇ ಪ್ರಯಾಣಮಾಡು. ಕೋಸಲರಾಜ್ಯವನ್ನು ಧರ್ಮದಿಂದ ಆಳುವವನಾಗು. ನೀನು ಅನುಭವಿಸಬೇಕಾಗಿದ್ದ ಹದಿನಾಲ್ಕು ವರ್ಷಗಳ ವನವಾಸವು ಮುಗಿಯಿತು.”

ತಂದೆಯು ಹೇಳಿದ ಮಾತನ್ನು ಕೇಳಿ ರಾಮನು ಸಂತುಷ್ಟಾಂತರಂಗನಾಗಿ ಅಲ್ಲಿ ನೆರೆದಿದ್ದ ದೇವತೆಗಳೆಲ್ಲರಿಗೂ ನಮಸ್ಕರಿಸಿದನು. ರಾಮನ ಬಂಧು-ಮಿತ್ರರು ರಾಮನನ್ನು ಬಹಳ ಆದರದಿಂದ ಉಪಚರಿಸಿದರು. ರಾಮನು ಆನಂದಬಾಷ್ಪಗಳನ್ನು ಸುರಿಸುತ್ತಾ ಕಮಲಲೋಚನೆಯಾದ ಸೀತೆಯನ್ನು ಪರಿಗ್ರಹಿಸಿದನು. ಪುಲೋಮನ ಮಗಳಾದ ಶಚೀದೇವಿಯನ್ನು ಇಂದ್ರನು ಪಡೆದಂತೆ–ಸೀತಾದೇವಿಯನ್ನು ರಾಮನು ಪಡೆದುಕೊಂಡನು. ಸೀತೆಯನ್ನು ಆದರದಿಂದ ಕರೆತಂದ ಅವಿಂಧ್ಯನಿಗೆ ರಾಮನು ಅವನಿಚ್ಛಿಸಿದ ವರವನ್ನಿತ್ತು ಪುರಸ್ಕರಿಸಿದನು. ಸೀತಾದೇವಿಯ ಹಿತವನ್ನೇ ಸರ್ವದಾ ಬಯಸುತ್ತಿದ್ದ ತ್ರಿಜಟೆಯೆಂಬ ರಾಕ್ಷಸಿಗೂ ಸಹ ಶ್ರೀರಾಮನು ಧನ-ಕನಕ ವಸ್ತುಗಳನ್ನಿತ್ತು ಗೌರವಿಸಿದನು.

ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳಿಂದ ಕೂಡಿದ ಬ್ರಹ್ಮನು ರಾಮನನ್ನು ಪ್ರಶ್ನಿಸಿದನು :

**ಕೌಸಲ್ಯಾ ಮಾತರಿಷ್ಟಾಂಸ್ತೇ ವರಾನದ್ಯ ದದಾಮಿ ಕಾನ್ ||೪೨||**

“ಕೌಸಲ್ಯಾಮಾತಃ!(ಕೌಸಲ್ಯೆಯೇ ತಾಯಿಯಾಗಿ ಉಳ್ಳ ಶ್ರೀರಾಮನೇ!) ಇಷ್ಟವಾದ ಯಾವ ವರಗಳನ್ನು ನಾನೀಗ ನಿನಗೆ ಕೊಡಲಿ?”

ಬ್ರಹ್ಮನು ಕೇಳಿದ ಆ ಪ್ರಶ್ನೆಗೆ ಉತ್ತರಿಸುತ್ತಾ ರಾಮನು ಈ ವರಗಳನ್ನು ಕೇಳಿಕೊಂಡನು :

**ವವ್ರೇ ರಾಮಃ ಸ್ಥಿತಿಂ ಧರ್ಮೇ ಶತ್ರುಭಿಶ್ಚಾಪರಾಜಯಮ್ ।**
**ರಾಕ್ಷಸೈರ್ನಿಹತಾನಾಂ ಚ ವಾನರಾಣಾಂ ಸಮುದ್ಭವಮ್ ॥೪೨॥**

"ಮನಸ್ಸು ಯಾವಾಗಲೂ ಧರ್ಮದಲ್ಲಿಯೇ ಸುಪ್ರತಿಷ್ಠಿತವಾಗಿರಬೇಕು. ಶತ್ರುಗಳಿಂದ ಪರಾಜಯವುಂಟಾಗಕೂಡದು ಮತ್ತು ಯುದ್ಧದಲ್ಲಿ ಮಡಿದಿರುವ ಎಲ್ಲ ಕಪಿಗಳೂ ಜೀವಂತವಾಗಬೇಕು"–ಈ ವರಗಳನ್ನು ಶ್ರೀರಾಮನು ಬ್ರಹ್ಮನಿಂದ ಆಶಿಸಿದನು. ಚತುರ್ಮುಖನು ರಾಮನ ಪ್ರಾರ್ಥನೆಯನ್ನು ಆಲಿಸಿದನಂತರ 'ತಥಾಸ್ತು' (ಹಾಗೆಯೇ ಆಗಲಿ) ಎಂದು ಹೇಳಿದೊಡನೆಯೇ ಯುದ್ಧಭೂಮಿಯಲ್ಲಿ ರಾಕ್ಷಸರಿಂದ ಕೊಲ್ಲಲ್ಪಟ್ಟಿದ್ದ ಕೋತಿ-ಕರಡಿಗಳೆಲ್ಲವೂ ಜೀವಂತವಾದುವು. ಮಹಾಭಾಗೆಯಾದ ಸೀತಾದೇವಿಯು ಸ್ವೇಚ್ಛೆಯಿಂದಲೇ ಆಂಜನೇಯನಿಗೊಂದು ವರವನ್ನಿತ್ತಳು :

**ರಾಮಕೀರ್ತ್ಯಾ ಸಮಂ ಪುತ್ರ ಜೀವಿತಂ ತೇ ಭವಿಷ್ಯತಿ ।**
**ದಿವ್ಯಾಸ್ತ್ವಾಮುಪಭೋಗಾಶ್ಚ ಮತ್ಪ್ರಸಾದಕೃತಾಃ ಸದಾ ॥೪೫॥**

"ಪುತ್ರ! ಯಾವತ್ಪರ್ಯಂತವಾಗಿ ಈ ಭೂಮಿಯಲ್ಲಿ ರಾಮನ ಕೀರ್ತಿಯು ಕೀರ್ತಿತವಾಗುತ್ತಿರುವುದೋ ತಾವತ್ಪರ್ಯಂತವಾಗಿ ನೀನು ಈ ಭೂಮಿಯಲ್ಲಿ ಜೀವಿಸಿರುವೆ. ದೇವಲೋಕದಲ್ಲಿ ಪಡೆಯಬಹುದಾದ ಸಕಲ ಸುಖೋಪಭೋಗವಸ್ತುಗಳೂ ನೀನಿಚ್ಛಿಸಿದ ಕೂಡಲೇ ನನ್ನ ವರಪ್ರಭಾವ ದಿಂದಾಗಿ ನಿನಗೆ ಲಭ್ಯವಾಗುತ್ತವೆ."

ಸಾಹಸಕಾರ್ಯಮಾಡಿಯೂ ದಣಿಯದಿರುವ ಮಹಾವೀರರಾದ ಕಪಿ ಮುಖ್ಯರ ಮತ್ತು ರಾಮಾದಿಗಳ ಸಮಕ್ಷದಲ್ಲಿಯೇ ಇಂದ್ರಾದಿದೇವತೆಗಳು ಅಂತರ್ಹಿತರಾದರು. ಸೀತಾ-ರಾಮರ ಪುನರ್ಮಿಲನವನ್ನು ಕಂಡು ಪರಮ ತುಷ್ಟನಾದ ಇಂದ್ರನ ಸಾರಥಿಯು ಸನ್ಮಿತ್ರರ ಮಧ್ಯದಲ್ಲಿದ್ದ ರಾಮನನ್ನು ಕುರಿತು ಹೀಗೆಂದು ಹೇಳಿದನು : "ಸತ್ಯಪರಾಕ್ರಮನೇ! ನಿನ್ನಿಂದ ದೇವ-ಗಂಧರ್ವ - ಯಕ್ಷ- ಮಾನುಷಾಸುರ- ಸರ್ಪಗಳ ದುಃಖವು ನಿವಾರಣೆಯಾಯಿತು. ಆದುದರಿಂದ :

**ಸದೇವಾಸುರಗನ್ಧರ್ವಾ ಯಕ್ಷರಾಕ್ಷಸಪನ್ನಗಾಃ ।**
**ಕಥಯಿಷ್ಯನ್ತಿ ಲೋಕಾಸ್ತ್ವಾಂ ಯಾವದ್ಭೂಮಿರ್ಧರಿಷ್ಯತಿ ॥೪೯॥**

ಯಾವತ್ತಿನವರೆಗೆ ಈ ಭೂಮಿಯು ಸುಸ್ಥಿರವಾಗಿರುವುದೋ–ಅಂದಿನ ವರೆಗೂ ಸಕಲಪ್ರಾಣಿಗಳೂ ದೇವಾಸುರ-ಗಂಧರ್ವ-ಯಕ್ಷ-ರಾಕ್ಷಸ-ಕಿನ್ನರ-ಕಿಂಪುರುಷ-ನಾಗರೂ ನಿನ್ನ ಸುಚರಿತೆಯನ್ನು ಹಾಡುತ್ತಲೇ ಇರುತ್ತಾರೆ."

ಹೀಗೆಂಬುದಾಗಿ ಇಂದ್ರನ ಸಾರಥಿಯಾದ ಮಾತಲಿಯು ರಾಮನಿಗೆ ಹೇಳಿ, ಶಸ್ತ್ರಧಾರಿಗಳಲ್ಲಿ ಪರಮಶ್ರೇಷ್ಠನಾದ ಶ್ರೀರಾಮನನ್ನು ಸಂಪೂಜಿಸಿ, ಅವನ ಅಪ್ಪಣೆಯನ್ನೂ ಪಡೆದವನಾಗಿ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ರಥದಲ್ಲಿ ಕುಳಿತು ಸ್ವರ್ಗಲೋಕಕ್ಕೆ ತೆರಳಿದನು.

ಶ್ರೀರಾಮನೂ ಸಹ ಸೀತೆಯನ್ನು ಮುಂದೆಮಾಡಿಕೊಂಡು ಲಕ್ಷ್ಮಣ-ವಿಭೀಷಣ-ಸುಗ್ರೀವರೊಡನೆ ಸರ್ವವಾನರಸೇನೆಯಿಂದ ಸಮಾವೃತನಾಗಿ, ಲಂಕಾರಾಜ್ಯದ ರಕ್ಷಣೆಗೆ ಸರಿಯಾದ ವ್ಯವಸ್ಥೆಮಾಡಿ, ಲಂಕಾಪಟ್ಟಣಕ್ಕೆ ಆಗಮಿಸಿದ್ದ ನಲಸೇತುವೆಯ ಜಾಡಿನಲ್ಲಿಯೇ ಪುಷ್ಪಕವಿಮಾನದಲ್ಲಿ ಕುಳಿತು ಸಮುದ್ರವನ್ನು ದಾಟಿದನು.

ಆಕಾಶದಲ್ಲಿ ಸಂಚರಿಸುವ, ಇಚ್ಛಿಸಿದ್ದೆಡೆಗೆ ಹೋಗುವ ಸಾಮರ್ಥ್ಯವನ್ನು ಹೊಂದಿದ್ದ, ಬಹುಸುಂದರವಾದ ಪುಷ್ಪಕವಿಮಾನದಲ್ಲಿ ಮಂತ್ರಾಲೋಚನೆಯಲ್ಲಿ ನಿಷ್ಣಾತರಾದ ಅಮಾತ್ಯರೂ ಸಹ ಲಂಕಾರಾಜ್ಯದಿಂದ ರಾಮನೊಂದಿಗೆ ಬಂದರು. ಸಮುದ್ರವನ್ನು ದಾಟುವ ಸಲುವಾಗಿ ದರ್ಭಾಸನದಲ್ಲಿ ಕುಳಿತು ತಾನು ಹಿಂದೆ ಸಮುದ್ರರಾಜನನ್ನು ಪ್ರಾರ್ಥಿಸಿದ್ದ ಸ್ಥಳಕ್ಕೆ ಶ್ರೀರಾಮನು ಪರಿವಾರಸಮೇತನಾಗಿ ಆಗಮಿಸಿ ಅಲ್ಲಿಯೇ ಒಂದು ತಾತ್ಕಾಲಿಕ ಬಿಡಾರವನ್ನು ಮಾಡಿಕೊಂಡನು. ಯುದ್ಧದಲ್ಲಿ ಪಾಲ್ಗೊಂಡಿದ್ದ ಸಕಲ ಋಕ್ಷ-ಗೋಲಾಂಗೂಲ-ವಾನರರನ್ನೂ ಒಬ್ಬೊಬ್ಬರನ್ನಾಗಿ ತನ್ನ ಸಮ್ಮುಖಕ್ಕೆ ಕರೆಯಿಸಿಕೊಂಡು ಅವರನ್ನು ಶ್ಲಾಘನೆಮಾಡಿ ಯಥೋಚಿತವಾದ ಪಾರಿತೋಷಿಕಗಳನ್ನು ಕೊಟ್ಟು ಅವರೆಲ್ಲರನ್ನೂ ಸ್ವಸ್ಥಾನಗಳಿಗೆ ಆದರಪೂರ್ವಕವಾಗಿ ಶ್ರೀರಾಮನು ಕಳುಹಿಸಿಕೊಟ್ಟನು.

ಅನಂತರದಲ್ಲಿ ಶ್ರೀರಾಮನು ಸೀತಾ-ಲಕ್ಷ್ಮಣ-ಸುಗ್ರೀವ-ವಿಭೀಷಣ-ಹನೂಮತ್ಸಮೇತನಾಗಿ ದಿವ್ಯವಾದ ಪುಷ್ಪಕವಿಮಾನದಲ್ಲಿ ಕುಳಿತು ಕಿಷ್ಕಿಂಧಾ ಪಟ್ಟಣಕ್ಕೆ ಅಭಿಮುಖವಾಗಿ ಪ್ರಯಾಣಹೊರಟನು. ಆಕಾಶಮಾರ್ಗದಲ್ಲಿ

ಪ್ರಯಾಣಮಾಡುತ್ತಿದ್ದಾಗ ಸೀತಾದೇವಿಗೆ ಭೂಮಿಯ ಮೇಲಿದ್ದ ಅರಣ್ಯಗಳನ್ನು ಪರಿಚಯಮಾಡಿಕೊಟ್ಟನು. ಸ್ವಲ್ಪಹೊತ್ತಿನಲ್ಲಿಯೇ ಪುಷ್ಪಕವು ಕಿಷ್ಕಿಂಧೆಯನ್ನು ಮುಟ್ಟಿತು. ವಿಮಾನದಿಂದಿಳಿದು ಶ್ರೀರಾಮನು ವಾಲಿಯ ಪುತ್ರನಾದ ಅಂಗದನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು.

ಅನಂತರದಲ್ಲಿ ಸಕಲಪರಿವಾರಸಮೇತನಾಗಿ ಪುಷ್ಪಕವಿಮಾನವನ್ನು ಪುನಃ ಹತ್ತಿ ಅಯೋಧ್ಯೆಯಿಂದ ಅರಣ್ಯಕ್ಕಾಗಮಿಸಿದ ಮಾರ್ಗದಲ್ಲಿಯೇ ಹಿಂದಕ್ಕೆ ಪ್ರಯಾಣಮಾಡಿ ಅಯೋಧ್ಯೆಯನ್ನು ಸೇರಿದನು. ಅಯೋಧ್ಯಾಪಟ್ಟಣವನ್ನು ಸೇರಿದನಂತರ ಶ್ರೀರಾಮನು ನಂದಿಗ್ರಾಮದಲ್ಲಿದ್ದ ಭರತನ ಬಳಿಗೆ ಹನು ಮಂತನನ್ನು ರಾಯಭಾರಿಯಾಗಿ ಕಳುಹಿಸಿಕೊಟ್ಟನು. 'ಹದಿನಾಲ್ಕು ವರ್ಷಗಳು ರಾಜ್ಯಭಾರವನ್ನು ಮಾಡಿದ ನಂತರ ಭರತನ ಮನಸ್ಸು ಪರಿವರ್ತನೆಹೊಂದಿ ದೆಯೇ?' ಎಂಬುದನ್ನು ತಿಳಿದು ಬರುವುದೇ ರಾಜದೂತನಾದ ಹನುಮಂತನ ಕಾರ್ಯವಾಗಿದ್ದಿತು. ಭರತನ ಮುಖಲಕ್ಷಣದಿಂದಲೂ ಮತ್ತು ಅವನಾಡಿದ ಮಾತುಗಳಿಂದಲೂ ಭರತನಲ್ಲಿ ಯಾವ ವಿಧವಾದ ಪರಿವರ್ತನೆಯೂ ಆಗಿರು ವುದಿಲ್ಲವೆಂಬುದನ್ನು ತಿಳಿದ ಹನುಮಂತನು ರಾಮಾಗಮನದ ಶುಭವಾರ್ತೆ ಯನ್ನು ಭರತನಿಗೆ ತಿಳಿಯಪಡಿಸಿ ಅಯೋಧ್ಯೆಯ ಸಮೀಪದಲ್ಲಿದ್ದ ರಾಮನ ಬಳಿಗೆ ಹಿಂದಿರುಗಿದನು. ಹನುಮಂತನಾಡಿದ ಮಾತುಗಳಿಂದ ಸಂತುಷ್ಟನಾದ ಶ್ರೀರಾಮನು ಭರತನನ್ನು ಕಾಣಲು ನಂದಿಗ್ರಾಮಕ್ಕೆ ತೆರಳಿದನು. ಅಲ್ಲಿ ರಾಮನು ವೈಭವಪೂರ್ಣನಾಗಿದ್ದ ಭರತಚಕ್ರವರ್ತಿಯನ್ನು ಕಾಣಲಿಲ್ಲ.

**ಸ ತತ್ರ ಮಲದಿಗ್ಧಾಙ್ಗಂ ಭರತಂ ಚೀರವಾಸಸಮ್ ।**
**ಅಗ್ರತಃ ಪಾದುಕೇ ಕೃತ್ವಾ ದದರ್ಶಾಸೀನಮಾಸನೇ ॥೬೩॥**

ಶರೀರಾದ್ಯಂತವಾಗಿ ಭರತನ ಶರೀರವು ಧೂಳಿನಿಂದ ಆವರಿಸಿತ್ತು. (ಶರೀರವನ್ನು ಸಿಂಗರಿಸಿಕೊಳ್ಳಬೇಕೆನ್ನುವ ಆಸೆಯು ಭರತನಿಗೆ ಯಾವಾಗಲೂ ಇರಲಿಲ್ಲ. ಶರೀರದ ಮೇಲಿನ ಅಭಿಮಾನವೇ ಹೊರಟುಹೋಗಿತ್ತು.) ನಾರು ಮಡಿಯನ್ನುಟ್ಟಿದ್ದನು. ತನ್ನ ಮುಂದೆ ದಿವ್ಯಪಾದುಕೆಗಳನ್ನಿಟ್ಟುಕೊಂಡು ಆಸನದಲ್ಲಿ ಕುಳಿತಿದ್ದ ಭರತನನ್ನು ಶ್ರೀರಾಮನು ನೋಡಿದನು. ತನ್ನ ಅನುಜ ರಾದ ಭರತ-ಶತ್ರುಘ್ನರನ್ನು ಕಂಡೊಡನೆಯೇ ರಾಮನ ಆನಂದಕ್ಕೆ ಪಾರವಿಲ್ಲ

ವಾಯಿತು. ರಾಮ-ಲಕ್ಷ್ಮಣರಿಬ್ಬರೂ ಭರತ-ಶತ್ರುಘ್ನರೊಡನೆ ಆದ ಸಮಾಗಮದಿಂದ ಮಹಾನಂದವನ್ನು ಅನುಭವಿಸಿದರು. ಅಂತೆಯೇ ಭರತ-ಶತ್ರುಘ್ನರೂ ಸಹ ತಮ್ಮಣ್ಣನನ್ನೂ, ಅತ್ತಿಗೆಯಾದ ಸೀತಾದೇವಿಯನ್ನೂ ನೋಡಿ ಇಬ್ಬರಿಗೂ ನಮಿಸಿ, ಆನಂದಬಾಷ್ಪಗಳಿಂದಲೇ ಅವರ ಪಾದಾರವಿಂದಗಳನ್ನು ತೊಳೆದರು. ಹದಿನಾಲ್ಕು ವರ್ಷಗಳನಂತರ ಪುನರಾಗಮಿಸಿದ ಅಣ್ಣನನ್ನು ಆದರಪೂರ್ವಕವಾಗಿ ಸತ್ಕರಿಸಿ–ಭಾರವಾದ ತಲೆಯ ಹೊರೆಯನ್ನು ಕೆಳಗಿಳಿಸುವಂತೆ–ನಿಕ್ಷೇಪರೂಪವಾಗಿ ತನ್ನಲ್ಲಿಟ್ಟಿದ್ದ ರಾಜ್ಯವನ್ನು ಅಣ್ಣನಿಗೆ ಭರತನು ಬಹುಸಂತಸದಿಂದ ಒಪ್ಪಿಸಿಬಿಟ್ಟನು. ಅನಂತರದಲ್ಲಿ ವಸಿಷ್ಠ-ವಾಮದೇವರು ವೀರಾಗ್ರೇಸರನಾದ ಶ್ರೀರಾಮನಿಗೆ ಶ್ರವಣನಕ್ಷತ್ರಯುಕ್ತವಾದ ಅಭಿಜಿನ್ಮುಹೂರ್ತದಲ್ಲಿ ಸಕಲಸಂಭಾರಗಳೊಡನೆ ಪಟ್ಟಾಭಿಷೇಕಮಾಡಿದರು. ಸಾಮ್ರಾಜ್ಯ ಪಟ್ಟಾಭಿಷೇಕವಾದನಂತರ ಶ್ರೀರಾಮನು ಸುಗ್ರೀವ-ವಿಭೀಷಣರನ್ನೂ ಮತ್ತು ಅವರ ಪರಿವಾರದವರನ್ನೂ ಯಥಾಯೋಗ್ಯವಾಗಿ ಸತ್ಕರಿಸಿ ಪಾರಿತೋಷಿಕಗಳನ್ನಿತ್ತು ತಮ್ಮ-ತಮ್ಮ ರಾಜ್ಯಗಳಿಗೆ ಪ್ರಯಾಣಮಾಡಲು ಅವರಿಗೆ ಅನುಮತಿಯನ್ನಿತ್ತನು. ಆದರೆ ಅವರನ್ನು ಸತ್ಕರಿಸಿ ಬೀಳ್ಕೊಟ್ಟಾಗ ರಾಮನಿಗೆ ಬಹುದುಃಖವೇ ಆಯಿತು. ಸುಗ್ರೀವ-ವಿಭೀಷಣರಿಗೆ ರಾಮನಲ್ಲಿ ಪ್ರೀತಿಯು ಅಗಾಧವಾಗಿದ್ದಿತು. ಅವರೂ ಸಹ ಭಾರವಾದ ಹೃದಯದಿಂದಲೇ ಅನ್ಯಥಾ ವಿಧಿಯಿಲ್ಲದೇ ರಾಮನನ್ನಗಲಿ ತಮ್ಮ-ತಮ್ಮ ರಾಜ್ಯಗಳಿಗೆ ಹಿಂದಿರುಗಿದರು.

ಲಂಕಾಪಟ್ಟಣದಿಂದ ಅಯೋಧ್ಯೆಗೆ ತಮ್ಮನ್ನು ಹೊತ್ತು ತಂದಿದ್ದ ದಿವ್ಯವಾದ ಪುಷ್ಪಕವಿಮಾನವನ್ನೂ ಸಹ ಶ್ರೀರಾಮನು ಸಂಪೂಜಿಸಿ ಅದನ್ನು ಅದರೊಡಯನಾದ ವೈಶ್ರವಣನಿಗೆ ಪ್ರೀತಿಪೂರ್ವಕವಾಗಿ ಸಮರ್ಪಿಸಿದನು.

ರಾಮರಾಜ್ಯವು ಸರ್ವಸಂಪತ್ಸಮೃದ್ಧವಾಗಿದ್ದಿತು. ಶ್ರೀರಾಮನು ದೇವರ್ಷಿಗಳಾದ ವಸಿಷ್ಠಾದಿಗಳಿಂದ ಕೂಡಿದವನಾಗಿ ಗೋಮತೀನದಿಯ ತೀರದಲ್ಲಿ ಅವಿಚ್ಛಿನ್ನವಾಗಿ ತ್ರಿಗುಣದಕ್ಷಿಣಾಕವಾದ ಅಥವಾ ಸ್ತೋತ್ರಾರ್ಹವಾದ ಮತ್ತು ಅನ್ನಾದ್ಯರ್ಥಿಗಳಿಗೆ ತೆರೆದ ಬಾಗಿಲಿನಿಂದ ಕೂಡಿದ (‘ಯಥೇಚ್ಛವಾಗಿ ಭೋಜನ ಮಾಡಿರಿ’ ಎಂದು ಸರ್ವಕಾಲಗಳಲ್ಲಿಯೂ ಸರ್ವರಿಗೂ ಹೇಳುತ್ತಿದ್ದ) ಹತ್ತು ಅಶ್ವಮೇಧಯಾಗಗಳನ್ನು ಮಾಡಿದನು.”

೨೯೧ನೆಯ ಅಧ್ಯಾಯವು ಮುಗಿಯಿತು.

## ಮಾರ್ಕಂಡೇಯರು ಯುಧಿಷ್ಠಿರನನ್ನು ಸಮಾಧಾನಪಡಿಸಿದುದು

ಮಾರ್ಕಂಡೇಯರು ಯುಧಿಷ್ಠಿರನಿಗೆ ಹೇಳುತ್ತಾರೆ : "ಮಹಾಬಾಹುವಾದ ಯುಧಿಷ್ಠಿರನೇ! ಮಹಾತೇಜಸ್ವಿಯಾದ ಶ್ರೀರಾಮನೂ ಸಹ ವನವಾಸ ಕಾಲದಲ್ಲಿ ಅತ್ಯುಗ್ರವಾದ ಕಷ್ಟವನ್ನು ಅನುಭವಿಸಬೇಕಾಯಿತು. ಆದುದರಿಂದ, ಪುರುಷವ್ಯಾಘ್ರನೇ! ನಿನಗೆ ಪ್ರಾಪ್ತವಾಗಿರುವ ಇಂದಿನ ಕಷ್ಟವನ್ನು ನೆನೆದು ದುಃಖಿಸಬೇಡ. ನೀನು ಶತ್ರುಗಳನ್ನು ಪರಿತಾಪಗೊಳಿಸುವ ಸಾಮರ್ಥ್ಯವುಳ್ಳ ವೀರಕ್ಷತ್ರಿಯನಾಗಿರುವೆ. ನಿನ್ನದು ಬಾಹುಬಲವನ್ನು ಆಶ್ರಯಿಸಿರುವವರ ಮಾರ್ಗವಾಗಿದೆ. ಈ ಮಾರ್ಗದಲ್ಲಿ ಫಲಗಳು ಬಹುಬೇಗ ಸಿಕ್ಕುವುವು. ವೀರೋಚಿತವಾದ ಇಂತಹ ಮಾರ್ಗದಲ್ಲಿ ನಿನಗೆ ವಿಜಯವು ಲಭಿಸುವುದೆಂಬುದರಲ್ಲಿ ಸಂಶಯವೇ ಇಲ್ಲ. ಮೇಲಾಗಿ ಅಣುಮಾತ್ರವಾದ ಪಾಪವೂ ನಿನ್ನಲ್ಲಿರುವುದಿಲ್ಲ. ಇಂದ್ರಪ್ರಮುಖರಾದ ದೇವತೆಗಳೂ, ಅಸುರರೂ ಭುಜಬಲವನ್ನೇ ಆಶ್ರಯಿಸಿರುವ ಮಾರ್ಗದ ಅನುವರ್ತಿಗಳಾಗಿರುತ್ತಾರೆ. ವಜ್ರಪಾಣಿಯಾದ ಇಂದ್ರನೂ ಸಹ ದೇವತೆಗಳ ಸಹಾಯಪಡೆದು ವೃತ್ರಾಸುರನನ್ನೂ, ನಮುಚಿಯನ್ನೂ, ದೀರ್ಘಜಿಹ್ವಾ ಎಂಬ ರಾಕ್ಷಸಿಯನ್ನೂ ಸಂಹರಿಸಿದನು. ಯಾವನಿಗೇ ಆಗಲೀ ಸಹಾಯಸಂಪತ್ತಿರುವುದೋ–ಅಂತಹವನ ಸಕಲಕಾರ್ಯಗಳೂ ಸಹ ಸಿದ್ಧಿಸಿಯೇ ಸಿದ್ಧಿಸುವುವು. ಹೀಗಿರುವಾಗ ಮಹಾತ್ಮನಾದ ಮಹಾಪರಾಕ್ರಮಿಯಾದ ಧನಂಜಯನೇ ತಮ್ಮನಾಗಿ ಇರುವ ನಿನ್ನಿಂದ ಸಾಧಿಸಲಾಗದ ಕಾರ್ಯಗಳೂ, ಜಯಿಸಲಾಗದ ಶತ್ರುಗಳೂ ಇರಲು ಸಾಧ್ಯವೇ?

ಧನಂಜಯನೊಬ್ಬನೇ ಸರ್ವಶತ್ರುಗಳನ್ನೂ ನಿರ್ಮೂಲನಮಾಡುವ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಧನಂಜಯನ ಅಗ್ರಜನಾಗಿರುವ ಭೀಮಸೇನನು ಸಾಮಾನ್ಯನೇ?

**ಅಯಂ ಚ ಬಲಿನಾಂ ಶ್ರೇಷ್ಠೋ ಭೀಮೋ ಭೀಮಪರಾಕ್ರಮಃ ।**
**ಯುವಾನೌ ಚ ಮಹೇಷ್ವಾಸೌ ವೀರೌ ಮಾದ್ರವತೀಸುತೌ ॥೬॥**

ಭಯಂಕರವಾದ ಪರಾಕ್ರಮವುಳ್ಳ ಈ ಭೀಮಸೇನನು ಪ್ರಪಂಚದಲ್ಲಿರುವ ಬಲಶಾಲಿಗಳಲ್ಲಿ ಶ್ರೇಷ್ಠನಾಗಿದ್ದಾನೆ. ಮಹಾಧನುರ್ಧಾರಿಗಳಾದ,

ಯುವಕರಾದ ನಕುಲ-ಸಹದೇವರೂ ಸಹ ಅತುಲಪರಾಕ್ರಮಿಗಳಾಗಿದ್ದಾರೆ. ಇಂತಹ ಮಹಾಪರಾಕ್ರಮಿಗಳಾದ ಅನುಜರು ನಿನಗೆ ಸಹಾಯಕರಾಗಿರುವಾಗ ನೀನೇಕೆ ಚಿಂತಿಸುವೆ, ಮಹಾರಾಜ!

ಈ ನಿನ್ನ ಅನುಜರು ಮರುದ್ಗಣಸಹಿತನಾದ, ವಜ್ರಧರನಾದ ಇಂದ್ರನ ಸೈನ್ಯವನ್ನಾದರೂ ಯುದ್ಧದಲ್ಲಿ ಜಯಿಸುವ ಪರಾಕ್ರಮವುಳ್ಳವರಾಗಿದ್ದಾರೆ. ದೇವರೂಪಿಗಳಾದ ಮಹಾಧನುಷ್ಮಂತರಾದ ಅನುಜರನ್ನು ಸಹಾಯಕರನ್ನಾಗಿ ಹೊಂದಿರುವ ನೀನು ಖಂಡಿತವಾಗಿಯೂ ನಿನ್ನ ಶತ್ರುಗಳನ್ನು ಪರಾಜಯ ಗೊಳಿಸುವೆ. ಮೇಲಾಗಿ ಇವರ ಪರಾಕ್ರಮವೆಷ್ಟೆಂಬುದನ್ನು ನೀನು ಪ್ರತ್ಯಕ್ಷ ವಾಗಿಯೇ ಕಂಡಿರುವೆ. ಮಹಾಬಲಶಾಲಿಯಾಗಿರುವೆನೆಂಬ ದುರಭಿಮಾನ ದಿಂದ ಸೈಂಧವನು ಬಲಾತ್ಕಾರದಿಂದ ದ್ರೌಪದಿಯನ್ನು ಸೆಳೆದೊಯ್ದಿದ್ದನು. ನಿನ್ನ ಅನುಜರು ಅವನನ್ನು ಬೆನ್ನಟ್ಟಿ ಹೋಗಿ, ಅವನ ಅನುಯಾಯಿಗಳನ್ನೂ, ಸೈನಿಕರನ್ನೂ ಧ್ವಂಸಮಾಡಿ ದ್ರೌಪದಿಯನ್ನು ಕರೆತಂದರಲ್ಲದೇ–ದುಷ್ಟನಾದ ಸೈಂಧವನನ್ನೂ ಸೆರೆಹಿಡಿದು ನಿನ್ನ ಬಳಿಗೆ ತಂದರು.

ಪರಾಜಿತನಾದ ಜಯದ್ರಥನು ನಿನ್ನ ಮುಂದೆ ಅಸಹಾಯಕನಾಗಿ ನಿಂತು ಪ್ರಾಣಭಿಕ್ಷೆಯನ್ನು ಬೇಡಬೇಕಾಯಿತು.

ನಿನಗೂ ಶ್ರೀರಾಮನಿಗೂ ಹೋಲಿಸಿಕೊಂಡು ನೋಡು, ಯುಧಿಷ್ಠಿರ! ಶ್ರೀರಾಮನು ಭೀಮವಿಕ್ರಮನಾದ ದಶಕಂಠನನ್ನೂ ಮತ್ತು ಅವನ ಅಪಾರ ಸೇನೆಯನ್ನೂ ಅಸಹಾಯಕನಾಗಿಯೇ ವಿಧ್ವಂಸಗೊಳಿಸಿ ಸೀತೆಯನ್ನು ಕರೆ ತಂದನು. ಅಂದು ರಾಮನ ಸಹಾಯಕರೆಂದರೆ ಕಪಿ, ಕರಡಿ, ಗೋಲಾಂಗೂಲ ಇವುಗಳೇ ಆಗಿದ್ದುವು. ಮಾನವರಾರೂ ಅವನಿಗೆ ಸಹಾಯಕರಾಗಿರಲಿಲ್ಲ. ಈ ವಿಷಯವನ್ನೇ ನೀನು ತೀವ್ರವಾಗಿ ಯೋಚಿಸು. ರಾಮನು ಪಟ್ಟ ಕಷ್ಟಕ್ಕಿಂತಲೂ ನಿನ್ನ ಕಷ್ಟವು ಬಹುಪಾಲು ಕಡಿಮೆಯೆಂಬುದು ಸ್ಪಷ್ಟವಾಗಿ ತಿಳಿಯುವುದು. ನಿನಗಿಂತಲೂ ಹೆಚ್ಚು ಕಷ್ಟಗಳನ್ನು ಅನುಭವಿಸಿದವರು ಹಿಂದೆಯೂ ಇದ್ದರು, ಯುಧಿಷ್ಠಿರ! ಆದುದರಿಂದ ಇಂದು ನಿನಗೆ ಪ್ರಾಪ್ತವಾಗಿರುವ ಸಂಕಟವನ್ನು ಮನಸ್ಸಿಗೆ ಹಚ್ಚಿಕೊಂಡು ಅಧೀರನಾಗಬೇಡ. ಧೈರ್ಯತಾಳು. ಪರಂತಪನೇ! ನಿನ್ನಂತಹ ಮಹಾತ್ಮರು ಖಂಡಿತವಾಗಿಯೂ ಇಂತಹ ಸಂದರ್ಭಗಳಲ್ಲಿ ಶೋಕಪಡುವುದಿಲ್ಲ."

ಜನಮೇಜಯ! ಈ ರೀತಿಯಲ್ಲಿ ಮಾರ್ಕಂಡೇಯರು ಯುಧಿಷ್ಠಿರನಿಗೆ ರಾಮಚರಿತವನ್ನು ಹೇಳಿ ಸಮಾಧಾನಪಡಿಸಿದನಂತರ ಮಹಾತ್ಮನಾದ ಯುಧಿಷ್ಠಿರನು ಸಮಾಧಾನಗೊಂಡನು. ಶೋಕದ ಭಾರವು ಸ್ವಲ್ಪ ಕಡಿಮೆಯಾಯಿತು. ವಿರಾಮಕಾಲದಲ್ಲಿ ಸುಖೋಪವಿಷ್ಟರಾಗಿದ್ದ ಮಾರ್ಕಂಡೇಯರನ್ನು ಯುಧಿಷ್ಠಿರನು ಪುನಃ ಪ್ರಶ್ನಿಸಿದನು.

೨೯೨ನೆಯ ಅಧ್ಯಾಯವು ಮುಗಿಯಿತು.

೨೯೩ನೆಯ ಅಧ್ಯಾಯ ಪತಿವ್ರತಾಮಾತ್ಮ್ಯಪರ್ವ

## ಅಶ್ವಪತಿರಾಜನು ಸಾವಿತ್ರೀದೇವಿಯ ಅನುಗ್ರಹದಿಂದ ಸಾವಿತ್ರೀ ಎಂಬ ಕನ್ಯಾರತ್ನವನ್ನು ಪಡೆದುದು : ಅನುರೂಪನಾದ ಪತಿಯನ್ನಾರಿಸಲು ಸಾವಿತ್ರಿಯು ಅನೇಕ ದೇಶಗಳಿಗೆ ಪ್ರಯಾಣಮಾಡಿದುದು

ಪಾರಿಕ್ಷಿತ! ಶ್ರೀರಾಮನ ಕಥೆಯನ್ನು ಕೇಳಿ ಯುಧಿಷ್ಠಿರನ ಮನಸ್ಸಿನ ಪರಿತಾಪವು ಸ್ವಲ್ಪ ಕಡಿಮೆಯಾಯಿತು. ದರ್ಭಾಸನದಲ್ಲಿ ಕುಳಿತಿದ್ದ ಮಾರ್ಕಂಡೇಯಮಹರ್ಷಿಗಳನ್ನು ಪುನಃ ಪ್ರಶ್ನಿಸಿದನು :

**ನಾತ್ಮಾನಮನುಶೋಚಾಮಿ ನೇಮಾನ್ಭ್ರಾತೄನ್ಮಹಾಮುನೇ ।**
**ಹರಣಂ ಚಾಪಿ ರಾಜ್ಯಸ್ಯ ಯಥೇಮಾಂ ದ್ರುಪದಾತ್ಮಜಾಮ್ ॥೧॥**

“ಮಹರ್ಷಿಗಳೇ! ನನಗೊದಗಿರುವ ಈ ಕಷ್ಟಕ್ಕಾಗಿ ನಾನು ಶೋಕಪಡುವುದಿಲ್ಲ. ರಾಜೋಚಿತವಾದ ಉಪಭೋಗಗಳನ್ನು ಅನುಭವಿಸಬೇಕಾಗಿದ್ದ ಈ ನನ್ನ ಅನುಜರು ಇಂತಹ ಕಷ್ಟಕ್ಕೆ ಗುರಿಯಾಗಿರುವರೆಂಬುದಕ್ಕೂ ನಾನು ಹೆಚ್ಚು ದುಃಖಿಸುವುದಿಲ್ಲ. ಕೌರವರು ನನ್ನ ರಾಜ್ಯ-ಕೋಶಗಳನ್ನು ಮೋಸದಿಂದ ಅಪಹರಣಮಾಡಿದುದಕ್ಕೂ ನಾನು ಸಂಕಟಪಡುವುದಿಲ್ಲ. ಆದರೆ ನಿಷ್ಕಳಂಕಳಾದ, ದೋಷರಹಿತಳಾದ ಈ ದ್ರೌಪದಿಯ ವಿಷಯವಾಗಿ ನಾನು ಬಹುವಾಗಿ ಪರಿತಪಿಸುತ್ತೇನೆ. ದುರಾತ್ಮರಾದ ಧೃತರಾಷ್ಟ್ರನ ಮಕ್ಕಳಿಂದ ಕಪಟದ್ಯೂತದಲ್ಲಿ ವಂಚಿತರಾದ ನಮ್ಮನ್ನಂದು ಈ ದ್ರೌಪದಿಯೇ ಪಾರುಮಾಡಿದಳು. ಅಬಲೆಯಾದ ಇವಳನ್ನು ಈ ಅರಣ್ಯದಲ್ಲಿ ಜಯದ್ರಥನು ಬಲಾತ್ಕಾರ

ದಿಂದ ಸೆಳೆದುಕೊಂಡು ಹೋಗಿದ್ದನು. ನೀವು ಸರ್ವಜ್ಞರಾಗಿರುವಿರಿ. ದ್ರೌಪದಿ ಯಂತೆ ಪತಿವ್ರತೆಯೂ, ಮಹಾಭಾಗ್ಯಶಾಲಿನಿಯೂ ಆಗಿದ್ದು ಇಂತಹ ದಾರುಣ ವಾದ ಕಷ್ಟವನ್ನನುಭವಿಸಿದ ಬೇರಾವ ಸ್ತ್ರೀಯನ್ನಾದರೂ ನೀವು ಈ ಹಿಂದೆ ಕಂಡಿದ್ದಿರಾ? ಅಥವಾ ಅಂತಹ ಸ್ತ್ರೀಯೊಬ್ಬಳ ಚರಿತ್ರೆಯನ್ನಾದರೂ ಕೇಳಿ ದ್ದೀರಾ? ಅಂತಹ ಮಹಾಪತಿವ್ರತೆಯ ಚರಿತ್ರೆಯೇನಾದರೂ ತಮಗೆ ತಿಳಿದಿ ದ್ದರೆ ದಯಮಾಡಿ ಹೇಳಿರಿ."

ಧರ್ಮಜನ ಪ್ರಶ್ನೆಗೆ ಉತ್ತರವಾಗಿ ಮಾರ್ಕಂಡೇಯರು ಮಹಾಪತಿವ್ರತೆ ಯಾದ ಸಾವಿತ್ರಿಯ ಕಥೆಯನ್ನು ಹೇಳಲುಪಕ್ರಮಿಸಿದರು :

"ಕೇಳು, ಧರ್ಮಜ! ಕುಲಸ್ತ್ರೀಯರ ಮಹಾಭಾಗ್ಯವೆಷ್ಟೆಂಬುದನ್ನೂ, ರಾಜಕನ್ಯೆಯಾದ ಸಾವಿತ್ರಿಯು ಆ ಮಹಾಭಾಗ್ಯವನ್ನು ಹೇಗೆ ಪಡೆದಳೆಂಬು ದನ್ನೂ ಸವಿಸ್ತರವಾಗಿಯೇ ಹೇಳುವೆನು ; ಕೇಳು :

ಮದ್ರರಾಜ್ಯದಲ್ಲಿ ಧರ್ಮಾತ್ಮನೂ, ದಯಾಪರನೂ ಆದ ರಾಜನೊಬ್ಬ ನಿದ್ದನು. ಅವನು ಬ್ರಾಹ್ಮಣಸೇವಿಯೂ, ಸತ್ಯಸಂಧನೂ, ಜಿತೇಂದ್ರಿಯನೂ ಆಗಿದ್ದನು. ಅವನು ಯಾವಾಗಲೂ ಯಜ್ಞಶೀಲನೂ, ದಾನಶೀಲನೂ ಆಗಿದ್ದ ನಲ್ಲದೇ–ತನ್ನ ಪ್ರಜೆಗಳನ್ನೂ ಬಹುವಾಗಿ ಪ್ರೀತಿಸುತ್ತಿದ್ದನು. ಆ ದೇಶದ ಪ್ರಜೆಗಳೂ ಸಹ ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಸರ್ವಪ್ರಾಣಿಗಳ ಹಿತದಲ್ಲಿಯೇ ಸರ್ವದಾ ನಿರತನಾಗಿದ್ದ ಆ ರಾಜನ ಹೆಸರು ಅಶ್ವಪತಿ. ಕ್ಷಮಾವಂತನೂ, ಸತ್ಯವಂತನೂ, ಜಿತೇಂದ್ರಿಯನೂ ಆಗಿದ್ದ ಅಶ್ವಪತಿಗೆ ಮಕ್ಕಳಿರಲಿಲ್ಲ. ವಯಸ್ಸು ಕಳೆದುಹೋದಂತೆಲ್ಲಾ ಆ ರಾಜನಿಗೆ ಮಕ್ಕಳಿಲ್ಲದ ದುಃಖವು ಹೆಚ್ಚಾಯಿತು. ಮಕ್ಕಳನ್ನು ಪಡೆಯಲೋಸುಗ ಬಹುತೀವ್ರವಾದ ವ್ರತಾನುಷ್ಠಾನಗಳನ್ನೂ ಮಾಡಲುಪಕ್ರಮಿಸಿದನು.

ದಿನಕ್ಕೊಮ್ಮೆ ಮಾತ್ರವೇ ಮಿತವಾದ ಆಹಾರವನ್ನು ಸೇವಿಸುತ್ತಾ ಬ್ರಹ್ಮಚರ್ಯವ್ರತದಿಂದಿದ್ದು ಜಿತೇಂದ್ರಿಯನಾಗಿ ಅನುದಿನವೂ ಸಾವಿತ್ರೀ ಮಂತ್ರದಿಂದ ಒಂದು ಲಕ್ಷ ಹೋಮಮಾಡುತ್ತಿದ್ದನು. ಜಪ-ಹೋಮಾರ್ಚನೆ ಗಳನ್ನು ಮುಗಿಸಿದನಂತರ ಅಶ್ವಪತಿಯು ದಿನದ ಆರನೆಯ ಭಾಗದಲ್ಲಿ ಮಿತ

ವಾದ ಭೋಜನಮಾಡುತ್ತಿದ್ದನು. ಇದೇ ವಿಧವಾದ ನಿಯಮದಿಂದ ಅಶ್ವಪತಿಯು ಹದಿನೆಂಟು ವರ್ಷಗಳ ಪರ್ಯಂತವಾಗಿ ಸಾವಿತ್ರಿಯನ್ನು ಅರ್ಚಿಸಿದನು. ಹದಿನೆಂಟನೆಯ ವರ್ಷವು ಪೂರ್ಣವಾಗಲಾಗಿ ಸಾವಿತ್ರೀದೇವಿಯು ರಾಜನು ಮಾಡಿದ ಜಪ-ಹೋಮಾರ್ಚನೆಗಳಿಂದ ಸುಪ್ರೀತಳಾದಳು. ಸರ್ವಾಲಂಕಾರಭೂಷಿತೆಯಾದ, ವರದೆಯಾದ ಸಾವಿತ್ರೀದೇವಿಯು ಹರ್ಷಯುಕ್ತಳಾಗಿ ಯಜ್ಞೇಶ್ವರನ ಮಧ್ಯಭಾಗದಿಂದ ಹೊರಬಂದು ಅಗ್ನಿಹೋತ್ರಮಾಡುತ್ತಿದ್ದ ರಾಜನನ್ನು ಕುರಿತು ಹೀಗೆಂದು ಹೇಳಿದಳು :

"ಶುದ್ಧವಾದ ಬ್ರಹ್ಮಚರ್ಯದಿಂದಲೂ, ಕಠಿನವಾದ ನಿಯಮವ್ರತಾನುಷ್ಠಾನಗಳಿಂದಲೂ, ಭಕ್ತಿಯಿಂದಲೂ ನೀನು ನನ್ನನ್ನು ಆರಾಧಿಸಿರುವೆ. ಶುದ್ಧಭಾವದಿಂದ ನೀನು ನನ್ನನ್ನು ಸಂಪೂಜಿಸಿರುವೆ. ಮದ್ರರಾಜ! ನೀನು ಅಪೇಕ್ಷಿಸುವ ವರವನ್ನು ಕೇಳು. ಆದರೆ ನೀನು ಕೇಳುವ ಯಾವ ವರವೂ ಧರ್ಮಕ್ಕೆ ವಿರುದ್ಧವಾಗಿರಕೂಡದು, ತಿಳಿಯಿತೇ?"

ದೇವಿಯು ಹೇಳಿದ ಮಾತುಗಳನ್ನು ಕೇಳಿ ಅಶ್ವಪತಿಯು ಬದ್ಧಾಂಜಲಿಯಾಗಿ ನಿಂತು ಪ್ರಾರ್ಥಿಸಿದನು :

"ದೇವಿ! ಧರ್ಮದ ಕಾರಣದಿಂದಲೇ ನಾನು ಪುತ್ರಪ್ರಾಪ್ತಿಗಾಗಿ ನಿನ್ನನ್ನು ಇಷ್ಟು ವರ್ಷಗಳ ಪರ್ಯಂತವಾಗಿ ಆರಾಧಿಸಿದೆನು. ನನ್ನ ಕುಲಕ್ಕೆ ಕಲಶಪ್ರಾಯರಾದ ಬಹುಪುತ್ರರನ್ನು ನನಗೆ ಅನುಗ್ರಹಿಸು, ದೇವಿ! ನಾನು ಮಾಡಿದ ಈ ಆರಾಧನೆಯಿಂದ ಸುಪ್ರೀತಳಾಗಿರುವೆಯಾದರೆ, ಈ ಒಂದು ವರವನ್ನು ಮಾತ್ರ ನಿನ್ನಿಂದ ನಾನು ಪಡೆಯಲಿಚ್ಛಿಸುವೆನು.

**ಸಂತಾನಂ ಪರಮೋ ಧರ್ಮ ಇತ್ಯಾಹುರ್ಮಾಂ ದ್ವಿಜಾತಯಃ ||**

ವಂಶವರ್ಧಕರಾದ ಪುತ್ರರನ್ನು ಪಡೆಯುವುದೇ ಶ್ರೇಷ್ಠವಾದ ಧರ್ಮವೆಂದು ವಿಪ್ರರು ನನಗೆ ಹೇಳಿರುತ್ತಾರೆ."

ಅಶ್ವಪತಿಯ ಮಾತುಗಳನ್ನು ಕೇಳಿ ಸಾವಿತ್ರೀದೇವಿಯು ಹೇಳಿದಳು :

"ಮಹಾರಾಜ! ನಿನ್ನ ಸಂಕಲ್ಪವೇನೆಂಬುದನ್ನು ಈ ಮೊದಲೇ ತಿಳಿದ

ನಾನು ಚತುರ್ಮುಖನಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದೆನು. ಚತುರ್ಮುಖನ ವರಪ್ರಸಾದದಿಂದ ನಿನಗೆ ಈ ಜನ್ಮದಲ್ಲಿ ಬಹುರೂಪವತಿಯಾದ ಮತ್ತು ತೇಜಸ್ವಿನಿಯಾದ ಕನ್ಯೆಯೊಬ್ಬಳು ಹುಟ್ಟುತ್ತಾಳೆ. ಇದಕ್ಕೆ ಬೇರಾವ ಪ್ರತ್ಯುತ್ತರವನ್ನೂ ಕೊಡುವುದು ನಿನಗೆ ಸೂಕ್ತವಲ್ಲ. ನೀನು ಮಾಡಿದ ಆರಾಧನೆಯಿಂದ ಸುಪ್ರೀತಳಾದ ನಾನು ಚತುರ್ಮುಖನ ನಿರ್ದೇಶನದಂತೆಯೇ ಹೇಳುತ್ತಿದ್ದೇನೆ."

ಯದ್ಯಪಿ ಅಶ್ವಪತಿಗೆ ಗಂಡುಮಕ್ಕಳಾಗಬೇಕೆಂಬ ಆಸೆಯಿದ್ದಿತಾದರೂ ಸಾವಿತ್ರೀದೇವಿಯು–

**ಉತ್ತರಂ ಚ ನ ಮೇ ಕಿಂಚಿದ್ವ್ಯಾಹರ್ತವ್ಯಂ ಕಥಂಚನ ॥೧೮॥**

'ಅನುಗ್ರಹವನ್ನು ಸ್ವೀಕರಿಸುವುದೊಂದು ಹೊರತಾಗಿ ಬೇರಾವ ಉತ್ತರವನ್ನೂ ನೀನು ಹೇಳಲೇಬಾರದು'–ಎಂದು ಸ್ಪಷ್ಟವಾಗಿಯೇ ಹೇಳಿದಳಾದ್ದರಿಂದ ಅಶ್ವಪತಿಯು–'**ತಥಾಸ್ತು**'–ಎಂದು ಹೇಳಿ ಪ್ರತ್ಯಕ್ಷಳಾಗಿ ಬಂದಿದ್ದ ದೇವತೆಯನ್ನು ಪುನಃ ಅರ್ಘ್ಯ-ಪಾದ್ಯಾದಿಗಳಿಂದ ಸಂಪೂಜಿಸಿ ಕಡೆಯಲ್ಲಿ ಹೇಳಿದನು :

"ದೇವಿ! ಈ ನಿನ್ನ ವರವು ಕ್ಷಿಪ್ರದಲ್ಲಿಯೇ ಫಲದಾಯಕವಾಗಲಿ."

ಮುಗುಳ್ನಗೆಯೊಡನೆ ಅಭಯಹಸ್ತಮುದ್ರೆಯನ್ನು ಧರಿಸಿ ದೇವಿಯು ಅಂತರ್ಧಾನಹೊಂದಿದನಂತರ ಅಶ್ವಪತಿಯು ಯಜ್ಞಮಂಟಪದಿಂದ ತನ್ನ ಅರಮನೆಗೆ ಹಿಂದಿರುಗಿ ಬಂದು ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದನು.

ಸ್ವಲ್ಪಕಾಲ ಕಳೆದನಂತರ ನಿಯತವ್ರತನಾದ ಅಶ್ವಪತಿಯ ಧರ್ಮಚಾರಿಣಿಯಾದ ಹಿರಿಯ ಹೆಂಡತಿಯು ಗರ್ಭವತಿಯಾದಳು. ಮಾಲವದೇಶದ ರಾಜಪುತ್ರಿಯ ಆ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ದಿನ-ದಿನಕ್ಕೂ ವೃದ್ಧಿ ಹೊಂದಿತು. ನವಮಾಸಗಳು ಕಳೆಯಲಾಗಿ ಪಟ್ಟಮಹಿಷಿಯು ಕಮಲದಂತೆ ಸುಂದರವಾದ ಕಣ್ಣುಗಳುಳ್ಳ ಹೆಣ್ಣುಮಗುವಿಗೆ ಜನ್ಮವನ್ನಿತ್ತಳು. ಅಶ್ವಪತಿಯು ಪುತ್ರಿಯ ಜನನದಿಂದ ಸಂತೋಷಗೊಂಡವನಾಗಿ ಜಾತಕರ್ಮಾದಿ ಸಂಸ್ಕಾರ

ಗಳನ್ನು ಯಥಾವಿಧಿಯಾಗಿ ನೆರವೇರಿಸಿದನು. ಸಾವಿತ್ರೀಮಂತ್ರದಿಂದ ಸಾವಿತ್ರೀ ದೇವಿಗೆ ಲಕ್ಷೋಪಲಕ್ಷ ಹೋಮಮಾಡಿ, ಸಾವಿತ್ರೀದೇವಿಯನ್ನು ಒಲಿಸಿ ಕೊಂಡು, ಅವಳ ಅನುಗ್ರಹದಿಂದಲೇ ಪಡೆದ ಹೆಣ್ಣುಮಗುವಿಗೆ ಬ್ರಾಹ್ಮಣರು ರಾಜನ ಅಭಿಪ್ರಾಯದಂತೆ 'ಸಾವಿತ್ರೀ' ಎಂದೇ ನಾಮಕರಣಮಾಡಿದರು.

ಸಾಕ್ಷಾತ್ ಲಕ್ಷ್ಮಿಯೇ ರಾಜನ ಅರಮನೆಯಲ್ಲಿ ಜನ್ಮತಾಳಿರುವಳೋ ಎಂಬಂತೆ ಕಾಣುತ್ತಿದ್ದ ಅಶ್ವಪತಿಯ ಮಗಳಾದ ಸಾವಿತ್ರಿಯು ದಿನ-ದಿನಕ್ಕೂ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದುತ್ತಿದ್ದಳು. ಹಲವಾರು ವರ್ಷ ಗಳು ಕಳೆದನಂತರ ಕನ್ಯೆಯಾಗಿದ್ದ ಸಾವಿತ್ರಿಯು ಪ್ರೌಢೆಯಾದಳು. ಬಹುಕೃಶ ವಾದ ನಡುವಿನಿಂದ ಕೂಡಿದ್ದ, ದೊಡ್ಡದಾದ ನಿತಂಬಗಳಿಂದ ಕೂಡಿದ್ದ, ಚಿನ್ನ ದಿಂದ ಮಾಡಿದ ಪುತ್ತಳಿಯಂತೆಯೇ ಕಾಣುತ್ತಿದ್ದ, ಸರ್ವಾಂಗಸುಂದರಿಯಾದ ಸಾವಿತ್ರಿಯನ್ನು ಮದ್ರದೇಶದ ಪ್ರಜೆಗಳು ದೇವಕನ್ಯೆಯೆಂದೇ ಭಾವಿಸಿದರು. ಪದ್ಮಪತ್ರದಂತೆ ವಿಶಾಲವಾದ ಕಣ್ಣುಗಳಿಂದ ಕೂಡಿ ತನ್ನ ತೇಜಸ್ಸಿನಿಂದ ಬೆಳಗುತ್ತಿದ್ದ ಸಾವಿತ್ರಿಯನ್ನು ಮದುವೆಯಾಗಲು ಯಾರೂ ಮುಂದೆ ಬರಲಿಲ್ಲ. ಅವಳ ದೇದೀಪ್ಯಮಾನವಾಗಿದ್ದ ಮುಖವನ್ನು ನೋಡಿದ ಕೂಡಲೇ ರಾಜಕುಮಾರರು ಅವಳನ್ನು ಮದುವೆಯಾಗುವ ಅರ್ಹತೆಯು ತಮಗಿಲ್ಲ ವೆಂದು ತಲೆತಗ್ಗಿಸಿ ಹೊರಟುಹೋಗುತ್ತಿದ್ದರು.

ಹೀಗೆಯೇ ಇರುತ್ತಿರಲಾಗಿ, ಒಂದು ಪರ್ವದಿನದಲ್ಲಿ ಸಾವಿತ್ರಿಯು ಶಿರಃಸ್ನಾನಮಾಡಿ ಉಪವಾಸದಿಂದಿದ್ದು, ಮನಸೋದ್ದಿಷ್ಟದೇವತೆಯನ್ನು ಆರಾ ಧಿಸಿ, ಬ್ರಾಹ್ಮಣರ ಮೂಲಕವಾಗಿ ಆ ದೇವತೆಗೆ ಜಪ-ಹೋಮಾದಿಗಳನ್ನು ಮಾಡಿಸಿದಳು. ಜಪ-ಹೋಮಾರ್ಚನೆಗಳು ಮುಗಿದನಂತರ ತಾನಾರಾಧಿಸಿದ ದೇವತೆಯ ಪುಷ್ಪಪ್ರಸಾದವನ್ನು ತೆಗೆದುಕೊಂಡು ಸಾಕ್ಷಾತ್ ಲಕ್ಷ್ಮಿಯಂತೆಯೇ ಕಾಣುತ್ತಿದ್ದ ಸಾವಿತ್ರಿಯು ತಂದೆಯ ಬಳಿಗೆ ಹೋದಳು. ತಂದೆಯ ಪಾದಗಳಿಗೆ ನಮಸ್ಕರಿಸಿ ತಾನು ತಂದಿದ್ದ ಪುಷ್ಪಪ್ರಸಾದವನ್ನು ತಂದೆಗೂ ಕೊಟ್ಟು ಬದ್ಧಾಂಜಲಿಯಾಗಿ ಅಶ್ವಪತಿಯ ಪಕ್ಕದಲ್ಲಿ ನಿಂತುಕೊಂಡಳು.

ದೇವರೂಪಿಣಿಯಾದ, ಯೌವನಸ್ಥೆಯಾದ ತನ್ನ ಮಗಳನ್ನು ನೋಡಿ, ಅಂತಹ ಕಡುಚೆಲುವೆಯಾದ ಮತ್ತು ತೇಜಃಪುಂಜಯುಕ್ತಳಾದ ಸಾವಿತ್ರಿ

ಯನ್ನು ವರಿಸಲು ಯಾವ ಯುವಕನೂ ಮುಂದೆಬಾರದೇ ಇರುವುದನ್ನು ನೆನೆದು ರಾಜನು ಬಹುದುಃಖಿತನಾಗಿ ಮಗಳನ್ನು ಕುರಿತು ಹೇಳಿದನು :

"ಮಗಳೇ! ನಿನ್ನನ್ನು ವಿವಾಹಮಾಡಿಕೊಡಲು ಇದು ಸಕಾಲವಾಗಿದೆ. ಆದರೆ ನಿನ್ನ ಪಾಣಿಗ್ರಹಮಾಡಲು ಯಾವ ರಾಜಕುಮಾರನೂ ಮುಂದೆ ಬರುತ್ತಿಲ್ಲ. ಯಾರೂ ನನ್ನಲ್ಲಿಗೆ ಬಂದು ನಿನ್ನನ್ನು ಮದುವೆಮಾಡಿಕೊಡುವಂತೆ ಕೇಳಲಿಲ್ಲ. ಆದುದರಿಂದ, ಸಾವಿತ್ರಿ! ನಿನಗೆ ಗುಣಗಳಿಂದ ಅನುರೂಪನಾದ ವರನನ್ನು ನೀನೇ ಅನ್ವೇಷಣಮಾಡು.

ನೀನು ಯಾವಾತನನ್ನು ಮದುವೆಯಾಗಲು ಇಚ್ಛಿಸುವೆಯೋ ಅವನಾರೆಂಬುದನ್ನು ನನ್ನೊಡನೆ ಹೇಳು. ನೀನೇ ವರನನ್ನು ಅನ್ವೇಷಣಮಾಡಿ ಹೇಳಿದನಂತರ ನಾನು ಅವನ ಕುಲ-ಗೋತ್ರಗಳನ್ನೂ, ಗುಣ-ಕರ್ಮಗಳನ್ನೂ ವಿಮರ್ಶೆಮಾಡಿ ನಿನ್ನನ್ನವನಿಗೆ ಯಥಾವಿಧಿಯಾಗಿ ಮದುವೆಮಾಡಿಕೊಡುತ್ತೇನೆ. ಧರ್ಮಶಾಸ್ತ್ರಗಳಲ್ಲಿ ಉಕ್ತವಾದ ಸೂಕ್ತಿಗಳನ್ನು ನಾನು ಬ್ರಾಹ್ಮಣರಿಂದ ಕೇಳಿ ತಿಳಿದಿರುವೆನು. ಅದನ್ನೇ ನಾನು ನಿನ್ನೊಡನೆಯೂ ಹೇಳುತ್ತೇನೆ. ಕೇಳು, ಮಗಳೇ!

**ಅಪ್ರದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್ಪತಿಃ ।**
**ಮೃತೇ ಭರ್ತರಿ ಪುತ್ರಶ್ಚ ವಾಚ್ಯೋ ಮಾತುರರಕ್ಷಿತಾ ॥೩೫॥**

'ಪ್ರೌಢೆಯಾದ ಮಗಳನ್ನು ಸಕಾಲದಲ್ಲಿ ಅನುರೂಪನಾದ ವರನನ್ನು ಹುಡುಕಿ ಮದುವೆಮಾಡಿಕೊಡದ ತಂದೆಯು ನಿಂದೆಗೆ ಗುರಿಯಾಗುತ್ತಾನೆ. ಋತುಕಾಲದಲ್ಲಿ ಪತ್ನಿಯೊಡನೆ ಸಮಾಗಮಮಾಡದ ಪತಿಯೂ ನಿಂದೆಗೆ ಗುರಿಯಾಗುತ್ತಾನೆ. ಗಂಡನು ಸತ್ತುಹೋದನಂತರ ವಿಧವೆಯಾದ ತಾಯಿಯನ್ನು ಸಂರಕ್ಷಿಸದ ಪುತ್ರನೂ ಸಹ ನಿಂದೆಗೆ ಗುರಿಯಾಗುತ್ತಾನೆ.'

ಈ ಶಾಸ್ತ್ರವಚನಾನುಸಾರವಾಗಿ ಪ್ರೌಢೆಯಾದ ನಿನ್ನನ್ನು ಮದುವೆ ಮಾಡಿಕೊಡದಿದ್ದರೆ ನಾನು ದೋಷಯುಕ್ತನಾಗುತ್ತೇನೆ. ನನಗೆ ಪ್ರಾಪ್ತವಾಗಲಿರುವ ಈ ದೋಷವನ್ನು ಪರಿಹರಿಸಲು ನೀನೇ ನಿನಗೆ ಅನುರೂಪನಾದ ವರನನ್ನು ಹುಡುಕಿಕೊಂಡು ಬಾ, ಮಗಳೇ! ಆದರೆ ನಾನು ಈ ಮೊದಲೇ

ಹೇಳಿದಂತೆ ದೇವತೆಗಳ ನಿಂದೆಗೆ ನಾನು ಗುರಿಯಾಗದ ರೀತಿಯಲ್ಲಿ ನೀನು ಕರ್ತವ್ಯನಿರ್ವಹಣೆಯನ್ನು ಮಾಡಬೇಕು."

ಧರ್ಮಜ! ಅಶ್ವಪತಿಯು ಮಗಳಾದ ಸಾವಿತ್ರಿಗೆ ಹೀಗೆಂದು ಹೇಳಿ, ವೃದ್ಧರಾದ ಅಮಾತ್ಯರಿಗೂ ಸಹ ಈ ವಿಷಯವನ್ನು ತಿಳಿಸಿ, ಪ್ರಯಾಣ ಮಾಡಲು ಯಾನಗಳನ್ನು ಸಿದ್ಧಗೊಳಿಸಿ, ವೃದ್ಧರಾದ ಅಮಾತ್ಯರನ್ನೂ ಮತ್ತು ದಾಸಿಯರನ್ನೂ ಸಾವಿತ್ರಿಯ ಜೊತೆಯಲ್ಲಿಯೇ ಪ್ರಯಾಣಮಾಡುವಂತೆ ಆಜ್ಞಾಪಿಸಿದನು.

ತಂದೆಯ ಮಾತುಗಳನ್ನು ಕೇಳಿ ಮನಸ್ವಿನಿಯಾದ ಸಾವಿತ್ರಿಯು ನಾಚಿದಳು. ಆದರೂ ಸಹ ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಅಶ್ವಪತಿಯ ಪಾದಗಳಿಗೆರಗಿ ಆಶೀರ್ವಾದವನ್ನು ಪಡೆದು–'ಎಲ್ಲಿಗೆ ಹೋಗುವುದು? ಅನುರೂಪವಾದ ವರನನ್ನು ಹೇಗೆ ಹುಡುಕುವುದು?'–ಎಂಬ ಯಾವ ವಿಷಯವನ್ನೂ ಯೋಚಿಸದೇ ಅರಮನೆಯಿಂದ ಹೊರಟಳು. ಚಿನ್ನದ ಪಲ್ಲಕ್ಕಿಯಲ್ಲಿ ಕುಳಿತು ವೃದ್ಧರಾದ ಅಮಾತ್ಯರೊಡನೆ ರಾಜರ್ಷಿಗಳು ವಾಸಮಾಡುತ್ತಿದ್ದ ರಮ್ಯವಾದ ತಪೋವನಗಳ ಕಡೆಗೆ ಪ್ರಯಾಣಮಾಡಿದಳು. ಆಶ್ರಮಗಳ ಸಮೀಪದಲ್ಲಿ ಸಾವಿತ್ರಿಯು ಪಲ್ಲಕ್ಕಿಯಿಂದಿಳಿದು ಅಲ್ಲಿದ್ದ ವೃದ್ಧರಾದ ರಾಜರ್ಷಿಗಳಿಗೆ ನಮಸ್ಕರಿಸಿ, ಅವರನ್ನು ಯಥೋಚಿತವಾಗಿ ಸತ್ಕರಿಸಿ ಅವರಿಂದ ಆಶೀರ್ವಾದಪಡೆದು, ಮುಂದಿನ ಆಶ್ರಮಕ್ಕೆ ಪ್ರಯಾಣಮಾಡುತ್ತಿದ್ದಳು. ಮಾನ್ಯರಾದ ಮತ್ತು ವೃದ್ಧರಾದ ಋಷಿ-ಮಹರ್ಷಿಗಳಿಗೆ ಪಾದಾಭಿವಂದನಮಾಡುತ್ತಾ ಸಾವಿತ್ರಿಯು ಅರಣ್ಯದಲ್ಲಿದ್ದ ಆಶ್ರಮಗಳನ್ನೆಲ್ಲಾ ಸುತ್ತಾಡಿದಳು. ಅನೇಕ ತೀರ್ಥಕ್ಷೇತ್ರಗಳಿಗೆ ಪ್ರಯಾಣಮಾಡಿ ಆ ಪುಣ್ಯತೀರ್ಥಗಳಲ್ಲಿ ಮಿಂದು ಅಲ್ಲಿದ್ದ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನಿತ್ತು ಅವರಿಂದಲೂ ಆಶೀರ್ವಾದಗಳನ್ನು ಪಡೆಯುತ್ತಿದ್ದಳು. ಇದೇ ರೀತಿಯಲ್ಲಿ ಸಾವಿತ್ರಿಯು ಅನೇಕಪುಣ್ಯತೀರ್ಥಗಳನ್ನೂ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಿದಳು.

೨೯೩ನೆಯ ಅಧ್ಯಾಯವು ಮುಗಿಯಿತು.

೨೯೪ನೆಯ ಅಧ್ಯಾಯ ಪತಿವ್ರತಾಮಾಹಾತ್ಮ್ಯಪರ್ವ (ಮುಂದುವರಿದಿದೆ.)

## ಸತ್ಯವಂತನನ್ನು ವಿವಾಹಮಾಡಿಕೊಳ್ಳಲು ಸಾವಿತ್ರಿಯು ನಿಶ್ಚಯಿಸಿದುದು

ಯುಧಿಷ್ಠಿರ! ಹಲವು ದಿನಗಳ ನಂತರ ಒಮ್ಮೆ ಮದ್ರಾಧಿಪತಿಯಾದ ಅಶ್ವಪತಿಯು ದೇವಲೋಕದಿಂದಾಗಮಿಸಿದ ನಾರದಮಹರ್ಷಿಗಳೊಡನೆ ಸಂಭಾಷಣೆಮಾಡುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ವರಾನ್ವೇಷಣಕ್ಕಾಗಿ ಹೋಗಿದ್ದ ಸಾವಿತ್ರಿಯು ಅನೇಕ ಆಶ್ರಮಗಳನ್ನೂ, ಪುಣ್ಯತೀರ್ಥಗಳನ್ನೂ ಸಂದರ್ಶಿಸಿ, ಅಮಾತ್ಯರೊಡನೆ ಅರಮನೆಗೆ ಪುನರಾಗಮಿಸಿದಳು. ತನ್ನ ತಂದೆಯು ಮಹರ್ಷಿಗಳಾದ ನಾರದರೊಡನೆ ಕುಳಿತಿರುವುದನ್ನು ಕಂಡು ಸಾವಿತ್ರಿಯು ಇಬ್ಬರ ಪಾದಾರವಿಂದಗಳನ್ನೂ ಮುಟ್ಟಿ ನಮಸ್ಕರಿಸಿದಳು. ಯಾತ್ರೆಯನ್ನು ಮುಗಿಸಿ ಸಾವಿತ್ರಿಯು ಆಗಮಿಸಿರುವಳೆಂಬುದನ್ನು ತಿಳಿದ ನಾರದರು ರಾಜನನ್ನು ಕೇಳಿದರು :

"ಮಹಾರಾಜ! ನಿನ್ನ ಮಗಳು ಎಲ್ಲಿಗೆ ಹೋಗಿದ್ದಳು? ಮತ್ತು ಈಗ ಯಾವ ಕಡೆಯಿಂದ ಬರುತ್ತಿದ್ದಾಳೆ? ಪ್ರೌಢೆಯಾಗಿರುವ ಇವಳಿಗಿನ್ನೂ ನೀನು ವಿವಾಹವನ್ನು ಮಾಡಿಲ್ಲವೇಕೆ?"

"ಪೂಜ್ಯರೇ! ನೀವು ಕಡೆಯಲ್ಲಿ ಪ್ರಶ್ನಿಸಿದ ವಿವಾಹಪೂರ್ವದ ವರಾನ್ವೇಷಣಕ್ಕಾಗಿಯೇ ನನ್ನ ಮಗಳು ಪ್ರಪಂಚಪರ್ಯಟನಕ್ಕೆ ಹೊರಟಿದ್ದಳು. ದೇವರ್ಷಿಗಳೇ! ನೀವಿರುವಾಗಲೇ ಅವಳು ವರಾನ್ವೇಷಣವನ್ನು ಮುಗಿಸಿ ಆಗಮಿಸಿರುವುದರಿಂದ ಅದರ ವಿಷಯವಾಗಿ ಅವಳೇನು ಹೇಳುವಳೆಂಬುದನ್ನು ತಾವೂ ಕೇಳಬಹುದಲ್ಲವೇ?"

ಯುಧಿಷ್ಠಿರ! ನಾರದರೊಡನೆ ಹೀಗೆಂದು ಹೇಳಿದ ಅಶ್ವಪತಿಯು ತನ್ನ ಪ್ರವಾಸದ ವಿಷಯವನ್ನು ವಿವರಿಸಿ ಹೇಳುವಂತೆ ಮಗಳನ್ನು ಕೇಳಿದನು.

ತನ್ನ ತಂದೆಯು ಹೇಳಿದ ಮಾತನ್ನು ದೇವರ ನಿರ್ದೇಶವೆಂದೇ ಭಾವಿಸಿ ಸಾವಿತ್ರಿಯು ತನ್ನ ಪ್ರವಾಸದ ವಿಷಯವನ್ನು ನಾರದರ ಮತ್ತು ಅಶ್ವಪತಿಯ ಮುಂದೆ ಹೇಳಲುಪಕ್ರಮಿಸಿದಳು :

"ಶಾಲ್ವದೇಶದಲ್ಲಿ ಧರ್ಮಾತ್ಮನಾದ ದ್ಯುಮತ್ಸೇನನೆಂಬ ಕ್ಷತ್ರಿಯರಾಜನೊಬ್ಬನಿದ್ದಾನೆ. ರಾಜ್ಯಭಾರಮಾಡುತ್ತಿದ್ದಾಗ ಆ ರಾಜನು ದುರ್ದೈವವಶಾತ್ ತನ್ನೆರಡು ಕಣ್ಣುಗಳನ್ನು ಕಳೆದುಕೊಂಡು ಕುರುಡನಾದನು. ಧೀಮಂತನಾದ ಆ ರಾಜನಿಗೆ ಕಿರಿವಯಸ್ಸಿನ ಒಬ್ಬನೇ ಒಬ್ಬ ಮಗನಿದ್ದನು. ರಾಜನು ಕುರುಡನಾದುದನ್ನೂ ಮತ್ತು ಅವನ ಮಗನಿನ್ನೂ ಬಾಲಕನಾಗಿರುವುದನ್ನೂ ತಿಳಿದ ಹಳೆಯ ಶತ್ರುರಾಜನೊಬ್ಬನು ತನ್ನ ಸೇಡುತೀರಿಸಿಕೊಳ್ಳಲು ಇದೇ ಸರಿಯಾದ ಸಮಯವೆಂದು ಭಾವಿಸಿ, ದ್ಯುಮತ್ಸೇನನ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿ ರಾಜ್ಯವನ್ನು ಕಿತ್ತುಕೊಂಡು ದ್ಯುಮತ್ಸೇನನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿಬಿಟ್ಟನು. ಕುರುಡನಾದ ರಾಜನು ಹೆಂಡತಿಯೊಡನೆಯೂ ಮತ್ತು ಏಕೈಕಶಿಶುವಿನೊಡನೆಯೂ ಕಾಡಿಗೆ ಪ್ರಯಾಣಮಾಡಿದನು. ಅರಣ್ಯಕ್ಕೆ ಹೋದನಂತರ ಆ ರಾಜನು ವ್ರತನಿಷ್ಠನಾಗಿ ತಪಶ್ಚರಣೆಯಲ್ಲಿ ನಿರತನಾದನು.

**ತಸ್ಯ ಪುತ್ರಃ ಪುರೇ ಜಾತಃ ಸಂವೃದ್ಧಶ್ಚ ತಪೋವನೇ ।**
**ಸತ್ಯವಾನನುರೂಪೋ ಮೇ ಭರ್ತೇತಿ ಮನಸಾ ವೃತಃ ॥೧೦॥**

ಅರಮನೆಯ ರಾಜಭೋಗದಲ್ಲಿ ಹುಟ್ಟಿದ ಬಾಲನು ಅರಣ್ಯದಲ್ಲಿ ವನ್ಯಮೃಗಗಳ ನಡುವೆ ಬೆಳೆಯತೊಡಗಿದನು. ಅವನೀಗ ಪ್ರೌಢನಾಗಿದ್ದಾನೆ. ಸತ್ಯವಂತನೆಂಬ ಆ ಯುವಕನು ನನಗೆ ಪತಿಯಾಗಲು ಅನುರೂಪನಾಗಿದ್ದಾನೆ. ನಾನು ನನ್ನ ಹೃದಯದಲ್ಲಿ ಅವನನ್ನು ಪತಿಯನ್ನಾಗಿ ವರಿಸಿಬಿಟ್ಟಿದ್ದೇನೆ."

ಹೀಗೆಂದು ಹೇಳಿ ಸಾವಿತ್ರಿಯು ಮೌನತಾಳಿದಳು. ಸಾವಿತ್ರಿಯ ಆ ಮಾತುಗಳನ್ನು ಕೇಳಿದೊಡನೆಯೇ ನಾರದರು ಹೇಳಿದರು :

**ಅಹೋ ಬತ ಮಹತ್ಪಾಪಂ ಸಾವಿತ್ರ್ಯಾ ನೃಪತೇ ಕೃತಮ್ ।**
**ಅಜಾನನ್ತ್ಯಾ ಯದನಯಾ ಗುಣವಾನ್ಸತ್ಯವಾನ್ವೃತಃ ॥೧೧॥**

"ಅಯ್ಯೋ, ಮಹಾರಾಜ! ಈ ಸಾವಿತ್ರಿಯು ತಿಳಿಯದೇ ಬಹುಗುಣಶಾಲಿಯಾದ ಸತ್ಯವಂತನನ್ನು ವರಿಸಲು ನಿಶ್ಚಯಿಸಿ ಮಹತ್ತರವಾದ ಒಂದು ಪಾಪವನ್ನೇ ಮಾಡಿಬಿಟ್ಟಳು. (ಅಪರಾಧಮಾಡಿಬಿಟ್ಟಳು.)"

ಸತ್ಯವಂತನು ಬಹಳ ಗುಣಶಾಲಿಯೆಂದು ಹೊಗಳಿ, ಅವನನ್ನು ವರಿಸ

ಲಿಚ್ಛಿಸಿರುವುದು ಸಾವಿತ್ರಿಯ ಮಹಾಪರಾಧವೆಂದು ಹೇಳಿದ ನಾರದರ ಮುಖವನ್ನೇ ರಾಜನು ಅಚ್ಚರಿಯಿಂದ ನೋಡುತ್ತಿದ್ದನು. ನಾರದರು ತಮ್ಮ ಮಾತನ್ನು ಮುಂದುವರಿಸಿ ಹೇಳಿದರು :

**ಸತ್ಯಂ ವದತ್ಯಸ್ಯ ಪಿತಾ ಸತ್ಯಂ ಮಾತಾ ಪ್ರಭಾಷತೇ ।**
**ತಥಾಸ್ಯ ಬ್ರಾಹ್ಮಣಾಶ್ಚಕ್ರುರ್ನಾಮೈತತ್ಸತ್ಯವಾನಿತಿ ॥೧೨॥**

**ಬಾಲಸ್ಯಾಶ್ವಾಃ ಪ್ರಿಯಾಶ್ಚಾಸ್ಯ ಕರೋತ್ಯಶ್ವಾಂಶ್ಚ ಮೃಣ್ಮಯಾನ್ ।**
**ಚಿತ್ರೇಽಪಿ ವಿಲಿಖತ್ಯಶ್ವಾಂಶ್ಚಿತ್ರಾಶ್ವ ಇತಿ ಚೋಚ್ಯತೇ ॥೧೩॥**

"ಮಹಾರಾಜ! ಸತ್ಯವಾನನ ತಂದೆಯು ಎಂದೂ ಸುಳ್ಳು ಹೇಳಿದವನಲ್ಲ. ಯಾವಾಗಲೂ ಸತ್ಯವನ್ನೇ ಹೇಳತಕ್ಕವನು. ತಾಯಿಯೂ ಸಹ ಯಾವಾಗಲೂ, ಎಂತಹ ಸಂಕಷ್ಟಸಂದರ್ಭದಲ್ಲಿಯೂ ಸತ್ಯವನ್ನೇ ನುಡಿಯುತ್ತಾಳೆ. ತಂದೆ-ತಾಯಿಗಳ ಸತ್ಯವ್ರತದ ಫಲದಿಂದ ಹುಟ್ಟಿದ ಆ ಶಿಶುವಿಗೆ ಬ್ರಾಹ್ಮಣರು 'ಸತ್ಯವಾನ್' ಎಂದೇ ನಾಮಕರಣವನ್ನು ಮಾಡಿದರು. ಚಿಕ್ಕವನಾಗಿದ್ದಾಗಲೇ ಅವನಿಗೆ ಕುದುರೆಗಳೆಂದರೆ ಹೆಚ್ಚು ಆಸಕ್ತಿಯಿದ್ದಿತು. ಮಣ್ಣಿನಿಂದ ಕುದುರೆಗಳನ್ನು ಮಾಡಿ ಆಟವಾಡುತ್ತಿದ್ದನು. ನಾನಾಜಾತಿಯ ಕುದುರೆಗಳ ಚಿತ್ರಗಳನ್ನೂ ಬಹಳ ಸುಂದರವಾಗಿ ಬರೆಯುತ್ತಿದ್ದನು. ಆದುದರಿಂದಲೇ ಅವನನ್ನು ಕೆಲವರು ಚಿತ್ರಾಶ್ವನೆಂದೂ ಕರೆಯುತ್ತಾರೆ."

ನಾರದರ ಆ ಮಾತಿನಿಂದಲೂ ರಾಜನ ಸಮಸ್ಯೆಯು ಪರಿಹಾರವಾಗಲಿಲ್ಲ. ಏಕೆಂದರೆ : ನಾರದರು ವರನಲ್ಲಿರುವ ದೋಷವನ್ನು ಹೇಳುವ ಬದಲು ವರನನ್ನು ಹೊಗಳುತ್ತಲೇ ಇದ್ದಾರೆ. ಆದರೂ ಸಹ ಸಾವಿತ್ರಿಯು ಅಪರಾಧ ಮಾಡಿರುವಳೆಂದು ಹೇಳುತ್ತಾರೆ. ಇದರಿಂದಾಗಿ ಸಂಶಯಗೊಂಡ ಅಶ್ವಪತಿಯು ನಾರದರಿಗೆ ನೇರವಾದ ಪ್ರಶ್ನೆಗಳನ್ನೇ ಹಾಕಿದನು :

**ಅಪೀದಾನೀಂ ಸ ತೇಜಸ್ವೀ ಬುದ್ಧಿಮಾನ್ವಾ ನೃಪಾತ್ಮಜಃ ।**
**ಕ್ಷಮಾವಾನಪಿ ವಾ ಶೂರಃ ಸತ್ಯವಾನ್ಪಿತೃವತ್ಸಲಃ**

"ನಾರದರೇ! ಪಿತೃವತ್ಸಲನಾದ ಆ ಸತ್ಯವಾನನು ಈಗಲೂ ಬುದ್ಧಿವಂತನೇ? ಕ್ಷಮಾವಂತನೇ? ಶೂರನೇ? ತೇಜೋವಂತನಾಗಿರುವನೇ?"

ನಾರದರು ಉತ್ತರಿಸಿದರು :

**ವಿವಸ್ವಾನಿವ ತೇಜಸ್ವೀ ಬೃಹಸ್ಪತಿಸಮೋ ಮತೌ ।**
**ಮಹೇನ್ದ್ರ ಇವ ವೀರಶ್ಚ ವಸುಧೇವ ಸಮನ್ವಿತಃ ॥೧೫॥**

"ಅಶ್ವಪತಿಯೇ! ಸತ್ಯವಾನನು ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನು. ಬುದ್ಧಿಯಲ್ಲಿ ದೇವಗುರುವಾದ ಬೃಹಸ್ಪತಿಗೆ ಸಮಾನನು. ಶೌರ್ಯದಲ್ಲಿ ಶಚೀಪತಿಯಾದ ಇಂದ್ರನಿಗೆ ಸಮಾನನು. ಕ್ಷಮೆಯಲ್ಲಿ ಪೃಥ್ವಿಗೆ ಸಮಾನನು."

ಅಶ್ವಪತಿಯ ಸಮಸ್ಯೆಯು ನಾರದರ ಈ ಉತ್ತರದಿಂದಲೂ ಬಗೆಹರಿಯಲೇ ಇಲ್ಲ. ಪುನಃ ನಾರದರನ್ನು ಪ್ರಶ್ನಿಸಿದನು :

**ಅಪಿ ರಾಜಾತ್ಮಜೋ ದಾತಾ ಬ್ರಹ್ಮಣ್ಯಶ್ಚಾಪಿ ಸತ್ಯವಾನ್ ।**
**ರೂಪವಾನಪ್ಯುದಾರೋ ವಾಪ್ಯಥವಾ ಪ್ರಿಯದರ್ಶನಃ ॥೧೬॥**

"ರಾಜಪುತ್ರನಾದ ಸತ್ಯವಾನನು ದಾನಶೀಲನೇ? ಬ್ರಾಹ್ಮಣಪೂಜಕನೇ? ರೂಪವಂತನೇ? ಉದಾರಿಯೇ? ಪ್ರಿಯದರ್ಶನನೇ? (ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನುವ ಮುಖಲಕ್ಷಣವುಳ್ಳವನೇ?)"

ಅದಕ್ಕೂ ನಾರದರು ಸಮಂಜಸವಾಗಿಯೇ ಉತ್ತರಿಸಿದರು :

**ಸಾಂಕೃತೇ ರನ್ತಿದೇವಸ್ಯ ಸ್ವಶಕ್ತ್ಯಾ ದಾನತಃ ಸಮಃ ।**
**ಬ್ರಹ್ಮಣ್ಯಃ ಸತ್ಯವಾದೀ ಚ ಶಿಬಿರೌಶೀನರೋ ಯಥಾ ॥೧೭॥**

**ಯಯಾತಿರಿವ ಚೋದಾರಃ ಸೋಮವತ್ಪ್ರಿಯದರ್ಶನಃ ।**
**ರೂಪೇಣಾನ್ಯತಮೋಽಶ್ವಿಭ್ಯಾಂ ದ್ಯುಮತ್ಸೇನಸುತೋ ಬಲೀ ॥೧೮॥**

**ಸ ದಾನ್ತಃ ಸ ಮೃದುಃ ಶೂರಃ ಸ ಸತ್ಯಃ ಸಂಯತೇನ್ದ್ರಿಯಃ ।**
**ಸ ಮೈತ್ರಃ ಸೋಽನಸೂಯಶ್ಚ ಸ ಹ್ರೀಮಾನ್ದ್ಯುತಿಮಾಂಶ್ಚ ಸಃ ॥**

**ನಿತ್ಯಶಶ್ಚಾರ್ಜವಂ ತಸ್ಮಿನ್ ಸ್ಥಿತಿಸ್ತಸ್ಯೈವ ಚ ಧ್ರುವಾ ।**
**ಸಂಕ್ಷೇಪತಸ್ತಪೋವೃದ್ಧೈಃ ಶೀಲವೃದ್ಧೈಶ್ಚ ಕಥ್ಯತೇ ॥೨೦॥**

"ದಾನಶಕ್ತಿಯಲ್ಲಿ ಅವನು ಸಂಕೃತಿಯ ಮಗನಾದ ರಂತಿದೇವನಿಗೆ

ಸಮಾನನೆನಿಸಿದ್ದಾನೆ. ಸತ್ಯನಿಷ್ಠೆಯಲ್ಲಿ ಮತ್ತು ಬ್ರಾಹ್ಮಣರನ್ನು ಉಪಚರಿಸುವುದರಲ್ಲಿ ಸತ್ಯವಾನನು ಉಶೀನರನ ಮಗನಾದ ಶಿಬಿಚಕ್ರವರ್ತಿಗೆ ಸಮಾನನೆನಿಸಿದ್ದಾನೆ. ಉದಾರತೆಯಲ್ಲಿ ಯಯಾತಿಗೆ ಸಮಾನನು. ಪೂರ್ಣಚಂದ್ರನಂತೆ ಅವನು ಸರ್ವದಾ ಸರ್ವರಿಗೂ ಪ್ರಿಯದರ್ಶನನಾಗಿದ್ದಾನೆ. ರೂಪಿನಲ್ಲವನು ಅಶ್ವಿನೀದೇವತೆಗಳಲ್ಲೊಬ್ಬನೆಂದು ಹೇಳಲ್ಪಟ್ಟಿದ್ದಾನೆ. ಸತ್ಯವಾನನು ಬಲಿಷ್ಠ, ಜಿತೇಂದ್ರಿಯ, ಧೈರ್ಯಶಾಲೀ, ಸತ್ಯವಾದೀ. ಪಂಚೇಂದ್ರಿಯಗಳನ್ನೂ ಹತೋಟಿಯಲ್ಲಿಟ್ಟುಕೊಂಡಿರುವವನು. ಸರ್ವರೊಡನೆಯೂ ಮೈತ್ರಿಯಿಂದಿರುವ ಸ್ವಭಾವವುಳ್ಳವನು. ಅಸೂಯಾರಹಿತನು. ಇಷ್ಟು ಅಪಾರವಾದ ಗುಣಗಳಿಂದ ಕೂಡಿದ್ದರೂ ಸಹ ಅಹಂಕಾರರಹಿತನು. ಹಿರಿಯರೆದುರಿನಲ್ಲಿ ನಾಚಿ ವಿನಮ್ರನಾಗಿರುವ ಸ್ವಭಾವವುಳ್ಳವನು. ಮಹಾತೇಜಸ್ವಿಯು. ಋಜುಸ್ವಭಾವವುಳ್ಳವನು. ಮಹಾರಾಜ! ನಿನಗೆ ಅವನ ಗುಣಾತಿಶಯಗಳನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ತಪೋವೃದ್ಧರೂ, ಶೀಲವೃದ್ಧರೂ, ಆದ ಮಹರ್ಷಿಗಳೂ ಸಹ ಸತ್ಯವಾನನು ಋಜುಸ್ವಭಾವಕ್ಕೆ ನಿವಾಸಸ್ಥಾನನೆಂದೂ, ಸುಸ್ಥಿರವಾದ ಒಳ್ಳೆಯ ನಡತೆಯುಳ್ಳವನೆಂದೂ ಹೊಗಳುತ್ತಾರೆ."

ನಾರದರ ಆ ಮಾತುಗಳನ್ನು ಕೇಳಿ ಅಶ್ವಪತಿಯು ಮತ್ತೂ ಸ್ಪಷ್ಟವಾಗಿ ನಾರದರನ್ನು ಕೇಳಿದನು :

"ಮಹರ್ಷಿಗಳೇ! ನೀವು ನನ್ನ ಮಗಳು ಒಪ್ಪಿರುವ ವರವನ್ನು ಸರ್ವಗುಣಸಂಪನ್ನನೆಂದೇ ಹೇಳುತ್ತಿದ್ದೀರಿ. ಆದರೆ ಸಾವಿತ್ರಿಯು ಅಪರಾಧಮಾಡಿದಳೆಂದೂ ಹೇಳುತ್ತೀರಿ. ಇದಕ್ಕೆ ಆಧಾರಭೂತವಾಗಿ ಅವನಲ್ಲೇನಾದರೂ ದೋಷಗಳಿದ್ದರೆ ಅದನ್ನೂ ಸಹ ನನಗೆ ಮರೆಮಾಚದೇ ತಿಳಿಸಿರಿ."

ಆಗ ನಾರದರು ಸತ್ಯವಾನನಲ್ಲಿದ್ದ ಒಂದೇ ಒಂದು ದೋಷವನ್ನು ಬಹಿರಂಗಪಡಿಸಿದರು.

**ಏಕ ಏವಾಸ್ಯ ದೋಷೋ ಹಿ ಗುಣಾನಾಕ್ರಮ್ಯ ತಿಷ್ಠತಿ ।**
**ಸ ಚ ದೋಷಃ ಪ್ರಯತ್ನೇನ ನ ಶಕ್ಯಮತಿವರ್ತಿತುಮ್ ॥೨೨॥**

"ಮಹಾರಾಜ! ಇಷ್ಟು ಅಪಾರವಾದ ಗುಣಗಳನ್ನೂ ಮುಚ್ಚಿಬಿಡುವ ಒಂದೇ ಒಂದು ದೋಷವು ಆ ಸತ್ಯವಾನನಲ್ಲಿರುವುದು. 'ಆ ಒಂದೇ ಒಂದು

ದೋಷವು ನಿವಾರಣೆಯಾಗಲಾರದೇ?' ಎಂದೂ ನೀನು ಪ್ರಶ್ನಿಸಬಹುದು. ಆದರೆ ಬಹುಪ್ರಯತ್ನದಿಂದಲೂ ಸಹ ಆ ದೋಷದಿಂದ ಪಾರಾಗುವ ಸಾಧ್ಯತೆಯಿಲ್ಲ.

**ಏಕೋ ದೋಷೋಽಸ್ತಿ ನಾನ್ಯೋಽಸ್ಯ ಸೋಽದ್ಯಪ್ರಭೃತಿ ಸತ್ಯವಾನ್ ।**
**ಸಂವತ್ಸರೇಣ ಕ್ಷೀಣಾಯುರ್ದೇಹನ್ಯಾಸಂ ಕರಿಷ್ಯತಿ ॥೨೩॥**

ನಿಶ್ಚಯವಾಗಿಯೂ ಅವನಿಗಿರುವುದು ಒಂದೇ ಒಂದು ದೋಷ, ಮಹಾರಾಜ! ಎರಡನೆಯ ದೋಷವೇ ಅವನಲ್ಲಿಲ್ಲ. ಇಂದಿನಿಂದ ಒಂದು ಸಂವತ್ಸರ ಮಾತ್ರವೇ ಅವನು ಜೀವಿಸಿರುವನು. ಅವನು ಅಲ್ಪಾಯು. ಅವನಿಗೆ ಈ ಒಂದು ಮಹತ್ತರವಾದ ದೋಷವಿದೆ. ಒಂದು ಸಂವತ್ಸರವು ಕಳೆದೊಡನೆಯೇ ಅವನು ದೇಹತ್ಯಾಗಮಾಡುತ್ತಾನೆ."

ನಾರದರು ಹೇಳಿದುದು ನಿಶ್ಚಯವಾಗಿಯೂ ಸತ್ಯವಾನನಲ್ಲಿರುವ ಮಹತ್ತರವಾದ ಒಂದು ದೋಷವೇ ಸರಿ. ಯಾವ ತಂದೆಯೂ ಸಹ ಅಲ್ಪಾಯುವಾದ ವರನಿಗೆ ತನ್ನ ಮಗಳನ್ನು ಕೊಡಲಿಚ್ಛಿಸುವುದಿಲ್ಲ. ವರನ ಆಯುಃಸ್ಥಾನವನ್ನೇ ಬಹುಮುಖ್ಯವಾಗಿ ಜಾತಕಗಳಲ್ಲಿ ನೋಡುತ್ತಾರೆ. ದೇವರ್ಷಿಗಳಾದ ನಾರದರೇ ಸತ್ಯವಾನನ ಆಯುಷ್ಯವಿಷ್ಟೆಂದು ಹೇಳಿದ ನಂತರ ಅಶ್ವಪತಿಯು ಬೇರೆಯವರಿಂದ ಅವನ ಆಯುಃಪ್ರಮಾಣವನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆಯೂ ಇರಲಿಲ್ಲ. ನಾರದರ ಮಾತಿನಿಂದ ಸತ್ಯವಾನನ ವಿಷಯದಲ್ಲಿ ನಿರುತ್ಸಾಹಿಯಾದ ಅಶ್ವಪತಿಯು ಮಗಳನ್ನು ಕುರಿತು ಹೇಳಿದನು :

"ಹತ್ತಿರ ಬಾ ಮಗಳೇ! ಈಗಲೇ ಪುನಃ ಯಾತ್ರೆಹೊರಟು ನಿನಗೆ ಅನುರೂಪನಾದ ಮತ್ತೊಬ್ಬ ವರನನ್ನು ಹುಡುಕಿಕೊಂಡು ಬಾ. ಸತ್ಯವಾನನಲ್ಲಿರುವ ಅಲ್ಪಾಯುಷ್ಯದೋಷವು ಅವನಲ್ಲಿರುವ ಸಕಲಗುಣಗಳನ್ನೂ ನುಂಗಿ ಹಾಕಿಬಿಟ್ಟಿದೆ. ದೇವಸತ್ಕೃತರಾದ, ಭಗವಂತರಾದ ನಾರದರು–ಸತ್ಯವಾನನು ಅಲ್ಪಾಯುಷ್ಯವುಳ್ಳವನೆಂದೂ, ಇಂದಿನಿಂದ ಒಂದು ವರ್ಷವು ಮುಗಿದೊಡನೆಯೇ ಅವನು ಮರಣಹೊಂದುವನೆಂದೂ–ಹೇಳುತ್ತಾರೆ. (ಆದುದರಿಂದ ನೀನು ಸತ್ಯವಾನನನ್ನು ಮದುವೆಯಾಗುವುದು ಉಚಿತವಾಗಿ ಕಾಣುವುದಿಲ್ಲ.)"

ಅದಕ್ಕುತ್ತರವಾಗಿ ಸಾವಿತ್ರಿಯು ಹೇಳಿದಳು :

**ಸಕೃದಂಶೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ ।**
**ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸಕೃತ್ಸಕೃತ್ ॥೨೬॥**

"ಅಪ್ಪ! ಕಲ್ಲೊಡೆದು ಅದರ ಚೂರು ಒಮ್ಮೆ ಕೆಳಗೆ ಬಿದ್ದಿತೆಂದರೆ ಪುನಃ ಅದು ಕಲ್ಲಿನೊಡನೆ ಸೇರಿಕೊಳ್ಳುವುದಿಲ್ಲ. (ಪಾತ್ರೆಯಿಂದ ಕೆಳಗೆ ಬಿದ್ದ ಒಂದು ತೊಟ್ಟು ನೀರು ಪುನಃ ಪಾತ್ರೆಯೊಳಗೆ ಸೇರಿಕೊಳ್ಳುವ ಸಾಧ್ಯತೆಯಿಲ್ಲ.) ಕನ್ಯಾದಾನವು ಒಂದೇ ಬಾರಿ ನಡೆಯತಕ್ಕುದಾಗಿದೆ. ಕನ್ಯಾದಾನವನ್ನು ಹಲವಾರು ಬಾರಿ ಮಾಡುವ ಸಾಧ್ಯತೆಯಿಲ್ಲ. "ದಾನಿಯು ನಾನಿದನ್ನು ನಿನಗೆ ಕೊಡುತ್ತೇನೆ"–ಎಂದು ಒಂದು ಬಾರಿ ಹೇಳಿದರೆ ಸಾಕು. ಎರಡನೆಯ ಬಾರಿ ಹೇಳುವ ಕಾರಣವಿಲ್ಲ. (ಕನ್ಯೆಯೊಬ್ಬಳನ್ನು ಒಮ್ಮೆ ಮಾತ್ರ ದಾನಮಾಡಲು ಸಾಧ್ಯ. "ದಾಸ್ಯಾಮಿ" ಎಂದು ಒಮ್ಮೆ ಹೇಳಿದರೆ ಸಾಕು. ಎರಡನೆಯ ಸಲ ಹೇಳಬೇಕಾಗಿಲ್ಲ.) ಈ ಮೂರೂ ಸಹ ಒಂದು ಬಾರಿ ಮಾತ್ರ ನಡೆಯುತ್ತದೆ. ಪದೇ-ಪದೇ ನಡೆಯತಕ್ಕುವುಗಳಲ್ಲ.

**ದೀರ್ಘಾಯುರಥವಾಲ್ಪಾಯುಃ ಸಗುಣೋ ನಿರ್ಗುಣೋಽಪಿ ವಾ ।**
**ಸಕೃದ್ವೃತೋ ಮಯಾ ಭರ್ತಾ ನ ದ್ವಿತೀಯಂ ವೃಣೋಮ್ಯಹಮ್ ॥**

ತಂದೆಯೇ! ದೀರ್ಘಾಯುವಾಗಲಿ–ಅಲ್ಪಾಯುವಾಗಲಿ ; ಗುಣವಂತ ನಾಗಲಿ–ಗುಣಹೀನನಾಗಲಿ ; ನಾನು ಸತ್ಯವಾನನನ್ನು ಪತಿಯನ್ನಾಗಿ ವರಿಸಿ ದ್ದೇನೆ. ಅವನನ್ನು ಬಿಟ್ಟು ಮತ್ತೊಬ್ಬನನ್ನು ನಾನು ವರಿಸಲಾರೆನು.

**ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾಭಿಧೀಯತೇ ।**
**ಕ್ರಿಯತೇ ಕರ್ಮಣಾ ಪಶ್ಚಾತ್ಪ್ರಮಾಣಂ ಮೇ ಮನಸ್ತತಃ ॥೨೮॥**

ಒಂದು ಕಾರ್ಯವನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಿತವಾಗುತ್ತದೆ. ಅನಂತರದಲ್ಲದು ಮಾತಿನಿಂದ ಹೇಳಲ್ಪಡುತ್ತದೆ. ವಾಚಾ ಹೇಳಿದ ನಂತರ ಅದನ್ನು ಕಾರ್ಯರೂಪಕ್ಕೆ ತರಲಾಗುತ್ತದೆ. ಹಾಗೆಯೇ ನಾನು ಸತ್ಯವಾನನನ್ನು ವರಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದೆನು. ಅನಂತರ ನಾನು ಅದನ್ನೇ ಮಾತಿನಿಂದ ತಮ್ಮ ಮುಂದೆ ಹೇಳಿದ್ದೇನೆ. (ಮುಂದೆ ಮದುವೆಯ ಕಾರ್ಯವೊಂದು ನಡೆಯಬೇಕಾಗಿದೆಯೇ ಹೊರತು ಮನಸ್ಸಿನಲ್ಲಿ ಸಂಕಲ್ಪಿಸಿರುವುದನ್ನು ಯಾವ ಕಾರಣದಿಂದಲೂ ಕೈಬಿಡುವ ಸಾಧ್ಯತೆಯಿಲ್ಲ.) ಇದಕ್ಕೆ ನನ್ನ ಮನಸ್ಸೇ ಸಾಕ್ಷಿಯಾಗಿರುತ್ತದೆ."

ಸಾವಿತ್ರಿಯ ಮಾತುಗಳನ್ನು ಕೇಳಿ ನಾರದರು ಹೇಳಿದರು :

“ಮಹಾರಾಜ! ನಿನ್ನ ಮಗಳಾದ ಸಾವಿತ್ರಿಯ ಬುದ್ಧಿಯು ಸುಸ್ಥಿರವಾದುದು. ಇವಳನ್ನು (ಇವಳ ಬುದ್ಧಿಯನ್ನು) ಯಾವ ವಿಧದಿಂದಲೂ ಪತಿವ್ರತಾಧರ್ಮಮಾರ್ಗದಿಂದ ಪ್ರತಿನಿವರ್ತಿಸುವ ಸಾಧ್ಯತೆಯಿಲ್ಲ. ನಿಶ್ಚಯವಾಗಿಯೂ ಸತ್ಯವಂತನಲ್ಲಿರುವ ಗುಣಗಳು ಬೇರೆ ಯಾವೊಬ್ಬ ಪುರುಷನಲ್ಲಿಯೂ ಇರುವುದಿಲ್ಲ. ಆದುದರಿಂದ ಈ ಸಮಯದಲ್ಲಿ ಸಾವಿತ್ರಿಯ ಅಭಿಪ್ರಾಯದಂತೆಯೇ ನಿನ್ನ ಮಗಳನ್ನು ಸತ್ಯವಾನನಿಗೇ ಮದುವೆಮಾಡಿಕೊಡುವುದು ಯುಕ್ತವಾಗಿ ತೋರುತ್ತದೆ.”

“ಮಹರ್ಷಿಗಳೇ! ನೀವು ಹೇಳಿದ ಮಾತನ್ನು ನಾನು ಎಂದೂ ಮೀರತಕ್ಕವನಲ್ಲ. ಏಕೆಂದರೆ : ನೀವು ಯಾವಾಗಲೂ ಸತ್ಯವಾದ ಮತ್ತು ನನಗೆ ಶ್ರೇಯಸ್ಕರವಾದ ಮಾತುಗಳನ್ನೇ ಹೇಳುತ್ತೀರಿ. ತಾವು ದೇವರ್ಷಿಗಳು. ಮೇಲಾಗಿ ನನಗೆ ಗುರುಗಳೂ ಆಗಿರುವುದರಿಂದ ನೀವು ಹೇಳಿದಂತೆಯೇ ನಾನು ನನ್ನ ಮಗಳನ್ನು ಸತ್ಯವಾನನಿಗೇ ಮದುವೆಮಾಡಿಕೊಡುತ್ತೇನೆ.”

**ಅವಿಘ್ನಮಸ್ತು ಸಾವಿತ್ರ್ಯಾಃ ಪ್ರದಾನೇ ದುಹಿತುಸ್ತವ ।**
**ಸಾಧಯಿಷ್ಯಾಮ್ಯಹಂ ತಾವತ್ಸರ್ವೇಷಾಂ ಭದ್ರಮಸ್ತು ವಃ ॥೩೨॥**

“ನಿನ್ನ ಮಗಳಾದ ಸಾವಿತ್ರಿಯ ಮದುವೆಯು ನಿರ್ವಿಘ್ನವಾಗಿ ನೆರವೇರಲಿ. ನಾನಿನ್ನು ಹೋಗಿ ಬರುತ್ತೇನೆ. ನಿಮ್ಮೆಲ್ಲರಿಗೂ ಮಂಗಳವಾಗಲಿ.”

ಯುಧಿಷ್ಠಿರ! ನಾರದರು ಅಶ್ವಪತಿಗೆ ಹೀಗೆಂದು ಹೇಳಿ ಆಕಾಶಮಾರ್ಗದ ಮೂಲಕವಾಗಿ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದರು. ಇತ್ತಲಾಗಿ ಅಶ್ವಪತಿಯು ತನ್ನ ಮಗಳ ವಿವಾಹಕ್ಕೆ ಬೇಕಾದ ಸರ್ವಸಿದ್ಧತೆಗಳನ್ನೂ ಮಾಡಿಕೊಳ್ಳಲು ಉಪಕ್ರಮಿಸಿದನು.

೨೯೪ನೆಯ ಅಧ್ಯಾಯವು ಮುಗಿಯಿತು.

೨೯೫ನೆಯ ಅಧ್ಯಾಯ ಪತಿವ್ರತಾಮಾಹಾತ್ಮ್ಯಪರ್ವ (ಮುಂದುವರಿದಿದೆ.)

## ಸತ್ಯವಾನ್ ಮತ್ತು ಸಾವಿತ್ರಿಯರ ವಿವಾಹ : ಸಾವಿತ್ರಿಯು ತನ್ನ ಶುಶ್ರೂಷೆಯಿಂದ ಸಕಲರನ್ನೂ ಸಂತೋಷಗೊಳಿಸಿದುದು

ಯುಧಿಷ್ಠಿರ! ಅಶ್ವಪತಿಯು ಕನ್ಯಾಪ್ರದಾನದ ವಿಷಯವನ್ನೇ ಗಾಢ

ವಾಗಿ ಚಿಂತಿಸುತ್ತಾ ವಿವಾಹಕ್ಕೆ ಬೇಕಾದ ಸಂಭಾರಗಳನ್ನು ಸಿದ್ಧಪಡಿಸಲು ವ್ಯವಸ್ಥೆಮಾಡಿದನು. ವೃದ್ಧರಾದ ಬ್ರಾಹ್ಮಣರನ್ನೂ, ಪುರೋಹಿತರನ್ನೂ, ಋತ್ವಿಜರನ್ನೂ ಕರೆಯಿಸಿ ಸಮಾಲೋಚಿಸಿ ಶುಭದಿನವೊಂದರಲ್ಲಿ ತನ್ನ ಮಗಳೊಡನೆಯೂ, ಪರಿವಾರದೊಡನೆಯೂ, ಬ್ರಾಹ್ಮಣರೊಡನೆಯೂ ಕೂಡಿದವನಾಗಿ ಅರಣ್ಯಕ್ಕೆ ಪ್ರಯಾಣಹೊರಟನು. ಹಲವಾರು ದಿನಗಳು ಪ್ರಯಾಣ ಮಾಡಿದ ನಂತರ ಮೇಧ್ಯಾರಣ್ಯದಲ್ಲಿದ್ದ ದ್ಯುಮತ್ಸೇನನ ಆಶ್ರಮದ ಸಮೀಪಕ್ಕೆ ಪರಿವಾರಸಮೇತನಾಗಿ ತಲುಪಿದ ಅಶ್ವಪತಿಯು ಯಾನದಿಂದಿಳಿದು ಬ್ರಾಹ್ಮಣರೊಡನೆ ಕಾಲ್ನಡಿಗೆಯಲ್ಲಿಯೇ ಆಶ್ರಮಕ್ಕೆ ತೆರಳಿದನು. ಅಲ್ಲವನು ಸಾಲವೃಕ್ಷದ ಕೆಳಭಾಗದಲ್ಲಿ ದರ್ಭಾಸನದ ಮೇಲೆ ಕುಳಿತಿದ್ದ ಮಹಾಭಾಗನಾದ ಅಂಧನಾದ ದ್ಯುಮತ್ಸೇನನನ್ನು ನೋಡಿದನು. ರಾಜರ್ಷಿಯಾದ ದ್ಯುಮತ್ಸೇನನನ್ನು ಅಶ್ವಪತಿಯು ಯಥಾಯೋಗ್ಯವಾಗಿ ಸತ್ಕರಿಸಿದನಂತರ ಕೇವಲ ಒಂದೆರಡು ಮಾತುಗಳಿಂದ ತನ್ನ ಪರಿಚಯವನ್ನು ದ್ಯುಮತ್ಸೇನನಿಗೆ ಮಾಡಿಕೊಟ್ಟನು.

ಧರ್ಮವಿದನಾದ ದ್ಯುಮತ್ಸೇನನು ತನ್ನ ಆಶ್ರಮಕ್ಕೆ ರಾಜನೊಬ್ಬನು ಬಂದಿರುವನೆಂದು ತಿಳಿದೊಡನೆಯೇ ಅರ್ಘ್ಯ-ಪಾದ್ಯಾಸನಾದಿಗಳನ್ನಿತ್ತು ಸತ್ಕರಿಸಿ ಮಧುಪರ್ಕಕ್ಕಾಗಿ ಗೋವನ್ನೂ ಸಮರ್ಪಿಸಿದ ನಂತರದಲ್ಲಿ ರಾಜನ ಆಗಮನದ ಕಾರಣವೇನೆಂದು ಅಶ್ವಪತಿಯನ್ನು ಪ್ರಶ್ನಿಸಿದನು.

ಅಶ್ವಪತಿಯು ತಾನು ಆಗಮಿಸಿದ ಕಾರಣವನ್ನೂ, ತನ್ನ ಮನೋಗತವಾದ ಅಭಿಪ್ರಾಯವನ್ನೂ ಅರ್ಥಾತ್ ಸತ್ಯವಾನನಿಗೆ ತನ್ನ ಮಗಳಾದ ಸಾವಿತ್ರಿಯನ್ನು ಕೊಟ್ಟು ಮದುವೆ ಮಾಡಬೇಕೆಂದಿರುವ ಅಭಿಲಾಷೆಯನ್ನೂ ದ್ಯುಮತ್ಸೇನನ ಮುಂದಿಟ್ಟನು :

**ಸಾವಿತ್ರೀ ನಾಮ ರಾಜರ್ಷೇ ಕನ್ಯೇಽಯಂ ಮಮ ಶೋಭನಾ ।**
**ತಾಂ ಸ್ವಧರ್ಮೇಣ ಧರ್ಮಜ್ಞ ಸ್ನುಷಾರ್ಥೇ ತ್ವಂ ಗೃಹಾಣ ಮೇ ॥**

“ರಾಜರ್ಷಿಯೇ! ಸರ್ವಾಂಗಶೋಭನೆಯಾದ ಇವಳು ಸಾವಿತ್ರೀ ಎಂಬ ಹೆಸರಿನ ನನ್ನ ಮಗಳು. ಧರ್ಮಜ್ಞನೇ! ಇವಳನ್ನು ನೀನು ಸ್ವಧರ್ಮೋಚಿತವಾದ ರೀತಿಯಲ್ಲಿ ಸೊಸೆಯನ್ನಾಗಿ ಸ್ವೀಕರಿಸು.”

“ಅಶ್ವಪತಿಯೇ! ನಾವು ಯಾವ ಸ್ಥಿತಿಯಲ್ಲಿದ್ದೇವೆಂಬುದನ್ನು ನೀನು

ಪ್ರತ್ಯಕ್ಷವಾಗಿಯೇ ಕಾಣುತ್ತಿರುವೆ. ನಾವು ಕಾರಣಾಂತರದಿಂದ ರಾಜ್ಯಭ್ರಷ್ಟರಾಗಿ ಅರಣ್ಯದಲ್ಲಿ ವಾಸಮಾಡುತ್ತಿದ್ದೇವೆ. ನಮ್ಮ ಇಂದಿನ ಧರ್ಮವು ತಪಸ್ವಿಗಳ ಧರ್ಮವೇ ಆಗಿರುತ್ತದೆ. ನಿಯತಚಿತ್ತರಾಗಿ ತಪಶ್ಚರಣೆಮಾಡುತ್ತಿದ್ದೇವೆ. ಹೀಗಿರುವಾಗ ವನವಾಸಕ್ಕೆ ಅನರ್ಹಳಾದ ಈ ನಿನ್ನ ಕುವರಿಯು ಅರಮನೆಯ ಸುಖವನ್ನು ಬಿಟ್ಟು ವನವಾಸದ ಕ್ಲೇಶವನ್ನು ಹೇಗೆ ತಾನೇ ಅನುಭವಿಸುವಳು?"

"ರಾಜರ್ಷೇ! ಸುಖ-ದುಃಖಗಳು ಅಶಾಶ್ವತವಾದುವುಗಳೆಂಬುದನ್ನು ನಾನೂ ಮತ್ತು ನನ್ನ ಮಗಳೂ ಚೆನ್ನಾಗಿ ತಿಳಿದಿದ್ದೇವೆ. ಆದುದರಿಂದ ನೀನು ಈ ಮಾತುಗಳನ್ನು ನನ್ನ ವಿಷಯದಲ್ಲಾಗಲೀ, ನನ್ನ ಮಗಳ ವಿಷಯದಲ್ಲಾಗಲೀ ಹೇಳುವ ಕಾರಣವಿಲ್ಲ.

ನಾನು ನನ್ನ ಮಗಳನ್ನು ನಿನ್ನ ಮಗನಿಗೇ ಕೊಟ್ಟು ಮದುವೆಮಾಡಬೇಕೆಂದು ನಿಶ್ಚಯಮಾಡಿ ಬಂದಿರುತ್ತೇನೆ. ಹಿಂದೆ ನನಗೂ ನಿನಗೂ ಇದ್ದ ಮೈತ್ರಿಯನ್ನು ಸ್ಮರಿಸಿ ನಿನಗೆ ನಮಸ್ಕರಿಸಿ ಕೇಳಿಕೊಳ್ಳುತ್ತೇನೆ. ನನ್ನ ಮನಸ್ಸಿನ ಆಶೆಯನ್ನು ನಿರಾಕರಿಸಲು ನೀನು ಖಂಡಿತವಾಗಿಯೂ ಯತ್ನಿಸಬೇಡ. ಹಾಗೆ ಮಾಡುವುದು ಉಚಿತವಾಗಿಯೂ ಕಾಣುವುದಿಲ್ಲ. ನಾನಿಲ್ಲಿಗೆ ಪ್ರೀತಿಯಿಂದ ಆಗಮಿಸಿದ್ದೇನೆ. ನನ್ನ ಮಾತಿಗೆ ಪ್ರತಿಹೇಳಲಾರೆಯೆಂಬ ಆತ್ಮವಿಶ್ವಾಸದಿಂದ ಆಗಮಿಸಿದ್ದೇನೆ. ಆದುದರಿಂದ ನನ್ನ ಆಶಯಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಸೂಚಿಸುವುದು ಖಂಡಿತವಾಗಿಯೂ ಉಚಿತವಲ್ಲ. ಯದ್ಯಪಿ ಕಾಲ ಕರ್ಮಸಂಯೋಗದಿಂದಾಗಿ ನೀನಿಂದು ಅರಣ್ಯದಲ್ಲಿಯೇ ಇರಬಹುದಾದರೂ ನಿನ್ನಲ್ಲಿರುವ ರಾಜತ್ವವು (ಕ್ಷತ್ರಿಯತ್ವವು) ಅಳಿಸಿಹೋಗಿರುವುದಿಲ್ಲ. ಅರಣ್ಯದಲ್ಲಿದ್ದರೂ ನೀನು ರಾಜನೇ ಆಗಿರುತ್ತೀಯೆ. ನಿನ್ನ ಕುಮಾರನೂ ಸಹ ರಾಜಕುಮಾರನೇ ಆಗಿರುತ್ತಾನೆ. ಆದುದರಿಂದ ನಾವಿಬ್ಬರೂ ಸರಿಸಮಾನರು.

**ಅನುರೂಪೋ ಹಿ ಯುಕ್ತಶ್ಚ ತ್ವಂ ಮಮಾಹಂ ತವಾಪಿ ಚ ॥೧೨॥**

ನೀನು ನನಗೆ ಅನುರೂಪನಾಗಿರುವೆ. ಸಂಬಂಧಮಾಡಲು ಸತ್ಪಾತ್ರನಾಗಿರುವೆ. ಅಂತೆಯೇ ನಾನೂ ಸಹ ನಿನಗೆ ಅನುರೂಪನಾಗಿರುತ್ತೇನೆ. ಸಂಬಂಧಮಾಡಲು ಯೋಗ್ಯನೂ ಆಗಿರುತ್ತೇನೆ. ಆದುದರಿಂದ ನೀನು ದಯ

ಮಾಡಿ ನನ್ನ ಮಗಳಾದ ಸಾವಿತ್ರಿಯನ್ನು ನಿನ್ನ ಮಗನಾದ ಸತ್ಯವಾನನಿಗೆ ತಂದುಕೊಂಡು ಅವಳನ್ನು ಸೊಸೆಯನ್ನಾಗಿ ಸ್ವೀಕರಿಸು."

ಯುಧಿಷ್ಠಿರ! ಅಶ್ವಪತಿಯ ಹಾರ್ದಿಕವಾದ ಮಾತುಗಳನ್ನು ಕೇಳಿ ದ್ಯುಮತ್ಸೇನನು ಹೇಳಿದನು : "ಅಶ್ವಪತಿಯೇ! ಈ ಹಿಂದೆಯೇ ನಾನೊಮ್ಮೆ ನಿನ್ನೊಡನೆ ಬಾಂಧವ್ಯವನ್ನು ಬೆಳೆಸಬೇಕೆಂಬ ಆಶಯದಿಂದಿದ್ದೆನು. ಆದರೆ ಅಂಧನಾದ, ರಾಜ್ಯಭ್ರಷ್ಟನಾದ ನಾನು ನಿನ್ನೊಡನೆ ಸಂಬಂಧವನ್ನು ಬೆಳೆಸುವುದು ಸಾಧ್ಯವಾಗಲಾರದೆಂದು ಕೈಬಿಟ್ಟೆನು. ಈಗ ನೀನಾಗಿ ಬಂದಿರುವೆ. ನಿನ್ನೊಡನೆ ಬಾಂಧವ್ಯವನ್ನು ಬೆಳೆಸಬೇಕೆನ್ನುವ ಅಭಿಪ್ರಾಯವು ನನಗೆ ಈ ಮೊದಲೇ ಇದ್ದಿತಾದ್ದರಿಂದ ನಿನ್ನ ಆಶಯಕ್ಕೆ ನಾನೆಂದೂ ವಿರೋಧವನ್ನು ಸೂಚಿಸುವುದಿಲ್ಲ. ನಿನ್ನ ಆಶಯದಂತೆ ಇಂದೇ ಸಾವಿತ್ರೀ-ಸತ್ಯವಾನರ ವಿವಾಹವಾಗಲಿ. ನೀನಿಂದು ನನಗೆ ಬಹುಪ್ರಿಯನಾದ ಅತಿಥಿಯಾಗಿರುವೆ."

ಯುಧಿಷ್ಠಿರ! ದ್ಯುಮತ್ಸೇನನು ಸಾವಿತ್ರಿಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಲು ತನ್ನ ಒಪ್ಪಿಗೆಯಿತ್ತನಂತರ ಆ ಅರಣ್ಯದಲ್ಲಿದ್ದ ಹಲವು ಆಶ್ರಮಗಳಿಂದ ಬ್ರಾಹ್ಮಣರನ್ನು ಕರೆಯಿಸಿ, ದ್ಯುಮತ್ಸೇನಾಶ್ವಪತಿಗಳು ಸಾವಿತ್ರೀ-ಸತ್ಯವಾನರ ವಿವಾಹಮಹೋತ್ಸವವನ್ನು ಯಥಾವಿಧಿಯಾಗಿ ನೆರವೇರಿಸಿದರು. ಅಶ್ವಪತಿಯು ದಿವ್ಯವಾದ ವಸ್ತ್ರಗಳನ್ನೂ, ಆಭರಣಗಳನ್ನೂ ಮಗಳಿಗೆ ಪಾರಿತೋಷಿಕರೂಪದಲ್ಲಿ ಕೊಟ್ಟು ಅತ್ಯಂತಸಂತೋಷದಿಂದ ತನ್ನ ಪರಿವಾರದೊಡನೆ ರಾಜಧಾನಿಗೆ ಹಿಂದಿರುಗಿದನು. ಸರ್ವಗುಣಪರಿಪೂರ್ಣಳಾದ ಸಾವಿತ್ರಿಯನ್ನು ಪಡೆದ ಸತ್ಯವಾನನೂ ಸಂತೋಷಭರಿತನಾದನು. ಸತ್ಯವಾನನನ್ನು ಪತಿಯನ್ನಾಗಿ ಪಡೆದುದರಿಂದ ಸಾವಿತ್ರಿಗೂ ಅಮಿತವಾದ ಆನಂದವಾಯಿತೆಂಬುದನ್ನು ಹೇಳಲೇಬೇಕಾಗಿಲ್ಲ. ತಾನೇ ಸ್ವತಃ ಪ್ರಪಂಚಪರ್ಯಟನ ಮಾಡಿ ತನಗೆ ಅನುರೂಪನಾದ ವರನನ್ನು ಆರಿಸಿಕೊಂಡಳಲ್ಲವೇ?

ತನ್ನ ತಂದೆಯೂ ಮತ್ತು ಬಂಧುಗಳೂ ರಾಜಧಾನಿಗೆ ಹೊರಟುಹೋದನಂತರ ಸಾವಿತ್ರಿಯು ತನ್ನ ಅಮೂಲ್ಯವಾದ ರತ್ನಾಭರಣಗಳನ್ನೂ, ಪಟ್ಟವಸ್ತ್ರಗಳನ್ನೂ ತೆಗೆದಿಟ್ಟು ಅರಣ್ಯವಾಸಿಗಳಿಗೆ ಯೋಗ್ಯವಾದ ಕಾಷಾಯವರ್ಣದ ನಾರುಮಡಿಯನ್ನುಟ್ಟಳು. ಸಾವಿತ್ರಿಯು ಅತ್ತೆ-ಮಾವಂದಿರನ್ನು ಸರ್ವದಾ ಉಪಚರಿಸುತ್ತಾ, ಎಲ್ಲರ ವಿಷಯದಲ್ಲಿಯೂ ವಿನಯದಿಂದ ವರ್ತಿಸುತ್ತಿದ್ದಳು.

ತನ್ನ ಸುಖದ ಕಡೆಗೆ ಸ್ವಲ್ಪವೂ ಲಕ್ಷ್ಯಕೊಡುತ್ತಿರಲಿಲ್ಲ. ಚಾಪಲ್ಯಯುಕ್ತವಾದ ಇಂದ್ರಿಯಗಳನ್ನು ದಮನಮಾಡಿಬಿಟ್ಟಿದ್ದಳು. ಈ ಎಲ್ಲ ಸುಗುಣಗಳಿಂದಲೂ ಕೂಡಿದ ಸಾವಿತ್ರಿಯು ಅನುದಿನವೂ ಬೆಳಗಾಗುತ್ತಲೇ ಎದ್ದು ಅತ್ತೆಗೆ ಸ್ನಾನಕ್ಕೆ ಸಿದ್ಧಮಾಡಿಕೊಟ್ಟು, ಉಟ್ಟುಕೊಳ್ಳಲು ಉತ್ತಮವಾದ ಸೀರೆಯನ್ನು ಸಿದ್ಧಪಡಿಸಿ, ಸಿಂಗರಿಸಿಕೊಳ್ಳಲು ಆಭರಣಗಳನ್ನೂ ಕೊಡುವಳು. ತನ್ನ ಅತ್ತೆಯು ಅರಣ್ಯದಲ್ಲಿದ್ದರೂ ಮಹಾರಾಣಿಯಂತೆಯೇ ಅವಳನ್ನು ಕಾಣಬೇಕೆಂಬುದು ಸಾವಿತ್ರಿಯ ಆಶಯವಾಗಿತ್ತು. ತನ್ನ ಮಾವನು ಕುರುಡನೆಂಬ ಭಾವನೆಯು ಸಾವಿತ್ರಿಯ ಮನಸ್ಸಿನಲ್ಲಿ ಒಮ್ಮೆಯಾದರೂ ಸುಳಿಯುತ್ತಿರಲಿಲ್ಲ. ಮಾವನನ್ನು ಸಾಕ್ಷಾತ್ ದೇವತೆಯೆಂದೇ ಅವಳು ಭಾವಿಸಿದ್ದಳು. ದೇವತೆಗಳನ್ನು ಉಪಚರಿಸುವ ರೀತಿಯಲ್ಲಿಯೇ ಸಾವಿತ್ರಿಯು ಭಯ-ಭಕ್ತಿಗಳಿಂದ ಕೂಡಿದವಳಾಗಿ ಮಾವನಾದ ದ್ಯುಮತ್ಸೇನನನ್ನು ಅನುದಿನವೂ ಉಪಚರಿಸುತ್ತಿದ್ದಳು. ಅವಶ್ಯವಿದ್ದಷ್ಟು ಮಾತನಾಡುತ್ತಿದ್ದಳೇ ಹೊರತು ಅನವಶ್ಯವಾಗಿ ಯಾವುದೊಂದು ಮಾತನ್ನೂ ಯಾರೊಡನೆಯೂ ಸಾವಿತ್ರಿಯು ಆಡುತ್ತಿರಲಿಲ್ಲ.

ಸಾವಿತ್ರಿಯು ಪತಿಯೊಡನಾಡುವ ಪ್ರತಿಯೊಂದು ಮಾತೂ ಸತ್ಯವಾನನ ಕಿವಿಗಳಿಗೆ ಅಮೃತಪ್ರಾಯವಾಗಿರುತ್ತಿತ್ತು. ಮನಸ್ಸನ್ನು ತಣಿಸುವ ಮತ್ತು ಮನಸ್ಸನ್ನು ಒಲಿಸುವ ಬಹಳ ಇಂಪಾದ ಮಾತುಗಳನ್ನು ಸಾವಿತ್ರಿಯು ಪತಿಯೊಡನಾಡುತ್ತಿದ್ದಳು. ಅತ್ತೆ-ಮಾವಂದಿರೆದುರಿನಲ್ಲಿ ಸಾವಿತ್ರಿಯು ಗಂಡನೊಡನೆ ಸರಸಸಲ್ಲಾಪವಾಡುತ್ತಿರಲಿಲ್ಲ. ಏಕಾಂತದಲ್ಲಿದ್ದಾಗ ಅವನೊಡನೆ ಸರಸಸಲ್ಲಾಪಗಳನ್ನು ಮಾಡುತ್ತಿದ್ದಳಲ್ಲದೇ ದಾಸಿಗಿಂತಲೂ ಮಿಗಿಲಾಗಿ ಸತ್ಯವಾನನನ್ನು ಸಕಲೋಪಚಾರಗಳಿಂದ ಉಪಚರಿಸುತ್ತಿದ್ದಳು. ಸಾವಿತ್ರಿಯ ನಿರಂತರವಾದ ಸೇವೆಯಿಂದ ಆನಂದಭರಿತನಾದ ದ್ಯುಮತ್ಸೇನನೂ ಮತ್ತು ಅದೇ ಆಶ್ರಮದಲ್ಲಿದ್ದ ಇತರ ಸತ್ಪುರುಷರೂ ನಿಶ್ಚಿಂತರಾಗಿ ತಪಸ್ಸಿನಲ್ಲಿ ತಮ್ಮ ಕಾಲವನ್ನು ಕಳೆಯುತ್ತಿದ್ದರು.

ಅತ್ತೆ-ಮಾವಂದಿರನ್ನೂ, ಅತಿಥಿ-ಅಭ್ಯಾಗತರನ್ನೂ ಮತ್ತು ತನ್ನ ಪತಿಯನ್ನೂ ಯಥಾಯೋಗ್ಯವಾಗಿ ಆಯಾ ಕಾಲಗಳಲ್ಲಿ ಸತ್ಕರಿಸುವುದರಲ್ಲಿಯೇ ಸಾವಿತ್ರಿಯು ತನ್ನ ಕಾಲವನ್ನೆಲ್ಲಾ ಕಳೆಯುತ್ತಿದ್ದಳು. ಆ ಕಾರ್ಯಗಳಲ್ಲಿ ಅವಳಿಗೆ ಸಂಪೂರ್ಣವಾದ ತೃಪ್ತಿಯಿದ್ದಿತು. ಆದರೆ ತಾನು ಅರಮನೆಯಲ್ಲಿ

ಇದ್ದಾಗ ನಾರದರಾಡಿದ್ದ–'ಸಂವತ್ಸರೇಣ ಕ್ಷೀಣಾಯುಃ'–ಎಂಬ ಒಂದು ಮಾತು ಸಾವಿತ್ರಿಯ ಕಿವಿಯಲ್ಲಿ ಹಗಲಿರುಳೂ ಪ್ರತಿಧ್ವನಿಸುತ್ತಿದ್ದಿತು. ಆ ಮಾತು ಅಂಕುಶಪ್ರಾಯವಾಗಿ ಸಾವಿತ್ರಿಯ ಹೃದಯದಲ್ಲಿ ನೆಟ್ಟಿದ್ದರೂ ಆ ನೋವನ್ನು ತಾನೊಬ್ಬಳು ಅನುಭವಿಸುತ್ತಿದ್ದಳೇ ಹೊರತು ಯಾರೊಬ್ಬ ರೊಡನೆಯೂ ಅದರ ಪ್ರಸ್ತಾಪವನ್ನು ಮಾಡುತ್ತಿರಲಿಲ್ಲ. ಅವಳಿಗೆ ಮನೋ ವೇದನೆಯಿದೆಯೆಂಬ ಕುರುಹೂ ಯಾರೊಬ್ಬರಿಗೂ ತಿಳಿಯದಂತೆಯೇ ವರ್ತಿಸುತ್ತಿದ್ದಳು.

೨೯೫ನೆಯ ಅಧ್ಯಾಯವು ಮುಗಿಯಿತು.

೨೯೬ನೆಯ ಅಧ್ಯಾಯ ಪತಿವ್ರತಾಮಾಹಾತ್ಮ್ಯಪರ್ವ (ಮುಂದುವರಿದಿದೆ.)

## ಸಾವಿತ್ರಿಯ ವ್ರತಚರ್ಯೆ : ಅತ್ತೆ-ಮಾವಂದಿರ ಅನುಮತಿಯನ್ನು ಪಡೆದು ಸಾವಿತ್ರಿಯು ಪತಿಯೊಡನೆ ಕಾಡಿಗೆ ಹೊರಟುದು

ಯುಧಿಷ್ಠಿರ! ಹಲವು ಮಾಸಗಳು ಕಳೆದುವು. ಸತ್ಯವಾನನು ಪರ ಲೋಕಕ್ಕೆ ತೆರಳಬೇಕಾದ ಕರಾಳದಿನವೂ ಸಮೀಪಿಸಿತು. ನಾರದರಾಡಿದ್ದ ಮಾತನ್ನು ಕ್ಷಣವಾದರೂ ಮರೆಯದಿದ್ದ ಸಾವಿತ್ರಿಯು ಒಂದೊಂದು ದಿನ ವನ್ನೂ ಎಣಿಕೆಮಾಡುತ್ತಿದ್ದಳು. ಅಂದಿಗೆ ನಾಲ್ಕನೆಯ ದಿನಕ್ಕೆ ತನ್ನ ಪತಿಗೆ ಮರಣವು ಸಂಭವಿಸುವುದೆಂದು ಸಾವಿತ್ರಿಯು ನಿಶ್ಚಯಿಸಿ ತ್ರಿರಾತ್ರವೆಂಬ ವ್ರತ ವನ್ನು ಉಪಕ್ರಮಿಸಿದಳು. ಮೂರು ದಿವಸಗಳೂ ಸಂಪೂರ್ಣವಾಗಿ ಉಪ ವಾಸದಿಂದಿದ್ದು ಆ ವ್ರತವನ್ನು ಆಚರಿಸಬೇಕಾಗಿದ್ದಿತು. ತನ್ನ ಸೊಸೆಯು ಬಹು ಕಠೋರವಾದ ವ್ರತತೊಟ್ಟಿರುವುದನ್ನು ಕೇಳಿ ದ್ಯುಮತ್ಸೇನನು ಬಹುದುಃಖಿತ ನಾಗಿ ಸಾವಿತ್ರಿಯನ್ನು ಸಂತೈಸುತ್ತಾ ಹೇಳಿದನು :

**ಅತಿತೀವ್ರೋಽಯಮಾರಮ್ಭಸ್ತ್ವಯಾರಬ್ಧೋ ನೃಪಾತ್ಮಜೇ ।**
**ತಿಸೃಣಾಂ ವಸತೀನಾಂ ಹಿ ಸ್ಥಾನಂ ಪರಮದುಶ್ಚರಮ್ ॥೫॥**

"ರಾಜಸುತೇ! ನೀನು ಆರಂಭಿಸಿರುವ ಈ *ತ್ರಿರಾತ್ರವ್ರತವು ಬಹು

* ತ್ರಿರಾತ್ರವ್ರತವು ಕುಳಿತುಕೊಳ್ಳದೇ ಅಥವಾ ಮಲಗದೇ ಯಾವಾಗಲೂ ನಿಂತುಕೊಂಡೇ ಇದ್ದು ಉಪವಾಸವನ್ನೂ ಮಾಡುತ್ತಾ ಮೂರು ದಿನಗಳ ಪರ್ಯಂತವಾಗಿ ಮಾಡುವ ವ್ರತ.

ತೀವ್ರವಾದುದು. ಮೂರು ರಾತ್ರಿಗಳನ್ನು ಅವಿಚ್ಛಿನ್ನವಾಗಿ ಉಪವಾಸದಿಂದ ಕಳೆಯುವುದು ಬಹಳ ಕಷ್ಟವಮ್ಮ."

**ನ ಕಾರ್ಯಸ್ತಾತ ಸಂತಾಪಃ ಪಾರಯಿಷ್ಯಾಮ್ಯಹಂ ವ್ರತಮ್ ।**
**ವ್ಯವಸಾಯಕೃತಂ ಹೀದಂ ವ್ಯವಸಾಯಶ್ಚ ಕಾರಣಮ್ ॥೬॥**

"ತಾತ! ನಾನು ತೀವ್ರತಮವಾದ ಈ ವ್ರತವನ್ನು ಕೈಗೊಂಡಿರುವುದಕ್ಕಾಗಿ ನೀವು ಸಂತಾಪಪಡುವ ಕಾರಣವಿಲ್ಲ. ನಾನೀ ವ್ರತವನ್ನು ಪೂರ್ಣಗೊಳಿಸುತ್ತೇನೆ. ನಾನೀವ್ರತವನ್ನು ಯಾವುದೋ ಒಂದು ಗುರಿಯನ್ನು ಸಾಧಿಸುವ ಸಲುವಾಗಿ ಆರಂಭಿಸಿರುತ್ತೇನೆ. ಗುರಿಯನ್ನು ಸಾಧಿಸಲು ದೃಢನಿಶ್ಚಯವೇ ಮುಖ್ಯಕಾರಣವಲ್ಲವೇ?"

ಸಾವಿತ್ರಿಗೆ ತಾನು ಕೈಗೊಂಡಿರುವ ವ್ರತದಲ್ಲಿದ್ದ ನಿಷ್ಠೆಯನ್ನು ಕಂಡು ದ್ಯುಮತ್ಸೇನನು ಹೇಳಿದನು :

"ಮಗಳೇ! ಬಹುದುಸ್ತರವಾದ ಈ ವ್ರತವನ್ನು ನಿಲ್ಲಿಸಿಬಿಡೆಂದು ಹೇಳಲು ನಾನು ಖಂಡಿತವಾಗಿಯೂ ಸಮರ್ಥನಲ್ಲ. ನನ್ನಂತಹವರು ಯಾವಾಗಲೂ–'ಕೈಗೊಂಡಿರುವ ವ್ರತವನ್ನು ಯಶಸ್ವಿಯಾಗಿ ಪೂರ್ಣಗೊಳಿಸು' ಎಂದು ಆಶೀರ್ವದಿಸುವುದೇ ಯುಕ್ತವಾಗಿರುತ್ತದೆ. ಆದುದರಿಂದ ನಾನೂ ಸಹ ಈ ವ್ರತವನ್ನು ಪೂರ್ಣಗೊಳಿಸೆಂದೇ ಹೇಳಬಯಸುತ್ತೇನೆ." ಎಂದು ಹೇಳಿ ದ್ಯುಮತ್ಸೇನನು ವಿರಮಿಸಿದನು.

ಎರಡು ದಿನಗಳು ಉಪವಾಸವ್ರತದಿಂದ ಕಳೆದ ಸಾವಿತ್ರಿಯು ಕೃಶಳಾಗಿ ಮರದ ಕೊರಡಿನಂತೆ ಕಾಣತೊಡಗಿದಳು. ವ್ರತದ ಮೂರನೆಯ ದಿನವು ಉದಯಿಸಿತು. ಉಪವಾಸದ ಸಂಕಟದ ಜೊತೆಗೆ ಮಾರನೆಯ ದಿನವೇ ಪತಿಯ ಅವಸಾನವಾಗುವುದೆಂಬ ಮಹಾಸಂಕಟದೊಡನೆ ಸಾವಿತ್ರಿಯು ಆ ಮೂರನೆಯ ದಿನವನ್ನೂ ಕಳೆದಳು. ಕಾತರದಿಂದ ನಿರೀಕ್ಷಿಸುತ್ತಿದ್ದ ಆ ದುರ್ದಿನವೂ ಬಂದೇಬಿಟ್ಟಿತು. ಸೂರ್ಯನು ಉದಯಿಸಿ ಎರಡು ಮಾರು ಪ್ರಮಾಣದಷ್ಟು (ನೊಗದಷ್ಟು ) ಮೇಲೆ ಬಂದಿದ್ದನು. ಸಾವಿತ್ರಿಯು ಸ್ನಾನಮಾಡಿ–ಮಡಿಯುಟ್ಟು, ಪ್ರಾತಃಕಾಲದಲ್ಲಿ ಮಾಡಬೇಕಾಗಿದ್ದ ಕಾರ್ಯಗಳೆಲ್ಲವನ್ನೂ ಮುಗಿಸಿ, ಧಗ-ಧಗನೆ ಪ್ರಜ್ವಲಿಸುತ್ತಿದ್ದ ಯಜ್ಞೇಶ್ವರನಲ್ಲಿ ಯಥಾವಿಧಿಯಾಗಿ ಹೋಮ ಮಾಡಿದಳು.

ಅನಂತರದಲ್ಲಿ ಆಶ್ರಮವಾಸಿಗಳಾಗಿದ್ದ ಬ್ರಾಹ್ಮಣರನ್ನೂ, ವೃದ್ಧರನ್ನೂ, ಅತ್ತೆ-ಮಾವಂದಿರನ್ನೂ ಅನುಕ್ರಮವಾಗಿ ನಮಸ್ಕರಿಸಿ ಅವರುಗಳಿಂದ **'ದೀರ್ಘಸುಮಂಗಲೀ ಭವ'**–ಎಂಬ ಅಮೋಘವಾದ ಆಶೀರ್ವಾದವನ್ನೂ ಪಡೆದಳು. ಯದ್ಯಪಿ ಸುಮಂಗಲಿಯು ನಮಸ್ಕರಿಸಿದರೆ–'ದೀರ್ಘಸುಮಂಗಲೀ ಭವ'–ಎಂದು ಆಶೀರ್ವದಿಸುವುದು ಸ್ವಾಭಾವಿಕವೇ ಆದರೂ ಸಾವಿತ್ರಿಗೆ ಅಂದು ಆ ಆಶೀರ್ವಚನವು ಮಹತ್ತ್ವಪೂರ್ಣವಾಗಿದ್ದಿತು. ಅವರು ಮಾಡಿದ ಆಶೀರ್ವಾದವನ್ನು ಸಾವಿತ್ರಿಯು ಮನಸ್ಸಿನಲ್ಲಿಯೇ ಧ್ಯಾನಿಸಿ, ಅವರ ಆಶೀರ್ವಚನವು ಸತ್ಯವಾಗಿ ಪರಿಣಮಿಸಬೇಕೆಂದು ಅಂತಃಸ್ಥಿತದೇವನಲ್ಲಿ ಮೊರೆಯಿಟ್ಟು ಬೇಡಿದಳು. ಅವರೆಲ್ಲರ ಆಶೀರ್ವಾದದಂತೆ ದೀರ್ಘಸೌಮಂಗಲ್ಯವು ತನಗೆ ಲಭ್ಯವಾಗಲೆಂದು ಸಾವಿತ್ರೀದೇವಿಯನ್ನು ಅಡಿಗಡಿಗೂ ಪ್ರಾರ್ಥಿಸಿದಳು. ಯಾವುದಾದರೊಂದು ರೀತಿಯಲ್ಲಿ ತನ್ನ ಗಂಡನಿಗೊದಗಲಿರುವ ಅಪಮೃತ್ಯುವಿನ ಪರಿಹಾರವಾಗಬೇಕೆಂದು ಆಶಿಸುತ್ತಿದ್ದಳೇ ಹೊರತು ನಾರದರ ಮಾತು ಸಟೆಯಾದೀತೆಂದು ಸಾವಿತ್ರಿಯು ಒಮ್ಮೆಯಾದರೂ ಯೋಚಿಸಲಿಲ್ಲ. ಆದುದರಿಂದಲೇ ನಾರದರ ಮಾತಿನಂತೆ ತನ್ನ ಪತಿಯು ಅವಸಾನಹೊಂದುವ ಮುಹೂರ್ತವನ್ನು ಕಳವಳದಿಂದ ಸಾವಿತ್ರಿಯು ನಿರೀಕ್ಷಿಸುತ್ತಲೇ ಇದ್ದಳು.

ಯುಧಿಷ್ಠಿರ! ಸಾವಿತ್ರಿಯ ಅತ್ತೆ-ಮಾವಂದಿರು, ತಮ್ಮ ಸೊಸೆಯು ಸ್ವಲ್ಪವಾದರೂ ಆಯಾಸವನ್ನು ತೋರದೇ ಮೂರು ರಾತ್ರಿಗಳ ತೀವ್ರತಮವಾದ ವ್ರತವನ್ನು ಮುಗಿಸಿದುದನ್ನು ಕಂಡು ಬಹಳ ಸಂತುಷ್ಟಾಂತರಂಗರಾಗಿ ತಮ್ಮ ಸೊಸೆಯನ್ನು ಕುರಿತು ಹೇಳಿದರು :

**ವ್ರತಂ ಯಥೋಪದಿಷ್ಟಂ ತು ತಥಾ ತತ್ಪಾರಿತಂ ತ್ವಯಾ ।**
**ಆಹಾರಕಾಲಃ ಸಮ್ಪ್ರಾಪ್ತಃ ಕ್ರಿಯತಾಂ ಯದನನ್ತರಮ್ ॥೧೬॥**

"ಮಗಳೇ! ಯಥೋಪದಿಷ್ಟವಾದ ರೀತಿಯಲ್ಲಿ ಬಹುದುಸ್ತರವಾದ ಈ ತ್ರಿರಾತ್ರವ್ರತವನ್ನು ಸಾಂಗವಾಗಿ ಮುಗಿಸಿರುವೆ. ಉಪವಾಸದ ದಿನಗಳು ಕಳೆದನಂತರದಲ್ಲಿ ಪಾರಣೆಯನ್ನು ಮಾಡಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಪಾರಣೆಯನ್ನು ನೀನೀಗಲೇ ಮುಗಿಸಿ (ಊಟಮಾಡಿ) ಅನಂತರ ಮುಂದಿನ ಕಾರ್ಯವನ್ನು ಮಾಡಬಹುದಾಗಿದೆ. ಆದುದರಿಂದ, ನೀನಿನ್ನು ಊಟಮಾಡಮ್ಮ!"

**ಅಸ್ತಂ ಗತೇ ಮಯಾದಿತ್ಯೇ ಭೋಕ್ತವ್ಯಂ ಕೃತಕಾಮಯಾ ।**
**ಏಷ ಮೇ ಹೃದಿ ಸಂಕಲ್ಪಃ ಸಮಯಶ್ಚ ಕೃತೋ ಮಯಾ ॥೧೭॥**

"ತಾತ! ಸೂರ್ಯನು ಅಸ್ತಂಗತನಾದ ಮೇಲೆ ನನ್ನ ಮನಸ್ಸಿನ ಆಶಯವು ಪೂರೈಸಿದನಂತರ ನಾನು ಊಟಮಾಡುತ್ತೇನೆ. ನನ್ನ ಹೃದಯದ ಸಂಕಲ್ಪವೂ ಸಹ ಇದೇ ಆಗಿರುತ್ತದೆ. ನಾಲ್ಕನೆಯ ದಿನ ರಾತ್ರಿಯ ಪರ್ಯಂತವಾಗಿ ಊಟಮಾಡುವುದಿಲ್ಲವೆಂದು ನಾನು ಪ್ರತಿಜ್ಞೆಯನ್ನೂ ಮಾಡಿರುತ್ತೇನೆ."



ಯುಧಿಷ್ಠಿರ! ಸಾವಿತ್ರಿಯು ತನ್ನ ಊಟದ ವಿಷಯವಾಗಿ ಅತ್ತೆ-ಮಾವಂದಿರಿಗೆ ಹೀಗೆ ಹೇಳುತ್ತಿರುವಾಗಲೇ ಸತ್ಯವಾನನು ಕೊಡಲಿಯನ್ನು ಹೆಗಲಿನ ಮೇಲಿಟ್ಟುಕೊಂಡು ಫಲ-ಪುಷ್ಪಗಳನ್ನು ತರಲು ದಟ್ಟವಾದ ಮರ

ಗಳಿದ್ದ ಅರಣ್ಯಪ್ರದೇಶಕ್ಕೆ ಆಶ್ರಮದಿಂದ ಹೊರಟನು. ತನ್ನ ಪತಿಯು ಫಲ-ಪುಷ್ಪಗಳನ್ನು ತರಲು ಹೊರಟುದನ್ನು ಕಂಡು ಸಾವಿತ್ರಿಯು ಸತ್ಯವಾನನನ್ನು ಕುರಿತು ಹೇಳಿದಳು :

"ಪತಿದೇವ! ನೀನೊಬ್ಬನೇ ಇಂದು ಎಲ್ಲಿಗೂ ಹೋಗಬೇಡ. ಒಂದು ವೇಳೆ ಹೊರಗೆ ಹೋಗಲೇಬೇಕೆನ್ನುವೆಯಾದರೆ ನಾನೂ ಸಹ ನಿನ್ನ ಜೊತೆಯಲ್ಲಿಯೇ ಬರುವೆನು. ನಿನ್ನೊಬ್ಬನನ್ನೇ ಹೊರಗೆ ಕಳುಹಿಸಿಕೊಡಲು ಅಥವಾ ನಿನ್ನಿಂದ ಪ್ರತ್ಯೇಕವಾಗಿರಲು ನಾನಿಂದು ಇಚ್ಛಿಪಡುವುದಿಲ್ಲ."

ಸಾವಿತ್ರಿಯ ಮಾತುಗಳನ್ನು ಕೇಳಿ ಸತ್ಯವಾನನು ಆಶ್ಚರ್ಯಚಕಿತನಾದನು. ಸಾವಿತ್ರಿಯು ಎಂದೂ ಹೀಗೆ ಮಾತನಾಡಿದವಳಲ್ಲ. ಮೇಲಾಗಿ ಇಂದವಳು ಬಹಳ ಬಳಲಿದ್ದಾಳೆ. ಅಂತೆಯೇ ಸತ್ಯವಾನನು ಸಾವಿತ್ರಿಗೆ ಹೇಳಿದನು :

"ಸಾವಿತ್ರಿ! ನೀನು ಹಿಂದೆಂದೂ ಕಾಡಿಗೆ ಬಂದವಳಲ್ಲ. ಅರಣ್ಯಮಾರ್ಗವು ಬಹಳ ದುರ್ಗಮವಾದುದು. ಮೇಲಾಗಿ ನೀನಿಂದು ಮೂರು ದಿನಗಳ ವ್ರತೋಪವಾಸಗಳಿಂದ ಕೃಶಳಾಗಿರುವೆ. ಹೀಗಿರುವಾಗ ನನ್ನೊಡನೆ ಬರಲು ನಿನಗೆ ಹೇಗೆ ಸಾಧ್ಯವಾದೀತು?"

"ಪತಿದೇವ! ಉಪವಾಸದಿಂದಾಗಿ ನನಗೆ ಯಾವ ವಿಧವಾದ ಬಳಲಿಕೆಯೂ ಉಂಟಾಗಿಲ್ಲ. ನಿನ್ನೊಡನೆ ಅರಣ್ಯದಲ್ಲಿ ಸಂಚರಿಸುವುದರಿಂದ ನನಗೆ ಸ್ವಲ್ಪವಾದರೂ ಶ್ರಮವುಂಟಾಗುವುದಿಲ್ಲ. ನಿನ್ನೊಡನೆ ಬರಬೇಕೆಂದು ಉತ್ಸಾಹಿತಳಾಗಿ ಹೊರಟಿರುವ ನನ್ನನ್ನು ನೀನು ತಡೆಯುವುದು ಯುಕ್ತವಲ್ಲ. (ನನ್ನನ್ನು ಖಂಡಿತವಾಗಿಯೂ ಬರಬೇಡವೆನ್ನಬೇಡ.)"

"ಸಾವಿತ್ರಿ! ನೀನು ನನ್ನೊಡನೆ ಬರಲೇಬೇಕೆಂಬ ಉತ್ಸಾಹವುಳ್ಳವಳಾಗಿದ್ದರೆ ನಿನ್ನನ್ನು ನನ್ನ ಜೊತೆಯಲ್ಲಿಯೇ ಕರೆದೊಯ್ಯುತ್ತೇನೆ. ನಿನಗೆ ಪ್ರಿಯವಾದುದನ್ನೇ ಮಾಡುತ್ತೇನೆ. ಆದರೆ ನೀನು ಮಾತ್ರ ನನ್ನ ತಂದೆ-ತಾಯಿಗಳ ಅನುಮತಿಯನ್ನು ಪಡೆದು ನನ್ನೊಡನೆ ಬರಬೇಕು. ತಂದೆ-ತಾಯಿಗಳ ಇಚ್ಛೆಗೆ ವಿರುದ್ಧವಾಗಿ ಪತ್ನಿಯನ್ನು ಕಾಡಿಗೊಯ್ದನೆಂಬ ಅಪವಾದವು ಅಥವಾ ದೋಷವು ನನಗೆ ಪ್ರಾಪ್ತವಾಗಕೂಡದು."

ಯುಧಿಷ್ಠಿರ! ಸತ್ಯವಾನನು ಹೀಗೆಂದು ಹೇಳಲಾಗಿ ಸಾವಿತ್ರಿಯು

ಒಡನೆಯೇ ತನ್ನ ಅತ್ತೆ-ಮಾವಂದಿರ ಬಳಿಗೆ ಹೋಗಿ ಅವರಿಗೆ ನಮಸ್ಕರಿಸಿ ವಿನೀತಳಾಗಿ ನಿಂತು ಅತ್ತೆಗೆ ಹೇಳಿದಳು :

"ಅಮ್ಮ! ನನ್ನ ಪತಿಯಿಂದು ಫಲ-ಪುಷ್ಪಗಳ ಆಹರಣಕ್ಕಾಗಿ ಕಾಡಿಗೆ ಹೊರಟಿದ್ದಾನೆ. ಮಾವನವರ ಮತ್ತು ನಿಮ್ಮ ಅನುಜ್ಞೆಯನ್ನು ಪಡೆದು ನಾನೂ ಸಹ ನನ್ನ ಪತಿಯೊಡನೆ ಕಾಡಿಗೆ ಹೋಗಬೇಕೆಂದು ಇಚ್ಛಿಸಿದ್ದೇನೆ. ಇಂದು ಮಾತ್ರ ನಾನವರ ವಿರಹವನ್ನು ಸಹಿಸಿಕೊಳ್ಳಲು ಸಮರ್ಥಳಾಗಿಲ್ಲ. ನನ್ನ ಪತಿಯನ್ನು ಒಂದು ಕ್ಷಣಕಾಲವೂ ಬಿಟ್ಟಿರಕೂಡದೆಂದೇ ನನ್ನ ಮನಸ್ಸು ತವಕಿಸುತ್ತಿದೆ. ಅಥವಾ ನನಗಾಗಿ ನನ್ನ ಪತಿಯೇ ಆಶ್ರಮವನ್ನು ಬಿಟ್ಟು ಹೋಗದಿರಲೆಂದು ಹೇಳುವುದೂ ಸೂಕ್ತವಲ್ಲ. ಅವನೀಗ ಮಾವನವರು ಮಾಡಬೇಕಾಗಿರುವ ಅಗ್ನಿಹೋತ್ರದ ಸಲುವಾಗಿ ಸಮಿದ್ದರ್ಭೆಗಳನ್ನೂ ಫಲ-ಪುಷ್ಪಗಳನ್ನೂ ತರಲು ಹೊರಟಿದ್ದಾನೆ. ಬೇರಾವುದಾದರೂ ಕಾರಣದಿಂದ ನನ್ನ ಪತಿಯು ಹೊರಟಿದ್ದಿದ್ದರೆ ಅವನನ್ನಿಂದು ಹೋಗಬೇಡವೆಂದು ತಡೆದುಬಿಡಬಹುದಾಗಿತ್ತು. ಸಮಿದ್ದರ್ಭೆಗಳನ್ನು ತರುವ ಕಾರಣದಿಂದಾಗಿ ಅವನಿಂದು ಅರಣ್ಯಕ್ಕೆ ಹೋಗಲೇಬೇಕಾಗಿದೆ. ಅವನ ವಿರಹವೇದನೆಯನ್ನು ನಾನಿಂದು ಸಹಿಸಲಾರೆನಾದುದರಿಂದ ನಾನು ಸಹ ಅವನೊಡನೆ ಹೋಗಲು ಆಶಿಸಿದ್ದೇನೆ. ದಯಮಾಡಿ ನೀವು ನನ್ನನ್ನು ತಡೆಯಬೇಡಿರಿ. ನಾನು ಬಂದು ವರ್ಷವಾಗುತ್ತಾ ಬಂದರೂ ಎಂದೂ ಆಶ್ರಮವನ್ನು ಬಿಟ್ಟು ಹೊರಗೆ ಹೋಗಿಲ್ಲ. ಇಂದು ನನಗೆ ಅರಣ್ಯದ ಸೊಬಗನ್ನು ನೋಡಿ ಆನಂದಿಸಬೇಕೆಂಬ ಕುತೂಹಲವುಂಟಾಗಿದೆ."

ಸೊಸೆಯಾಡಿದ ಮಾತುಗಳನ್ನು ಕೇಳಿ ದ್ಯುಮತ್ಸೇನನು ಮನಸ್ಸಿನಲ್ಲಿಯೇ ಯೋಚಿಸಿದನು :

'ಅಶ್ವಪತಿಯು ಮಗಳಾದ ಸಾವಿತ್ರಿಯನ್ನು ಸತ್ಯವಾನನಿಗೆ ವಿವಾಹ ಮಾಡಿಕೊಟ್ಟ ದಿನದಿಂದ ಅರ್ಥಾತ್ ಇವಳು ನನ್ನ ಸೊಸೆಯಾದ ದಿನದಿಂದ ಇಂದಿನವರೆಗೂ ತನಗಿಂತಹುದು ಬೇಕೆಂದಾಗಲೀ, ತಾನೆಲ್ಲಿಗಾದರೂ ಹೋಗಬೇಕೆಂದಾಗಲೀ–ಸಾವಿತ್ರಿಯು ನನ್ನನ್ನು ಪ್ರಾರ್ಥಿಸಿದ ಸ್ಮರಣೆಯೂ ನನಗಿರುವುದಿಲ್ಲ. ಒಂದು ದಿನವಾದರೂ ಇವಳು ತನಗಿಂತಹ ಆಸೆಯಿದೆಯೆಂಬುದನ್ನೇ ವ್ಯಕ್ತಪಡಿಸಿದವಳಲ್ಲ. ಇಂದು ಮಾತ್ರ ಇವಳು ಪತಿಯೊಡನೆ ಹೋಗಬೇಕೆಂಬ

ಇಚ್ಛೆಯನ್ನು ವ್ಯಕ್ತಪಡಿಸಿದ್ದಾಳೆ. ತನ್ನ ಇಚ್ಛೆಯಂತೆಯೇ ಇವಳಿಂದು ಪತಿಯೊಡನೆ ಅರಣ್ಯಕ್ಕೆ ಹೋಗಿಬರಲಿ.' ಈ ಪ್ರಕಾರವಾಗಿ ಯೋಚಿಸಿ ಸಾವಿತ್ರಿಗೆ ಹೇಳಿದನು–"ರಾಜಪುತ್ರಿ! ನೀನವನ ಸಂಗಡ ಹೋಗಬಹುದು. ಆದರೆ ಹಾದಿಯಲ್ಲಿ ಯಾವ ವಿಧವಾದ ಪ್ರಮಾದವೂ ಆಗದಂತೆಯೂ ಮತ್ತು ನನ್ನ ಮಗನು ಮಾಡಬೇಕಾದ ಕರ್ತವ್ಯಕ್ಕೆ ಲೋಪವಾಗದಂತೆಯೂ ನೋಡಿಕೊಳ್ಳುವುದು ನಿನ್ನ ಕರ್ತವ್ಯವಾಗಿದೆ."

ಯುಧಿಷ್ಠಿರ! ಪತಿಯೊಡನೆ ಅರಣ್ಯಕ್ಕೆ ಹೋಗಲು ತನ್ನ ಅತ್ತೆ-ಮಾವಂದಿರ ಅನುಮತಿಯು ಸಿಕ್ಕಿದುದಕ್ಕಾಗಿ ಸಂತಸಗೊಂಡವಳಂತೆ ನಗುಮುಖದಿಂದ ಗಂಡನ ಹಿಂದೆ ಹೊರಟಿದ್ದರೂ ಸಾವಿತ್ರಿಯ ಹೃದಯದಲ್ಲಿ ಅಗಾಧವಾದ ಸಂಕಟವಡಗಿತ್ತು. ವಿಶಾಲಾಕ್ಷಿಯಾದ ಸಾವಿತ್ರಿಯು ವಿಚಿತ್ರತರವಾದ ಅರಣ್ಯಪ್ರದೇಶಗಳನ್ನು ನೋಡುತ್ತಾ ತನ್ನ ಪತಿಯೊಡನೆ ನಡೆದು ಹೋಗುತ್ತಿದ್ದಳು. ಸತ್ಯವಾನನೂ ಸಹ ಸಾವಿತ್ರಿಗೆ ಕಾಡಿನ ಮಧ್ಯದಲ್ಲಿದ್ದ ಸಣ್ಣ-ಸಣ್ಣ ನದಿಗಳನ್ನೂ, ಚಿಲುಮೆಗಳನ್ನೂ, ಫಲ-ಪುಷ್ಪಭರಿತವಾದ ನಾನಾ ವಿಧವಾದ ವೃಕ್ಷಗಳನ್ನೂ ತೋರಿಸುತ್ತಾ ಹೋಗುತ್ತಿದ್ದನು. ಪತಿಯು ಹೇಳುತ್ತಿದ್ದ ಮಾತಿನಲ್ಲಿ ಸಾವಿತ್ರಿಯು ಆಸಕ್ತಿಯನ್ನು ತೋರಿ ಅವನು ತೋರಿಸುತ್ತಿದ್ದ ಮರ-ಗಿಡ-ಬಳ್ಳಿಗಳನ್ನು ನೋಡುತ್ತಿದ್ದರೂ ಅವಳ ಗಮನವೆಲ್ಲವೂ ತನ್ನ ಪತಿಯ ಕಡೆಗೇ ಇರುತ್ತಿತ್ತು. ಪತಿಯ ಮುಖದಲ್ಲಿ, ಚರ್ಯೆಯಲ್ಲಿ ಏನಾದರೊಂದು ವ್ಯತ್ಯಾಸವುಂಟಾಯಿತೇ ಎಂಬುದನ್ನು ಕ್ಷಣ-ಕ್ಷಣಕ್ಕೂ ಪರಿಶೀಲಿಸುತ್ತಿದ್ದಳು. ಅಂದು ಪತಿಯು ತನ್ನೊಡನೆ ಸರಸಸಲ್ಲಾಪಮಾಡುತ್ತಿದ್ದರೂ ಸಾವಿತ್ರಿಯು ನಾರದರ ನುಡಿಯನ್ನು ಸ್ಮರಿಸಿ ತನ್ನ ಪತಿಯಾಗಲೇ ಸತ್ತುಹೋಗಿರುವನೋ ಎಂದೊಮ್ಮೆ ಭ್ರಮಿಸುವಳು. ಹೃದಯವನ್ನು ಎರಡಾಗಿಮಾಡಿಕೊಂಡು ಒಂದು ಹೃದಯದಿಂದ ಪತಿಯೊಡನೆ ಸರಸ- ಸಲ್ಲಾಪಗಳಲ್ಲಿ ಉತ್ಸುಕತೆಯನ್ನು ತೋರುತ್ತಾ, ಮತ್ತೊಂದು ಹೃದಯದಿಂದ ಪತಿಯ ಅವಸಾನವನ್ನೂ ಮತ್ತು ಮುಂದಿನ ಪರಿಣಾಮವನ್ನೂ ಗಾಢವಾಗಿ ಸಮಾಲೋಚಿಸುತ್ತಾ, ಸತ್ಯವಾನನ ಹಿಂದೆಯೇ ಸಾವಿತ್ರಿಯು ನಡೆದುಹೋಗುತ್ತಿದ್ದಳು.

೨೯೬ನೆಯ ಅಧ್ಯಾಯವು ಮುಗಿಯಿತು.

## ಸಾವಿತ್ರೀ-ಯಮಧರ್ಮರ ಸಂವಾದ : ಸಾವಿತ್ರಿಯ ಮಾತಿನಿಂದ ಸಂತುಷ್ಟನಾದ ಯಮನು ಸಾವಿತ್ರಿಗೆ ಅನೇಕವರಗಳನ್ನು ಕೊಟ್ಟುದು : ಮೃತನಾದ ಸತ್ಯವಾನನನ್ನೂ ಬದುಕಿಸಿಕೊಟ್ಟುದು : ಸಂತೋಷಗೊಂಡ ಸಾವಿತ್ರಿಯು ಸತ್ಯವಾನನೊಡನೆ ಆಶ್ರಮಕ್ಕೆ ಹಿಂದಿರುಗಿದುದು

ಯುಧಿಷ್ಠಿರ! ವೀರನಾದ ಸತ್ಯವಾನನು ಪತ್ನಿಯೊಡನೆ ಅರಣ್ಯ ಮಾರ್ಗದಲ್ಲಿ ಸ್ವಲ್ಪದೂರ ಹೋದನಂತರ ಫಲಭರಿತವಾಗಿದ್ದ ನಾನಾ ಜಾತಿಯ ವೃಕ್ಷಗಳಿಂದ ಮಾಗಿದ್ದ ಹಣ್ಣುಗಳನ್ನು ಕೊಯ್ದು ಬುಟ್ಟಿಗೆ ತುಂಬಿ ಕೊಂಡನು. ಕೊಂಡೊಯ್ದಿದ್ದ ಬುಟ್ಟಿಯು ಹಣ್ಣುಗಳಿಂದ ಪೂರ್ಣವಾದ ಮೇಲೆ ಸೌದೆಗಾಗಿ ವೃಕ್ಷಗಳಲ್ಲಿ ಒಣಗಿಹೋಗಿದ್ದ ರೆಂಬೆಗಳನ್ನು ಕತ್ತರಿಸುತ್ತಿದ್ದಾಗ ಅವನ ಶರೀರಾದ್ಯಂತವಾಗಿ ಬೆವರಿತು. ಅತಿಯಾದ ಶ್ರಮದಿಂದಾಗಿ ಸತ್ಯವಾನನಿಗೆ ತಲೆಯಲ್ಲಿ ನೋವು ಕಾಣಿಸಿಕೊಂಡಿತು. ಅತೀವವೇದನೆಯಿಂದ ಪೀಡಿತನಾದ ಸತ್ಯವಾನನು ಸೌದೆ ಕಡಿಯುವುದನ್ನು ಅಲ್ಲಿಗೇ ನಿಲ್ಲಿಸಿ ಸಾವಿತ್ರಿಯ ಬಳಿಗೆ ಬಂದು ಹೇಳಿದನು :

"ಸಾವಿತ್ರಿ! ಸೌದೆಯನ್ನು ಕಡಿದ ಆಯಾಸದಿಂದಾಗಿ ನನ್ನ ತಲೆಯು ನೋಯುತ್ತಿದೆ. ಹೃದಯದಲ್ಲಿ ದಾರುಣವಾದ ವೇದನೆಯಾಗುತ್ತಿದೆ. ಮಿತ ಭಾಷಿಣಿಯೇ! ನನ್ನ ಶರೀರವು ಅಸ್ವಸ್ಥವಾಗಿದೆಯೆಂದು ಭಾವಿಸಿದ್ದೇನೆ. ಅನೇಕಾನೇಕ ಶೂಲಗಳಿಂದ ತನ್ನ ತಲೆಯ ಸುತ್ತಲೂ ಯಾರಾದರೂ ಚುಚ್ಚು ತ್ತಿರುವರೋ–ಎಂಬಂತೆ ನನಗೆ ಭಾಸವಾಗುತ್ತಿದೆ. ನನಗೀಗ ನಿಂತುಕೊಳ್ಳಲು ಕೂಡ ಸಾಧ್ಯವಾಗುತ್ತಿಲ್ಲ. ಸ್ವಲ್ಪಕಾಲ ಮಲಗಬೇಕೆನ್ನಿಸುತ್ತದೆ."

ಯುಧಿಷ್ಠಿರ! ಸಾವಿತ್ರಿಯು ನಿರೀಕ್ಷಿಸಿದ್ದ ಕಾಲವು ಸನ್ನಿಹಿತವಾಯಿತು. ಸಾವಿತ್ರಿಯು ವರ್ಷದಿಂದಲೂ ಆ ವಿಷಘಳಿಗೆಯನ್ನು ನಿರೀಕ್ಷಿಸುತ್ತಲೇ ಇದ್ದ ಳಾದ್ದರಿಂದ ಅಧೀರಳಾಗಲಿಲ್ಲ. ಹೃದಯವು ಡವ-ಡವನೆ ಬಡಿದುಕೊಳ್ಳು ತ್ತಿದ್ದರೂ ಸಾವಿತ್ರಿಯು ತನ್ನ ಪತಿಯ ಸಮೀಪಕ್ಕೆ ಧಾವಿಸಿ, ಅವನ ಕೈಹಿಡಿದು ಮೆಲ್ಲನೆ ಕೆಳಗೆ ಕೂರಿಸಿ, ತಾನೂ ಕುಳಿತು ತನ್ನ ತೊಡೆಯ ಮೇಲೆ ಅವನನ್ನು

ಮಲಗಿಸಿಕೊಂಡಳು. ನಾರದರ ಮಾತನ್ನು ಪ್ರತಿಕ್ಷಣದಲ್ಲಿಯೂ ಸ್ಮರಿಸುತ್ತಾ ಪತಿಯ ಪ್ರಾಣೋತ್ಕ್ರಮಣದ ದಿನ-ಮುಹೂರ್ತ-ಕ್ಷಣಗಳನ್ನು ಎಣಿಕೆ ಮಾಡುತ್ತಿದ್ದಳು. ಮರುಕ್ಷಣದಲ್ಲಿಯೇ ಕೆಂಪಾದ ವಸ್ತ್ರವನ್ನುಟ್ಟು, ತಲೆಯಲ್ಲಿ ಕಿರೀಟವನ್ನು ಧರಿಸಿ, ದೃಢಕಾಯನಾದ, ಸೂರ್ಯನಂತೆಯೇ ಬಹುಪ್ರಕಾಶ



ಮಾನನಾಗಿದ್ದ ವ್ಯಕ್ತಿಯೊಬ್ಬನನ್ನು ಅವಳು ಕಂಡಳು. ಅವನ ಬಣ್ಣವು ಕಪ್ಪಾಗಿದ್ದಿತು. ಕಣ್ಣುಗಳು ಕೆಂಪಾಗಿದ್ದುವು. ಕೈಯಲ್ಲಿ ಪಾಶವಿದ್ದಿತು. ನೋಡಲು ಬಹುಭಯಂಕರನಾಗಿ ಕಾಣುತ್ತಿದ್ದನು. ಅವನು ಸತ್ಯವಾನನ ಪಾರ್ಶ್ವದಲ್ಲಿ ನಿಂತು ಅವನನ್ನೇ ಕ್ರೂರದೃಷ್ಟಿಯಿಂದ ನೋಡುತ್ತಿದ್ದನು.

ಅಂತಹ ಭಯಂಕರಾಕಾರನಾದ ಪುರುಷನನ್ನು ನೋಡಿ ಸಾವಿತ್ರಿಯು

ತೊಡೆಯ ಮೇಲಿದ್ದ ತನ್ನ ಪತಿಯ ತಲೆಯನ್ನು ಮೆಲ್ಲನೆ ನೆಲದ ಮೇಲಿಟ್ಟು ಬದ್ಧಾಂಜಲಿಯಾಗಿ ಅವನನ್ನು ಕುರಿತು ಹೇಳಿದಳು. ಅವಳ ಹೃದಯವು ತರ-ತರನೆ ನಡುಗುತ್ತಿದ್ದಿತು.

"ಅಮಾನುಷವಾದ ನಿನ್ನ ಈ ಆಕಾರವನ್ನು ನೋಡಿ ನಾನು ನಿನ್ನನ್ನು ಒಬ್ಬ ದೇವತೆಯೆಂದೇ ಭಾವಿಸಿದ್ದೇನೆ. ದೇವೇಶ! ನೀನು ಯಾರು? ಮತ್ತು ಇಲ್ಲಿಗೆ ಯಾವ ಕಾರ್ಯಕ್ಕಾಗಿ ಆಗಮಿಸಿರುವೆ?–ಎಂಬುದನ್ನು ದಯಮಾಡಿ ಹೇಳು."

"ಸಾವಿತ್ರಿ! ನೀನು ಯಾವಾಗಲೂ ಪತಿಸೇವಾಪರಾಯಣೆಯಾಗಿರುವೆ. ಮೇಲಾಗಿ ತಪಸ್ಸಿನಲ್ಲಿಯೂ ನಿಷ್ಠಳಾಗಿರುವೆ. ಈ ಕಾರಣಗಳಿಂದಾಗಿ ನಾನು ನಿನ್ನೊಡನೆ ನೇರವಾಗಿಯೇ ಮಾತನಾಡುತ್ತೇನೆ. ಮಂಗಳಾಂಗಿ! ನಾನು ಯಮನು. ದ್ಯುಮತ್ಸೇನಮಹಾರಾಜನ ಮಗನಾದ ಮತ್ತು ನಿನ್ನ ಪತಿಯಾದ ಸತ್ಯವಾನನು ತನ್ನ ಆಯುಷ್ಯವನ್ನು ಇಂದಿಗೆ ಕಳೆದುಕೊಂಡಿರುತ್ತಾನೆ. ಆದುದರಿಂದ ನಾನೀಗ ಇವನನ್ನು ನನ್ನೀ ಪಾಶಗಳಿಂದ ಸೆಳೆದೊಯ್ಯಲು ಇಲ್ಲಿಗೆ ಆಗಮಿಸಿದ್ದೇನೆ. ಇದೇ ನಾನು ಮಾಡಬೇಕಾದ ಕಾರ್ಯವೆಂಬುದನ್ನು ನೀನು ತಿಳಿಯುವವಳಾಗು. (ಇದು ನನ್ನ ಕರ್ತವ್ಯವಾಗಿದೆ.)"

"ಪ್ರಭುವೇ! ನಾನಿದುವರೆಗೂ ಕ್ಷೀಣಾಯುಷ್ಯರಾದ ಮಾನವರನ್ನು ಒಯ್ಯಲು ನಿನ್ನ ಕಿಂಕರರು ಮಾತ್ರ ಬರುವರೆಂದು ಕೇಳಿದ್ದೆನು. ಆದರೆ ಈಗ ನನ್ನ ಪತಿಯನ್ನು ಒಯ್ಯಲು ಸಾಕ್ಷಾತ್ ನೀನೇ ಬಂದಿರುವ ಕಾರಣವೇನೆಂಬುದನ್ನು ಕೇಳಬಹುದೇ?"

ಯುಧಿಷ್ಠಿರ! ಸಾವಿತ್ರಿಯು ಹೀಗೆಂದು ಪ್ರಶ್ನಿಸಲಾಗಿ ಯಮನು ತಾನೇ ಬಂದುದರ ಕಾರಣವನ್ನು ಯಥಾವತ್ತಾಗಿ ನಿರೂಪಿಸಿದನು :

**ಅಯಂ ಚ ಧರ್ಮಸಂಯುಕ್ತೋ ರೂಪವಾನ್ಗುಣಸಾಗರಃ ।**
**ನಾರ್ಹೋ ಮತ್ಪುರುಷೈರ್ನೇತುಮತೋಽಸ್ಮಿ ಸ್ವಯಮಾಗತಃ ॥೧೬॥**

"ಈ ನಿನ್ನ ಪತಿಯು ಧರ್ಮಾತ್ಮನು, ರೂಪವಂತನು ಮತ್ತು ಸಕಲ ಸದ್ಗುಣಗಳಿಗೂ ಸಮುದ್ರಪ್ರಾಯನು. ಇಂತಹ ಸರ್ವಗುಣಸಂಪನ್ನನನ್ನು ನನ್ನ ಕಿಂಕರರು ಸೆಳೆದೊಯ್ಯುವುದು ಸರ್ವಥಾ ಯೋಗ್ಯವಲ್ಲ. ಆದುದರಿಂದ ನಾನೇ ಬಂದಿರುತ್ತೇನೆ."

ಹೀಗೆಂದು ಹೇಳಿ ಯಮನು ತಾನು ಕೈಯಲ್ಲಿ ಹಿಡಿದಿದ್ದ ಪಾಶವನ್ನು ಸತ್ಯವಾನನ ಮೇಲೆ ಬೀಸಿ ಆ ಪಾಶದ ಮೂಲಕವಾಗಿ ಅಂಗುಷ್ಠಮಾತ್ರನಾದ, ಪಾಶಪರವಶನಾದ ಪುರುಷನನ್ನು ಸತ್ಯವಾನನ ದೇಹದಿಂದ ಬಲಾತ್ಕಾರವಾಗಿ ಹೊರಗೆ ಸೆಳೆದನು. ಅಂಗುಷ್ಠಮಾತ್ರನಾದ ಪುರುಷನು ಹೊರಬಂದೊಡನೆಯೇ ಸತ್ಯವಾನನ ಶರೀರದಲ್ಲಿ ಉಸಿರಾಡುವುದು ನಿಂತುಹೋಯಿತು. ಶರೀರವು ತೇಜೋಹೀನವಾಯಿತು. ಅಂಗಾಂಗಗಳ ಚೇಷ್ಟೆಗಳೂ ಒಮ್ಮೆಯೇ ನಿಂತುಹೋದುವು. ಸತ್ಯವಾನನ ಶರೀರದಿಂದ ಹೊರತೆಗೆದ ಅಂಗುಷ್ಠಮಾತ್ರ ಪುರುಷನನ್ನು ಪಾಶದಲ್ಲಿ ಬಂಧಿಸಿದ ಯಮನು ದಕ್ಷಿಣದಿಕ್ಕಿಗೆ ಅಭಿಮುಖವಾಗಿ ಹೊರಟನು. ಪತಿಯ ಪ್ರಾಣೋತ್ಕ್ರಮಣದಿಂದ ಬಹುದುಃಖಿತೆಯಾದ ಸಾವಿತ್ರಿಯು ಯಮನ ಹಿಂದೆಯೇ ಹೊರಟಳು.

ಸಾವಿತ್ರಿಯು ತನ್ನನ್ನೇ ಅನುಸರಿಸಿ ಬರುತ್ತಿರುವುದನ್ನು ಕಂಡು ಯಮನು ಅವಳನ್ನು ಕುರಿತು ಹೇಳಿದನು : "ಸಾವಿತ್ರಿ! ಹಿಂದಿರುಗುವವಳಾಗು. ಆಶ್ರಮಕ್ಕೆ ಹೋಗಿ ನಿನ್ನ ಗಂಡನ ಉತ್ತರಕ್ರಿಯೆಗಳನ್ನು ನಡೆಸು.

ಪತಿಯ ಅವಸಾನಪರ್ಯಂತವಾಗಿ ಅವನಿಗೆ ಮಾಡಿದ ಸೇವೆಯಿಂದಲೇ ನೀನು ಭರ್ತೃವಿನ ಋಣವನ್ನು ತೀರಿಸಿದಂತಾಗಿದೆ. ನೀನೀಗ ಎಲ್ಲಿಯವರೆಗೆ ನನ್ನ ಜೊತೆಯಲ್ಲಿ ಬರಲು ಸಾಧ್ಯವೋ ಅಲ್ಲಿಯವರೆಗೂ ಬಂದುಬಿಟ್ಟಿರುವೆ. ಇನ್ನು ಮುಂದೆ ನಿನಗೆ ನನ್ನನ್ನು ಅನುಸರಿಸಿ ಬರುವ ಸಾಧ್ಯತೆಯಿಲ್ಲ. ಆದುದರಿಂದ ಒಡನೆಯೇ ಆಶ್ರಮಕ್ಕೆ ಹೋಗು. ನನ್ನನ್ನು ಹಿಂಬಾಲಿಸುವುದನ್ನು ನಿಲ್ಲಿಸು."

ಅದಕ್ಕುತ್ತರವಾಗಿ ಸಾವಿತ್ರಿಯು ಹೇಳಿದಳು :

**ಯತ್ರ ಮೇ ನೀಯತೇ ಭರ್ತಾ ಸ್ವಯಂ ವಾ ಯತ್ರ ಗಚ್ಛತಿ ।**
**ಮಯಾ ಚ ತತ್ರ ಗನ್ತವ್ಯಮೇಷ ಧರ್ಮಃ ಸನಾತನಃ ॥೨೦॥**

"ನನ್ನ ಪತಿಯು ಎಲ್ಲಿಗೆ ಸೆಳೆದೊಯ್ಯಲ್ಪಡುತ್ತಾನೆಯೋ ಅಥವಾ ನನ್ನ ಪತಿಯು ಸ್ವೇಚ್ಛೆಯಿಂದಲೇ ಎಲ್ಲಿಗೆ ಹೋಗುತ್ತಾನೆಯೋ ನಾನೂ ಸಹ ಅಲ್ಲಿಗೆ ಹೋಗಲೇಬೇಕು. ಎಲ್ಲ ಕಾಲಗಳಲ್ಲಿಯೂ ಪತಿಯನ್ನನುಸರಿಸಿ ಪತ್ನಿಯು ಇರಲೇಬೇಕಾದ ಈ ಧರ್ಮವು ಸನಾತನಧರ್ಮವಾಗಿರುವುದು.

**ತಪಸಾ ಗುರುಭಕ್ತ್ಯಾ ಚ ಭರ್ತುಃ ಸ್ನೇಹಾದ್ವ್ರತೇನ ಚ ।**
**ತವ ಚೈವ ಪ್ರಸಾದೇನ ನ ಮೇ ಪ್ರತಿಹತಾ ಗತಿಃ ॥೨೨॥**

ತಪಸ್ಸಿನಿಂದಲೂ, ಗುರುಜನರ ಶುಶ್ರೂಷೆಯಿಂದಲೂ, ನನ್ನ ಪತಿಯಲ್ಲಿ ನಾನಿಟ್ಟುಕೊಂಡಿರುವ ಅಚಲವಾದ ಪ್ರೀತಿಯ ಕಾರಣದಿಂದಲೂ, ಸಂಕಟನಿವಾರಕವಾದ ವ್ರತಾಚರಣೆಯಿಂದಲೂ, ಎಲ್ಲಕ್ಕಿಂತ ಮಿಗಿಲಾಗಿ ನಿನ್ನ ಪ್ರಸಾದದಿಂದಲೂ ನನ್ನ ಗಮನವು ಅಪ್ರತಿಹತವಾಗಿದೆ. ನನ್ನ ಮಾರ್ಗದಲ್ಲಿ ಯಾವ ಪ್ರತಿಬಂಧಕವೂ ಕಾಣುತ್ತಿಲ್ಲ. ಯಾವ ವಿಧವಾದ ಪ್ರತಿಬಂಧಕವೂ ಇಲ್ಲದೇ ನಿನ್ನನ್ನನುಸರಿಸಿ ಬರುತ್ತಿದ್ದೇನೆ.

**ಪ್ರಾಹುಃ ಸಾಪ್ತಪದಂ ಮೈತ್ರಂ ಬುಧಾಸ್ತತ್ತ್ವಾರ್ಥದರ್ಶಿನಃ ।**
**ಮಿತ್ರತಾಂ ಚ ಪುರಸ್ಕೃತ್ಯ ಕಿಂಚಿದ್ವಕ್ಷ್ಯಾಮಿ ತಚ್ಛೃಣು ॥೨೩॥**

ಯಮದೇವ! ಕೇವಲ ಏಳು ಹೆಜ್ಜೆಗಳು ಜೊತೆಯಲ್ಲಿ ನಡೆಯುವುದರಿಂದಲೇ ಮಿತ್ರತ್ವದ ಸಿದ್ಧಿಯಾಗುವುದೆಂದು ತತ್ತ್ವಾರ್ಥದರ್ಶಿಗಳಾದ ವಿದ್ವಾಂಸರು ಹೇಳುತ್ತಾರೆ. ಈಗ ನಾನು ನಿನ್ನೊಡನೆ ಏಳು ಹೆಜ್ಜೆಗಳನ್ನತಿಕ್ರಮಿಸಿ ನಡೆದಿರುತ್ತೇನೆ. ಆದುದರಿಂದ ನಿನ್ನೊಡನೆ ನನಗೆ ಮೈತ್ರಿಯು ಸಿದ್ಧವಾದಂತಾಯಿತು. ಈ ಮೈತ್ರಿಯನ್ನೇ ಮುಂದುಮಾಡಿಕೊಂಡು ನಿನ್ನೊಡನೆ ಒಂದೆರಡು ವಿಷಯಗಳನ್ನು ಹೇಳಬೇಕೆಂದಿರುತ್ತೇನೆ ; ದಯಮಾಡಿ ಆಲಿಸುವವನಾಗು.

**ನಾನಾತ್ಮವನ್ತಸ್ತು ವನೇ ಚರನ್ತಿ**
**ಧರ್ಮಂ ಚ ವಾಸಂ ಚ ಪರಿಶ್ರಮಂ ಚ ।**
**ವಿಜ್ಞಾನತೋ ಧರ್ಮಮುದಾಹರನ್ತಿ**
**ತಸ್ಮಾತ್ಸನ್ತೋ ಧರ್ಮಮಾಹುಃ ಪ್ರಧಾನಮ್ ॥೨೪॥**

ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳದಿರುವವರಿಗೆ ಅರಣ್ಯದಲ್ಲಿ ವಾಸಮಾಡಿಕೊಂಡು ಧರ್ಮಪಾಲನೆ-ಗುರುಕುಲವಾಸ-ಕಷ್ಟತರವಾದ ತಪಸ್ಸುಗಳನ್ನು ಆಚರಿಸಲು ಸಾಧ್ಯವಾಗುವುದಿಲ್ಲ. ಇಂದ್ರಿಯನಿಗ್ರಹಿಗಳಿಗೆ ಮಾತ್ರವೇ ಇದು ಸಾಧ್ಯ. ಮಹಾತ್ಮರು ವಿವೇಕ-ವಿಚಾರಗಳಿಂದ ಧರ್ಮಾಚರಣೆಮಾಡುತ್ತಾರೆ. ಆತ್ಮಜ್ಞಾನದ ಮೂಲಕವಾಗಿ ಧರ್ಮವೆಂದರೇನೆಂಬುದನ್ನು ಉದಹರಿಸುತ್ತಾರೆ. ಇಂತಹ ವಿಜ್ಞಾನಮೂಲವಾದ ಧರ್ಮವನ್ನೇ ಸಂತರು ಪ್ರಧಾನ

ಭೂತವಾದ ಧರ್ಮವೆಂದು ಹೇಳುತ್ತಾರೆ. (ಗೃಹಸ್ಥರಾದವರು ಆಜ್ಯ, ಚರು, ಸಮಿತ್ತು–ಇವೇ ಮೊದಲಾದ ಸಂಭಾರಗಳಿಂದ ಯಜ್ಞ-ಯಾಗಾದಿಗಳನ್ನು ಮಾಡುತ್ತಾರೆ. ಆ ಯಜ್ಞ-ಯಾಗಾದಿಗಳು ಪರಮಪುರುಷನ ಸಂತೃಪ್ತಿಗಾಗಿಯೇ ಆಗಿರುತ್ತವೆ. ಪರಮಪುರುಷನು ತಮ್ಮೊಳಗೇ ಇದ್ದಾನೆಂಬ ನಿಶ್ಚಯ ತತ್ತ್ವದ ಸಂಸ್ಕಾರವು ಆ ಯಜ್ಞ-ಯಾಗಾದಿಗಳಿಂದಲೂ, ವೈಶ್ವದೇವೌಪಾಸನಾದಿಗಳಿಂದಲೂ ಉಂಟಾಗಬಹುದಾಗಿದೆ. ಆತ್ಮನಲ್ಲಿರುವ ಪರತತ್ತ್ವವನ್ನು ಕಾಣುವುದೇ ಎಲ್ಲ ಕ್ರಿಯೆಗಳ ಮುಖ್ಯಧ್ಯೇಯವೆಂದು ಜ್ಞಾನ-ವಿಜ್ಞಾನವನ್ನರಿತವರು ಹೇಳುತ್ತಾರೆ. ನಾವು ಸಂಧ್ಯಾವಂದನೆಯನ್ನು ಮಾಡುವಾಗ ಗಾಯತ್ರೀದೇವಿಯನ್ನು ಪ್ರತಿಮೆ–ಮುಂತಾದುವಲ್ಲಿ ಆವಾಹನೆಮಾಡಿ ಪೂಜಿಸಲು ಹೋಗುವುದಿಲ್ಲ. 'ಗಾಯತ್ರೀ ದೇವತಾ' ಎಂಬುದಾಗಿ ಹೇಳಿ ಆ ದೇವತೆಯನ್ನು ನಮ್ಮ ಹೃದಯದಲ್ಲಿಯೇ ಧಾರಣೆಮಾಡಿಕೊಳ್ಳುತ್ತೇವೆ. ಅಂಗನ್ಯಾಸ-ಕರನ್ಯಾಸಗಳ ಮೂಲಕವಾಗಿ ಆ ದೇವತೆಯನ್ನು ನಮ್ಮ ಹೃದಯದಲ್ಲಿಯೇ ಪ್ರತಿಷ್ಠಿಸಿ ಧ್ಯಾನಿಸಿ ಜಪಮಾಡುತ್ತೇವೆ. ಎಂದರೆ ಇವೆಲ್ಲವೂ ಪ್ರಯೋಗಭಾಗವಾಯಿತು. ಇದೂ ಒಂದು ಧರ್ಮ. ಇದನ್ನು ಪ್ರತಿಯೊಬ್ಬ ದ್ವಿಜನೂ ಮಾಡಲೇಬೇಕು. ತ್ರಿಕಾಲಸಂಧ್ಯಾವಂದನೆಯನ್ನು ಮಾಡಲೇಬೇಕೆಂದು ವಿಧಿಸಿದ ನಮ್ಮ ಹಿಂದಿನ ಮಹರ್ಷಿಗಳ ಆಶಯವು ಕೇವಲ ಇಷ್ಟಕ್ಕೇ ಸೀಮಿತವಾದುದಲ್ಲ. ಗಾಯತ್ರೀ ಜಪದಿಂದಲೂ ಮತ್ತು ಇನ್ನೂ ಅನೇಕ ಮಹಾಮಂತ್ರಗಳ ಜಪಗಳಿಂದಲೂ ಮಹತ್ತರವಾದ ಫಲವನ್ನು ಪಡೆಯಬಹುದೆಂಬುದು ನಿಜವಾದರೂ ಸಂಧ್ಯಾವಂದನೆಯ ಸಂಸ್ಕಾರದಿಂದ ಹೃದಯಾಂತರ್ಗತಳಾಗಿರುವ ಗಾಯತ್ರಿಯನ್ನು ಅರ್ಥಾತ್ ಪರಬ್ರಹ್ಮವಸ್ತುವನ್ನು ಕಂಡುಕೊಳ್ಳಬೇಕೆಂಬುದೇ ಮಹರ್ಷಿಗಳ ಮುಖ್ಯವಾದ ಆಶಯವಾಗಿದ್ದಿತು. ಇದನ್ನವರು ನುಡಿ-ನುಡಿಗಳಲ್ಲಿಯೂ ಘೋಷಿಸಿದ್ದಾರೆ. ಇದನ್ನೇ ಅವರು ಪ್ರಧಾನಭೂತವಾದ ಧರ್ಮವೆಂದೂ ಕರೆದಿದ್ದಾರೆ. ಪರಬ್ರಹ್ಮವಸ್ತುವನ್ನು ನಮ್ಮ ಹೃನ್ಮಂದಿರದಲ್ಲಿ ಕಾಣಬೇಕಾದ ಸಂಸ್ಕಾರಕ್ಕಾಗಿ ನಾವು ಸಂಧ್ಯಾವಂದನಾದಿಗಳನ್ನೂ, ಯಜ್ಞ-ಯಾಗಾದಿಗಳನ್ನೂ ಮಾಡಬೇಕು. ನಮ್ಮೆಲ್ಲ ಕರ್ಮಗಳೂ, ಶಾಸ್ತ್ರ-ಸಂಪ್ರದಾಯಗಳೂ, ಆಚಾರ-ವ್ಯವಹಾರಗಳೂ ಪರಬ್ರಹ್ಮವಸ್ತುವಿನ ಕಡೆಗೆ ಬೆರಳು ತೋರಿ ಸೂಚಿಸುವ ಕೈಮರಗಳಾಗಿವೆ. ಆದುದರಿಂದಲೇ ಪರಬ್ರಹ್ಮವಸ್ತುವನ್ನು

ಕಾಣುವುದು–ಪ್ರಧಾನಧರ್ಮವೆಂದೂ, ತತ್ಸೂಚಕವಾದ ಕರ್ಮಗಳು-ಧರ್ಮ ವೆಂದೂ ಜ್ಞಾನ-ವಿಜ್ಞಾನಗಳನ್ನು ತಿಳಿದ ಮಹರ್ಷಿಗಳು ಹೇಳುತ್ತಾರೆ.)

**ಏಕಸ್ಯ ಧರ್ಮೇಣ ಸತಾಂ ಮತೇನ**
**ಸರ್ವೇ ಸ್ಮ ತಂ ಮಾರ್ಗಮನುಪ್ರಪನ್ನಾಃ ।**
**ಮಾ ವೈ ದ್ವಿತೀಯಂ ಮಾ ತೃತೀಯಂ ಚ ವಾಞ್ಛೇ-**
**ತ್ತಸ್ಮಾತ್ಸನ್ತೋ ಧರ್ಮಮಾಹುಃ ಪ್ರಧಾನಮ್ ॥೨೫॥**

ಸತ್ಪುರುಷರಿಂದ ಅನುಮೋದಿತವಾದ ಈ ಒಂದು ಧರ್ಮವನ್ನು ಆಚರಿ ಸುವುದರಿಂದ ಅಥವಾ ಈ ಧರ್ಮದ ಸಾಧನೆಯಿಂದ ನಾಲ್ಕು ಆಶ್ರಮಧರ್ಮ ಗಳೂ ಇದರಲ್ಲಿಯೇ ಸೇರಿಹೋಗುತ್ತವೆ. ಆತ್ಮಸಾಕ್ಷಾತ್ಕಾರಕ್ಕಾಗಿಯೇ ನಾಲ್ಕು ಆಶ್ರಮಧರ್ಮಗಳು–ಎಂದು ಸಿದ್ಧವಾದ ಮೇಲೆ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡವನಿಗೆ ಈ ಆಶ್ರಮಧರ್ಮಗಳ ಪ್ರವೃತ್ತಿ-ನಿವೃತ್ತಿಗಳಾವುವೂ ಇರುವುದಿಲ್ಲ. ಎರಡನೆಯದಾದ ಅರ್ಥವನ್ನಾಗಲೀ, ಮೂರನೆಯದಾದ ಕಾಮವನ್ನಾಗಲೀ ಇವುಗಳು ಧರ್ಮದ ಚೌಕಟ್ಟಿನಲ್ಲಿ ಇಲ್ಲದಿದ್ದರೆ ಅಪೇಕ್ಷಿಸು ವುದಿಲ್ಲ. ಸತ್ಪುರುಷರು ಯಾವ ಧರ್ಮವನ್ನು ಪ್ರಧಾನಧರ್ಮವೆನ್ನು ತ್ತಾರೆಯೋ–ಆ ಆತ್ಮಧರ್ಮವನ್ನು ಮಾತ್ರವೇ ನಾನು ಅಪೇಕ್ಷಿಸುತ್ತೇನೆ."

ಸಾವಿತ್ರಿಯ ಮಾತುಗಳನ್ನು ಕೇಳಿ ಯಮನು ಹೇಳಿದನು : "ಹಿಂದಿ ರುಗು, ಮಗಳೇ! ನಿನ್ನೀ ಮಾತಿನಿಂದ ನಾನು ಸುಪ್ರೀತನಾಗಿರುತ್ತೇನೆ. ನಿನ್ನ ಮಾತುಗಳು ಉದಾತ್ತಾದಿ ಸ್ವರಯುಕ್ತವಾಗಿಯೂ, ಸ್ವರ-ವ್ಯಂಜನಗಳಿಂದ ಕೂಡಿದ ಶಬ್ದಗಳಿಂದ ಕೂಡಿದುದಾಗಿಯೂ, ಯುಕ್ತಿಯುಕ್ತವಾಗಿಯೂ ಇರುತ್ತವೆ. ನಿನಗೆ ಬೇಕಾದ ಯಾವುದಾದರೊಂದು ವರವನ್ನು ಕೇಳು, ಕೊಡುತ್ತೇನೆ. ಆದರೆ ಮಾತ್ರ ಗಂಡನನ್ನು ಹಿಂದಿರುಗಿಸೆನ್ನಬಾರದು. ಈ ಒಂದು ವರವನ್ನು ಬಿಟ್ಟು ಬೇರಾವ ವರವನ್ನಾದರೂ ಕೇಳಬಹುದು."

ಯಮಧರ್ಮನ ಮಾತುಗಳನ್ನು ಕೇಳಿ ಸಾವಿತ್ರಿಯು ಈ ವರವನ್ನು ಕೇಳಿದಳು :

**ಚ್ಯುತಃ ಸ್ವರಾಜ್ಯಾದ್ವನವಾಸಮಾಶ್ರಿತೋ**
**ವಿನಷ್ಟಚಕ್ಷುಃ ಶ್ವಶುರೋ ಮಮಾಶ್ರಮೇ ।**

**ಸ ಲಬ್ಧಚಕ್ಷುರ್ಬಲವಾನ್ಭವೇನ್ನೃಪ-**
**ಸ್ತವ ಪ್ರಸಾದಾಜ್ಜ್ವಲನಾರ್ಕಸಂನಿಭಃ ॥೨೭॥**

"ದೇವ! ನನ್ನ ಮಾವನು ರಾಜ್ಯಭ್ರಷ್ಟನಾಗಿದ್ದಾನೆ ಮತ್ತು ಅಂಧನಾಗಿದ್ದಾನೆ. ನಿನ್ನ ಅನುಗ್ರಹದಿಂದ ಅವನಿಗೆ ಅಂಧತ್ವವು ಹೋಗಬೇಕು ಮತ್ತು ಅವನು ಬಲಿಷ್ಠನೂ, ಪ್ರಜ್ವಲಿಸುತ್ತಿರುವ ಸೂರ್ಯನೋಪಾದಿಯಲ್ಲಿ ತೇಜೋವಂತನೂ ಆಗಬೇಕು."

**ದದಾನಿ ತೇಽಹಂ ತಮನಿನ್ದಿತೇ ವರಂ**
**ಯಥಾ ತ್ವಯೋಕ್ತಂ ಭವಿತಾ ಚ ತತ್ತಥಾ ।**
**ತವಾಧ್ವನಾ ಗ್ಲಾನಿಮಿವೋಪಲಕ್ಷಯೇ**
**ನಿವರ್ತ ಗಚ್ಛಸ್ವ ನ ತೇ ಶ್ರಮೋ ಭವೇತ್ ॥೨೮॥**

"ನಿಷ್ಕಳಂಕಳೇ! ನೀನು ಪ್ರಾರ್ಥಿಸಿದ ಈ ವರವನ್ನು ನಾನು ಕೊಟ್ಟಿರುವೆನು. ನಿನ್ನ ಅಪೇಕ್ಷೆಯಂತೆಯೇ ನಿನ್ನ ಮಾವನಿಗೆ ಅಂಧತ್ವವು ನಿವಾರಣೆಯಾಗುವುದು ಮತ್ತು ಅವನು ಮಹಾತೇಜಸ್ವಿಯೂ ಆಗುವನು. ನೀನು ನನ್ನೊಡನೆ ಬಹುದೂರ ನಡೆದುಬಂದಿರುವುದರಿಂದ ಶ್ರಾಂತಳಾಗಿರುವಂತೆ ಕಾಣುತ್ತಿರುವೆ. ಆದುದರಿಂದ ಈ ಕೂಡಲೇ ಆಶ್ರಮಕ್ಕೆ ಹಿಂದಿರುಗು. ಮುಂದೆಯೂ ನನ್ನನ್ನು ಹಿಂಬಾಲಿಸಿ ಶ್ರಮಪಡಬೇಡ, ಮಗಳೇ!"

**ಶ್ರಮಃ ಕುತೋ ಭರ್ತೃಸಮೀಪತೋ ಹಿ ಮೇ**
**ಯತೋ ಹಿ ಭರ್ತಾ ಮಮ ಸಾ ಗತಿರ್ಧ್ರುವಾ ।**
**ಯತಃ ಪತಿಂ ನೇಷ್ಯಸೀ ತತ್ರ ಮೇ ಗತಿಃ**
**ಸುರೇಶ ಭೂಯಶ್ಚ ವಚೋ ನಿಬೋಧ ಮೇ ॥೨೯॥**

"ಸುರೇಶ್ವರ! ಪತಿಯ ಸಮೀಪವರ್ತಿನಿಯಾಗಿರುವ ನನಗೆ ಶ್ರಮವೆಲ್ಲಿಯದು? ಪತಿಯು ಎಲ್ಲಿದ್ದರೆ ಅಲ್ಲಿಯೇ ನನ್ನ ಸ್ಥಿರವಾದ ಸ್ಥಾನ. ನೀನು ಯಾವ ಮಾರ್ಗವಾಗಿ ನನ್ನ ಪತಿಯನ್ನೊಯ್ಯುವೆಯೋ ನಾನೂ ಸಹ ಅದೇ ಮಾರ್ಗವನ್ನೇ ಅನುಸರಿಸುತ್ತೇನೆ. ಧರ್ಮರಾಜ! ನಾನು ಹೇಳಲಿರುವ ಧರ್ಮಯುಕ್ತವಾದ ಇನ್ನೂ ಒಂದೆರಡು ಮಾತುಗಳನ್ನು ಆಲಿಸು :

**ಸತಾಂ ಸಕೃತ್ಸಂಗತಮೀಪ್ಸಿತಂ ಪರಂ**
**ತತಃ ಪರಂ ಮಿತ್ರಮಿತಿ ಪ್ರಚಕ್ಷತೇ ।**

ನ ಚಾಫಲಂ ಸತ್ಪುರುಷೇಣ ಸಙ್ಗತಂ
ತತಃ ಸತಾಂ ಸನ್ನಿವಸೇತ್ಸಮಾಗಮೇ ॥೩೦॥

ಸತ್ಪುರುಷರೊಡನೆ ಒಮ್ಮೆ ನಡೆದ ಸಮಾಗಮವೂ ಶ್ರೇಷ್ಠವಾದುದು. ಸತ್ಪುರುಷರೊಡನೆ ಮೈತ್ರಿಯನ್ನು ಬೆಳೆಸುವುದು ಅದಕ್ಕಿಂತಲೂ ಶ್ರೇಷ್ಠ ವಾದುದು. ಸತ್ಪುರುಷರೊಡನೆ ಮಾಡುವ ಸಮಾಗಮವು ಎಂದಿಗೂ ನಿಷ್ಫಲ ವಾಗುವುದಿಲ್ಲ. ಆದುದರಿಂದ ಸತ್ಪುರುಷರ ಸಹವಾಸವನ್ನು ಯಾವಾಗಲೂ ಮಾಡಬೇಕು."

"ಸಾವಿತ್ರಿ! ನೀನು ಹೇಳಿದ ಈ ಮಾತುಗಳು ಮನಸ್ಸಿಗೆ ಸಂತಸ ವನ್ನುಂಟುಮಾಡುತ್ತವೆ. ಇವು ವಿದ್ವಾಂಸರಿಗೂ ಬುದ್ಧಿವರ್ಧಕವಾದ ಮಾತು ಗಳಾಗಿವೆ. ವಿದ್ವಾಂಸರೂ ಸಹ ಅನುಸರಿಸಲು ಯೋಗ್ಯವಾದ ಹಿತೋಪದೇಶ ಗಳಿವು. ನೀನು ಹೇಳಿದ ಈ ಮಾತುಗಳಿಂದಲೂ ನಾನು ಸುಪ್ರೀತನಾಗಿರು ತ್ತೇನೆ. ಸತ್ಯವಾನನ ಜೀವವೊಂದನ್ನು ಬಿಟ್ಟು ಬೇರಾವುದಾದರೂ ಮತ್ತೊಂದು ವರವನ್ನು ಕೇಳು, ಕೊಡುತ್ತೇನೆ."

ಹೃತಂ ಪುರಾ ಮೇ ಶ್ವಶುರಸ್ಯ ಧೀಮತಃ
ಸ್ವಮೇವ ರಾಜ್ಯಂ ಲಭತಾಂ ಸ ಪಾರ್ಥಿವಃ ।
ಜಹ್ಯಾತ್ಸ್ವಧರ್ಮಂ ನ ಚ ಮೇ ಗುರುರ್ಯಥಾ
ದ್ವಿತೀಯಮೇತದ್ವರಯಾಮಿ ತೇ ವರಮ್ ॥೩೨॥

"ಸುರೇಶ್ವರ! ಹಲವು ವರ್ಷಗಳ ಹಿಂದೆ ಧೀಮಂತನಾದ ನನ್ನ ಮಾವನು ರಾಜ್ಯವನ್ನು ಕಳೆದುಕೊಂಡನು. ಆ ರಾಜನಿಂದು ನಿನ್ನ ಅನುಗ್ರಹ ದಿಂದಾಗಿ ತನ್ನ ರಾಜ್ಯವನ್ನು ಪಡೆಯುವಂತಾಗಲಿ ಮತ್ತು ನನ್ನ ಮಾವನು ಸ್ವಧರ್ಮವನ್ನೆಂದಿಗೂ ಪರಿತ್ಯಜಿಸದಿರಲಿ. ಈ ಎರಡನೆಯ ವರವನ್ನು ನಿನ್ನಿಂದ ಬೇಡುತ್ತೇನೆ."

ಸ್ವಮೇವ ರಾಜ್ಯಂ ಪ್ರತಿಪತ್ಸ್ಯತೇಽಚಿರಾ-
ನ್ನ ಚ ಸ್ವಧರ್ಮಂ ಪರಿಹಾಸ್ಯತೇ ನೃಪಃ ।
ಕೃತೇನ ಕಾಮೇನ ಮಯಾ ನೃಪಾತ್ಮಜೇ
ನಿವರ್ತ ಗಚ್ಛಸ್ವ ನ ತೇ ಶ್ರಮೋ ಭವೇತ್ ॥೩೩॥

"ರಾಜಕುಮಾರಿ! ನಿನ್ನ ಈ ಪ್ರಾರ್ಥನೆಯನ್ನೂ ನಾನು ನಡೆಸಿಕೊಡುವೆನು. ಕಳೆದುಕೊಂಡಿರುವ ರಾಜ್ಯವನ್ನು ಅತ್ಯಲ್ಪಕಾಲದಲ್ಲಿಯೇ ನಿನ್ನ ಮಾವನು ಪುನಃ ಪಡೆಯುತ್ತಾನೆ. ಆ ರಾಜನೆಂದಿಗೂ ಸ್ವಧರ್ಮವನ್ನು ಪರಿತ್ಯಜಿಸುವುದಿಲ್ಲ. ನಿನ್ನ ಈ ಅಭಿಲಾಷೆಯನ್ನೂ ನಾನು ಪೂರ್ಣಮಾಡಿಕೊಡುತ್ತೇನೆ. ಇನ್ನಾದರೂ ನೀನು ಹಿಂದಿರುಗು. ನನ್ನ ಹಿಂದೆ ಪುನಃ ನಡೆಯುತ್ತಾ ಬಂದು ಶ್ರಮಪಡಬೇಡ."

**ಪ್ರಜಾಸ್ತ್ವಯೈತಾ ನಿಯಮೇನ ಸಂಯತಾ**
**ನಿಯಮ್ಯ ಚೈತಾನ್ನಯಸೇ ನಿಕಾಮಯಾ ।**
**ತತೋ ಯಮತ್ವಂ ತವ ದೇವ ವಿಶ್ರುತಂ**
**ನಿಬೋಧ ಚೇಮಾಂ ಗಿರಮೀರಿತಾಂ ಮಯಾ ॥೩೪॥**

"ಯಮರಾಜ! ನಿನ್ನಿಂದ ಪ್ರಪಂಚದ ಸಮಸ್ತಪ್ರಾಣಿಗಳೂ ನಿಯಮದಿಂದ ನಿಯಂತ್ರಿತರಾಗುತ್ತಾರೆ. ಅವರ ಆಯುಷ್ಯವು ನಿನ್ನಿಂದ ನಿಯಂತ್ರಿತವಾಗಿರುತ್ತದೆ. ಅವರನ್ನು ನಿನ್ನ ನಿಯಮಕ್ಕೊಳಪಡಿಸಿ ನೀನವರುಗಳನ್ನು ಒಯ್ಯುವೆ. ಎಂದರೆ ಅವರವರ ಆಯುಃಪ್ರಮಾಣವನ್ನನುಸರಿಸಿ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಅವರನ್ನು ಒಯ್ಯುವುದು ನಿನ್ನ ಕಾರ್ಯವೇ ಹೊರತು ಅದರಲ್ಲಿ ನಿನಗೆ ಯಾವ ಕಾಮನೆಯೂ ಇಲ್ಲ. ಮನುಷ್ಯರ ಅಥವಾ ಪ್ರಾಣಿಗಳ ಆಯುಷ್ಯದ ನಿಯಾಮಕನೂ ನೀನಲ್ಲ. ಆಯಾ ಪ್ರಾಣಿಗಳ ಕರ್ಮಫಲಾನುಸಾರವಾಗಿ ಲಲಾಟಲಿಖಿತವಾದ ಆಯುಷ್ಯವೆಷ್ಟೆಂಬುದನ್ನು ತಿಳಿದು ಆಯಾ ಪ್ರಾಣಿಗಳನ್ನು ಒಯ್ಯುವುದು ನಿನ್ನ ಕರ್ತವ್ಯವಾಗಿದೆ. ಇದರಲ್ಲಿ ನಿನಗೆ ಇಚ್ಛೆಯಾಗಲೀ–ಅನಿಚ್ಛೆಯಾಗಲೀ ಇರುವುದಿಲ್ಲ. ವಿಧಿಯ ನಿಯಮದಂತೆ ನೀನು ಎಲ್ಲ ಪ್ರಾಣಿಗಳ ಜೀವವನ್ನೂ ನಿನ್ನ ಹತೋಟಿಗೆ ತೆಗೆದುಕೊಳ್ಳುವೆ ಯಾದುದರಿಂದಲೇ ನೀನು 'ಯಮ' ನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವೆ. ಮತ್ತೂ ಒಂದು ವಿಷಯವನ್ನು ಹೇಳುವೆನು ಕೇಳು, ಯಮದೇವ!

**ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ ।**
**ಅನುಗ್ರಹಶ್ಚ ದಾನಂ ಚ ಸತಾಂ ಧರ್ಮಃ ಸನಾತನಃ ॥೩೫॥**

**ಏವಂ ಪ್ರಾಯಶ್ಚ ಲೋಕೋಽಯಂ ಮನುಷ್ಯಾಃ ಶಕ್ತಿಪೇಶಲಾಃ ।**
**ಸನ್ತಸ್ತ್ವೇವಾಪ್ಯಮಿತ್ರೇಷು ದಯಾಂ ಪ್ರಾಪ್ತೇಷು ಕುರ್ವತೇ ॥೩೬॥**

ಕರ್ಮದಿಂದಾಗಲೀ, ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ–ಎಲ್ಲ ಭೂತಗಳಲ್ಲಿಯೂ (ಎಲ್ಲ ಭೂತಗಳ ವಿಷಯದಲ್ಲಿಯೂ) ದ್ರೋಹವನ್ನೆಸಗ ದಿರುವುದೂ, ಪ್ರಾಣಿಗಳ ವಿಷಯದಲ್ಲಿ ದಯೆತೋರಿ ಅನುಗ್ರಹಿಸುವುದೂ ಮತ್ತು ಅವುಗಳಿಗೆ ಬೇಕಾದುದನ್ನು ಕೊಡುವುದೂ–ಇವು ಸನಾತನವಾದ ಸತ್ಪುರುಷರ ಧರ್ಮವಾಗಿದೆ. ಪ್ರಾಯಶಃ ಈ ಲೋಕದಲ್ಲಿ ಎಲ್ಲ ಮನುಷ್ಯರೂ ಶಕ್ತಿಹೀನರೇ ಆಗಿರುತ್ತಾರೆ. ಸತ್ಪುರುಷರಾದವರು ಸಮಯಗಳಲ್ಲಿ ತಮ್ಮ ಶತ್ರು ಗಳೇ ರಕ್ಷಣೆಯನ್ನು ಪ್ರಾರ್ಥಿಸಿದರೂ ದಯೆಯನ್ನು ತೋರುತ್ತಾರೆ. (ಹೀಗಿರು ವಾಗ ಅತ್ಯಂತದೀನಳಾದ ನನ್ನ ವಿಷಯದಲ್ಲಿ ನೀನೇಕೆ ದಯೆತೋರುವು ದಿಲ್ಲ? )"

ಪಿಪಾಸಿತಸ್ಯೇವ ಭವೇದ್ಯಥಾ ಪಯ-
ಸ್ತಥಾ ತ್ವಯಾ ವಾಕ್ಯಮಿದಂ ಸಮೀರಿತಮ್ ।
ವಿನಾ ಪುನಃ ಸತ್ಯವತೋಽಸ್ಯ ಜೀವಿತಂ
ವರಂ ವೃಣೀಷ್ವೇಹ ಶುಭೇ ಯದಿಚ್ಛತಿ ॥೩೭॥

"ಸಾವಿತ್ರಿ! ಬಾಯಾರಿದವರಿಗೆ ನೀರು ಎಷ್ಟು ಆಪ್ಯಾಯಮಾನ ವಾಗಿರುವುದೋ ಅದರಂತೆಯೇ ನಿನ್ನ ಈ ಮಾತುಗಳೂ ಸಹ ನನಗೆ ಬಹಳ ಆಪ್ಯಾಯಮಾನವಾಗಿವೆ. ನಾನು ಸುಪ್ರೀತನಾಗಿದ್ದೇನೆ. ಸತ್ಯವಂತನ ಪ್ರಾಣ ವೊಂದನ್ನುಳಿದು ಬೇರಾವ ವರವನ್ನಾದರೂ ಕೊಡುವೆನು ಮಗಳೇ! ನಿನಗೆ ಇಚ್ಛೆ ಬಂದುದನ್ನು ಕೇಳು."

ಮಮಾನಪತ್ಯಃ ಪೃಥಿವೀಪತಿಃ ಪಿತಾ
ಭವೇತ್ಪಿತುಃ ಪುತ್ರಶತಂ ತಥೌರಸಮ್ ।
ಕುಲಸ್ಯ ಸನ್ತಾನಕರಂ ಚ ಯದ್ಭವೇ-
ತ್ತೃತೀಯಮೇತದ್ವರಯಾಮಿ ತೇ ವರಮ್ ॥೩೮॥

"ಯಮರಾಜ! ಪೃಥಿವೀಪತಿಯಾದ ನನ್ನ ತಂದೆಗೆ ಗಂಡುಮಕ್ಕಳಿಲ್ಲ. ನನ್ನ ತಂದೆಗೆ ಕುಲದ ಅಭಿವೃದ್ಧಿಯನ್ನುಂಟುಮಾಡುವ ನೂರು ಔರಸಪುತ್ರರನ್ನು ದಯಪಾಲಿಸಬೇಕೆಂಬ ಮೂರನೆಯ ವರವನ್ನು ನಿನ್ನಿಂದ ಪ್ರಾರ್ಥಿಸುತ್ತೇನೆ."

ಕುಲಸ್ಯ ಸನ್ತಾನಕರಂ ಸುವರ್ಚಸಂ
ಶತಂ ಸುತಾನಾಂ ಪಿತುರಸ್ತು ತೇ ಶುಭೇ ।

**ಕೃತೇನ ಕಾಮೇನ ನರಾಧಿಪಾತ್ಮಜೇ**
**ನಿವರ್ತ ದೂರಂ ಹಿ ಪಥಸ್ತ್ವಮಾಗತಾ ॥೩೯॥**

"ಕುಲದ ಸಂತಾನಕರರಾದ (ಕುಲವನ್ನು ಅಭಿವೃದ್ಧಿಪಡಿಸುವ) ಸುವರ್ಚಸ್ಕರಾದ, ವೀರರಾದ ನೂರು ಮಕ್ಕಳನ್ನು ನಿನ್ನ ತಂದೆಯು ಪಡೆಯುತ್ತಾನೆ. ರಾಜಕುಮಾರಿ! ನಿನ್ನ ಕಾಮನೆಯು ಪೂರ್ತಿಯಾಗಿರುವುದರಿಂದ ನೀನಿನ್ನು ಹಿಂದಿರುಗುವವಳಾಗು. ನೀನು ಬಹಳ ದೂರ ನನ್ನ ಜೊತೆಯಲ್ಲಿ ಬಂದುಬಿಟ್ಟಿರುವೆ."

**ನ ದೂರಮೇತನ್ಮಮ ಭರ್ತೃಸಂನಿಧೌ**
**ಮನೋ ಹಿ ಮೇ ದೂರತರಂ ಪ್ರಧಾವತಿ ।**
**ಅಥ ವ್ರಜನ್ನೇವ ಗಿರಂ ಸಮುದ್ಯತಾಂ**
**ಮಯೋಚ್ಯಮಾನಾಂ ಶೃಣು ಭೂಯ ಏವ ಚ ॥೪೦॥**

"ಯಮರಾಜ! ನಾನು ನನ್ನ ಪತಿಯ ಜೊತೆಯಲ್ಲಿಯೇ ಇರುವೆನಾದುದರಿಂದ ನನಗೆ ದೂರ ನಡೆದ ಪರಿವೆಯೇ ಇಲ್ಲ. ನನ್ನ ಮನಸ್ಸು ಇನ್ನೂ ಹೆಚ್ಚು ದೂರ ಓಡಲೂ ತವಕಿಸುತ್ತಿದೆ. ನೀನು ಮುಂದೆ-ಮುಂದೆ ಹೋಗುತ್ತಾ ನಾನು ಹೇಳಲಿರುವ ಮಾತನ್ನು ಪುನಃ ಲಾಲಿಸು.

**ವಿವಸ್ವತಸ್ತ್ವಂ ತನಯಃ ಪ್ರತಾಪವಾಂ-**
**ಸ್ತತೋ ಹಿ ವೈವಸ್ವತ ಉಚ್ಯಸೇ ಬುಧೈಃ ।**
**ಸಮೇನ ಧರ್ಮೇಣ ಚರನ್ತಿ ತಾಃ ಪ್ರಜಾ-**
**ಸ್ತತಸ್ತವೇಹೇಶ್ವರ ಧರ್ಮರಾಜತಾ ॥೪೧॥**

ನೀನು ಸೂರ್ಯನ ಪ್ರತಾಪಶಾಲಿಯಾದ ಮಗನು. ಆದುದರಿಂದ ನಿನ್ನನ್ನು ವೈವಸ್ವತನೆಂದು ವಿದ್ವಾಂಸರು ಕರೆಯುತ್ತಾರೆ. ನಿನ್ನ ಪ್ರಭಾವದಿಂದಲೇ ಎಲ್ಲ ಪ್ರಾಣಿಗಳೂ ಒಂದೇ ಸಮನಾದ ಧರ್ಮವನ್ನು ಅನುಸರಿಸುತ್ತವೆಯಾದುದರಿಂದ ನಿನ್ನನ್ನು ಧರ್ಮರಾಜನೆಂದೂ ಕರೆಯುತ್ತಾರೆ.

**ಆತ್ಮನ್ಯಪಿ ನ ವಿಶ್ವಾಸಸ್ತಥಾ ಭವತಿ ಸತ್ಸು ಯಃ ।**
**ತಸ್ಮಾತ್ಸತ್ಸು ವಿಶೇಷೇಣ ಸರ್ವಃ ಪ್ರಣಯಮಿಚ್ಛತಿ ॥೪೨॥**

ಸತ್ಪುರುಷರಲ್ಲಿ ಯಾವ ವಿಶ್ವಾಸವಿರುವುದೋ ಅಂತಹ ವಿಶ್ವಾಸವು

(ನಂಬಿಕೆಯು) ತನ್ನಲ್ಲಿಯೇ ತನಗೆ ಇರುವುದಿಲ್ಲ. ಆದುದರಿಂದಲೇ ವಿಶೇಷ ವಾಗಿ ಸತ್ಪುರುಷರೊಡನೆ ಸಕಲರೂ ಸ್ನೇಹವನ್ನು ಇಚ್ಛಿಸುತ್ತಾರೆ.

**ಸೌಹೃದಾತ್ಸರ್ವಭೂತಾನಾಂ ವಿಶ್ವಾಸೋ ನಾಮ ಜಾಯತೇ ।**
**ತಸ್ಮಾತ್ಸತ್ಸು ವಿಶೇಷೇಣ ವಿಶ್ವಾಸಂ ಕುರುತೇ ಜನಃ ॥೪೩॥**

ಸರ್ವಭೂತಗಳಲ್ಲಿಯೂ ಸೌಹಾರ್ದವನ್ನು (ಪ್ರೀತಿಯನ್ನು) ತೋರು ವುದರಿಂದ ವಿಶ್ವಾಸ (ನಂಬಿಕೆ) ವೆಂಬುದುಂಟಾಗುತ್ತದೆ. (ಸತ್ಪುರುಷರು ಯಾವಾಗಲೂ ಶತ್ರು-ಮಿತ್ರರೆಂಬ ಭೇದವೇ ಇಲ್ಲದೇ ಸರ್ವರಲ್ಲಿಯೂ ಪ್ರೀತಿ ತೋರುತ್ತಾರೆ.) ಆದುದರಿಂದಲೇ ಜನರು ಯಾವಾಗಲೂ ಸತ್ಪುರುಷರಲ್ಲಿ ವಿಶ್ವಾಸವಿಡುತ್ತಾರೆ."

ಯುಧಿಷ್ಠಿರ! ಸಾವಿತ್ರಿಯ ಮಾತುಗಳನ್ನು ಕೇಳಿ ಯಮನು ಹೇಳಿ ದನು : "ಸಾವಿತ್ರಿ! ನೀನು ಹೇಳಿದ ಈ ಮಾತುಗಳನ್ನು ನಾನು ಯಾವಾ ಗಲೂ ಯಾರಿಂದಲೂ ಕೇಳಿಲ್ಲ. ನಾನು ನಿನ್ನೀ ಮಾತಿನಿಂದ ಬಹಳ ಪ್ರೀತನಾಗಿ ರುತ್ತೇನೆ. ಸತ್ಯವಾನನ ಜೀವವೊಂದನ್ನುಳಿದು ನಿನಗಿಚ್ಛೆಬಂದ ನಾಲ್ಕನೆಯ ವರವನ್ನೂ ಕೇಳು. ಆ ವರವನ್ನೂ ಪಡೆದು ನೀನು ಹಿಂದಿರುಗು, ಮಗಳೇ!"

ಯಮಧರ್ಮನ ಮಾತನ್ನು ಕೇಳಿ ಸಾವಿತ್ರಿಯು ನಾಲ್ಕನೆಯ ವರವನ್ನು ಕೇಳಿದಳು :

**ಮಮಾತ್ಮಜಂ ಸತ್ಯವತಸ್ತಥೌರಸಂ**
**ಭವೇದುಭಾಭ್ಯಾಮಿಹ ಯತ್ಕುಲೋದ್ವಹಮ್ ।**
**ಶತಂ ಸುತಾನಾಂ ಬಲವೀರ್ಯಶಾಲಿನಾ-**
**ಮಿದಂ ಚತುರ್ಥಂ ವರಯಾಮಿ ತೇ ವರಮ್ ॥೪೫॥**

"ನಮ್ಮ ವಂಶಾಭಿವೃದ್ಧಿಗೆ ಕಾರಣರಾದ, ಬಲಿಷ್ಠರಾಗಿಯೂ, ವೀರ್ಯ ವಂತರಾಗಿಯೂ ಇರುವ ನೂರು ಔರಸಪುತ್ರರನ್ನು ನಾನು ಸತ್ಯವಂತನಿಂದ ಪಡೆಯಬೇಕು. ಈ ನಾಲ್ಕನೆಯ ವರವನ್ನು ನಾನು ನಿನ್ನಿಂದ ಪ್ರಾರ್ಥಿಸುತ್ತೇನೆ."

"ಮಗಳೇ! ಬಹುಪ್ರೀತಿಕರರಾದ ಬಲ-ವೀರ್ಯಶಾಲಿಗಳಾದ ನೂರು ಮಕ್ಕಳು ನಿನ್ನಲ್ಲಿ ಹುಟ್ಟುತ್ತಾರೆ. ನೀನು ಪುನಃ ಮುಂದೆ-ಮುಂದೆ ಬರುತ್ತಿದ್ದರೆ ಬಹಳ ಶ್ರಮವಾಗಬಹುದು. ಈಗಾಗಲೇ ನೀನು ಆಶ್ರಮವನ್ನು ಬಿಟ್ಟು ಬಹು ದೂರ ಬಂದುಬಿಟ್ಟಿರುವೆ. ಆದುದರಿಂದ ಒಡನೆಯೇ ಹಿಂದಿರುಗು, ಸಾವಿತ್ರಿ!"

ಸತ್ಯವಾನನಿಂದ ತನಗೆ ನೂರು ಮಕ್ಕಳಾಗಬೇಕೆಂದು ಸಾವಿತ್ರಿಯು ವರವನ್ನು ಕೇಳಿದಳು. ಯಮನೂ ಸಹ ಸಾವಿತ್ರಿಗೆ ನೂರು ಮಕ್ಕಳಾಗಲೆಂದು ವರವನ್ನಿತ್ತು ಹಿಂದಿರುಗಿ ಹೋಗುವಂತೆ ಹೇಳಿದನು. ಗಂಡನಿಲ್ಲದೇ ಮಕ್ಕಳನ್ನು ಪಡೆಯುವುದೆಂತು? ಅಥವಾ ಗಂಡನನ್ನು ಬಿಟ್ಟು ಹಿಂದಿರುಗುವುದೆಂತು? ಸಾವಿತ್ರಿಯು ಪುನಃ ಯಮನನ್ನು ಕುರಿತು ಹೇಳಿದಳು :

ಸತಾಂ ಸದಾ ಶಾಶ್ವತಧರ್ಮವೃತ್ತಿಃ
ಸನ್ತೋ ನ ಸೀದನ್ತಿ ನ ಚ ವ್ಯಥನ್ತಿ ।
ಸತಾಂ ಸದ್ಭಿರ್ನಾಫಲಃ ಸಙ್ಗಮೋಽಸ್ತಿ
ಸದ್ಭ್ಯೋ ಭಯಂ ನಾನುವರ್ತನ್ತಿ ಸನ್ತಃ ॥೪೭॥

ಸನ್ತೋ ಹಿ ಸತ್ಯೇನ ನಯನ್ತಿ ಸೂರ್ಯಂ
ಸನ್ತೋ ಭೂಮಿಂ ತಪಸಾ ಧಾರಯನ್ತಿ ।
ಸನ್ತೋ ಗತಿರ್ಭೂತಭವ್ಯಸ್ಯ ರಾಜ-
ನ್ಸತಾಂ ಮಧ್ಯೇ ನಾವಸೀದನ್ತಿ ಸನ್ತಃ ॥೪೮॥

ಆರ್ಯಜುಷ್ಟಮಿದಂ ವೃತ್ತಮಿತಿ ವಿಜ್ಞಾಯ ಶಾಶ್ವತಮ್ ।
ಸನ್ತಃ ಪರಾರ್ಥಂ ಕುರ್ವಾಣಾ ನಾವೇಕ್ಷನ್ತಿ ಪರಸ್ಪರಮ್ ॥೪೯॥

ನ ಚ ಪ್ರಸಾದಃ ಸತ್ಪುರುಷೇಷು ಮೋಘೋ
ನ ಚಾಪ್ಯರ್ಥೋ ನಶ್ಯತಿ ನಾಪಿ ಮಾನಃ ।
ಯಸ್ಮಾದೇತನ್ನಿಯತಂ ಸತ್ಸು ನಿತ್ಯಂ
ತಸ್ಮಾತ್ಸನ್ತೋ ರಕ್ಷಿತಾರೋ ಭವನ್ತಿ ॥೫೦॥

"ಧರ್ಮರಾಜ! ಸತ್ಪುರುಷರು ಯಾವಾಗಲೂ ಶಾಶ್ವತವಾದ ಧರ್ಮಮಾರ್ಗದಲ್ಲಿಯೇ ಇರುತ್ತಾರೆ. ಅದರಿಂದವರು ವಿನಾಶವನ್ನು ಹೊಂದುವುದಿಲ್ಲ. ವ್ಯಥೆಪಡುವುದಿಲ್ಲ. ಸತ್ಪುರುಷರಿಬ್ಬರ ಸಮಾಗಮವು ಯಾವಾಗಲೂ ನಿಷ್ಫಲವಾಗುವುದಿಲ್ಲ. ಸತ್ಪುರುಷರಿಂದ ಸತ್ಪುರುಷರಿಗೆ ತೊಂದರೆಯೆಂದಿಗೂ ಉಂಟಾಗುವುದಿಲ್ಲ. ಸತ್ಪುರುಷರಿಂದ ಸತ್ಪುರುಷರಿಗೆ ಭಯವೆಂಬುದೆಂದಿಗೂ ಇರುವುದಿಲ್ಲ. ಸತ್ಪುರುಷರು ತಮ್ಮ ಸತ್ಯನಿಷ್ಠೆಯಿಂದಲೇ ಸೂರ್ಯನನ್ನು ಚಲಿಸುವಂತೆ ಮಾಡುತ್ತಾರೆ. ಸತ್ಪುರುಷರು ತಮ್ಮ ತಪಃಪ್ರಭಾವದಿಂದಲೇ ಈ ಭೂಮಿಯನ್ನು ಧಾರಣಮಾಡುತ್ತಾರೆ. ಸತ್ಪುರುಷರು ಭೂತ, ವರ್ತಮಾನ,

ಭವಿಷ್ಯತ್ತುಗಳಿಗೆ ಕಾರಣಭೂತರಾಗುತ್ತಾರೆ. ಇಂತಹ ಸತ್ಪುರುಷರ ಮಧ್ಯ ದಲ್ಲಿರುವ ಸತ್ಪುರುಷರೆಂದೂ ವಿನಾಶಹೊಂದುವುದಿಲ್ಲ. ಈ ಸದ್ವೃತ್ತಿಯು ಆರ್ಯರಿಂದ ಅನುಸೃತವಾದುದೆಂದೂ ಮತ್ತು ಶಾಶ್ವತವಾದುದೆಂದೂ ತಿಳಿದ ಸತ್ಪುರುಷರು ಯಾವ ವಿಧವಾದ ಫಲವನ್ನೂ ಅಪೇಕ್ಷಿಸದೇ, ಇತರರ ಹಿತ ದಲ್ಲಿಯೇ ಆಸಕ್ತರಾಗಿ ಅದಕ್ಕೆ ಅನುಕೂಲವಾದ ಕಾರ್ಯವನ್ನೇ ಮಾಡುತ್ತಿರು ತ್ತಾರೆ. ಸತ್ಪುರುಷರು ಸತ್ಪುರುಷರಿಗೆ ಮಾಡಿದ ಅನುಗ್ರಹವು ಎಂದಿಗೂ ವ್ಯರ್ಥವಾಗಿ ಹೋಗುವುದಿಲ್ಲ. ಸತ್ಪುರುಷರ ಮಹಾಪ್ರಸಾದದಿಂದಾಗಿ ಅರ್ಥ- ಮಾನಗಳೂ ನಷ್ಟವಾಗುವುದಿಲ್ಲ. ಇಂತಹ ಪರಮಾದ್ಭುತವಾದ ಅನುಗ್ರಹ ಬುದ್ಧಿಯು ಸತ್ಪುರುಷರಲ್ಲಿ ನಿತ್ಯವಾಗಿರುವುದರಿಂದಲೇ ಅವರು ಯಾವಾ ಗಲೂ ಸರ್ವರ ರಕ್ಷಕರೂ ಆಗಿರುತ್ತಾರೆ."

ಯುಧಿಷ್ಠಿರ! ಸಾವಿತ್ರಿಯ ಮಾತುಗಳನ್ನು ಕೇಳಿ ಯಮನು ಹೇಳಿದನು:

**ಯಥಾ ಯಥಾ ಭಾಷಸಿ ಧರ್ಮಸಂಹಿತಂ**
**ಮನೋಽನುಕೂಲಂ ಸುಪದಂ ಮಹಾರ್ಥವತ್ ।**
**ತಥಾ ತಥಾ ಮೇ ತ್ವಯಿ ಭಕ್ತಿರುತ್ತಮಾ**
**ವರಂ ವೃಣೀಷ್ವಾಪ್ರತಿಮಂ ಪತಿವ್ರತೇ ॥೫೧॥**

"ಪತಿವ್ರತೆಯೇ! ನೀನು ಧರ್ಮಸಮ್ಮತವಾದ, ಮನಸ್ಸಿಗೆ ಆಪ್ಯಾಯ ಮಾನವಾದ, ಸುಷ್ಠುಪದಗಳಿಂದೊಡಗೂಡಿದ ಮತ್ತು ಮಹಾರ್ಥವನ್ನೊಳ ಗೊಂಡ ಮಾತುಗಳನ್ನು ಹೇಳುತ್ತಿದ್ದಂತೆಲ್ಲಾ ನನಗೆ ನಿನ್ನಲ್ಲಿ ಹೆಚ್ಚಾದ ಗೌರವ ವುಂಟಾಗುತ್ತಿದೆ. ಮಗಳೇ! ಅಪ್ರತಿಮವಾದ ವರವೊಂದನ್ನು ಕೇಳು. ಅದನ್ನೂ ಕೊಟ್ಟುಬಿಡುತ್ತೇನೆ."

ಸಾವಿತ್ರಿಯೀಗ ಬಹುಸ್ಪಷ್ಟವಾಗಿಯೇ ಯಮಧರ್ಮವನ್ನು ಕುರಿತು ಹೇಳಿದಳು :

**ನ ತೇಽಪವರ್ಗಃ ಸುಕೃತಾದ್ವಿನಾಕೃತ-**
**ಸ್ತಥಾ ಯಥಾನ್ಯೇಷು ವರೇಷು ಮಾನದ ।**
**ವರಂ ವೃಣೇ ಜೀವತು ಸತ್ಯವಾನಯಂ**
**ಯಥಾ ಮೃತಾ ಹ್ಯೇವಮಹಂ ಪತಿಂ ವಿನಾ ॥೫೨॥**

"ಮಾನದ! ನೀನು ನನಗೆ ನೂರು ಮಕ್ಕಳಾಗಲೆಂದು ಅನುಗ್ರಹಿಸಿರುವೆ. ಈ ನಿನ್ನ ವರವು ಫಲಿಸಬೇಕಾದರೆ ಧರ್ಮಸಮ್ಮತವಾದ ದಾಂಪತ್ಯ ಸುಖವು ನನಗೆ ಲಭಿಸದಿದ್ದರೆ ಸಾಧ್ಯವಾಗುವುದಿಲ್ಲ. ಗಂಡನಿಲ್ಲದಿದ್ದರೂ ಕೇವಲ ವರದಿಂದಲೇ ಮಕ್ಕಳಾಗುವುದನ್ನು ನಾನು ಬಯಸುವುದಿಲ್ಲ. ಅಂತಹ ಸಂತಾನವು ನನಗೆ ಬೇಕಾಗಿಲ್ಲ. ಆದುದರಿಂದಲೇ ನಾನೀಗ ನನ್ನ ಪತಿಯು ಜೀವಂತನಾಗುವಂತೆ ಅನುಗ್ರಹಿಸಬೇಕೆಂಬ ವರವನ್ನು ಕೇಳುತ್ತೇನೆ. ಪತಿಯಿಲ್ಲದಿದ್ದರೆ ನಾನು ಸತ್ತಂತೆಯೇ ಸರಿ. ನನ್ನ ಪತಿಯನ್ನು ಬಿಟ್ಟು ನಾನು ಖಂಡಿತವಾಗಿಯೂ ಉಳಿಯಲಾರೆನು.

ನ ಕಾಮಯೇ ಭರ್ತೃವಿನಾಕೃತಾ ಸುಖಂ
ನ ಕಾಮಯೇ ಭರ್ತೃವಿನಾಕೃತಾ ದಿವಮ್ ।
ನ ಕಾಮಯೇ ಭರ್ತೃವಿನಾಕೃತಾ ಶ್ರಿಯಂ
ನ ಭರ್ತೃಹೀನಾ ವ್ಯವಸಾಮಿ ಜೀವಿತುಮ್ ॥೫೩॥

ವರಾತಿಸರ್ಗಃ ಶತಪುತ್ರತಾ ಮಮ
ತ್ವಯ್ಯೈವ ದತ್ತೋ ಹ್ರಿಯತೇ ಚ ಮೇ ಪತಿಃ ।
ವರಂ ವೃಣೇ ಜೀವತು ಸತ್ಯವಾನಯಂ
ತವೈವ ಸತ್ಯಂ ವಚನಂ ಭವಿಷ್ಯತಿ ॥೫೪॥

ಪತಿವಿಹೀನಳಾದ ನಾನು ಯಾವ ಸುಖವನ್ನಾಗಲೀ–ಸ್ವರ್ಗಲೋಕವನ್ನಾಗಲೀ ಅಪೇಕ್ಷಿಸೆನು. ಪತಿಯಿಂದ ವಿಹೀನಳಾದ ನನಗೆ ಅತುಲೈಶ್ವರ್ಯದ ಅಪೇಕ್ಷೆಯಿಲ್ಲ. ನನ್ನ ಪತಿಯು ನನಗೆ ಲಭಿಸದೆಯೇ ಹೋದರೆ ನಾನು ಜೀವಿಸಿರಲು ಕೂಡ ಇಚ್ಛಿಸುವುದಿಲ್ಲ.

ನನ್ನ ಪ್ರಾರ್ಥನೆಯಂತೆ ನೀನೇ ನನಗೆ ಶತಪುತ್ರತ್ವದ ವರವನ್ನು ಅನುಗ್ರಹಿಸಿರುವೆ. ಈ ಅನುಗ್ರಹವನ್ನು ಮಾಡಿದ ಮೇಲೂ ನೀನು ನನ್ನ ಪತಿಯನ್ನು ಸೆಳೆದುಕೊಂಡೇ ಹೋಗುತ್ತಿರುವೆ. ಆದುದರಿಂದ ನಾನೀಗ ಸತ್ಯವಾನನು ಜೀವಿಸುವಂತೆ ಕರುಣಿಸೆಂಬ ವರವನ್ನು ಕೇಳುವೆನು. ನೀನು ಈ ವರವನ್ನು ದಯಪಾಲಿಸುವುದರಿಂದ ಮಾತ್ರವೇ ನನಗೆ ಈ ಹಿಂದೆ ಅನುಗೃಹೀತವಾದ ಶತಪುತ್ರತ್ವದ ವರವೂ ಸತ್ಯವಾಗಿ ಪರಿಣಮಿಸುವುದು, ಯಮರಾಜ!"

ಯುಧಿಷ್ಠಿರ! ಸಾವಿತ್ರಿಯ ಆ ಮಾತುಗಳನ್ನು ಕೇಳಿ ಯಮಧರ್ಮನು

ಸಂತುಷ್ಟಾಂತರಂಗನಾಗಿ–"ಹಾಗೆಯೇ ಆಗಲಿ. ಮಗಳೇ! ನಿನ್ನ ಪತಿಯನ್ನು ಜೀವಂತನನ್ನಾಗಿ ಮಾಡುವೆನು"–ಎಂಬುದಾಗಿ ಹೇಳಿ ಪಾಶದಲ್ಲಿ ಬಂಧಿಸಿದ್ದ ಅಂಗುಷ್ಠಮಾತ್ರಪುರುಷನನ್ನು ವಿಮುಕ್ತಗೊಳಿಸಿ ಸಾವಿತ್ರಿಯನ್ನು ಕುರಿತು ಹೇಳಿದನು :

**ಏಷ ಭದ್ರೇ ಮಯಾ ಮುಕ್ತೋ ಭರ್ತಾ ತೇ ಕುಲನನ್ದಿನಿ ।**
**ಅರೋಗಸ್ತವ ನೇಯಶ್ಚ ಸಿದ್ಧಾರ್ಥಃ ಸ ಭವಿಷ್ಯತಿ ॥೫೭॥**

**ಚತುರ್ವರ್ಷಶತಾಯುಶ್ಚ ತ್ವಯಾ ಸಾರ್ಧಮವಾಪ್ಸ್ಯತಿ ।**
**ಇಷ್ಟ್ವಾ ಯಜ್ಞೈಶ್ಚ ಧರ್ಮೇಣ ಖ್ಯಾತಿಂ ಲೋಕೇ ಗಮಿಷ್ಯತಿ ॥**

**ತ್ವಯಿ ಪುತ್ರಶತಂ ಚೈವ ಸತ್ಯವಾಞ್ಜನಯಿಷ್ಯತಿ ।**
**ತೇ ಚಾಪಿ ಸರ್ವೇ ರಾಜಾನಃ ಕ್ಷತ್ರಿಯಾಃ ಪುತ್ರಪೌತ್ರಿಣಃ ॥೫೮॥**

**ಖ್ಯಾತಾಸ್ತ್ವನ್ನಾಮಧೇಯಾಶ್ಚ ಭವಿಷ್ಯನ್ತೀಹ ಶಾಶ್ವತಾಃ ।**
**ಪಿತುಶ್ಚ ತೇ ಪುತ್ರಶತಂ ಭವಿತಾ ತವ ಮಾತರಿ ॥೫೯॥**

**ಮಾಲವ್ಯಾಂ ಮಾಲವಾ ನಾಮ ಶಾಶ್ವತಾಃ ಪುತ್ರಪೌತ್ರಿಣಃ ।**
**ಭ್ರಾತರಸ್ತೇ ಭವಿಷ್ಯನ್ತಿ ಕ್ಷತ್ರಿಯಾಸ್ತ್ರಿದಶೋಪಮಾಃ ॥೬೦॥**

"ಕುಲನಂದಿನಿ! ಭದ್ರೇ! ನಿನ್ನ ಪತಿಯು ನನ್ನೀ ಪಾಶದಿಂದ ವಿಮುಕ್ತನಾದನು. ನೀರೋಗದೃಢಕಾಯನಾದ ಇವನನ್ನು ನೀನು ಕರೆದೊಯ್ಯುವವಳಾಗು. ಇವನು ಮುಂದೆ ಸಿದ್ಧಾರ್ಥನಾಗಿ ಮಹಾವೈಭವದಿಂದಿರುತ್ತಾನೆ. ನಿನ್ನೊಡನಿವನು ನಾಲ್ಕುನೂರು ವರ್ಷಗಳ ಪರ್ಯಂತವಾಗಿ ಸಂಸಾರಮಾಡಿಕೊಂಡಿರುತ್ತಾನೆ. ಧರ್ಮವಿಹಿತವಾದ ಮಾರ್ಗದಲ್ಲಿದ್ದುಕೊಂಡು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಈ ಲೋಕದಲ್ಲಿ ಅಪಾರವಾದ ಖ್ಯಾತಿಯನ್ನು ಇವನು ಗಳಿಸುತ್ತಾನೆ.

ನನ್ನ ಅನುಗ್ರಹದಂತೆಯೇ ಇವನು ನಿನ್ನಲ್ಲಿ ನೂರು ಪುತ್ರರನ್ನು ಪಡೆಯುತ್ತಾನೆ. ಆ ನೂರು ಮಕ್ಕಳೂ ಮತ್ತು ಅವರ ನೂರಾರು ಮಕ್ಕಳೂ ಭೂಮಿಯಲ್ಲಿ ಕೀರ್ತಿವಂತರಾದ ರಾಜರಾಗುತ್ತಾರೆ. ಅವರುಗಳೆಲ್ಲರೂ ನಿನ್ನ ಹೆಸರಿನಿಂದಲೇ (ಸಾವಿತ್ರರೆಂದೇ) ವಿಖ್ಯಾತರಾಗಿ ಶಾಶ್ವತವಾದ ಕೀರ್ತಿಯನ್ನೂ ಪಡೆಯುತ್ತಾರೆ.

ನಿನ್ನ ತಂದೆಯೂ ಸಹ ನಿನ್ನ ತಾಯಿಯಾದ ಮಾಲವಿಯಲ್ಲಿ ನೂರು ಪುತ್ರರನ್ನು ಪಡೆಯುತ್ತಾನೆ. ಆ ಪುತ್ರರೂ ಮತ್ತು ಪೌತ್ರರೂ ಮಾಲವರೆಂದು ವಿಖ್ಯಾತರಾಗುತ್ತಾರೆ. ಆ ನಿನ್ನ ಕ್ಷತ್ರಿಯಸಹೋದರರು ದೇವತೆಗಳಿಗೆ ಸಮಾನ ರಾಗುತ್ತಾರೆ."

ಹೀಗೆಂಬುದಾಗಿ ಸಾವಿತ್ರಿಗೆ ಯಮರಾಜನು ವರಗಳನ್ನಿತ್ತು ಅವಳನ್ನು ಕಳುಹಿಸಿಕೊಟ್ಟು ತನ್ನ ಲೋಕಕ್ಕೆ ಹಿಂದಿರುಗಿದನು.

ಯಮನು ಹೊರಟುಹೋದನಂತರ ಸಾಧ್ವಿಯಾದ ಸಾವಿತ್ರಿಯು ಪತಿಯ ಪ್ರಾಣವನ್ನು ಪುನಃ ಪಡೆದು ತನ್ನ ಗಂಡನ ಶವವಿದ್ದೆಡೆಗೆ ಧಾವಿಸಿದಳು. ಅಲ್ಲಿದ್ದ ಕಲೇಬರದ ಸಮೀಪಕ್ಕೆ ಹೋಗಿ ತಾನು ಭೂಮಿಯ ಮೇಲೆ ಕುಳಿತು ತನ್ನ ಗಂಡನ ಮಸ್ತಕವನ್ನು ತನ್ನ ತೊಡೆಯ ಮೇಲಿಟ್ಟುಕೊಂಡಳು. ಒಂದೆರಡು ಕ್ಷಣಗಳೊಳಗಾಗಿ ಸತ್ಯವಾನನು ಪ್ರಜ್ಞೆಯನ್ನು ಪಡೆದವನಾಗಿ ದೂರ ಪ್ರವಾಸಮಾಡಿ ಬಂದವನಂತೆ ಸಾವಿತ್ರಿಯನ್ನು ಪ್ರೇಮಪೂರಿತವಾದ ದೃಷ್ಟಿ ಯಿಂದ ಪುನಃ-ಪುನಃ ವೀಕ್ಷಿಸುತ್ತಾ ಅವಳನ್ನು ಕುರಿತು ಹೇಳಿದನು :

"ಸಾವಿತ್ರಿ! ನಾನು ಬಹಳ ಹೊತ್ತು ಮಲಗಿಬಿಟ್ಟೆನಲ್ಲವೇ? ನನ್ನನ್ನು ಇದುವರೆಗೂ ನೀನೇಕೆ ಎಬ್ಬಿಸಲಿಲ್ಲ? ನನ್ನನ್ನು ಸೆಳೆದೊಯ್ಯುತ್ತಿದ್ದ ಶ್ಯಾಮಲ ವರ್ಣದ ಆ ಪುರುಷನಾರು?"

ಅದಕ್ಕುತ್ತರವಾಗಿ ಸಾವಿತ್ರಿಯು ಹೇಳಿದಳು :

"ಪುರುಷರ್ಷಭನೇ! ನೀನು ಬಹಳ ಹೊತ್ತು ನನ್ನ ತೊಡೆಯ ಮೇಲೆ ಮಲಗಿಬಿಟ್ಟಿದ್ದೆ. ಪ್ರಜೆಗಳನ್ನು ನಿಯಂತ್ರಿಸುವ, ಭಗವಂತನಾದ ಯಮ ರಾಜನೂ ಹೊರಟುಹೋದನು. ನೀನೀಗ ವಿಶ್ರಾಂತಿಯನ್ನೂ ಪಡೆದಿರುವೆ. ನಿದ್ದೆಯಿಂದಲೂ ಎಚ್ಚರಗೊಂಡಿರುವೆ. ನಿನಗೆ ಬಳಲಿಕೆಯಾಗದಿದ್ದರೆ ಮೇಲೇಳು. ರಾತ್ರಿಯಲ್ಲಾಗಲೇ ಬಹಳ ಹೊತ್ತು ಕಳೆದುಹೋಗಿರುವುದು."

ಯುಧಿಷ್ಠಿರ! ಸಾವಿತ್ರಿಯ ಮಾತನ್ನು ಕೇಳಿ ಸತ್ಯವಾನನು ಸಂಪೂರ್ಣ ಪ್ರಜ್ಞೆಯನ್ನು ಪಡೆದು ಮೇಲೆದ್ದನು. ಸುದೀರ್ಘವಾದ ನಿದ್ದೆಯಿಂದ ಎಚ್ಚೆತ್ತವನಂತೆ ಸತ್ಯವಾನನು ಕಾಣುತ್ತಿದ್ದನು. ಎದ್ದೊಡನೆಯೇ ಸುತ್ತಲೂ ಒಮ್ಮೆ ನೋಡಿ ಹೇಳಿದನು :

"ಸುಮಧ್ಯಮೇ! ಹಣ್ಣುಗಳನ್ನೊಯ್ಯಲು ನಾನು ನಿನ್ನೊಡನೆ

ಅರಣ್ಯಕ್ಕೆ ಬಂದೆನು. ಸುಪಕ್ವವಾದ ಹಣ್ಣುಗಳನ್ನು ಕೊಯ್ದು ಬುಟ್ಟಿಯಲ್ಲಿ ತುಂಬಿಕೊಂಡನಂತರ ಸೌದೆಗಾಗಿ ನಾನು ಮರವನ್ನೇರಿದೆನು. ರೆಂಬೆಯನ್ನು ಕಡಿಯುತ್ತಿದ್ದಾಗ ತಲೆಯಲ್ಲಿ ನೋವು ಕಾಣಿಸಿಕೊಂಡಿತು. ನನಗೆ ಆ ಮರದ ಮೇಲೆ ನಿಲ್ಲಲೂ ಸಾಧ್ಯವಾಗಲಿಲ್ಲ.

ಒಡನೆಯೇ ಕೆಳಗಿಳಿದು ನಿನ್ನ ಬಳಿಗೆ ಬಂದು ನಿನ್ನ ತೊಡೆಯ ಮೇಲೆ ಮಲಗಿಬಿಟ್ಟೆನು. ಅಲ್ಲಿಯವರೆಗೆ ನನಗೆ ಎಲ್ಲವೂ ಜ್ಞಾಪಕದಲ್ಲಿದೆ. ನಿನ್ನ ತೊಡೆಯ ಮೇಲೆ ಮಲಗಿದ್ದ ನನಗೆ ನಿದ್ರೆಯು ಬಂದುಬಿಟ್ಟಿತು. ಅನಂತರದಲ್ಲಿ ನನಗೊಂದು ವಿಚಿತ್ರವಾದ ಕನಸಾಗತೊಡಗಿತು. ಇದು ಕನಸೋ ಅಥವಾ ನಿಶ್ಚಯವಾಗಿ ನಡೆಯಿತೋ–ಎಂಬುದನ್ನು ನಾನು ಹೇಳಲಾರೆ. ನನ್ನ ಇಂದ್ರಿಯಗಳು ನಿದ್ರೆಯ ಪರವಶವಾದನಂತರ ನನ್ನ ಸುತ್ತಲೂ ಕತ್ತಲೂ ಕವಿದಂತೆ ಕಾಣಿಸಿತು. ಆ ಕತ್ತಲಿನ ಮಧ್ಯದಲ್ಲಿ ನಾನು ಮಹಾತೇಜಸ್ವಿಯಾಗಿದ್ದ ಪುರುಷನೊಬ್ಬನನ್ನು ಕಂಡೆನು.

ಸಾವಿತ್ರಿ! ಮುಂದೇನಾಯಿತೆಂಬುದು ನಿನಗೆ ತಿಳಿದಿದ್ದರೆ ಎಲ್ಲವನ್ನೂ ವಿವರಿಸಿ ಹೇಳು, ನಾನು ಕಂಡುದು ಕನಸೇ? ಅಥವಾ ನಿಶ್ಚಯವಾಗಿಯೂ ಮಹಾಪುರುಷನೊಬ್ಬನು ನನ್ನ ಸಮೀಪಕ್ಕೆ ಆಗಮಿಸಿದ್ದನೇ?”

ಅದಕ್ಕುತ್ತರವಾಗಿ ಸಾವಿತ್ರಿಯು ಹೇಳಿದಳು :

“ಪ್ರಾಣೇಶ್ವರ! ರಾತ್ರಿಯಲ್ಲಿ ಬಹಳ ಹೊತ್ತು ಕಳೆದುಹೋಗಿದೆ. ಅರ್ಧರಾತ್ರಿಯು ಸಮೀಪಿಸುತ್ತಿದೆ. ನಾನು ಎಲ್ಲ ವಿಷಯಗಳನ್ನೂ ನಾಳೆ ಸವಿಸ್ತರವಾಗಿಯೇ ಹೇಳುವೆನು.

ಪತಿದೇವ! ನಿನಗೆ ಮಂಗಳವಾಗಲಿ, ಮೇಲೇಳು. ಕಾತರದಿಂದ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವ ನಿನ್ನ ತಂದೆ-ತಾಯಿಗಳ ಬಳಿಗೆ ಒಡನೆಯೇ ಹೋಗುವುದು ಯುಕ್ತವಾಗಿದೆ. ಸೂರ್ಯನು ಅಸ್ತಮಿಸಿ ಬಹಳ ಹೊತ್ತಾಗಿದೆ. ರಾತ್ರಿಯು ಅಂಧಕಾರಮಯವಾಗಿದೆ. ಕಠೋರವಾಗಿ ಧ್ವನಿಮಾಡುವ ನಕ್ತಂಚರಗಳು (ಕ್ರೂರಪ್ರಾಣಿಗಳು) ಸ್ವಚ್ಛಂದವಾಗಿ ನಮ್ಮ ಸುತ್ತಲೂ ಸುತ್ತುತ್ತಿವೆ. ಪ್ರಾಣಿಗಳು ಸಂಚರಿಸುವಾಗ ಉಂಟಾಗುವ ಎಲೆಗಳ ಶಬ್ದವೂ ಕೇಳಿಬರುತ್ತಿದೆ. ದಕ್ಷಿಣದಿಕ್ಕಿಗೂ-ಪಶ್ಚಿಮದಿಕ್ಕಿಗೂ ಮಧ್ಯದಲ್ಲಿರುವ ನೈಋತ್ಯ ದಿಕ್ಕಿನಲ್ಲಿ ನರಿಗಳು ಭಯಂಕರವಾಗಿ ಕೂಗುತ್ತಿವೆ. ಅವುಗಳ ಉಗ್ರವಾದ ಕೂಗನ್ನು ಕೇಳಿದೊಡನೆಯೇ ನನ್ನ ಹೃದಯವು ಕಂಪಿಸುತ್ತದೆ.”

ಸಾವಿತ್ರಿಯ ಮಾತುಗಳನ್ನು ಕೇಳಿ ಸತ್ಯವಾನನು ಹೇಳಿದನು :

"ಸಾವಿತ್ರಿ! ನಾವಿರುವ ಈ ಅರಣ್ಯವು ಬಹಳ ದಟ್ಟವಾಗಿರುವುದರಿಂದ ಗಾಢವಾದ ಕತ್ತಲಿನಿಂದಲೂ ಆವರಿಸಲ್ಪಟ್ಟಿದೆ. ಇಂತಹ ಕತ್ತಲಿನಲ್ಲಿ ನನಗೆ ಹಾದಿಯೂ ತಿಳಿಯುವುದಿಲ್ಲ. ನಿನಗೆ ನಡೆಯಲು ಶಕ್ತಿಯೂ ಇಲ್ಲವಾಗಿದೆ. ಆದುದರಿಂದ ಈ ಸಮಯದಲ್ಲಿ ಈ ಸ್ಥಳದಿಂದ ಪ್ರಯಾಣಮಾಡುವ ಸಾಧ್ಯತೆಯೂ ಇಲ್ಲ."

"ಪತಿದೇವ! ಅಲ್ಲಿ ನೋಡು, ಆಕಸ್ಮಿಕವಾಗಿ ಹರಡಿದ ಕಾಡುಗಿಚ್ಚಿನಿಂದ ಒಣಗಿಹೋದ ವೃಕ್ಷವೊಂದು ಹೊತ್ತಿಕೊಂಡು ಉರಿಯುತ್ತಿದೆ. ಗಾಳಿಯಿಂದ ಸರ್ವತ್ರವ್ಯಾಪ್ತವಾಗಿರುವ ಜ್ವಾಲೆಗಳ ಬೆಳಕು ಇತ್ತ ಕಡೆಯಲ್ಲಿಯೂ ಒಮ್ಮೊಂದೊಮ್ಮೆ ಕಾಣಿಸುತ್ತಿದೆ. ಅದರಿಂದ ಬೆಂಕಿಯನ್ನು ಹೊತ್ತಿಸಿಕೊಂಡು ಬಂದು ನಮ್ಮ ಬಳಿಯಲ್ಲಿರುವ ಈ ಕಟ್ಟಿಗೆಗಳ ಹೊರೆಗೆ ಬೆಂಕಿಹಚ್ಚುತ್ತೇನೆ. ಗಾಢವಾದ ಕತ್ತಲಿನಿಂದ ನಿನಗುಂಟಾಗಿರುವ ಮನಸ್ಸಿನ ಸಂತಾಪವನ್ನು ದೂರ ಮಾಡು. ಈಗ ಆಶ್ರಮಕ್ಕೆ ನೀನು ಹೋಗಲಿಚ್ಛೆಯುಳ್ಳವನಾಗಿರದಿದ್ದರೆ ನೀನು ಅಸ್ವಸ್ಥನಾಗಿರುವೆಯೆಂದು ನಾನು ಭಾವಿಸಬೇಕಾಗುತ್ತದೆ. ನೀನು ಹೇಳಿದಂತೆ ಈ ಗಾಢಾಂಧಕಾರದಲ್ಲಿ ನಮಗೆ ದಾರಿಯೂ ತಪ್ಪಬಹುದು. ಬೆಳಗಾದೊಡನೆಯೇ ನಾವು ನಮ್ಮ ಆಶ್ರಮಕ್ಕೆ ಹೋಗೋಣ. ಈ ಅರಣ್ಯದಲ್ಲಿಯೇ ಈ ರಾತ್ರಿಯನ್ನು ಕಳೆಯುವ ಇಚ್ಛೆಯು ನಿನಗೆ ಇರುವುದಾದರೆ ಈ ರಾತ್ರಿಯನ್ನು ಇಲ್ಲಿಯೇ ಕಳೆಯೋಣ."

"ಸಾವಿತ್ರಿ! ನಾನು ಸ್ವಸ್ಥನಾಗಿದ್ದೇನೆ. ನನ್ನ ತಲೆನೋವು ಸಂಪೂರ್ಣವಾಗಿ ಹೊರಟುಹೋಗಿದೆ. ನನ್ನ ಅಂಗಾಂಗಗಳೆಲ್ಲವೂ ಸ್ವಸ್ಥವಾಗಿವೆ. ನನಗೀಗ ಯಾವ ಆಲಸ್ಯವೂ ಇಲ್ಲ. ನಿನ್ನ ಒಲುಮೆಯಿಂದ ನಾನು ನನ್ನ ತಂದೆ-ತಾಯಿಗಳನ್ನೀಗಲೇ ನೋಡಲಿಚ್ಛಿಸುತ್ತೇನೆ. ಅಕಾಲದಲ್ಲಿ ನಾನು ಯಾವಾಗಲೂ ಆಶ್ರಮವನ್ನು ಬಿಟ್ಟು ಹೊರಗಡೆ ಹೊರಟವನೇ ಅಲ್ಲ. ಸಾಯಂಕಾಲವಾದ ಮೇಲೆ ನನ್ನನ್ನು ನನ್ನ ತಾಯಿಯು ಆಶ್ರಮದಿಂದ ಹೊರಗೆ ಹೋಗಬೇಡವೆಂದು ನಿರ್ಬಂಧಿಸುತ್ತಿದ್ದಳು. ಹಗಲಿನಲ್ಲಿಯೇ ನಾನು ಆಶ್ರಮಕ್ಕೆ ಹಿಂದಿರುಗದಿದ್ದರೆ ನನ್ನ ತಂದೆ-ತಾಯಿಗಳಿಬ್ಬರೂ ಬಹುವಾಗಿ ಪರಿತಪಿಸುತ್ತಿದ್ದರು. ಇಷ್ಟುಮಾತ್ರವಲ್ಲದೇ ಆಶ್ರಮವಾಸಿಗಳೆಲ್ಲರನ್ನೂ ಕರೆದುಕೊಂಡು ನಾಲ್ಕು ದಿಕ್ಕುಗಳಲ್ಲಿಯೂ

ಹುಡುಕಲು ತೊಡಗುತ್ತಿದ್ದರು. ನಾನು ಸಿಕ್ಕಿದ ನಂತರ ಬಹುದುಃಖಿತರಾದ ನನ್ನ ತಂದೆ-ತಾಯಿಗಳು 'ನೀನು ಬಹಳ ಹೊತ್ತಾದರೂ ಆಶ್ರಮಕ್ಕೆ ಬರುವುದೇ ಇಲ್ಲ. ಇದರಿಂದ ನಮಗೆ ಬಹಳ ದುಃಖವಾಗುತ್ತದೆ. ಇನ್ನು ಮೇಲಾದರೂ ಹೇಳಿದ ವೇಳೆಗೆ ಸರಿಯಾಗಿ ಬಂದುಬಿಡು' ಎಂದು ಹೇಳುತ್ತಿದ್ದರು.

ಸಾವಿತ್ರಿ! ಅವರೀಗ ಯಾವ ಅವಸ್ಥೆಯಲ್ಲಿ ಇದ್ದಾರೆಂಬುದನ್ನು ಕುರಿತು ನಾನು ಚಿಂತಿಸುತ್ತಿದ್ದೇನೆ. ನನ್ನನ್ನು ಕಾಣದ ಅವರಿಬ್ಬರಿಗೂ ಮಹಾದುಃಖವೇ ಆಗಿರುತ್ತದೆ. ಹಿಂದೆ (ವೃದ್ಧರಾದ ನನ್ನ ತಂದೆ-ತಾಯಿಗಳು) ರಾತ್ರಿಯಲ್ಲಿ ಕಣ್ಣೀರಿಟ್ಟುಕೊಂಡು ಬಹುದುಃಖಿತರಾಗಿ ನನ್ನೊಡನೆ ಪ್ರೀತಿಪೂರ್ವಕವಾಗಿ ಪದೇ-ಪದೇ ಈ ಮಾತನ್ನು ಹೇಳುತ್ತಿದ್ದರು : "ಮಗು! ನಿನ್ನಿಂದ ವಿಹೀನರಾದ ನಾವು ಕ್ಷಣಮಾತ್ರವಾದರೂ ಜೀವಿಸಿರುವುದಿಲ್ಲ. ನೀನು ಎಂದಿನವರೆಗೆ ಜೀವಿಸಿರುವೆಯೋ ಅಂದಿನವರೆಗೆ ನಾವೂ ಜೀವಿಸಿರುತ್ತೇವೆ. ಈ ಮಾತು ನಿಶ್ಚಯ. ನಾವಿಬ್ಬರೂ ವೃದ್ಧರೂ ಅಂಧರೂ ಆಗಿರುತ್ತೇವೆ. ನೀನೇ ನಮಗೆ ನೇತ್ರಪ್ರಾಯನಾಗಿರುವೆ ಮತ್ತು ನಿನ್ನಲ್ಲಿಯೇ ನಮ್ಮ ವಂಶವೂ ಪ್ರತಿಷ್ಠಿತವಾಗಿದೆ. (ನಮ್ಮ ವಂಶದ ವೃದ್ಧಿಯು ನಿನ್ನನ್ನೇ ಅವಲಂಬಿಸಿದೆ.) ಆದುದರಿಂದ ನಮ್ಮಿಬ್ಬರ ಪಿಂಡ (ಶ್ರಾದ್ಧಾದಿಗಳನ್ನು ಮಾಡುವುದು), ಕೀರ್ತಿ ಮತ್ತು ಸಂತಾನಪರಂಪರೆ ಇವು ನಿನ್ನನ್ನೇ ಅವಲಂಬಿಸಿವೆ." ಹೀಗೆಂದು ಅವರು ಅನೇಕಸಲ ನನ್ನೊಡನೆ ಹೇಳಿರುತ್ತಾರೆ, ಸಾವಿತ್ರಿ!

ನನ್ನ ತಾಯಿಯು ವೃದ್ಧೆ. ತಂದೆಯೂ ವೃದ್ಧನಾಗಿದ್ದಾನೆ. ಆ ಇಬ್ಬರಿಗೂ ನಾನು ಊರುಗೋಲಿನ ಪ್ರಾಯದಲ್ಲಿದ್ದೇನೆ. ರಾತ್ರಿಯಲ್ಲಿ ನನ್ನನ್ನು ನೋಡದ ಅವರು ಯಾವ ಅವಸ್ಥೆಯನ್ನು ಹೊಂದಿದ್ದಾರು? ನಾನು ನನಗೆ ಪ್ರಾಪ್ತವಾದ ಈ ನಿದ್ರೆಯ ವಿಷಯದಲ್ಲಿ ದೋಷವನ್ನೆಣಿಸುತ್ತೇನೆ. ಏಕೆಂದರೆ ನನಗೆ ಪ್ರಾಪ್ತವಾದ ಸುದೀರ್ಘವಾದ ಈ ನಿದ್ರೆಯ ಕಾರಣದಿಂದಲೇ, ನನ್ನ ತಂದೆಯೂ, ನನ್ನ ವಿಷಯದಲ್ಲಿ ಯಾವ ಅಪಕಾರವನ್ನೂ ಮಾಡದಿರುವ ನನ್ನ ತಾಯಿಯೂ ಸಂಕಟಕ್ಕೆ ಈಡಾಗಿದ್ದಾರೆ. ನಾನೂ ಸಹ ಅವರಂತೆಯೇ ಕಠಿನವಾದ ಆಪತ್ತಿನಲ್ಲಿ ಸಿಕ್ಕಿ ಸಂಕಟಪಡುತ್ತಿದ್ದೇನೆ. ನನ್ನ ತಾಯಿ-ತಂದೆಗಳನ್ನು ಬಿಟ್ಟು ಜೀವಿಸಲು ನಾನು ಖಂಡಿತವಾಗಿಯೂ ಇಷ್ಟಪಡುವುದಿಲ್ಲ. ನಿಶ್ಚಯವಾಗಿಯೂ ಈ ವೇಳೆಗೆ ಪ್ರಜ್ಞಾಚಕ್ಷುವಾದ (ಅಂಧನಾದ) ನನ್ನ ತಂದೆಯು

ವ್ಯಾಕುಲವಾದ ಬುದ್ಧಿಯಿಂದ ಪ್ರತಿಯೊಬ್ಬ ಆಶ್ರಮವಾಸಿಯ ಸಮೀಪಕ್ಕೂ ಹೋಗಿ ನನ್ನ ವಿಷಯವಾಗಿ ಕೇಳುತ್ತಿರಬೇಕು. ನನ್ನ ವಿಷಯವಾಗಿ ನಾನು ಅಷ್ಟು ದುಃಖಪಡುವುದಿಲ್ಲ. ಆದರೆ ನನಗಾಗಿ ಕಷ್ಟಪಡುತ್ತಿರುವ ತಂದೆಯ ವಿಷಯವಾಗಿಯೂ, ಗಂಡನನ್ನೇ ಅನುಸರಿಸಿರುವ ದುರ್ಬಲೆಯಾದ ತಾಯಿಯ ವಿಷಯವಾಗಿಯೂ ಬಹಳವಾಗಿ ದುಃಖಿಸುತ್ತೇನೆ. ನನ್ನ ಕಾರಣದಿಂದಾಗಿ ಅವರಿಂದು ಹೆಚ್ಚು ಸಂತಾಪಪಡುತ್ತಿದ್ದಾರೆ. ಅವರು ಜೀವಿಸಿರುವುದನ್ನೇ ನೋಡಿಕೊಂಡು ನಾನೂ ಜೀವಿಸಿದ್ದೇನೆ. ಅವರ ಭರಣ-ಪೋಷಣಗಳನ್ನು ನಾನೇ ಮಾಡಬೇಕು. ಅವರಿಗೆ ಸದಾಕಾಲದಲ್ಲಿಯೂ ಪ್ರೀತಿಯನ್ನು (ಸಂತೋಷವನ್ನು ) ಉಂಟುಮಾಡುವುದು ನನ್ನ ಕರ್ತವ್ಯವೆಂದು ನಾನು ಭಾವಿಸಿದ್ದೇನೆ."

ಯುಧಿಷ್ಠಿರ! ಹೀಗೆಂದು ಹೇಳಿ ಧರ್ಮಾತ್ಮನಾದ, ಪಿತೃಭಕ್ತನಾದ, ಪಿತೃಪ್ರಿಯನಾದ ಸತ್ಯವಾನನು ಕೈಗಳೆರಡನ್ನೂ ಮೇಲೆತ್ತಿ ಗಟ್ಟಿಯಾಗಿ ಅಳಲು ಪ್ರಾರಂಭಿಸಿದನು. ಅವನಿಗೆ ತನ್ನ ದುಃಖವನ್ನು ತಡೆದುಕೊಳ್ಳಲು ಸಾಧ್ಯವಾಗಲೇ ಇಲ್ಲ. ಬಹುದುಃಖಿತನಾಗಿ ಅಳುತ್ತಿದ್ದ ಗಂಡನನ್ನು ಕಂಡು ಧರ್ಮಚಾರಿಣಿಯಾದ ಸಾವಿತ್ರಿಯು ತನ್ನ ಸೀರೆಯ ಸೆರಗಿನಿಂದ ಗಂಡನ ಕಣ್ಣೀರನ್ನೊರೆಸುತ್ತಾ ಹೇಳಿದಳು :

"ನನ್ನ ತಪಸ್ಸಿನ ಫಲವೇನಾದರೂ ಇರುವುದಾದರೆ, ನಾನು ದಾನ ಮಾಡಿದ ಫಲವೇನಾದರೂ ಇರುವುದಾದರೆ ಮತ್ತು ಹೋಮ-ಹವನಾದಿಗಳನ್ನು ಮಾಡಿದ ಫಲವೇನಾದರೂ ಇರುವುದಾದರೆ, ನನ್ನ ಅತ್ತೆ-ಮಾವಂದಿರಿಗೂ, ನನ್ನ ಪತಿಗೂ ಮತ್ತು ನನಗೂ ಸಹ ಈ ರಾತ್ರಿಯು ಶುಭದಾಯಕವಾಗಲಿ. ವಿನೋದಕ್ಕಾದರೂ ಒಮ್ಮೆಯೂ ಸುಳ್ಳು ಹೇಳಿದ ಸ್ಮರಣೆಯು ನನಗಿರುವುದಿಲ್ಲ. ನಾನೆಂದೂ ಸುಳ್ಳನ್ನೇ ಆಡಿದವಳಲ್ಲ. ನನ್ನೀ ಸತ್ಯನಿಷ್ಠೆಯಿಂದಲೇ (ಸತ್ಯ ನಿಷ್ಠೆಯ ಫಲದಿಂದಲೇ) ನನ್ನ ಅತ್ತೆ-ಮಾವಂದಿರು ತಮ್ಮ ಜೀವಿತವನ್ನು ಧರಿಸಿರಲಿ."

"ಇಲ್ಲ ಸಾವಿತ್ರಿ! ನನ್ನ ತಂದೆ-ತಾಯಿಗಳನ್ನು ನೋಡದೇ ನನ್ನ ಮನಸ್ಸು ಶಾಂತವಾಗುವುದಿಲ್ಲ. ನನ್ನ ಮನಸ್ಸು ಅವರನ್ನು ನೋಡಲು ಬಹುವಾಗಿ ತವಕಿಸುತ್ತಿದೆ. ಆದುದರಿಂದ ಈ ಕೂಡಲೇ ಆಶ್ರಮಕ್ಕೆ ಹೊರಟು ಹೋಗೋಣ. ಆತ್ಮಸಾಕ್ಷಿಯಾಗಿ ಹೇಳುವೆನು ಕೇಳು, ಸಾವಿತ್ರಿ! ನನ್ನ ಕಾರಣದಿಂದಾಗಿ ನನ್ನ ತಂದೆಗಾಗಲೀ, ತಾಯಿಗಾಗಲೀ ಅಪಾಯವೇನಾದರೂ ಉಂಟಾಗಿದ್ದರೆ ನಾನು ಖಂಡಿತವಾಗಿಯೂ ಜೀವಿಸಿರುವುದಿಲ್ಲ.

ನಿನಗೇನಾದರೂ ಧರ್ಮಬುದ್ಧಿಯಿರುವುದಾದರೆ, ನಾನು ಜೀವಿಸಿರಬೇಕೆಂಬ ಇಚ್ಛೆಯೂ ಇದ್ದು ನನಗೆ ಪ್ರಿಯವನ್ನುಂಟುಮಾಡುವ ಆಶಯವೂ ನಿನಗಿರುವುದಾದರೆ, ಆಶ್ರಮದ ಕಡೆಗೆ ಹೊರಡುವವಳಾಗು. ನಾವು ಈ ರಾತ್ರಿಯನ್ನಿಲ್ಲಿ ಖಂಡಿತವಾಗಿಯೂ ಕಳೆಯುವುದು ಬೇಡ."

ಯುಧಿಷ್ಠಿರ! ಸುಂದರಾಂಗಿಯಾದ ಸಾವಿತ್ರಿಯು ಪತಿಯು ಹೇಳಿದ ಮಾತುಗಳನ್ನು ಕೇಳಿ ಒಡನೆಯೇ ಮೇಲೆದ್ದು, ಬಿಚ್ಚಿಹೋಗಿದ್ದ ತಲೆಗೂದಲನ್ನು ಸರಿಮಾಡಿಕೊಂಡು, ಗಂಡನ ಎರಡು ಕಂಕುಳುಗಳನ್ನೂ ತನ್ನೆರಡು ಕೈಗಳಿಂದ ಹಿಡಿದು ಮೇಲಕ್ಕೆ ಎಬ್ಬಿಸಿದಳು. ಮೇಲೆದ್ದ ಸತ್ಯವಾನನು ತನ್ನ ಶರೀರದ ಮೇಲಿದ್ದ ಧೂಳನ್ನು ಕೈಯಿಂದ ಕೊಡವಿಕೊಂಡನು. ಎಲ್ಲೆಡೆಗಳಲ್ಲಿಯೂ ದೃಷ್ಟಿಯನ್ನು ಪ್ರಸರಿಸಲಾಗಿ ಅವನ ದೃಷ್ಟಿಯು ಹಣ್ಣು ತುಂಬಿದ್ದ ಬುಟ್ಟಿಯ ಮೇಲೆ ಬಿದ್ದಿತು. ಸತ್ಯವಾನನು ಹಣ್ಣಿನ ಬುಟ್ಟಿಯನ್ನು ನೋಡುತ್ತಿದ್ದುದನ್ನು ಕಂಡು ಸಾವಿತ್ರಿಯು ಹೇಳಿದಳು :

"ಪತಿದೇವ! ನಾಳೆ ನೀನು ಈ ಹಣ್ಣಿನ ಬುಟ್ಟಿಯನ್ನು ತೆಗೆದುಕೊಂಡು ಬರಬಹುದಾಗಿದೆ. ನಿನ್ನ ಕ್ಷೇಮಾರ್ಥವಾಗಿ ಈ ಕೊಡಲಿಯನ್ನು ಮಾತ್ರ ನಾನೇ ತೆಗೆದುಕೊಂಡು ಬರುತ್ತೇನೆ." ಹೀಗೆಂದು ಹೇಳಿ ಸಾವಿತ್ರಿಯು ಹಣ್ಣಿನ ಬುಟ್ಟಿಯನ್ನು ವೃಕ್ಷದ ರೆಂಬೆಯೊಂದಕ್ಕೆ ತೂಗು ಹಾಕಿ ಕೊಡಲಿಯನ್ನು ಹೆಗಲ ಮೇಲೆ ಹಾಕಿಕೊಂಡು ಗಂಡನ ಸಮೀಪಕ್ಕೆ ಬಂದಳು. ತನ್ನ ಪತಿಯ ಎಡಗೈಯನ್ನು ಬೆನ್ನಿನ ಹಿಂಭಾಗದಿಂದ ತನ್ನ ಎಡಹೆಗಲ ಮೇಲಿಟ್ಟುಕೊಂಡು ತನ್ನ ಬಲಗೈಯಿಂದ ಗಂಡನನ್ನು ತಬ್ಬಿಕೊಂಡು ಸಾವಿತ್ರಿಯು ಆಶ್ರಮಾಭಿಮುಖವಾಗಿ ಆನೆಯಂತೆ ಗಂಭೀರವಾಗಿ ನಡೆಯುತ್ತಾ ಹೋದಳು.

ಹೀಗೆಯೇ ನಡೆದುಹೋಗುತ್ತಿದ್ದಾಗ ಸತ್ಯವಾನನು ಸಾವಿತ್ರಿಯನ್ನು ಕುರಿತು ಹೇಳಿದನು : "ಭಾಮಿನಿ! ಅಭ್ಯಾಸಬಲದಿಂದಲೇ ನಾನು ಅರಣ್ಯದ ಮಾರ್ಗಗಳನ್ನು ತಿಳಿದವನಾಗಿದ್ದೇನೆ. ಮೇಲಾಗಿ ಚಂದ್ರನೂ ಉದಯಿಸಿ ವೃಕ್ಷಗಳ ಮಧ್ಯದಲ್ಲಿ ಬೆಳದಿಂಗಳು ಅಲ್ಲಲ್ಲಿ ಬೀಳುತ್ತಿರುವುದರಿಂದ ನಾನು ಈ ದಾರಿಯನ್ನೀಗ ಸ್ಪಷ್ಟವಾಗಿ ನೋಡುತ್ತಿದ್ದೇನೆ. ಬೆಳಿಗ್ಗೆ ನಾವು ಹಣ್ಣುಗಳನ್ನು ತರುವ ಸಲುವಾಗಿ ಅರಣ್ಯಕ್ಕೆ ಬಂದ ಮಾರ್ಗವನ್ನೇ ಈಗ ನಾವು ಪುನಃ ಸೇರಿದ್ದೇವೆ. ರಾತ್ರಿಯಾದರೂ ಹಾದಿಯು ತಪ್ಪಿಲ್ಲ. ನೀನು ಇದೇ

ಮಾರ್ಗವನ್ನನುಸರಿಸಿ ಹೋಗಬಹುದಾಗಿದೆ. ಹಾದಿಯು ತಪ್ಪಿಹೋಗಿರಬಹುದೆಂದು ಶಂಕಿಸುವ ಕಾರಣವಿಲ್ಲ. ಮುಂದೆ ಕಾಣುತ್ತಿರುವ ಮುತ್ತುಗದ ಪೊದೆಯ ಸಮೀಪದಲ್ಲಿ ಮಾತ್ರ ಈ ಹಾದಿಯು ಎರಡಾಗಿ ಒಡೆಯುತ್ತದೆ. ಆ ಎರಡರಲ್ಲಿ ಉತ್ತರಕ್ಕಿರುವ ಹಾದಿಯನ್ನು ಹಿಡಿದು ಮುಂದೆ ನಡೆ ; ಬೇಗ-ಬೇಗ ಹೋಗು. ಸಾವಿತ್ರಿ! ಈಗ ನಾನು ನಿಶ್ಚಯವಾಗಿಯೂ



ಸ್ವಸ್ಥನಾಗಿದ್ದೇನೆ ; ಬಲಿಷ್ಠನಾಗಿದ್ದೇನೆ. ನನ್ನ ತಂದೆ-ತಾಯಿಗಳನ್ನು ನೋಡುವ ಹಂಬಲವು ಮಾತ್ರ ಕ್ಷಣ-ಕ್ಷಣಕ್ಕೂ ಹೆಚ್ಚುತ್ತಿದೆ."

ಯುಧಿಷ್ಠಿರ! ಸತ್ಯವಾನನು ಹೀಗೆಂದು ಹೇಳುತ್ತಾ ಸಾವಿತ್ರಿಯ ಜೊತೆಯಲ್ಲಿ ಬಹಳ ಅವಸರದಿಂದ ಆಶ್ರಮದ ಕಡೆಗೆ ಹೋದನು.

ಎರಡುನೂರತೊಂಬತ್ತೇಳನೆಯ ಅಧ್ಯಾಯವು ಮುಗಿಯಿತು.

## ಪತ್ನೀಸಮೇತನಾದ ದ್ಯುಮತ್ಸೇನನು ಸತ್ಯವಾನನು ಬಾರದೇ ಇದ್ದುದಕ್ಕಾಗಿ ಚಿಂತಿಸಿದುದು : ಋಷಿಗಳು ದ್ಯುಮತ್ಸೇನನನ್ನು ಆಶ್ವಸಿಸಿದುದು : ಸಾವಿತ್ರೀ-ಸತ್ಯವಾನರು ಆಶ್ರಮಕ್ಕೆ ಬಂದುದು : ಸಾವಿತ್ರಿಯು ಸಾವಕಾಶವಾದುದಕ್ಕೆ ಕಾರಣವನ್ನು ವಿವರಿಸಿ ಹೇಳಿದುದು

ಯುಧಿಷ್ಠಿರ! ಇತ್ತಲಾಗಿ ಸತ್ಯವಾನನ ತಂದೆಯಾದ ದ್ಯುಮತ್ಸೇನನಿಗೆ ಯಮಧರ್ಮನ ವರಪ್ರಸಾದದಿಂದಾಗಿ ಅಂಧತ್ವದ ನಿವಾರಣೆಯಾಯಿತು. ಅವನು ತನ್ನ ಸುತ್ತಲೂ ಇದ್ದ ಎಲ್ಲ ವಸ್ತುಗಳನ್ನೂ ನೋಡಲು ಸಮರ್ಥನಾದನು. ಆದರೆ ಆ ಕಣ್ಣುಗಳಿಂದ ತನ್ನ ಪ್ರೇಮಪುತ್ರನನ್ನು ಬಹಳ ವೇಳೆಯಾದರೂ ದ್ಯುಮತ್ಸೇನನು ಕಾಣಲಿಲ್ಲ. ಆ ಕಾರಣದಿಂದಾಗಿ ದ್ಯುಮತ್ಸೇನನು ತನಗೆ ಅಂಧತ್ವದ ನಿವಾರಣೆಯಿಂದುಂಟಾದ ಸಂತೋಷವನ್ನು ಅನುಭವಿಸಲೂ ಅಸಮರ್ಥನಾದನು. ಪುತ್ರನನ್ನು ಕಾಣಲಿಲ್ಲವೆಂಬ ಕಾತರತೆಯು ಕ್ಷಣ-ಕ್ಷಣಕ್ಕೂ ಹೆಚ್ಚುತ್ತಿದ್ದಿತು. ತನ್ನ ಪತ್ನಿಯಾದ ಶೈಬ್ಯೆಯೊಡನೆ ಎಲ್ಲ ಆಶ್ರಮಗಳನ್ನೂ ಹೊಕ್ಕು ನೋಡಿದನು. ಯಾವ ಆಶ್ರಮದಲ್ಲಿಯೂ ತನ್ನ ಪ್ರೇಮಪುತ್ರನಿರಲಿಲ್ಲ. ಸೂರ್ಯನು ಅಸ್ತಂಗತನಾದನು. ವೃದ್ಧದಂಪತಿಗಳ ಕಳವಳವು ಮತ್ತಷ್ಟು ಉಲ್ಬಣಿಸಿತು. ಆಶ್ರಮ-ನದೀ-ತಟಾಕಗಳ ಸಮೀಪದಲ್ಲಿಯೂ, ವನೋಪವನಪ್ರದೇಶಗಳಲ್ಲಿಯೂ ಮಗನನ್ನು ಹುಡುಕಿದರು. ಅರಣ್ಯದ ಮಧ್ಯದಿಂದ ‘ಸರ-ಸರ’ ಎಂಬ ಯಾವುದೋ ಶಬ್ದವೊಂದು ಕೇಳಿದರೂ ಒಡನೆಯೇ ವೃದ್ಧದಂಪತಿಗಳು ಕ್ಷಣಕಾಲ ನಿಂತಲ್ಲಿಯೇ ನಿಲ್ಲುವರು. ಶಬ್ದವನ್ನು ಮತ್ತಷ್ಟು ಆಲಿಸಿ ಕೇಳುವರು. ಸತ್ಯವಾನ-ಸಾವಿತ್ರಿಯರು ಆ ಮಾರ್ಗದಿಂದಲೇ ಬರುತ್ತಿರಬಹುದೆಂದು ತಲೆಯನ್ನು ಮೇಲೆತ್ತಿ ಸ್ವಲ್ಪ ಹೊತ್ತಿನವರೆಗೆ ನಿರೀಕ್ಷಿಸುವರು. ಮರುಕ್ಷಣದಲ್ಲಿ ‘ಸರ-ಸರ’ ಶಬ್ದವೂ ನಿಂತುಹೋಗುತ್ತಿದ್ದಿತು. ಮಗನ ಆಗಮನದ ಸೂಚನೆಯೂ ಇರುತ್ತಿರಲಿಲ್ಲ. ಒಡನೆಯೇ ದ್ಯುಮತ್ಸೇನನು ಬಹುಖಿನ್ನನಾಗಿ ಕಣ್ಣೀರಿಡುತ್ತಾ ಪತ್ನಿಯೊಡನೆ ಅರಣ್ಯದ ಮತ್ತೊಂದು ಕಡೆಗೆ ಧಾವಿಸುವನು. ಪುತ್ರವಿಯೋಗಸಂಕಟದಿಂದ ಪರಿತಪಿಸುತ್ತಿದ್ದ ಆ ವೃದ್ಧದಂಪತಿಗಳಿಗೆ ಅರಣ್ಯಪ್ರದೇಶದಲ್ಲಿ ನಡೆದು ಹೋಗುವಾಗ ಕಲ್ಲು-ಮುಳ್ಳುಗಳಿವೆಯೆಂಬ ಪರಿವೆಯೂ ಇರಲಿಲ್ಲ. ಪಾದಗಳು ಒಡೆದು ರಕ್ತವು ತೊಟ್ಟಿಕ್ಕುತ್ತಿದ್ದಿತು.

ವೃದ್ಧದಂಪತಿಗಳು ಇಲ್ಲಿಂದಲ್ಲಿಗೆ–'ಸತ್ಯವಾನ! ಸಾವಿತ್ರಿ!' ಎಂದು ಕೂಗುತ್ತಾ ಹುಚ್ಚರಂತೆಯೇ ಅಲೆದಾಡುತ್ತಿದ್ದರು. ಕಲ್ಲು-ಮುಳ್ಳು-ದರ್ಭೆಗಳ ಪರಿವೆಯೇ ಇಲ್ಲದೇ ನಡೆದು ಹೋಗುತ್ತಿದ್ದ ಅವರ ಕಾಲುಗಳು ಒಡೆದು ಗಾಯವಾಗಿ ರಕ್ತವು ಸ್ರವಿಸುತ್ತಿದ್ದಿತು. ಮೈಯಿಗೂ ಮುಳ್ಳು ಚುಚ್ಚಿದ್ದಿತು. ಅವರ ಅಲೆದಾಟವನ್ನು ನೋಡಿ ಮರುಕಗೊಂಡ ಆಶ್ರಮವಾಸಿಗಳಾದ ಬ್ರಾಹ್ಮಣರು ಅವರನ್ನು ನಾಲ್ಕೂ ಕಡೆಗಳಿಂದಲೂ ಸುತ್ತುವರಿದು ಅವರು ಮುಂದೆ ಹೋಗುವುದನ್ನು ಬಹುಪ್ರಯಾಸದಿಂದ ತಡೆದು ಸಮಾಧಾನ ಹೇಳಿ ಆಶ್ರಮಕ್ಕೆ ಕರೆತಂದರು. ಆಶ್ರಮದಲ್ಲಿ ಭಾರ್ಯಾಸಮೇತನಾಗಿ ಕುಳಿತಿದ್ದ ದ್ಯುಮತ್ಸೇನನ ಸುತ್ತಲೂ ವೃದ್ಧತಾಪಸರು ಕುಳಿತು ಹಿಂದಿನ ರಾಜರ ವಿಚಿತ್ರತರವಾದ ಇತಿಹಾಸಗಳನ್ನು ಹೇಳುತ್ತಾ ದ್ಯುಮತ್ಸೇನನನ್ನು ಸಮಾಧಾನಗೊಳಿಸಲು ಪ್ರಯತ್ನಿಸುತ್ತಿದ್ದರು. ಆದರೆ ಆ ವೃದ್ಧದಂಪತಿಗಳಿಗೆ ತಮ್ಮ ಮಗನನ್ನು ನೋಡಬೇಕೆನ್ನುವ ತವಕವು ಕ್ಷಣ-ಕ್ಷಣಕ್ಕೂ ಹೆಚ್ಚುತ್ತಿದ್ದಿತು. ಸತ್ಯವಾನನ ಬಾಲ್ಯವೃತ್ತವನ್ನು ನೆನೆದು ಕಣ್ಣೀರಿಡುತ್ತಿದ್ದರು. ಅವರ ಮನಸ್ಸನ್ನು ಸ್ವಲ್ಪವಾದರೂ ಸಮಾಧಾನಗೊಳಿಸಬೇಕೆನ್ನುವ ವೃದ್ಧತಪಸ್ವಿಗಳ ಪ್ರಯತ್ನವು ಫಲ ದಾಯಕವಾಗಲಿಲ್ಲ."

**"ಹಾ ಪುತ್ರಕ! ಹಾ ಸಾಧ್ವಿ ವಧೂಃ! ಕ್ವಾಸಿ? ಕ್ವಾಸಿ?"**

"ಹಾ ಪುತ್ರ! ಎಲ್ಲಿರುವೆ? ಸಾಧ್ವಿಯಾದ ಸೊಸೆಯೇ! ಎಲ್ಲಿರುವೆ? ನೀನೆಲ್ಲಿಗೆ ಹೊರಟುಹೋದೆ? ಅಯ್ಯೋ!" ಎಂದು ದಂಪತಿಗಳಿಬ್ಬರೂ ಗೋಳಿಡಲು ಮೊದಲಿಟ್ಟರು.

ಅವರ ದುಃಖವನ್ನು ನೋಡಿ ಸತ್ಯನಿಷ್ಠನಾದ ಸುವರ್ಚಸನೆಂಬ ಬ್ರಾಹ್ಮಣನೊಬ್ಬನು ಹೇಳಿದನು :

**ಯಥಾಸ್ಯ ಭಾರ್ಯಾ ಸಾವಿತ್ರೀ ತಪಸಾ ಚ ದಮೇನ ಚ ।**
**ಆಚಾರೇಣ ಚ ಸಂಯುಕ್ತಾ ತಥಾ ಜೀವತಿ ಸತ್ಯವಾನ್ ॥೧೦॥**

"ಯಾವ ಕಾರಣದಿಂದ ಸತ್ಯವಾನನ ಭಾರ್ಯೆಯಾದ ಸಾವಿತ್ರಿಯು ತಪಸ್ಸು-ದಮ-ಶಿಷ್ಟಾಚಾರಗಳಿಂದ ಕೂಡಿರುವಳೋ ಅದೇ ಕಾರಣದಿಂದ ಸತ್ಯವಾನನು ಖಂಡಿತವಾಗಿಯೂ ಜೀವಿಸಿದ್ದಾನೆ."

ಗೌತಮನೆಂಬ ಮತ್ತೊಬ್ಬ ಬ್ರಾಹ್ಮಣನು ಹೇಳಿದನು :

"ನಾನು ವೇದ-ವೇದಾಂಗಗಳನ್ನು ಅಧ್ಯಯನಮಾಡಿರುತ್ತೇನೆ. ಮಹತ್ತರವಾದ ತಪಸ್ಸನ್ನೂ ಮಾಡಿರುತ್ತೇನೆ. ಮೇಲಾಗಿ ನೈಷ್ಠಿಕಬ್ರಹ್ಮಚಾರಿ

ಯಾಗಿಯೂ ಇರುತ್ತೇನೆ. ಅಗ್ನಿಯನ್ನು ಹವಿಸ್ಸಿನಿಂದಲೂ, ಗುರುಜನರನ್ನು ಪರಿಚರ್ಯೆಯಿಂದಲೂ ಸಂತೋಷಗೊಳಿಸಿದ್ದೇನೆ. ಮಾಡಬೇಕಾದ ಎಲ್ಲ ವ್ರತಗಳನ್ನೂ ನಾನು ಏಕಾಗ್ರಚಿತ್ತದಿಂದ ಮಾಡಿ ಮುಗಿಸಿದ್ದೇನೆ. ಕೇವಲ ವಾಯುವನ್ನೇ ಆಹಾರವನ್ನಾಗಿ ಸೇವಿಸುತ್ತಾ ನಿಯಮದಿಂದ ಉಪವಾಸವ್ರತವನ್ನೂ ಮಾಡಿರುತ್ತೇನೆ.

**ಅನೇನ ತಪಸಾ ವೇದ್ಮಿ ಸರ್ವಂ ಪರಚಿಕೀರ್ಷಿತಮ್ ।**
**ಸತ್ಯಮೇತನ್ನಿಬೋಧಧ್ವಂ ಧ್ರಿಯತೇ ಸತ್ಯವಾನಿತಿ ॥೧೩॥**

ಈ ಎಲ್ಲ ತಪಸ್ಸುಗಳ ಫಲದಿಂದಾಗಿ ಇತರರು ಮಾಡುವ ಎಲ್ಲ ಕಾರ್ಯಗಳೂ ನನ್ನ ಮನಸ್ಸಿಗೆ ಸ್ಫುರಣೆಯಾಗುತ್ತವೆ. ಆದುದರಿಂದ ಸತ್ಯವಾಗಿ ಹೇಳುವ ನನ್ನೀ ಮಾತನ್ನು ಕೇಳಿರಿ. ಸತ್ಯವಾನನು ಖಂಡಿತವಾಗಿಯೂ ಜೀವಂತನಾಗಿರುತ್ತಾನೆ."

ಗೌತಮನು ಹೇಳಿದ ಮಾತುಗಳನ್ನು ಕೇಳಿ ಅವನ ಶಿಷ್ಯನು ಹೇಳಿದನು :

**ಉಪಾಧ್ಯಾಯಸ್ಯ ಮೇ ವಕ್ತ್ರಾದ್ಯಥಾ ವಾಕ್ಯಂ ವಿನಿಃಸೃತಮ್ ।**
**ನೈವ ಜಾತು ಭವೇನ್ಮಿಥ್ಯಾ ತಥಾ ಜೀವತಿ ಸತ್ಯವಾನ್ ॥೧೪॥**

"ನಮ್ಮ ಗುರುಗಳಾದ ಗೌತಮರ ಮುಖಾರವಿಂದದಿಂದ ಯಾವೊಂದು ಮಾತು ಹೊರಟರೂ ಆ ಮಾತು ಎಂದೆಂದಿಗೂ ಸುಳ್ಳಾಗದು. ಈ ಕಾರಣದಿಂದ ಸತ್ಯವಾನನು ಖಂಡಿತವಾಗಿಯೂ ಜೀವಿಸಿಯೇ ಇದ್ದಾನೆ."

ಅನಂತರದಲ್ಲಿ ಅಲ್ಲಿ ಕುಳಿತಿದ್ದ ಮಹರ್ಷಿಗಳು ಹೇಳಿದರು :

**ಯಥಾಸ್ಯ ಭಾರ್ಯಾ ಸಾವಿತ್ರೀ ಸರ್ವೈರೇವ ಸುಲಕ್ಷಣೈಃ ।**
**ಅವೈಧವ್ಯಕರೈರ್ಯುಕ್ತಾ ತಥಾ ಜೀವತಿ ಸತ್ಯವಾನ್ ॥೧೫॥**

"ಸತ್ಯವಾನನ ಭಾರ್ಯೆಯಾದ ಸಾವಿತ್ರಿಯು ಸಮಸ್ತ ಸುಲಕ್ಷಣಗಳಿಂದಲೂ ಕೂಡಿದವಳಾಗಿರುತ್ತಾಳೆ. ಅವಳ ಮುಖದಲ್ಲಿ ಯಾವ ವೈಧವ್ಯದ ಚಿಹ್ನೆಯೂ ಕಂಡುಬಂದಿರಲಿಲ್ಲ. ದೀರ್ಘಸೌಮಂಗಲ್ಯದ ಶುಭಲಕ್ಷಣಗಳೆಲ್ಲವೂ ಅವಳಲ್ಲಿವೆ. ಆದುದರಿಂದ ಸತ್ಯವಾನನು ಖಂಡಿತವಾಗಿಯೂ ಜೀವಿಸಿದ್ದಾನೆ.

ಭಾರದ್ವಾಜರು ಹೇಳಿದರು :

**ಯಥಾಸ್ಯ ಭಾರ್ಯಾ ಸಾವಿತ್ರೀ ತಪಸಾ ಚ ದಮೇನ ಚ ।**
**ಆಚಾರೇಣ ಚ ಸಂಯುಕ್ತಾ ತಥಾ ಜೀವತಿ ಸತ್ಯವಾನ್ ॥೧೬॥**

"ಸುವರ್ಚಸನು ಹೇಳಿದಂತೆ ಸತ್ಯವಾನನ ಪತ್ನಿಯಾದ ಸಾವಿತ್ರಿಯು

ತಪಸ್ಸು-ದಮ-ಶಿಷ್ಟಾಚಾರಗಳಿಂದ ಕೂಡಿದವಳಾಗಿರುವುದರಿಂದ ಸತ್ಯವಾನನು ಖಂಡಿತವಾಗಿಯೂ ಜೀವಿಸಿರುವನೆಂದು ನನ್ನ ನಿಶ್ಚಯವೂ ಆಗಿರುವುದು."

ದಾಲ್ಭ್ಯರು ಹೇಳಿದರು :

**ಯಥಾ ದೃಷ್ಟಿಃ ಪ್ರವೃತ್ತಾ ತೇ ಸಾವಿತ್ರ್ಯಾಶ್ಚ ಯಥಾ ವ್ರತಮ್ ।**
**ಗತಾಹಾರಮಕೃತ್ವಾ ಚ ತಥಾ ಜೀವತಿ ಸತ್ಯವಾನ್ ॥೧೭॥**

"ದ್ಯುಮತ್ಸೇನ! ಹೋಗಿದ್ದ ಕಣ್ಣುಗಳು ನಿನಗೆ ಪುನಃ ಪ್ರಾಪ್ತವಾಗಿವೆ. ಸಾವಿತ್ರಿಯು ತ್ರಿರಾತ್ರೋಪವಾಸವ್ರತವನ್ನು ಯಥಾವಿಧಿಯಾಗಿ ಮಾಡಿ ಮುಗಿಸಿದ್ದಾಳೆ. ವ್ರತವನ್ನು ಮುಗಿಸಿದಮೇಲೂ ನಿರಾಹಾರಳಾಗಿ ಪತಿಯೊಡನೆ ಕಾಡಿಗೆ ಹೋಗಿದ್ದಾಳೆ. ಇದೇ ಕಾರಣದಿಂದಲೇ ಸತ್ಯವಾನನು ಜೀವಿಸಿಯೇ ಇದ್ದಾನೆ."

ಅನಂತರದಲ್ಲಿ ಆಪಸ್ತಂಬರು ಹೇಳಿದರು :

**ಯಥಾ ವದನ್ತಿ ಶಾನ್ತಾಯಾಂ ದಿಶಿ ವೈ ಮೃಗಪಕ್ಷಿಣಃ ।**
**ಪಾರ್ಥಿವೀ ಚ ಪ್ರವೃತ್ತಿಸ್ತೇ ತಥಾ ಜೀವತಿ ಸತ್ಯವಾನ್ ॥೧೮॥**

"ನಿನ್ನ ಮಗನಾದ ಸತ್ಯವಾನನು ಜೀವಿಸಿರುವ ರೀತಿಯಲ್ಲಿ ಅರ್ಥಾತ್ ನಿನಗೆ ಯಾವುದೊಂದು ಅಶುಭಕರವಾದ ವಾರ್ತೆಯೂ ಕೇಳಿಬರದ ರೀತಿಯಲ್ಲಿ ಶಾಂತವಾದ ವಾತಾವರಣದಿಂದ ಕೂಡಿರುವ ಈಶಾನ್ಯದಿಕ್ಕಿನಲ್ಲಿರುವ ಮೃಗ-ಪಕ್ಷಿಗಳು ಧ್ವನಿಮಾಡುತ್ತಿವೆ. ಅಂಧನಾಗಿದ್ದ ನಿನಗೆ ಪ್ರಾಪಂಚಿಕವ್ಯವಹಾರವೇ ಸಂಪೂರ್ಣವಾಗಿ ತಪ್ಪಿಹೋಗಿದ್ದಿತು. ಯಾವ ಪ್ರಯತ್ನವೂ ಇಲ್ಲದೆಯೇ ನಿನಗೆ ಪುನಃ ದೃಷ್ಟಿಪಟುತ್ವವು ಲಭಿಸಿ ಭೂಮಿಯ ಮೇಲಿನ ಕಾರ್ಯಪ್ರವೃತ್ತಿಗೆ ಅನುಕೂಲವಾಗಿದೆ. ಈ ಕಾರಣದಿಂದಲೂ ನಾವು ಸತ್ಯವಾನನು ಜೀವಿಸಿರುವನೆಂಬುದನ್ನು ನಿಶ್ಚಯಿಸಿ ಹೇಳಬಹುದಾಗಿದೆ."

ದ್ಯುಮತ್ಸೇನನನ್ನು ಸಮಾಧಾನಗೊಳಿಸುತ್ತಾ ಧೌಮ್ಯರು ಹೇಳಿದರು :

**ಸರ್ವೈರ್ಗುಣೈರುಪೇತಸ್ತೇ ಯಥಾ ಪುತ್ರೋ ಜನಪ್ರಿಯಃ ।**
**ದೀರ್ಘಾಯುರ್ಲಕ್ಷಣೋಪೇತಸ್ತಥಾ ಜೀವತಿ ಸತ್ಯವಾನ್ ॥೧೯॥**

"ರಾಜರ್ಷೇ! ನಿನ್ನ ಮಗನು ಸರ್ವಸದ್ಗುಣಪರಿಪೂರ್ಣನಾಗಿರುತ್ತಾನೆ. ಈ ಕಾರಣದಿಂದಲೇ ಅವನು ಸರ್ವಜನರಿಗೂ ಬಹುಪ್ರಿಯನಾಗಿಯೂ ಇರುತ್ತಾನೆ. ಮೇಲಾಗಿ ಅವನಿಗೆ, ದೀರ್ಘಾಯುವಿಗೆ ಇರಬೇಕಾದಂತಹ ಲಕ್ಷಣಗಳೂ ಇರುತ್ತವೆ. ಈ ಕಾರಣದಿಂದವನು ಜೀವಿಸಿಯೇ ಇದ್ದಾನೆ."

ಯುಧಿಷ್ಠಿರ! ಸತ್ಯನಿಷ್ಠರಾದ ತಪಸ್ವಿಗಳಿಂದ ಇವೇ ಮುಂತಾದ ರೀತಿ

ಯಲ್ಲಿ ಆಶ್ವಾಸಿತನಾದ ದ್ಯುಮತ್ಸೇನನು ಅವರು ಹೇಳಿದ ಮಾತುಗಳೆಲ್ಲವನ್ನೂ ಮನಸ್ಸಿನಲ್ಲಿಯೇ ತರ್ಕಿಸುತ್ತಾ, ಅವರ ಮಾತುಗಳು ಸಮಂಜಸವಾಗಿವೆ ಯೆಂಬುದನ್ನು ಮನಸ್ಸಿಗೆ ತಂದುಕೊಂಡು ಸ್ವಲ್ಪ ಸಮಾಧಾನಹೊಂದಿದನು.

ಸ್ವಲ್ಪ ಹೊತ್ತು ಕಳೆದನಂತರ ಸಾವಿತ್ರಿಯು ತನ್ನ ಪತಿಯಾದ ಸತ್ಯವಾನ ನೊಡನೆ ದ್ಯುಮತ್ಸೇನನ ಆಶ್ರಮವನ್ನು ಬಹುಸಂತಸದಿಂದ ಪ್ರವೇಶಿಸಿದಳು.

ಅವರ ಆಗಮನವನ್ನು ಕಂಡು ಸಂತುಷ್ಟಾಂತರಂಗರಾದ ಬ್ರಾಹ್ಮಣರು ದ್ಯುಮತ್ಸೇನನಿಗೆ ಹೇಳಿದರು :

"ರಾಜರ್ಷೇ! ನೀನೀಗ ನಿನ್ನ ಪ್ರೇಮಪುತ್ರನೊಡನೆ ಸಮಾಗಮ ಹೊಂದಿರುವೆ. ಇಂಗಿಹೋಗಿದ್ದ ಎರಡು ಕಣ್ಣುಗಳೂ ನಿನಗೆ ಪುನಃ ಲಭ್ಯವಾ ಗಿವೆ. ಇಂತಹ ಸ್ಥಿತಿಯಲ್ಲಿರುವ ನಿನ್ನನ್ನು ನಾವು ಹೃತ್ಪೂರ್ವಕವಾಗಿ, ಇತೋ ಪ್ಯತಿಶಯವಾದ ವೃದ್ಧಿಯನ್ನು ಹೊಂದುವಂತೆ ಹರಸುವೆವು. ಪ್ರೇಮಪುತ್ರ ನೊಡನಾದ ಸಮಾಗಮದಿಂದಲೂ, ಪತಿವ್ರತೆಯಾದ ಸಾವಿತ್ರಿಯ ದರ್ಶನ ದಿಂದಲೂ ಮತ್ತು ದೃಷ್ಟಿಯ ಪುನಃಪ್ರಾಪ್ತಿಯಿಂದಲೂ ನೀನು ಮೂರು ವಿಧವಾದ ಲಾಭವನ್ನು ಏಕಕಾಲದಲ್ಲಿ ಪಡೆದಂತಾಯಿತು. ನಾವು ಈ ಹಿಂದೆ ನಿನ್ನ ಅಭಿವೃದ್ಧಿಯ ವಿಷಯವಾಗಿ ಏನು ಹೇಳಿದ್ದೆವೋ ಅವೆಲ್ಲವೂ ಯಥಾವ ತ್ತಾಗಿ ನಿನಗೆ ಸಿದ್ಧಿಸುತ್ತಿವೆ. ನಮ್ಮ ಮಾತೆಂದಿಗೂ ಸುಳ್ಳಾಗುವುದಿಲ್ಲ. ಇನ್ನು ಸ್ವಲ್ಪ ಕಾಲದಲ್ಲಿಯೇ ನಿನಗೆ ಇನ್ನೂ ಹೆಚ್ಚು-ಹೆಚ್ಚಿನ ಸಂಪತ್ಸಮೃದ್ಧಿಗಳು ಪ್ರಾಪ್ತವಾಗುತ್ತವೆ."

ಹೀಗೆಂದು ಹೇಳಿದ ನಂತರ ಆ ಬ್ರಾಹ್ಮಣೋತ್ತಮರು ಅಗ್ನಿಯನ್ನು ಪ್ರತಿಷ್ಠಾಪಿಸಿ ದ್ಯುಮತ್ಸೇನನ ಸಮೀಪದಲ್ಲಿ ಕುಳಿತರು.

ದ್ಯುಮತ್ಸೇನನ ಪತ್ನಿಯಾದ ಶೈಬ್ಯೆಯೂ, ಸಾವಿತ್ರೀ-ಸತ್ಯವಾನರೂ ಸರ್ವರ ಅನುಮತಿಯನ್ನೂ ಪಡೆದು ಯಾವ ವಿಧವಾದ ಆತಂಕವೂ ಇಲ್ಲದೆ ಒಂದು ಪಾರ್ಶ್ವದಲ್ಲಿ ಕುಳಿತರು.

ಸತ್ಯವಾನ ಮತ್ತು ಸಾವಿತ್ರಿಯರು ಆಶ್ರಮಕ್ಕೆ ಆಗಮಿಸಿದುದರಿಂದ ಎಲ್ಲರೂ ಹರ್ಷಿತರಾಗಿದ್ದರು. ಆದರೆ ದಂಪತಿಗಳಿಬ್ಬರೂ ಅರ್ಧರಾತ್ರಿಯವರೆಗೆ ಆಶ್ರಮಕ್ಕೆ ಬರದಿರಲು ಕಾರಣವೇನೆಂಬುದನ್ನು ತಿಳಿದುಕೊಳ್ಳಲು ಮಹರ್ಷಿ ಗಳಿಗೆ ಬಹಳ ಕುತೂಹಲವಿದ್ದಿತು. ಮೇಲಾಗಿ ರಾಜನಿಗೆ ದೃಷ್ಟಿಯು ಆಕಸ್ಮಿಕ ವಾಗಿ ಲಭಿಸಿದುದೂ ಸಹ ಅವರ ಕುತೂಹಲಕ್ಕೆ ಮತ್ತೊಂದು ಕಾರಣವಾಗಿ ದ್ದಿತು. ಅಂತೆಯೇ ಅವರು ರಾಜಪುತ್ರನಾದ ಸತ್ಯವಾನನನ್ನು ಪ್ರಶ್ನಿಸಿದರು :

"ರಾಜಪುತ್ರ! ಹೊತ್ತಾಗುವ ಮೊದಲೇ ನಿನ್ನ ಪತ್ನಿಯೊಡನೆ ಆಶ್ರಮಕ್ಕೆ ಹಿಂದಿರುಗಲಿಲ್ಲವೇಕೆ? ಈಗಾದರೋ ಅರ್ಧರಾತ್ರಿಯೂ ಮೀರಿಹೋಗಿದೆ. ಆಶ್ರಮಕ್ಕೆ ಇಷ್ಟು ಹೊತ್ತುಮಾಡಿಕೊಂಡು ಬರಲು ಕಾರಣವೇನು? ಹೊತ್ತಾಗುವ ಮೊದಲೇ ಆಶ್ರಮಕ್ಕೆ ಹಿಂದಿರುಗಲು ನಿನಗೊದಗಿದ್ದ ಪ್ರತಿಬಂಧಕವಾದರೂ ಏನು? ಹೊತ್ತಿಗೆ ಸರಿಯಾಗಿ ನೀನು ನಿನ್ನ ಪತ್ನಿಯೊಡನೆ ಆಶ್ರಮಕ್ಕೆ ಹಿಂದಿರುಗದೇ ಇದ್ದುದರಿಂದ ನಿನ್ನ ತಾಯಿ-ತಂದೆಗಳೂ ಮತ್ತು ನಾವೂ ಬಹಳ ಸಂತಪ್ತರಾಗಿದ್ದೆವು. ಆದುದರಿಂದ ಈ ವಿಷಯಗಳೆಲ್ಲವನ್ನೂ ವಿವರಿಸಿ ಹೇಳುವುದು ಸಾಧುವಾಗಿದೆ."

ಅದಕ್ಕುತ್ತರವಾಗಿ ಸತ್ಯವಾನನು ಹೇಳಿದನು :

"ತಂದೆಯವರ ಅನುಮತಿಯನ್ನು ಪಡೆದು ಸಾವಿತ್ರಿಯೊಡನೆ ಇಂದು ಪ್ರಾತಃಕಾಲದಲ್ಲಿ ನಾನು ಕಾಡಿಗೆ ಹೋದೆನು. ಅಲ್ಲಿ ನಾನು ವೃಕ್ಷವೊಂದನ್ನು ಹತ್ತಿ ಸೌದೆಯನ್ನು ಕಡಿಯುತ್ತಿದ್ದಾಗ ನನ್ನ ತಲೆಯಲ್ಲಿ ದಾರುಣವಾದ ವೇದನೆಯು ಕಾಣಿಸಿಕೊಂಡಿತು. ನಾನು ಮುಂದೆ ಕೊಡಲಿಯನ್ನೆತ್ತಲೂ ಕೂಡ ಅಸಮರ್ಥನಾದೆನು. ಒಡನೆಯೇ ವೃಕ್ಷದಿಂದ ಕೆಳಗಿಳಿದು ಸಾವಿತ್ರಿಯ ತೊಡೆಯ ಮೇಲೆ ಮಲಗಿಬಿಟ್ಟೆನು. ನನಗೆ ಗಾಢನಿದ್ರೆಯು ಬಂದುಬಿಟ್ಟಿತು. ಇಷ್ಟು ಮಾತ್ರ ನನಗೆ ಜ್ಞಾಪಕವಿದೆ. ಅಂತಹ ಗಾಢನಿದ್ರೆಯು ನನಗೆ ಈ ಹಿಂದೆ ಎಂದೂ ಬಂದಿರಲಿಲ್ಲ. ನನಗೆ ಎಚ್ಚರವಾಗುವ ವೇಳೆಗೆ ಬಹಳ ಹೊತ್ತುಕಳೆದಿತ್ತು. ಆದರೂ ಸಹ ನನ್ನ ತಂದೆ-ತಾಯಿಗಳು ಮೊದಲಾಗಿ ನೀವೆಲ್ಲರೂ ನನಗಾಗಿ ದುಃಖಿಸಬಾರದೆಂಬ ಕಾತರದಿಂದ ಸಾವಿತ್ರಿಯೊಡನೆ ಆಶ್ರಮಕ್ಕೆ ಹಿಂದಿರುಗಿದೆನು. ನನಗಿಂದು ಪ್ರಾಪ್ತವಾದ ಗಾಢನಿದ್ರೆಯ ಹೊರತಾಗಿ ಹೊತ್ತಾಗಿ ಬರಲು ಬೇರಾವ ಕಾರಣವೂ ಇಲ್ಲ."

ಆಶ್ರಮವಾಸಿಗಳೆಲ್ಲರೂ ಆಶ್ಚರ್ಯದಲ್ಲಿ ಮುಳುಗಿಹೋದರು. ನಿದ್ರೆ ಹೋದುದೊಂದು ಹೊರತಾಗಿ ಸತ್ಯವಾನನಿಗೆ ಮತ್ತೇನೂ ತಿಳಿಯದು. ಅರ್ಥಾತ್ ರಾಜನಿಗೆ ಕಣ್ಣುಗಳು ಹೇಗೆ ಪ್ರಾಪ್ತವಾದುವೆಂಬ ವಿಷಯವು ಸಹ ಅವನಿಗೆ ತಿಳಿಯದು. ಗೌತಮನು ಆ ವಿಷಯವಾಗಿಯೇ ಸತ್ಯವಾನನನ್ನು ಕೇಳಿದನು :

"ರಾಜಪುತ್ರ! ಹಾಗಾದರೆ ನಿಮ್ಮ ತಂದೆಯ ಅಂಧತ್ವವು ನಿವಾರಣೆಯಾಯಿತೆಂಬ ವಿಷಯವಾಗಲೀ, ಹೇಗೆ ನಿವಾರಣೆಯಾಯಿತೆಂಬುದಾಗಲೀ

ನಿನಗೆ ತಿಳಿದಿಲ್ಲವಲ್ಲವೇ? ನಿನಗೀ ವಿಷಯವು ತಿಳಿಯದೇ ಇದ್ದರೆ ಸಾವಿತ್ರಿಗಾದರೂ ಈ ವಿಷಯವು ತಿಳಿದಿರಲೇಬೇಕು. ಸಾವಿತ್ರಿಯಿಂದಲೇ ನಾನೀ ರಹಸ್ಯವನ್ನು ತಿಳಿಯಬೇಕೆಂದಿರುತ್ತೇನೆ.

ಸಾವಿತ್ರಿ! ನೀನು ಭೂತ-ಭವಿಷ್ಯತ್ತುಗಳನ್ನೂ ತಿಳಿದವಳಾಗಿರುವೆ. ತೇಜೋಮಯಿಯಾಗಿರುವ ನಿನ್ನನ್ನು ನಾನು ಸಾಕ್ಷಾತ್ ಸಾವಿತ್ರಿಯೆಂದೇ ಭಾವಿಸಿದ್ದೇನೆ. ನಿನಗೀ ರಹಸ್ಯವು ತಿಳಿದಿರಲೇಬೇಕು. ನೀನೀ ವಿಷಯವನ್ನು ಯಥಾವತ್ತಾಗಿ ತಿಳಿಯಪಡಿಸು. ಈ ರಹಸ್ಯವನ್ನು ಬಹಿರಂಗಪಡಿಸಲೇಕೂಡದೆಂಬ ನಿಯಮವಿರದಿದ್ದರೆ ನಮಗೀ ವಿಷಯಗಳೆಲ್ಲವನ್ನೂ ಸವಿಸ್ತರವಾಗಿ ಹೇಳು, ರಾಜಕುಮಾರಿ!"

ಯುಧಿಷ್ಠಿರ! ಗೌತಮನ ಮಾತುಗಳನ್ನು ಕೇಳಿ ಸಾವಿತ್ರಿಯು ಹೇಳಿದಳು: "ನೀವುಗಳು ಊಹಿಸಿರುವಂತೆಯೇ ನನಗೀ ರಹಸ್ಯವು ತಿಳಿದಿರುವುದು. ಬ್ರಾಹ್ಮಣೋತ್ತಮರೇ! ಈ ರಹಸ್ಯವು ಹೇಳಬಾರದುದೇನೂ ಅಲ್ಲ. ನಿಮ್ಮ ಆಶಯವೂ ಸಹ ಪೂರ್ಣವಾಗಲಿ. ಆದುದರಿಂದ ನಡೆದ ವಿಷಯಗಳನ್ನು ಯಥಾವತ್ತಾಗಿ ಹೇಳುವೆನು. ಸಾವಧಾನಚಿತ್ತರಾಗಿ ಕೇಳಿರಿ :

ಮಹಾತ್ಮರಾದ ನಾರದರು ನನ್ನ ಪತಿಯ ಮರಣದ ಭವಿಷ್ಯವನ್ನು ನುಡಿದಿದ್ದರು. ಅವರ ಭವಿಷ್ಯವಾಣಿಯಂತೆ ಇಂದು ನನ್ನ ಪತಿಯ ಮರಣದ ದಿನವಾಗಿದ್ದಿತು. ಈ ಕಾರಣದಿಂದಲೇ ನಾನಿಂದು ನನ್ನ ಪತಿಯಿಂದ ಪ್ರತ್ಯೇಕವಾಗಿರಲು ಇಚ್ಛಿಸಲಿಲ್ಲ. ಆದುದರಿಂದ ನಾನು ಮಾವನವರ ಅನುಮತಿಯನ್ನು ಪಡೆದು ಪತಿಯ ಜೊತೆಯಲ್ಲಿಯೇ ಅರಣ್ಯಕ್ಕೆ ತೆರಳಿದೆನು. ಅರಣ್ಯದಲ್ಲಿ ನನ್ನ ಪತಿಯು ತಲೆನೋವಿನಿಂದಾಗಿ ನನ್ನ ತೊಡೆಯ ಮೇಲೆ ಮಲಗಿದನೆಂಬ ವಿಷಯವು ನಿಮಗೆ ಈಗಾಗಲೇ ತಿಳಿದಿರುವುದು. ನನ್ನ ಪತಿಯು ನಿದ್ರಾಪರವಶನಾದ ನಂತರ ಯಮಧರ್ಮನು ತನ್ನ ಭಟರೊಡನೆ ನನ್ನ ಪತಿಯಿದ್ದೆಡೆಗೆ ಬಂದು ನನ್ನ ಪತಿಯ ಅಂಗುಷ್ಠಮಾತ್ರದ ಸೂಕ್ಷ್ಮಶರೀರವನ್ನು ತನ್ನ ಪಾಶದಲ್ಲಿ ಬಿಗಿದು ದಕ್ಷಿಣಾಭಿಮುಖವಾಗಿ ಹೊರಟು ಪಿತೃಲೋಕಕ್ಕೆ ಸೆಳೆದೊಯ್ಯುತ್ತಿದ್ದನು. ಅವನ ಹಿಂದೆಯೇ ಹೋಗುತ್ತಿದ್ದ ನಾನು ವಿಭುವಾದ, ಮಹಾತ್ಮನಾದ ಯಮಧರ್ಮನನ್ನು ಸತ್ಯವಚನಗಳ ಪ್ರವಚನದಿಂದ ಸಂತೋಷಗೊಳಿಸಿದೆನು. ಸಂತುಷ್ಟನಾದ ಪಿತೃಪತಿಯು ನನಗೆ ಐದು ವರಗಳನ್ನು ದಯಪಾಲಿಸಿದನು.

ಯಮಧರ್ಮನ ಕರುಣೆಯಿಂದಾಗಿ ನಾನು ನನ್ನ ಮಾವನವರ ಸಲುವಾಗಿ ಎರಡು ವರಗಳನ್ನು ಪಡೆದೆನು. 'ಅಂಧತ್ವದ ನಿವಾರಣೆ ಮತ್ತು ರಾಜ್ಯಪ್ರಾಪ್ತಿ' ಇವುಗಳೇ ಆ ಎರಡು ವರಗಳು. ನನ್ನ ತಂದೆಗೆ ನೂರು ಗಂಡುಮಕ್ಕಳಾಗ ಬೇಕೆಂಬ ಮೂರನೆಯ ವರವನ್ನೂ, ನನ್ನ ಪತಿಯಿಂದ ನನಗೆ ನೂರು ಮಕ್ಕ ಳಾಗಬೇಕೆಂಬ ನಾಲ್ಕನೆಯ ವರವನ್ನೂ, ಅನಂತರ ಪಡೆದುಕೊಂಡೆನು. ಐದ ನೆಯ ವರವಾಗಿ ನನ್ನ ಪತಿಗೆ ನಾಲ್ಕುನೂರು ವರ್ಷಗಳ ದೀರ್ಘಾಯುಷ್ಯ ವನ್ನೂ ಸಹ ನಾನು ಯಮಧರ್ಮನ ದಯೆಯಿಂದ ಪಡೆದೆನು. ಹಿಂದೆ ನಾನು ಪತಿಯ ಜೀವಿತಾರ್ಥವಾಗಿಯೇ ತ್ರಿರಾತ್ರೋಪವಾಸವ್ರತವನ್ನೂ ಮಾಡಿದ್ದೆನು.

ಬ್ರಾಹ್ಮಣೋತ್ತಮರೇ! ನಿಮ್ಮ ಆಶಯದಂತೆ ನನಗೆ ಪ್ರಾಪ್ತವಾಗಿದ್ದ ದುಃಖವನ್ನೂ ಮತ್ತು ಯಮಧರ್ಮನ ಅನುಗ್ರಹದಿಂದಾಗಿ ಅಪಾರವಾದ ಈ ದುಃಖವು ಅತ್ಯಂತಸಂತೋಷದಲ್ಲಿ ಪರ್ಯವಸಾನಹೊಂದಿದುದನ್ನೂ ಹೇಳಿ ರುವೆನು."

ಸಾವಿತ್ರಿಯ ಮಾತುಗಳನ್ನು ಕೇಳಿ ದ್ಯುಮತ್ಸೇನನೇ ಆದಿಯಾಗಿ ಎಲ್ಲರೂ ಆನಂದಸಾಗರದಲ್ಲಿ ಮುಳುಗಿಹೋದರು.

ಭರದ್ವಾಜಾದಿ ಋಷಿಗಳು ಒಕ್ಕೊರಲಿನಿಂದ ಸಾವಿತ್ರಿಯನ್ನು ಪ್ರಶಂಸಿ ಸುತ್ತಾ : "ಸಾಧ್ವಿಯೇ! ನಿಶ್ಚಯವಾಗಿಯೂ ಮಹಾಮಹಿಮಳಾದ ನಿನ್ನನ್ನು ಸೊಸೆಯನ್ನಾಗಿ ಪಡೆದುಕೊಂಡ ದ್ಯುಮತ್ಸೇನನು ಧನ್ಯನೇ ಸರಿ. ಈ ನರೇಂದ್ರನ ವಂಶವು ವ್ಯಸನದಿಂದ ಸಮಾಕ್ರಾಂತವಾಗಿ ಅಂಧಕಾರಮಯವಾದ ಮಡುವಿನಲ್ಲಿ ಮುಳುಗಿಹೋಗಿದ್ದಿತು. ಇಂತಹ ಸಂದರ್ಭದಲ್ಲಿ ಸುಶೀಲೆಯಾದ, ವ್ರತನಿಷ್ಠಳಾದ, ಪುಣ್ಯವತಿಯಾದ ಸತ್ಕುಲಪ್ರಸೂತೆಯಾದ ನಿನ್ನಿಂದ ಈ ಮಹಾವಂಶವೇ ಪುನರುದ್ಧಾರವಾಯಿತು."

ಯುಧಿಷ್ಠಿರ! ಇವೇ ಮುಂತಾಗಿ ಅಲ್ಲಿ ನೆರೆದಿದ್ದ ಮಹರ್ಷಿಗಳು ಸಾಧ್ವಿ ಯಾದ, ಸುಚರಿತಳಾದ, ಪತಿವ್ರತೆಯಾದ ಸಾವಿತ್ರಿಯನ್ನು ಪ್ರಶಂಸಿಸಿ ದ್ಯುಮತ್ಸೇನನಿಗೂ ಮತ್ತು ಅವನ ಮಗನಾದ ಸತ್ಯವಾನನಿಗೂ ಶುಭಾಶಯ ಗಳನ್ನು ಕೋರಿ ಅವರಿಂದಲೂ ಅಭಿವಂದಿತರಾಗಿ ಸಂತುಷ್ಟಾಂತರಂಗರಾಗಿ ತಮ್ಮ-ತಮ್ಮ ಆಶ್ರಮಗಳನ್ನು ಸೇರಿದರು.

೨೯೮ನೆಯ ಅಧ್ಯಾಯವು ಮುಗಿಯಿತು.

## ಶಾಲ್ವದೇಶದ ಪ್ರಜೆಗಳು ದ್ಯುಮತ್ಸೇನನ ಸಮೀಪಕ್ಕೆ ಬಂದು ಪುನಃ ರಾಜ್ಯಾಡಳಿತವನ್ನು ವಹಿಸಿಕೊಳ್ಳುವಂತೆ ಪ್ರಾರ್ಥಿಸಿದುದು : ದ್ಯುಮತ್ಸೇನನ ರಾಜ್ಯಾಭಿಷೇಕ : ಸಾವಿತ್ರಿಗೆ ನೂರು ಮಕ್ಕಳೂ ನೂರು ಮಂದಿ ತಮ್ಮಂದಿರೂ ಹುಟ್ಟಿದುದು

ಆ ಮಹಾರಾತ್ರಿಯು ಕಳೆದು ಸೂರ್ಯೋದಯವಾಯಿತು. ಆಶ್ರಮದಲ್ಲಿದ್ದ ಋಷಿ-ಮಹರ್ಷಿಗಳು ಪ್ರಾತಃಕಾಲದಲ್ಲಿ ಮಾಡಬೇಕಾದ ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ದ್ಯುಮತ್ಸೇನನ ಆಶ್ರಮಕ್ಕೆ ಬಂದು ಸೇರಿದರು. ಸಾವಿತ್ರಿಯ ಮಹಾಭಾಗ್ಯವನ್ನು ಕುರಿತು ದ್ಯುಮತ್ಸೇನನೊಡನೆ ಎಷ್ಟು ಮಾತುಗಳನ್ನಾಡಿದರೂ ಮಹರ್ಷಿಗಳಿಗೆ ತೃಪ್ತಿಯೆಂಬುದೇ ಇರಲಿಲ್ಲ. ಪುನಃ-ಪುನಃ ಹೇಳಿದುದನ್ನೇ ಹೇಳಿ ದ್ಯುಮತ್ಸೇನನ ಆನಂದದಲ್ಲಿ ಪಾಲುಗೊಳ್ಳುತ್ತಿದ್ದರು.

ಋಷಿ-ಮಹರ್ಷಿಗಳು ದ್ಯುಮತ್ಸೇನನೊಡನೆ ಸಾವಿತ್ರಿಯ ಮಾಹಾತ್ಮ್ಯವನ್ನೂ ಮತ್ತು ಅವಳು ಯಮಧರ್ಮನಿಂದ ಪಡೆದ ಐದು ವರಗಳನ್ನೂ-ಆ ಐದು ವರಗಳಲ್ಲಿ ಎರಡು ವರಗಳು ಫಲಿತವಾಗಿ ಉಳಿದ ಮೂರು ವರಗಳು ಫಲಿತವಾಗಬೇಕಾಗಿರುವುದನ್ನೂ ಪ್ರಸ್ತಾಪಿಸುತ್ತಿದ್ದಾಗಲೇ, ಶಾಲ್ವರಾಜ್ಯದ ಜನರ ದೊಡ್ಡಗುಂಪೊಂದು ದ್ಯುಮತ್ಸೇನನ ಆಶ್ರಮದ ಸಮೀಪಕ್ಕೆ ಆಗಮಿಸಿತು. ಆ ಗುಂಪಿನಿಂದ ನಾಲ್ಕಾರು ಮುಖಂಡರು ಮುಂದೆ ಬಂದು ಆಶ್ರಮದೊಳಗೆ ಪ್ರವೇಶಿಸಿ, ಋಷಿಗಳ ಮಧ್ಯಭಾಗದಲ್ಲಿ-ದೇವತೆಗಳಿಂದ ಸುತ್ತುವರಿಯಲ್ಪಟ್ಟ ಇಂದ್ರನಂತೆ ಕಂಗೊಳಿಸುತ್ತಾ ಕುಳಿತಿದ್ದ-ದ್ಯುಮತ್ಸೇನನಿಗೆ ರಾಜಗೌರವವನ್ನು ಸಲ್ಲಿಸಿ, ಅವನ ಅಪ್ಪಣೆಯನ್ನು ಪಡೆದು ಯಥೋಚಿತವಾದ ಆಸನಗಳಲ್ಲಿ ಕುಳಿತು ದ್ಯುಮತ್ಸೇನನ ಶತ್ರುವು ತನ್ನ ಮಂತ್ರಿಗಳಿಂದಲೇ ಕೊಲ್ಲಲ್ಪಟ್ಟನೆಂಬ ಶುಭವಾರ್ತೆಯನ್ನು ದ್ಯುಮತ್ಸೇನರಾಜನಿಗೆ ಅರಿಕೆಮಾಡಿದರು. ಯಮನಿತ್ತ ಮತ್ತೊಂದು ವರವೂ ಸಹ ಫಲಿತವಾಗಲಿದೆಯೆಂಬ ಸಂತೋಷದಿಂದ ಋಷಿ-ಮಹರ್ಷಿಗಳು ವಿಸ್ಮಿತರಾಗಿ ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಳ್ಳುತ್ತಿರುವಾಗಲೇ ಜನನಾಯಕರು ಮುಂದುವರಿದು ಹೇಳಿದರು :

“ಪ್ರಭುವೇ! ನಿನ್ನನ್ನು ದೇಶಭ್ರಷ್ಟನನ್ನಾಗಿ ಮಾಡಿದ್ದ ಆ ನಿನ್ನ ಶತ್ರುವು ತನ್ನ ಮಂತ್ರಿಗಳ ಕೈಯಿಂದಲೇ ಹತನಾದನು. ಅವನ ಬಂಧು-ಮಿತ್ರರೂ ಹತರಾದರು. ಅವನಿಗೆ ಸಂಬಂಧಿಸಿದ ಯಾರೊಬ್ಬರನ್ನೂ ಬಿಡದೇ ಅವನ ಮಂತ್ರಿಗಳ ಅನುಯಾಯಿಗಳು ಕೊಂದುಹಾಕಿದರು. ಇಷ್ಟುಮಾತ್ರ

ವಲ್ಲ, ಮಹಾರಾಜ! ನಗರದ ನಾಗರಿಕರೆಲ್ಲರೂ ಸೇರಿ ಒಂದು ನಿರ್ಧಾರಕ್ಕೆ ಬಂದಿರುತ್ತೇವೆ. ಇಂದು ನಮ್ಮ ರಾಜ್ಯಕ್ಕೆ ನೀನೇ ರಾಜನಾಗಬೇಕು. ನಿನ್ನ ಪಿತೃ-ಪಿತಾಮಹರು ಆಳಿದ ರಾಜ್ಯಸಿಂಹಾಸನದಲ್ಲಿ ನೀನೇ ಕುಳಿತು ರಾಜ್ಯವಾಳಬೇಕು. ಅಂಧತ್ವದ ದೋಷವಿದ್ದರೂ ಚಿಂತೆಯಿಲ್ಲ. ನೀನೇ ನಮ್ಮ ರಾಜ್ಯವಾಳಬೇಕೆಂದು ನಾವು ಸರ್ವಾನುಮತದಿಂದ ನಿರ್ಧರಿಸಿದ್ದೇವೆ. ಈ ಕಾರಣದಿಂದಲೇ ಪುರಪ್ರಮುಖರು ನಿಮ್ಮನ್ನು ಕರೆತರಲು ನಮ್ಮನ್ನಿಲ್ಲಿಗೆ ಕಳುಹಿಸಿದ್ದಾರೆ. ನಾವು ನಿಮಗಾಗಿ ರಥ-ಗಜಾಶ್ವ-ಪದಾತಿಸೈನ್ಯಗಳನ್ನೂ ತಂದಿರುತ್ತೇವೆ. ನಮ್ಮ ರಾಜ್ಯದಲ್ಲಿರುವ ಚತುರಂಗಬಲವೂ ಸಹ ಈಗ ನಿನಗೇ ಸೇರಿದ್ದಾಗಿರುವುದು. ನೀನೇ ನಮ್ಮ ರಾಜನೆಂಬುದನ್ನು ಈಗಾಗಲೇ ನಾವು ನಮ್ಮ ದೇಶದ ಪಟ್ಟಣ-ಗ್ರಾಮ-ಹಳ್ಳಿಗಳಲ್ಲಿಯೂ ಸಾರಿಬಿಟ್ಟಿದ್ದೇವೆ. ಮಹಾರಾಜ! ನಿನಗೆ ಮಂಗಳವಾಗಲಿ. ನೀನು ಈಗಲೇ ಪರಿವಾರಸಮೇತನಾಗಿ ಈ ದಿವ್ಯರಥದಲ್ಲಿ ಕುಳಿತು ರಾಜಧಾನಿಗೆ ಪ್ರಯಾಣಮಾಡುವವನಾಗು. ಪಿತೃ-ಪಿತಾಮಹರಿಂದ ಅಲಂಕೃತವಾಗಿದ್ದ ಸಿಂಹಾಸನದಲ್ಲಿ ಕುಳಿತು ನೀನೂ ಸಹ ಚಿರಕಾಲ ರಾಜ್ಯಭಾರಮಾಡು."

ಹೀಗೆ ಹೇಳುತ್ತಿರುವಾಗಲೇ ಆ ಪುರಪ್ರಮುಖರು ತಮ್ಮ ರಾಜನನ್ನು ದೃಷ್ಟಿಸಿ ನೋಡಿದರು. ರಾಜನು ನೀರೋಗದೃಢಕಾಯನಾಗಿರುವುದನ್ನೂ ಮತ್ತು ರಾಜನಿಗೆ ಕಣ್ಣುಗಳು ಬಂದಿರುವುದನ್ನೂ ಕಂಡು ಅವರು ಆನಂದ ಸಾಗರದಲ್ಲಿ ಮುಳುಗಿಹೋದರು. ಪಟ್ಟಣಿಗರ ಮಾತನ್ನು ಕೇಳಿ ದ್ಯುಮತ್ಸೇನನಿಗೆ ಆದ ಆನಂದವೆಷ್ಟೆಂಬುದನ್ನು ಹೇಳುವ ಕಾರಣವಿಲ್ಲ. ಆ ಶುಭವಾರ್ತೆಯನ್ನು ಕೇಳಿದೊಡನೆಯೇ ರಾಜನು ಅಲ್ಲಿ ನೆರೆದಿದ್ದ ಋಷಿ-ಮಹರ್ಷಿಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆದು ನಗರಕ್ಕೆ ಹೊರಡಲು ಸಿದ್ಧನಾದನು. ಮಹಾರಾಣಿಗಾಗಿಯೇ ಸಿದ್ಧವಾಗಿದ್ದ ಪಲ್ಲಕ್ಕಿಯಲ್ಲಿ ದ್ಯುಮತ್ಸೇನನ ಪತ್ನಿಯಾದ ಶೈಬ್ಯೆಯೂ ಮತ್ತು ಸಾವಿತ್ರಿಯೂ ಕುಳಿತರು. ಸತ್ಯವಾನ ಮತ್ತು ದ್ಯುಮತ್ಸೇನರು ಸರ್ವಾಲಂಕಾರಭೂಷಿತವಾಗಿದ್ದ ರಥದಲ್ಲಿ ಕುಳಿತರು. ಚತುರಂಗಬಲಸಮೇತನಾಗಿ ದ್ಯುಮತ್ಸೇನರಾಜನು ಸಕಲವೈಭವದೊಡನೆ ಪಟ್ಟಣವನ್ನು ಸೇರಿದನು. ಬ್ರಾಹ್ಮಣೋತ್ತಮರು ದ್ಯುಮತ್ಸೇನನನ್ನು ರಾಜ್ಯಸಿಂಹಾಸನದಲ್ಲಿ ಕೂರಿಸಿ ಪುನಃ ಪಟ್ಟಾಭಿಷೇಕಮಾಡಿದರು. ಸತ್ಯವಾನನಿಗೆ ಯುವರಾಜಪಟ್ಟವನ್ನೂ ಕಟ್ಟಿದರು. ಅನೇಕವರ್ಷಗಳ ಅಂತರದಲ್ಲಿ ಸಾವಿತ್ರಿಯು ನೂರುಮಕ್ಕಳಿಗೆ ಜನ್ಮವಿತ್ತಳು. ಅವರೆಲ್ಲರೂ ಬಹುಪರಾಕ್ರಮಿ

ಗಳಾಗಿಯೂ, ಘೋರಸಮರಗಳಲ್ಲಿಯೂ ಸಹ ಶತ್ರುವಿಗೆ ಬೆನ್ನುತೋರದೇ ಕೆಚ್ಚೆದೆಯಿಂದ ಯುದ್ಧಮಾಡುವ ಸ್ವಭಾವವುಳ್ಳವರಾಗಿಯೂ, ಕುಲದ ಕೀರ್ತಿಯನ್ನು ಹೆಚ್ಚಿಸುವವರಾಗಿಯೂ ಇದ್ದರು.

ಸಾವಿತ್ರಿಯ ತಂದೆಯಾದ ಅಶ್ವಪತಿಯು ಅದೇ ಸಮಯದಲ್ಲಿ ತನ್ನ ಧರ್ಮಪತ್ನಿಯಾದ ಮಾಲವಿಯಲ್ಲಿ ಅತುಲಪರಾಕ್ರಮಿಗಳಾದ ನೂರು ಮಕ್ಕಳನ್ನು ಪಡೆದನು.

ಯುಧಿಷ್ಠಿರ! ಈ ರೀತಿಯಾಗಿ ಮಹಾಮಹಿಮಳಾದ ಸಾವಿತ್ರಿಯು ತನ್ನನ್ನು ತಾನೇ ಉದ್ಧಾರಮಾಡಿಕೊಂಡಳಲ್ಲದೇ, ಅತ್ತೆ-ಮಾವಂದಿರನ್ನೂ, ತಂದೆಯನ್ನೂ ಮತ್ತು ಪತಿಯನ್ನೂ ಅರ್ಥಾತ್ ದ್ಯುಮತ್ಸೇನನ ವಂಶವನ್ನೂ ಉದ್ಧಾರಮಾಡಿದಳು. ಇದೇ ರೀತಿಯಲ್ಲಿ ಶೀಲಸಂಪನ್ನಳಾದ, ಮಂಗಳಾಂಗಿಯಾದ ದ್ರೌಪದಿಯೂ ಸಹ ನಿಮ್ಮೆಲ್ಲರನ್ನೂ ಈ ಕಷ್ಟದಿಂದ ಪಾರುಮಾಡುವಳೆಂಬುದರಲ್ಲಿ ಸಂಶಯವಿಲ್ಲ."

ಜನಮೇಜಯ! ಮಾರ್ಕಂಡೇಯರು ಹೇಳಿದ ಸಾವಿತ್ರಿಯ ಕಥಾಪ್ರವಚನವನ್ನು ಕೇಳಿ ಮಹಾತ್ಮನಾದ ಯುಧಿಷ್ಠಿರನಿಗೆ ಸ್ವಲ್ಪ ಸಮಾಧಾನವಾಯಿತು. ಶೋಕ-ವ್ಯಸನಗಳನ್ನು ತೊರೆದು ಯುಧಿಷ್ಠಿರನು ತನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ ಕಾಮ್ಯಕವನದಲ್ಲಿ ಸುಖದಿಂದ ಕಾಲ ಕಳೆಯುತ್ತಿದ್ದನು.

ಮಹಾರಾಜ! ಸಾವಿತ್ರಿಯ ಕಥಾಶ್ರವಣವು ಅತ್ಯಂತಫಲದಾಯಕವಾದುದು.

**ಯಶ್ಚೇದಂ ಶೃಣುಯಾದ್ಭಕ್ತ್ಯಾ ಸಾವಿತ್ರ್ಯಾಖ್ಯಾನಮುತ್ತಮಮ್ ।**
**ಸ ಸುಖೀ ಸರ್ವಸಿದ್ಧಾರ್ಥೋ ನ ದುಃಖಂ ಪ್ರಾಪ್ನುಯಾನ್ನರಃ ॥೧೭॥**

ಸಾವಿತ್ರಿಯ ಈ ಉಪಾಖ್ಯಾನವನ್ನು ಭಕ್ತಿಯಿಂದ ಯಾವನು ಕೇಳುತ್ತಾನೆಯೋ (ಯಾವನು ಓದುತ್ತಾನೆಯೋ) ಅವನು ಸುಖಿಯಾಗಿರುತ್ತಾನೆ. ಅವನಿಗೆ ಜೀವನದಲ್ಲಿ ಬೇಕಾದ ಸಕಲೇಷ್ಟಾರ್ಥಗಳೂ ಲಭ್ಯವಾಗುತ್ತವೆ ಮತ್ತು ಅವನೆಂದಿಗೂ ದುಃಖಭಾಗಿಯಾಗುವುದಿಲ್ಲ."

ಹೀಗೆಂದು ಹೇಳಿ ವೈಶಂಪಾಯನರು ಅಂದಿನ ಉಪಾಖ್ಯಾನವನ್ನು ಮುಗಿಸಿದರು.

೨೯೯ನೆಯ ಅಧ್ಯಾಯವು ಮುಗಿಯಿತು.

ಏಳನೆಯ ಸಂಪುಟವು ಮುಗಿಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥ ॥ ಶ್ರೀಸದ್ಗುರುಚರಣಾರವಿಂದಾರ್ಪಣಮಸ್ತು ॥ ಓಂ ತತ್ಸತ್

# ಪರಿಶಿಷ್ಟ

## ಕೃತ್ತಿಕಾನಕ್ಷತ್ರವೂ ಋಷಿಪತ್ನಿಯರೂ :

## ಪುಟ 3548, ಅಧ್ಯಾಯ 230

೧. ಸ್ವಾಹಾದೇವಿಯ ಕೃತ್ಯದಿಂದಾಗಿ ಆರು ಮಂದಿ ಋಷಿಪತ್ನಿಯರಿಗೂ ಅಪವಾದಗಳು ಬಂದು ಆರು ಮಂದಿ ಋಷಿಗಳೂ ಅವರನ್ನು ಪರಿತ್ಯಜಿ ಸುತ್ತಾರೆ. ಅನಂತರದಲ್ಲಿ ಅವರು ಸ್ಕಂದನ ಸಮೀಪಕ್ಕೆ ಬರುತ್ತಾರೆ. ಈ ಕಥೆಯು ಈ ಅಧ್ಯಾಯದಲ್ಲಿ ಬರುತ್ತದೆ. ಆ ಆರು ಮಂದಿ ಋಷಿಪತ್ನಿಯರ ಪ್ರಾರ್ಥನೆಯಂತೆ ಸ್ಕಂದನು ಅವರನ್ನು ತಾಯಂದಿರಾಗಿ ಪರಿಗ್ರಹಿಸಲು ಒಪ್ಪು ತ್ತಾನೆ. ಆ ಸಮಯಕ್ಕೆ ಸರಿಯಾಗಿ ಇಂದ್ರನು ಬಂದು ಅಭಿಜಿತಳು ಕೋಪ ಗೊಂಡು ನಕ್ಷತ್ರಮಂಡಲದಿಂದ ಹೊರಟುಹೋದಳೆಂದೂ ಮತ್ತು ಆ ಸ್ಥಾನಕ್ಕೆ ಬೇರೆ ನಕ್ಷತ್ರವನ್ನು ಸ್ಥಾಪಿಸಬೇಕೆಂದೂ ಕೇಳಿಕೊಳ್ಳುತ್ತಾನೆ. ಮಹಾಸೇನನ ಮತ್ತು ಇಂದ್ರನ ಅಭಿಪ್ರಾಯಗಳನ್ನು ತಿಳಿದ ಕೃತ್ತಿಕೆಯರು ತಾರಾಮಂಡಲವನ್ನು ಸೇರಿಕೊಳ್ಳುತ್ತಾರೆ–ಎಂಬ ಕಥೆಯಿದೆ. ಆದರೆ ಕೃತ್ತಿಕೆಯರೇ ಆರುಮಂದಿ ಋಷಿಪತ್ನಿಯರೇ? ಎಂಬುದಿಲ್ಲಿ ಸ್ಪಷ್ಟವಾಗಿ ಕಾಣುತ್ತಿಲ್ಲ. ಋಷಿಪತ್ನಿಯರೇ ಬೇರೆ ಎಂಬುದಕ್ಕೆ–'ಅವರು ಅಕ್ಷಯಸ್ವರ್ಗಕ್ಕೆ ಹೋದರು'– ಎಂಬುದು ಒಂದು ಪ್ರಕರಣದಲ್ಲಿ ಸೂಚಿತವಾಗಿದೆ. ಹಿಂದಿನ ಪ್ರಕರಣದಲ್ಲಿ ಮಾತೃಗಣಗಳು ಬಂದು ಸ್ಕಂದನಿಗೆ ಸ್ತನ್ಯಕೊಟ್ಟರು ಎಂದಿದೆ. ಆದರೆ ಮಾತೃಗಣಗಳೇ ಋಷಿಪತ್ನಿಯರಲ್ಲವೆಂದು ಸಂದರ್ಭಾನುಸಾರ ಹೇಳಬಹುದಾಗಿದೆ. ಆರು ಮಂದಿ ಋಷಿಪತ್ನಿಯರೇ ಕೃತ್ತಿಕೆಯರಾದರೇ?–ಎಂಬುದನ್ನು ಗ್ರಂಥಾಂತರಗಳ ಸಹಾಯದಿಂದ ಪರಿಶೀಲಿಸಬೇಕಾಗಿದೆ.

೨. ಸ್ಕಂದನಿಗೆ ಸುಬ್ರಹ್ಮಣ್ಯನೆಂಬ ಹೆಸರು ಎಲ್ಲಿಂದ ಹೇಗೆ ಬಂದಿ ತೆಂಬುದನ್ನು ಪರಿಶೀಲಿಸುವ ಆಶಯವಿದೆ. ಏಕೆಂದರೆ : ಈಗ ಸ್ಕಂದನೇ ಸುಬ್ರ ಹ್ಮಣ್ಯನೆಂದು ಹೇಳುವುದು ರೂಢಿಯಲ್ಲಿದೆ. ನಮಗೆ ಇದರಲ್ಲಿ ವ್ಯತ್ಯಾಸವೇ ಕಾಣುವುದಿಲ್ಲ. ಆದರೆ ಮಹಾಭಾರತದಲ್ಲಾಗಲೀ, ರಾಮಾಯಣದಲ್ಲಾಗಲೀ, ಸ್ಕಂದನ ಚರಿತ್ರೆಯಲ್ಲಾಗಲೀ ಅಪ್ಪಿ-ತಪ್ಪಿಯೂ 'ಸುಬ್ರಹ್ಮಣ್ಯ' ಎಂಬ ಹೆಸರಿನಿಂದ ಸ್ಕಂದನನ್ನು ಕರೆದಿರುವುದಿಲ್ಲ. ಅಮರಕಾರನೂ ಸಹ ಕಾರ್ತಿ ಕೇಯ, ಮಹಾಸೇನಾ, ಶರಜನ್ಮಾ, ಷಡಾನನ, ಪಾರ್ವತೀನಂದನ, ಸ್ಕಂದ, ಸೇನಾನೀ, ಅಗ್ನಿಭೂ, ಗುಹ, ಬಾಹುಲೇಯ, ತಾರಕಜಿತ್, ಕುಮಾರ, ಕ್ರೌಂಚದಾರಣ–ಈ ಹೆಸರುಗಳಿಂದ ಕರೆದಿರುತ್ತಾನೆ. ಈ ಎಲ್ಲ ಹೆಸರುಗಳಿಗೂ ಸಾಮಾನ್ಯವಾಗಿ ಮಹಾಭಾರತ-ರಾಮಾಯಣಗಳಲ್ಲಿ ಆಧಾರವು ಸಿಕ್ಕುತ್ತದೆ.

೩. ಮೂರನೆಯದಾಗಿ 'ಸುಬ್ರಹ್ಮಣ್ಯೇಶ್ವರ' ಎಂದರೆ ನಮ್ಮ ಮನಸ್ಸಿನಲ್ಲಿ ಪ್ರಥಮತಃ ಸರ್ಪದ ಸ್ಫುರಣೆಯಾಗುವುದೇ ಹೊರತು ಸ್ಕಂದನ ಸ್ಮರಣೆಯುಂಟಾಗುವುದಿಲ್ಲ. ಸ್ಕಂದನ ವಿಗ್ರಹವನ್ನು ಸುಬ್ರಹ್ಮಣ್ಯೇಶ್ವರನೆಂದು ಕರೆಯುವ ವಾಡಿಕೆಯಿದೆ. ಸರ್ಪವನ್ನೂ ಸಹ ಸುಬ್ರಹ್ಮಣ್ಯನೆಂದು ಕರೆಯುವ ವಾಡಿಕೆಯಿದೆ. ಅನೇಕ ದೇವಸ್ಥಾನಗಳಲ್ಲಿಯೂ ಸರ್ಪಾಕಾರದಲ್ಲಿಯೇ ಸುಬ್ರ ಹ್ಮಣ್ಯನಿದ್ದಾನೆ. ಕುಕ್ಕೇಸುಬ್ರಹ್ಮಣ್ಯ, ಘಾಟೀಸುಬ್ರಹ್ಮಣ್ಯ, ರಾಮನಾಥಪುರದ ಸುಬ್ರಹ್ಮಣ್ಯದೇವಾಲಯ–ಈ ಎಲ್ಲ ಸ್ಥಳಗಳಲ್ಲಿಯೂ ಸರ್ಪಾಕಾರದ ಸುಬ್ರ ಹ್ಮಣ್ಯನನ್ನು ಪೂಜೆಮಾಡುತ್ತಾರೆ. ಕದ್ರೂ-ವಿನತೆಯರ ಪ್ರಕರಣದಲ್ಲಿ ಯಾಗಲೀ, ಸರ್ಪಯಜ್ಞದ ಪ್ರಕರಣದಲ್ಲಾಗಲೀ ಹೆಸರಿಸಿರುವ ಮುಖ್ಯಸರ್ಪ ಗಳಲ್ಲಿ ಯಾವುದಕ್ಕಾದರೂ 'ಸುಬ್ರಹ್ಮಣ್ಯ' ಎಂಬ ಹೆಸರಿದೆಯೇ ಎಂದು ತರ್ಕಿಸಿದರೂ ಭಾರತದ ಗ್ರಂಥದಲ್ಲಿ ಸರ್ಪಕ್ಕೆ ಸುಬ್ರಹ್ಮಣ್ಯ ಎಂಬ ಹೆಸರು ಎಲ್ಲಿಯೂ ಕಂಡುಬರುವುದಿಲ್ಲ. ಈ ಕಾರಣಗಳಿಂದ ಸ್ಕಂದನು ಸುಬ್ರ ಹ್ಮಣ್ಯನೇ? ಸುಬ್ರಹ್ಮಣ್ಯನೆಂದರೆ ಸರ್ಪರೂಪನೇ? ಎಂಬುದನ್ನು ಪರಿಶೀಲಿಸ ಬೇಕಾಗಿದೆ.

ದಕ್ಷಿಣಭಾರತದಲ್ಲಿ ಮಾತ್ರ ಸುಬ್ರಹ್ಮಣ್ಯ ಎಂಬ ಹೆಸರು ಪ್ರಚಲಿತವಾಗಿರು ವುದೇ ಹೊರತು ಉತ್ತರಭಾರತದಲ್ಲಿ ಈ ಹೆಸರು ಇಲ್ಲವೇ ಇಲ್ಲವೆನ್ನಬಹುದು.

೧. ಮಹಾಭಾರತದಲ್ಲಿಯೇ ಶಲ್ಯಪರ್ವದ 44ನೆಯ ಅಧ್ಯಾಯದಲ್ಲಿ ಬರುವ ಸ್ಕಂದನ ಕಥೆಗೂ ಇಲ್ಲಿಯ ಕಥೆಗೂ ಹೆಚ್ಚು ವ್ಯತ್ಯಾಸವಿದೆ. ಅಲ್ಲಿ ಅಗ್ನಿ-ಸ್ವಾಹಾ ಇವರ ಪ್ರಕರಣವೇ ಬರುವುದಿಲ್ಲ. ಮಹೇಶ್ವರನ ತೇಜಸ್ಸು ಸ್ಕನ್ನವಾಗಿ ಅಗ್ನಿಯಲ್ಲಿ ಬೀಳುತ್ತದೆ. ಅಗ್ನಿಯದನ್ನು ಧರಿಸಲು ಸಮರ್ಥನಾಗು ವುದಿಲ್ಲ. ಆ ಮಹಾತೇಜಸ್ಸನ್ನು ಗಂಗೆಯಲ್ಲಿ ಬಿಡುತ್ತಾನೆ. ಗಂಗಾದೇವಿಗೂ ಸಹ ಆ ಮಹಾತೇಜಸ್ಸನ್ನು ಧರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅವಳದನ್ನು ದೇವತೆಗಳಿಂದ ಸಂಪೂಜಿತವಾದ ಹಿಮವತ್ಪರ್ವತದಲ್ಲಿ ವಿಸರ್ಜಿಸುತ್ತಾಳೆ. ಅನಂತರದಲ್ಲಿ ಶರಸ್ತಂಬದಲ್ಲಿದ್ದ (ಜೊಂಡಿನ ಮಧ್ಯದಲ್ಲಿದ್ದ) ಶಿಶುವನ್ನು ಕೃತ್ತಿಕೆಯರು ನೋಡಿ 'ನನ್ನವನಿವನು' ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಾರೆ. ಅಲ್ಲಿಯೂ ಕೃತ್ತಿಕೆಯರು ಯಾರೆಂಬುದು ವ್ಯಕ್ತವಾಗಿಲ್ಲ.

**ಸ ತತ್ರ ವವೃಧೇ ಲೋಕಾನಾವೃತ್ಯ ಜ್ವಲನಾತ್ಮಜಃ ।**
**ದದೃಶುರ್ಜ್ವಲನಾಕಾರಂ ತಂ ಗರ್ಭಮಥ ಕೃತ್ತಿಕಾಃ ॥೧೦॥**

**ಶರಸ್ತಮ್ಬೇ ಮಹಾತ್ಮಾನಮನಲಾತ್ಮಜಮೀಶ್ವರಮ್ ।**
**ಮಮಾಯಮಿತಿ ತಾಃ ಸರ್ವಾಃ ಪುತ್ರಾರ್ಥಿನ್ಯೋಽಭಿಚುಕ್ರುಶುಃ ॥೧೧॥**

ಅಗ್ನಿಯ ಆ ಪುತ್ರನು ಲೋಕಗಳನ್ನೇ ತನ್ನ ತೇಜಸ್ಸಿನ ಮೂಲಕವಾಗಿ ವ್ಯಾಪಿಸುತ್ತಾ ವೃದ್ಧಿಹೊಂದಿದನು. ಶರಸ್ತಂಬದಲ್ಲಿದ್ದ, ಮಹಾತ್ಮನಾದ, ಅಗ್ನಿಯ ಪುತ್ರನಾದ, ಈಶ್ವರನಾದ, ಅಗ್ನಿಸದೃಶನಾಗಿದ್ದ ಆ ಗರ್ಭವನ್ನು ಕೃತ್ತಿಕೆಯರು ನೋಡಿ–'ಇವನು ನನ್ನವನು, ಇವನು ನನ್ನ ಮಗನು'–ಎಂಬುದಾಗಿ ಪುತ್ರೇಪ್ಸುಗಳಾದ ಅವರು ಕೂಗಿಕೊಳ್ಳಲು ಮೊದಲಿಟ್ಟರು.

**ತಾಸಾಂ ವಿದಿತ್ವಾ ಭಾವಂ ತಂ ಮಾತೄಣಾಂ ಭಗವಾನ್ಪ್ರಭುಃ ।**
**ಪ್ರಸ್ನುತಾನಾಂ ಪಯಃ ಷಡ್ಭಿರ್ವದನೈರಪಿಬವತ್ತದಾ ॥೧೨॥**

ತಾಯಂದಿರ (?) ಮನೋಭಾವವನ್ನು ತಿಳಿದ ಪ್ರಭುವು ಅವರ ಸ್ತನಗಳಿಂದ ಪ್ರಸ್ರುತವಾಗುತ್ತಿದ್ದ ಹಾಲನ್ನು ತನ್ನ ಆರು ಮುಖಗಳಿಂದಲೂ ಕುಡಿದನು.

ಕೃತ್ತಿಕೆಯರಿಗೆ ಸ್ಕಂದನ ಮಾತೃತ್ವವು ಹೇಗೆ ಬಂದಿತೆಂಬುದು ಸ್ಪಷ್ಟವಾಗಿಲ್ಲ. ಇಲ್ಲಿ ಗಾಂಗೇಯನೆಂಬ ಹೆಸರಿನಿಂದಲೂ ಸ್ಕಂದನನ್ನು ಕರೆಯುತ್ತಾರೆ.

ರಾಮಾಯಣದಲ್ಲಿಯೂ ಸಹ ಇದೇ ಪ್ರಕಾರದಿಂದಲೇ ಸ್ಕಂದನ ಉತ್ಪತ್ತಿಯನ್ನು ಹೇಳಲಾಗಿದೆ. ಅಲ್ಲಿ ಕೃತ್ತಿಕೆಯರ ಪ್ರಕರಣವು ಹೀಗೆ ಬರುತ್ತದೆ :

**ತಂ ಕುಮಾರಂ ತತೋ ಜಾತಂ ಸೇನ್ದ್ರಾಃ ಸಹಮರುದ್ಗಣಾಃ ।**
**ಕ್ಷೀರಸಂಭಾವನಾರ್ಥಾಯ ಕೃತ್ತಿಕಾಃ ಸಮಯೋಜಯನ್ ॥೨೩॥**

ಬಾಲಕಾಂಡ-ಅಧ್ಯಾಯ ೩೭

ಕೆಲವು ಕಾಲಾನಂತರದಲ್ಲಿ ಜೊಂಡಿನ ಮಧ್ಯದಲ್ಲಿ ಗಂಗಾದೇವಿಯಿಂದ ನಿಕ್ಷೇಪಿಸಲ್ಪಟ್ಟಿದ್ದ ಆ ಗರ್ಭವು ಶಿಶುವಾಯಿತು. ಶಿಶುವು ಹುಟ್ಟಿದೊಡನೆಯೇ ಇಂದ್ರಪ್ರಮುಖರಾದ ದೇವತೆಗಳೆಲ್ಲರೂ ಆನಂದಪರವಶರಾಗಿ ಮಗುವಿದ್ದೆಡೆಗೆ ಧಾವಿಸಿ ಬಂದವರಾಗಿ ಮಗುವಿಗೆ ಹಾಲುಕುಡಿಸಲು ಆರು ಮಂದಿ ಕೃತ್ತಿಕೆಯರನ್ನು ನಿಯೋಜಿಸಿದರು.

**ತಾಃ ಕ್ಷೀರಂ ಜಾತಮಾತ್ರಸ್ಯ ಕೃತ್ವಾ ಸಮಯಮುತ್ತಮಮ್ ।**
**ದದುಃ ಪುತ್ರೋಽಯಮಸ್ಮಾಕಂ ಸರ್ವಾಸಾಮಿತಿ ನಿಶ್ಚಿತಾಃ ॥೨೪॥**

ತತಸ್ತು ದೇವತಾಃ ಸರ್ವಾಃ ಕಾರ್ತಿಕೇಯ ಇತಿ ಬ್ರುವನ್ ।
ಪುತ್ರಸ್ತ್ರೈಲೋಕ್ಯವಿಖ್ಯಾತೋ ಭವಿಷ್ಯತಿ ನ ಸಂಶಯಃ ॥೨೫॥

"ಈ ಶಿಶುವು ಕೃತ್ತಿಕೆಯರ ಮಗನೆಂದು ವಿಖ್ಯಾತನಾಗುವುದಾದರೆ ನಾವು ಇವನಿಗೆ ಸ್ತನ್ಯಕೊಡುವೆವು"–ಎಂಬುದಾಗಿ ಇಂದ್ರಾದಿಗಳೊಡನೆ ಕೃತ್ತಿಕೆಯರು ಉತ್ತಮೋತ್ತಮವಾದ ಸಮಯವನ್ನು (ಒಪ್ಪಂದ) ಮಾಡಿಕೊಂಡವರಾಗಿ ಆ ಶಿಶುವು ತಮ್ಮಗಳ ಮಗನೆಂದು ಪ್ರಸಿದ್ಧನಾಗುತ್ತಾನೆಂಬ ದೃಢನಿಶ್ಚಯದಿಂದ ಸಂತೋಷಭರಿತರಾಗಿ ಸ್ತನ್ಯಪಾನಮಾಡಿಸಲು ನಿಶ್ಚಯಿಸಿದರು.

ದೇವತೆಗಳೂ ಸಹ ಕೃತ್ತಿಕೆಯರ ಪ್ರಾರ್ಥನೆಯಂತೆ ಶಿಶುವಿಗೆ ಕಾರ್ತಿಕೇಯನೆಂದು ನಾಮಕರಣಮಾಡಿ–'ಈ ನಿಮ್ಮ ಮಗನು ಮೂರು ಲೋಕಗಳಲ್ಲಿಯೂ ಕಾರ್ತಿಕೇಯನೆಂದೇ ಖ್ಯಾತನಾಗುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ'–ಎಂಬುದಾಗಿ ಘೋಷಿಸಿದರು.

ಇಲ್ಲಿಯೂ ಸಹ ಕೃತ್ತಿಕೆಯರ ಪೂರ್ವೇತಿಹಾಸವು ಉಕ್ತವಾಗಿಲ್ಲ. ವಿದ್ಯಾಲಂಕಾರ ಪ್ರೊ॥ ಎಸ್. ಕೆ. ರಾಮಚಂದ್ರರಾಯರು ಬರೆದಿರುವ 'ಶಿಲ್ಪ ನೆಲೆ ಮತ್ತು ಹಿನ್ನೆಲೆ' ಎಂಬ ಪುಸ್ತಕದ 'ಸ್ವಯಂಪ್ರಧಾನ ಪಾರ್ಶ್ವದೇವತೆಗಳು' ಎಂಬ ಶೀರ್ಷಿಕೆಯಲ್ಲಿ (ಪುಟ ೧೯೨) 'ಋಷಿಪತ್ನಿಯರು ಮಗುವಿಗೆ ತಾಯಿಯರಾಗಬಯಸಿದವರಾಗಿ ಕೃತ್ತಿಕೆಯರಾದರು'–ಹೀಗೆಂದು ಪುರಾಣಗಳಲ್ಲಿದೆಯೆಂದು ಉದ್ಧರಿಸಿದ್ದಾರೆ.

ಸ್ಕಾಂದಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ ೨೯ನೆಯ ಅಧ್ಯಾಯದಲ್ಲಿ ಸ್ಕಂದೋತ್ಪತ್ತಿಯು ಹೇಳಿದೆ. ಮಹಾಭಾರತದ ಈ ಪ್ರಕರಣದಲ್ಲಿ ಬರುವ ಅನೇಕ ಶ್ಲೋಕಗಳು ಯಥಾವತ್ತಾಗಿ ಅಥವಾ ಸ್ವಲ್ಪ ವ್ಯತ್ಯಾಸವನ್ನು ಹೊಂದಿ ಅಲ್ಲಿಯೂ ಬರುತ್ತವೆ. ಭಾರತದಲ್ಲಿ ಬಿಟ್ಟಿರುವ ಕೆಲವಂಶಗಳನ್ನು ಅಲ್ಲಿ ಸಮನ್ವಯಮಾಡಿ ಹೇಳಲಾಗಿದೆ. ಅಲ್ಲಿ ಪೂರ್ವಕಥೆಯು ಹೀಗೆ ಬರುತ್ತದೆ. ೨೯ನೆಯ ಅಧ್ಯಾಯದ ೨೨ನೆಯ ಶ್ಲೋಕದಿಂದ ಇದಕ್ಕೆ ಸಂಬಂಧಿಸಿದ ಕಥೆಯು ಹೀಗೆ ಪ್ರಾರಂಭವಾಗುತ್ತದೆ.

ದೇವೀ ಚ ಪ್ರವಿವೇಶಾಥ ಭವನಂ ಶಶಿಮೌಲಿನಃ ॥೭೭॥

ಬಳಿಕ ದೇವಿಯೂ ಸಹ ಚಂದ್ರಶೇಖರನ ಮಂದಿರವನ್ನು ಪ್ರವೇಶ ಮಾಡಿದಳು.

V

೭೮-೭೯ : ಆಗ ಆಕೆಯನ್ನು ಕಂಡು ಮಹೇಶ್ವರನು–"ಹೆಂಗಸರಿಗೆ ಧಿಕ್ಕಾರ ವಿರಲಿ!"–ಎಂದನು. ಆಕೆಯೂ ನಮಸ್ಕರಿಸಿ–"ಇದು ನಿಜವೇ ಹೊರತು ಎಂದಿಗೂ ಸುಳ್ಳಲ್ಲ. ಪರಮತತ್ತ್ವದ ಜಡವಾದ ಪ್ರಕೃತಿಯೆಂಬ ಭಾಗವೇ ಆಗಿ ರುವ ಸ್ತ್ರೀಯರು ನಿಂದೆಗೆ ಅರ್ಹರೇ ಅಹುದು. ಪುರುಷರ ಪ್ರಸಾದದಿಂದಲೇ ಅವರಿಗೆ ಸಂಸಾರದಿಂದ ಬಿಡುಗಡೆಯಾಗುವುದು"–ಎಂದಳು.

೮೦ : ಅದರಿಂದ ಸಂತೋಷಗೊಂಡ ಶಿವನು ಆಕೆಯನ್ನು ಕುರಿತು "ಎಲೌ ಪಾರ್ವತಿಯೇ! ಇಂದು ನೀನು ಯೋಗ್ಯಳಾದೆ. ಶುಭಾಂಗಿಯೇ! ನಿನಗೆ ಲೋಕಗಳಲ್ಲಿ ಪ್ರಖ್ಯಾತಿಯನ್ನುಂಟುಮಾಡುವಂತಹ ಪುತ್ರನನ್ನು ಕೊಡುತ್ತೇನೆ"–ಎಂದು ಹೇಳಿದನು.

೮೧-೮೩ : ಬಳಿಕ ಬಹಳ ವಿಧಗಳಾದ ಆಶ್ಚರ್ಯಗಳಿಗೆ ಆಕರನಾದ ಮಹೇಶ್ವರನು ಪಾರ್ವತಿಯೊಡನೆ ರಮಿಸುತ್ತಿದ್ದನು. ಹೀಗೆ ಅನೇಕಸಾವಿರ ವರ್ಷಗಳು ಕಳೆದುಹೋಗಲು ದೇವತೆಗಳು ಬಹಳವಾದ ಕುತೂಹಲವುಳ್ಳ ವರಾಗಿ ಪರಮೇಶ್ವರನು ಏನು ಮಾಡುತ್ತಿರುವನೆಂದು ತಿಳಿದುಬರುವಂತೆ ಅಗ್ನಿದೇವನನ್ನು ಪ್ರೋತ್ಸಾಹಿಸಿದರು. ದ್ವಾರದಲ್ಲಿ ನಿಂತಿದ್ದ ಪ್ರತೀಹಾರಿಯನ್ನು ವಂಚಿಸಿ ಪಾರಿವಾಳದ ಹಕ್ಕಿಯ ರೂಪವನ್ನು ತಳೆದು ಅಗ್ನಿಯು ಶಿವನ ಅಂತಃ ಪುರವನ್ನು ಪ್ರವೇಶಮಾಡಿದನು.

೮೪ : ಪರಪುರುಷನ ಪ್ರವೇಶದಿಂದ ಲಜ್ಜೆಗೊಂಡ ಪಾರ್ವತಿಯನ್ನು ಪರಮೇಶ್ವರನು ಕಂಡು ಆಮೇಲೆ ಅಗ್ನಿಯನ್ನೂ ಕಂಡನು ಮತ್ತು ಆತನನ್ನು ಕುರಿತು ಹೇಳಿದನು : "ಹುತಾಶನ! ನೀನು ಮಾಡಿದ ಈ ಕಾರ್ಯವು ಸರ್ವಥಾ ಯೋಗ್ಯವಲ್ಲ.

೮೫ : ಈಗ ನನ್ನ ಶರೀರದಿಂದ ಹೊರಟಿರುವ ನನ್ನ ವೀರ್ಯವನ್ನು ವ್ಯರ್ಥವಾಗದಂತೆ ನೀನು ಸ್ವೀಕರಿಸು. ಎಲೈ ದುರ್ಬುದ್ಧಿಯೇ! ಹಾಗೆ ಮಾಡ ದಿದ್ದರೆ ನಿನ್ನನ್ನು ಕೋಪದಿಂದ ಈಗಲೇ ಸುಟ್ಟುಬಿಡುವೆನು."

೮೬ : ಬಳಿಕ ಅಗ್ನಿಯು ಭಯಗೊಂಡು ಅದನ್ನು ತೆಗೆದುಕೊಂಡನು. ಅದರಿಂದ ಅಗ್ನಿಮುಖರಾದ ಸಕಲದೇವತೆಗಳೂ ಅದನ್ನು ಧರಿಸಬೇಕಾಯಿತು. ಆ ವೀರ್ಯದಿಂದ ಅಗ್ನಿಸಹಿತರಾದ ದೇವತೆಗಳೆಲ್ಲರೂ ಅತ್ಯಂತವಿಹ್ವಲರಾದರು.

೮೭ : ಪರಮೇಶ್ವರನ ಆ ವೀರ್ಯವು ದೇವತೆಗಳ ಶರೀರಗಳನ್ನು ಸೀಳಿ ಕೊಂಡು ಹೊರಡಲು ಅದರ ಕಣಗಳಿಂದ ನೂರುಗಾವುದಗಳಷ್ಟು ವಿಸ್ತಾರ ವುಳ್ಳ ಪಾದರಸದ ಸರೋವರವೊಂದುಂಟಾಯಿತು.

೮೮ : ಅಗ್ನಿದೇವನೂ ವ್ಯಾಕುಲಗೊಂಡವನಾಗಿ ತನ್ನ ಭಾಗದಲ್ಲಿ ಸ್ವಲ್ಪವನ್ನು ಗಂಗೆಯಲ್ಲಿ ವಿಸರ್ಜಿಸಿದನು. ಆಕೆಯೂ ಆ ತೇಜಸ್ಸನ್ನು ಸಹಿಸ ಲಾರದೇ ತನ್ನ ಅಲೆಗಳಿಂದ ಅದನ್ನು ದಡಕ್ಕೆ ತಳ್ಳಿದಳು.

೮೯-೯೦ : ಅದರಿಂದಲೇ ಮೂರು ಲೋಕಗಳಲ್ಲಿಯೂ ವಿಖ್ಯಾತ ವಾದ ಶ್ವೇತಪರ್ವತವುಂಟಾಯಿತು."

ಅಲ್ಲಿಂದ ಮುಂದೆ ಮಹಾಭಾರತದಲ್ಲಿರುವಂತೆಯೇ ಕಥೆಯು ಮುಂದುವರಿಯುತ್ತದೆ. ಎಷ್ಟೋ ಶ್ಲೋಕಗಳು ಪುನರಾವರ್ತಿತವಾಗಿವೆ. ಕೆಲ ವೆಡೆಗಳಲ್ಲಿ ಸ್ವಲ್ಪ ವ್ಯತ್ಯಾಸವೂ ಇದೆ.

ಒಂದು ವ್ಯತ್ಯಾಸದ ಸಂದರ್ಭವು ಹೀಗಿದೆ : ಕಾಮಪರಿತಪ್ತನಾದ ಅಗ್ನಿಯು ಸ್ಕಾಂದದಲ್ಲಿ ಹೀಗೆ ಹೇಳುತ್ತಾನೆ :

**ಪಾಪಮೇತತ್ಕರ್ಮ ಚೋಗ್ರಂ ನಶ್ಯಾಮಿ ತೃಣವತ್ಸ್ಫುಟಮ್ ।**
**ಕೃತ್ವೈತನ್ನಶ್ಯತೇ ಕೀರ್ತಿರ್ಯಾವದಾಚನ್ದ್ರತಾರಕಮ್ ।**
**ಏವಂ ಸಂಚಿನ್ತ್ಯ ಬಹುಧಾ ಗತ್ವಾ ಚೈವ ವನಾನ್ತರಮ್ ॥೯೪॥**

**ನಿಯನ್ತುಂ ನಾಭವಚ್ಛಕ್ತ ಉಪಾಯೈರ್ಬಹುಭಿರ್ಮನಃ ।**
**ತತಃ ಸ ಕಾಮಸನ್ತಪ್ತೋ ಮೂರ್ಛಿತಃ ಸಮಪದ್ಯತ ॥೯೫॥**

(ಸ್ಕಾಂದಪುರಾಣ)

'ಈಗಾಗಲೇ ಕ್ಷೋಭೆಗೊಂಡಿರುವ ನನಗೆ ಈ ಕಾರ್ಯವು ನ್ಯಾಯ ವಲ್ಲ. ಬ್ರಾಹ್ಮಣೋತ್ತಮರ ಪತ್ನಿಯರೂ, ಪತಿವ್ರತೆಯರೂ, ಪರಪುರುಷ ರನ್ನು ಕಾಮಿಸದವರೂ ಆದ ಈ ಸ್ತ್ರೀಯರನ್ನು ಕಾಮಿಸುತ್ತಿರುವೆನು. ಇದು ಪಾಪಭೂಯಿಷ್ಠವಾದುದೂ, ಉಗ್ರಪರಿಣಾಮವುಳ್ಳದ್ದೂ ಆಗಿರುವುದು. ಇದ ರಿಂದ ನಾನು ಹುಲ್ಲುಕಡ್ಡಿಯಂತೆ ಕ್ಷಣಮಾತ್ರದಲ್ಲಿ ನಾಶಹೊಂದುವೆ ನೆಂಬುದು ನಿಶ್ಚಯ. ಇಂತಹ ಕರ್ಮಮಾಡಿದರೆ ಆಚಂದ್ರಾರ್ಕವಾಗಿ ಮನು ಷ್ಯನ ಕೀರ್ತಿಯು ನಶಿಸುವುದು'—ಹೀಗೆಂದು ಯೋಚಿಸಿ ಅರಣ್ಯಕ್ಕೆ ಹೊರಟು

ಹೋದರೂ ತನ್ನ ಮನಸ್ಸನ್ನು ನಿಯಂತ್ರಿಸಲು ಅವನಿಂದ ಆಗದೆಯೇ ಹೋಯಿತು. ಕಾಮಸಂತಪ್ತನಾದ ಅಗ್ನಿಯು ಆ ಸಮಯದಲ್ಲಿ ಮೂರ್ಛೆ ಹೊಂದಿದನು.

**ಕಾಮಸನ್ತಪ್ತಹೃದಯೋ ದೇಹತ್ಯಾಗವಿನಿಶ್ಚಿತಃ ।**
**ಅಲಾಭೇ ಬ್ರಾಹ್ಮಣಸ್ತ್ರೀಣಾಮಗ್ನಿರ್ವನಮುಪಾಗಮತ್ ॥೩೮॥**

**(ಮಹಾಭಾರತ)**

ಬ್ರಾಹ್ಮಣಸ್ತ್ರೀಯರು ಅಗ್ನಿಗೆ ಸಿಕ್ಕದಿರಲಾಗಿ ಕಾಮಸಂತಪ್ತಹೃದಯನಾದ ಅಗ್ನಿಯು ದೇಹತ್ಯಾಗವನ್ನೇ ಮಾಡಲು ನಿಶ್ಚಯಿಸಿ ಕಾಡಿಗೆ ಹೊರಟು ಹೋದನು.

ಮಹಾಭಾರತದಲ್ಲಿ ಯುಧಿಷ್ಠಿರ-ಮಾರ್ಕಂಡೇಯರ ಸಂವಾದವಿದೆ. ಸ್ಕಾಂದಪುರಾಣದಲ್ಲಿ ಸಪ್ತರ್ಷಿಗಳ ಪತ್ನಿಯರಲ್ಲಿ ಆರು ಮಂದಿಯ ರೂಪವನ್ನು ಹೊಂದಲು ಸ್ವಾಹಾದೇವಿಗೆ ಹೇಗೆ ಸಾಧ್ಯವಾಯಿತೆಂಬುದಕ್ಕೆ ನಿರೂಪಣೆಯಿದೆ. ಅರ್ಜುನನು ನಾರದರನ್ನು ಪ್ರಶ್ನಿಸುತ್ತಾನೆ.

**ಕಸ್ಮಾತ್ಸ್ವಾಹಾಕರೋದ್ರೂಪಂ ಷಣ್ಣಾಂ ತಾಸಾಂ ಮಹಾಮುನೇ ।**
**ಯತ್ತಾ ಭರ್ತೃಪರಾಃ ಸಾಧ್ವ್ಯಸ್ತಪಸ್ವಿನ್ಯೋಽಗ್ನಿಸನ್ನಿಭಾಃ ।**
**ನ ಬಿಭೇತಿ ಚ ಕಿಂ ತಾಭ್ಯಃ ಷಡ್ಭ್ಯಃ ಸ್ವಾಹಾಪರಾಧಿನೀ ।**
**ಭರ್ತೃಭಕ್ತ್ಯಾ ಜಗದ್ದಗ್ಧುಂ ಯತಃ ಶಕ್ತಾಶ್ಚ ತಾ ಮುನೇ ॥೧೧೫॥**

“ಮುನಿಶ್ರೇಷ್ಠರಾದ ನಾರದರೇ! ಸ್ವಾಹಾದೇವಿಯು ಆ ಋಷಿಪತ್ನಿ ಯರ ರೂಪಗಳನ್ನು ಹೇಗೆ ಧರಿಸಿದಳು?

೧೧೫ : ಅವರೆಲ್ಲರೂ ಪತಿಪರಾಯಣೆಯರೂ, ಸಾಧ್ವಿಯರೂ, ತಪ ಸ್ಸಂಪನ್ನೆಯರೂ, ಅಗ್ನಿಯಂತೆ ತೇಜಸ್ವಿನಿಯರೂ ಆಗಿರಲಿಲ್ಲವೇ? ಇಂತಹ ಅಪರಾಧವನ್ನು ಮಾಡಿದ ಆ ಸ್ವಾಹಾದೇವಿಯು ಆ ಆರು ಜನ ಸ್ತ್ರೀಯರಿಗೆ ಹೆದರಲಿಲ್ಲವೇ? ಅವರೆಲ್ಲರೂ ತಮ್ಮ ಪತಿಭಕ್ತಿಯ ಪ್ರಭಾವದಿಂದ ಲೋಕ ವನ್ನೇ ದಹಿಸಲು ಶಕ್ತರಲ್ಲವೇ?”

೧೧೬ : ನಾರದರು ಹೇಳುತ್ತಾರೆ : “ಎಲೈ ಅರ್ಜುನನೇ! ನೀನೆಂದುದೂ ನಿಜವೇ. ಆದರೆ ಸ್ವಾಹಾದೇವಿಯು ಋಷಿಪತ್ನಿಯರ ರೂಪಗಳನ್ನು

ಧರಿಸಿದುದಕ್ಕೂ ಅವರು ಆಕೆಗೆ ಶಾಪವನ್ನು ಕೊಡದಿದ್ದುದಕ್ಕೂ ಕಾರಣವನ್ನು ಹೇಳುವೆನು ಕೇಳು :

೧೧೭ : ಒಮ್ಮೆ ಅವರೆಲ್ಲರೂ ಸ್ನಾನಕ್ಕಾಗಿ ಗಂಗಾತೀರಕ್ಕೆ ಹೋಗಿ, ಮೊದಲು ಅಗ್ನಿಯು ರುದ್ರವೀರ್ಯವನ್ನು ಎಲ್ಲಿ ಚೆಲ್ಲಿದ್ದನೋ ಅಲ್ಲಿ ಮಿಂದರು.

೧೧೮ : ಅಲ್ಲಿ ಆ ವೀರ್ಯವು ಅವರ ದೇಹಗಳನ್ನು ವ್ಯಾಪಿಸಲು ಅವರೆಲ್ಲರೂ ವಿಹ್ವಲರಾಗಿ ಮೋಹಗೊಂಡು ತಮ್ಮ ಗಂಡಂದಿರನ್ನು ಕಾಣಲು ಲಜ್ಜಾಯುಕ್ತರಾಗಿ ಗಂಗಾತೀರದಲ್ಲಿಯೇ ನಿಂತುಬಿಟ್ಟರು.

೧೧೯ : ಆ ಸಮಯವನ್ನು ತಿಳಿದು ತನ್ನ ಮನಸ್ಸಿನಲ್ಲಿದ್ದ ಕಾರ್ಯವನ್ನು ಸಾಧಿಸುವುದಕ್ಕಾಗಿ ಸ್ವಾಹಾದೇವಿಯು ಅವರ ಶರೀರಗಳಲ್ಲಿ ಹೊಕ್ಕು ಆ ವೀರ್ಯವನ್ನು ಸೆಳೆದುಕೊಂಡಳು.

೧೨೦ : ನಾನು ಮೊದಲೇ ತಿಳಿಸಿದಂತೆ ಸ್ವಾಹಾದೇವಿಯು ತನ್ನ ಪತಿಯೊಡನೆ ರಮಿಸುತ್ತಿದ್ದಳು. ಆ ಉಪಕಾರವನ್ನು ಸ್ಮರಿಸಿಕೊಂಡೇ ಆ ಆರು ಮಂದಿ ಋಷಿಪತ್ನಿಯರು ಆಕೆಗೆ ಶಾಪವನ್ನು ಕೊಡಲಿಲ್ಲ. ಉಪಕಾರವನ್ನು ಮಾಡಿದವರಿಗೆ ಶಾಪವನ್ನು ಕೊಡಬಹುದೇ?

೧೨೧ : ಆದರೂ ಸಪ್ತರ್ಷಿಗಳು ತಮ್ಮ ಜ್ಞಾನದೃಷ್ಟಿಯಿಂದ ನಡೆದುದೆಲ್ಲವನ್ನೂ ತಿಳಿದುಕೊಂಡು ಅಶುಚಿಗಳಾದ ಆರು ಜನರನ್ನೂ ವಿಸರ್ಜಿಸಿದರು. ಅರುಂಧತಿಯೊಬ್ಬಳು ಮಾತ್ರ ತನ್ನ ಗಂಡನೊಡನೆ ನಿಂತಳು."

ಸ್ಕಾಂದಪುರಾಣದಲ್ಲಿ ಇದೇ ಪ್ರಕರಣದಲ್ಲಿ ಸ್ಕಂದನ ಅಷ್ಟೋತ್ತರವಿದೆ. ಅದನ್ನು ಜಪಿಸಿದರೆ ಸಕಲಪಾಪಗಳೂ ವಿನಾಶವಾಗುತ್ತವೆಯೆಂದೂ ಹೇಳಿದೆ. ಆದುದರಿಂದ ಅದನ್ನು ಇಲ್ಲಿ ಕೊಡಲಾಗಿದೆ.

**ವಿಶ್ವಾಮಿತ್ರಸ್ತು ಭಗವಾನ್ಕುಮಾರಂ ಶರಣಂ ಗತಃ ।**
**ಸ್ತವಂ ದಿವ್ಯಂ ಸಂಪ್ರಚಕ್ರೇ ಮಹಾಸೇನಸ್ಯ ಚಾಪಿ ಸಃ ॥೧೨೩॥**

**ಅಷ್ಟೋತ್ತರಶತಂ ನಾಮ್ನಾಂ ಶೃಣು ತ್ವಂ ತಾನಿ ಫಾಲ್ಗುನ ।**
**ಜಪೇನ ಯೇಷಾಂ ಪಾಪಾನಿ ಯಾನ್ತಿ ಜ್ಞಾನಮವಾಪ್ನುಯಾತ್ ॥೧೨೪॥**

೧೨೩ : ಮಹಾಮುನಿಯಾದ ವಿಶ್ವಾಮಿತ್ರನು ಬಂದು ಕುಮಾರ

ಸ್ವಾಮಿಗೆ ಶರಣಾಗತನಾಗಿ ಮಹಾಸೇನಾಪತಿಯಾದ ಆತನ ವಿಷಯವಾಗಿ ಉತ್ತಮವಾದ ಸ್ತೋತ್ರವನ್ನು ಮಾಡಿದನು.

೧೨೪ : ಎಲೈ ಅರ್ಜುನನೇ! ಸ್ಕಂದನ ಅಷ್ಟೋತ್ತರಶತನಾಮಗಳನ್ನು ಹೇಳುವೆನು ; ಕೇಳು. ಅವುಗಳ ಜಪದಿಂದ ಜನರ ಪಾಪಗಳೆಲ್ಲವೂ ದೂರವಾಗಿ ಶುದ್ಧಜ್ಞಾನವನ್ನು ಪಡೆಯುವರು.

ತ್ವಂ ಬ್ರಹ್ಮವಾದೀ ತ್ವಂ ಬ್ರಹ್ಮಾ ಬ್ರಹ್ಮ ಬ್ರಾಹ್ಮಣವತ್ಸಲಃ ।
ಬ್ರಹ್ಮಣ್ಯೋ ಬ್ರಹ್ಮದೇವಶ್ಚ ಬ್ರಹ್ಮದೋ ಬ್ರಹ್ಮಸಂಗ್ರಹಃ ॥೧೨೫॥

ತ್ವಂ ಪರಂ ಪರಮಂ ತೇಜೋ ಮಂಗಲಾನಾಂ ಚ ಮಂಗಲಮ್ ।
ಅಪ್ರಮೇಯಗುಣಶ್ಚೈವ ಮಂತ್ರಾಣಾಂ ಮಂತ್ರಗೋ ಭವಾನ್ ॥೧೨೬॥

ತ್ವಂ ಸಾವಿತ್ರೀಮಯೋ ದೇವ ಸರ್ವತ್ರೈವಾಪರಾಜಿತಃ ।
ಮಂತ್ರಃ ಸರ್ವಾತ್ಮಕೋ ದೇವಃ ಷಡಕ್ಷರವತಾಂ ವರಃ ॥೧೨೭॥

ಮಾಲೀ ಮೌಲೀ ಪತಾಕೀ ಚ ಜಟೀ ಮುಂಡೀ ಶಿಖಂಡ್ಯಪಿ ।
ಕುಂಡಲೀ ಲಾಂಗಲೀ ಬಾಲಃ ಕುಮಾರಃ ಪ್ರವರೋ ವರಃ ॥೧೨೮॥

ಅಪಾಂಪುತ್ರಃ ಸುರಾರಿಘ್ನಃ ಸಂಭವೋ ಭವಭಾವನಃ ।
ಪಿನಾಕೀ ಶತ್ರುಹಾ ಶ್ವೇತೋ ಗೂಢಃ ಸ್ಕಂದಃ ಕರಾಗ್ರಣೀಃ ॥೧೨೯॥

ದ್ವಾದಶೋ ಭೂರ್ಭುವೋ ಭಾವೀ ಭವಪುತ್ರೋ ನಮಸ್ಕೃತಃ ।
ನಾಗರಾಜಃ ಸುಧರ್ಮಾತ್ಮಾ ನಾಕಪೃಷ್ಠಃ ಸನಾತನಃ ॥೧೩೦॥

ತ್ವಂ ಭರ್ತಾ ಸರ್ವಭೂತಾತ್ಮಾ ತ್ವಂ ತ್ರಾತಾ ತ್ವಂ ಸುಖಾವಹಃ ।
ಶರದಕ್ಷಃ ಶಿಖೀ ಜೇತಾ ಷಡ್ವಕ್ತ್ರೋ ಭಯನಾಶನಃ ॥೧೩೧॥

ಹೇಮಗರ್ಭೋ ಮಹಾಗರ್ಭೋ ಜಯಶ್ಚ ವಿಜಯೇಶ್ವರಃ ।
ತ್ವಂ ಕರ್ತಾ ತ್ವಂ ವಿಧಾತಾ ಚ ನಿತ್ಯೋ ನಿತ್ಯಾರಿಮರ್ದನಃ ॥೧೩೨॥

ಮಹಾಸೇನೋ ಮಹಾತೇಜಾ ವೀರಸೇನಶ್ಚ ಭೂಪತಿಃ ।
ಸಿದ್ಧಾಸನಃ ಸುರಾಧ್ಯಕ್ಷೋ ಭೀಮಸೇನೋ ನಿರಾಮಯಃ ॥೧೩೩॥

ಶೌರಿರ್ಯದುರ್ಮಹಾತೇಜಾ ವೀರ್ಯವಾನ್ಸತ್ಯವಿಕ್ರಮಃ ।
ತೇಜೋಗರ್ಭೋಽಸುರರಿಪುಃ ಸುರಮೂರ್ತಿಸ್ಸುರಾರ್ಚಿತಃ ॥೧೩೪॥

ಕೃತಜ್ಞೋ ವರದಃ ಸತ್ಯಃ ಶರಣ್ಯಃ ಸಾಧುವತ್ಸಲಃ ।
ಸುವ್ರತಃ ಸೂರ್ಯಸಂಕಾಶೋ ವಹ್ನಿಗರ್ಭಃ ಕಣೋಭುವಃ ॥೧೩೫॥

ಪಿಪ್ಪಲೀ ಶೀಘ್ರಗೋ ರೌದ್ರೀ ಗಾಂಗೇಯೋ ರಿಪುದಾರಣಃ ।
ಕಾರ್ತಿಕೇಯಃ ಪ್ರಭುಃ ಕ್ಷಂತಾ ನೀಳದಂಷ್ಟ್ರೋ ಮಹಾಮನಾಃ ॥೧೩೬॥

ನಿಗ್ರಹೋ ನಿಗ್ರಹಾಣಾಂ ಚ ನೇತಾ ತ್ವಂ ಸುರನನ್ದನಃ ।
ಪ್ರಗ್ರಹಃ ಪರಮಾನನ್ದಃ ಕ್ರೋಧಘ್ನಸ್ತಾರ ಉಚ್ಛ್ರಿತಃ ॥೧೩೭॥

ಕುಕ್ಕುಟೀ ಬಹುಲೀ ದಿವ್ಯಃ ಕಾಮದೋ ಭೂರಿವರ್ಧನಃ ।
ಅಮೋಘೋಽಮೃತದೋ ಹ್ಯಗ್ನಿಃ ಶತ್ರುಘ್ನಃ ಸರ್ವಮೋದನಃ ॥೧೩೮॥

ಅವ್ಯಯೋ ಹ್ಯಮರಃ ಶ್ರೀಮಾನುನ್ನತೋ ಹ್ಯಗ್ನಿಸಂಭವಃ ।
ಪಿಶಾಚರಾಜಃ ಸೂರ್ಯಾಭಃ ಶಿವಾತ್ಮಾ ಶಿವನಂದನಃ ॥೧೩೯॥

ಅಪಾರಪಾರೋ ದುರ್ಜ್ಞೇಯಃ ಸರ್ವಭೂತಹಿತೇ ರತಃ ।
ಅಗ್ರಾಹ್ಯಃ ಕಾರಣಂ ಕರ್ತಾ ಪರಮೇಷ್ಠೀ ಪರಂ ಪದಮ್ ॥೧೪೦॥

ಅಚಿನ್ತ್ಯಃ ಸರ್ವಭೂತಾತ್ಮಾ ಸರ್ವಾತ್ಮಾ ತ್ವಂ ಸನಾತನಃ ।
ಏವಂ ಸ ಸರ್ವಭೂತಾನಾಂ ಸಂಸ್ತುತಃ ಪರಮೇಶ್ವರಃ ॥೧೪೧॥

ನಾಮ್ನಾಮಷ್ಟಶತೇನಾಯಂ ವಿಶ್ವಾಮಿತ್ರಮಹರ್ಷಿಣಾ ।
ಪ್ರಸನ್ನಮೂರ್ತಿರಾಹೇದಂ ಮುನೀಂದ್ರಂ ವ್ರಿಯತಾಮಿತಿ ॥೧೪೨॥

ಮಮ ತ್ವಯಾ ದ್ವಿಜಶ್ರೇಷ್ಠ ಸ್ತುತಿರೇಷಾ ನಿರೂಪಿತಾ ।
ಭವಿಷ್ಯತಿ ಮನೋಭೀಷ್ಟಪ್ರಾಪ್ತಯೇ ಪ್ರಾಣಿನಾಂ ಭುವಿ ॥೧೪೩॥

ವಿವರ್ಧತೇ ಕುಲೇ ಲಕ್ಷ್ಮೀಸ್ತಸ್ಯ ಯಃ ಪ್ರಪಠೇದಿಮಮ್ ।
ನ ರಾಕ್ಷಸಾಃ ಪಿಶಾಚಾ ವಾ ನ ಭೂತಾನಿ ನ ಚಾಪದಃ ॥೧೪೪॥

ವಿಘ್ನಕಾರೀಣಿ ತದ್ಗೇಹೇ ಯತ್ರೈವ ಸಂಸ್ತುವಂತಿ ಮಾಮ್ ।
ದುಃಸ್ವಪ್ನಂ ಚ ನ ಪಶ್ಯೇತ್ಸ ಬದ್ಧೋ ಮುಚ್ಯೇತ ಬಂಧನಾತ್ ॥೧೪೫॥

ಸ್ತವಸ್ಯಾಸ್ಯ ಪ್ರಭಾವೇಣ ದಿವ್ಯಭಾವಃ ಪುಮಾನ್ಭವೇತ್ ।
ತ್ವಂ ಚ ಮಾಂ ಶ್ರುತಿಸಂಸ್ಕಾರೈಃ ಸರ್ವೈಃ ಸಂಸ್ಕರ್ತುಮರ್ಹಸಿ ॥೧೪೬॥

ಸಂಸ್ಕಾರರಹಿತಂ ಜನ್ಮ ಯಶಶ್ಚ ಪಶುವತ್ಸ್ಮೃತಂ ।
ತ್ವಂ ಚ ಮದ್ವರದಾನೇನ ಬ್ರಹ್ಮರ್ಷಿಶ್ಚ ಭವಿಷ್ಯಸಿ ॥೧೪೭॥

ಇಲ್ಲಿಂದ ಮುಂದೆಯೂ ಸ್ಕಾಂದಪುರಾಣದಲ್ಲಿ ಮಹಾಭಾರತದಲ್ಲಿರುವಂತೆಯೇ ಕಥೆಯು ಮುಂದುವರಿಯುತ್ತದೆ. ಇಂದ್ರನು ಸ್ಕಂದನ ಮೇಲೆ ಯುದ್ಧಮಾಡಲು ಬರುವ ಪ್ರಕರಣವು ಮಹಾಭಾರತದಲ್ಲಿಯೂ ಬರುತ್ತದೆ. ಸ್ಕಾಂದಪುರಾಣದಲ್ಲಿಯೂ ಬರುತ್ತದೆ. ಆದರೆ ಮಹಾಭಾರತದಲ್ಲಿ ಯುದ್ಧವಾಗುವ ಮೊದಲು ದೇವತೆಗಳು ಇಂದ್ರನಿಗೆ ಯುದ್ಧಮಾಡಲು ಪ್ರಚೋದಿಸಿದರೆಂದೂ–ಇಂದ್ರನು ತನ್ನ ಅಸಾಮರ್ಥ್ಯವನ್ನು ಪ್ರಕಟಿಸಲಾಗಿ ದೇವತೆಗಳು ಮಾತೃದೇವತೆಗಳನ್ನು ಸ್ಕಂದನ ಬಳಿಗೆ ಅವನನ್ನು ಕೊಲ್ಲಲು ಕಳುಹಿಸಿದರೆಂದೂ ಆದರೆ, ಅವರಿಗೂ ಸ್ಕಂದನನ್ನು ಕೊಲ್ಲಲು ಶಕ್ತಿಯಿಲ್ಲದೆ ಅವನಿಗೆ ಶರಣಾಗತರಾಗಿ ತಮ್ಮ ಪುತ್ರನಾಗುವಂತೆ ಪ್ರಾರ್ಥಿಸಿ ಸ್ತನ್ಯಕೊಟ್ಟರೆಂದೂ ಹೇಳಿದೆ. ರಾಮಾಯಣದಲ್ಲಿ ಹೇಳಿರುವಂತೆ ಈ ಪ್ರಕರಣದಲ್ಲಿ ಕೃತ್ತಿಕೆಯರ ವಿಷಯವೇ ಬರುವುದಿಲ್ಲ. ಸ್ಕಾಂದಪುರಾಣದಲ್ಲಿ ಸ್ತನ್ಯಕೊಡುವ ಪ್ರಕರಣವೂ ಬರುವುದಿಲ್ಲ. ಸಪ್ತರ್ಷಿಗಳಲ್ಲಿ ಆರು ಋಷಿಪತ್ನಿಯರು ಸ್ಕಂದನ ಬಳಿಗೆ ಬರುವುದನ್ನು ಸ್ಕಾಂದಪುರಾಣದಲ್ಲಿ ಹೀಗೆ ನಿರೂಪಿಸಿದ್ದಾರೆ.

**ಏತಸ್ಮಿನ್ನೇವ ಕಾಲೇ ತು ಷಡ್ದೇವ್ಯಸ್ತಂ ಸಮಾಗಮನ್ ।**
**ಋಷಿಭಿಸ್ತಾಃ ಪರಿತ್ಯಕ್ತಾಸ್ತಂ ಪುತ್ರೇತಿ ಜಗುಸ್ತದಾ ॥೨೦೩॥** ಸ್ಕಾಂದ

**ಶ್ರಿಯಾ ಜುಷ್ಟಂ ಮಹಾಸೇನಂ ದೇವಸೇನಾಪತಿಂ ಕೃತಮ್ ।**
**ಸಪ್ತರ್ಷಿಪತ್ನ್ಯಃ ಷಡ್ದೇವ್ಯಸ್ತತ್ಸಕಾಶಮಥಾಗಮನ್ ॥೧॥** ಮ.ಭಾ.

೨೦೩ : 'ಅದೇ ಸಮಯಕ್ಕೆ ಸರಿಯಾಗಿ ಪತಿಗಳಿಂದ ಪರಿತ್ಯಕ್ತರಾದ ಆರು ಜನ ಋಷಿಪತ್ನಿಯರೂ ಅಲ್ಲಿಗೆ ಬಂದು ಷಣ್ಮುಖನನ್ನು ಮಗನೆಂದು ಕರೆಯತೊಡಗಿದರು.'

ಮುಂದಿನ ಕಥೆಯು ಸ್ಕಾಂದಪುರಾಣದಲ್ಲಿ ಸ್ವಲ್ಪ ವ್ಯತ್ಯಾಸವಾಗಿದೆ.

೨೦೪-೨೦೫ : ಪಾರ್ವತಿಯು "ಇವನು ನನ್ನ ಮಗನೇ ಹೊರತು ನಿಮ್ಮ ಮಗನಲ್ಲ" ಎಂದಳು. ಸ್ವಾಹಾದೇವಿಯು ತನ್ನ ಮಗನೆಂದಳು. ಅಗ್ನಿಯು ತನ್ನ ಮಗನೆಂದನು. ಶಂಕರನು ತನ್ನ ಮಗನೆಂದು ಹೇಳಿಕೊಂಡನು. ದೇವನದಿಯಾದ ಗಂಗೆಯು ತನ್ನ ಮಗನೆಂದು ವಾದಿಸಿದಳು.

೨೦೬ : ಹೀಗೆ ಪರಸ್ಪರವಾಗಿ ವಿವಾದಗಳನ್ನು ಮಾಡುತ್ತ ಘೋರವಾದ ಕಲಹದಲ್ಲಿ ಪ್ರವೃತ್ತರಾದರು. ಎಲೈ ಪಾರ್ಥನೇ! ಬಲವತ್ತರವಾದ ಪುತ್ರಸ್ನೇಹವೆಂಬುದು ಏನನ್ನು ತಾನೇ ಮಾಡಿಸಲಾರದು?

೨೦೭ : ಆಗ ಗುಹನು ಗಟ್ಟಿಯಾಗಿ ನಗುತ್ತ ಅವರೆಲ್ಲರನ್ನೂ ಕುರಿತು– "ನಿಮ್ಮ-ನಿಮ್ಮಲ್ಲಿ ವಿವಾದವು ಯುಕ್ತವಲ್ಲ. ನಾನು ನಿಮ್ಮೆಲ್ಲರ ಮಗನೂ ಅಹುದು. ನಿಮಗೆ ಬೇಕಾದ ವರಗಳನ್ನು ಕೇಳಿರಿ"–ಎಂದನು.

**ತತಃ ಪ್ರಾಹುಶ್ಚ ಷಡ್ದೇವ್ಯಃ ಸ್ವರ್ಗೋ ನೋ ಹ್ಯಕ್ಷಯೋ ಭವೇತ್ ।**
**ತಥೇತಿ ತಾ ಗುಹಃ ಪ್ರಾಹ ಶಕ್ರಸ್ತತ್ರಾನ್ತರೇಽಬ್ರವೀತ್ ॥೨೦೮॥**

ಸ್ಕಾಂದಪುರಾಣ

**ಅಕ್ಷಯಶ್ಚ ಭವೇತ್ಸ್ವರ್ಗಸ್ತ್ವತ್ಪ್ರಸಾದಾದ್ಧಿ ನಃ ಪ್ರಭೋ ।**
**ತ್ವಾಂ ಪುತ್ರಂ ಚಾಪ್ಯಭೀಪ್ಸಾಮಃ ಕೃತ್ವೈತದನೃಣೋ ಭವ ॥೫॥**
**ಮಾತರೋ ಹಿ ಭವತ್ಯೋ ಮೇ ಸುತೋ ವೋಽಹಮನಿನ್ದಿತಾಃ ।**
**ಯದ್ವಾಪೀಚ್ಛತ ತತ್ಸರ್ವಂ ತದ್ಭವಿಷ್ಯತಿ ವಸ್ತಥಾ ॥೬॥** ಮ.ಭಾ.

ಅದೇ ಸಮಯಕ್ಕೆ ಇಂದ್ರನು ಬರುವ ವಿಷಯವು ಭಾರತದಲ್ಲಿದೆ.

**ರೋಹಿಣ್ಯಾಶ್ಚಾನುಜಾ ಸ್ಕನ್ದ ಸ್ಪರ್ಧಮಾನಾಭಿಜಿತ್ಸ್ವಲಾ ।**
**ಇಚ್ಛನ್ತೀ ಜ್ಯೈಷ್ಠತಾಂ ದೇವೀ ಪೃಥಕ್ತ್ವಂ ಚ ತಪೋರತಾ ।**
**ತತಃ ಪ್ರಭೃತಿ ಮೂಢೋಽಸ್ಮಿ ತತ್ಸ್ಥಾನೇ ಸ್ಥಾಪಯ ಪ್ರಭೋ ॥**

ಸ್ಕಾಂದಪುರಾಣ

**ಅಭಿಜಿತ್ ಸ್ಪರ್ಧಮಾನಾತು ರೋಹಿಣ್ಯಾ ಅನುಜಾ ಸ್ವಸಾ ।**
**ಇಚ್ಛನ್ತೀ ಜ್ಯೈಷ್ಠತಾಂ ದೇವೀ ತಪಸ್ತಪ್ತುಂ ವನಂ ಗತಾ ॥೮॥**
**ತತ್ರ ಮೂಢೋಽಸ್ಮಿ ಭದ್ರಂ ತೇ ನಕ್ಷತ್ರಂ ಗಗನಾಚ್ಚ್ಯುತಮ್ ।**
**ಕಾಲಂ ತ್ವಿಮಂ ಪರಂ ಸ್ಕನ್ದ ಬ್ರಹ್ಮಣಾ ಸಹ ಚಿನ್ತಯ ॥೯॥** ಮ.ಭಾ.

ಸ್ಕಾಂದಪುರಾಣದ ಮೇಲಿನ ಶ್ಲೋಕಕ್ಕೆ ಕನ್ನಡದ ಅನುವಾದಕರು '**ತತ್ಸ್ಥಾನೇ ಸ್ಥಾಪಯ ಪ್ರಭೋ**' ಎಂಬುದಕ್ಕೆ 'ಆ ಸ್ಥಾನದಲ್ಲಿ ಇವರನ್ನು ನಿಲ್ಲಿಸು' ಎಂದು ಅರ್ಥಮಾಡಿದ್ದಾರೆ. 'ಇವರನ್ನು' ಎಂಬುದಕ್ಕೆ ಇಲ್ಲಿ ಸಂಸ್ಕೃತಪದವಿಲ್ಲ. ಮಹಾಭಾರತದ ಪ್ರಕರಣದಲ್ಲಿ ಈ ವಿಷಯವೇ ಇಲ್ಲ! 'ಬ್ರಹ್ಮನೊಡನೆ ಸಮಾಲೋಚಿಸು' ಎಂದೇ ಹೇಳುತ್ತಾನೆ.

**ತತಸ್ತಥೇತಿ ಚ ಪ್ರೋಕ್ತಾಃ ಕೃತ್ತಿಕಾಸ್ತಾ ದಿವಂ ಗತಾಃ ।**
**ನಕ್ಷತ್ರಂ ಸಪ್ತಶೀರ್ಷಾಭಂ ಭಾತಿ ತದ್ವಹ್ನಿದೈವತಮ್ ॥೨೧೦॥** ಸ್ಕಾಂದ

**ಏವಮುಕ್ತೇ ತು ಶಕ್ರೇಣ ತ್ರಿದಿವಂ ಕೃತ್ತಿಕಾ ಗತಾಃ ।**
**ನಕ್ಷತ್ರಂ ಸಪ್ತಶೀರ್ಷಾಭಂ ಭಾತಿ ತದ್ವಹ್ನಿ ದೈವತಮ್ ॥೧೧॥** ಮ.ಭಾ.

ಮೇಲಿನ ಸ್ಕಾಂದಪುರಾಣದ ಶ್ಲೋಕಕ್ಕೂ ಸಹ ಕನ್ನಡ ಭಾಷಾಂತರ ಕಾರರು–'ಅಂತೆಯೇ ಆಗಬಹುದೆಂದು ಸ್ಕಂದನು ಒಪ್ಪಲು ಅವರು ಕೃತ್ತಿಕೆಯರಾಗಿ ಆಕಾಶಕ್ಕೇರಿದರು'–ಎಂದು ಅರ್ಥಮಾಡಿದ್ದಾರೆ. ಆದರೆ ಶ್ಲೋಕದಲ್ಲಿ 'ಕೃತ್ತಿಕೆಯರಾಗಿ' ಎಂಬುದಕ್ಕೆ ಪದವಿಲ್ಲ. '**ತಾಃ ಕೃತ್ತಿಕಾಃ**' 'ಆ ಕೃತ್ತಿಕೆಯರು' ಎಂದು ಸ್ಪಷ್ಟವಾಗಿ ಹೇಳಿದೆ. ಮಹಾಭಾರತದಲ್ಲಿಯೂ ಸಹ ಕೃತ್ತಿಕೆಯರು ಸ್ವರ್ಗಕ್ಕೆ ಹೋದರು–ಎಂಬುದಾಗಿಯೇ ಇದೆ. '**ತ್ರಿದಿವಂ ಕೃತ್ತಿಕಾ ಗತಾಃ**'

ಇದಿಷ್ಟು ಪ್ರಕರಣದಿಂದಲೂ ಸಹ **ಕೃತ್ತಿಕಾಃ** ಎಂದರೆ ಋಷಿಪತ್ನಿಯ ರೆಂದು ನೇರವಾಗಿ ಸಿದ್ಧಪಡಿಸಲು ಸಾಧ್ಯವಾಗುವುದಿಲ್ಲ. 'ಕೃತ್ತಿಕಾಃ'– ಕೃತ್ತಿಕಾ ನಕ್ಷತ್ರದ ಅಧಿದೇವತೆಗಳೂ ಮತ್ತು ಋಷಿಪತ್ನಿಯರೂ ಅಭಿನ್ನರೇ ಎಂಬು ದನ್ನೂ ಸಿದ್ಧಪಡಿಸಲು ಸಾಧ್ಯವಾಗುವುದಿಲ್ಲ. ಕೃತ್ತಿಕಾನಕ್ಷತ್ರದೇವತೆಗಳೇ ಬೇರೆ, ಋಷಿಪತ್ನಿಯರೇ ಬೇರೆ ಎಂದು ಹೇಳಬಹುದಾಗಿದೆ. ಕೃತ್ತಿಕಾಃ– ಎಂಬುದಕ್ಕೆ ಜಿಂಕೆಯ ಚರ್ಮ ಮೊದಲಾದುವುಗಳನ್ನು ಧರಿಸುವವರು– ಎಂಬ ಅರ್ಥವೂ ಆಗುತ್ತದೆ. ಕೃತ್ತಿಕಾನಕ್ಷತ್ರವು ಚಂದ್ರನನ್ನು ಮದುವೆಯಾದ ದಕ್ಷಸುತೆಯರಾದ ಅಶ್ವಿನಿಯೇ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಮೂರ ನೆಯದು. ಕೃತ್ತಿಕಾನಕ್ಷತ್ರವು ಬಂಡಿಯಾಕಾರದ ಆರು ನಕ್ಷತ್ರಗಳ ಒಂದು ಪುಂಜ. ಈ ಆರು ನಕ್ಷತ್ರಗಳೇ ಆರು ಕೃತ್ತಿಕಾದೇವತೆಗಳು. ಈ ನಕ್ಷತ್ರವು ಅಗ್ನಿದೇವತಾಕವಾದುದು–ಎಂದು ನಿಘಂಟುಕಾರರು ಕೃತ್ತಿಕಾ ಎಂಬುದಕ್ಕೆ ಅರ್ಥ ಹೇಳಿದ್ದಾರೆ. ಕೃತ್ತಿಕೆಯು ಚಂದ್ರನ ಪತ್ನಿಯೆಂಬುದಕ್ಕೆ ಪುರಾಣಗಳ ಆಧಾರವಿದೆ. ನಕ್ಷತ್ರಗಳು ಚಂದ್ರನ ಪತ್ನಿಯರೂ ಆಗಿ ಋಷಿಗಳ ಪತ್ನಿಯರೂ ಆಗಲಾರವು.

ಸ್ಕಂದನು ಕೃತ್ತಿಕಾನಕ್ಷತ್ರದಲ್ಲಿ ಹುಟ್ಟಿದನು. ಈ ಕಾರಣದಿಂದಾಗಿ ಕೃತ್ತಿಕಾನಕ್ಷತ್ರಾಧಿದೇವತೆಗಳಿಗೆ ಸ್ಕಂದನ ವಿಷಯದಲ್ಲಿ ಪುತ್ರವಾತ್ಸಲ್ಯವುಂಟಾ ಯಿತು. ದೇವತೆಗಳೂ ಕೂಡ ಕೃತ್ತಿಕೆಯರನ್ನು ಸ್ಕಂದನಿಗೆ ಹಾಲುಣಿಸುವಂತೆ ಹೇಳಿದರು. ಸ್ಕಂದನು ಕೃತ್ತಿಕಾನಕ್ಷತ್ರದಲ್ಲಿ ಹುಟ್ಟಿದುದರಿಂದಲೂ, ಕೃತ್ತಿಕಾ

ನಕ್ಷತ್ರಾಧಿದೇವತೆಗಳು ಹಾಲುಣಿಸಿದುದರಿಂದಲೂ ಕಾರ್ತಿಕೇಯ ಮತ್ತು ಷಡಾನನನೆಂದು ಹೆಸರಾಯಿತು. ಈ ಅರ್ಥವು ರಾಮಾಯಣದಲ್ಲಿರುವ ಕಥೆಗೂ ಮಹಾಭಾರತದ ಶಲ್ಯಪರ್ವದಲ್ಲಿ ಬರುವ ಕಥೆಗೂ ಅನ್ವಯಿಸುತ್ತದೆ. ಕೃತ್ತಿಕಾನಕ್ಷತ್ರವು ಅಥವಾ ಕೃತ್ತಿಕಾದೇವತೆಗಳು ಮೊದಲೇ ಇದ್ದರೆಂದಮೇಲೆ ಆರು ಮಂದಿ ಋಷಿಪತ್ನಿಯರು ಕೃತ್ತಿಕೆಯರಾಗುವ ಸಾಧ್ಯತೆಯಿಲ್ಲ. ಸ್ಕಂದನ ಅನುಗ್ರಹದಿಂದ ಕೃತ್ತಿಕಾನಕ್ಷತ್ರವು ನಕ್ಷತ್ರಮಂಡಲದಲ್ಲಿ ಸೂಕ್ತಸ್ಥಾನ ಪಡೆಯಿತು. ಋಷಿಪತ್ನಿಯರು ತಮ್ಮ ಪ್ರಾರ್ಥನೆಯಂತೆ ಅಕ್ಷಯವಾದ ಸ್ವರ್ಗವನ್ನು ಸೇರಿದರು–ಹೀಗೆ ಅರ್ಥಮಾಡುವುದು ಸಮಂಜಸವಾಗಿ ಕಾಣುತ್ತದೆ. ಮಹಾಭಾರತದಲ್ಲಿ ಹಾಲುಣಿಸಲು ಬಂದವರು ಮಾತೃದೇವತೆಗಳೆಂದು ಹೇಳಿದೆ. ಇಲ್ಲಿ ಕೃತ್ತಿಕಾನಕ್ಷತ್ರಾಧಿದೇವತೆಗಳ ವಿಷಯವೇ ಇಲ್ಲ. ಕಡೆಯಲ್ಲಿ ಮಾತ್ರವೇ ಬರುತ್ತದೆ. ಮಾತೃದೇವತೆಗಳು ಹಾಲುಣಿಸಿದ್ದರಿಂದಲೇ ಸ್ಕಂದನಿಗೆ ಷಾಣ್ಮಾತುರನೆಂಬ ಹೆಸರು ಬಂದಿರಬಹುದು. ಸ್ಕಾಂದಪುರಾಣದಲ್ಲಿ ಹಾಲುಣಿಸುವ ವಿಷಯವೇ ಇರುವುದಿಲ್ಲ. ಕೃತ್ತಿಕಾನಕ್ಷತ್ರದ ಅಥವಾ ಕೃತ್ತಿಕಾನಕ್ಷತ್ರಾಧಿದೇವತೆಗಳ ವಿಷಯವೂ ಬರುವುದಿಲ್ಲ. ಕೇವಲ ಗಂಗೆ, ಪಾರ್ವತೀ, ಸ್ವಾಹಾ, ಪಾವಕ, ರುದ್ರ ಮತ್ತು ಋಷಿಪತ್ನಿಯರು–ಇವರೆಲ್ಲರೂ ಸ್ಕಂದನು ತಮ್ಮ ಪುತ್ರ-ತಮ್ಮ ಪುತ್ರ ಎಂಬುದಾಗಿ ಪರಸ್ಪರ ಜಗಳವಾಡುತ್ತಾರೆ.

**ಏತಸ್ಮಿನ್ನೇವ ಕಾಲೇ ತು ಷಡ್ದೇವ್ಯಸ್ತಂ ಸಮಾಗಮನ್ ।**
**ಋಷಿಭಿಸ್ತಾಃ ಪರಿತ್ಯಕ್ತಾಸ್ತಂ ಪುತ್ರೇತಿ ಜಗುಸ್ತದಾ ॥**
**ಪಾರ್ವತೀ ಚ ತತಃ ಪ್ರಾಹ ಮಮ ಪುತ್ರೋ ನ ವಸ್ತ್ವಯಮ್ ।**
**ಸ್ವಾಹಾ ಮಮೇತಿ ಚ ಪ್ರಾಹ ಪಾವಕಶ್ಚ ಮಮೇತಿ ಚ ॥**
**ರುದ್ರೋ ಮಮೇತಿ ಚ ಪ್ರಾಹ ಮಮ ದೇವನದೀತಿ ಚ ।**
**ಚಕ್ರುಸ್ತೇ ಕಲಹಂ ಘೋರಂ ವಿವದನ್ತಃ ಪರಸ್ಪರಮ್ ॥**

ಆದರೆ ಇಲ್ಲಿ ಹೇಳಿರುವ ಅಷ್ಟೋತ್ತರದಲ್ಲಿ ಕಾರ್ತಿಕೇಯನೆಂಬ ಹೆಸರಿದೆ.

ಈ ಎಲ್ಲ ಕಾರಣಗಳಿಂದಾಗಿ ನಾವು ಕೃತ್ತಿಕಾನಕ್ಷತ್ರಗಳೇ ಬೇರೆ, ಆರು ಮಂದಿ ಋಷಿಪತ್ನಿಯರೇ ಬೇರೆ–ಎಂಬ ನಿಶ್ಚಯಕ್ಕೆ ಬಂದಿರುತ್ತೇವೆ. ಕೃತ್ತಿಕಾನಕ್ಷತ್ರಗಳೂ ಮತ್ತು ಋಷಿಪತ್ನಿಯರೂ ಒಂದೇ ಎಂಬುದಕ್ಕೆ ವಿಶೇಷ ಆಧಾರಗಳಿದ್ದಲ್ಲಿ ಕೃತಜ್ಞತೆಯಿಂದ ಪ್ರಕಟಿಸುತ್ತೇವೆ.

## 2) ಸ್ಕಂದ-ಸುಬ್ರಹ್ಮಣ್ಯ

ಸ್ಕಂದನನ್ನು ಸುಬ್ರಹ್ಮಣ್ಯನೆಂದು ಎಲ್ಲರೂ ಕರೆಯುತ್ತೇವೆ. ಸುಬ್ರಹ್ಮಣ್ಯನೆಂಬ ಹೆಸರು ಯಾವಾಗ ಬಂದಿತೆಂಬುದಕ್ಕೆ ಸಾಕಷ್ಟು ಆಧಾರಗಳು ಸಿಕ್ಕಿಲ್ಲ. ಪುರಾಣಚೂಡಾಮಣಿಯನ್ನು ಸಿದ್ಧಪಡಿಸಿರುವ ವಿದ್ವಾಂಸರು ಸ್ಕಂದ ಎಂಬುದಕ್ಕೆ 'ಸುಬ್ರಹ್ಮಣ್ಯಸ್ವಾಮೀ' ಎಂಬ ಅರ್ಥಕೊಟ್ಟಿರುವರೇ ಹೊರತು (ಪುಟ ೬೨೯) ಸುಬ್ರಹ್ಮಣ್ಯಸ್ವಾಮೀ ಎಂದು ಪ್ರತ್ಯೇಕವಾಗಿ ಕೊಟ್ಟು ಯಾವ ಪುರಾಣದಲ್ಲಿದೆಯೆಂಬುದನ್ನು ನಿರೂಪಿಸಿರುವುದಿಲ್ಲ. ಅರ್ಥಾತ್ ಪುರಾಣಗಳಲ್ಲಿ 'ಸುಬ್ರಹ್ಮಣ್ಯ' ಎಂಬ ಹೆಸರು ಬರುವುದಿಲ್ಲವೆಂದಾಯಿತು. ಸ್ಕಂದನ ಅಷ್ಟೋತ್ತರದಲ್ಲಿಯೂ ಸಹ ಸುಬ್ರಹ್ಮಣ್ಯ ಎಂಬ ಹೆಸರಿಲ್ಲ. ಆದರೆ ಸ್ಕಂದನಿಗೆ ಸುಬ್ರಹ್ಮಣ್ಯನೆಂಬ ಹೆಸರನ್ನು ನಾವು ಧಾರಾಳವಾಗಿ ಹೇಳುತ್ತಿದ್ದೇವೆ. ಕುಕ್ಕೇ ಸುಬ್ರಹ್ಮಣ್ಯಸ್ವಾಮಿ ಆಡಳಿತಸಮಿತಿಯವರಿಂದ ಪ್ರಕಟಿತವಾಗಿರುವ 'ಶ್ರೀ ಸುಬ್ರಹ್ಮಣ್ಯ ಕ್ಷೇತ್ರವರ್ಣನೆ' ಎಂಬ ಪುಸ್ತಕದಲ್ಲಿ-'ಶ್ರೀ ಸ್ಕಾಂದಪುರಾಣದ ಸನತ್ಕುಮಾರಸಂಹಿತೆಯಲ್ಲಿ ಸಹ್ಯಾದ್ರಿಖಂಡದ ತೀರ್ಥಕ್ಷೇತ್ರ ಮಹಿಮಾನಿರೂಪಣದಲ್ಲಿ ಶ್ರೀ ಸುಬ್ರಹ್ಮಣ್ಯಕ್ಷೇತ್ರದ ವರ್ಣನೆಯು ಪ್ರಸಿದ್ಧವಾಗಿದೆ'-ಎಂದು ಹೇಳಿದ್ದಾರೆ. ಇದೇ ಶೀರ್ಷಿಕೆಯಲ್ಲಿ ಮುಂದೆ ಇವರು ಕೊಟ್ಟಿರುವ ಕಥೆಯು ಈ ಪ್ರಕರಣದ ಅನುವಾದವೇ ಎಂಬುದನ್ನು ಹೇಳಿಲ್ಲ ಮತ್ತು ಇಲ್ಲಿ ಅಧ್ಯಾಯ, ಶ್ಲೋಕ-ಇವುಗಳಾವುವೂ ನಿರೂಪಿತವಾಗಿಲ್ಲ. ಇಲ್ಲಿಯೂ ಸಹ ಸ್ಕಂದೋತ್ಪತ್ತಿಯ ಕಥೆಯಿದೆ.

"ಧೀರಳಾದ ಪಾರ್ವತಿಯು ಭಯಂಕರವಾದ ಕಠಿನತಪಸ್ಸಿನಿಂದ ಮಹೇಶ್ವರನನ್ನು ವಶಮಾಡಿಕೊಳ್ಳಲು ಗೌರೀತೀರ್ಥದಲ್ಲಿ ತಪಸ್ಸಿಗೆ ಪ್ರಾರಂಭಿಸಿ, ಬಹುನಿಯಮದಿಂದ ಪರಮೇಶ್ವರನನ್ನು ಆರಾಧಿಸುತ್ತಿರಲು, ಕರುಣಾಮಯನಾದ ಶಂಕರನು ಜಟಾ-ವಲ್ಕಲಗಳನ್ನು ಧರಿಸಿ, ಭಸ್ಮ-ರುದ್ರಾಕ್ಷಿಗಳಿಂದ ಅಲಂಕೃತನಾಗಿ, ಪ್ರಜ್ವಲಿತ ಬ್ರಹ್ಮತೇಜಸ್ಸಿನಿಂದ ಕೂಡಿದವನಾಗಿ, ಪಾರ್ವತಿಯ ತಪೋವನವನ್ನು ಪ್ರವೇಶಿಸಿ, ಆಕೆಯಿಂದ ಸತ್ಕೃತನಾಗಿ ತನ್ನಲ್ಲಿ ಆಕೆಗೆ ಇರುವ ಅವಿಚಲಿತ ಚಿತ್ತಸ್ಥೈರ್ಯವನ್ನು ನೋಡಿ ಸುಪ್ರೀತನಾಗಿ, ತಪಸ್ಸಿನ ಫಲರೂಪವಾದ ಪಾಣಿಗ್ರಹಣಾಭಿಲಾಷೆಯನ್ನು ಸೂಚಿಸಿದನು. ಸುಪ್ರೀತಮಾನಸೆಯಾದ ಪಾರ್ವತಿಯು ಈ ವೃತ್ತಾಂತವನ್ನು ಹಿಮವಂತನಿಗೆ ತಿಳಿಸಲು

ಓಷಧಿಪ್ರಸ್ಥವೆಂಬ ಪರ್ವತರಾಜನ ರಾಜಧಾನಿಯಲ್ಲಿ ಗೌರೀ-ಶಂಕರಕಲ್ಯಾಣ ಮಹೋತ್ಸವವು ಯಥಾವಿಧಿಯಾಗಿ ನಡೆಯಿತು. ಪುರಾಣಪುರುಷರಾದರೂ ನೂತನದಂಪತಿಗಳಂತೆ ವಿಲಾಸಾಸಕ್ತರಾಗಿ ದಿವ್ಯಸಹಸ್ರವರ್ಷಗಳವರೆಗೆ ಅವರು ವಿಹರಿಸುತ್ತಿದ್ದರು. ಹೀಗೆ ದೇವತೆಗಳ ಉದ್ದೇಶವು ಹೆಜ್ಜೆ-ಹೆಜ್ಜೆಗೂ ವಿಘ್ನಿತವಾಗಲು ಬ್ರಹ್ಮಾದಿಗಳೇ ಆಲೋಚಿಸಿ ಅಗ್ನಿಯನ್ನು ಅವರಲ್ಲಿಗೆ ಕಳು ಹಲು, ಅಗ್ನಿಯು ಪಾರಿವಾಳದ ಹಕ್ಕಿಯ ರೂಪದಿಂದ ಅವರ ಕ್ರೀಡಾಗೃಹ ವನ್ನು ಪ್ರವೇಶಿಸಲು, ಪರಮೇಶ್ವರನು ಅದನ್ನು ತಿಳಿದು ತನ್ನ ದುಸ್ಸಹವಾದ ವೀರ್ಯವನ್ನು ಅಗ್ನಿಗೆ ಕೊಟ್ಟನು. ಅಗ್ನಿಯು ಅದನ್ನು ಸಹಿಸಲಾರದೇ, ಗಂಗೆ ಯಲ್ಲಿ ಆ ವೀರ್ಯವನ್ನು ಇಡಲು, ಗಂಗೆಯು ಸ್ವಲ್ಪ ದಿವಸ ಧರಿಸುವುದ ರಿಂದಲೇ ಬತ್ತಿಹೋಗಲಾಗಿ, ಶರವಣದಲ್ಲಿ (ಜೊಂಡುಹುಲ್ಲಿನ ಕಾಡಿನಲ್ಲಿ) ಪರಿತ್ಯಾಗಮಾಡಿದಳು. ಅಮೋಘವಾದ ತೇಜಸ್ಸು ಕುಮಾರಾಕೃತಿಯಾಗಿ ರೋದಿಸುತ್ತಿರಲು, ಷಟ್‌ಕೃತ್ತಿಕೆಗಳು ಬಂದು ಆ ಶಿಶುವಿಗೆ ಸ್ತನ್ಯವನ್ನು ಕುಡಿಸಿ ದರು. ಆ ಮಗುವು ಆರು ಮೊಗಗಳಿಂದ ಹಾಲನ್ನು ಕುಡಿದು ಷಣ್ಮುಖನೆಂಬ ನಾಮವನ್ನು ಧರಿಸಿತು. ಅದನ್ನು ತಿಳಿದು ಪಾರ್ವತೀ-ಪರಮೇಶ್ವರರು ಬಂದು ಆ ಮಗುವನ್ನು ತೆಗೆದುಕೊಂಡು ಹೋಗಿ ಶುಭದಿವಸದಲ್ಲಿ ಆಗ್ನೇಯ, ಗಂಗಾ ಸುತ, ಶರವಣಭವ, ಕಾರ್ತಿಕೇಯ, ಪಾರ್ವತೀನಂದನ, ಷಣ್ಮುಖ, ಸ್ಕಂದ, ಸುಬ್ರಹ್ಮಣ್ಯ–ಈ ನಾಮಗಳನ್ನು ಮೊದಲು ಹೇಳಿದ ಒಂದೊಂದು ಕಾರಣ ಗಳಿಂದ ಜಗತ್ಪ್ರಸಿದ್ಧವನ್ನಾಗಿ ಮಾಡಿದರು.”

ಇಲ್ಲಿರುವ ಕಡೆಯ ವಾಕ್ಯದಲ್ಲಿ ಹೇಳಿರುವಂತೆ–‘ಈ ನಾಮಗಳನ್ನು ಮೇಲೆ ಹೇಳಿದ ಒಂದೊಂದು ಕಾರಣಗಳಿಂದ ಜಗತ್ಪ್ರಸಿದ್ಧವನ್ನಾಗಿ ಮಾಡಿ ದರು’–ಎಂಬುದಕ್ಕೆ ಅನುಸಾರವಾಗಿ ‘ಸುಬ್ರಹ್ಮಣ್ಯ’ ಎಂಬ ಹೆಸರಿಗೆ ಯಾವ ಕಾರಣವೂ ಮೊದಲು ನಿರೂಪಿತವಾಗಿಲ್ಲ. ಆದರೆ ಈ ಪರ್ಯಾಯದಲ್ಲಿ ಸುಬ್ರಹ್ಮಣ್ಯ ಎಂಬ ಹೆಸರು ಸ್ಕಂದನಿಗಿದೆಯೆಂಬುದೇ ಒಂದು ಸಮಾಧಾನ.

(ಪ್ರಯತ್ನಿಸಿದರೂ ಸಹ ಸ್ಕಾಂದಪುರಾಣದ ಸುಬ್ರಹ್ಮಣ್ಯಕ್ಷೇತ್ರ ಮಹಿಮಾ ಪುರಾಣವಿರುವ ಪುಸ್ತಕವು ಸಿಕ್ಕದಿದ್ದುದರಿಂದ ಇದನ್ನು ಮೂಲದಲ್ಲಿ ನೋಡಿ ನಿರ್ಧರಿಸಲು ಸಾಧ್ಯವಾಗಿಲ್ಲ.)

## 3) ಕಡೆಯದಾಗಿ ಸುಬ್ರಹ್ಮಣ್ಯ ಎಂದರೆ ಸರ್ಪವೇ? ಸ್ಕಂದನೇ?

ಹಿಂದಿನ ಪ್ರಕರಣದಲ್ಲಿ ತಿಳಿಸಿದಂತೆ ಸ್ಕಂದನಿಗೆ ಸುಬ್ರಹ್ಮಣ್ಯ ಎಂಬ ಹೆಸರೂ ಇದೆಯೆಂದು ತಿಳಿದುಬರುತ್ತದೆ. ಆ ಕ್ಷೇತ್ರದಲ್ಲಿಯೂ ಸಹ ಸುಬ್ರಹ್ಮಣ್ಯದೇವರ ಸನ್ನಿಧಿಯನ್ನು ನೋಡಿದರೆ ಅಲ್ಲಿ ಸುಬ್ರಹ್ಮಣ್ಯ ನಾಮಾಂಕಿತನಾದ ಸ್ಕಂದನೇ ಪ್ರಧಾನದೇವರೆಂಬ ಭಾವನೆಯು ಬರುತ್ತದೆ. ದೇವರ ಸನ್ನಿಧಿಯ ನಿರೂಪಣೆ ಈ ರೀತಿಯಾಗಿದೆ :

**ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವರು :**

ದೇವಸ್ಥಾನದ ಮಹಾದ್ವಾರವು ಪೂರ್ವದಿಕ್ಕಿನಿಂದ ಇದ್ದು ದೇವರ ದರ್ಶನಕ್ಕೆ ಹೋಗತಕ್ಕ ಯಾವತ್ತೂ ಭಕ್ತಾದಿಗಳು ಗುಡಿಯ ಹಿಂಭಾಗದಲ್ಲಿ ಅಂಗಳಕ್ಕೆ ಇಳಿದು ದೇವರ ಎದುರಿಗೆ ಹೋಗಬೇಕಾಗಿರುತ್ತದೆ. ಮಹಾದ್ವಾರದ ಎದುರಿಗೆ ಇರುವಂಥಾದ್ದೇ ಶ್ರೀ ಸುಬ್ರಹ್ಮಣ್ಯದೇವರ ಗರ್ಭಗೃಹ. ಅದರ ಎದುರಿಗೆ ಒಳಪ್ರಾಕಾರದಲ್ಲಿ ಬೆಳ್ಳಿಯ ದೀಪದ ಆಕಾರವಿರುವ ಒಂದು ಗರುಡಗಂಬವು ನೂತನವಾಗಿ ಕಟ್ಟಿಸಲ್ಪಟ್ಟು ಮುಖಮಂಟಪದ ಸನ್ನಿಧಿ ಕಟ್ಟಡದ ಮಧ್ಯೆ ಕಂಗೊಳಿಸುತ್ತಿದೆ. ಒಳಗಿರುವ ವಾಸುಕಿಯ ಉಸಿರಾಟದ ವಿಷ ಜ್ವಾಲೆಯಿಂದ ಜನರಿಗೆ ವಿಷಭಯವು ಉಂಟಾದ ದೆಸೆಯಿಂದ ಗರುಡಮಂತ್ರ ದಿಂದ ಮಂತ್ರಿಸಿ ಆ ಕಂಬವನ್ನು ಸ್ಥಾಪಿಸಿದ್ದಾಗಿ ಹೇಳುತ್ತಾರೆ. ಆದುದರಿಂದ ಒಳಗಿನ ಅಂಗಳದಲ್ಲಿ ಪ್ರದಕ್ಷಿಣೆ ಬರುವ ಭಕ್ತಾದಿಗಳು ಆ ಗರುಡಗಂಭವನ್ನು ಸುತ್ತಿ ಪ್ರದಕ್ಷಿಣೆ ಬರುತ್ತಾರೆಯೇ ಹೊರತು ಅದರ ಒಳಗಡೆ ಪ್ರದಕ್ಷಿಣೆ ಬರುವುದಿಲ್ಲ. ಅದನ್ನು ದಾಟಿ ಮುಂದಕ್ಕೆ ಹೋಗಲು ಗರ್ಭಗೃಹದ ಹೊರ ಮಂಟಪ, ಅದರ ಮುಂದಕ್ಕೆ ಒಳಮಂಟಪ, ಅದರ ಮುಂದುಗಡೆ ಗರ್ಭಗೃಹ ವಿರುತ್ತದೆ. ಗರ್ಭಗೃಹದ ಮಧ್ಯದಲ್ಲಿರತಕ್ಕ ಪೀಠದಲ್ಲಿ ಮೇಲ್ಗಡೆ ಷಣ್ಮುಖ ದೇವರ ವಿಗ್ರಹವೂ, ಮಧ್ಯದಲ್ಲಿ ವಾಸುಕಿಯ ವಿಗ್ರಹವೂ, ಕೆಳಗಡೆ ಶೇಷ ದೇವರ ವಿಗ್ರಹವೂ ಇರುತ್ತವೆ.

ಆದರೆ ನಾಗರಾಜನಾದ ವಾಸುಕಿಯನ್ನೇ ಸುಬ್ರಹ್ಮಣ್ಯನೆಂದು ಕರೆಯು ತ್ತಾರೆ ಮತ್ತು ಆರಾಧಿಸುತ್ತಾರೆ.

ಸಹ್ಯಾದ್ರಿಖಂಡದಲ್ಲಿ ಬರುವ ಸುಬ್ರಹ್ಮಣ್ಯಮಾಹಾತ್ಮ್ಯೆಯಲ್ಲಿ ಸ್ಕಂದನೇ ಹೇಳಿರುವ ಈ ಶ್ಲೋಕವು ಇದಕ್ಕೆ ಕಾರಣವಿರಬಹುದು.

ಸರ್ವೇ ಶೃಣ್ವನ್ತು ಮದ್ವಾಕ್ಯಂ ಮುನಯೋ ದೇವಮಾನವಾಃ ।
ಮದಂಶೇನಾಹಿರಾಟ್ಪಾಕಂ ಧಾರಾತೀರೇ ಮನೋರಮೇ ।
ವಾಸುಕಿರ್ವೋ ಮಯೂರಸ್ಥಃ ಪೂಜಾರ್ಹಃ ಸಮ್ಭವೇತ್ಸದಾ ॥

'ಮುನಿಗಳೂ, ದೇವತೆಗಳೂ ಮತ್ತು ಮಾನವರೂ ಈ ನನ್ನ ಮಾತನ್ನು ಕೇಳಲಿ : ನನ್ನ ಅಂಶದೊಡನೆ ಕೂಡಿದ, ಮನೋಹರವಾದ ಧಾರಾನದಿಯ ತೀರದಲ್ಲಿರುವ, ಮಯೂರವಾಹನನಾದ ವಾಸುಕಿಯು ನಿಮಗೆ ಸರ್ವದಾ ಪೂಜಾರ್ಹನಾಗಿರುತ್ತಾನೆ.' ಈ ಕಾರಣದಿಂದ ವಾಸುಕಿಯನ್ನು ಸುಬ್ರಹ್ಮಣ್ಯ ನೆಂಬ ಹೆಸರಿನಿಂದಲೇ ಪೂಜಿಸುತ್ತಿರಬಹುದೆಂದು ಊಹಿಸಬಹುದಾಗಿದೆ.

**ಸ್ಕಂದನು ಯಾವಾಗಲಾದರೂ ಸರ್ಪವಾಗಿದ್ದನೇ?**

ನಮಗೆ ಸಿಕ್ಕಿರುವ ಕೈಬರಹದ ಪುಸ್ತಕವೊಂದರಲ್ಲಿ ಸ್ಕಾಂದಪುರಾಣದಿಂದ ಉದ್ಧರಿಸಿ ಬರೆಯಲಾಗಿದೆಯೆಂದು ತಿಳಿಸಿರುವ ಕಥೆಯಿದೆ. ಆದರೆ ಅದರಲ್ಲಿ ಸ್ಕಾಂದಪುರಾಣದ ಖಂಡ ಮತ್ತು ಅಧ್ಯಾಯ ಇವುಗಳಾವುದನ್ನೂ ಸೂಚಿಸಿಲ್ಲ.

ಉಪಲಬ್ಧವಾಗಿರುವ ಏಕೈಕ ನಿರೂಪಣೆಯನ್ನಿಲ್ಲಿ ನಾವು ಯಥಾವತ್ತಾಗಿ ಕೊಟ್ಟಿರುತ್ತೇವೆ. ಸ್ಕಂದನು ದೇವಸೇನೆಯ ನಾಯಕತ್ವವನ್ನು ವಹಿಸಿಕೊಂಡ ನಂತರದಲ್ಲಿ ಈ ಕಥೆಯು ಹೇಳಲ್ಪಟ್ಟಿದೆ.

"ಶೈಶವದಿಂದ ಬಾಲ್ಯಕ್ಕೆ ಕಾಲಿಟ್ಟ ಕುಮಾರಸ್ವಾಮಿಯು ಸಕಲಲೋಕ ಗಳನ್ನೂ ನೋಡಿಕೊಂಡು ಬರಬೇಕೆಂದು ಬಯಸಿ, ಮಯೂರವಾಹನನಾಗಿ ಹೊರಟು ಕ್ರಮವಾಗಿ ಎಲ್ಲ ಲೋಕಗಳನ್ನೂ ನೋಡಿಕೊಂಡು ಬರುತ್ತಿರಲು, ಮಾರ್ಗಮಧ್ಯದಲ್ಲಿ ಹಂಸವಾಹನನಾದ ಬ್ರಹ್ಮದೇವನನನ್ನು ನೋಡಿದನು. ಬಾಲ್ಯಚಾಪಲ್ಯದಿಂದ ಕುಮಾರನು ಬ್ರಹ್ಮನನ್ನು ನೋಡಿ ನೀನು ಯಾರೆಂದು ಪ್ರಶ್ನೆಮಾಡಿದನು. ಅದಕ್ಕೆ ಪಿತಾಮಹನು–"ಕುಮಾರ! ನಾನು ತ್ರಿಮೂರ್ತಿ ಗಳಲ್ಲಿ ಒಬ್ಬನಾದ ಬ್ರಹ್ಮದೇವನು. ನಾನೇ ಸೃಷ್ಟಿಕರ್ತನು. ನಿನ್ನನ್ನೂ ಲೋಕವನ್ನೂ ಸೃಷ್ಟಿಮಾಡಿದವನು. ನಿನ್ನ ತಂದೆಯನ್ನು ಸೃಷ್ಟಿಸಿದವನೂ ನಾನೇ ಎಂದು ತಿಳಿ. ಈ ಬ್ರಹ್ಮಾಂಡಾಧಿಪತ್ಯವೆಲ್ಲಾ ನನ್ನ ಕೈಸೇರಿರುವುದು." ಆ ಮಾತನ್ನು ಕೇಳಿದ ಕುಮಾರನು–"ಪಿತಾಮಹ! ನೀನೇ ಸೃಷ್ಟಿಕರ್ತನಾಗಿ ಬ್ರಹ್ಮಾಂಡಾಧಿಪತ್ಯವೆಲ್ಲಾ ನಿನ್ನ ಕೈಸೇರಿರುವ ಪಕ್ಷದಲ್ಲಿ ಎಲ್ಲವನ್ನೂ ತಿಳಿದವ ನಾಗಿ ನೀನೇ ಸರ್ವಜ್ಞನಾಗಿರಬೇಕು. ಹಾಗಿದ್ದ ಪಕ್ಷಕ್ಕೆ ನನ್ನನ್ನು ಹುಡುಗ

ನೆಂದು ಭಾವಿಸದೇ ನಾನು ಕೇಳುವ ಪ್ರಶ್ನೆಗೆ ಉತ್ತರವನ್ನು ಹೇಳುವವನಾಗೆಂದು" 'ಓಂ'ಕಾರದ ಅರ್ಥವನ್ನು ಹೇಳೆಂದನು. ಆಗ ಬ್ರಹ್ಮನು ಅವನನ್ನು ಹುಡುಗನೆಂದು ಭಾವಿಸಿ ಅವನ ಮನಸ್ಸಿಗೆ ತೃಪ್ತಿಯಾಗುವಂತೆ ಅರ್ಥವನ್ನು ಹೇಳಲಿಲ್ಲ. ಅದರಿಂದ ಕೋಪಗೊಂಡ ಕುಮಾರಸ್ವಾಮಿಯು ಬ್ರಹ್ಮನನ್ನು ಹಿಡಿದು ಬಳ್ಳಿಗಳಿಂದ ಬಿಗಿದು ಕಟ್ಟಿ ಸೆರೆಯಲ್ಲಿಟ್ಟನು. ಬ್ರಹ್ಮನ ಸೃಷ್ಟಿ ಕಾರ್ಯವನ್ನು ತಾನೇ ನಡೆಸಲು ಆರಂಭಿಸಿದನು. ಆಗ ಸೃಷ್ಟಿಸಿದ ಪ್ರಪಂಚವು ಕೇವಲ ಸತ್ತ್ವಗುಣಪ್ರಧಾನವಾಯಿತು.

ಹೀಗೆ ಎಷ್ಟೋ ಕಾಲ ಬ್ರಹ್ಮನು ಸೆರೆಯಲ್ಲಿ ಸಿಕ್ಕಿಬಿದ್ದನು. ಹೀಗಿರುತ್ತಿರಲು ತ್ರಿಲೋಕಸಂಚಾರಿಗಳಾದ ನಾರದರು ಮಾರ್ಗವಶಾತ್ ಬಂದವರಾಗಿ, ಬ್ರಹ್ಮನ ಬಂಧನವನ್ನೂ ಕುಮಾರನ ಸೃಷ್ಟಿಪ್ರಪಂಚದ ವೈಖರಿಯನ್ನೂ ನೋಡಿದವರಾಗಿ ಆಶ್ಚರ್ಯಭರಿತರಾಗಿ ಕುಮಾರಸ್ವಾಮಿಯ ಸಾಹಸಕ್ಕೆ ಮೆಚ್ಚಿ ದೊಡ್ಡವರಲ್ಲಿ ಈ ರೀತಿ ಮಾಡಬಾರದೆಂದು ಬುದ್ಧಿವಾದವನ್ನು ಹೇಳಿದರೂ ಪ್ರಯೋಜನವಾಗದಿರಲು, ನೇರವಾಗಿ ಕೈಲಾಸಕ್ಕೆ ಹೋದರು. ನಾರದರ ಮಾತನ್ನು ಕೇಳಿದ ಪರಮೇಶ್ವರನು ಮಗನ ಸಾಹಸಕ್ಕೂ ವಿದ್ಯೆಗೂ ಮೆಚ್ಚಿದನಾದರೂ ಇದು ಲೋಕವಿರುದ್ಧವಾದುದೆಂದು ತಿಳಿದು–'ನಾರದರೇ! ಈ ಕೂಡಲೇ ಬ್ರಹ್ಮನ ಬಂಧನವನ್ನು ಬಿಡಿಸಿ ಕುಮಾರನನ್ನು ಕರೆತನ್ನಿರಿ'–ಎಂದು ಹೇಳಿದನು.

ಪರಮೇಶ್ವರನ ಆಜ್ಞೆಯನ್ನು ಪಡೆದು ಹೊರಟ ನಾರದರು ಕುಮಾರನ ಸನ್ನಿಧಾನವನ್ನು ಸೇರಿ ಶಿವನ ಆಜ್ಞೆಯನ್ನು ನಿರೂಪಿಸಿದರು. ನಾರದರೊಂದಿಗೆ ಕುಮಾರನು ಮಾತಾ-ಪಿತೃಗಳ ಸನ್ನಿಧಿಗೆ ಬಂದನು. ತಂದೆ-ತಾಯಿಗಳಿಗೆ ನಮಸ್ಕರಿಸಿ ನಿಂತಿರುವಾಗ ಶಿವನು–'ಕುಮಾರ! ಬ್ರಹ್ಮನನ್ನು ಬಂಧಿಸಿದ್ದೇತಕ್ಕೆ?'–ಎಂದು ಕೇಳಿದನು :

'ತಂದೆಯೇ! ನಾನು ಪಿತಾಮಹನನ್ನು ಓಂಕಾರಕ್ಕೆ ಅರ್ಥವೇನೆಂದು ಕೇಳಿದೆ. ನನ್ನನ್ನು ಹುಡುಗನೆಂದು ತಿರಸ್ಕರಿಸಿ ನನ್ನ ಮನಸ್ತೃಪ್ತಿಯಾಗುವಂತೆ ವಿವರಿಸಲಿಲ್ಲ. ಅದಕ್ಕೆ ಕುಪಿತನಾದ ನಾನು ತಿಳಿಯದೇ ಬಾಲ್ಯಚಾಪಲ್ಯದಿಂದ ಕೂಡಿ ಬ್ರಹ್ಮನನ್ನು ಸೆರೆಯಲ್ಲಿಟ್ಟು ಸರ್ವಶಕ್ತನೆಂಬ ಅಹಂಕಾರದಿಂದ

ಬ್ರಹ್ಮನ ಸೃಷ್ಟಿಕ್ರಮವನ್ನು ನಾನೇ ಕೈಗೊಂಡೆನು. ಇದು ನನ್ನ ಸರ್ವಾಪ ರಾಧ'–ಎಂದನು.

ಪರಮೇಶ್ವರನು ಕುಮಾರನನ್ನು ಕುರಿತು–'ಕುಮಾರ! ನೀನು ಸರ್ವಥಾ ಆಘಾತಕಾರ್ಯವನ್ನೇ ಮಾಡಿರುವೆ. ಬ್ರಹ್ಮನೆಂದರೆ ಸಾಮಾನ್ಯನೆಂದು ತಿಳಿದೆಯಾ? ತ್ರಿಮೂರ್ತಿಗಳಲ್ಲೊಬ್ಬನು, ಸೃಷ್ಟಿಕರ್ತನು, ಸರ್ವಶಕ್ತನು. ಆತನನ್ನು ನೀನು ಈ ರೀತಿ ನಿರ್ಬಂಧಗೊಳಿಸಿದ್ದು ಶುದ್ಧ ತಪ್ಪು'–ಎಂದು ಹೇಳಿ ಶಿವನು ಸಭೆಯಲ್ಲಿ ಬ್ರಹ್ಮನನ್ನು ಓಂಕಾರದರ್ಥವನ್ನು ಹೇಳೆಂದಾಗ ಅವನು ಎಡ ಬಿಡದೇ ಒಂದುಸಾವಿರವರ್ಷ ಅರ್ಥನಿರೂಪಣೆ ಮಾಡಿದನು. ಅವನ ಮೇಲಿನ ಕಿಚ್ಚಿನಿಂದ ಕುಮಾರನು ಹತ್ತುಸಾವಿರ ವರ್ಷ ಅರ್ಥನಿರೂಪಣೆ ಮಾಡಿದನು.

ಶಿವನ ಸಭೆಯಲ್ಲಿ ಒಂದು ಸಾವಿರ ವರ್ಷ ಓಂಕಾರದ ಅರ್ಥ ಹೇಳಿದ ಬ್ರಹ್ಮನಿಗೆ ಮನ್ನಣೆ ದೊರೆಯಿತೇ ಹೊರತು ಹತ್ತು ಸಾವಿರವರ್ಷ ಅರ್ಥ ಹೇಳಿದ ಕುಮಾರಸ್ವಾಮಿಗೆ ಮನ್ನಣೆ ದೊರೆಯಲಿಲ್ಲ. ಬ್ರಹ್ಮನ ಮೇಲಿನ ಸಿಟ್ಟಿನಿಂದ ಅರ್ಥನಿರೂಪಣೆ ಮಾಡಿದ್ದರಿಂದ ಶಿವನು ಕೋಪಗೊಂಡು ದೊಡ್ಡವರಲ್ಲಿ ನಡೆದ ಅವಿಧೇಯತೆಗಾಗಿ–'ನೀನು ಕುಂಡಲಿನೀರೂಪಧಾರಿಯಾದ ಸರ್ಪವಾಗು'–ಎಂದು ಶಾಪವನ್ನು ಕೊಟ್ಟನು.

ಕುಮಾರಸ್ವಾಮಿಯು ತಂದೆಯು ಕೊಟ್ಟ ಶಾಪವನ್ನು ಶಿರಸಾಧಾರಣ ಮಾಡಿ ಕೈಲಾಸವನ್ನು ಬಿಟ್ಟು ಹೊರಟು ವಲ್ಮೀಕಕ್ಷೇತ್ರಕ್ಕೆ (ಈಗಿನ ಉಡುಪಿ ಸುಬ್ರಹ್ಮಣ್ಯ) ಬಂದು ಅಲ್ಲಿ ಒಂದು ಅಗಾಧವಾದ ಗುಹೆಯಲ್ಲಿದ್ದುಬಿಟ್ಟನು. ಆ ಸಮಯದಲ್ಲಿ ತಕ್ಷಕ-ವಾಸುಕಿಗಳು ಬಂದು ತಮ್ಮ ವೃತ್ತಾಂತವನ್ನು ತಿಳಿಸಿ ತಮ್ಮನ್ನು ಕಾಪಾಡಬೇಕೆಂದು ಕೇಳಿಕೊಂಡಾಗ, ಶರಣಾಗತರಕ್ಷಣೆಯು ಅತಿ ಮುಖ್ಯವೆಂದು ಭಾವಿಸಿ ಅವರನ್ನು ತನ್ನಲ್ಲಿ ಐಕ್ಯಮಾಡಿಕೊಂಡು ತನಗೆ ಸಲ್ಲಿಸ ತಕ್ಕ ಪೂಜೆಯಿಂದ ನೀವು ಪ್ರೀತರಾಗಿರೆಂದು ಹರಸಿ ಅಗಾಧವಾದ ಸರ್ಪ ರೂಪವನ್ನು ಧಾರಣಮಾಡಿ ತಾನು ಒಂದು ಬಿಲದ್ವಾರದಲ್ಲಿ ಪ್ರವೇಶಮಾಡಿ ಸದಾ ಯೋಗಾರೂಢನಾಗಿ ತಪಸ್ಸಿನಲ್ಲಿ ನಿರತನಾಗಿದ್ದನು. ಆ ವಲ್ಮೀಕಕ್ಷೇತ್ರವನ್ನು ಈಗಲೂ ಕುಕ್ಕೇ ಸುಬ್ರಹ್ಮಣ್ಯವೆಂದು ಕರೆಯುತ್ತಾರೆ.

